ಜನಪ್ರಿಯ

# ಕನ್ನಡ ಸಾಹಿತ್ಯ ಚರಿತ್ರೆ

ತ. ಸು. ಶಾಮರಾಯ
ಮೇ. ರಾಜೇಶ್ವರಯ್ಯ



ತ. ವೆಂ. ಸ್ಮಾರಕ ಗ್ರಂಥಮಾಲೆ
ಕೃಷ್ಣಮೂರ್ತಿಪುರಂ : : ಮೈಸೂರು-೪

ಜನಪ್ರಿಯ

# ಕನ್ನಡ ಸಾಹಿತ್ಯ ಚರಿತ್ರೆ

ತ. ಸು. ಶಾಮರಾಯ

ಮೋ. ರಾಜೇಶ್ವರಯ್ಯ

ಮುನ್ನುಡಿ

ಪದ್ಮವಿಭೂಷಣ ಡಾ|| ಕೆ. ವಿ. ಪುಟ್ಟಪ್ಪ

ತ. ವೆಂ. ಸ್ಮಾರಕ ಗ್ರಂಥಮಾಲೆ

ಕೃಷ್ಣಮೂರ್ತಿಪುರಂ : : ಮೈಸೂರು-೪

ಮೊದಲ ಮುದ್ರಣ : ೧೯೬೪





ಬೆಲೆ

ಸಾದಾ ಪ್ರತಿ : ರೂ. ೧೦.  ಕ್ಯಾಲಿಕೊ ಪ್ರತಿ : ರೂ. ೧೫.

ಮುದ್ರಕರು :
ಜಿ. ಎಚ್. ರಾಮರಾವ್
ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್,
ಮೈಸೂರು.

# ಮುನ್ನುಡಿ

ಸಾಹಿತ್ಯವನ್ನೆ, ಅದರಲ್ಲಿಯೂ ಅದು ಉನ್ನತ ಮಟ್ಟದ್ದಾಗಿದ್ದರೆ, ಜನಪ್ರಿಯವನ್ನಾಗಿ ಮಾಡುವುದು ಕಷ್ಟಸಾಧ್ಯವಾಗಿರುವಲ್ಲಿ ಸಾಹಿತ್ಯದ ಚರಿತ್ರೆಯನ್ನು ಜನಪ್ರಿಯವನ್ನಾಗಿ ಮಾಡುತ್ತೇನೆ ಎನ್ನುವುದು ಒಂದು ಸಾಹಸವಾಗಿ ತೋರುತ್ತದೆ. ಆದರೂ ಈ ಗ್ರಂಥದ ಲೇಖಕರು ತಮ್ಮ ಈ 'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ' ಯಲ್ಲಿ ಅಂತಹ ಸಾಹಸವನ್ನು ತಕ್ಕಮಟ್ಟಿಗೆ ಯಶಸ್ವಿಯಾಗಿಯೆ ಕೈಕೊಂಡು ಸಾಧಿಸಿದ್ದಾರೆ ಎಂದು ಹೇಳಲು ಸಂತೋಷವಾಗುತ್ತದೆ.

ಇಲ್ಲಿ ಅವರು ಪಾಂಡಿತ್ಯದ ಪಶುವಿನ ಚಣಿಗೆಗೆ 'ಸಪ್ಪೆ' ಒಟ್ಟಿಲ್ಲ; ಅವರ ಬರವಣಿಗೆ ಮತ್ತು ಅದರ ರೀತಿ ಒಣಗಿದ ಜೋಳದಕಡ್ಡಿಯ ರಾಶಿ ಯಂತಾಗಿಲ್ಲ; ಶ್ರೀಸಾಮಾನ್ಯನ ಸಹೃದಯ ಗಜಶಿಶುವಿಗೆ ಕಬ್ಬಿನ ಗದ್ದೆ ಯಿಂದ ಆಗ ತಾನೆ ಕಡಿದು, ಓಲಿಸವರಿ, ಗೆಣ್ಣು ಕತ್ತರಿಸಿ ತಂದ ಇಕ್ಷುಖಂಡ ಗಳನ್ನು 'ಅಡಕಿದಂತಿದೆ. ಇಲ್ಲಿ ಸಾಹಿತ್ಯ ಇತಿಹಾಸದ ಅಶ್ವದ ಮೇಲೆ ಆರೋಹಿಯಾಗಿದೆ; ತನ್ನ ಚರಿತ್ರೆಯ ಸವಾರನಿಗೆ ತಾನೆ ಕುದುರೆಯ ಬೆನ್ನಾಗಿಲ್ಲ. ಸಾಹಿತ್ಯವನ್ನು ಅದರ ಬರಿಯ ಚರಿತ್ರೆಯನ್ನಾಗಿ ಪರಿಗಣಿಸದೆ ಸಾಹಿತ್ಯಾಂಶದಿಂದಲೆ ಅದರ ಇತಿಹಾಸಾಂಶವನ್ನೂ ಹೊಮ್ಮಿಸುವ ರಸವಿಧಾನದಿಂದಲೆ ಈ ಸಾಹಿತ್ಯಚರಿತ್ರೆ ತನ್ನ ಸಾಹಿತ್ಯತ್ವವನ್ನು ಕಳೆದು ಕೊಳ್ಳದೆ ಇತಿಹಾಸತ್ವವನ್ನು ರಕ್ಷಿಸಿಕೊಂಡು ಜನಪ್ರಿಯವಾಗಲು ಸಾಧ್ಯ ವಾಗಿದೆ.

ಈ ಸಾಹಿತ್ಯಚರಿತ್ರೆ ತನ್ನ ಓದುಗರನ್ನು ಕೆಲವಾದರೂ ಮೂಲ ಕವಿಕೃತಿಗಳಿಗೆ ಕೊಂಡೊಯ್ಯಲು ಪ್ರೇರಕಶಕ್ತಿಯಾಗುತ್ತದೆಂದು ಭಾವಿಸು ತ್ತೇನೆ.

ನೈಜ್ಯಾನುಸಂಧಾನ ಪ್ರವೀಣರಾದ ನಮ್ಮವರು ಕೆಲವರ ಆತ್ಮಗೌರವ ಪುನಃಪ್ರತಿಷ್ಠಾಪನೆಯ ಪ್ರಯೋಜನಾರ್ಥವಾಗಿಯಾದರೂ

ಆಂಗ್ಲೇಯ ಸಾಹಿತ್ಯದೊಡನೆ, ಕಲಾದೃಷ್ಟಿಯಿಂದ ಪ್ರಕೃತವಲ್ಲದಿದ್ದರೂ, ಕಾಲದೃಷ್ಟಿಯಿಂದಲಾದರೂ, ಗ್ರಂಥದ ಕೊನೆಯಲ್ಲಿ, ಪರಿಶಿಷ್ಟವಾಗಿ, ನಮ್ಮ ಸಾಹಿತ್ಯದ ಪ್ರಾಚೀನತೆ, ವೈವಿಧ್ಯ ಮತ್ತು ವೈಭವಗಳನ್ನೂ ಔನ್ನತ್ಯ ಮತ್ತು ಮಿತಿಗಳನ್ನೂ ಕುರಿತು ಒಂದಿನಿತಾದರೂ ಪ್ರಸ್ತಾಪಿಸಿದ್ದರೆ ಒಳಿತಾಗುತ್ತಿತ್ತೇನೊ! ಇಂಗ್ಲಿಷ್ ಕಾವ್ಯದ ಪ್ರಪಿತಾಮಹನೆಂದು ಪ್ರಸಿದ್ಧನಾದ ಚಾಸರ್ ಕ್ರಿ. ಶ. ೧೩೪೦ರಲ್ಲಿ ಹುಟ್ಟಿದ್ದರೆ ನಮ್ಮ ಮಹಾಕವಿ ಪಂಪ ಹುಟ್ಟಿದ್ದು ಸುಮಾರು ಐದು ಶತಮಾನಗಳ ಹಿಂದೆಯೆ ಕ್ರಿ. ಶ. ೯೦೨ರಲ್ಲಿ. ಷೇಕ್ಸ್‌ಪಿಯರ್ ೧೫೬೪ರಲ್ಲಿ ಹುಟ್ಟುವ ಹೊತ್ತಿಗಾಗಲೆ ಪಂಪ, ರನ್ನ, ಜನ್ನ, ನಾಗವರ್ಮ, ಹರಿಹರ, ರಾಘವಾಂಕ, ನಾರಣಪ್ಪ, ರತ್ನಾಕರಾದಿ ಮಹಾಕವಿಗಳು ಕನ್ನಡ ಸಾಹಿತ್ಯಶ್ರೀಯನ್ನು ಮಹೋಜ್ವಲಗೈದು ಹೋಗಿದ್ದರು—ಎಂಬ ಐತಿಹಾಸಿಕ ಜ್ಞಾಪಕದಿಂದಲಾದರೂ ಕನ್ನಡಿಗನ ಮೂಢದೈನ್ಯಕ್ಕೆ ಒಂದಿನಿತು ಪರಿಹಾರ ಒದಗುತಿತ್ತೇನೊ ?

ಈ ಗ್ರಂಥ ಹಿಂದೀಗೂ ಭಾಷಾಂತರಗೊಂಡು ಅಖಿಲ ಭಾರತೀಯ ವ್ಯಾಪ್ತಿಯನ್ನು ಸಂಪಾದಿಸುತ್ತದೆ ಎಂಬುದನ್ನು ಕೇಳಿ ನನಗೆ ಮತ್ತಷ್ಟು ಹರ್ಷವಾಗಿದೆ. ಏಕೆಂದರೆ ಪ್ರಚಾರ ಮತ್ತು ಪ್ರಕಟಣೆಯ ಅಭಾವದಿಂದ ಕನ್ನಡಕ್ಕೆ ಆಗಿರುವಷ್ಟು ಮತ್ತು ಆಗುತ್ತಿರುವಷ್ಟು 'ಅನ್ಯಾಯ' ಮತ್ತಾವ ಭಾರತೀಯ ಭಾಷೆಗೂ ಆಗುತ್ತಿಲ್ಲವೆಂದು ತೋರುತ್ತದೆ.

ಉದಯರವಿ, ಮೈಸೂರು. ಕುವೆಂಪು

೨೬-೯-೧೯೬೪

# ಗ್ರಂಥಕರ್ತರ ಬಿನ್ನಹ

ಜನಪ್ರಿಯವಾಗುವಂತಹ ಕನ್ನಡ ಸಾಹಿತ್ಯ ಚರಿತ್ರೆಯೊಂದನ್ನು ಬರೆಯಬೇಕೆಂಬ ನಮ್ಮ ಬಹುದಿನಗಳ ಬಯಕೆ ದೈವಾನುಗ್ರಹದಿಂದ ಇಂದು ಈಡೇರಿದುದುಕ್ಕಾಗಿ ನಮಗೆ ಅತ್ಯಂತ ಹರ್ಷವಾಗಿದೆ. ಇನ್ನೂರೈವತ್ತು ಪುಟಗಳಲ್ಲಿ ಬರೆದು ಮುಗಿಸಬೇಕೆಂದಿದ್ದ ಈ ಪುಸ್ತಕ, ನಮ್ಮ ನಿರೀಕ್ಷೆಯನ್ನು ಪಕ್ಕಕ್ಕೆ ಸರಿಸಿ, ಆರು ನೂರ ಐವತ್ತು ಪುಟಗಳಷ್ಟು ಸುದೀರ್ಘವಾಗಿ ಬೆಳೆದು ಕೊಂಡು ಹೋಗಿದೆ. ಇದರ ಹಿಂದೀ ರೂಪಾಂತರವೂ ಅಚ್ಚಿಗೆ ಸಿದ್ಧವಾಗಿದ್ದು ಅಲಹಾಬಾದಿನ ಪ್ರಕಾಶಕರಾದ ಶ್ರೀ ರಾಮನಾರಾಯಣಲಾಲ್ ಬೇನೀ ಮಾಧವ್ ಎಂಬುವರು ಮುಂದೆ ಬಂದಿದ್ದಾರೆಂದು ತಿಳಿಸಲು ನಾವು ಹೆಮ್ಮೆ ಪಡುತ್ತೇವೆ.

ನಮ್ಮ ಈ ಗ್ರಂಥವನ್ನು ಕುರಿತು ಒಂದೆರಡು ಸೂಚನೆಗಳನ್ನು ಓದು ಗರಿಗೆ ನೀಡುವುದು ಅಗತ್ಯವೆಂದು ತೋರುತ್ತದೆ. ನಾವು ಈ ಕಾರ್ಯವನ್ನು ಕೈಕೊಂಡುದು ಜನತಾಜನಾರ್ದನನ ಸೇವೆಗಾಗಿಯೇ ಹೊರತು ಪಾಂಡಿತ್ಯ ಪ್ರದರ್ಶನಕ್ಕಾಗಿ ಅಲ್ಲ. ಆದ್ದರಿಂದಲೆ ನಾವಿಲ್ಲಿ ಶಕಟ ರೇಫ, ರಳ ಕುಳ ಕ್ಷಳ ಗಳನ್ನು ಬಳಸುವ ಗೋಜಿಗೆ ಹೋಗಿಲ್ಲ. ಅವು ಇಂದಿನ ಕನ್ನಡದಲ್ಲಿ ಬಳಕೆ ಯಲ್ಲಿಲ್ಲ. ಶ್ರೀಸಾಮಾನ್ಯನಿಗೆ ಅವುಗಳಿಂದ ಯಾವ ಪ್ರಯೋಜನವೂ ಇಲ್ಲ. ಆತನಿಗೆ ಇಲ್ಲಿನ ಬರವಣಿಗೆಯಿಂದ ಕಾವ್ಯಗಳ ಪರಿಚಯವಾಗಿ ರಸಾನುಭವ ವಾಗಿ ತನ್ಮೂಲಕ ಮೂಲಕೃತಿಗಳನ್ನು ಓದುವಂತಾದರೆ ನಾವು ಧನ್ಯರು.

'ನಡೆವರೆಡಹದೆ ಕುಳಿತರೆಡಹುವರೆ?' ಎಂದು ಕವಿ ರಾಘವಾಂಕ ಈಗ ಆರುನೂರ ಐವತ್ತು ವರ್ಷಗಳಿಗೂ ಹಿಂದೆಯೇ ಹೇಳಿದ. ನಿವಾರ್ಯವಾದ ಹಲವು ತಪ್ಪುಗಳು ಈ ಗ್ರಂಥದಲ್ಲಿ ನುಸುಳಿ ಬಂದಿರುವುದಕ್ಕೆ ನಾವು ಆ ಕವಿವಾಣಿಯನ್ನು ಆಶ್ರಯಿಸುತ್ತಿದ್ದೇವೆ. ಗ್ರಂಥವಿಭಾಗದಲ್ಲಿ, ಅವುಗಳಿಗೆ ಶೀರ್ಷಿಕೆ ಕೊಡುವಲ್ಲಿ ಒಂದೆರಡು ಕಡೆ ಅಲ್ಪ ಸ್ವಲ್ಪ ಪ್ರಮಾದವಾಗಿದೆ. ಸ್ವಯಂವೇದ್ಯವಾದ ಕೆಲವು ತಪ್ಪುಗಳೂ ಇಣಿಕಿಹಾಕಿವೆ. ಸಾಕಷ್ಟು ಮುದ್ರಾರಾಕ್ಷಸನ ಹಾವಳಿಯೂ ಇಲ್ಲಿ ಕಾಣಬರುತ್ತದೆ. ಉದಾರಚೇತನರಿಗೆ

ಇವು ಅಲ್ಪ ವಿಷಯಗಳು. ಪುಸ್ತಕ ಮತ್ತೊಮ್ಮೆ ಅಚ್ಚಿಗೆ ಹೋಗುವ ಸುಯೋಗ ಬಂದಾಗ ಇವೆಲ್ಲವೂ ಸರಿಹೋಗುವವೆಂಬ ಭರವಸೆಯನ್ನು ನೀಡುತ್ತೇವೆ.

ನಮ್ಮ ವಿದ್ಯಾಗುರುಗಳೂ ಆಧುನಿಕ ಕನ್ನಡ ಕವಿಗಳಲ್ಲಿ ಅಗ್ರಗಣ್ಯರೂ ಆದ ಪದ್ಮ ವಿಭೂಷಣ ಡಾ|| ಕೆ.ವಿ. ಪುಟ್ಟಪ್ಪ ಎಂ.ಎ., ಡಿ. ಲಿಟ್; ಅವರು ಇದನ್ನು ಆಮೂಲಾಗ್ರವಾಗಿ ಓದಿ, ಮೆಚ್ಚಿ ತಮ್ಮ ಅಧಿಕಾರವಾಣಿಯಿಂದ ಇದಕ್ಕೊಂದು ಮುನ್ನುಡಿಯನ್ನು ಬರೆದು ಈ ಗ್ರಂಥವನ್ನೂ ನಮ್ಮನ್ನೂ ಹರಸಿದ್ದಾರೆ. ಕೇಂದ್ರದ ಲೋಕಸಭೆಯಲ್ಲಿ ಉಪಾಧ್ಯಕ್ಷರಾಗಿರುವ ಕನ್ನಡದ ಕಟ್ಟಭಿಮಾನಿ ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರವರು ಇದನ್ನು ತಮಗೆ ಅರ್ಪಿಸಲು ಅನುಮತಿ ನೀಡಿದ್ದಾರೆ. ಕನ್ನಡ ತಾಯಿಯ ಈ ಸುಪುತ್ರರಿಬ್ಬರಿಗೂ ನಾವು ಹೃತ್ಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇವೆ. ಈ ಗ್ರಂಥದ ಕರಡು ಪ್ರತಿಯನ್ನು ಓದಿ 'ಸಾಹಿತ್ಯ ಚರಿತ್ರೆ ಕಾದಂಬರಿಯಂತೆ ಮನೋಹರವಾಗಿದೆ' ಎಂದು ಹೊಗಳಿ ಪ್ರೋತ್ಸಾಹಿಸಿದ ನಮ್ಮ ಹಲವು ಗೆಳೆಯರಿಗೂ, ಇದಕ್ಕೆ ಒಪ್ಪೋಲೆಯನ್ನು ಸಿದ್ಧಪಡಿಸಿಕೊಟ್ಟ ಗೆಳೆಯ ಎನ್. ಸುಬ್ರಹ್ಮಣ್ಯಂ ಮತ್ತು ಆತನ ಶಿಷ್ಯ ನಾಗರಾಜ ಇವರಿಗೂ ನಾವು ಋಣಿಗಳು. ಇದನ್ನು ಅಂದವಾಗಿ ಮುದ್ರಿಸಿ ಪ್ರಕಟಿಸಲು ನೆರವಾದ ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್ ಮಾಲೀಕರು ಶ್ರೀ ಜಿ. ಎಚ್. ರಾಮರಾವ್ ಬಿ. ಎಸ್ ಸಿ. ಅವರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ಈ ಗ್ರಂಥವನ್ನು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಾಶಪಡಿಸಿರುವ ಅದರ ಒಡೆಯರಿಗೆ ನಮ್ಮ ಹೃತ್ಪೂರ್ವಕವಾದ ಕೃತಜ್ಞತೆಗಳು.

ತ. ಸು. ಶಾಮರಾಯ
ಮೋ. ರಾಜೇಶ್ವರಯ್ಯ

# ಪ್ರಕಾಶಕನ ಅರಿಕೆ

ಇಂದು ಜಗತ್ತನ್ನೇ ಆಕ್ರಮಿಸಿ ವ್ಯಾಪಿಸಿರುವ ಇಂಗ್ಲಿಷ್ ಸಾಹಿತ್ಯವಾಗಲಿ, ಭರತಖಂಡದ ರಾಜಭಾಷೆಯಾಗಬೇಕೆಂದಿರುವ ಹಿಂದೀ ಸಾಹಿತ್ಯವಾಗಲಿ ಕನ್ನಡಸಾಹಿತ್ಯಮಾತೆಯ ಕಣ್ಣಮುಂದಿನ ಮಕ್ಕಳು. ಅವು ತಮ್ಮ ಸುಪ್ರಭಾತವನ್ನು ಹಾಡುವ ಹೊತ್ತಿಗೆ ಕನ್ನಡಸಾಹಿತ್ಯದ ನಡುಹಗಲಾಗಿತ್ತು. ಭರತಖಂಡದ ದೇಶಭಾಷೆಗಳಲ್ಲಿ ಅತ್ಯಂತ ಪುರಾತನವೆಂದು ಹೇಳಿಕೊಳ್ಳಬಲ್ಲ ಸಾಹಿತ್ಯಗಳಲ್ಲಿ ಕನ್ನಡವೂ ಒಂದು. ಅದಕ್ಕೆ ಸಾವಿರದ ಐನೂರು ವರ್ಷಗಳ ಇತಿಹಾಸವಿದೆ. ಭರತಖಂಡದ ಇತರ ಸಾಹಿತ್ಯಗಳಂತೆ ಕನ್ನಡಸಾಹಿತ್ಯದ ಬೆಳವಣಿಗೆಗೂ ಸಂಸ್ಕೃತದ ಸ್ತನ್ಯವೇ ಆಧಾರ; ಇತರ ಸಾಹಿತ್ಯಗಳಿಗೆ ಹೊಯ್‌ಕಯ್ ಆಗಿ ಬೆಳೆದು, ಸಾಕಷ್ಟು ಸಮೃದ್ಧವಾದ ಫಲವನ್ನೂ ನೀಡಿದೆ. ಜಗತ್ತಿನ ಯಾವ ಕವಿಯೊಡನೆ ಬೇಕಾದರೂ ಸರಿಸಮಾನಸ್ಕಂಧರಾಗಿ ನಿಲ್ಲಬಲ್ಲ ಪಂಪ, ರನ್ನ, ನಾಗಚಂದ್ರ. ನಾಗವರ್ಮ, ಹರಿಹರ, ಕುಮಾರವ್ಯಾಸಾದಿ ಮಹಾಕವಿಗಳು ಕನ್ನಡದ ಸಾಹಿತ್ಯಧ್ವಜವನ್ನು ನಭಕ್ಕೆತ್ತಿ ಹಿಡಿದಿದ್ದಾರೆ. ಈ ಮಹಾಕವಿಶಿಖರಗಳಿಗೆ ಸಾನುಪ್ರದೇಶವನ್ನು ಒದಗಿಸಿರುವ ನೂರಾರು ಕವಿಶ್ರೇಷ್ಠರೂ ನಮ್ಮಲ್ಲಿ ಇದ್ದಾರೆ. ಕನ್ನಡದ ಕಾವ್ಯಶೈಲ ಸಾಕಷ್ಟು ಔನ್ನತ್ಯ ವೈಶಾಲ್ಯಗಳನ್ನು ಪಡೆದಿದೆ. ಅದರ ದಿಗ್ದರ್ಶನಕ್ಕೆಂದು ಅತಿ ನಮ್ರತೆಯಿಂದ ಮಾಡಿರುವ ಪ್ರಯತ್ನವೇ ಈ 'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ.'

ಐತಿಹಾಸಿಕ ಕಾರಣಗಳಿಂದಾಗಿ ನಮ್ಮಲ್ಲಿ ಇಂಗ್ಲಿಷ್ ಭಾಷೆ ಬಳಕೆಗೆ ಬಂತು. ಅದರ ಜೊತೆಯಲ್ಲಿಯೇ ಇಂಗ್ಲಿಷ್ ಸಾಹಿತ್ಯದ ಪ್ರವೇಶವೂ ಆಯಿತು. ಪರರ ದಾಸ್ಯಕ್ಕೆ ಒಳಗಾದ ನಮ್ಮ ಜನ ಲೌಕಿಕಜೀವನ ಲೌಕಿಕಪ್ರಯೋಜನಗಳೇ ಪ್ರಧಾನಗುರಿಯಾಗಿದ್ದ, ಈ ಸಾಹಿತ್ಯವನ್ನು ಲೌಕಿಕ ಪ್ರಯೋಜನಕ್ಕಾಗಿಯೇ ಕಲಿತರು. ಅದರ ಪ್ರಭಾವ ಕನ್ನಡ ಸಾಹಿತ್ಯದ ಮೇಲೆ ಸಾಕಷ್ಟು ಪ್ರಮಾಣದಲ್ಲಿ ಆಗಿದೆ. ಇದರಿಂದ ನಮ್ಮಲ್ಲಿ ಹೊಸ ಸಾಹಿತ್ಯಪ್ರಕಾರಗಳು ಹುಟ್ಟಿವೆ. ಹೊಸ ರೀತಿಗಳು ಮೂಡಿವೆ. ಇವು ಕನ್ನಡದ ಕಾವೇರಿ ಹರಿಯುವ ಹೊಸಕಾಲುವೆಗಳು; ಇವುಗಳನ್ನು ನಾವು ಸ್ವಾಗತಿಸೋಣ. ಶಾರದೆ ಸರ್ವಭಾಷಾಮಯಿ. ಆದ್ದರಿಂದ ಯಾವ ಭಾಷೆ

ಯಿಂದ ಜ್ಞಾನದ ಬೆಳಕು ಬಂದರೂ ಅದಕ್ಕೆ ಸುಸ್ವಾಗತ. ಆದರೆ ನಿತ್ಯ ಯೌವನೆಯಾದ ಕನ್ನಡಮಾತೆಗೆ ಮಾತ್ರ ಅದರಿಂದ ಅಪಚಾರವಾಗದಿರಲಿ! 'ವಸುಧೈವ ಕುಟುಂಬಕಂ' ಎಂಬ ಉದಾರಚರಿತೆ ನಮ್ಮ ಆದರ್ಶವಾದರೂ, ನಮ್ಮ ಮನೆಯನ್ನು ಹಾಳುಕೆಡವಿ ಬೆಟ್ಟಕ್ಕೆ ಕವುದಿ ಹೊಲೆಯುವ ಕೆಲಸ ಸಮರ್ಥನೀಯವಾದುದಲ್ಲ. ಅನಾದಿಕಾಲದಿಂದಲೂ ಬಂದ ನಮ್ಮ ಜೀವನ ಮೌಲ್ಯಗಳು ಮಹೋನ್ನತವಾದುವೆಂದು ಹೊರಗಿನವರು ಹೇಳುತ್ತಿರುವಾಗಲೂ ನಾವು ಕಿವಿಯಿದ್ದೂ ಕಿವುಡರಾಗಿ ವ್ಯವಹರಿಸುವುದು ಅವಿವೇಕದ ಪರಮಾವಧಿ. ಹೊರಗಿನ ಮೆರುಗಿಗೆ ಬೆರಗಾಗಿ ಕಾಸ್‌ಮಾಸ್, ಡೇಲಿಯಾಗಳನ್ನು ಹಿತ್ತಿಲಲ್ಲಿ ಬೆಳಸಹೊರಟು, ಮಲ್ಲಿಗೆ ಜಾಜಿಗಳನ್ನು ಅಜ್ಞಾತವಾಸಕ್ಕೆ ದೂಡುವುದೆ? ನಮ್ಮ ಹುಣಸೆ ಮಾವು ಬೇವುಗಳನ್ನು ವನವಾಸಕ್ಕೆ ಅಟ್ಟಿ ಛತ್ರಿಯಮರಗಳನ್ನು ಪುರಸ್ಕರಿಸುವುದೆ? ನಮ್ಮ ಗೌರಿಶಂಕರದ ಅಸ್ತಿತ್ವವನ್ನೆ ಮರೆತು ಮೌಂಟ್‌ಬ್ಲಾಂಕ್ ಶಿಖರದ ಮಹೋನ್ನತಿಯನ್ನು ಹಾಡುತ್ತಾ ಪಾದಯಾತ್ರೆ ಹೊರಡುವುದೆ? ರಾಜಕೀಯ ದಾಸ್ಯದಿಂದ ನಾವಿಂದು ವಿಮುಕ್ತರಾಗಿದ್ದೇವೆ. ಬೌದ್ಧಿಕ ದಾಸ್ಯದಿಂದಲೂ ವಿಮುಕ್ತರಾಗೋಣ. ನಮ್ಮ ಆತ್ಮವಿಸ್ಮೃತಿಯ ಜವನಿಕೆಯನ್ನು ಕಿತ್ತೆಸೆದು ಮೇಲಕ್ಕೇಳೋಣ. ಎದೆಯ ಮೇಲೆ ಇಂಗ್ಲಿಷ್ ಒತ್ತಗ ಕುಳಿತಿರುವಂತೆ ಕಾಣುತ್ತಿರುವ ದುಸ್ವಪ್ನವನ್ನು ಕೊಡವಿಕೊಳ್ಳೋಣ. ಮತ್ತೊಮ್ಮೆ ಜಗತ್ತಿನ ಸಕಲ ಸಾಹಿತ್ಯಶ್ರೀಯಿಂದಲೂ ಪುಷ್ಟಿಹೊಂದಿ ನಮ್ಮತನವನ್ನು ತೊರೆಯದೆ ಮುಂದುವರಿಯೋಣ. ನಮ್ಮ ಸಾಹಿತ್ಯದ ಅಭ್ಯಾಸ ಇದಕ್ಕೆ ತೋರ್‌ಬೆರಳಾಗಬಲ್ಲದು.

ಈ 'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ' ಯನ್ನು ನಮ್ಮ ಮಾಲೆಯಲ್ಲಿ ಸೇರಿಸಿಕೊಳ್ಳಲು ನೆರವಾದ ಗ್ರಂಥಕರ್ತರಿಗೂ, ಇದಕ್ಕೆ ದಿವ್ಯವಾದ ಮುನ್ನುಡಿರೂಪದ ಆಶಿಷವನ್ನು ನೀಡಿರುವ ಋಷಿಕವಿ ಕುವೆಂಪುರವರಿಗೂ ನಾನು ಕೃತಜ್ಞನಾಗಿದ್ದೇನೆ. ಇದನ್ನು ಓದಿಸಿ ಕೇಳಿ ಸಲಹೆಗಳನ್ನು ನೀಡಿದ ಡಾ|| ಪ್ರಭುಶಂಕರ್ ಮತ್ತು ಶ್ರೀ ಚಿದಾನಂದಮೂರ್ತಿಯವರಿಗೂ ರಕ್ಷಾಕವಚಕ್ಕೆ ಅಂದವಾದ ರೇಖಾಚಿತ್ರಗಳನ್ನು ಬರೆದುಕೊಟ್ಟು ಉಪಕರಿಸಿರುವ ಶ್ರೀಮಾನ್ ಅಚ್ಯುತರಾಯರಿಗೂ, ಸಕಾಲಕ್ಕೆ ಅಂದವಾಗಿ ಮುದ್ರಿಸಿ ಕೊಟ್ಟ ಶ್ರೀಮಾನ್ ಜಿ. ಎಚ್. ರಾಮರಾಯರಿಗೂ ನನ್ನ ವಂದನೆಗಳು.

**ತೆ. ಸು. ಶಾಮರಾಯ.**

# ಸಿರಿಗನ್ನಡಂ ಗೆಲ್ಗೆ

ಎಲ್ಲಾದರು ಇರು ; ಎಂತಾದರು ಇರು ;
ಎಂದೆಂದಿಗು ನೀ ಕನ್ನಡವಾಗಿರು.
ಕನ್ನಡ ಗೋವಿನ ಓ ಮುದ್ದಿನ ಕರು,
ಕನ್ನಡತನವೊಂದಿದ್ದರೆ ನೀನಮ್ಮಗೆ ಕಲ್ಪತರು !

— **ಕುವೆಂಪು**



ಕನ್ನಡ ಜನ, ನಾಡು, ನುಡಿ, ಸಾಹಿತ್ಯ—ಇವುಗಳ ಮೇಲ್ಮೆಗಾಗಿ ಬಾಳನ್ನು ಮುಡಿಪಾಗಿಟ್ಟು ದುಡಿಯುತ್ತಿರುವವರೂ, ಅಧಿಕಾರ ಐಶ್ವರ್ಯಗಳ ವ್ಯಾಮೋಹಕ್ಕೆ ಒಳಗಾಗದ ಸರಳಜೀವಿಗಳೂ. ಸಜ್ಜನರೂ, ಪ್ರೇಮಮಯರೂ ಹಾಗೂ ಅವ್ಯಾಜಬಂಧುಗಳೂ ಆಗಿರುವ

**ಶ್ರೀಮಾನ್ ಎಸ್. ವಿ. ಕೃಷ್ಣಮೂರ್ತಿರಾವ್,**
ಬಿ.ಎಸ್‌ಸಿ., ಎಲ್‌ಎಲ್.ಬಿ;

ಅವರಲ್ಲಿ ಈ ಕೃತಿಯನ್ನು ಆದರ ಗೌರವಗಳೊಡನೆ ಅರ್ಪಿಸಲಾಗಿದೆ.

— **ಲೇಖಕರು**

# ಪರಿವಿಡಿ

ಪುಟಗಳು

# ೧ ಪಂಪಪೂರ್ವ ಯುಗ

ನೂರಾರು ಭಾಷೆಗಳು ಬಳಕೆಯಲ್ಲಿರುವ ನಮ್ಮ ಭರತಖಂಡದಲ್ಲಿ ಹದಿನಾಲ್ಕು ಭಾಷೆಗಳನ್ನು ಮಾತ್ರ ರಾಷ್ಟ್ರಭಾಷೆಗಳೆಂದು ಸ್ವೀಕರಿಸಲಾಗಿದೆ. ಈ ಹದಿನಾಲ್ಕರಲ್ಲಿ ಕನ್ನಡವೂ ಒಂದು. ಈ ಭಾಷೆಯನ್ನು ಮಾತನಾಡುವ ಕನ್ನಡಿಗರ ಸಂಖ್ಯೆ ಸುಮಾರು ಎರಡು ಕೋಟಿ. ಈ ಕನ್ನಡಿಗರು ನೆಲಸಿರುವ ನಾಡಿನ ವಿಸ್ತಾರ ಸುಮಾರು ಎಪ್ಪತ್ತುನಾಲ್ಕುಸಹಸ್ರ ಚದರಮೈಲಿಗಳು. ಇದನ್ನು ಈಗ ವಿಶಾಲ ಮೈಸೂರು ಎಂಬ ಹೆಸರಿನಿಂದ ಕರೆಯುವರಾದರೂ ಕನ್ನಡಿಗರು ನೆಲಸಿರುವ ಈ ನಾಡಿಗೆ ಕರ್ಣಾಟಕವೆಂಬ ಹೆಸರೂ ಸಲ್ಲುತ್ತದೆ. ಪ್ರಾಚೀನಗ್ರಂಥಗಳಲ್ಲಿಯೂ ಶಾಸನಗಳಲ್ಲಿಯೂ ಈ ನಾಡನ್ನು ಮಾತ್ರವಲ್ಲದೆ ಭಾಷೆಯನ್ನೂ ಕರ್ಣಾಟಕವೆಂದೇ ಕರೆದು ವ್ಯವಹರಿಸಿದ್ದಾರೆ. ದಕ್ಷಿಣ ಭಾರತದ ಈ ಕರುನಾಡಿನಲ್ಲಿ ಹವ ಹಿತಕರವಾಗಿದೆ, ನೆಲ ಫಲವತ್ತಾಗಿದೆ; ನಮ್ಮ ಕವಿಯೊಬ್ಬ ಹೇಳಿರುವಂತೆ ಇಲ್ಲಿನ ಕಾಡು ಆನೆಯನ್ನು ಬೆಳೆಯುತ್ತದೆ, ಶ್ರೀಗಂಧವನ್ನು ಬೆಳೆಯುತ್ತದೆ; ಭೂಮಿ ಬಂಗಾರವನ್ನೇ ಬೆಳೆಯುತ್ತದೆ; ಮಾವಿನ ಹಣ್ಣು ಮಲ್ಲಿಗೆ ಹೂಗಳಿಗೆ ಇದು ತೌರುಮನೆ. ಇಲ್ಲಿನ ಜನ ಮಾವಿನ ಹಣ್ಣನ್ನು ತಿಂದು, ಮಲ್ಲಿಗೆಯನ್ನು ಮುಡಿದು ಸಂತೋಷದಿಂದಿರಬಲ್ಲ ರಸಿಕರು. ಮಲ್ಲಿಗೆ ಮಾವುಗಳಿದ್ದಮೇಲೆ ' ಇಂ ಪೆರತಾವುದು ಸಂಸಾರಸಾರ ಸರ್ವಸ್ವಫಲಂ ? " (ಸಂಸಾರ ಸಾರ ಸರ್ವಸ್ವವೆಂಬ ಫಲ ಮತ್ತಾವುದಿದೆ ?)" ಎಂದು ಕವಿ ಪ್ರಶ್ನಿಸುತ್ತಾನೆ. ಈ ಮನೋಭಾವದಲ್ಲಿ ಬಾಳಿಕೊಂಡು ಬಂದ ಕನ್ನಡಿಗರು ಇಹವನ್ನು ದೂರದೆ, ಪರಕ್ಕೆ ದೂರರಾಗದೆ ತುಂಬು ಜೀವನವನ್ನು ನಡಸಿದ್ದಾರೆ. ದ್ವೈತ ಅದ್ವೈತ ವಿಶಿಷ್ಟಾದ್ವೈತಗಳ ತ್ರಿವೇಣೀ ಸಂಗಮವಾಗಿರುವುದು ಈ ನಾಡಿನಲ್ಲಿಯೇ. ಸರ್ವಸಮತೆಯನ್ನು ಬೋಧಿಸಿ, ಕಾಯಕವನ್ನು ಧರ್ಮದ ಗದ್ದುಗೆಗೇರಿಸಿದ ಬಸವಣ್ಣ ಹುಟ್ಟಿ ಬೆಳೆದುದು ಈ ನಾಡಿನಲ್ಲಿಯೇ. ಅನೇಕತೆಯಲ್ಲಿ ಏಕತೆಯನ್ನು ಕಂಡುಕೊಂಡ ಕನ್ನಡಿಗರ ಉದಾರಚೇತನ 'ಹರಿಹರನನ್ನು' 'ಶಂಕರನಾರಾಯಣನನ್ನು' ಸೃಷ್ಟಿಸಿ ಕೊಂಡಿದೆ. ಈ ನಾಡಿನಲ್ಲಿ ಎಲ್ಲೆಲ್ಲಿಯೂ ಎದ್ದುಕಾಣುವ ಚಿತ್ರ, ಶಿಲ್ಪಾದಿ ಕಲಾಕೃತಿಗಳು ಈ ಜನರ ಧರ್ಮಾಭಿಮಾನಕ್ಕೂ ರಸಿಕತೆಗೂ

ಸಾಕ್ಷಿಯಾಗಿ ನಿಂತಿವೆ. ಇಂತಹ ಹಿನ್ನೆಲೆಯಲ್ಲಿ ಹುಟ್ಟಿ ಬೆಳೆದ ಕನ್ನಡ ಸಾಹಿತ್ಯ ಸಾಕಷ್ಟು ಶ್ರೀಮಂತವಾಗಿರುವುದು ಸಹಜವಾಗಿಯೇ ಇದೆ.

ದಕ್ಷಿಣ ಭಾರತದಲ್ಲಿ ತಮಿಳು, ಕನ್ನಡ, ತೆಲುಗು, ಮಲೆಯಾಳ, ತುಳು ಎಂಬ ಐದು ಮುಖ್ಯ ಭಾಷೆಗಳಿವೆ. ಇವುಗಳನ್ನು ಪಂಚದ್ರಾವಿಡಭಾಷೆಗಳೆಂದು ಕರೆಯುತ್ತಾರೆ. ಈ ಐದಕ್ಕೂ ಮೂಲವಾದ 'ಮೂಲದ್ರಾವಿಡ' ಭಾಷೆಯೊಂದು ಇದ್ದಿರಬೇಕೆಂದು ಪಂಡಿತರ ಅಭಿಪ್ರಾಯ. ಆದರೆ ಆ ಮೂಲಮಾತೃಕೆಯಿಂದ ಕನ್ನಡ ಎಂದು ಕವಲೊಡೆದು, ತನ್ನತನವನ್ನು ಸ್ಥಾಪಿಸಿಕೊಂಡಿತೆಂಬುದನ್ನು 'ಇದಮಿತ್ಥಂ' ಎಂದು ಸ್ಥಾಪಿಸಿ ತೋರಿಸುವಷ್ಟು ಸಾಧನ ಸಾಮಗ್ರಿಗಳು ಉಪಲಬ್ಧವಾಗಿಲ್ಲ. ಕನ್ನಡ ನಾಡು, ನುಡಿಗಳು ಕ್ರಿಸ್ತಪೂರ್ವದಷ್ಟು ಹಳೆಯವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ರಾಮಾಯಣ ಮಹಾಭಾರತಗಳಲ್ಲಿ 'ಕರ್ಣಾಟಕ'ದ ಪ್ರಸ್ತಾಪವಿದೆ, ಕ್ರಿ. ಪೂ. ಎರಡನೆಯ ಶತಮಾನದಲ್ಲಿ ಹುಟ್ಟಿದ ಗ್ರೀಕ್‌ಪ್ರಹಸನವೊಂದರಲ್ಲಿ ಸಾಕಷ್ಟು ಕನ್ನಡಪದಗಳನ್ನು ಹೆಕ್ಕಿ ತೋರಿಸಿದ್ದಾರೆ, ಶ್ರೀ ಗೋವಿಂದ ಪೈರವರು. ಹಾಗೆಯೇ ಅವರು ಕ್ರಿ. ಪೂ. ಎರಡನೆಯ ಶತಮಾನದಲ್ಲಿ ಭಾರತಕ್ಕೆ ಬಂದಿದ್ದ ಗ್ರೀಕ್ ಪ್ರವಾಸಿ ಟಾಲ್ಮಿಯು ತನ್ನ ಬರೆಹದಲ್ಲಿ ಕನ್ನಡ ನಾಡಿನ ಪ್ರಸಿದ್ಧ ನಗರಗಳನ್ನೂ ಬಂದರುಗಳನ್ನೂ ಹೆಸರಿಸಿರುವುದನ್ನು ಗುರುತಿಸಿದ್ದಾರೆ; ಪ್ರಾಕೃತ ಸಾಹಿತ್ಯಕ್ಕೆ ಕನ್ನಡದಿಂದ ಎರವಲಾಗಿ ತೆಗೆದುಕೊಂಡಿರುವ ಹಲವು ಶಬ್ದಗಳನ್ನೂ ನಮ್ಮ ವಿದ್ವಾಂಸರು ಪರಿಶೋಧಿಸಿ ಹೊರಗೆಡಹಿದ್ದಾರೆ.

ಕನ್ನಡ ನಾಡು ನುಡಿಗಳಂತೆ ನಮ್ಮ ಸಾಹಿತ್ಯವೂ ಕ್ರಿಸ್ತಪೂರ್ವದಷ್ಟು ಪ್ರಾಚೀನವಾಗಿದ್ದಿರಬೇಕೆಂದು ಕೆಲವು ಪಂಡಿತರ ಅಭಿಪ್ರಾಯ. ದಿವಂಗತ ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯನವರು 'ಬೌದ್ಧರೇ ಕನ್ನಡ ಭಾಷೆಗೆ ಆದಿಕವಿಗಳು, ಸುಮಾರು ಕ್ರಿಸ್ತಶಕದ ಆರಂಭದಿಂದಲೂ ಕನ್ನಡ ಭಾಷೆಯಲ್ಲಿ ಗ್ರಂಥರಚನೆಯಾಗುತ್ತಿದ್ದಿರಬೇಕು; ಬೌದ್ಧಮತದ ನಾಶದೊಂದಿಗೆ ಬೌದ್ಧ ಗ್ರಂಥಗಳೂ ನಾಶವಾದುವು'[1] ಎಂದು ಹೇಳಿದ್ದಾರೆ. ಶ್ರೀಮಾನ್ ಗೋವಿಂದ

---

[1] ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು ಪು. ೧೮.

ವೈ ಅವರು ಕ್ರಿ. ಶ. ೧೫೦ ರಲ್ಲಿದ್ದ ಹಾಲರಾಜನ ' ಗಾಥಾಸಪ್ತಶತಿ ' ಎಂಬ ಪ್ರಾಕೃತಗ್ರಂಥದಲ್ಲಿರುವ ಹಲವು ಕನ್ನಡ ಪದಗಳ ಆಧಾರದಿಂದ ಕನ್ನಡ ಸಾಹಿತ್ಯವು ಆ ಕಾವ್ಯಕ್ಕಿಂತಲೂ ಪೂರ್ವದಿಂದಲೂ ಇದ್ದಿರಬೇಕೆಂದು ಊಹಿಸಿದ್ದಾರೆ. ಈ ವಿದ್ವಾಂಸರ ಹೇಳಿಕೆಗಳನ್ನು ಬರಿಯ ಊಹೆಗಳೆಂದು ತಳ್ಳಿಹಾಕಿದರೂ ಕನ್ನಡ ಸಾಹಿತ್ಯದ ಪ್ರಾಚೀನತೆಗೆ ಅಪೋಹವೇನೂ ಆಗುವುದಿಲ್ಲ. ಈಗ ನಮಗೆ ಉಪಲಬ್ಧವಾಗಿರುವ ಕನ್ನಡ ಸಾಹಿತ್ಯ ಸಾಕಷ್ಟು ಪುರಾತನವಾಗಿಯೇ ಇದೆ. ಕನ್ನಡದ ಬಾಯ್ನುಡಿ ಸಾಹಿತ್ಯದ ಗದ್ದುಗೆಯೇರಿ ಬರೆಹರೂಪದಲ್ಲಿ ನಮಗೆ ಮೊಟ್ಟಮೊದಲನೆಯದಾಗಿ ಸಧ್ಯಕ್ಕೆ ಕಾಣಬಂದಿರುವುದು ಹಲ್ಮಿಡಿಯ ಶಾಸನದಲ್ಲಿ. ಇದರ ಕಾಲ ಸುಮಾರು ಕ್ರಿ. ಶ. ೪೫೦. ಆಳಕದಂಬನೆಂಬ ರಾಜನು ವಿಜ ಅರಸನೆಂಬುವನಿಗೆ ಎರಡು ಗ್ರಾಮುಗಳನ್ನು ದತ್ತಿಯಾಗಿ ಕೊಟ್ಟುದು ಇದರ ತಿರುಳು. ಗದ್ಯರೂಪದಲ್ಲಿರುವ ಈ ಶಾಸನದಲ್ಲಿ ಕೇವಲ ಇಪ್ಪತ್ತು ಪದಗಳು ಮಾತ್ರ ಕನ್ನಡ; ಉಳಿದುದೆಲ್ಲ ಸಂಸ್ಕೃತ. ಆದರಿಂದ ಈ ಶಾಸನ ಹುಟ್ಟುವವೇಳೆಗಾಗಲೆ ಸಂಸ್ಕೃತವು ಕನ್ನಡದ ಮೇಲೆ ಬೇಕಾದಷ್ಟು ಪ್ರಭಾವವನ್ನು ಬೀರಿತ್ತೆಂಬುದು ವ್ಯಕ್ತವಾಗುತ್ತದೆ. 'ಶಾಸನವಲ್ಲಿ ಉಪಯೋಗವಾದ ಭಾಷಾಶೈಲಿಯನ್ನು ಗಮನಿಸಿದರೆ ಭಾಷೆಯೂ ಅಷ್ಟು ಶಕ್ತಿಯುತವಾಗಿ ಬೆಳವಣಿಗೆ ಪಡೆಯಲು ಕೆಲವು ಶತಮಾನಗಳಾದರೂ ಹಿಡಿದಿರಬೇಕೆಂಬುದು ವಿದಿತವಾಗುತ್ತದೆ, ಎಂದು ಶ್ರೀಮಾನ್ ಎಂ. ಮರಿಯಪ್ಪ ಭಟ್ಟರು ತಮ್ಮ ' ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ'ಯಲ್ಲಿ (ಪುಟ.೭) ಈ ಶಾಸನವನ್ನು ಕುರಿತು ಹೇಳಿರುವ ಮಾತು ಗಮನಾರ್ಹವಾಗಿದೆ.

ಕನ್ನಡದಲ್ಲಿ ಈಗ ಉಪಲಬ್ಧವಾಗಿರುವ ಮೊಟ್ಟ ಮೊದಲ ಗ್ರಂಥ 'ಕವಿರಾಜಮಾರ್ಗ'. ಇದರ ಕಾಲ ಒಂಬತ್ತನೆಯ ಶತಮಾನ. ಇದಕ್ಕೂ ಪೂರ್ವದಲ್ಲಿ ಕನ್ನಡ ಸಾಹಿತ್ಯ ವಿಪುಲವಾಗಿ ಬೆಳೆದಿತ್ತೆಂಬುದು ನಿರ್ವಿವಾದ. ಆದರೆ ಸಮಗ್ರವಾದ ಗ್ರಂಥಗಳಾವುವೂ ಇದುವರೆಗೆ ನಮಗೆ ದೊರೆತಿಲ್ಲ. ಈಗ ನಮಗೆ ಉಪಲಬ್ಧವಾಗಿರುವವೆಂದರೆ ಶಾಸನಗಳು ಮಾತ್ರ. ಈ ಶಾಸನಗಳಲ್ಲಿ ಹಲವು ಅತ್ಯಂತ ಕಾವ್ಯಮಯವಾಗಿವೆ. ಉದಾಹರಣೆಗಾಗ ಕ್ರಿ. ಶ. ೭೦೦ ರಸುಮಾರಿನಲ್ಲಿ ಹುಟ್ಟಿದ ಈ ಶಾಸನವನ್ನು ನೋಡಿ—

ಸಾಧುಗೆ ಸಾಧು ಮಾಧುರ್ಯಙ್ಗೆ ಮಾಧುರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ ಪೆರನಲ್ಲ
ಒಳ್ಳಿತ್ತ ಕೆಯ್ವೊರಾರ್ ಪೊಲ್ಲದುಮದರಂತೆ
ಬಲ್ಲಿತ್ತು ಕಲಿಗೆ ವಿಪರೀತಾ ಪುರಾಕೃತ—
ಮಿಲ್ಲಿ ಸಂದಿಕ್ಕುಮದು ಬಂದು
ಕಟ್ಟಿದ ಸಿಂಘಮನ್ ಕೆಟ್ಟೋದೇನೆಮಗೆಂದು
ಬಿಟ್ಟವೊಲ್ ಕಲಿಗೆ ವಿಪರೀತಂಗಹಿತರ್ಕ್ಕಳ್
ಕೆಟ್ಟರ್ ಮೇಣ್ ಸತ್ತರವಿಚಾರಂ

ಭಾವ ಭಾಷೆಗಳ ವಿದ್ಯುದಾಲಿಂಗನದಿಂದ ಉದಿಸಿದ ಈ ಸುಂದರ ಭಾವಗೀತೆ 'ಕಲಿಯುಗ ವಿಪರೀತನ್' ಎಂಬ ಬಿರುದಿನಿಂದ ಬಾಳಿಹೋದ ಕನ್ನಡ ಕಲಿ 'ಕಪ್ಪೆ ಅರಭಟ್ಟ'ನನ್ನು ಕುರಿತ ವೀರಗೀತೆ. ಆ 'ಕಲಿಯುಗ ವಿಪರೀತನ್' ಸಾಧುಗಳಿಗೆ ಸಾಧು, ಗೆಳೆಯರಿಗೆ ಗೆಳೆಯ ; ಆದರೆ ಹಿಂಸೆ ಪಡಿಸಲೆಂದು ಬಂದವರಿಗೆ ಮಾತ್ರ ಆತ ಸಾಕ್ಷಾತ್ ಮಾಧವನಂತೆ ಭಯಂಕರ ನಾದವನು. ಒಳ್ಳಿತನ್ನು ಮಾಡಿದವರಿಗೆ ಒಳ್ಳಿತನ್ನೂ ಕೆಟ್ಟುದನ್ನು ಮಾಡಿದವರಿಗೆ ಕೆಟ್ಟುವನ್ನೂ ಮಾಡುವುದರಲ್ಲಿ ಈ 'ಕಲಿಯುಗ ವಿಪರೀತನ್' ಪುರಾಕೃತ ಕರ್ಮವಿದ್ದ ಹಾಗೆ (?) ಕಟ್ಟಿದ ಸಿಂಹವನ್ನು ಬಿಚ್ಚಿದರೆ ಏನಂತೆ ಎಂಬ ಎಗ್ಗರ ಹಾಗೆ ಈ 'ಕಲಿಯುಗವಿಪರೀತನ್'ನ್ನು ಕಾಲ್ಗೆದರಿ ಕೆಣಕಿದವರು ಕೆಡುತ್ತಾರೆ ; ಸತ್ತು ಹೋಗುತ್ತಾರೆ— ಅಚ್ಚಕನ್ನಡ ಛಂದಸ್ಸಿನಲ್ಲಿರುವ ಈ ಗೀತೆಯು ಆ ವೀರಕನ್ನಡಿಗನನ್ನು ಕಣ್ಣಿಗೆ ಕಟ್ಟುವಷ್ಟು ಸತ್ವಯುಕ್ತವಾಗಿದೆ, ಸ್ವಾಭಾವಿಕವಾಗಿದೆ.

ಸುಮಾರು ಇದೇ ಕಾಲದಲ್ಲಿಯೇ ಹುಟ್ಟಿದ ಶ್ರವಣಬೆಳುಗೊಳದ ಈ ಶಾಸನವನ್ನು ನೋಡಿ—

ಸುರಚಾಪಂಬೋಲೆ ವಿದ್ಯುಲ್ಲತೆಗಳತೆರವೊಲ್ ಮಂಜುವೊಲ್ ತೋರಿಬೇಗಂ
ಪಿರಿಗುಂ ಶ್ರೀರೂಪಲೀಲಾಧನವಿಭವಮಹಾರಾಶಿಗಳ್ ನಿಲ್ಲವಾರ್ಗಂ
ಪರಮಾರ್ಥಂ ಮೆಚ್ಚೆನಾಸೀ ಧರಣಿಯುಳಿರವಾನೆಂದು ಸಂನ್ಯಾಸನಂಗೆ
ಯ್ದುರುಸತ್ವನ್ ನಂದಿಸೇನಪ್ರವರಮುನಿವರನ್ ದೇವಲೋಕಕ್ಕೆ ಸಂದಾನ್

ಬಾದಾಮಿಯ ಶಾಸನ ವೀರಗೀತೆಯಾದರೆ, ಇದು ವೈರಾಗ್ಯಗೀತೆ. ಇಹಲೋಕದ ಭೋಗಭಾಗ್ಯಗಳು ಮಳೆಬಿಲ್ಲಿನಂತೆ, ಮಿಂಚಿನ ಸಂಚಲದಂತೆ, ಮಂಜಿನಂತೆ ಚಂಚಲವಾದುವು; ಈ ಅಸ್ಥಿರಸುಖವನ್ನು ನಾನು ಮೆಚ್ಚೆ; ಈ ಲೋಕದ ಸಹವಾಸ ನನಗೆ ಸಾಕು— ಎಂದು ಸಂನ್ಯಾಸವನ್ನು ಸ್ವೀಕರಿಸಿ (ಸಲ್ಲೇಖನವ್ರತವನ್ನು ಆಚರಿಸಿ) ನಂದಿಸೇನವ್ರತಿಯು ಸ್ವರ್ಗಕ್ಕೆ ಹೋದನು. ಈ ಮಾತುಗಳ ಮೋಡಿ, ಜೊಡಣೆ ಕವಿಯಲ್ಲದವನ ಲೇಖನಿಯಿಂದ ಹೇಗೆ ಬರುವುದು ಸಾಧ್ಯ? ಇಂತಹ ಕವಿಹೃದಯವಿರುವವನು ಕಾವ್ಯವನ್ನು ಬರೆದಿರಬಹುದೆಂದು ಊಹಿಸಿದರೆ ತಾನೆ ಏನು ತಪ್ಪು? ಕಾವ್ಯಗಳನ್ನು ಬರೆದವರು ಕೆಲವರು ಶಾಸನಗಳನ್ನು ಬರೆದಿರುವುದು ನಮಗೆ ಗೊತ್ತಿದೆ; ಶಾಸನಗಳನ್ನು ಬರೆದವರಲ್ಲಿ ಕೆಲವರು ಕಾವ್ಯಗಳನ್ನೂ ಬರೆದಿರಬಹುದು. ಅವು ಕಾಲಪುರುಷನ ಗರ್ಭದಲ್ಲಿ ಕರಗಿಯೇ ಹೋಗಿವೆಯೊ, ಅಥವಾ ಅಜ್ಞಾತವಾಸವನ್ನು ಅನುಭವಿಸುತ್ತಾ ಕುತಿಳಿವೆಯೊ!

ಇನ್ನು ಕನ್ನಡದ ಮೊಟ್ಟಮೊದಲ ಗ್ರಂಥವಾದ 'ಕವಿರಾಜಮಾರ್ಗ'ವನ್ನು ಸ್ವಲ್ಪ ನೋಡೋಣ. ಇದು ಒಂದು ಅಲಂಕಾರಗ್ರಂಥ, ಮೂರು ಪರಿಚ್ಛೇದಗಳಿವೆ. ಈ ಪರಿಚ್ಛೇದಗಳ ಕೊನೆಯಲ್ಲಿ 'ನೃಪತುಂಗದೇವಾನುಮತಮಪ್ಪ ಕವಿರಾಜ ಮಾರ್ಗದೊಳ್' ಎಂಬ ಹೇಳಿಕೆ ಬರುತ್ತದೆ. ಇದರ ಆಧಾರದಿಂದ ಈ ಗ್ರಂಥವು ಸುಪ್ರಸಿದ್ಧ ರಾಷ್ಟ್ರಕೂಟದೊರೆಯಾದ ನೃಪತುಂಗ ಅಮೋಘವರ್ಷನ ಕಾಲದಲ್ಲಿ (ಕ್ರಿ. ಶ. ೮೧೪ - ೮೭೭) ಹುಟ್ಟಿದುದೆಂದು ನಿರ್ಧಾರಿತವಾಗಿದೆ. ಆದರೆ ಈ ಹೇಳಿಕೆಯಿಂದ ಗ್ರಂಥದ ಕರ್ತೃವಿನ ವಿಚಾರದಲ್ಲಿ ಮಾತ್ರ ವಿಪುಲವಾದ ಚರ್ಚೆ ನಡೆದಿದೆ. ಇದು ನೃಪತುಂಗನೇ ಬರೆದುದೆ, ಅಥವಾ ನೃಪತುಂಗದೇವನ ನಿರ್ದೇಶನದಂತೆ ಅವನ ಆಶ್ರಯದಲ್ಲಿದ್ದವನು ಯಾವನಾದರೂ ಬರೆದನೆ? ರಾಜಾಶ್ರಯದಲ್ಲಿ ಬರೆದವನು ಶ್ರೀವಿಜಯನೆ? ಅಥವಾ ಶ್ರೀವಿಜಯನೆಂಬ ಪುರಾತನ ಕವಿ ಬರೆದಿದ್ದುದನ್ನು ಕವೀಶ್ವರನೆಂಬ ನೃಪತುಂಗನ ಸಭಾಸದನೊಬ್ಬನು ಬರೆದನೆ? ಕವಿರಾಜನೆಂದರೆ ರಾಜನಾದ ಕವಿಯೆ, ಕವಿಗಳಲ್ಲಿ ರಾಜನೆ? ಇದು ಕವಿಯ ರಾಜಮಾರ್ಗವೆ? ಕವಿರಾಜನ ಮಾರ್ಗವೆ? ಇತ್ಯಾದಿ, ಇತ್ಯಾದಿ. ಇದನ್ನು ಯಾವನೇ ಬರೆದಿರಲಿ, ನೃಪತುಂಗನ ಪ್ರಭಾವ ಈ ಗ್ರಂಥದ ಮೇಲೆ ಸಾಕಷ್ಟು ಬಿದ್ದಿದೆಯೆಂಬುದರಲ್ಲಿ

ಯಾವ ಸಂದೇಹವೂ ಇಲ್ಲ. ಸದ್ಯಕ್ಕೆ ಬಹುಜನಸಮ್ಮತವಾಗಿರುವಂತೆ ಶ್ರೀವಿಜಯಕವಿಯು ಈ ಗ್ರಂಥದ ಕರ್ತೃವೆಂದು ನಾವು ಸ್ವೀಕರಿಸೋಣ.

ಕವಿರಾಜಮಾರ್ಗವು ಕನ್ನಡಸಾಹಿತ್ಯದ ಇತಿಹಾಸದಲ್ಲಿ ಬಹು ಮುಖ್ಯವಾದ ಒಂದು ಮೈಲಿಗಲ್ಲು. ಕನ್ನಡ ನಾಡು, ನುಡಿ, ಸಾಹಿತ್ಯ. ಸಂಸ್ಕೃತಿಗಳನ್ನು ಕುರಿತು ಆತನು ಆಡಿರುವ ಮಾತುಗಳು ಕನ್ನಡಿಗರ ಆದರಕ್ಕೂ ಪ್ರೇಮಕ್ಕೂ ಹೆಮ್ಮೆಗೂ ಕಾರಣವಾಗಿವೆ. 'ಕಾವೇರಿಯಿಂದ ಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ" ಎಂಬ ಆತನ ಹೇಳಿಕೆಯಂತೆ ಉತ್ತರಕ್ಕೆ ಗೋದಾವರಿಯೂ ದಕ್ಷಿಣಕ್ಕೆ ಕಾವೇರಿಯೂ ಕನ್ನಡಕ್ಕೆ ಗಡಿಗಳಾಗಿದ್ದವು. ಇಂದು? ಮಹಾರಾಷ್ಟ್ರ, ತೆಲಗು, ತಮಿಳುಗಳು ಉತ್ತರದ ಗಡಿಯನ್ನು ದಕ್ಷಿಣಕ್ಕೆ ಒತ್ತರಿಸುತ್ತಾ ಬಂದಿವೆ. ಆ ಕನ್ನಡ ಸಾಮ್ರಾಜ್ಯದಲ್ಲಿ ತಿರುಳ್ಗನ್ನಡದ ನಾಡೊಂದು ಇತ್ತಂತೆ, ಅದರ ಮೇರೆಗಳಿವು—

ಅದರೊಳಗಂ ಕಿಸುವೊಳಲಾ
ವಿದಿತ ಮಹಾ ಕೊಪಣನಗರದಾ ಪುಲಿಗೆರೆಯಾ
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್

ಕಿಸುವೊಳಲ್, ಕೊಪಣನಗರ, ಪುಲಿಗೆರೆ, ಒಂಕುಂದ— ಈ ನಾಲ್ಕು ನಗರ ಗಳೂ ಈಗ ಕ್ರಮವಾಗಿ ಪಟ್ಟದಕಲ್ಲು, ಕೊಪ್ಪಳ, ಲಕ್ಷ್ಮೇಶ್ವರ, ಒಕ್ಕುಂದ— ಎಂಬ ಹೆಸರುಗಳಿಂದ ಉಳಿದುಕೊಂಡು ಬಂದಿವೆ. ಕನ್ನಡ ನುಡಿದೇವಿಯ ಚಿತ್ರಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ಹಚ್ಚಿಟ್ಟ ದೀಪದ ಕಂಭಗಳಂತೆ ಭಾಸ ವಾಗುತ್ತದೆ, ಆ ನಾಲ್ಕು ನಗರಗಳ ಹೆಸರನ್ನು ಕೇಳಿದಾಗ.

ಇನ್ನು ಕನ್ನಡದ ಜನರನ್ನು ಕುರಿತು ಕವಿರಾಜಮಾರ್ಗಕರ್ತೃ ಹೇಳಿರುವ ಮಾತುಗಳು ರೋಮಾಂಚಕಾರಕವಾಗಿವೆ.

ಪದನರಿದು ನುಡಿಯಲುಂ ನುಡಿ
ದುದನರಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುರಿತೋ
ದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್ ||

ಕನ್ನಡ ನಾಡಿನ ಜನ ಹದವರಿದು ಮಾತನಾಡಬಲ್ಲರು, ಇತರರು ಆಡಿದ ಮಾತನ್ನು ಅರ್ಥಮಾಡಿಕೊಂಡು ವಿಚಾರ ವಿಮರ್ಶೆ ಮಾಡಬಲ್ಲರು, ಹುಟ್ಟುಜಾಣರು, ಕಾವ್ಯಗಳನ್ನು ಅಭ್ಯಾಸ ಮಾಡದಿದ್ದರೂ ಕಾವ್ಯ ಪ್ರಯೋಗಗಳಲ್ಲಿ ಪರಿಣತಮತಿಗಳಾದವರು! ಇಷ್ಟೆ ಅಲ್ಲ,

ಕುರಿತವರಲ್ಲದೆ ಮತ್ತಂ
ಪೆರರುಂ ತಂತಮ್ಮ ನುಡಿಯೊಳೆಲ್ಲರ್ ಜಾಣರ್
ಕಿರುವಕ್ಕಳ್ ಮಾ ಮೂಗರು
ಮರಿಪಲ್ಕರಿವರ್ ವಿವೇಕಮಂ ಮಾತುಗಳಂ

ಗ್ರಂಥಾಭ್ಯಾಸ ಮಾಡದಿದ್ದವರೂ ತಮ್ಮ ನುಡಿಯಲ್ಲಿ ಜಾಣರಾಗಿದ್ದರು, ಎಳೆಯ ಮಕ್ಕಳೂ ಮೂಗರೂ ಕೂಡ ಹೇಳಿದ ಮಾತನ್ನು ಅರ್ಥಮಾಡಿಕೊಳ್ಳುತ್ತಿದ್ದರಂತೆ! ಹೇಳುವವರೂ ಕೇಳುವವರೂ ಇಬ್ಬರೂ ಬಹು ಸೂಕ್ಷ್ಮಮತಿಗಳಿರಬೇಕು. ಅಷ್ಟಲ್ಲದೆ ಏನು? ಕನ್ನಡಕ್ಕೆ ನಾಡವರು ಒವಜರು.

ಕವಿರಾಜಮಾರ್ಗವು ಒಂದು ಲಕ್ಷಣಗ್ರಂಥ, ಆದ್ದರಿಂದ ಇದಕ್ಕೂ ಪೂರ್ವದಲ್ಲಿ ಸಾಕಷ್ಟು ಸಾಹಿತ್ಯ ಬೆಳೆದಿತ್ತೆಂಬುದು ನಿರ್ವಿವಾದ. ಕವಿರಾಜಮಾರ್ಗಕರ್ತೃವು ಕನ್ನ ಕಾವ್ಯನಿಯಮಗಳಿಗೆ ಲಕ್ಷ್ಯವಾಗಬಲ್ಲ ಕಾವ್ಯಗಳ ಕರ್ತೃಗಳನ್ನು ಹೆಸರಿಸುತ್ತಾನೆ. ಇವರು ಕನ್ನಡ ಪದ್ಯ ಕವಿಗಳು—

ಪರಮಶ್ರೀವಿಜಯ ಕವೀ
ಶ್ವರ ಪಂಡಿತ ಚಂದ್ರಲೋಕಪಾಲಾದಿಗಳಾ
ನಿರತಿಶಯ ವಸ್ತು ವಿಸ್ತರ
ವಿರಚನೆ ಲಕ್ಷ್ಯಂ ತದಾದ್ಯಕಾವ್ಯಕ್ಕೆಂದುಂ ||

ಶ್ರೀವಿಜಯ, ಕವೀಶ್ವರ, ಪಂಡಿತ. ಚಂದ್ರ, ಲೋಕಪಾಲ ಇತ್ಯಾದಿಗಳು ಪದ್ಯಕವಿಗಳಾದರೆ,

ವಿಮಳೋದಯ ನಾಗಾರ್ಜುನ
ಸಮೇತ ಜಯಬಂಧು ದುರ್ವಿನೀತಾದಿಗಳೀ
ಕ್ರಮದೊಳ್ ನೆಗಳ್ಚಿ ಗದ್ಯಾ
ಶ್ರಮ ಪದ ಗುರುತಾಪ್ರತೀತಿಯಂ ಕಯ್ಕೊಂಡರ್.

ವಿಮಳ, ಉದಯ, ನಾಗಾರ್ಜುನ, ಜಯಬಂಧು, ದುರ್ವಿನೀತ ಇತ್ಯಾದಿಗಳು ಗದ್ಯಕವಿಗಳಲ್ಲಿ ಹೆಸರಾಂತವರು. 'ಕನ್ನಡದಲ್ಲಿ ಚೆತ್ತಾಣ, ಬೆದಂಡೆ—ಎಂಬ ಎರಡು ಕಾವ್ಯರೂಪಗಳನ್ನು ಕವಿರಾಜಮಾರ್ಗಕಾರನು ಹೆಸರಿಸಿದ್ದಾನೆ. ಕಂದಗಳೂ ವೃತ್ತಗಳೂ 'ಬೆಡಂಗೊಂದಿ' ಸುಂದರ ರೂಪಿನಿಂದ ಬಂದರೆ ಅದು ಬೆದಂಡೆ ; ಕಂದಗಳು ಹಲವು ಬಂದು ಅವುಗಳ ನಡುನಡುವೆ ಸುಂದರ ಕನ್ನಡವೃತ್ತಗಳಾದ ಅಕ್ಕರ, ಚೌಪದಿ, ಗೀತಿಕೆ, ತ್ರಿಪದಿಗಳು 'ಅಂದಂಬೆತ್ತೆಸೆಯೆ' ಅದು ಚತ್ತಾಣ.

ಕವಿರಾಜಮಾರ್ಗವು ತನ್ನ ಕಾಲದ ಭಾಷಾಸಾಹಿತ್ಯಗಳನ್ನು ಕುರಿತು ಅಮೂಲ್ಯವಾದ ವಿಷಯಗಳನ್ನು ತಿಳಿಸಿದೆ. ಹಾಗೆ ತಿಳಿಸುವುದನ್ನು ಸುಂದರವಾಗಿಯೂ ತಿಳಿಸಿದೆ. ಕನ್ನಡ ದೇಶಿಯಲ್ಲಿ ಅನೇಕ ಬಗೆಗಳಿವೆಯಂತೆ· ಅವುಗಳನ್ನು ತಿಳಿಸಲು (ಸಹಸ್ರಮುಖದ) ಆದಿಶೇಷನಿಗೂ ಬೇಸರವಾಗುತ್ತದೆಯಂತೆ ! ಸಂಸ್ಕೃತದ ಪ್ರಭಾವ ಅತಿಯಾಗಿ, ಸಂಸ್ಕೃತ ಅವ್ಯಯಗಳನ್ನು ಕನ್ನಡ ಶಬ್ದಗಳಿಗೆ ಅಂಟಿಸುವ ಪ್ರಯೋಗ ಬಳಕೆಗೆ ಬರುತ್ತಿತ್ತೋ ಏನೊ ! ಕವಿರಾಜಮಾರ್ಗಕಾರನು ಇದರಿಂದ 'ಒತ್ತಂಗರಡೆಯ ಮದ್ದಳೆಯ ಜರ್ಝರ ಧ್ವನಿಗಳವೊಲ್ ಪರುಷತರಮುಕ್ಕುಂ' ಎಂದು ಹೇಳಿ ಅಂಥಹ ಪ್ರಯೋಗಗಳನ್ನು ಪ್ರತಿಭಟಿಸಿದ್ದಾನೆ. ಹಾಗೆಯೇ ಅರಿಸಮಾಸ ಪ್ರಯೋಗಗಳನ್ನು ನಿಷೇಧಿಸುತ್ತಾ 'ಮರುಗುವ ಪಾಲ್ಗಳೆಯ ಪಸಿಗಳಂ ಬೆರಸಿದವೊಲ್ ವಿರಸಂ'—ಕುದಿಯುವ ಹಾಲಿಗೆ ಮಜ್ಜಿಗೆಯ ತೊಟ್ಟುಗಳನ್ನು ಬೆರಸಿದ ಹಾಗೆ ಹೊಲಸು—ಎಂದು ಹೇಳುತ್ತಾನೆ. ಶಬ್ದ ಸಾರೂಪ್ಯವಿಲ್ಲದ ಬರೆಹ 'ನೆಲ್ಲುಂ ಮೊಸರುಂ ಕುಡಿದಂತೆ!' ಅರ್ಥ ಸಾರೂಪ್ಯವಿಲ್ಲದ ಬರೆಹ 'ಮುತ್ತುಂ ಮೆಣಸುಂ ಕೋದಂತೆ!' ಅಂತ್ಯಲಘುವುಳ್ಳ ಪದದೊಡನೆ ಒತ್ತಕ್ಷರ ಸೇರಿಸಿದರೆ 'ಕೂಸಿನ ತಲೆಯೊಳ್ ಬಿಣ್ಪೊರೆಯನಿಟ್ಟವೋಲಸುಖಕರಂ !' ಇಂತಹ ವರ್ಣನೆಗಳನ್ನು ಕಂಡಾಗ ಕವಿರಾಜಮಾರ್ಗವು ಶಾಸ್ತ್ರಗ್ರಂಥವಾದರೂ ಅದರ ಕರ್ತೃ ಕವಿಹೃದಯವಿದ್ದವನೆಂಬುದು ವ್ಯಕ್ತವಾಗುತ್ತದೆ. ಕನ್ನಡ ನಾಡು, ನುಡಿ, ಜನತೆಯನ್ನು ಕುರಿತು ಮುಕ್ತಕಂಠದಿಂದ ಹಾಡಿರುವ ಈ ಕವಿಕೃತಿ ಶ್ರೀ ಮಾನ್ ಮುಗುಳಿಯವರು ಹೇಳುವಂತೆ 'ಕನ್ನಡಿಗರ ಕೈಪಿಡಿ' ಎಂಬ ಕೀರ್ತಿಗೆ ಅರ್ಹವಾಗಿದೆ. ಆದರೆ ವಿಷಯನಿರೂಪಣಾಸ್ವಾತಂತ್ರ್ಯದಲ್ಲಿ ಹೇಳಿಕೊಳ್ಳುವಂತಹ

ಹಿರಿತನವೇನೂ ಈ ಗ್ರಂಥದಲ್ಲಿಲ್ಲ. ಸಂಸ್ಕೃತದಲ್ಲಿ ಸುಪ್ರಸಿದ್ಧ ಲಾಕ್ಷಣಿಕರೆಂದು ಕೀರ್ತಿ ಪಡೆದಿರುವ ದಂಡಿ, ಭಾಮಹ ಮೊದಲಾದವರು ಕವಿರಾಜಮಾರ್ಗಕ್ಕೆ ಪ್ರೇರಕಶಕ್ತಿಗಳಾಗಿದ್ದಾರೆ. ಕವಿರಾಜಮಾರ್ಗ ಆ ಸಂಸ್ಕೃತಗ್ರಂಥಗಳಿಗಿಂತಲೂ ಶ್ರೇಷ್ಠವಾಗಿ ಏನೂ ಇಲ್ಲ.

ಕವಿರಾಜಮಾರ್ಗದಲ್ಲಿ ಉಕ್ತರಾಗಿರುವ ಗದ್ಯ ಪದ್ಯ ಕವಿಗಳ ಗ್ರಂಥಗಳಾವುವೂ ಈಗ ನಮಗೆ ದೊರೆತಿಲ್ಲ. ಕವಿರಾಜಮಾರ್ಗಕಾರರು ಹೇಳಿರುವುದನ್ನು ನೋಡಿದರೆ ಅವರೆಲ್ಲರೂ ಮಹಾಕವಿಗಳಾಗಿದ್ದರೆನ್ನಬೇಕಾಗುತ್ತದೆ. ಆದರೂ ಅವರ ಗ್ರಂಥಗಳಾವುವೂ ದೊರೆಯದಿರುವುದು ಕನ್ನಡಿಗರ ದುರದೃಷ್ಟ. ಅವರ ಕಾವ್ಯಗಳು ದೊರೆಯದಿದ್ದರೂ ಒಬ್ಬಿಬ್ಬರ ವಿಷಯದಲ್ಲಿ ನಮಗೆ ಅಲ್ಪ ಸ್ವಲ್ಪ ವಿವರಣೆಗಳು ದೊರಕುತ್ತವೆ. ಅಂತಹರಲ್ಲಿ ದುರ್ವಿನೀತ ಕವಿ ಒಬ್ಬನು. ಈತನು ಕ್ರಿ. ಶ. ೬೦೦ರ ಸುಮಾರಿನಲ್ಲಿದ್ದ ಗಂಗವಂಶದ ದೊರೆ. ಆತನು ಬಹು ಶ್ರುತನೂ ಮಹಾ ಮೇಧಾವಿಯೂ ಆಗಿದ್ದನೆಂದು ಗಂಗರ ಶಾಸನಗಳಿಂದ ಗೊತ್ತಾಗುತ್ತದೆ. ಆತನ ಹಲವು ಗ್ರಂಥಗಳ ಹೆಸರೂ ಅವುಗಳಲ್ಲಿ ಕಂಡುಬರುತ್ತವೆ. ಆದರೆ ಅವು ಸಂಸ್ಕೃತವೊ ಕನ್ನಡವೊ ಹೇಳುವುದು ಕಷ್ಟ. ಸಂಸ್ಕೃತದ ಸುಪ್ರಸಿದ್ಧ ಕವಿ ಭಾರವಿ ಆತನ ಆಸ್ಥಾನದಲ್ಲಿದ್ದನೆಂದು 'ಅವಂತಿಸುಂದರೀ ಕಥಾಸಾರ'ದಿಂದ ತಿಳಿದುಬರುತ್ತದೆ. ಪೈಶಾಚಿಕ ಭಾಷೆಯಲ್ಲಿದ್ದ ಬೃಹತ್ಕಥೆಯನ್ನು ಈತನು ಸಂಸ್ಕೃತಕ್ಕೆ ತಂದುಕೊಂಡನಂತೆ ಇದನ್ನೇ 'ವಡ್ಡ ಕಥಾ' ಎಂಬ ಹೆಸರಿನಿಂದ ಕನ್ನಡಕ್ಕೆ ತಂದುಕೊಂಡನೆಂದು ಶ್ರೀಬೇಂದ್ರೆಯವರು ಊಹಿಸುತ್ತಾರೆ. ಕನ್ನಡ ಪದ್ಯಕವಿಗಳ ಸಾಲಿನಲ್ಲಿ ಬರುವ ಶ್ರೀ ವಿಜಯನು ಕವಿರಾಜಮಾರ್ಗದ ಕರ್ತೃವಾದ ಶ್ರೀ ವಿಜಯನೇ ಇರಬೇಕೆಂದೂ ತನ್ನ ಕಾವ್ಯದಲ್ಲಿಯೇ ತನಗೆ ಪ್ರಶಸ್ತಿಯನ್ನು ಕೊಟ್ಟುಕೊಂಡಿರುವನೆಂದೂ ಶ್ರೀಮಾನ್ ಮುಗುಳಿಯವರು ತಮ್ಮ 'ಕನ್ನಡ ಸಾಹಿತ್ಯ ಚರಿತ್ರೆ'ಯಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಪದ್ಯಕವಿಗಳಲ್ಲಿ ಮತ್ತೊಬ್ಬನಾದ ಚಂದ್ರನು ಕನ್ನಡ ಕವಿಗಳಾದ ಚೌಡರಸ, ದುರ್ಗಸಿಂಹ ಮೊದಲಾದವರಿಂದ ಸ್ತುತ್ಯನಾಗಿದ್ದಾನೆ. ಆ ಚಂದ್ರಕವಿ ಕವಿರಾಜಮಾರ್ಗದಲ್ಲಿ ಸ್ತುತ್ಯನಾಗಿರುವ ಕವಿಯೇ ಇದ್ದರೂ ಇರಬಹುದು.

ದುರ್ವಿನೀತ, ಚಂದ್ರರು ಕವಿಗಳೆಂದು ಗೊತ್ತಿದ್ದರೂ ಅವರ ಕಾವ್ಯ

ಗಳ ವಿಚಾರ ನಿರ್ದಿಷ್ಟವಾಗಿ ಗೊತ್ತಿಲ್ಲ. ಕವಿರಾಜಮಾರ್ಗದಲ್ಲಿ ಉದಾಹರಣೆಯಾಗಿ ಕೊಟ್ಟಿರುವ ಹಲವು ಪದ್ಯಗಳಿವೆ. ಅವುಗಳ ಕರ್ತೃ ಯಾರೆಂಬುದು ಗೊತ್ತಿಲ್ಲ. ಈ ಪದ್ಯಗಳಿಗೆ ಹಲವನ್ನು ಕವಿರಾಜಮಾರ್ಗಕಾರರೇ 'ಸಂತೆಗೆ ಮೂರುಮೊಳ ನೇದು' ಕೊಂಡಿರಬಹುದು. ಆದರೆ ರಾಮಾಯಣದ ಹಲವು ಸನ್ನಿವೇಶಗಳನ್ನು ಚಿತ್ರಿಸುವ ಪದ್ಯಗಳು ಹತ್ತಾರು ಅಲ್ಲಿ ಬಂದಿರುವುದರಿಂದ ಅದಕ್ಕೂ ಪೂರ್ವದಲ್ಲಿ ರಾಮಾಯಣವೊಂದು ಹುಟ್ಟಿರಲೇಬೇಕೆಂದು ಊಹಿಸಿದರೆ ತಪ್ಪಾಗಲಾರದು.

ಕವಿರಾಜಮಾರ್ಗದಿಂದ ಭಿನ್ನವಾದ ಕೆಲವು ಆಧಾರಗಳೂ ಇವೆ, ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಸಾರಲು. ತುಂಬಲೂರಾಚಾರ್ಯರೆಂಬುವರು 'ಚೂಡಾಮಣಿ' ಎಂಬ ಹೆಸರಿನ ವ್ಯಾಖ್ಯಾನಗ್ರಂಥವೊಂದನ್ನು ಬರೆದಿರುವುದಾಗಿ ಭಟ್ಟಾಕಳಂಕನೆಂಬ (ಕ್ರಿ.ಶ. 1604) ವ್ಯಾಕರಣಕಾರನೂ ದೇವಚಂದ್ರ (1838) ನೆಂಬ ಕವಿಯೂ ತಿಳಿಸುತ್ತಾರೆ. ಇದು 96000 ಗ್ರಂಥವುಳ್ಳುದೆಂದು ಭಟ್ಟಾಕಳಂಕನೂ 84000 ಗ್ರಂಥವುಳ್ಳುದೆಂದು ದೇವಚಂದ್ರನೂ ಹೇಳುತ್ತಾರೆ. ಯಾವ ಸಂಖ್ಯೆಯನ್ನು ಸ್ವೀಕರಿಸಿದರೂ ಗ್ರಂಥದ ಬೃಹತ್ತಿಗೇನೂ ಕೊರತೆಯಿಲ್ಲ. ತುಂಬಲೂರಾಚಾರ್ಯನ ಕಾಲ ಏಳನೆಯ ಶತಮಾನ. ಅಷ್ಟು ಹಿಂದೆಯೇ ಇಂತಹ ಶಾಸ್ತ್ರೀಯ ಗ್ರಂಥವೊಂದು ಕನ್ನಡದಲ್ಲಿ ಹುಟ್ಟಿತೆಂದು ಹೇಳಿದ ಮೇಲೆ ಕನ್ನಡದ ಪ್ರಾಚೀನತೆ ಅದಕ್ಕಿಂತಲೂ ಕನಿಷ್ಠಪಕ್ಷ ಒಂದೆರಡು ಶತಮಾನಗಳ ಹಿಂದಕ್ಕಾದರೂ ಹೋಗಬೇಕಷ್ಟೆ? ತುಂಬುಲೂರಾಚಾರ್ಯನ ಸಮಕಾಲೀನನಾದ ಶ್ಯಾಮಕುಂದಾಚಾರ್ಯನು ಕನ್ನಡದಲ್ಲಿ ಪ್ರಾಭೃತವನ್ನು ರಚಿಸಿದನಂತೆ! ಸೈಗೊಟ್ಟಶಿವಮಾರ (ಕ್ರಿ.ಶ. ೮೦೦) ನೆಂಬ ಗಂಗರಾಜನು 'ಗಜಾಷ್ಟಕ' ವನ್ನು ಕನ್ನಡದಲ್ಲಿ ಬರೆದಿರುವನೆಂದೂ ಅದು ಅತ್ಯಂತ ಜನಪ್ರಿಯವಾಗಿತ್ತೆಂದೂ ಶಾಸನದಿಂದ ತಿಳಿಯಬರುತ್ತದೆ. ಕವಿರಾಜಮಾರ್ಗವು ಹುಟ್ಟಿದ ಕಾಲದಲ್ಲಿಯೇ 'ಗುಣಗಾಂಕಿಯಂ' ಎಂಬ ದೊಡ್ಡ ಛಂದಶ್ಶಾಸ್ತ್ರದ ಮೇಲಿನ ಗ್ರಂಥವೊಂದು ಕನ್ನಡದಲ್ಲಿ ಹುಟ್ಟಿತ್ತೆಂದು ತಮಿಳು ಛಂದೋಗ್ರಂಥವೊಂದರಿಂದ ತಿಳಿದುಬರುತ್ತದೆ.

ಕವಿರಾಜಮಾರ್ಗ ಹುಟ್ಟಿದ ಹಿಂಚುಮುಂಚಿನಲ್ಲಿಯೇ ಅಸಗ, ಗುಣನಂದಿ ಎಂಬ ಇಬ್ಬರು ಮಹಾಕವಿಗಳು ಆಗಿಹೋದಂತೆ ಕಂಡುಬರುತ್ತದೆ.

ಮುಂದೆ ಪೊನ್ನ ದುರ್ಗಸಿಂಹ ನಯಸೇನ ಮೊದಲಾದವರು ಇವರನ್ನು ಹೊಗಳಿದ್ದಾರೆ. ವೈಯಾಕರಣಿಯಾದ ಕೇಶಿರಾಜನು 'ಗಜಗನ ಗುಣ ನಂದಿಯ ಮನಸಿಜನಸಗನ ...................... ಸುಮಾರ್ಗಮಿದರೊಳ್ ಲಕ್ಷ್ಯಂ' ಎಂದು ಹೇಳಿದ್ದಾನೆ. ಅಸಗಕವಿಯ 'ವರ್ಧಮಾನಚರಿತೆ' ಎಂಬ ಸಂಸ್ಕೃತ ಗ್ರಂಥದಿಂದ ಆತನು ಕ್ರಿ. ಶ. 854ರಲ್ಲಿ ಇದ್ದನೆಂಬುದು ಮಾತ್ರ ವಲ್ಲ 'ಶ್ರೀ ಅಸಗಭೂಪಕೃತೆ ವರ್ಧಮಾನಚರಿತೆ' ಎಂಬ ಹೇಳಿಕೆಯಿಂದ ಆತನು ರಾಜನಾಗಿದ್ದಿರಬಹುದೆಂಬ ಊಹೆಗೂ ಅವಕಾಶವಿದೆ. ಕೇಶಿರಾಜ ನಿಂದ ಉದ್ಧರಿಸಿರುವ ಮೇಲಿನ ಪದ್ಯ ಭಾಗದಲ್ಲಿ ಗುಣನಂದಿಯ ಹೆಸರು ಕಾಣಬರುತ್ತದೆಯಷ್ಟೆ. ಆತನನ್ನು ಭಟ್ಟಾಕಳಂಕನು ಬಹು ಭಕ್ತಿಯಿಂದ 'ಭಗವಾನ್ ಗುಣನಂದಿ' ಎಂದು ಕರೆದು ಗೌರವಿಸಿದ್ದಾನೆ. ಆದರೆ ಆತನ ಗ್ರಂಥಗಳಾವುವೂ ದೊರೆತಿಲ್ಲ. ಶ್ರವಣಬೆಳುಗೊಳದ ಶಾಸನವೊಂದರಲ್ಲಿ ಆತನ ಪ್ರಶಸ್ತಿ ಕಂಡುಬರುವುದೆಂದೂ, ಆತನು ಆದಿಕವಿ ಪಂಪನ ಗುರುವಾದ ದೇವೇಂದ್ರಸೈದ್ಧಾಂತಿಕನ ಗುರುವಿರಬೇಕೆಂದೂ, ಸುಮಾರು ಕ್ರಿ.ಶ. 900ರಲ್ಲಿ ಆತ ಇದ್ದಿರಬೇಕೆಂದೂ ಶ್ರೀ ಮುಗುಳಿಯವರು ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ (ಪುಟ 47) ತಿಳಿಸುತ್ತಾರೆ. ಕೇಶಿರಾಜನು ರಳಕ್ಕೆ ಪ್ರತಿಯಾಗಿ ರೇಫೆಯೊಡನೆ ಕೂಡಿದ ದ್ವಿತ್ವವನ್ನು ಪ್ರಾಸಸ್ಥಾನದಲ್ಲಿ ಬಳಸಿರುವುದಕ್ಕೆ ಗುಣನಂದಿಯ ಪದ್ಯಭಾಗವನ್ನು ಉದ್ಧರಿಸಿದ್ದಾನೆ—

ಚುರ್ಚಿದವೊಲ್ ಬಿಸಿಲಳುರೆ ಕಿ
ಮುಳ್ಚಿದ ತಳಿರಂತೆ ನೊಂದು

(ಚುಚ್ಚಿದಂತೆ ಬಿಸಿಲು ವ್ಯಾಪಿಸಲು, ಕಿವಿಚಿಹೋದ ಚಿಗುರಿನಂತೆ ನೊಂದು) ಈ ಪದ್ಯಭಾಗವನ್ನು ನೋಡಿದರೆ, ಈತನು ಬಹು ಒಳ್ಳೆಯ ಕವಿಯೆಂದು ಊಹಿಸಲು ಅವಕಾಶವಿದೆ.

ಕವಿರಾಜಮಾರ್ಗವಾದ ಮೇಲೆ, ಆದಿಕವಿ ಪಂಪನಿಗಿಂತಲೂ ಮುಂಚೆ ಇದ್ದವರೆಂದು ಪ್ರಸಿದ್ಧರಾಗಿರುವ ಮತ್ತಿಬ್ಬರು ಕವಿಗಳು ಉಲ್ಲೇಖಾರ್ಹರಾ ಗಿದ್ದಾರೆ. ಅವರಲ್ಲಿ ಮೊದಲನೆಯ ಗುಣವರ್ಮ. ಕನ್ನಡದಲ್ಲಿ ಈ ಹೆಸರಿನ ಇಬ್ಬರು ಕವಿಗಳಿರುವುದರಿಂದ ಈತನನ್ನು ಮೊದಲನೆಯ ಗುಣ ವರ್ಮನೆಂದು ಗುರುತಿಸುವ ವಾಡಿಕೆ. ಎರಡನೆಯ ಗುಣವರ್ಮ (1235)

ಮೊದಲನೆ ಗುಣವರ್ಮನನ್ನು ಸ್ತೋತ್ರಮಾಡಿದ್ದಾನೆ. ನಯಸೇನ(1112) ಪಾರ್ಶ್ವಪಂಡಿತ (1205) ರುದ್ರಭಟ್ಟ (1200) ಮೊದಲಾದ ಕವಿಗಳನೇಕರೂ ಆತನನ್ನು ಹೊಗಳಿದ್ದಾರೆ. ಕೇಶಿರಾಜ, ನಾಗವರ್ಮ ಎಂಬ ಇಬ್ಬರು ಸುಪ್ರಸಿದ್ಧ ವ್ಯಾಕರಣಕಾರರು ಈತನ ಕಾವ್ಯಗಳಿಂದ ಉದ್ಧರಿಸಿದ್ದಾರೆ. ಕೇಶಿರಾಜನು ತನ್ನ ಶಬ್ದಮಣಿದರ್ಪಣದ ೧೧೮ನೆಯ ಸೂತ್ರಕ್ಕೆ ಉದಾಹರಣೆಯನ್ನು ಕೊಡುತ್ತಾ 'ಈಂದ ಪುಲಿಯಾವೊಲಿರ್ದಳ್' ಎಂಬುದು 'ಗುಣವರ್ಮನ ಹರಿವಂಶ ಪ್ರಯೋಗಂ' ಎಂದು ಹೇಳುತ್ತಾನೆ. ನಾಗವರ್ಮನು ತನ್ನ ಭಾಷಾಭೂಷಣದಲ್ಲಿ ದ್ವಿತೀಯಾವಿಭಕ್ತಿಯ ಉದಾಹರಣೆಯಾಗಿ

ಎಸಿತ್ತೆಸಿತ್ತಂಬುಜಪತ್ರ ನೇತ್ರೆಯಾ
ಘನಸ್ತನಂಗಳ್ ಬಳೆಗುಂ ಕಿರಾತೆಯಾ
ಅಸಿತ್ತಸಿತ್ತುಂ ವನದೊಳ್ ವನೇಚರಂ
ತನತ್ತು ಬಿಲ್ಲಾನದನಂತೆ ಕೀಸುವಂ

ಎಂಬ ವೃತ್ತವನ್ನು ಕೊಟ್ಟು 'ಗುಣವರ್ಮಕವೇಃ ಭುವನೈಕವೀರಸ್ಯ ಪ್ರಯೋಗಃ' ಎಂದು ಹೇಳಿದ್ದಾನೆ. ಮಲ್ಲಿಕಾರ್ಜುನ ಕವಿಯ (1250) ಸಂಕಲನ ಗ್ರಂಥವಾದ 'ಸೂಕ್ತಿ ಸುಧಾರ್ಣವ' ದಲ್ಲಿಯೂ ಅಭಿನವ ವಾದಿವಿದ್ಯಾನಂದನ (ಕ್ರಿ. ಶ. 1550) ಸಂಕಲನ ಗ್ರಂಥವಾದ ಕಾವ್ಯಸಾರದಲ್ಲಿಯೂ ಗುಣವರ್ಮಕವಿಯ 'ಶೂದ್ರಕ' ಕಾವ್ಯದಿಂದ ಹಲವು ಪದ್ಯಗಳು ಉದ್ಧೃತವಾಗಿವೆ. ಈ ಪದ್ಯಗಳೆಲ್ಲವೂ ವೃತ್ತಕಂದಗಳಲ್ಲಿರುವುದಲ್ಲದೆ ಒಂದು ಗದ್ಯ ಭಾಗವೂ ಕಂಡು ಬಂದಿರುವುದರಿಂದ ಇದು ಒಂದು ಚಂಪೂಗ್ರಂಥವೆಂದು ಊಹಿಸಲು ಅವಕಾಶವಾಗಿದೆ. ಈ ಕಾವ್ಯಭಾಗಗಳಲ್ಲಿ ಅಲ್ಲಲ್ಲಿಯೆ ಗಂಗರಾಜನೊಬ್ಬನ ಹೊಗಳಿಕೆ ಕಂಡು ಬರುತ್ತದೆ. ಗಂಗರಾಜರಲ್ಲಿ ಸುಪ್ರಸಿದ್ಧನಾದ ಎರೆಯಪ್ಪನೇ (886-913) ಆ ರಾಜನಿರಬೇಕೆಂದು ಸ್ವೀಕರಿಸಿ, ಗುಣವರ್ಮನ ಕಾಲ ಸುಮಾರು ಕ್ರಿ. ಶ. 900 ಎಂದು ನಿರ್ಧರಿಸಲಾಗಿದೆ. ಹೀಗೆ ಮೊದಲನೆಯ ಗುಣವರ್ಮನು 'ಹರಿವಂಶ' 'ಭುವನೈಕವೀರ' 'ಶೂದ್ರಕ' ಎಂಬ ಮೂರು ಗ್ರಂಥಗಳನ್ನು ಬರೆದಿರುವಂತೆಯೂ, ಆತನ 'ಶೂದ್ರಕ' ವು ಗಂಗರಾಜನೊಬ್ಬನ ಕಥೆಯನ್ನು ಸಮೀಕರಿಸಿಕೊಂಡ ಚಂಪೂ ಕಾವ್ಯವೆಂಬು

ದಾಗಿಯೂ ತಿಳಿದಂತಾಯಿತು. ಇರುವಷ್ಟು ಕಾವ್ಯರಾಗದಿಂದಲೇ ಹೇಳುವುದಾದರೆ ಈತನ ಪದಬಂಧ ಪ್ರೌಢವಾಗಿದೆ. ದೇಶಿಗಿಂತಲೂ ಮಾರ್ಗಶೈಲಿಯಲ್ಲಿಯೇ ಈತನಿಗೆ ಒಲವು ಹೆಚ್ಚು. ಈತನ ಕಲ್ಪನಾಶಕ್ತಿಯಲ್ಲಿ ಮಹೌನ್ನತ್ಯ ಕಾಣದಿದ್ದರೂ ಈತನೇನೂ ಕೀಳು ಕವಿಯಲ್ಲ. ಪಂಪನಿಗಿಂತಲೂ ಪೂರ್ವದಲ್ಲಿಯೇ ಚಂಪುವನ್ನು ಕನ್ನಡದಲ್ಲಿ ಬಳಕೆಗೆ ತಂದುಕೊಂಡ ಗುಣವರ್ಮನು ಆದರಣೀಯನಾಗಿದ್ದಾನೆ. ತನ್ನ ದೊರೆಯಾದ ಎರೆಯಪ್ಪನನ್ನು ಶೂದ್ರಕಕಾವ್ಯದಲ್ಲಿ ಬಳಸಿಕೊಂಡು, ಪಂಪಕವಿಗೆ ಒಂದು ಮಾದರಿಯನ್ನೂ ಈತ ಒದಗಿಸಿರುವಂತೆ ತೋರುತ್ತದೆ.

ಪಂಪನಿಗಿಂತಲೂ ಸ್ವಲ್ಪ ಮುಂಚಿನವನೆಂದು ನಿರ್ಧಾರಿತನಾಗಿರುವ ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ' ಕನ್ನಡ ಸಾಹಿತ್ಯದಲ್ಲಿಯೇ ಅಪೂರ್ವವಾದ ಒಂದು ಕಾವ್ಯ. ಮೊದಲನೆಯದಾಗಿ ಇದೊಂದು ಗದ್ಯಕಾವ್ಯ ; ಕನ್ನಡದಲ್ಲಿ ಸಿಕ್ಕುವ ಮೊಟ್ಟಮೊದಲ ಗದ್ಯಕಾವ್ಯ. ಇದು ಮನೋಹರವಾದ ಹತ್ತೊಂಬತ್ತು ಕಥೆಗಳನ್ನು ಒಳಗೊಂಡಿದೆ. ಒಂದೊಂದು ಕಥೆಯ ಆರಂಭದಲ್ಲಿಯೂ ಒಂದೊಂದು ಪ್ರಾಕೃತ ಗಾಹೆ ಇರುತ್ತದೆ. ಷಟ್ಪದಿಕಾವ್ಯಗಳಲ್ಲಿನ ಸೂಚನಾ ಪದ್ಯಗಳಂತೆ ಈ ಗಾಹೆಗಳು ಇಡೀ ಕಥೆಯ ಸಾರಾಂಶವನ್ನು ಸೂಚಿಸುತ್ತವೆ. ಈ ಪ್ರಾಕೃತ ಗಾಹೆಗಳಿಗೆ ಕನ್ನಡ ಅರ್ಥವನ್ನು ಕೊಟ್ಟು, ಕಥೆಯನ್ನು ಪ್ರಾರಂಭಿಸುತ್ತಾನೆ, ಕಾವ್ಯಕರ್ತೃ. ಸಹಸ್ರವರ್ಷಗಳಿಗಿಂತಲೂ ಹಿಂದೆ ಹುಟ್ಟಿದ ಈ ಕಾವ್ಯ ಇಂದೂ ನಮ್ಮ ಆದರ, ಮೆಚ್ಚಿಗೆ, ಗೌರವಕ್ಕೆ ತಕ್ಕುದಾಗಿದೆ. ಓದುಗರನ್ನು ಮೈಮರೆಸಿ ಸೆಳೆದೊಯ್ಯಬಲ್ಲ ಕಥನಕಲೆ ಶಿವಕೋಟ್ಯಾಚಾರ್ಯನ ಬಂಡವಾಳ. ಮಾತುಗಳ ಜೋಡಣೆಯೂ ಬಹು ಮುದ್ದಾಗಿದೆ. ವಡ್ಡಾರಾಧನೆಯ ಮೊದಲ ಕಥೆ 'ಸುಕುಮಾರಸ್ವಾಮಿಯ ಕಥೆ' ಯಲ್ಲಿ ಬರುವ ಈ ಭಾಗವನ್ನು ನೋಡಿ–ಹಲವು ಜನ್ಮಗಳಲ್ಲಿ ತಿರುಗಿ, ತನ್ನ ಪಾಪಕರ್ಮಗಳನ್ನೆಲ್ಲಾ, ಸವೆಸಿ, ಕಡೆಯ ಜನ್ಮದಲ್ಲಿ ಆಗರ್ಭಶ್ರೀಮಂತನಾಗಿ ಹುಟ್ಟಿದ್ದಾನೆ, ಸುಕುಮಾರಸ್ವಾಮಿ. ಅವನ ಐಶ್ವರ್ಯವನ್ನು ಕೇಳಿ ಅಚ್ಚರಿಯಿಂದ ರಾಜನು ಆತನನ್ನು ನೋಡಲೆಂದು ಅವನ ಮನೆಗೆ ಬರುತ್ತಾನೆ. ಸುಕುಮಾರನ ತಾಯಿ ರಾಜನನ್ನು ಸಕಲೋಪಚಾರದಿಂದ ಸನ್ಮಾನಿಸಿ ಕುಳ್ಳಿರಿಸಿರಲು ಆತನು 'ಸುಕುಮಾರನೆಲ್ಲಿದನೆಂದು ಬೆಸಗೊಂಡೊಡೆ 'ಸ್ವಾಮಿ,

ಅತಂ ಕರಂ ಸಾದು, ನಿಮ್ಮ ಬರವುನರಿಯಂ, ಪ್ರಾಸಾದದ ಮೇಗಣ ನೆಲೆಯೊಳಿರ್ದ' ನೆಂದೊಡರಸಂ 'ಬಳಿಯನಟ್ಟು' ಮೆನೆ. ತಾಯ್ ಪೋಗಿ 'ಮಗನೆ ಅರಸರ್ ವಂದರ್, ಬಾ, ಪೋಪ' ಮೆನೆ, 'ಅರಸರೆಂಬೊರಾರೆ'ನೆ. ತಾಯೆಂದಳ್-'ನಮ್ಮ ನಾಳ್ದರ್' ಎಂದೊಡೆ 'ನಮ್ಮ ನಾಳ್ದರುಮೊಳರೆ!' ಎಂದು ವಿಸ್ಮಯಂಬಟ್ಟು ತಾಯ ವಚನಮಂ ಮಾರ್ಕೊಳಲಾರದೆ ಬಪ್ಪೊನಂ ನರೇಶ್ವರಂ ಕಂಡು ಕಣ್ಬೆತ್ತ ಫಲಮನಿಂದು ಪೆತ್ತೆನೆಂದು ಕಾಮದೇವನನಪ್ಪಿ ಕೊಳ್ವಂ ತಪ್ಪಿಕೊಂಡು ದಿವ್ಯ ಶಯ್ಯಾತಳದ ಮೇಗೊಡನಿರಿಸಿದಾಗಳ್.... ಇಲ್ಲಿನ ಸಂಭಾಷಣೆಯ ವೈಖರಿಯನ್ನು ನೋಡಿ: ಒಂದೊಂದೇ ಮಾತುಗಳಲ್ಲಿ ಕಥೆಯನ್ನು ಮುಂದುವರಿಸುವ ಈ ಸಂಭಾಷಣೆ ಸಂಗ್ರಹವಾಗಿರುವಷ್ಟೆ ಸತ್ವಯುಕ್ತವಾಗಿದೆ, ಸರಸವಾಗಿದೆ. ದೇಸಿಯೇ ಪ್ರಧಾನವಾದ ಶಿವಕೋಟ್ಯಾಚಾರ್ಯನ ಶೈಲಿ ಹೃದಯಂಗಮವಾಗಿದೆ.

ವಡ್ಡಾರಾಧನೆಗೆ 'ಉಪಸರ್ಗ ಕೇವಲಿಗಳ ಕಥೆ' ಎಂಬ ಮತ್ತೊಂದು ಹೆಸರಿದ್ದಿತೆಂದೂ, ಇಲ್ಲಿನ ಪ್ರತಿಯೊಂದು ಕಥೆಯ ನಾಯಕನೂ ಯಾವುದೋ ಒಂದು ಉಪಸರ್ಗಕ್ಕೆ ಕಟ್ಟುಬಿದ್ದು ಅದರಿಂದಲೇ ಸತ್ತು ಸ್ವರ್ಗಸುಖವನ್ನು ಸಂಪಾದಿಸುವನೆಂದೂ, ಆ ಚರಿತ್ರೆಯು ಈ ಕಥೆಗಳಲ್ಲಿ ಅಡಗಿರುವುದರಿಂದಲೇ ಈ ಹೆಸರು ಸಾರ್ಥಕವಾಗಿದೆಯೆಂದೂ ಪ್ರೊ॥ ಡಿ. ಎಲ್. ನರಸಿಂಹಾಚಾರ್ಯರು ತಿಳಿಸುತ್ತಾರೆ. ಸಲ್ಲೇಖನ ವ್ರತದಿಂದ ಸಮಾಧಿಮರಣವನ್ನು ಪಡೆಯುವವರಲ್ಲಿ ವೈರಾಗ್ಯವನ್ನು ಪ್ರಚೋದಿಸಲು ವಡ್ಡಾರಾಧನೆಯ ಕಥೆಗಳು ಉಪಯುಕ್ತವಾದುವೆಂದು ಶ್ರೀ ಮುಗಳಿಯವರು ತಿಳಿಸುತ್ತಾರೆ. ಈ ಬಗೆಯಾದ ಧರ್ಮದೃಷ್ಟಿ ಹೇಗಾದರೂ ಇರಲಿ. ಇವು ವೈರಾಗ್ಯವನ್ನು ಪ್ರಚೋದಿಸುವಷ್ಟೇ, ಮನೋರಂಜನೆಯನ್ನು ಮಾಡಿ ಮೈಮರೆಸಬಲ್ಲವು. ಅಷ್ಟೇ ಅಲ್ಲ, ಅಂದಿನ ಭಾಷೆಯ ಸ್ವರೂಪವನ್ನು ವಡ್ಡಾರಾಧನೆ ದಿಗ್ದರ್ಶಿಸುತ್ತದೆ. ಅಂದಿನ ಜನಜೀವನಕ್ಕೆ ಹಿಡಿದ ಕನ್ನಡಿಯಂತಿದೆ. ಕನ್ನಡ ಸಾಹಿತ್ಯ ಜಗತ್ತಿನಲ್ಲಿ ಇದೊಂದು

---

[1] ಸಾಹಿತ್ಯ ಪರಿಷತ್ಪತ್ರಿಕೆ—೧೯೩೧ನೆಯ ಅಕ್ಟೋಬರ್: 'ಶಿವಕೋಟ್ಯಾಚಾರ್ಯ.'

[2] ಕನ್ನಡ ಸಾಹಿತ್ಯ ಚರಿತ್ರೆ ಪು. 62.

ಚಿರಂಜೀವಿಯಾದ ಗ್ರಂಥ. ಕವಿರಾಜಮಾರ್ಗದಲ್ಲಿ ಇದರ ಹೆಸರು ಕಾಣಬರದಿರುವುದರಿಂದ ಇದು ಆ ಗ್ರಂಥವಾದ ಮೇಲೆ ಹುಟ್ಟಿದುದಿರಬೇಕು. ಪಂಪನಿಗಿಂತ ಪೂರ್ವದಲ್ಲಿ ಸುಮಾರು 920-30 ರ ವೇಳೆಗೆ ಇದು ಹುಟ್ಟಿರಬಹುದು.

ಹೀಗೆ ಪಂಪಪೂರ್ವಯುಗದಲ್ಲಿ ಕನ್ನಡ ಸಾಹಿತ್ಯ ಸಾಕಷ್ಟು ಪ್ರೌಢವಾಗಿ, ವಿಪುಲವಾಗಿ ಬೆಳೆದಿತ್ತೆಂಬುದು ನಿರ್ವಿವಾದವಾಗಿದೆ.

## ಪಂಪಯುಗ ಅಥವ ಸ್ವರ್ಣಯುಗ

ಕನ್ನಡ ಸಾಹಿತ್ಯದ 'ಆದಿಕವಿ'ಯೆಂದು, 'ನೂತನ ಯುಗ ಪ್ರವರ್ತಕ'ನೆಂದು ಸುವಿಖ್ಯಾತನಾಗಿರುವ ಪಂಪಮಹಾಕವಿ ಹತ್ತನೆಯ ಶತಮಾನಕ್ಕೆ ಸೇರಿದವನು. ಈ ಶತಮಾನವನ್ನು 'ಕನ್ನಡ ಸಾಹಿತ್ಯದ ಸ್ವರ್ಣಯುಗ'ವೆಂದು ಕರೆಯುವ ವಾಡಿಕೆ. ಆ ಕೀರ್ತಿ ಬಹುಮಟ್ಟಿಗೆ ಪಂಪನಿಗಾಗಿ ಮೀಸಲು. ಪಂಪನಿಂದ (ಎಂದರೆ ಹತ್ತನೆಯ ಶತಮಾನದ ಮಧ್ಯದಿಂದ) ಮುಂದೆ ಸುಮಾರು ಎರಡು ಶತಮಾನಗಳಷ್ಟು ಕಾಲ ಆ ಮಹಾಕವಿಯ ಪ್ರಭಾವ ಕನ್ನಡ ಸಾಹಿತ್ಯ ಜಗತ್ತಿನಲ್ಲಿ ಏಕಚ್ಛತ್ರಾಧಿಪತ್ಯವನ್ನು ಸ್ಥಾಪಿಸಿಕೊಂಡಿತ್ತು. ಆ ಕಾಲದ ಕನ್ನಡ ಸಾಹಿತ್ಯ ಅತ್ಯಂತ ಪ್ರೌಢವಾಗಿ, ಸತ್ವಯುಕ್ತವಾಗಿ, ರಸಮಯವಾಗಿದೆ. ಈ ಕಾಲಮಾನವನ್ನು ಪಂಪಯುಗವೆಂಬ ಹೆಸರಿನಿಂದ ಇಲ್ಲಿ ಕರೆಯಲಾಗಿದೆ. ಹನ್ನೆರಡನೆಯ ಶತಮಾನದ ಕೊನೆಯ ಭಾಗದಲ್ಲಿ ಹರಿಹರಕವಿಯ ಅವತರಣದೊಡನೆ ಕನ್ನಡ ಸಾಹಿತ್ಯದ ಹೊಸ ಯುಗವೊಂದು ಆರಂಭವಾಗುವುದರಿಂದ ಈ ಕಾಲಮಾನದ ಗಡಿಯನ್ನು ಗುರುತಿಸುತ್ತಿರುವುದೇ ಹೊರತು ಪಂಪಕವಿ ಅಂದಿನಂತೆ ಇಂದೂ ಅದ್ವಿತೀಯನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಹೊಸ ಯುಗ ಪ್ರಾರಂಭವಾದ ಮೇಲೆಯೂ ಆತನ ಪ್ರಭಾವ ಮಾಯವಾಗಲಿಲ್ಲ. ಆತನ ಕಾವ್ಯ ರೀತಿಯ ಅನುಕರಣ ತಪ್ಪಲಿಲ್ಲ; ಆತನನ್ನು ಆದರ್ಶವಾಗಿಟ್ಟುಕೊಳ್ಳುವುದೂ, ಸ್ತುತಿ ರೂಪದ ಪುಷ್ಪದಿಂದ ಆತನ್ನು ಪೂಜಿಸುವುದೂ ನಿಂತು ಹೋಗಲಿಲ್ಲ.

'ಸಾಹಿತ್ಯವು ಜನಜೀವನದ ಪ್ರತಿಬಿಂಬ' ಎಂದು ಹೇಳುತ್ತಾರೆ.

(ಪಂಪಯುಗದ ಮಹಾಕವಿಕಾವ್ಯಗಳಲ್ಲಿ ಕಾಣಬರುವ ಜನಜೀವನವೆಂದರೆ ಬಹುಮಟ್ಟಿಗೆ ಅರಮನೆಯ ಅಥವಾ ಆಸ್ಥಾನದ ಜನರ ಜೀವನವೇ. ಸಾಮಾನ್ಯ ಜನಜೀವನವೆಂದರೆ ಬಹುಶಃ ಸೈನಿಕನ ಕ್ವಚಿತ್ ಚಿತ್ರ—ಅದೂ ಮೌನವಾದ ಯಾಂತ್ರಿಕ ಜೀವನ ಚಿತ್ರ—ನಮಗೆ ದೊರೆಯಬಹುದು, ಅಷ್ಟೆ. ಸಾಮಾನ್ಯ ಜನಜೀವನದ ಸಜೀವ ಚಿತ್ರಣ ಗೋಚರಿಸಬೇಕಾದರೆ ನಯಸೇನನೇ ಮೊದಲಾದ ವಿಡಂಬನಕಾರರಲ್ಲಿ ಅಥವಾ ದುರ್ಗಸಿಂಹನ ಪಂಚತಂತ್ರದಲ್ಲಿ. ಪಂಪಯುಗದ ಕಾವ್ಯಗಳು ಕನ್ನಡ ಸಾಹಿತ್ಯದ 'ಸ್ವರ್ಣ ಯುಗ'ವನ್ನು ಸಂಸ್ಥಾಪಿಸಿಕೊಂಡಿದ್ದರೆ ಅದಕ್ಕೆ ಹಿನ್ನೆಲೆಯಾದ ಜನಜೀವನವೂ ಉಜ್ವಲವಾಗಿಯೇ ಇರಬೇಕು. ಆಗಿನ ಕಾಲದ ರಾಜಕೀಯ, ಧಾರ್ಮಿಕ ಮತ್ತು ಸಾಮಾಜಿಕ ಜೀವನಗಳ ಕಡೆ ನೋಡಿದರೆ ಈ ಮಾತಿನ ತಥ್ಯತೆ ಅರ್ಥವಾಗುತ್ತದೆ. ಹತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಪ್ರಾಬಲ್ಯಕ್ಕೆ ಬಂದ ರಾಷ್ಟ್ರಕೂಟರು ಆ ಶತಮಾನದ ಕೊನೆಯ ವೇಳೆಗೆ ಮಹೋನ್ನತ್ಯವನ್ನು ಪಡೆದು, ಇದ್ದಕ್ಕಿದ್ದಂತೆಯೆ ಅಸ್ತಂಗತರಾದರು. ವೇಮುಲವಾಡದ ಚಾಲುಕ್ಯರೂ, ದಕ್ಷಿಣದ ಗಂಗರೂ ಪ್ರಬಲ ಸಹಾಯಕರಾಗಿದ್ದು, ರಾಷ್ಟ್ರಕೂಟರ ದಿಗ್ವಿಜಯಗಳಿಗೂ ಸಾಮ್ರಾಜ್ಯ ಸ್ಥಾಪನೆಗೂ ಸಹಾಯಕರಾಗಿದ್ದರು. ಹನ್ನೊಂದನೆಯ ಶತಮಾನದಲ್ಲಿ ಕಲ್ಯಾಣಿಯ ಚಾಳುಕ್ಯರು ತಲೆಯೆತ್ತಿಕೊಂಡರು. ಆದರೆ ಇವರು ನಿರಂತರವೂ ಚೋಳರೊಡನೆ ಹೋರಾಡಬೇಕಾಗಿತ್ತು. ಚೋಳರ ಹೊಡೆತಕ್ಕೆ ಸಿಕ್ಕಿ ಗಂಗರಾಜ್ಯ ಜರ್ಝರಿತವಾಗಿ ಹೋದುದರಿಂದ ಚಾಳುಕ್ಯರೊಬ್ಬರೇ ಕರ್ಣಾಟಕದ ರಕ್ಷಕರಾಗಬೇಕಾಯಿತು. ರಾಜಮನೆತನದ ಒಳ ಜಗಳಗಳಿಂದ ಅದು ಕೆಲವು ಕಾಲ ದುರ್ಬಲವಾಗಿತ್ತು. ಆದರೆ ಆರನೆಯ ವಿಕ್ರಮಾದಿತ್ಯನು ತನ್ನ ಅಣ್ಣನನ್ನು ಸೆರೆಯಲ್ಲಿಟ್ಟು ಕ್ರಿ. ಶ. ೧೦೭೬ರಲ್ಲಿ ಸಿಂಹಾಸನವನ್ನು ಏರುತ್ತಲೆ ಕರ್ಣಾಟಕದ ಕೈ ಮತ್ತೆ ಮೇಲಾಯಿತು. ಆತನು ಯುದ್ಧದ ಮೇಲೆ ಯುದ್ಧವನ್ನು ಹೂಡಿ ಕರ್ಣಾಟಕ ಸಾಮ್ರಾಜ್ಯವನ್ನು ವಿಸ್ತರಿಸಿದನು. ಈತನ ತರುವಾಯ ಚಾಲುಕ್ಯ ಮನೆತನದ ಪ್ರಾಬಲ್ಯ ಕುಂದುತ್ತಾ ಹೋಗಿ, ಹನ್ನೆರಡನೆಯ ಶತಮಾನದ ಕೊನೆಯ ವೇಳೆಗೆ ಹೊಯ್ಸಳ ಸಾಮ್ರಾಜ್ಯ ಸ್ಥಾಪನೆಯಾಗುತ್ತಿದ್ದಂತೆಯೆ ಇವರು ಅಜ್ಞಾತರಾದರು.

ಹೀಗೆ ರಾಜಕೀಯ ವಾತಾವರಣವೆಲ್ಲವೂ ಶಸ್ತ್ರಾಸ್ತ್ರಗಳ ಮಾರ್ದನಿಗಳಿಂದ ಪ್ರಕ್ಷುಭಿತವಾಗಿದ್ದಾಗ ಕನ್ನಡಿಗರ ಶೌರ್ಯಕ್ಕೆ ಸಾಣೆಹಿಡಿದಂತಾಯಿತು. ಯುದ್ಧದ ಹೆಸರನ್ನು ಹೇಳುತ್ತಲೆ ಜನರ ಬಾಹುಗಳು ಸ್ಫುರಣಗೊಳ್ಳುತ್ತಿದ್ದವೆಂದು ತೋರುತ್ತದೆ. ಊರಿನ ರಕ್ಷಣೆಗಾಗಿ, ಹೆಣ್ಣಿನ ರಕ್ಷಣೆಗಾಗಿ, ತುರುಗಳ ರಕ್ಷಣೆಗಾಗಿ ಕನ್ನಡಿಗರು ಜೀವದ ಹಂಗುತೊರೆದು ಕಾದಾಡುತ್ತಿದ್ದರೆನ್ನುವುದಕ್ಕೆ ಇಂದಿಗೂ ನಾಡಿನಲ್ಲೆಲ್ಲ ಕಾಣಬರುತ್ತಿರುವ ವೀರಗಲ್ಲುಗಳು ಸಾಕ್ಷಿಯಾಗಿವೆ. ಯುದ್ಧದಲ್ಲಿ ಸತ್ತರೆ ವೀರಸ್ವರ್ಗ ಸಿಕ್ಕುವುದೆಂಬ ಸನಾತನ ನಂಬಿಕೆ ನಮ್ಮ ಜನರಲ್ಲಿ ಚಿರಮುದ್ರಿತವಾಗಿತ್ತೆಂದು ತೋರುತ್ತದೆ. ಇದಕ್ಕೆ ಪೋಷಕವಾಗಿ ರಾಜರು ಯೋಧರಲ್ಲಿ ತೋರುತ್ತಿದ್ದ ಆದರ ಔದಾರ್ಯ ಪ್ರೋತ್ಸಾಹಗಳು ಜನರ ಶೌರ್ಯ ಧೈರ್ಯಗಳನ್ನು ಹಚ್ಚಹಸುರಾಗಿಟ್ಟಿದ್ದವು. ಅಂದಿನ ಉದ್ದಾಮಕವಿಗಳು ಅದ್ಭುತ ಕಲಿಗಳೂ ಆಗಿದ್ದರು. ಜೀವನತರಂಗ ತಾಡನದ ಪ್ರತಿಸ್ಪಂದನವೇ ಮಹಾಕವಿಕಾವ್ಯ. ಮಹಾಕವಿ ಪಂಪ ಮಹಾರಣಪಂಡಿತನೂ ಆಗಿದ್ದನು. ಆತನ ಕಾವ್ಯಗಳಲ್ಲಿ ಸೂರೆಗಟ್ಟಿ ಹರಿಯುತ್ತಿರುವ ವೀರವಾಹಿನಿಯನ್ನು ಕಂಡರೆ ಇದು ಅರ್ಥವಾಗುತ್ತದೆ. ನಾಗವರ್ಮ ಚಾವುಂಡರಾಯ ಮೊದಲಾದ ಕವಿಗಳು ಕಲಿಗಳೆಂದೂ ಪ್ರಖ್ಯಾತರಾಗಿದ್ದಾರೆ. ಆದ್ದರಿಂದಲೆ ಈ ಕಾಲವನ್ನು ಕನ್ನಡ ಸಾಹಿತ್ಯದ 'ವೀರಯುಗ'ವೆಂದೂ ಕರೆದಿರುವುದುಂಟು.

ಇನ್ನು ಪಂಪಯುಗದ ಧಾರ್ಮಿಕ ಜೀವನವನ್ನು ಸ್ವಲ್ಪ ನೋಡೋಣ. ರಾಜಕೀಯ ಜೀವನದಂತೆ ಅಂದಿನ ಧಾರ್ಮಿಕ ಜೀವನವೂ ಏಳುಬೀಳುಗಳಿಗೆ ಒಳಗಾಗಿದ್ದಂತೆ ನಮಗೆ ಭಾಸವಾಗುತ್ತದೆ. ಕನ್ನಡನಾಡಿನಲ್ಲಿ ಅಂದು ಪ್ರಬಲವಾಗಿದ್ದ ಮತಗಳು ಎರಡು—ವೈದಿಕ, ಜೈನ. ಹತ್ತನೆಯ ಶತಮಾನದಲ್ಲಿ ಕರ್ಣಾಟಕದ ಚಕ್ರವರ್ತಿಗಳಾಗಿದ್ದ ರಾಷ್ಟ್ರಕೂಟರು ವೈದಿಕಮತಾನುಯಾಯಿಗಳಾಗಿದ್ದರೂ ಜೈನಮತಕ್ಕೆ ಉಚಿತವಾದ ಪ್ರೋತ್ಸಾಹವನ್ನಿತ್ತರು. ಪರಮತದ್ವೇಷದ ಯಾವ ಸುಳಿವೂ ಈ ಶತಮಾನದಲ್ಲಿ ಕಂಡು ಬರುವುದಿಲ್ಲ. ದಕ್ಷಿಣದಲ್ಲಿ ಪ್ರಬಲರಾಗಿದ್ದ ಗಂಗರು ಜೈನಮತಾನುಯಾಯಿಗಳಾಗಿದ್ದು ಆ ಮತದ ಏಳಿಗೆಯಲ್ಲಿ ಆಸಕ್ತರಾಗಿದ್ದರು. ಹತ್ತನೆಯ ಶತಮಾನದ ಕೊನೆಯ ವೇಳೆಗೆ ಚಾವುಂಡರಾಯನು ಶ್ರವಣಬೆಳುಗೊಳದಲ್ಲಿ ಗೊಮ್ಮಟನ ಮಹಾ

ಪ್ರತಿಮೆಯನ್ನು ಸ್ಥಾಪಿಸಿ, ಧರ್ಮ ಜಗತ್ತಿನ ಚಿರಂಜೀವಿ ಪಟ್ಟವನ್ನು ಗಳಿಸಿದನು. ಹತ್ತನೆಯ ಶತಮಾನ ಕಳೆದು ಹನ್ನೊಂದನೆಯ ಶತಮಾನ ಆರಂಭವಾಗುತ್ತಿದ್ದಂತೆಯೆ ಧರ್ಮಜಗತ್ತಿನ ಶಾಂತಿ ಕಲಕಿಹೋಯಿತು. ಚೋಳರ ದಾಳಿಗೆ ಸಿಕ್ಕಿ ಗಂಗರ ಅವನತಿಯಾಯಿತು; ಅದರೊಡನೆ ಜೈನಮತದ ಅವನತಿಯೂ ಆಯಿತು. ಚೋಳರ ಹಾವಳಿಯನ್ನು ತಡೆಗಟ್ಟಿದ ಚಾಳುಕ್ಯರು ಜೈನ ಧರ್ಮಕ್ಕಾದ ಅಟ್ಟುಳಿಯನ್ನೂ ಬಹುಮಟ್ಟಿಗೆ ತಡೆಗಟ್ಟಿದರು. ಆದರೂ ಅದರ ಕಾಂತಿ ಕುಗ್ಗಿತು. ಹನ್ನೆರಡನೆಯ ಶತಮಾನದಲ್ಲಿ ಹುಟ್ಟಿದ ಜೈನ ಸಾಹಿತ್ಯ ವಾದಸಾಹಿತ್ಯದ ಹಾದಿಯನ್ನು ಹಿಡಿದಿರುವುದರ ಕಾರಣ ಇದರಿಂದ ನಮಗೆ ವೇದ್ಯವಾಗುತ್ತದೆ. ನಮ್ಮ ಸಾಹಿತ್ಯವಾಹಿನಿ ಜೀವಪ್ರವಾಹದ ತರಂಗಗಳಿಂದ ಉಬ್ಬು ತಗ್ಗುಗಳನ್ನು ಪಡೆಯುತ್ತಾ ಹರಿದಿದೆ.

ಪಂಪಯುಗದಲ್ಲಿ ಕಾವ್ಯಕರ್ಮಕ್ಕೆ ಕೈಹಾಕಿದವರಲ್ಲಿ ಇಬ್ಬರು ಮೂವರನ್ನು ಬಿಟ್ಟರೆ, ಉಳಿದವರೆಲ್ಲರೂ ಜೈನರೇ. ಗೀರ್ವಾಣಭಾಷಾಮೋಹಿತರಾಗಿದ್ದ ಬ್ರಾಹ್ಮಣರು ಕನ್ನಡದ ಪ್ರಾಕೃತಕನ್ನೆಯಲ್ಲಿ ಅನಾಸಕ್ತಮನರಾದರೆಂದು ತೋರುತ್ತದೆ. ಶಾಸ್ತ್ರವಿವೇಚನೆಗಾಗಲಿ ಆನಂದಾನುಭವಕ್ಕಾಗಲಿ ಕನ್ನಡ ಎಂದೂ ಅವರಿಗೆ ಮುಖ್ಯವಾಗಿರಲಿಲ್ಲ. ಲೌಕಿಕ ಪ್ರಯೋಜನದ ದೃಷ್ಟಿಯೂ ಇಲ್ಲ. ಶಾಸನಗಳನ್ನು ಬರೆಯುವಷ್ಟರಿಂದಲೇ ಅವರು ತೃಪ್ತರಾದರೇನೊ! ಈ ಕಾಲದ ಕನ್ನಡ ಕಾವ್ಯಗಳೆಲ್ಲವೂ ಪ್ರೌಢವಾದ ಮಾರ್ಗೀಶೈಲಿಯಲ್ಲಿ ಬರೆದವುಗಳು, ಚಂಪೂ ರೂಪದಲ್ಲಿರುವುವು, ಆದ್ದರಿಂದ ಕೆಲವರು ಈ ಕಾಲವನ್ನು ಚಂಪೂಯುಗವೆಂದೂ ಕರೆಯುವುದುಂಟು. ಈ ಚಂಪೂ ಕವಿಗಳಲ್ಲಿ ಪಂಪ, ಪೊನ್ನ, ರನ್ನ—ಈ ಮೂವರನ್ನು 'ರತ್ನತ್ರಯ' ರೆಂದು ಕರೆಯುವುದು ವಾಡಿಕೆ. ಈ ಕೀರ್ತಿಗೆ ಅವರು ಹೇಗೆ, ಎಷ್ಟರ ಮಟ್ಟಿಗೆ ಪಾತ್ರರೆಂಬುದನ್ನು ಆಯಾ ಕವಿಗಳನ್ನು ಕುರಿತು ವಿವೇಚಿಸುವಾಗ ನೋಡೋಣ. ಆ ಮೂವರಿಗೂ ಸಾಮಾನ್ಯವಾಗಿರುವ ಲಕ್ಷಣಗಳಿವು. ಮೂವರೂ ಜೈನರು, ಮೂವರೂ ತಮ್ಮ ಗ್ರಂಥಗಳಲ್ಲಿ ಒಂದನ್ನು ಧರ್ಮಕ್ಕೂ ಮತ್ತೊಂದನ್ನು ಲೌಕಿಕಕ್ಕೂ ಮೀಸಲು ಮಾಡಿದ್ದಾರೆ; ಮೂವರ ಲೌಕಿಕ ಕಾವ್ಯಗಳಲ್ಲಿಯೂ ಆಯಾ ಕವಿಗಳ ಪೋಷಕರು ಪುರಾಣ ಪುರುಷರ ವೇಷವನ್ನು ಧರಿಸಿ, ಆಯಾ ಕಾವ್ಯಗಳ ನಾಯಕರಾಗಿ ವ್ಯವಹೃತರಾಗಿದ್ದಾರೆ; ಅವರ ಚರಿತ್ರೆಯ ಹಲವು

ಅಂಶಗಳನ್ನು ಅರಿಯಲು ಇವು ಸಹಾಯಕವಾಗಿವೆ.

ಹೀಗೆ ಹಲವು ಸಾಮಾನ್ಯ ಲಕ್ಷಣಗಳನ್ನು ಹೊಂದಿರುವ ಈ ರತ್ನ ತ್ರಯರನ್ನು ತೆಗೆದುಕೊಂಡು ಮೊದಲು ವಿವೇಚಿಸೋಣ. ಇತಿಹಾಸದ ದೃಷ್ಟಿಯಿಂದ ಸ್ವಲ್ಪ ಏರುಪೇರು ಕಾಣಬಹುದಾದರೂ—ಪೊನ್ನನಿಗೂ ರನ್ನನಿಗೂ ಮಧ್ಯೆ ಮತ್ತಿಬ್ಬರು ಕವಿಗಳಿದ್ದಾರೆ—ಸಾಹಿತ್ಯ ವಿವೇಚನಾ ದೃಷ್ಟಿಯಿಂದ ಇದು ಸಮಂಜಸವೆಂದು ಕಾಣುತ್ತದೆ.

## ಮಹಾಕವಿ ಪಂಪ

ಈಗ ಸುಮಾರು ಆರುನೂರು ವರ್ಷಗಳ ಹಿಂದೆ ಇದ್ದ ನಾಗರಾಜನೆಂಬ ಕವಿ ಪೂರ್ವಕವಿಸ್ತವಾವಸರದಲ್ಲಿ ಪಂಪನನ್ನು ಕುರಿತು :

ಪಸರಿಸ ಕನ್ನಡಕ್ಕೊಡೆಯನೋರ್ವನೆ ಸತ್ಕವಿ ಪಂಪನಾವಗಂ
ವಸುಧೆಗೆ ಚಕ್ರಿಯಂತಮರ ಭೂಮಿಗೆ ವಾಸವನಂತೆ ಸಂತತಂ
ರಸೆಗುರಗೇಂದ್ರನಂತೆ ಗಗನಕ್ಕೆ ವಿತರ್ಕನಂತೆ ಧಾತ್ರಿಯೊಳ್
ಪೆಸರ್ವಡೆದಿರ್ದನೀಗಳೆಮಗೀಗೆ ತದೀಯ ವಚೋವಿಳಾಸಮಂ ||

ವಿಸ್ತಾರವಾದ ಕನ್ನಡಕ್ಕೆಲ್ಲಾ ಎಂದೆಂದಿಗೂ ಒಬ್ಬನೇ ಸತ್ಕವಿ–ಪಂಪ. ಭೂಮಂಡಲಕ್ಕೆ ಚಕ್ರವರ್ತಿಯಂತೆ, ಸ್ವರ್ಗಕ್ಕೆ ದೇವೇಂದ್ರನಂತೆ, ಪಾತಾಳಕ್ಕೆ ಆದಿಶೇಷನ ಹಾಗೆ, ಆಕಾಶಕ್ಕೆ ಸೂರ್ಯನ ಹಾಗೆ ಪಂಪನು ಜಗದ್ವಂದ್ಯನಾಗಿದ್ದಾನೆ; ಆತನು ತನ್ನ ವಾಗ್ವಿಲಾಸವನ್ನು ನನಗೆ ಕರುಣಿಸಲಿ—ಹೀಗೆಂದು ಸ್ತುತಿರೂಪದ ಪುಷ್ಪಾಂಜಲಿಯನ್ನು ಅರ್ಪಿಸಿ ಬೇಡಿದ್ದಾನೆ. ಹೀಗೆಯೇ ಇನ್ನೂ ಅನೇಕ ಕವಿಗಳು ಆತನ ರಸ, ಭಾವ, ಬೆಡಂಗು, ಇಂಪು ತಮ್ಮ ಕಾವ್ಯಗಳಲ್ಲಿಯೂ ಬಂದು ಸೇರಲೆಂದು ಬೇಡಿಕೊಳ್ಳುತ್ತಾರೆ. ಆದರೆ ಯಾರೂ ಅವನ ಮಟ್ಟವನ್ನು ಮುಟ್ಟಲಾರದೆ—ಕನ್ನಡಕ್ಕೊಬ್ಬನೆ ಕವಿ ಪಂಪ—ಎಂಬ ವಾಣಿ ಅಮರವಾಣಿಯಾಗಿ ನಿಂತಿದೆ. 'ಬೆಲೆಯಿಂದಕ್ಕುಮೆ ಕೃತಿ ಗಾವಿಲ! ಭುವನದ ಭಾಗ್ಯದಿಂದ ಮಕ್ಕುಂ' ಎಂಬ ನಾಗಚಂದ್ರಕವಿಯ ನುಡಿ ಪಂಪನಂತಹ ಕವಿಯ ಕಾವ್ಯಗಳಲ್ಲಿ ಸಾರ್ಥಕತೆಯನ್ನು ಪಡೆಯುತ್ತದೆ. ಶತಶತಮಾನಗಳ ಕಾಲ ಭೂದೇವಿ ಮಾಡುವ ತಪಸ್ಸಿನಿಂದ ಮಹಾಕವಿಯೊಬ್ಬ

ಆಕೆಯ ಪುಣ್ಯ ಗರ್ಭದಿಂದ ಉದಿಸುತ್ತಾನಂತೆ! ಇಂತಹ ಮಹಾಕವಿಗಳ ವಿರಳಪಙ್ತ್ತಿಯಲ್ಲಿ ಮಂಡಿಸಲು ಯೋಗ್ಯನಾದವನು. ಮಹಾಕವಿ ಪಂಪ. ಕನ್ನಡದ ಮಟ್ಟಿಗೆ ಹೇಳುವುದಾದರೆ ಆತ 'ನಭೂತೊ ನಭವಿಷ್ಯತಿ' ಎಂಬ ಜಾತಿಗೆ ಸೇರಿದವನು.

ಪಂಪನು ಹತ್ತನೆಯ ಶತಮಾನಕ್ಕೆ ಸೇರಿದವನು. ತನ್ನ ಕೃತಿರತ್ನಗಳೆರಡರಲ್ಲಿ ಒಂದಾದ 'ಆದಿಪುರಾಣ'ದಲ್ಲಿ 'ದುಂದುಭಿಗಭೀರ ನಿನದಂ, ದುಂದುಭಿ ಸಂವತ್ಸರೋದ್ಭವಂ' ಎಂದು ತನ್ನ ಹುಟ್ಟಿದ ವರ್ಷವನ್ನು ಹೇಳಿಕೊಂಡಿದ್ದಾನೆ, ಪಂಪ. ಆತ ಆ ಮಹಾಕಾವ್ಯವನ್ನು ಬರೆದದ್ದು 'ಶಕವರ್ಷ ಮೆಂಟನೂಱಱ್ವೆ ಕಡೆಯೊಳಱುವತ್ತುಮೂಱು ಸಂದಂದು'—ಎಂದರೆ ಕ್ರಿ. ಶ. ೯೪೧ ಅಥವಾ ೯೪೨ಕ್ಕೆ ಸರಿಹೋಗುವ ಪ್ಲವ ಸಂವತ್ಸರವಾಗುತ್ತದೆ. ಆದ್ದರಿಂದ ಇದನ್ನು ರಚಿಸಿದಾಗ ಕವಿಗೆಮೂವತ್ತೊಂಬತ್ತು ವರ್ಷ ವಯಸ್ಸು. ಆತನು ಹುಟ್ಟಿದುದು ಸುಮಾರು ಕ್ರಿ. ಶ. ೯೦೨ ಅಥವಾ ೯೦೩. ತನ್ನ ಕಾಲವನ್ನು ಹೇಳಿಕೊಂಡ ಕವಿ ಜೀವನ ವೃತ್ತಾಂತವನ್ನೂ ತನ್ನ ಕಾವ್ಯಗಳಲ್ಲಿ ಸಾಕಷ್ಟು ಸುವಿಸ್ತಾರವಾಗಿ—ಕೆಲವು ವೇಳೆ ನಿಸ್ಸಂಕೋಚವಾಗಿ, ಎಲ್ಲೆಯನ್ನೂ ಮೀರಿ— ಹೇಳಿಕೊಂಡಿದ್ದಾನೆ. ಆತನ ಪೂರ್ವಜರು ವೆಂಗಿಮಂಡಲದ ವೆಂಗಿಪಳುವೆಂಬ ಅಗ್ರಹಾರದಲ್ಲಿ ಇದ್ದವರು. ಜಾತಿಯಲ್ಲಿ ಬ್ರಾಹ್ಮಣರು, ಶ್ರೀವತ್ಸ ಗೋತ್ರದವರು. ಪಂಪನ ಮುತ್ತಜ್ಜನ ತಂದೆ ಮಾಧವ ಸೋಮಯಾಜಿ ಯಜ್ಞಯಾಗಾದಿಗಳನ್ನು ಮಾಡಿ ಎಲ್ಲರಿಂದಲೂ ಪೂಜ್ಯನಾಗಿದ್ದವನು. ಆತನ ಮಗ ಅಭಿಮಾನ ಚಂದ್ರ, ಅವನ ಮಗ ಕೊಮರಯ್ಯ, ಅವನ ಮಗ ಅಭಿರಾಮದೇವರಾಯ ; ಈತನೇ ಪಂಪನ ತಂದೆ; ಬ್ರಾಹ್ಮಣ ಜಾತಿಯನ್ನು ಬಿಟ್ಟು ಜೈನಮತಾನುಯಾಯಿಯಾದನು. ಬ್ರಾಹ್ಮಣ ಜಾತಿ ಉತ್ತಮ ಜಾತಿಯಾದರೂ ಆ ಉತ್ತಮ ಜಾತಿಗೆ 'ಅಹಿಂಸಾ ಪರಮೋಧರ್ಮ'ವೇ ಅನುಸರಣಯೋಗ್ಯವೆಂದು ಆತನ ಭಾವನೆ. ಆದ್ದರಿಂದ ಆ ಧರ್ಮವನ್ನು ಅವಲಂಬಿಸಿದ ತನ್ನ ತಂದೆಯನ್ನು ಆತ ಮೆಚ್ಚಿ ಹೊಗಳುತ್ತಾನೆ. ತನ್ನ ವಂಶಜರು ಯಜ್ಞಯಾಗಾದಿಗಳನ್ನು ಮಾಡಿ, ಅದರ ಹೊಗೆಯಿಂದ ತಮ್ಮ ಕೀರ್ತಿಗೆ ಕಪ್ಪು ಹತ್ತಿಸಿಕೊಂಡರೆಂದು ಆತನು ಮರುಗುತ್ತಾನೆ. ಅಭಿರಾಮ ದೇವರಾಯನು ಜೈನಮತವನ್ನು ಅವಲಂಬಿಸಿದುದು ಒಂದು ದೃಷ್ಟಿಯಿಂದ

ಕನ್ನಡಕ್ಕೆ ಮಹದುಪಕಾರ ಮಾಡಿದಂತಾಯಿತೆಂದು ತೋರುತ್ತದೆ. ಪಂಪನಲ್ಲಿ ಜೈನವೈದಿಕ ಸಂಸ್ಕೃತಿಗಳೆರಡೂ ಸಮರಸವಾಗಿ ಬೆರತು ಆತನ ಚೇತನವನ್ನು ಉದಾರಗೊಳಿಸಿದವು. ಅದಕ್ಕೂ ಹೆಚ್ಚಾಗಿ—ಬಹುಶಃ ಮತಾಂತರ ಹೊಂದಿದ ಅಭಿರಾಮದೇವರಾಯ ತನ್ನ ನೆಂಟರಿಷ್ಟರ ಅವಹೇಳನದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಹಾಗೆ ಮಾಡಿದನೊ ಏನೊ—ಪಂಪನ ಕುಟುಂಬದವರು ತೆಲಗು ದೇಶವಾದ ವೆಂಗಿಪಳುವನ್ನು ಬಿಟ್ಟು ಕನ್ನಡ ನಾಡಿಗೆ ವಲಸೆ ಬಂದರೆಂದು ತೋರುತ್ತದೆ ; ಬನವಾಸಿಯಲ್ಲಿ ನೆಲಸಿದರೆಂದು ತೋರುತ್ತದೆ. ಪಂಪನ ಕಾವ್ಯಗಳಲ್ಲಿ ಒಂದಾದ 'ವಿಕ್ರಮಾರ್ಜುನ ವಿಜಯ'ದಲ್ಲಿ ಬರುವ ಬನವಾಸಿಯ ವರ್ಣನೆಯನ್ನು ಓದಿದರೆ ಇದು ಅರ್ಥವಾಗುತ್ತದೆ. ಅವನ ಈ ಮಾತುಗಳನ್ನು ನೋಡಿ

ಸೊಗಯಿಸಿ ಬಂದ ಮಾಮರನೆ ತಳ್ತೆಲೆವಳ್ಳಿಯೆ ಪೂತ ಜಾತಿ ಸಂ
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲ
ರೊಳ್ಮೊಗಂ
ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಳ್ಪೊ
ಡಾವ ಬೆ
ಟ್ಟುಗಳೊಳಂ ಆವನಂದನವನಂಗಳೊಳಂ ಬನವಾಸಿ ದೇಶದೊಳ್.

ಬನವಾಸಿಯ ಯಾವ ಬೆಟ್ಟ, ಯಾವ ಉದ್ಯಾನವನವನ್ನೇ ನೋಡಲಿ, ಅವುಗಳಲ್ಲಿ ಸೊಗಸಾಗಿ ಫಲಬಿಟ್ಟ ಮಾವಿನ ಮರ, ಹಬ್ಬಿರುವ ಎಲೆ ಬಳ್ಳಿಗಳು, ಹೂ ಬಿಟ್ಟ ಜಾತಿಸಂಪಗೆಗಳು, 'ಕುಹು' ಎಂದು ಕೂಜನ ಮಾಡುತ್ತಿರುವ ಕೋಗಿಲೆಗಳು, ಹಾಡುವ ತುಂಬಿಗಳು, ಮುಗುಳ್ನಗೆಯನ್ನು ಮುಖದಲ್ಲಿ ಚೆಲ್ಲುತ್ತಾ ಪರಸ್ಪರ ಸೋಕಿ ಸರಸವಾಡುತ್ತಿರುವ ನಲ್ಲ ನಲ್ಲೆಯರು.

ಇಂತಹ ಸುಖ ಬನವಾಸಿಗೇ ಮೀಸಲಂತೆ! ಆದ್ದರಿಂದ ಸುಕೃತಶಾಲಿಗಳಾದವರು ಇಲ್ಲಿ ಹುಟ್ಟಿ ಭೋಗಭಾಗ್ಯಗಳನ್ನು ಅನುಭವಿಸಬೇಕಂತೆ. ಮನುಷ್ಯರಾಗಿ ಹುಟ್ಟುವಷ್ಟು ಪುಣ್ಯವಿಲ್ಲದಿದ್ದರೆ

ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
ಳ್ಗಾಗರವಾದ ಮಾನಿಸರೆ ಮಾನಿಸರಂತವರಾಗಿ ಪುಟ್ಟಲೇ

ನಾಗಿಯುಮೇನೊ ತೀರ್ದಪುದೆ? ತೀರದೊಡಂ ಮರಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿ ದೇಶ ದೊಳ್ ||

ತ್ಯಾಗಕ್ಕೆ, ಭೋಗಕ್ಕೆ, ಸಾಹಿತ್ಯ ಸಂಗೀತ ಮೊದಲಾದ ಸರಸಪ್ರಸಂಗ ಗೋಷ್ಠಿಗಳ ಸಂಭ್ರಮ ಸಂತೋಷಕ್ಕೆ ತೌರುಮನೆಯಂತಿರುವ ಮಾನವರೇ ಮಾನವರೆಂಬ ಹೆಸರಿಗೆ ಅರ್ಹರು. ಅಂತಹವರಾಗಿ ಹುಟ್ಟಲು ಏನು ಮಾಡಿದರೆ ತಾನೆ ಸಾಧ್ಯವಾದೀತು ? ಹಾಗೆ ಮನುಷ್ಯರಾಗಿ (ಕನ್ನಡ ನಾಡಿನಲ್ಲಿ) ಹುಟ್ಟುವ ಅದೃಷ್ಟವಿಲ್ಲದಿದ್ದರೆ ಕನ್ನಡ ನಾಡಿನ ನಂದನವನದಲ್ಲಿ ಮರಿದುಂಬಿಯಾಗಿಯೋ ಕೋಗಿಲೆಯಾಗಿಯೋ ಹುಟ್ಟಿ ವಿಹರಿಸಬೇಕು ಎಂದು ಹೇಳುತ್ತಾನೆ. ಇನ್ನೂ ಕೇಳಿ—

ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡ ಮಾದ ಕೆಂದಲಂ
ಪಂ ಗೆಡೆಗೊಂಡಡಂ ಮಧುಮಹೋತ್ಸವಮಾದೊಡೇನನೆಂಬೆನಾ
ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ

ದಕ್ಷಿಣದ ಕಡೆಯಿಂದ ಗಾಳಿ ಬೀಸಿದರೂ ಸಾಕು, ಮೃದು ಮಧುರವಾದ ಒಂದು ಮಾತನ್ನು ಕೇಳಿದರೆ ಸಾಕು, ಇಂಪಾದ ಸಂಗೀತ ಕಿವಿಗೆ ಬಿದ್ದರೆ ಸಾಕು, ಅರಳಿದ ಮಲ್ಲಿಗೆಯನ್ನು ಕಂಡರೆ ಸಾಕು, ಪ್ರಣಯ ಸುಖವನ್ನು ನೆನೆದರೆ ಸಾಕು, ಕೊನೆಗೆ ವಸಂತಮಾಸ ಬಂದರೆ ಸಾಕು. ಮನಸ್ಸು ಆನೆಯಂತೆ ಬನವಾಸಿ ದೇಶದತ್ತ ನುಗ್ಗಿಹೋಗುತ್ತದೆ. ಯಾರು ಯಾವ ಅಂಕುಶದಿಂದ ತಿವಿದರೂ ಅದು ನಿಲ್ಲುವುದಿಲ್ಲ.[1]

---

[1] 'ಕಡೆಯ ಸಾಲಿನಲ್ಲಿ ಕವಿಯ ಧರ್ಮಶ್ರದ್ಧೆ ಅತ್ಯಂತ ರಸಪೂರ್ಣವಾದ ದರ್ಶನ ಧ್ವನಿಯಲ್ಲಿ ಪರ್ಯವಸಾನ ಹೊಂದಿದೆ' ಎನ್ನುತ್ತಾರೆ, ಕವಿ ಕುವೆಂಪು. ಸುಖ ಸಂತೋಷಗಳಲ್ಲಿ ನಲಿಯುತ್ತಿರುವಾಗ ಮಾತ್ರವೇ ಅಲ್ಲ; ದುಃಖ ಮರಣಗಳಿಗೆ ಕಾರಣವಾಗಬಹುದಾದ ಯುದ್ಧ ಸಮಯದಲ್ಲಿ ಕೂಡ ನನ್ನ ಮನಸ್ಸು ಬನವಾಸಿಯನ್ನು ನೆನೆಯುತ್ತದೆ—ಎಂಬ ಅರ್ಥವೂ ಇದರಲ್ಲಿ ಅಂತರ್ಗತವಾಗಿರಬಹುದೆಂದು ಅವರ ಅಭಿಪ್ರಾಯ.

ಇದನ್ನು ನೋಡಿದರೆ ಪಂಪನು ಅಚ್ಚ ಕನ್ನಡ ನಾಡಾದ ಬನವಾಸಿಯಲ್ಲಿ ತನ್ನ ಬಾಲ್ಯ, ತಾರುಣ್ಯಗಳನ್ನು ಕಳೆದಿರಬೇಕೆಂದು ಊಹಿಸಿದರೆ ತಪ್ಪಾಗಲಾರದು. ತನ್ನ ಕಾವ್ಯದ ಭಾಷೆ 'ಪುಲಿಗೆಱೆಯ ತಿರುಳ ಕನ್ನಡ'ವೆಂದು ಆತನು ಹೇಳಿಕೊಂಡಿರುವುದರಿಂದ (ಬನವಾಸಿಯ ನೆರೆಯಲ್ಲಿದೆ ಪುಲಿಗೆರೆ) ಈ ಅಭಿಪ್ರಾಯಕ್ಕೆ ಪುಷ್ಟಿ ದೊರೆತಿದೆ.

ಪಂಪಕವಿ ಹುಟ್ಟಿ ಬೆಳೆದುದು ಬನವಾಸೀ ಪ್ರಾಂತವಿರಬಹುದಾದರೂ ಆತನು ತನ್ನ ಉಪಜೀವನಕ್ಕಾಗಿ ಬಂದು ನೆಲಸಿದುದು ಹೈದರಾಬಾದು ಜಿಲ್ಲೆಯ ವೇಮುಲವಾಡದಲ್ಲಿ. ಚಾಲುಕ್ಯರಾಜನಾದ ಅರಿಕೇಸರಿ ಇಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಆತನು ರಾಷ್ಟ್ರಕೂಟರ ಸಾಮಂತನಾಗಿದ್ದರೂ ಆ ರಾಜವಂಶದ ಸಂಬಂಧಿಯಾಗಿ, ಆಪ್ತನಾಗಿ, ಪ್ರಭಾವಶಾಲಿಯಾಗಿದ್ದನು. ಪಂಪನು ಆತನ ಆಶ್ರಯವನ್ನು ಸೇರಿ, ಆತನ ಮೆಚ್ಚಿಗೆಗೂ ಗೌರವಕ್ಕೂ ಗೆಳೆತನಕ್ಕೂ ಪಾತ್ರನಾದನು. ಇದರ ಫಲವಾಗಿ ಆತನು ವಿಪುಲವಾದ ಐಶ್ವರ್ಯ, ಕೀರ್ತಿ, ಪ್ರತಿಷ್ಠೆಗಳನ್ನು ಪಡೆದನು. ಪಂಪನು ಸ್ವಭಾವತಃ ಅಭಿಮಾನಧನ ; ಪೆಱರೀವುದೇಂ, ಪೆಱರು ಮಾಡುವುದೇಂ, ಪೆಱರಿಂದ ಮಪ್ಪುದೇಂ'—ಯಾವನು ತಾನೆ ಏನು ಕೊಟ್ಟಾನು, ಏನು ಮಾಡಿಯಾನು, ಯಾವನಿಂದ ತಾನೆ ಏನಾದೀತು' ಎಂಬ ಧೋರಣೆಯವನು. ಆದರೂ ಅರಿಕೇಸರಿಯ ಗೆಳೆತನ ಆತನ ಮನಸ್ಸನ್ನು ಸೂರೆಗೊಂಡು ಆತನ ಆಶ್ರಯದಲ್ಲಿ ನಿಲ್ಲಿಸಿತೆಂದು ತೋರುತ್ತದೆ. ಇತಿಹಾಸದಲ್ಲಿ ಬಾಣ–ಶ್ರೀಹರ್ಷರಿಗೂ ಪುರಾಣದಲ್ಲಿ ಕರ್ಣ–ದುರ್ಯೋಧನರಿಗೂ ಇದ್ದ ಗೆಳೆತನದಂತೆ ಪಂಪ–ಅರಿಕೇಸರಿಗಳ ಸ್ನೇಹವೂ ಲೋಕೋತ್ತರವಾದುದೆಂದೆನಿಸುತ್ತದೆ. ರಾಜನು 'ಗುಣಾರ್ಣವ'ನೆಂಬ ಬಿರುದನ್ನು ತಳೆದಿದ್ದರೆ ಕವಿ 'ಕವಿತಾಗುಣಾರ್ಣವ'ನಾಗಿ ಆತನ ಗೆಳೆತನವನ್ನು ಅನುಭವಿಸಿದ. ರಾಜನ ಅಚ್ಚುಮೆಚ್ಚಿನ ಕವಿಯಾಗಿದ್ದು, ಆತನ ಸೇನಾಪತಿಯಾಗಿದ್ದು, ಮಂತ್ರಿಯಾಗಿದ್ದು ಸಕಲ ಭೋಗಗಳನ್ನೂ ಅನುಭವಿಸುತ್ತಾ ತುಂಬು ಜೀವನವನ್ನು ಬಾಳಿದ ಸುಕೃತಶಾಲಿ, ಪಂಪ. ತನ್ನ ಸೌಂದರ್ಯವನ್ನು ಹೇಳಿಕೊಳ್ಳುತ್ತಾ

ಕದಳೀ ಗರ್ಭಶ್ಯಾಮಂ,
ಮೃದುಕುಟಿಲ ಶಿರೋರುಹಂ, ಸರೋರುಹ ವದನಂ

ಮೃದು ಮಧ್ಯಮ ತನು, ಹಿತಮಿತ
ಮೃದುವಚನಂ ಲಲಿತ ಮಧುರ ಸುಂದರವೇಷಂ

ಬಾಳೆಯದಿಂಡಿನ ಮಧ್ಯದಲ್ಲಿ ಕಾಣಬರುವಂತಹ ನಸುಕಪ್ಪು ಬಣ್ಣ, ಮೃದುವಾದ ಗುಂಗುರು ಕೂದಲು, ದುಂಡಾದ ಕಮಲದಂತಹ ಮುಖ, ಸುಕುಮಾರವಾದ ಮಟ್ಟಸ ದೇಹ, ಹಿತಮಿತ ಮೃದುವಾದ ಮಾತುಗಳು— ಇವುಗಳ ಜೊತೆಗೆ ಮನೋಹರವಾದ ವೇಷಭೂಷಣಗಳು. 'ಸೊಗಸುಗಾರ ಪುಟ್ಟಸಾಮಿ'ಯಾದ ಈ ರಸಿಕ ರಸಋಷಿ 'ವನಿತಾ ಕಟಾಕ್ಷ ಕುವಲಯವನ ಚಂದ್ರ'ನಾಗಿದ್ದಾನಂತೆ!

ಕೇರಳ ವಿಟೀ ತಟೀ ಸೂ
ತ್ರಾರುಣಮಣಿ, ಮಲಯ ಯುವತಿ ದರ್ಪಣನಾಂಧ್ರೀ
ನೀರಂಧ್ರ ಬಂಧುರಸ್ತನತಟ
ಹಾರನುದಾರಂ ಸರಸ್ವತೀ ಮಣಿಹಾರಂ

ಕೇರಳ ರಮಣಿಯರ ಒಡ್ಯಾಣದ ರತ್ನ, ಮಲಯದೇಶದ ಸುಂದರಿಯರ ಕೈಗನ್ನಡಿ, ಆಂಧ್ರ ಸ್ತ್ರೀಯರ ವಿಸ್ತಾರವಾದ ಎದೆಯ ಮೇಲಿನ ಹಾರ, ಈ ಸರಸ್ವತೀ ಮಣಿಹಾರನಾದ ಪಂಪ. ಹೂಗಳಲ್ಲಿಯೂ ಆತನಿಗೆ ಅಪಾರ ವಾದ ಆಸಕ್ತಿ. ಅದರಲ್ಲಿಯೂ ಮಲ್ಲಿಗೆ ಹೂವೆಂದರೆ ಆತನಿಗೆ ಪ್ರಾಣ.

ಆವಲರುಂ ಪಣ್ಣುಂ ಬೀ
ತೋವವು ಬೀಯವಿಲ್ಲ ಮಲ್ಲಿಗೆಯುಂ ಇ
ಮ್ಮಾವುಗಳು ಮೆಂದೊಂಡಿಂ ಪೆರ
ತಾವುದು ಸಂಸಾರಸಾರ ಸರ್ವಸ್ವಫಲಂ?

ಯಾವ ಹೂವು, ಯಾವ ಹಣ್ಣೇ ಆಗಲಿ ಬೀತು ಎಂದರೆ ಅತಿಯಾಗಿ ಮಾಗಿ ಹೋದುವೆಂದರೆ ಅವುಗಳು ಅಸಹ್ಯಕರವಾಗಿ ಉಪಭೋಗಕ್ಕೆ ಅಯೋಗ್ಯ ವಾಗತ್ತವೆ. ಕನ್ನಡನಾಡಿನಲ್ಲಿ ಮಾವು ಮಲ್ಲಿಗೆಗಳು ಅತಿಯಾಗಿ ಕಳಿತು ಹೋಗುವ ಪ್ರಸಕ್ತಿಯೇ ಇಲ್ಲ. (ರಸಿಕರಾದ ಕನ್ನಡಿಗರು ಅದಕ್ಕೆ ಅವಕಾಶ ವನ್ನೇ ಕೊಡುವುದಿಲ್ಲ; ಅತಿಯಾಗಿ ಮಾಗುವುದಕ್ಕೆ ಮುನ್ನವೆ ಅವರು ಮಾವಿನ ಹಣ್ಣುಗಳನ್ನು ತಿಂದುಹಾಕುತ್ತಾರೆ; ಮಲ್ಲಿಗೆ ಹೂಗಳನ್ನು ಮುಡಿದು ಬಿಡುತ್ತಾರೆ.) ಹದವಾಗಿ ಮಾಗಿದಾಗಲೆ ಅವನ್ನು ಉಪಯೋಗಿಸಿ

ಬಿಡುತ್ತಾರೆ. ಆದ್ದರಿಂದ ಕಳಿತು ಬಿದ್ದುಹೋಗುವ ಪ್ರಸಂಗವೇ ಇಲ್ಲ. ಹಣ್ಣು ಹೂಗಳನ್ನು ಹೀಗೆ ಸಕಾಲದಲ್ಲಿಯೇ ಕೊಯ್ದು ತಿಂದು ಮುಡಿವ ಜನರು ಎಂತಹ ಆನಂದಮಯ ಸಂಸಾರ ನಡೆಸುತ್ತಿದ್ದಾರೆ ಎಂಬುದು ಇಲ್ಲಿನ ಧ್ವನಿ. ತಿನ್ನುವುದಕ್ಕೆ ಮಾವಿನ ಹಣ್ಣೂ ಮುಡಿಯಲು ಮಲ್ಲಿಗೆ ಹೂವೂ ಇದ್ದಮೇಲೆ ಇನ್ನು ಸಂಸಾರಸಾರ ಸರ್ವಸ್ವ ಫಲವೆಂಬುದು ಬೇರೆ ಏನು ಬೇಕು? ಕಲ್ಪನಾ ಪ್ರಂಪಚದಲ್ಲಿ ವಿಹರಿಸಿಬಲ್ಲ ಭಾಗ್ಯಶಾಲಿಗಳಿಗೆ ಇದಕ್ಕಿಂತ ಹೆಚ್ಚು ಏನೂ ಬೇಡ.[1]

ಪಂಪ ಮಹಾಕವಿ ಎರಡು ಮಹಾಕಾವ್ಯಗಳನ್ನು ನಮಗೆ ಕೊಟ್ಟಿದ್ದಾನೆ. ಆತ ಹೇಳುತ್ತಾನೆ:

ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ ಸಮಸ್ತ ಭೂ
ತಳಕೆ ಸಮಸ್ತ ಭಾರತಮುಮಾದಿಪುರಾಣಮೆಂದು ಮೆಯ್ಯಸುಂ
ಗೊಳುತಿರೆ ಪೂಣ್ದು ತೆಱದೊಂದಱುದಿಂಗಳೊಳೊಂದು ಮೂರುತಿಂ
ಗಳೊಳೆ ಸಮಾಪ್ತಿಯಾದುವನೆ ಬಣ್ಣಿಸಿದಂ ಕವಿತಾಗುಣಾರ್ಣವಂ!

ಇಲ್ಲಿ ಲೌಕಿಕವನ್ನು ಬೆಳಗುತ್ತೇನೆಂದು ಸಮಸ್ತ ಭಾರತವನ್ನೂ, ಅಲ್ಲಿ ಜಿನಾಗಮವನ್ನು ಬೆಳಗುತ್ತೇನೆಂದು ಆದಿಪುರಾಣವನ್ನೂ ಬರೆಯುವೆನೆಂದು ಬೆಚ್ಚಿಬೀಳುವಂತಹ ಪ್ರತಿಜ್ಞೆಮಾಡಿದಂತೆಯೇ ಒಂದನ್ನು ಆರು ತಿಂಗಳಲ್ಲಿಯೂ ಮತ್ತೊಂದನ್ನು ಮೂರು ತಿಂಗಳಲ್ಲಿಯೂ ಕವಿತಾಗುಣಾರ್ಣವ ಪಂಪ ಬರೆದು ಮುಗಿಸಿಬಿಟ್ಟ! ಪಂಪ ಪ್ರತಿಜ್ಞೆಮಾಡುವಂದು ತನ್ನ ಮುಂದಿದ್ದ ಮಹಾಕಾರ್ಯವನ್ನು ಕಂಡು ಬೆಚ್ಚಿದುದು ಆಶ್ಚರ್ಯವಲ್ಲ, ಏಕೆಂದರೆ ಆತನು ಆಯ್ದು ಕೊಂಡ ಎರಡೂ ಸಂಸ್ಕೃತದ ಮೇರುಕೃತಿಗಳು. ‘ಜಗತ್ತಿನಲ್ಲಿರುವುದೆಲ್ಲಾ ಇಲ್ಲಿದೆ; ಇಲ್ಲಿ ಇಲ್ಲದುದು ಜಗತ್ತಿನಲ್ಲಿ ಇಲ್ಲ’ ಎಂದು ಲೋಕ ಸಾರಿರುವ ವ್ಯಾಸಮಹಾಭಾರತ, ಆರು ತಿಂಗಳಲ್ಲಿ ಬರೆಯುವುದಿರಲಿ ಅರ್ಥಮಾಡಿಕೊಂಡು ಓದುವುದಕ್ಕೆ ಕೂಡ ನಮ್ಮಲ್ಲಿ ಅನೇಕರಿಗೆ ಅಸಾಧ್ಯ. ಇಂತಹ

---

[1] ಮನೋಹರವಾದ ಈ ಅರ್ಥವನ್ನು ನಾನು ಅರಿತುದು ನನ್ನ ವಿದ್ಯಾಗುರುಗಳಾದ ಕವಿ ಕುವೆಂಪುರವರಿಂದ.

ಹೊಣೆಯನ್ನು ಹೊರಲು ಪಂಪನಿಂದ ಮಾತ್ರ ಸಾಧ್ಯವೆಂದು ಅರಿಕೇಸರಿಯ ಆಸ್ಥಾನಪಂಡಿತರು ಭಾವಿಸಿದರಂತೆ. ಪಂಪ ಹೇಳುವುದನ್ನು ಕೇಳಿ

ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾ
ರತಮನಪೂರ್ವಮಾಗೆ ಸಲೆಪೇಳ್ದ ಕವೀಶ್ವರರಿಲ್ಲ ವರ್ಣಕಂ
ಕತೆಯೊಳೊಡಂಬಡಂ ಪಡೆಯೆ ಪೇಳ್ವೊಡೆ ಪಂಪನೆ ಪೇಳ್ಗುಮೆಂದು
ಪಂ
ಡಿತರೆ ತಗುಳ್ದು ಬಿಚ್ಚಳಿಸೆ ಪೇಳಲೊಡರ್ಚಿದೆನೀ ಪ್ರಬಂಧಮಂ

'ಕತೆಯೇನೊ ಬಹು ದೊಡ್ಡದು; ಕತೆಯನ್ನು ಸ್ವಲ್ಪವೂ ಲೋಪಮಾಡದೆ ಇಡೀ ಭಾರತವನ್ನು ಅಪೂರ್ವ ರೀತಿಯಲ್ಲಿ ಹೇಳಿರುವ ಕವಿಗಳಾರು ಇಲ್ಲ; ಕತೆಯಲ್ಲಿ ವರ್ಣನೆಯೂ ಮನೋಹರವಾಗಿ ಸೇರಿಕೊಂಡಿರುವಂತೆ ಹೇಳ ಬೇಕಾದರೆ ಪಂಪನೇ ಹೇಳಬೇಕು' ಎಂದು ಪಂಡಿತರು ಹೇಳಿದುದರಿಂದ ನಾನು ಈ ಪ್ರಬಂಧವನ್ನು ಪ್ರಾರಂಭಿಸಿದೆ.

ತಾನು ಕೈಕೊಂಡ ಕಾರ್ಯ ಎಷ್ಟು ಮಹತ್ತಾದುದೆಂಬುದು ಕವಿಗೆ ಗೊತ್ತಿದೆ. ಆದ್ದರಿಂದಲೇ ಆತ ಅತಿ ನಮ್ರತೆಯಿಂದ 'ವ್ಯಾಸಮುನೀಂದ್ರ ರುಂದ್ರವಚನಾಮೃತವಾರ್ಧಿಯನೀಸುವೆನ್; ಕವಿ ವ್ಯಾಸನೆನ್ ಎಂಬ ಗರ್ವ ಮೆನಗಿಲ್ಲ' ಎಂದು ಹೇಳಿಕೊಂಡಿದ್ದಾನೆ. ಆದರೆ ಗ್ರಂಥ ಮುಗಿದ ಮೇಲೆ, ತಾನು ಸಮುದ್ರವನ್ನು ವಿಜಯಪ್ರದವಾಗಿ ಈಸಿರುವುದು ಮನವರಿಕೆಯಾಗಿ, ಆತ್ಮಪ್ರತ್ಯಯದಿಂದ ಘೋಷಿಸುತ್ತಾನೆ–'ಮುನ್ನಿನ ಕಬ್ಬಮನೆಲ್ಲಮಿಕ್ಕಿಮೆಟ್ಟಿ ದುವು ಸಮಸ್ತ ಭಾರತಮುಮಾದಿ ಪುರಾಣ ಮಹಾ ಪ್ರಬಂಧಮುಂ' ಎಂದು ಪಂಪನಿಗಿಂತಲೂ ಹಿಂದೆ ವಿಪುಲವಾದ ಸಾಹಿತ್ಯ ಬೆಳೆದಿದ್ದುದನ್ನೂ, ಅದರಲ್ಲಿ ಭಾರತವೂ ಇತ್ತೆಂಬುದನ್ನೂ ಹಿಂದೆಯೇ ನೋಡಿದ್ದೇವೆ. ಅವು ಇಂದು ಕಣ್ಮರೆಯಾಗಿ ಹೋಗಿರುವುದಕ್ಕೆ ಬಹುಶಃ ಪಂಪನ ಕೃತಿಸುಭಗತೆಯೂ ಒಂದು ಕಾರಣವಾಗಿದ್ದರೂ ಇರಬಹುದು.

ಪಂಪನ ಮಹಾಭಾರತದಂತೆ ಆತನ ಆದಿ ಪುರಾಣವೂ ಸಂಸ್ಕೃತದ ಮೇರು ಕೃತಿಯೊಂದರ ಕನ್ನಡ ಅವತರಣವೇ. ವ್ಯಾಸನ ಮಹಾಭಾರತದಂತೆ ಜಿನಸೇನ—ಗುಣಭದ್ರರ 'ಮಹಾಪುರಾಣ'ವೂ ಬೃಹತ್ತು ಮಹತ್ತುಗಳೆರಡ ರಲ್ಲೂ ಜೈನಪುರಾಣಗಳಲ್ಲಿ ಅಗ್ರಗಣ್ಯವಾದುದು.

ಪಂಪನ ಕಾವ್ಯಗಳಲ್ಲಿ ಮೊದಲನೆಯದು ಆದಿಪುರಾಣ. ಅದರ ಆರಂಭದಲ್ಲಿಯೇ ಆತನು

ಇದುವೆ ಸುಕವಿ ಪ್ರಮೋದ
ಪ್ರದಮಿದುವೆ ಸಮಸ್ತಲೋಕ ಪ್ರಮದ
ಪ್ರದಮೆನೆ ನೆಗಳ್ದಾದಿ ಪುರಾ
ಣದೊಳಱಿವುದು ಕಾವ್ಯಧರ್ಮಮಂ ಧರ್ಮಮುಮಂ

ಇದು ಕವಿಗೆ ಸಂತೋಷಪ್ರದವಾಗಿರುವಂತೆ ಸಮಸ್ತ ಜೀವಲೋಕಕ್ಕೂ ಸಂತೋಷಪ್ರದವಾದುದು : ಏಕೆಂದರೆ ಈ ಆದಿಪುರಾಣದಲ್ಲಿ ಧರ್ಮವನ್ನು ತಿಳಿದುಕೊಳ್ಳುವಂತೆ ಕಾವ್ಯಧರ್ಮವನ್ನೂ ತಿಳಿದುಕೊಳ್ಳಬಹುದು. ಇಲ್ಲಿನ ಧರ್ಮ ಜೈನರಿಗೆ ಅತ್ಯಂತ ಪ್ರಿಯವಾಗಿದ್ದರೆ—ಉಳಿದವರಿಗೆ ಅಪ್ರಿಯವೆಂದೇನೂ ಅಲ್ಲ—ಕಾವ್ಯಧರ್ಮ ಸಮಾನವಾಗಿಯೇ ಪ್ರಿಯವಾದುದು. ಜೈನರಲ್ಲದವರೂ ಆದಿಪುರಾಣದ ಕಾವ್ಯಸೌಂದರ್ಯವನ್ನು ಆಸ್ವಾದಿಸಿ ಆನಂದಿತರಾಗಬಹುದು. ಇದು ಧಾರ್ಮಿಕ ಕಾವ್ಯವಾದುದರಿಂದ ಪಂಪನು ಮೂಲದ ಧರ್ಮಗ್ರಂಥಕ್ಕೆ ಯಾವ ಅಪಚಾರವೂ ಆಗದಂತೆ ವ್ಯವಹರಿಸಬೇಕಾಗಿದೆ. ಆತನ ಕಲಾಶಕ್ತಿ ಆ ಪಂಜರದಿಂದ ಹೊರಗೆ ಹಾರಿಬರುವಂತಿಲ್ಲ. ಆದರೂ ಇರುವಷ್ಟು ಸ್ಥಳದಲ್ಲಿಯೆ ಆತನ ಪ್ರತಿಭೆ ಕಲ್ಪನಾಶಕ್ತಿಗಳು ಅದೆಷ್ಟು ಸುಂದರವಾಗಿ ಗರಿಗೆದರಿ ಹಾಡಿವೆ; ನರ್ತಿಸಿವೆ! ಜೈನ ಧರ್ಮದ ಸಾರಸರ್ವಸ್ವವೆಂದರೆ ಭೋಗವಿರತಿ, ವೈರಾಗ್ಯ. ಪಂಪನು ಇದನ್ನು ಅತ್ಯಂತ ಹೃದ್ಯವಾಗುವಂತೆ ನಿರ್ವಹಿಸಿದ್ದಾನೆ. ನಾಡಾಡಿಯಾದವನು ನಡೆದುಹೋಗುವಾಗ ಮರಳು ಕಾಡಾಗಿದ್ದುದು ಪಂಪನ ಕವಿದೃಷ್ಟಿಯ ಸೇಚನೆಯಿಂದ ನಂದನ ವನವಾಗುತ್ತದೆ.

ಪಂಪನ ಕವಿತಾಶಕ್ತಿಯಿಂದ ಆದಿಪುರಾಣವು ರಸಮಯವಾದ ಕಾವ್ಯವಾಗಿರುವುದನ್ನು ಒಂದೆರಡು ಉದಾಹರಣೆಗಳಿಂದ ನೋಡಿ ನಾವೂ ಸಂತೋಷಿಸೋಣ. ಇಲ್ಲಿ ಬರುವ ತೀರ್ಥಂಕರರ ಚರಿತ್ರೆಗಳಲ್ಲೆಲ್ಲಾ ಆದಿ ತೀರ್ಥಂಕರನ ಚರಿತ್ರೆಯೇ ಅತ್ಯಂತ ವಿಸ್ತಾರವಾದುದು; ಉಳಿದ ತೀರ್ಥಂಕರರ ಕಥೆಗಳು ನಾವು 'ಡಿಟೊ' ಎಂದು ಬರೆಯುವಂತೆ ಇರುತ್ತವೆ. ಆದಿ

ತೀರ್ಥಂಕರನ ಭವಾವಳಿಯೆಲ್ಲವೂ ಇಲ್ಲಿ ಚಲನಚಿತ್ರದ ದೃಶ್ಯಪರಂಪರೆಯಂತೆ ನಮ್ಮ ಕಣ್ಣಮುಂದೆ ಹಾಯ್ದು ಹೋಗುತ್ತದೆ. ಒಂದೊಂದು ದೃಶ್ಯವೂ ಚೇತೋಹಾರಿಯಾಗಿದೆ. ಜೀವನಿಗೆ ಅಂಟಿದ ಭೋಗಾಸಕ್ತಿ ಜನ್ಮಜನ್ಮಾಂತರಗಳಿಗೂ ಬೆನ್ನಟ್ಟಿ ಬರುತ್ತದೆ. ಆದಿತೀರ್ಥಂಕರನ ಜೀವ ಲಲಿತಾಂಗನೆಂಬ ದೇವತೆಯಾಗಿ ಹುಟ್ಟಿದಾಗ ಸ್ವಯಂಪ್ರಭೆಯೆಂಬುವಳು ಅವನ ಮನದನ್ನೆಯಾಗುತ್ತಾಳೆ. ಆ ದಿವ್ಯಸುಂದರಿಯಲ್ಲಿ ತಲ್ಲೀನನಾಗಿ ಮೈಮರೆತಿದ್ದಂತೆಯೇ ಅವನ ಆಯುಸ್ಸೆಲ್ಲವೂ ಮುಗಿದುಹೋಗುತ್ತದೆ. ಇನ್ನು ಕೂರ್ತಮಡದಿಯನ್ನು ಅವನು ಅಗಲಬೇಕು. ಆಗ ಅವನ ಮನೋವ್ಯಥೆಯನ್ನು ಕೇಳಬೇಕೆ ? ತನ್ನನ್ನು ಉಳಿಸಿಕೊಳ್ಳಬೇಕೆಂದು ಎಲ್ಲರನ್ನೂ ಮರೆಹೊಗುತ್ತಾನೆ ; ಹೆಂಡತಿಗೂ ಮೊರೆಯಿಡುತ್ತಾನೆ. ಆದರೇನು ? ಎಲ್ಲವೂ ವ್ಯರ್ಥ. ‘ಎಳೆದುಯ್ವಂತಕಂಗಿಲ್ಲ, ದೇವಾಂಗನೆಯರ್ ಮಾಜಾಂಪರೆ ?’ ಆದ್ದರಿಂದ ಜಿನಚರಣಮೆ ಶರಣಾಗಿ ಉಳಿದ ದಿನಗಳನ್ನು ಕಳೆದು ಮರುಜನ್ಮದಲ್ಲಿ ವಜ್ರಜಂಘನೆಂಬ ವಿದ್ಯಾಧರರಾಜನಾಗಿ ಹುಟ್ಟುತ್ತಾನೆ. ‘ಎನ್ನರಸನೆಲ್ಲಿಹನೊ ಲಲಿತಾಂಗವಲ್ಲಭಂ’ ಎಂದು ಕಣ್ಣೀರು ಗರೆಯುತ್ತಾ ಉಳಿದ ಆಯುಸ್ಸನ್ನು ಕಳೆದ ಸ್ವಯಂಪ್ರಭೆಯ ಜೀವ ಮರುಜನ್ಮದಲ್ಲಿ ಶ್ರೀಮತಿಯೆಂಬ ರಾಜಕುಮಾರಿಯಾಗಿ ಹುಟ್ಟಿ ವಜ್ರಜಂಘನ ರಾಣಿಯಾಗಿರುತ್ತಾಳೆ. ಈ ನಲ್ಲ-ನಲ್ಲೆಯರು ತಾವೆ ಧನ್ಯರೆಂದುಕೊಂಡು ಬಹುಕಾಲ ಭೋಗಸರಸಿಯ ರಾಜಹಂಸಗಳಾಗಿ ಬಾಳಿದರು. ಅವರಿಗೆ ಕಡೆಗಾಲ ಬಂತು ; ಅದೆಷ್ಟು ಆಶ್ಚರ್ಯಕರವಾಗಿ ಬಂತು ! ಒಂದು ದಿನ ಅವರು ಏಕಾಂತಭವನದಲ್ಲಿ ಪವಡಿಸಿದ್ದಾರೆ ; ಆಳು ಕೇಶ ಸಂಸ್ಕಾರಕ್ಕೆಂದು ಧೂಪಧೂಮವನ್ನು ಹೊತ್ತಿಸಿ ಹೊರಟುಹೋಗಿದ್ದಾನೆ. ಶಯ್ಯಾಗೃಹದ ಗವಾಕ್ಷವನ್ನು ತೆಗೆಯುವುದು ಮರೆತುಹೋಗಿದೆ. ಪರಸ್ಪರ ತೋಳ್ತೆಕ್ಕೆಯಲ್ಲಿ ಮಲಗಿದ್ದ ದಂಪತಿಗಳು ಉಸಿರುಕಟ್ಟಿ ಸತ್ತುಹೋದರು. ‘ಲೋಕಾಶ್ಚರ್ಯಮುಂ ಮಾಡಿ ಕೊಂದುದು ಕೃಷ್ಣಾಗರು ಧೂಪಧೂಮನಿವಹಂ, ಕೃಷ್ಣೋರಗಂ ಕೊಲ್ವವೋಲ್.’ ಕರಿಯ ನಾಗರಹಾವು ಕಚ್ಚಿ ಕೊಲ್ಲುವಂತೆ ಕರಿಯ ಹೊಗೆ ಆ ದಂಪತಿಗಳನ್ನು ಕೊಂದಿತು. ಇದು ಭೋಗದ ಹಣೆಯಬರಹ. ಇವನ್ನು ನೆನೆದ ಕವಿಗೆ ಆಶ್ಚರ್ಯವಿಷಾದಗಳೊಡನೆ ಒಂದು ಮೆಚ್ಚಿಗೆಯೂ ಸ್ಫುರಿಸಿದೆ. ಆತ ಹೇಳುತ್ತಾನೆ—

ಬಿಡದೆ ಪೊಗೆಸುತ್ತೆ, ತೋಳಂ
ಸಡಲಿಸದಾ ಪ್ರಾಣವಲ್ಲಭರ್ ಪ್ರಾಣಮನಂ
ದೊಡಗಳೆದರೋಪರೋಪರೊ
ಳೊಡ ಸಾಯಲ್ಪಡೆದರಿನ್ನವೇಂ ಸೈಪೊಳವೆ ?

ಜೊತೆಜೊತೆಯಾಗಿ ಬಾಳಿದ ಈ ಗಂಡ ಹೆಂಡಿರು ಪರಸ್ಪರ ಆಲಿಂಗನ ದಲ್ಲಿಯೇ ಏಕಕಾಲದಲ್ಲಿ ಸಾಯುವುದಕ್ಕಿಂತ ಇನ್ನು ಪುಣ್ಯವುಂಟೆ? ಎಂಬುದು ಕವಿಯ ಪ್ರಶ್ನೆ. ಮಹಾಕವಿ ಪಂಪನು ಒಲಿದ ಈ ಹೃದಯಗಳೆರಡರ ಪ್ರಣಯ ಸಾಂದ್ರತೆಯನ್ನು ಎಷ್ಟು ಮಾರ್ಮಿಕವಾಗಿ ಚಿತ್ರಿಸಿದ್ದಾನೆ! ಈ ಅನುಭವದಿಂದ ವಜ್ರಜಂಘನ ಜೀವವೂ ಪರಿಪಾಕಗೊಂಡಿರಬೇಕು. ಮುಂದಿನ ಜನ್ಮದಲ್ಲಿ ಆತನು ತನಗೆ ಹುಟ್ಟಿದ ಭೋಗತೃಷ್ಣೆಯನ್ನು ಅಣಗಿಸಿ ಕೊಂಡು ಗೆಳೆಯನ ವಿವೇಕದಂತೆ ಸಮ್ಯಕ್‌ವ್ರತವನ್ನು ಕೈಕೊಳ್ಳುತ್ತಾನೆ; ಕಡೆಯ ಜನ್ಮದಲ್ಲಿ ನಾಭಿರಾಜನ ಮಗನಾದ ಪುರುದೇವನಾಗಿ ಹುಟ್ಟುತ್ತಾನೆ. ಆತನು ಪದ್ಮಪತ್ರಮಿವಾಂಭಸನಂತೆ ಸಂಸಾರ ಜೀವನವನ್ನು ನಡೆಸಿ ಪರಿ ನಿಷ್ಕ್ರಮಣಕ್ಕೆ ಸಿದ್ಧನಾಗುತ್ತಾನೆ. ಆ ಸಮಯದಲ್ಲಿ ದೇವೇಂದ್ರನು ಪುರು ದೇವನ ಮನರಂಜನೆಗೆಂದು ನೀಲಾಂಗನೆಯೆಂಬ ದೇವಕನ್ನಿಕೆಯ ನೃತ್ಯ ವೊಂದನ್ನು ಏರ್ಪಡಿಸುತ್ತಾನೆ. 'ಕರ್ಬಿನ ಬಿಲ್ಲಂ ಮಸೆದ ಮದನನ ಕಣೆ ಬದುರ್ಗಂಕಿತ್ತೆಸಿಸುತ್ತೆ' ಆ ದೇವಕನ್ನಿಕೆ ಪುರುದೇವನ ಸಭೆಯನ್ನು ಹೊಕ್ಕು ಜನರ ಅಂತರಂಗವನ್ನೆಲ್ಲಾ ಸೂರೆಗೊಂಡಳು.

ತಾಳದ ಲಯಮುಂ ನಿಱಿ, ನೀ
ಳಾಳಕ, ಹಾರದ ಪೊಡಳ್ದ ಮುತ್ತೆಂಬುವು ಮುಂ
ಮೇಳಿಸಿ ಕೈಕೊಂಡುವು, ಲುಳಿ
ತಾಳಕಿ ಕೈಕೊಂಡಳೆಂಬುದೊಂದಚ್ಚರಿಯೆ ?

ಆ ಮನೋಹರಿಯ ಸೀರೆಯ ನಿರಿ, ಕಪ್ಪು ಮುಂಗೂದಲು, ಕೊರಳ ಹಾರದ ಮುತ್ತು—ಈ ಮೂರೂ ಸೇರಿಕೊಂಡು ತಾಳದಲಯವನ್ನು ಕೈಕೊಂಡುವು; ಇನ್ನು ಆ ಸುರಸುಂದರಿ ಕೈ ಕೊಂಡಳೆಂದು ಪ್ರತ್ಯೇಕವಾಗಿ ಹೇಳಬೇಕೆ ?

ಅವಳು ಕಣ್ಣು ತಿರುಗಿಸಿದ ಕಡೆ ಬೆಳುದಿಂಗಳು ಚೆಲ್ಲಿದಂತಾಗುತ್ತದೆ; ಅವಳು ಸೀರೆಯನ್ನು ಸರಿಪಡಿಸಿಕೊಳ್ಳುವ, ಅಥವ ಮುತ್ತಿನ ಹಾರವನ್ನು

ಸರಿಪಡಿಸಿಕೊಳ್ಳುವ ಒಂದು ಭಂಗಿಯು 'ಮದನರಾಜ ರಾಜ್ಯವಿಳಾಸಂ'. ಮನಮೋಹಕವಾದ ಈ ನಾಟ್ಯದ ಮಧ್ಯದಲ್ಲಿಯೆ ನೀಲಾಂಜನೆಯ ಆಯಸ್ಸು ಮುಗಿಯಿತು. ಅವಳು ಇದ್ದಕ್ಕಿದ್ದಂತೆ ಕರಗಿಹೋದಳು. ರಸಾಭಾಸವಾಗದಂತೆ ದೇವೇಂದ್ರ ನೀಲಾಂಜನೆಯಂತೆಯೇ ಇದ್ದ ಬೇರೊಬ್ಬಳನ್ನು ಸೃಷ್ಟಿಮಾಡಿ ನಾಟ್ಯವನ್ನು ಮುಂದುವರಿಸಿದನು. ಎವೆಯಿಕ್ಕುವಷ್ಟರಲ್ಲಿ ನಡೆದುಹೋದ ಈ ಸಂಗತಿ ಸಭೆಯಲ್ಲಿದ್ದವರಾರಿಗೂ ಅರಿವಾಗಲಿಲ್ಲ. ಆದರೆ ಪುರುದೇವನಿಗೆ ಮಾತ್ರ ಅರ್ಥವಾಯಿತು. ಪರಿಪಾಕಗೊಂಡಿದ್ದ ಆತನಲ್ಲಿ ವೈರಾಗ್ಯ ಸ್ಥಿರಗೊಂಡಿತು. ಆತನು

ತನು, ರೂಪ, ವಿಭವ, ಯೌವನ
ಧನ ಸೌಭಾಗ್ಯಾಯುರಾದಿಗಳ್ಗಿಣೆ ಕುಡುಮಿಂ
ಚಿನ ಪೊಳೆಪು ಮುಗಿಲ ನೆಳಲಿಂ
ದ್ರನ ಬಿಲ್ ಬೊಬ್ಬುಳಿಕೆಯುರ್ಬು ಪರ್ಬಿದ ಭೋಗಂ.

ದೇಹ ರೂಪ ವೈಭವ ಯೌವನ ಐಶ್ವರ್ಯ ಸೌಭಾಗ್ಯ ಆಯಸ್ಸು—ಇವೆಲ್ಲವೂ ಕೊಂಕುಮಿಂಚಿನಂತೆ, ಮೋಡದ ನೆರಳಿನಂತೆ, ಕಾಮನ ಬಿಲ್ಲಿನಂತೆ, ನೀರುಗುಳ್ಳೆಯಂತೆ ಅಸ್ಥಿರ'ಎಂದು ಕೊಂಡ. ಜನ್ಮ ಜನ್ಮಾಂತರಗಳಿಂದಲೂ ತಾನು ಅನುಭವಿಸಿದ ಭೋಗಗಳೆಲ್ಲಾ ಆತನ ಜ್ಞಾಪಕಕ್ಕೆ ಬಂತು.

ಎನಿತಾನುಮಂಬುನಿಧಿಗಳ
ನನೇಕ ನಾಕಂಗಳಲ್ಲಿ ಕಡಿದುಂ ಪೊಯ್ತಿ
ಲ್ಲೆನಗೆ, ನರಭೋಗಮೆಂಬೀ
ಪನಿಪುಲ್ಲಂ ನಕ್ಕೆ ತೃಷ್ಣೆ ಪೇಳ್ ಪೋದಪುದೇ

ಬೇರೆ ಬೇರೆ ಸ್ವರ್ಗದಲ್ಲಿ ದೇವತೆಯಾಗಿ ಹುಟ್ಟಿದಂದು ಎಷ್ಟೋ ಭೋಗ ಸಮುದ್ರಗಳನ್ನೇ ಕುಡಿದಿರುವೆನಾದರೂ ಭೋಗದಾಹ ಬೇರೆ ಅಡಗಲಿಲ್ಲ; ಇನ್ನು ಈ ಮಾನವಭೋಗವೆಂಬ ಹುಲ್ಲಮೇಲಿನ ಹನಿಯನ್ನು ನೆಕ್ಕಿದರೆ ಈ ನನ್ನ ಜೀವದ ಆಶಾದಾಹ ಅಡಗುವುದೇ ?—ಎಂದುಕೊಂಡು ಆತ ಕೈವಲ್ಯ ಪದವಿಗಾಗಿ ತಪಸ್ಸು ಮಾಡಲು ಹೊರಟುಹೋಗುತ್ತಾನೆ.

ಧರ್ಮ ಕಾವ್ಯಧರ್ಮಗಳು, ಶಬ್ದಾರ್ಥಗಳಂತೆ, ಹೇಗೆ ಒಂದಾಗಿ ಈ ಕಾವ್ಯವಾಹಿನಿ ಪ್ರವಹಿಸುತ್ತಿದೆ! ಪುರು ಚಕ್ರವರ್ತಿಯ ಮಕ್ಕಳಾದ ಭರತ

ಬಾಹುಬಲಿಗಳ ಪ್ರಸಂಗವೊಂದು ಆದಿಪುರಾಣದ ರಸಘಟ್ಟ. ಪುರು ಚಕ್ರವರ್ತಿ ವೈರಾಗ್ಯ ಚಕ್ರವರ್ತಿಯಾದ ಮೇಲೆ ಆತನ ಹಿರಿಯ ಮಗ ಭರತನು ಭೂ ಚಕ್ರವರ್ತಿಯಾದ. ತನ್ನ ಆಯುಧಾಗಾರದಲ್ಲಿ ಹುಟ್ಟಿದ ಚಕ್ರರತ್ನದ ಪ್ರಭಾವದಿಂದ ಆತನು ಷಟ್ಖಂಡಗಳನ್ನೆಲ್ಲಾ ಜಯಿಸಿ ಭೂಮಂಡಲಕ್ಕೆ ಒಡೆಯನಾದ. ಆದರೆ ಅವನ ಒಡಹುಟ್ಟಿದವರೇ ಅವನನ್ನು ಪ್ರತಿಭಟಿಸುತ್ತಾರೆ. ಭರತನ ರಾಜಸಗುಣ ಇದನ್ನು ಸಹಿಸಲಾರದೆ ಹೋಯಿತು. ಅವರೆಲ್ಲರನ್ನೂ ತನ್ನ ಅಧಿಕಾರಕ್ಕೆ ಒಳಗು ಮಾಡಲು ಯತ್ನಿಸುತ್ತಾನೆ. ಅವರು ರಾಜ್ಯಭೋಗಕ್ಕೆ ಹೇಸಿ, ತಪೋ ಸಾಮ್ರಾಜ್ಯದಲ್ಲಿ ನಿರತರಾಗುತ್ತಾರೆ. ಇಷ್ಟು ಸುಲಭವಾಗಿ ಅವರು ಭೋಗವಿರಕ್ತರಾದುದನ್ನು ಕಂಡು ಭರತನಿಗೆ ಆಶ್ಚರ್ಯವಾಗುತ್ತದೆ. ಆದರೇನು? ತನ್ನನ್ನು ಪ್ರತಿಭಟಿಸಿ ನಿಂತ ಬಾಹುಬಲಿಯೊಡನೆ ಆತನು ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧಗಳನ್ನು ಮಾಡಿ ಸೋತು, ಆ ಖತಿಯಿಂದ ಅವಿವೇಕಕ್ಕೆ ಇಳಿದು, ತನ್ನ ಚಕ್ರರತ್ನವನ್ನು ಅವನ ಮೇಲೆ ಪ್ರಯೋಗಿಸುತ್ತಾನೆ. ಇದರಿಂದ ಬಾಹುಬಲಿಯ ಕೂದಲು ಕೊಂಕಲಿಲ್ಲವಾದರೂ ಆತನಿಗೆ ಅಣ್ಣನ ವರ್ತನೆಯಿಂದ ಜಿಹಾಸೆ ಹುಟ್ಟುತ್ತದೆ. ಆತನು ರಾಜ್ಯವನ್ನು ಅಣ್ಣನಿಗೆ ವಹಿಸುತ್ತಾ 'ನೀನೊಲಿದ ಲತಾಂಗಿಗಂ, ಧರೆಗಮಾಟಿಸಿದಂದು ನೆಗಳ್ತೆ ಮಾಸದೆ?—ನೀನು ಒಲಿದ ಹೆಣ್ಣೂ ಒಂದೆ, ಈ ರಾಜ್ಯವೂ ಒಂದೆ; ತಮ್ಮನಾದ ನಾನು ಇದಕ್ಕೆ ಆಶೆ ಪಡಬಾರದು; ಅದು ಅಪಕೀರ್ತಿಕರ—ಎಂದು ಹೇಳಿ ತಪಸ್ಸಿಗೆ ಹೊರಟುಹೋಗುತ್ತಾನೆ.

ಮುಕ್ತಿಯಾತ್ರೆಗೆಂದು ಹೊರಟ ಚೇತನವೊಂದು ಜನ್ಮಾಂತರಗಳ ಅನುಭವಗಳಿಂದ ಸಂಸ್ಕಾರಗೊಂಡು, ಕ್ರಮಕ್ರಮವಾಗಿ ಮೇಲಕ್ಕೇರುತ್ತಾ ಹೇಗೆ ತನ್ನ ಗುರಿಯನ್ನು ಮುಟ್ಟಿತೆಂಬುದು ಆದಿಪುರಾಣದಲ್ಲಿ ಮನೋಹರವಾಗಿ ನಿರೂಪಿತವಾಗಿದೆ. ಪಂಪ ಮಹಾಕವಿ ಧರ್ಮದ ಕಷಾಯಕ್ಕೆ ಕಾವ್ಯಧರ್ಮದ ಸಕ್ಕರೆಯನ್ನು ಸೇರಿಸಿ ಅದನ್ನು ಇನಿದಾಗಿ ಮಾಡಿದ್ದಾನೆ. ಆದ್ದರಿಂದಲೆ ಜೈನ ಧರ್ಮೇತರರೂ ಆತನ ಕಾವ್ಯಗಳನ್ನು ಸವಿದು ಸಂತೋಷಿಸಬಹುದು. ಆದರೂ ಜೈನಧರ್ಮದ ನಿರೂಪಣೆಗಾಗಿಯೇ ಹೊರಟಿರುವ ಈ ಪುರಾಣ ಕಾವ್ಯದಲ್ಲಿ ಮತ ಪ್ರಕ್ರಿಯೆ, ಧರ್ಮ ವಿವರಣೆ, ನೀತಿ ನಿರೂಪಣೆ ಸಾಕಷ್ಟು ಬರುವುದು ಅನಿವಾರ್ಯವಾಗಿದೆ. ಬಾಯಿ ಮೊಸರಾಗಬೇಕೆಂದು

ಬಯಸುವವರು ಕೈ ಕೆಸರನ್ನೂ ಮಾಡಿಕೊಳ್ಳಬೇಕಾದುದು ಅಗತ್ಯ, ಅನಿವಾರ್ಯ. ಇವುಗಳ ಗೊಂದಲ ಬೇಕಿಲ್ಲದವರು ಪಂಪ ಭಾರತವನ್ನು ಓದ ಬೇಕು.

ಪಂಪ ಭಾರತ ಎಂದು ನಾವು ಮೆಚ್ಚಿಗೆಯಿಂದ ಕರೆವ ಕಾವ್ಯದ ನಿಜವಾದ ಹೆಸರು 'ವಿಕ್ರಮಾರ್ಜುನ ವಿಜಯ' ಪಂಪನ ಪೋಷಕನಾದ ಅರಿಕೇಸರಿ ವಿಕ್ರಮದಲ್ಲಿ ಅರ್ಜುನನಿಗೆ ಸಮಾನನಾದವನು. ಪಂಪಕವಿ ಈ ತನ್ನ ಪೋಷಕನ ಇತಿಹಾಸವನ್ನೆಲ್ಲಾ ತನ್ನ ಕಾವ್ಯದಲ್ಲಿ ಸುವಿಸ್ತಾರವಾಗಿ ಬರೆ ದಿದ್ದಾನೆ. ಆತ 'ಪರಬಲದ ನೆತ್ತರ ಕಡಲೊಳಗಿನ ಜಗುಳೆ ಬಳೆವ ತೆಜ ದೊಳೆ ಬಳೆದಂ' ಎಂದು ಹೇಳಿ ಬಾಲ್ಯದಿಂದಲೂ ಆತನು ರಣೋತ್ಸಾಹಿ ಯಾಗಿದ್ದನೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಈ ಸ್ವಭಾವಶೂರನು ಕವಿಯ ಕಣ್ಣಿಗೆ ಭಾರತಯುದ್ಧದ ಅರ್ಜುನನಂತೆ ಕಾಣಿಸಿದನೆಂದು ತೋರು ತ್ತದೆ. 'ಈತನುದಾತ್ತ ಪೂರ್ವಭೂಮಿಪರುಮನೊಳ್ಪಿನೊಳ್ ತಗುಳೆವಂ ಮೊಡೆಯೇ ಕಥೆಯೊಳ್ ತಗುಳ್ಚಿ ಪೋಲಿಪೊಡೆನಗಲ್ತಿಯಾದುದು ಗುಣಾ ರ್ಣವ ಭೂಭುಜನಂ ಕಿರೀಟಿಯೊಳ್' ಎಂಬುದು ಕವಿಯ ಹೇಳಿಕೆ. ಅರಿ ಕೇಸರಿಯು ತನ್ನ ಸದ್ಗುಣಗಳಿಂದ ಪ್ರಾಚೀನಕಾಲದ ರಾಜರನ್ನೂ ಮೀರಿಸಿ ದ್ದುದರಿಂದ ಆತನನ್ನು ಅರ್ಜುನನಲ್ಲಿ ಹೋಲಿಸಿ ಈ ಭಾರತವನ್ನು ಬರೆಯ ಬೇಕೆಂದು ಆತನಿಗನಿಸಿತು. ಆದ್ದರಿಂದಲೇ ಈ ಗ್ರಂಥದ ಉದ್ದಕ್ಕೂ ಅರಿ ಕೇಸರಿಯ ಬಿರುದುಬಾವಲಿಗಳು ಅರ್ಜುನನವಾಗಿವೆ; ಅರ್ಜುನನ ಮಹಿಮೆ ಅರಿಕೇಸರಿಯ ಪಾಲಾಗಿದೆ. ಇಲ್ಲಿ ಅರ್ಜುನನೇ ಅರಿಕೇಸರಿ, ಅರಿಕೇಸರಿಯೆ ಅರ್ಜುನ. ಇದರಿಂದಲೇ ಕವಿ ತನ್ನ ಕಾವ್ಯವನ್ನು 'ಸಮಸ್ತ ಭಾರತ'—ಪರ ಸ್ಪರ ಸೇರಿಕೊಂಡ ಭಾರತ—ಎಂದು ಕರೆದಿರುವುದು. ತನಗೆ ದೊರೆತ ಈ ಮನ್ನಣೆಯಿಂದ ಸಂತೋಷಗೊಂಡ ರಾಜ ಬೇಕಾದಷ್ಟು ಉಡಿಗೆತೊಡಿಗೆ ಗಳನ್ನೂ ಧನಧಾನ್ಯಗಳನ್ನೂ ಕೊಟ್ಟುದಲ್ಲದೆ ಧರ್ಮಪುರವೆಂಬ ಅಗ್ರಹಾರ ವನ್ನೂ ಉಂಬಳಿಯಾಗಿ ಕೊಟ್ಟನು. ಪಂಪನು ತಾನು ಜೈನನೆಂಬುದನ್ನೂ ಮರೆತು ಹರಕೆ ಹಾಕುತ್ತಾನೆ:

ದೆಸೆ ಮುಖಧೂಮದಿಂ ದ್ವಿಜರ ಹೋಮದಿನೊಕ್ಕಜಿ ಹಂಸಕೋಕ ಸಾ
ರಸ ಕಳನಾದದಿಂದೊಳಗೆ ವೇದ ನಿನಾದದಿನೆತ್ತನೆಯ್ದೆ ಕೋ

ಛಿಸೆ ಸುರ ಮಥ್ಯಮಾನ ವನಧಿ ಕ್ಷುಭಿತಾರ್ಣವ ಘೋಷದಂತೆ ಘೂ
ರ್ಣಿಸುತಿರಲೀ ಗುಣಾರ್ಣವನ ಧರ್ಮದ ಧರ್ಮಪುರಂ ಮನೋಹರಂ

ಬ್ರಾಹ್ಮಣರ ಯಜ್ಞದ ಹೊಗೆಯಿಂದಲೂ ಹೋಮಗಳಿಂಲೂ ದಿಕ್ಕು ತುಂಬಿದೆ; ಕೆರೆಗಳು ಹಂಸ ಚಕ್ರವಾಕ ಮೊದಲಾದ ಹಕ್ಕಿಗಳ ಶಬ್ದದಿಂದ ತುಂಬಿಹೋಗಿವೆ; ವೇದಘೋಷದಿಂದ ಊರೆಲ್ಲ ತುಂಬಿಹೋಗಿದೆ; ಹೀಗಾಗಿ ಈ ಗುಣಾರ್ಣವನು ಕೊಟ್ಟ ಧರ್ಮಪುರವು ದೇವತೆಗಳು ಕಡೆಯುತ್ತಿದ್ದ ಸಮುದ್ರಘೋಷದಂತೆ ಶಬ್ದಮಯವಾಗಿದೆ.

ಪಂಪಕವಿ ಹಣಕೊಟ್ಟುದಕ್ಕೆ ತನ್ನ ಸ್ವಾಮಿಯನ್ನು ಹೊಗಳಿದ ನೆಂದು ಹೇಳುವುದು ಅನ್ಯಾಯವಾದೀತು. ಆತನು ಸ್ವಾಭಾವಿಕವಾಗಿಯೇ ಉದಾರ ಹೃದಯನಾದವನು. ಇಲ್ಲದಿದ್ದರೆ ಮಹಾಭಾರತವನ್ನು ಅಷ್ಟು ಆರ್ದ್ರಹೃದಯದಿಂದ ಅನುಭವಿಸಿ ಬರೆಯುತ್ತಿದ್ದನೆ? ಪಂಪಭಾರತವನ್ನು ಒಮ್ಮೆ ಆಮೂಲಾಗ್ರವಾಗಿ ಓದಿದವರಿಗೆ ಇದು ಅರ್ಥವಾಗುತ್ತದೆ. ಆತನು ಭಾರತವನ್ನು ಲೋಕಪೂಜ್ಯವಾದ ಗ್ರಂಥವೆಂದು ಭಾವಿಸಿದ್ದಾನೆ, ಆದರೆ ಆದಕ್ಕೆ ಕಾರಣ ಸಂಪ್ರದಾಯವಾಗಿ ಬಂದಿರುವ ಕಾರಣವಲ್ಲ. 'ಭಾರತಃ ಪಂಚಮೋವೇದಃ' ಎಂದು ಹೇಳಿ, ಧರ್ಮಸೂಕ್ಷ್ಮಗಳಿಗೆ ಇದೊಂದು ಕೈಗನ್ನಡಿಯೆಂದಾಗಲಿ, ಶ್ರೀಕೃಷ್ಣನ ಮಹಿಮೆಯಿಂದ ತುಂಬಿದ ಈ 'ಕೃಷ್ಣ ಚರಿತಾಮೃತವು' ಮಾನವ ಚೇತನದ ಉದ್ಧಾರಕ್ಕೆ ಆಧಾರ ಗ್ರಂಥವೆಂದಾಗಲಿ ಆತ ಹೇಳುವುದಿಲ್ಲ. ಆತನ ಅಭಿಪ್ರಾಯದಲ್ಲಿ

ಚಲದೊಳ್ ದುರ್ಯೋಧನಂ, ನನ್ನಿಯೊಳಿನತನಯಂ, ಗಂಡಿನೊಳ್
ಭೀಮಸೇನಂ
ಬಲದೊಳ್ ಮದ್ರೇಶನತ್ಯುನ್ನತಿಯೊಳಮರಸಿಂಧೂದ್ಭವಂ ಚಾಪ
ವಿದ್ಯಾ
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ
ಧರ್ಮದೊಳ್ನಿ
ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ
ಲೋಕಪೂಜ್ಯಂ ||

ಚಲದಲ್ಲಿ ದುರ್ಯೋಧನ, ಸತ್ಯಗುಣದಲ್ಲಿ ಸೂರ್ಯಪುತ್ರನಾದ ಕರ್ಣ, ಪರಾ

ಕ್ರಮದಲ್ಲಿ ಭೀಮ, ಬಲದಲ್ಲಿ ಶಲ್ಯ, ಔನ್ನತ್ಯದಲ್ಲಿ ಭೀಷ್ಮ, ಬಿಲ್ವಿದ್ಯೆಯಲ್ಲಿ ದ್ರೋಣ, ಸಾಹಸದಲ್ಲಿ ಅರ್ಜುನ, ಧರ್ಮಗುಣದಲ್ಲಿ ಶುದ್ಧಾತ್ಮನಾದ ಧರ್ಮರಾಯ—ಇವರು ಮಹತ್ತನ್ನು ಪಡೆದಿರುವವರು; ಇವರುಗಳಿಂದ ಈ ಭಾರತ ಲೋಕಪೂಜ್ಯವಾದುದು.

ಪಂಪನ ಈ ಹೇಳಿಕೆ ಸಂಪ್ರದಾಯಸ್ಥರನ್ನು ಚಕಿತಗೊಳಿಸುತ್ತದೆ. ಇದೇನಿದು? ಭಾರತದ ಹೃದಯದಂತಿರುವ, ಪ್ರಾಣದಂತಿರುವ, ಭಾರತದ ಸೂತ್ರಧಾರನೆಂದು ಪ್ರಖ್ಯಾತನಾಗಿ, ಸಾಕ್ಷಾತ್ ಭಗವಂತನ ಅವತಾರವೆಂದು ವೈದಿಕರು ನಂಬಿರುವ ಶ್ರೀ ಕೃಷ್ಣನು ಇಲ್ಲಿ ಹೆಸರಿಲ್ಲದಂತೆ ಆಗಿ ಹೋಗಿರುವನಲ್ಲಾ! ಜೈನ ಭಾರತದಲ್ಲಿ ಶ್ರೀ ಕೃಷ್ಣನೊಬ್ಬ ನಾರಕಿ: ಜೈನನಾದ ಪಂಪ ತನ್ನ ಸಂಸ್ಕಾರಕ್ಕೆ ತಕ್ಕಂತೆ ಕೃಷ್ಣನನ್ನು ಕೆಳಕ್ಕೆಳೆದಿರಬಹುದೇ? ವ್ಯಾಸ ಭಾರತದ ಕೃಷ್ಣ 'ಮಮ ಪ್ರಾಣಾಹಿ ಪಾಂಡವಾಃ' ಎಂದು ಹೇಳಿಕೊಂಡು, ಅವರಿಗೆ—ಅವರಲ್ಲಿಯೂ ತನ್ನ ಪರಮಭಕ್ತನಾದ ಅರ್ಜುನನಿಗೆ—ಕಷ್ಟ ಬಂದಾಗಲೆಲ್ಲಾ ಪ್ರತ್ಯಕ್ಷನಾಗಿ 'ಸಾಧು ಪರಿತ್ರಾಣಕ'ನೆಂಬ ತನ್ನ ಹೆಸರನ್ನು ಸಾರ್ಥಕ ಪಡಿಸಿಕೊಂಡಿದ್ದಾನೆ. ಪಂಪ ಭಾರತದಲ್ಲಿ ಯಾವರೊ ಶ್ರೀಕೃಷ್ಣನ ಪ್ರಸಕ್ತಿಯೇ ಕಡಮೆ: ಬಂದರೂ ಮೂಲಭಾರತದೊಡನೆ ಹೋಲಿಸಿದಾಗ ಪೇಲವವಾಗಿದೆ. ಈ ಟೀಕೆ ತನ್ನ ಮೇಲೆ ಬರುವುದೆಂದು ಪಂಪ ಭಾವಿಸಿದ್ದನೇನೋ ಎನ್ನುವಂತೆ ಆತನು ಅರ್ಜುನನನ್ನು ಸಿಂಹಾಸನದಲ್ಲಿ ಕೂಡಿಸಿದ ಮೇಲೆ ಆತನ ರಾಜ್ಯಭಾರವನ್ನು ಕುರಿತು ಹೇಳುತ್ತಾ

ಪಸರಿಸಿ ಸೀಳ್ದ ತನ್ನ ಜಸದೊಳ್ ಪೆಜನೊರ್ವನ ಕೀರ್ತಿ ತಳ್ತ್ರ ಂ
ಜಿಸೆ ನೆಗಳ್ತೆ ತನೇಂ ನೆಗಳ್ದನೆಂಬ ಛಲಂಮಿಗೆ ; ತನ್ನ ಪೆಂಪು ತ
ನ್ನೆಸಕಮೆ ತನ್ನ ವಿಕ್ರಮಮೆ ತನ್ನ ನೆಗಳ್ತೆಯೆ ತನ್ನ ಮಾತೆ ತಾ
ನೆಸೆವ ಜಗತ್ರಯಕ್ಕೆನಿಸಿ ಪಾಲಿಸಿದಂ ನೆಲನಂ ಗುಣಾರ್ಣವಂ ||

ಎನ್ನುತ್ತಾನೆ. 'ತನ್ನ ಕೀರ್ತಿಯಲ್ಲಿ ಇನ್ನೊಬ್ಬನ ಕೀರ್ತಿ ಸೇರಿಕೊಂಡರೆ ಅವನೆಂತಹ ಪ್ರಸಿದ್ಧ ಪುರುಷ? ಎಂಬ ಛಲದಿಂದ ಕೂಡಿದವನಾಗಿ, ತನ್ನ ಸ್ವಂತ ಮಹಿಮೆ, ತನ್ನ ಸ್ವಂತ ಕಾರ್ಯ, ತನ್ನ ಸ್ವಂತ ಪರಾಕ್ರಮ, ತನ್ನ ಸ್ವಂತ ಕೀರ್ತಿ—ಇವುಗಳಿಂದ ಕೂಡಿ, ತನ್ನ ಮಾತೇ ಮೂರು ಲೋಕಕ್ಕೂ ಕೊನೆಯ ಮಾತೆಂಬಂತೆ ದರ್ಪದಿಂದ ರಾಜ್ಯಭಾರ ಮಾಡಿದ, ಗುಣಾರ್ಣವ

ನಾದ ಅರ್ಜುನ. ಪಂಪನ ಅರ್ಜುನ ಶ್ರೀಕೃಷ್ಣನ ನೆರಳಾಗಿ ಬಾಳುವವನಲ್ಲ. ಅವನು ಶ್ರೀ ಕೃಷ್ಣನೊಡನೆ ಹೇಳುವ ವೀರಜೀವನದ ಆದರ್ಶವನ್ನು ಕೇಳಿ-

ಒತ್ತಿ ತಱುಂಬಿ ನಿಂದ ರಿಪುಭೂಜ ಸಮಾಜದ ಬೇರ್ಗಳಂ ನಭ
ಕ್ಕೆತ್ತದೆ, ಬಂದು ತನ್ನ ಮಱೆವೊಕ್ಕೊಡೆ ಕಾಯದೆ, ಚಾಗದೊಳ್ಪಿನ
ಚ್ಚೊತ್ತದೆ, ಮಾಣ್ದು ಬಾಳ್ವ ಪುಳುಮಾನಸನೆಂಬನಜಾಂಡಮೆಂಬು
ದೊಂ
ದತ್ತಿಯ ಪಣ್ಣೊಳಿರ್ಪ ಪುಳುವಲ್ಲದೆ ಮಾನಸನೇ ಮುರಾಂತಕಾ ॥

ಅಯ್ಯಾ ಶ್ರೀಕೃಷ್ಣ, ಮೇಲೆ ಬಿದ್ದು ಎದುರು ನಿಂತ ಶತ್ರುರಾಜರೆಂಬ ಮಹಾ ವೃಕ್ಷಗಳ ಬೇರುಗಳನ್ನು ಆಕಾಶಕ್ಕೆ ಎತ್ತದಿದ್ದರೆ, ಅಥವಾ ಮರೆಹೊಕ್ಕವರನ್ನು ಕಾಪಾಡದಿದ್ದರೆ, ತ್ಯಾಗವೆಂಬ ಸದ್ಗುಣದ ಮುದ್ರೆಯನ್ನೊತ್ತದಿದ್ದರೆ ಅವನು ಮನುಷ್ಯನೆ? ಅಲ್ಲ; ಈ ಬ್ರಹ್ಮಾಂಡವೆಂಬ ಅತ್ತಿಯ ಹಣ್ಣಿನಲ್ಲಿರುವ ಒಂದು ಹುಳು, ಅವನು.-

ಇಂತಹ ಆದರ್ಶವನ್ನು ಅವನ ಬಾಯಲ್ಲಿಟ್ಟ ತನ್ನ ನಾಯಕನನ್ನು ಹೆಜ್ಜೆಹೆಜ್ಜೆಗೂ ಶ್ರೀಕೃಷ್ಣನ ಕೃಪಾಭಿಕ್ಷೆಯನ್ನು ಬೇಡುವಂತೆ ಮಾಡಲು ರಾಜಸ ಮೂರ್ತಿಯಾದ ಪಂಪ ಒಪ್ಪಿಯಾನೆ? ಆತನ ದೃಷ್ಟಿಕೋನ ಈ ದಿಕ್ಕನ್ನು ಹಿಡಿದುದರಿಂದಲೇ ಆತನು ತನ್ನ ಭಾರತವನ್ನು 'ಲೌಕಿಕ ಕಾವ್ಯ' ವೆಂದು ಕರೆದುದು.

ಇನ್ನೊಂದು ವಿಷಯ. ಪಂಪನು ತನ್ನ ಕಾವ್ಯದ ಲೋಕ ಪೂಜ್ಯತೆಗೆ ಕಾರಣರಾದವರ ಸಾಲಿನಲ್ಲಿ ದುರ್ಯೋಧನನನ್ನೂ ಕರ್ಣನನ್ನೂ ಸೇರಿಸಿದ್ದಾನೆ. ಮಹಾಭಾರತದಲ್ಲಿ ಅವರಿಬ್ಬರೂ ದುಷ್ಟಚತುಷ್ಟಯರ ಸಾಲಿಗೆ ಸೇರಿದವರು. ಪಂಪನು ಅವರಿಬ್ಬರಿಗೂ ಅಪಾರವಾದ ಗೌರವವನ್ನು ಸಲ್ಲಿಸಿದ್ದಾನೆ. ದುರ್ಯೋಧನನು ಮೃತ್ಯುವನ್ನಪ್ಪಿದಮೇಲೆ ಅವನ ಚರಮಗೀತೆಯನ್ನು ಹಾಡುತ್ತಾ ಕವಿಯು

ನುಡಿದುದನೆಯ್ದೆ ತುತ್ತತುದಿಯೆಯ್ದುವಿನಂ ನುಡಿದಂ ವಲಂ, ಚಲಂ
ಬಿಡಿದುದನೆಯ್ದೆ ಮುಂಪಿಡಿದುದಂ ಪಿಡಿದಂ ಸಲೆ ಪೂಣ್ದು ಪೂಣ್ಕೆ ನೇ
ರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡ
ಲ್ವಡುವಿನಮಣ್ಮುಗುಂದನೆ ದಲೇನಭಿಮಾನಧನಂ ಸುಯೋಧನಂ

ಎಂದು ಸ್ತವಕುಸುಮಾಂಜಲಿಯನ್ನು ಅರ್ಪಿಸುತ್ತಾನೆ. ಕಟ್ಟಕಡೆಯವರೆಗೂ ಆ ದುರ್ಯೋಧನ ನುಡಿದ ನುಡಿಯನ್ನೇ ನುಡಿದ, ತನ್ನ ಹಿಡಿದ ಹಟವನ್ನೇ ಸಾಧಿಸಿದ, ತನ್ನ ಪ್ರತಿಜ್ಞೆ ಪರಿಪೂರ್ಣವಾಗುವ ಹಾದಿಯನ್ನೇ ತಪ್ಪದೆ ತುಳಿದ, ಹೆದರಲಿಲ್ಲ ಬೆದರಲಿಲ್ಲ, ದೇಹ ಬಿದ್ದುಹೋಗುವ ಕಾಲ ಬಂದಾಗಲೂ ಆತನ ಶೌರ್ಯ ಕುಂದಲಿಲ್ಲ: ಈ ಸುಯೋಧನ ಎಂತಹ ಅಭಿಮಾನಧನ! ಕೌರವನನ್ನು ಸುಯೋಧನ, ಅಭಿಮಾನಧನ ಎಂದು ಕರೆದು ಗೌರವಿಸಿರುವುದನ್ನು ಸ್ವಲ್ಪ ಗಮನಿಸಬೇಕು. ಪಂಪನು ಚಿತ್ರಿಸಿರುವ ಈ ಕರ್ಣ ದುರ್ಯೋಧನರ ಪಾತ್ರವನ್ನು ನೋಡಿದರೆ ಗ್ರೀಕ್ ದುರಂತ ಪಾತ್ರಗಳ ನೆನಪಾಗುತ್ತದೆ. ಆ ಉನ್ನತ ವ್ಯಕ್ತಿಗಳಲ್ಲಿದ್ದ ದೈತ್ಯಶಕ್ತಿ ವ್ಯರ್ಥವಾಗಿ, ಅವರು ಅನ್ಯಷ್ಟದ ಕೈತುತ್ತಾಗಿ ಹೋದುದನ್ನು ಕಂಡಾಗ ಯಾರಿಗೆ ತಾನೆ ಅಯ್ಯೊ ಎನಿಸುವುದಿಲ್ಲ? ಪಂಪಕವಿ ತೋರಿದ ಈ ಹಾದಿಯಲ್ಲಿ ಮುನ್ನಡೆದ ರನ್ನಕವಿ ತನ್ನ ಕೃತಿರತ್ನದಲ್ಲಿ ಕೌರವನನ್ನು ದುರಂತನಾಯಕನ ಮಟ್ಟಕ್ಕೆ ಎತ್ತಿದ್ದಾನೆ. ಪಂಪಕವಿ ಆ ಕಾರ್ಯವನ್ನು ತನ್ನ ಕರ್ಣನ ವಿಚಾರದಲ್ಲಿ ಪ್ರಮುಖವಾಗಿ ಪ್ರಯೋಗಿಸಿದ್ದಾನೆ.

ಪಂಪಭಾರತದಲ್ಲಿ ಅರ್ಜುನನು ನಾಯಕನಾದುದರಿಂದ ಮೊದಲಿಂದ ಅವನ ಪ್ರತಿಸ್ಪರ್ಧಿಯಾಗಿದ್ದ ಕರ್ಣ ಪ್ರತಿನಾಯಕನಾಗಿರುವುದು ಸಹಜವಾಗಿಯೇ ಇದೆ. ಪಂಪಕವಿಗೆ ಇವನಲ್ಲಿ ಅಪಾರವಾದ ಗೌರವ, ಆದರ, ಪ್ರೇಮ. ಅದು ಸಹಜವಾದುದೂ ಸರಿ. ನಿಜವಾಗಿಯೂ ಕರ್ಣನಂತಹ ದುರದೃಷ್ಟಶಾಲಿಗಳು ಜಗತ್ತಿನ ಸಾಹಿತ್ಯದಲ್ಲಿಯೇ ಬಹು ಅಪೂರ್ವ. ಅವನು ಸಾಕ್ಷಾತ್ ಸೂರ್ಯನ ಮಗ; ಕ್ಷತ್ರಿಯ ರಮಣಿಯಾದ ಕುಂತಿಯ ಹೊಟ್ಟೆಯಲ್ಲಿ ಹುಟ್ಟಿದವನು; ಜಗದ್ವಿಖ್ಯಾತರಾದ ಪಾಂಡವರಲ್ಲಿ ಹಿರಿಯ. ಬಡ ಜೋಪಡಿಯಲ್ಲಿ ಹುಟ್ಟಿದ ಕೂಸು ಸಹ ಬೆಚ್ಚನೆಯ ಸ್ಥಳದಲ್ಲಿ ಮಲಗಿ ತಾಯಿಯ ಸ್ತನ್ಯಪಾನವನ್ನು ಕಂಡೀತು: ಪಾಪ ಈ ಮಗು ಹುಟ್ಟುತ್ತಲೆ ಗಂಗೆಯ ಪಾಲು; ಬೆಳೆದುದು ಬೆಸ್ತನ ಮನೆಯಲ್ಲಿ. ಆದರೂ ಅದರ ಸ್ವಭಾವ ಸಹಜವಾದ ಧೀರೋದಾತ್ತ ಗುಣಗಳೆಲ್ಲಿ ಹೋದಾವು? ಪಂಪ ಹೇಳುವುದನ್ನು ಕೇಳಿ. ಆತ ಯೌವನದಲ್ಲಿ ಕಾಲಿಡುತ್ತಿದ್ದಂತೆಯೇ

ಪೊಡೆದುದು ಬಿಲ್ಲ ಜೇವೊಡೆಯೆ ಮೀಱುವ ವೈರಿ ನರೇಂದ್ರರಂ ಪಿಡಿ

ಲ್ವೊಡೆದವೊಲಟ್ಟಿ ಮುಟ್ಟಿ ಕಡಿದಿಕ್ಕಿದುದಾದೆಡರಂ ನಿರಂತರಂ
ಕಡಿಕಡಿದಿತ್ತ ಪೊನ್ನೆ ಬುಧ ಮಾಗಧ ವಂದಿಜನಕ್ಕೆ ಕೊಟ್ಟ ಕೋ
ಡೆಡರದೆ ಜೇಡಿವೋಡಿಮಿದು ಚಾಗದ ಬೀರದ ಮಾತು ಕರ್ಣನಾ.

ಕರ್ಣನ ಮಾತು ಎರಡೆ—'ಓಡಿ ; ಜೇಡಿ'. ವೀರ್ಯಕ್ಕೆ 'ಓಡಿ'; ತ್ಯಾಗಕ್ಕೆ 'ಜೇಡಿ'. ಹೆದೆಯೇರಿಸಿದ ಬಿಲ್ಲನ್ನು ಒಮ್ಮೆ ಠೇಂಕಾರ ಮಾಡುತ್ತಲೆ, ಅದರ ದನಿ, ಶೂರರಾದ ಶತ್ರು ರಾಜರಿಗೆ ಸಿಡಿಲು ಬಡಿದಂತಾಗಿ ಅವರು ತತ್ತರಿಸಿ ಕೆಳಕ್ಕೆ ಬೀಳುತ್ತಿದ್ದರು. ಇನ್ನು ಅವನು ಕತ್ತರಿಸಿ ಕತ್ತರಿಸಿ ಕೊಡುತ್ತಿದ್ದ ಚಿನ್ನದ ಚೂರುಗಳು ಬುಧಮಾಗಧ ವಂದಿ ಜನಗಳ ಬಡತನವನ್ನು ಕಡಿದು ಹಾಕುತ್ತಿತ್ತು. ಆದ್ದರಿಂದ ಕರ್ಣ ಹೇಳುತ್ತಿದ್ದ 'ನನ್ನನ್ನು ಪ್ರತಿಭಟಿಸದೆ ಓಡಿರಿ ; ಅಥವಾ ಸಹಾಯ ಬೇಕಾದವರು ಜೇಡಿರಿ' ಎಂದು.

ಹೀಗೆ ಉದಿತೋದಿತನಾಗುತ್ತಿದ್ದ ಕರ್ಣನನ್ನು ಕಂಡು ದೇವೇಂದ್ರನಿಗೆ ದಿಗಿಲಾಯಿತಂತೆ, ಮುಂದೆ ತನ್ನ ಮಗನಾದ ಅರ್ಜುನನ ಗತಿಯೇನೆಂದು. ಆತನು ವಟುವೇಷದಿಂದ ಕರ್ಣನಲ್ಲಿಗೆ ಬಂದು ಆತನ ಸಹಜ ಕವಚ ಕುಂಡಲಗಳನ್ನು ಜೇಡಿದನಂತೆ. ಕವಿ ಹೇಳುತ್ತಾನೆ—

ಎಂದುಂ ಪೋಗೆಂದನೆ ಮಾ
ಣೆಂದನೆ ಪೆಱತೊಂದನೀವೆನೆಂದನೆ ನೊಂದಃ
ಎಂದನೆ ಸೆರಗಿಲ್ಲದೆ ಪಿಡಿ
ಯೆಂದಸಿದೇಂ ಕಲಿಯೊ ಚಾಗಿಯೋ ರಾಧೇಯಂ

ರಾಧೆಯ ಮಗನಾದ ಕರ್ಣ ಎಂದೆಂದಿಗೂ 'ಹೋಗು' ಎಂದನೆ ? 'ಇಲ್ಲ' ಎಂದನೆ ? 'ಜೇರೊಂದನ್ನು ಕೊಡುತ್ತೇನೆ' ಎಂದನೆ ? ಅಸದೃಶ ರೀತಿಯಲ್ಲಿ 'ತಗೊ' ಎಂದ. ಆತನು ಇನ್ನೆಂತಹ ಕಲಿಯೋ, ತ್ಯಾಗಿಯೋ! 'ತನ್ನ ಸಹಜ ಕವಚಮಂ ನೆತ್ತರ್ ಪನಪನ ಪನಿಯೆ ತಿದಿಯುಗಿವಂತುಗಿದು ಕೊಟ್ಟನ್' ರಕ್ತವು ದಬದಬ ಸುರಿಯುತ್ತಿದ್ದರೂ ಲಕ್ಷಿಸದೆ ಸತ್ತ ಪ್ರಾಣಿಯ ಚರ್ಮವನ್ನು ಸುಲಿಯುವಂತೆ ತನ್ನ ಸಹಜ ಕವಚವನ್ನು ಸುಲಿದುಕೊಟ್ಟನಂತೆ !

ಪಂಪಕವಿಯ ಮಾತುಗಳಲ್ಲಿ ಕಾಣಬರುವ ಓಜಸ್ಸು ತೇಜಸ್ಸುಗಳು ಅತ್ತ ಇರಲಿ, ಆತನ ಸಂಗ್ರಹಶಕ್ತಿಯನ್ನು ಕಂಡರೆ ಅತ್ಯಾಶ್ಚರ್ಯವಾಗು

ತ್ತದೆ. ಆತನ ಈ ಸಂಗ್ರಹ ಗುಣ ಸೂತ್ರಕಾರನ ಕೃಪಣತೆಯಲ್ಲ; ಧ್ವನಿ ಶಕ್ತಿಯ ದ್ಯೋತಕ. ಇತರರು ಹತ್ತು ಕಟ್ಟುವ ಕಡೆ ಈತನೊಂದು ಮುತ್ತು ಕಟ್ಟುತ್ತಾನೆ. ಮಹಾಕವಿಯಾದ ಈತನು ಅದೆಂತಹ ಸಂಯಮಿಯಾಗಿದ್ದಾನೆ! ನಾಲ್ಕು ಸಾಲಿನ ಒಂದು ಗದ್ಯ, ಮೂರು ಸಣ್ಣ ಕಂದ ಪದ್ಯಗಳಲ್ಲಿ ಈ ಸನ್ನಿವೇಶವನ್ನೆಲ್ಲ ಮುಗಿಸಿಬಿಟ್ಟಿದ್ದಾನೆ. ಕರ್ಣನು ಪರಶುರಾಮರಲ್ಲಿ ವಿದ್ಯಾಭ್ಯಾಸಕ್ಕಾಗಿ ಹೋಗಿ, ಶಾಪಗ್ರಸ್ತನಾದ ಸನ್ನಿವೇಶವನ್ನೂ ಒಂದು ಸಣ್ಣ ಗದ್ಯ ಒಂದು ಸಣ್ಣ ಪದ್ಯ, ಮುಂದೊಂದು ಸಣ್ಣ ಗದ್ಯದ ಭಾಗ—ಇಷ್ಟರಲ್ಲಿ ಮುಗಿಸಿಬಿಟ್ಟಿದ್ದಾನೆ. ಪರಶುರಾಮನಲ್ಲಿ ಧನುರ್ವಿದ್ಯಾ ಪಾರಂಗತನಾದನಂತೆ. ಒಂದು ದಿನ ಗುರು ಇವನ ತೊಡೆಯ ಮೇಲೆ ಮಲಗಿರುವಾಗ ಇದ್ರನು ಮೋಸದಿಂದ ಕಳುಹಿಸಿದ ವಜ್ರ ಕೀಟಗಳೆರಡು ಕರ್ಣನ ಎರಡು ತೊಡೆಗಳನ್ನೂ 'ಉಳಿಯೊಳೂರಿ ಕೊಡಂತಿಯೊಳ್ ಬೆಟ್ಟಿದಂತತ್ತಮಿತ್ತಮುರ್ಚಿಪೋಗೆಯುಮದನಱಿಯದಂತೆ ಗುರುಗೆ ನಿದ್ರಾಭಿಘಾತಮಕ್ಕುಮೆಂದು ತಲೆಯನುಗುರಿಸುತ್ತುಮಿರೆಯಿರೆ' (ಉಳಿಯನ್ನು ಒತ್ತಿ ಇಟ್ಟು ಕೊಡತಿಯಿಂದ ಹೊಡೆದ ಹಾಗೆ ಆ ಹುಳುಗಳು ಕೊರೆದುಕೊಂಡು ಹೋಗಲು, ಗುರುಗೆ ನಿದ್ರಾಭಂಗವಾಗುವುದೆಂದು ಸಹಿಸುತ್ತಾ ತಲೆಯನ್ನು ಕೆರೆದುಕೊಳ್ಳುತ್ತಿರಲು,) ಸುರಿದ ನೆತ್ತರಿನಿಂದ ಗುರುವಿನ ಜಟೆ ನೆನೆದು ಆತನಿಗೆ ಎಚ್ಚರವಾಯಿತು. ಆತ ನೋಡಿದ. ಆತನಿಗೆ ಅರ್ಥವಾಯಿತು. 'ಈ ಧೈರ್ಯಂ ಕ್ಷತ್ರಿಯಂಗಲ್ಲದಾಗದು.' ಎಂದು ಹೇಳಿ, ಬ್ರಾಹ್ಮಣನೆಂದು ಹೇಳಿಕೊಂಡು ತನ್ನ ಶಿಷ್ಯನಾಗಿದ್ದ ಕರ್ಣನಿಗೆ ಶಾಪವನ್ನು ಕೊಟ್ಟ. ಎಂತಹ ನಿಶ್ಚಲ ಗುರುಭಕ್ತಿಗೆ ಯಾವ ಫಲ! ಇದಾವ ನ್ಯಾಯ? ಇದೆಂತಹ ದುರದೃಷ್ಟ!

ಕರ್ಣನು ದುರ್ಯೋಧನನ ಗೆಳೆಯನಾಗುವಂತೆ ಹೂಡಿದ ಸಂಚೂ ವಿಧಿಯ ಕೃತ್ರಿಮವೇ. ಪಾಂಡವ ಕೌರವರು ಬೆಳೆದು ದೊಡ್ಡವರಾಗಿ ದ್ರೋಣರಲ್ಲಿ ವಿದ್ಯಾಭ್ಯಾಸ ಮಾಡಿ ಮುಗಿಸಿದ ದುರ್ದಿನ. ಅಂದು ಆ ಕ್ಷತ್ರಿಯ ಬಾಲಕರ ಪರೀಕ್ಷೆ ನಡೆಯುತ್ತಿದೆ. ಎಲ್ಲರೂ ತಂತಮ್ಮ ವಿದ್ಯಾಚಾತುರ್ಯವನ್ನು ತೋರಿಸಿ ಜನರ ಮೆಚ್ಚಿಗೆಯನ್ನು ಗಳಿಸಿದಮೇಲೆ ಅರ್ಜುನನು ತನ್ನ ಅದ್ವಿತೀಯವಾದ ಬಿಲ್ವಿದ್ಯೆಯಿಂದ ಜನರನ್ನು ಬೆರಗುಗೊಳಿಸಿದನು.

ಅದನ್ನು ಕಂಡು 'ದುರ್ಯೋಧನನ ಮೊಗಂ ತಲೆವಱದ ಗಂಟಿಂ ಕಿಱಿದಾಗೆ' ದುರ್ಯೋಧನನ ಮುಖ ತಲೆಗೂದಲ ಗಂಟಿಗಿಂತಲೂ ಚಿಕ್ಕದಾಯಿತಂತೆ! ಆಗ

ತೊಳಗುವ ತೇಜಂ, ತೊಳ ತೊಳ
ತೊಳಗುವ ದಿವ್ಯಾಸ್ತ್ರಮಮರ್ದ ಕೋದಂಡಮುಮಂ
ಗೊಳಸೆ, ಮನಂಗೊಳಿಸೆ, ಭರಂ
ಗೊಳಿಸೆ, ಸಭಾಸದರನುೞಿದೆ ಕರ್ಣಂ ಬಂದಂ ||

ಒಳ್ಳೆಯ ತೇಜಸ್ಸು, ಥಳಥಳ ಹೊಳೆಯುವ ದಿವ್ಯಾಸ್ತ್ರ ಸಹಿತವಾದ ಬಿಲ್ಲು, ನೋಡಿದರೆ ಗೌರವ, ಪ್ರೀತಿ, ಭಯಗಳು ಏಕಕಾಲದಲ್ಲಿ ಹುಟ್ಟು ವಂತಹ ಆಕೃತಿ, ಇವುಗಳನ್ನುಳ್ಳ ಕರ್ಣ ಅಲ್ಲಿದ್ದ ಸಭಾಸದರನ್ನು ಸ್ವಲ್ಪವೂ ಲಕ್ಷ್ಯಮಾಡದೆ ರಂಗಸ್ಥಳವನ್ನು ಪ್ರವೇಶಿಸಿ, ದ್ರೋಣರಿಗೆ ನಮಸ್ಕರಿಸಿದ ವನೇ ತನ್ನ ಶರಪರಿಣತಿಯನ್ನು ಪ್ರದರ್ಶಿಸಿದನು. ಅಷ್ಟೇ ಅಲ್ಲ, ಅರ್ಜುನನ ನೊಡನೆ ಯುದ್ಧಮಾಡಿ ತನ್ನ ಶ್ರೇಷ್ಠತೆಯನ್ನು ಸ್ಥಾಪಿಸುವುದಕ್ಕೂ ಆತ ಸಿದ್ಧನಾದನು. ಆಗ ದ್ರೋಣ ಕೃಪರು ಅವನ ಜಾತಿಯನ್ನೆತ್ತಿ ಹೀಯಾಳಿ ಸಿದರು. ತಾನು ಜಿಸ್ತನೆಂದು ಭಾವಿಸಿದ್ದ ಕರ್ಣ 'ಪಂದೆಯಂ ಪಾವಡರ್ದಂತೆ' (ಹೇಡಿಯಮೇಲೆ ಹಾವು ಹತ್ತಿದಂತೆ) ಬೆದರಿ ಬೆವೆತುಹೋದನು. ಆಗ ದುರ್ಯೋಧನ ಮುಂದೆ ಬಂದು

ಕುಲಮೆಂಬುದುಂಟೆ ಬೀರಮೆ
ಕುಲಮಲ್ಲದೆ ಕುಲಮನಿಂತು ಪಿಕ್ಕುವಿರಿಂ ಪೇ
ಳೊಲಿದಲ್ಲಿ ಪುಟ್ಟಿ ಬೆಳೆದಿರೆ
ಕುಲಮಿರ್ದುದೆ ಕೊಡದೊಳಂ ಶರಸ್ತಂಭದೊಳಂ

ಶೌರ್ಯವೇ ಕುಲವಲ್ಲದೆ ಬೇರೆ ಕುಲವೆಲ್ಲಿಯದು? ಹೀಗೆ ಕುಲವನ್ನು ಹೆಕ್ಕುವುದಕ್ಕೆ ಹೋಗಬೇಡಿ. ನೀವು ಎಲ್ಲಿ ಹುಟ್ಟಿದಿರೆಂಬುದನ್ನು ಸ್ವಲ್ಪ ಆಲೋಚಿಸಿ. ಕೊಡದಲ್ಲಿ ಅಥವಾ ಬತ್ತೀಕೆಯಲ್ಲಿ ಯಾವ ಕುಲವಿತ್ತು? ಎಂದು ಗದರಿಸಿದನು.

ಕೌರವ ರಾಜಕುಮಾರನ ಈ ಅಬ್ಬರಕ್ಕೆ ಕೊಡದಲ್ಲಿ ಹುಟ್ಟಿದ ದ್ರೋಣನೂ ಶರಸ್ತಂಭದಲ್ಲಿ ಹುಟ್ಟಿದ ಕೃಪನೂ ತಣ್ಣಗಾದರು. ಕರ್ಣನ

ಹೊಟ್ಟೆಯುರಿ ತಣ್ಣಗಾಗುವಂತೆ ದುರ್ಯೋಧನನು ಆತನನ್ನು ಅಂಗ ರಾಜ್ಯದ ಪಟ್ಟಾಭಿಷಿಕ್ತನನ್ನಾಗಿ ಮಾಡಿ, ಆತನನ್ನು ಕುರಿತು

ಪೊಡಮಡುವರ್ ಜೀಯೆಂಬರ್
ಕುಡು ದಯೆಗೆಯ್ಯೆಂ ಪ್ರಸಾದಮೆಂಬಿವು ಪೆಱರೊಳ್
ನಡೆಗೆಮ್ಮ ನಿನ್ನಯೆಡೆಯೊಳ್
ನಡೆಯುಲ್ವೇಡೆನಗೆ ಗೆಳೆಯನೈ ರಾಧೇಯ.

ಉಳಿದವರು ನನಗೆ ಅಡ್ಡಬೀಳುತ್ತಾರೆ, 'ಮಹಾಸ್ವಾಮಿ' ಎಂದು ಸಂಬೋಧಿಸುತ್ತಾರೆ, 'ದಯಪಾಲಿಸಿ, ಕರುಣಿಸಿ, ಮಹಾಪ್ರಸಾದ' ಎಂದು ಭಯಭಕ್ತಿಯಿಂದ ಮಾತನಾಡುತ್ತಾರೆ. ಆದರೆ ನನ್ನ ನಿನ್ನ ಪರಸ್ಪರ ಸಂಬಂಧ ದಲ್ಲಿ ಇವುಗಳೆಲ್ಲಾ ಆಗತ್ಯವಿಲ್ಲ. ಸ್ವಾಮಿ ಭೃತ್ಯ ಸಂಬಂಧವಾದ ಈ ಗೌರವಗಳನ್ನು ನೀನು ನನಗೆ ತೋರಿಸಬೇಕಾಗಿಲ್ಲ. ನೀನು ನನ್ನ ಗೆಳೆಯ ಎಂದು ಹೇಳಿದನು.

ಅಂದಿನಿಂದ ಕರ್ಣ ದುರ್ಯೋಧನರು ಹಾಲು ನೀರಿನಂತೆ ಬೆರೆತು ಹೋದರು. ಇವರಿಬ್ಬರ ಗೆಳೆತನ ಎಷ್ಟು ಹೃದ್ಯವಾಗಿದೆಯೆಂದರೆ ಪಂಪಕವಿ ತನ್ನ ಸ್ವಾಮಿಯಾದ ಅರಿಕೇಸರಿಯೊಡನೆ ತನಗೆ ಇದ್ದ ಗೆಳೆತನದ ಸ್ವಾನುಭವವನ್ನೇ ಇಲ್ಲಿ ಬರೆಯುತ್ತಿರುವನೇನೊ ಎನ್ನಿಸುತ್ತದೆ.

ಪಂಪಕವಿ ವ್ಯಾಸಭಾರತವನ್ನು 'ಮೆಯ್ಗೆಡಲೀಯದೆ' ಸಂಗ್ರಹವಾಗಿ ಕನ್ನಡಕ್ಕೆ ತಂದುಕೊಟ್ಟ. ಆದರೂ ಆತನ ಕೃತಿ, ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರು ಹೇಳುವಂತೆ 'ಕನ್ನಡದ ಕನ್ನಡಿಯಲ್ಲಿ ಚಿಕ್ಕದಾಗಿ ಬಿದ್ದ ವ್ಯಾಸ ಭಾರತದ ನೆರಳಲ್ಲ' ಎಂಬ ಮಾತು ಅರ್ಥವತ್ತಾದುದು. ಮೂಲದ ಕಥೆಯಲ್ಲಿ ಆತ ಮಾಡಿಕೊಂಡಿರುವ ಸಣ್ಣ ಪುಟ್ಟ ವ್ಯತ್ಯಾಸಗಳು ಅದೆಷ್ಟು ಅರ್ಥ ಪುಷ್ಟಿಯನ್ನು ಕೊಡುತ್ತವೆ! ಮೂಲದ ಕಥೆಯೇ ಆದರೂ ಹೇಳುವ ಮಾತಿನಲ್ಲಿ, ರೀತಿಯಲ್ಲಿ ಅದೆಷ್ಟು ನೂತನತೆ ಕಂಡುಬರುತ್ತದೆ! ವ್ಯಾಸಭಾರತ ಒಂದು 'ಗೊಮ್ಮಟ'ನಾದರೆ ಪಂಪಭಾರತ ಉಜ್ವಲವಾದರೂ ಕಲಾ ಪ್ರಪೂರ್ಣವಾಗಿರುವ ಬೆಟ್ಟದ ಚಾಮುಂಡಿ. ಮಹಾಭಾರತದಲ್ಲಿ ಶ್ರೀಕೃಷ್ಣನು ಪಾಂಡವರ ರಾಯಭಾರಿಯಾಗಿ ಕೌರವನ ಬಳಿಗೆ ಹೋಗಿ, ಅರ್ಧ ರಾಜ್ಯವನ್ನು ಬೇಡಿ, ವಿಫಲನಾಗಿ ಹಿಂದಿರುಗಿದ ಭಾಗ ಅತ್ಯಂತ

ರಸವತ್ತಾದುದು. ಅಲ್ಲಿ ಕರ್ಣನ ಪಾತ್ರ ಪುಟವಿಟ್ಟ ಚಿನ್ನದಂತೆ ತೊಳಗಿ ಬೆಳಗುತ್ತದೆ. ಶ್ರೀಕೃಷ್ಣನು ಕರ್ಣನ ಜನ್ಮ ವೃತ್ತಾಂತವನ್ನು ಅವನಿಗೆ ತಿಳಿಸಿ, ಪಾಂಡವರ ಪಕ್ಷವನ್ನು ಸೇರುವಂತೆ ಪ್ರೇರೇಪಿಸುತ್ತಾನೆ. ಆದರೆ ಕರ್ಣ ಅದಕ್ಕೆ ಒಪ್ಪದೆ ತನ್ನ ಘನತೆಯನ್ನು ಮೆರೆಯುತ್ತಾನೆ. ಪಂಪಕವಿ ರಾಜಕೀಯ ನಿಪುಣನಲ್ಲವೆ? ಆದ್ದರಿಂದ ಆತನು ಈ ಸನ್ನಿವೇಶಕ್ಕೆ ತನ್ನ ರಾಜಕೀಯ ಜಾಣ್ಮೆಯನ್ನು ಸೇರಿಸಿ ಕರ್ಣನ ಪಾತ್ರವನ್ನು ಮಹೋನ್ನತಿಗೆ ಏರಿಸುತ್ತಾನೆ. ಶ್ರೀಕೃಷ್ಣ ಕರ್ಣನಿಗೆ ಕೌರವನ ಪಕ್ಷವನ್ನು ತ್ಯಜಿಸ ಬೇಕೆಂಬುದಕ್ಕೆ, ಬೇರಾವ ಭಾರತದಲ್ಲಿಯೂ ಕಾಣಬರದ, ಹೊಸದೊಂದು ಕಾರಣವನ್ನು ಕೊಡುತ್ತಾನೆ. ಕರ್ಣನೊಡನೆ ಆತನು ಮಾತು ಪ್ರಾರಂಭಿಸುವ ರೀತಿಯೆ ಆತನ ರಾಜನೀತಿ ಚತುರತೆಗೆ ಒಂದು ಉದಾಹರಣೆ—

ಭೇದಿಸಲೆಂದೆ ದಲ್ ನುಡಿದರೆನ್ನದಿರೊಯ್ಯನೆ ಕೇಳ ಕರ್ಣ ನಿ
ನ್ನಾದಿಯೊಳಬ್ಬೆ ಕೊಂತಿ, ನಿನಗಮ್ಮನಹರ್ಪತಿ, ಪಾಂಡುನಂದನರ್
ಸೋದರರೆಯ್ದೆ ಮಯ್ದುನನೆ ನಾಂ, ಪೆಱತೇಂ ಪಡೆಮಾತೊ ನಿನ್ನದೀ
ಮೇದಿನಿ, ಪಟ್ಟಮುಂ ನಿನತೆ, ನೀನಿರೆ ಮತ್ತೆ ಪೆಱರ್ ನರೇಂದ್ರರೆ ||

'ಕಳ್ಳನ ಮನಸ್ಸು ಹುಳ್ಳು ಹುಳ್ಳಗೆ' ಎಂಬ ಗಾದೆಯಂತೆ, ಭೇದೋಪಾಯಕ್ಕಾಗಿ ಬಂದಿರುವ ಕೃಷ್ಣ ಪ್ರಾರಂಭದಲ್ಲಿಯೆ 'ಅಯ್ಯಾ, ಭೇದಿಸುವುದಕ್ಕೆಂದೇ ಹೀಗೆ ನುಡಿಯುತ್ತೇನೆಂದು ತಿಳಿಯಬೇಡ. ಶಾಂತಿಯಿಂದ ಕೇಳು–ನಿನ್ನನ್ನು ಹೆತ್ತ ತಾಯಿ ಕೊಂತಿ; ಸೂರ್ಯ ನಿನ್ನ ತಂದೆ; ಪಾಂಡು ಪುತ್ರರು ನಿನ್ನ ಸೋದರರು; ನಾನು ನಿನ್ನ ಮೈಯ್ದುನ; ಮಾತಾಡಿ ಪ್ರಯೋಜನವೇನು? ಎಲ್ಲರಿಗೂ ಹಿರಿಯವಾದ ನಿನ್ನದೇ ಈ ರಾಜ್ಯ, ಈ ಪಟ್ಟ; ನೀನಿರುವಾಗ ಬೇರೆಯವರು ಹೇಗೆ ರಾಜರಾದಾರು?' ಎಂದು ಮಾತಿಗೆ ಪ್ರಾರಂಭಿಸಿ, 'ನೀನು ಪಾಂಡವರ ಹಿರಿಯನೆಂಬುದನ್ನು ದುರ್ಯೋಧನನೂ ಬಲ್ಲ'ನೆನ್ನುತ್ತಾನೆ. ಹಿಂದೆ ದುರ್ಯೋಧನ ಕೌರವರಿಬ್ಬರೂ ಬೇಟೆಗೆಂದು ಅರಣ್ಯಕ್ಕೆ ಹೋಗಿ ಅಲ್ಲಿ ಸತ್ಯಂತಪರೆಂಬ ಋಷಿಗಳ ಆಶ್ರಮಕ್ಕೆ ಹೋದರಂತೆ. ಋಷಿಗಳು ಕರ್ಣನಿಗೆ ಮೊದಲು ಆಸನವಿತ್ತು ಗೌರವಿಸಿದರಂತೆ. ಮಾನಧನನಾದ ಕೌರವ ಇದನ್ನು ಸಹಿಸದೆ ಕರ್ಣನನ್ನು ಅತ್ತ ಕಾರ್ಯಾಂತರವಾಗಿ ಕಳುಹಿಸಿ ಋಷಿಗಳೊಡನೆ 'ಆನಿರೆ ನೀವಿದೇಕೆ ದಯೆಗೆಯ್ದಿರೊ

ಮೀಂಗುಲಿಗಂಗೆ? '—' ನಾನಿರುವಾಗ ಈ ಬೆಸ್ತರವನಿಗೆ ಮೊದಲ ಪುರಸ್ಕಾರವೆ?' ಎಂದು ಕೇಳಲು, ಅವರು ಕರ್ಣನ ಜನ್ಮವೃತ್ತಾಂತವನ್ನು ತಿಳಿಸಿದರಂತೆ. ಇದನ್ನು ಕೇಳಿ, ದುರ್ಯೋಧನ 'ಪಾಟಿಸುವೆನೊಯ್ಯನೆ ಮುಳ್ಳೊಳ್ ಮುಳ್ಳನ್' ಎಂದು ನಿಶ್ಚಯಿಸಿದನಂತೆ! ಕೃಷ್ಣನ ಈ ಮಾತುಗಳು ಎಷ್ಟು ಮರ್ಮಭೇದಕವಾಗಿವೆ! ಕರ್ಣನಂತಹ ಮಹಾನುಭಾವನಲ್ಲದಿದ್ದರೆ ಶ್ರೀ ಕೃಷ್ಣನ ಈ ಮಾರ್ಮಿಕವಾದ ನುಡಿಗಳಿಗೆ ಬಲಿ ಬೀಳಬೇಕಾಗುತ್ತಿತ್ತು. ಕರ್ಣ ಬಲಿ ಬೀಳಲಿಲ್ಲ. ಆತನ ಕಣ್ಣುಗಳಲ್ಲಿ ನೀರು ತುಂಬಿತು. 'ನಣ್ಪಿನ ನೆವದಿಂದೆ ಪಾಂಡವರನಾನೊಳಪೊಕ್ಕೊಡೆ ನೀವೆ ಪೇಳಿರೆ?' ನನ್ನ ನೆಂಟರೆಂದು ಪಾಂಡವರನ್ನು ಸೇರಿಕೊಂಡರೆ ನೀವು ಕೂಡ ನನ್ನನ್ನು ಕಂಡು ಹೇಸುವುದಿಲ್ಲವೆ? ಎಂದು ಕೇಳುತ್ತಾನೆ. ಕೃಷ್ಣ ಕೌರವನ ವಿಶ್ವಾಸಘಾತುಕತನಕ್ಕೆ ಒಂದು ಉದಾಹರಣೆಯನ್ನು ಕೊಟ್ಟರೆ ಕರ್ಣ ಕೌರವನ ಅನನ್ಯ ಸ್ನೇಹಕ್ಕೆ ಒಂದು ಉದಾಹರಣೆಯನ್ನು ಕೊಡುತ್ತಾನೆ-

> ನೆತ್ತಮನಾಡೆ ಭಾನುಮತಿ ಸೋಲ್ತೊಡೆ, ಸೋಲಮನೀವುದೆಂದು ಕಾ
> ಡುತ್ತಿರೆ, ಲಂಬಣಂ ಪಱಿಯೆ, ಮುತ್ತಿನ ಕೇಡನೆ ನೋಡಿ ನೋಡಿ ಬ
> ಳ್ಕುತ್ತಿರೆ. ಯೇವಮಿಲ್ಲದಿವನಾಯ್ವುದೊ ತಪ್ಪದೆ ಪೇಳಿಮೆಂಬ ಭೂ
> ಪೋತ್ತಮನಂ ಬಿಸುಟ್ಟಿರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ?

ಒಂದು ದಿನ ಕರ್ಣನು ದುರ್ಯೋಧನನ ಅಂತಃಪುರದಲ್ಲಿ ಭಾನುಮತಿಯೊಡನೆ ಪಗಡೆಯಾಡುತ್ತಿದ್ದಾನೆ. ದುರ್ಯೋಧನ ಅಲ್ಲಿ ವೀಕ್ಷಕನಂತೆ ಆಗಿ ಕುಳಿತಿದ್ದಾನೆ. ಭಾನುಮತಿ ಸೋತಳು. (ಸೋತವರು ಗೆದ್ದವರಿಗೆ ತಮ್ಮ ಮುತ್ತಿನಹಾರವನ್ನು ಕೊಡಬೇಕೆಂದು ಪಣ ಒಡ್ಡಿದ್ದರೆಂದು ತೋರುತ್ತದೆ.) ಕರ್ಣ ತನಗೆ ಬರಬೇಕಾದಾಗ ಪಣವನ್ನು ಕೊಡೆಂದು (ರಾಣಿಯ ಕತ್ತಿನಲ್ಲಿದ್ದ ಹಾರಕ್ಕೆ ಕೈಹಾಕಿ) ಕಾಡಿದ್ದಾನೆ. ಮುತ್ತಿನಹಾರ ಹರಿಯಿತು. (ಗೆಲುವಿನ ಉತ್ಸಾಹದಲ್ಲಿ ಮೈಮರೆತಿದ್ದ ಕರ್ಣನಿಗೆ ಆಗ ಎಚ್ಚರವಾಯಿತೆಂದು ತೋರುತ್ತದೆ.) ಅದನ್ನು ಕಂಡು ಕರ್ಣ ಭಯದಿಂದ ನಡುಗುತ್ತ ನಿಂತ. ಅದನ್ನು ನೋಡಿದ ದುರ್ಯೋಧನ ಸ್ವಲ್ಪವೂ ಚಲಚಿತ್ತನಾಗದೆ. 'ಅಯ್ಯಾ. ಮುತ್ತುಗಳನ್ನು ಆಯ್ದುಕೊಡಲೆ?' ಎಂದು ಅದೊಂದು ಆಟಾತುರ್ಯವೇ ಅಲ್ಲವೇನೊ ಎಂಬಂತೆ ಕೇಳಿದ. ಅಂತಹ ರಾಜಶ್ರೇಷ್ಠನನ್ನು

ತ್ಯಜಿಸಿ. ನಿಮ್ಮೊಡನೆ ಸೇರಿಕೊಂಡರೆ ನಾನು ನಿಜವಾದ ಜೇಡನಾಗುವುದಿಲ್ಲವೇ?

ಪಂಪನ ಬರೆಹದ ಸ್ವರೂಪಕ್ಕೆ ಮೇಲಿನ ಪದ್ಯ ಒಂದು ಉದಾಹರಣೆ. ಅದೆಷ್ಟು ಸಂಗ್ರಹ ಅವನ ಬರೆಹ, ಅದೆಷ್ಟು ಧ್ವನಿಪೂರ್ಣ! ಕವಿ ಕುವೆಂಪುರವರ ಮಾತಿನಲ್ಲಿ ಹೇಳುವುದಾದರೆ 'ವಿಶೇಷದ ಲವಲೇಶವೂ ಇಲ್ಲದಲ್ಲಿ ಮಹಾಧ್ವನಿ ಸಮುದ್ರ ಅಲ್ಲೋಲಕಲ್ಲೋಲವಾಗಿದೆ. ಮುಳ್ಳಿಂದ ಮುಳ್ಳು ತೆಗೆಯುವಂತೆ ಪಾಂಡವರನ್ನು ಕರ್ಣನಿಂದಲೆ ನಿರ್ಮೂಲ ಮಾಡಿಸಬೇಕೆಂಬ ಸ್ವಾರ್ಥಮೂಲವಾದ ಅಭಿಸಂಧಿ ಮಾತ್ರವಿದ್ದಿದ್ದರೆ ಸ್ನೇಹ ಈ ಆತ್ಮೀಯತೆಯು ಅಂತಃಪುರದ ರಾಜರಾಜೇಶ್ವರಿಯ ಎಡೆಗೆ ಬರಲು ಹೇಗೆ ತಾನೆ ಸಾಧ್ಯವಾಗುತ್ತಿತ್ತು? ರಾಜರಾಣಿಯರ ಸರಸಸಲ್ಲಾಪಗಳನ್ನು ಕರ್ಣ ಕುರುಚಕ್ರವರ್ತಿಯ ಅಂತಃಪುರದಲ್ಲಿದ್ದು ಕೇಳಿ ನೋಡುತ್ತಿದ್ದನೆಂದರೆ ಸಾಕಿತ್ತು, ಅವರಿಬ್ಬರ ಅಗಾಧ ಮೈತ್ರಿಯನ್ನು ಸಾರಿಹೇಳುವುದಕ್ಕೆ. ಆದರೆ ನೆತ್ತವಾಡುವಷ್ಟರ ಮಟ್ಟಿಗೆ ನಿರ್ಮಲ ಮೈತ್ರಿ ಬೆಳೆದಿರಬೇಕಾದರೆ ಆ ಮೈತ್ರಿಗೆ ಕಳಂಕಾರೋಪ ಮಾಡಲು ಸಾಧ್ಯವೇ?'[1] ಶ್ರೀ ಕುವೆಂಪುರವರು ಹೇಳುವಂತೆ "ಏವಮಿಲ್ಲದವನಾಯ್ತುದೊ? ಎಂಬ ದುರ್ಯೋಧನನ ಮಾತು ಅತ್ಯಂತ ಉಚಿತವಾಗಿದೆ. ಇಂಗಿತಜ್ಞನಾದ ಶ್ರೀಕೃಷ್ಣನು 'ಏವಮಿಲ್ಲದೆ' ಎಂಬುದರ ಸಂಪೂರ್ಣಾರ್ಥವನ್ನು ಗ್ರಹಿಸಿ, ಮರುನುಡಿಯದೆ ಹಿಂದುರುಗಿದನು." ನಿಮ್ಮೊಳ್ ಪೊಕ್ಕೊಡೆ ಜೇಡನಲ್ಲೆನೆ? ಎಂಬ ಮಾತಿನ ಮೋಡಿಯನ್ನು ನೋಡಿ. ಇದುವರೆಗೂ ಲೋಕ ಆತನನ್ನು ಜೇಡನೆಂದು ಭಾವಿಸಿತ್ತು. ಈಗ ಅಲ್ಲವೆಂದು ಗೊತ್ತಾಗಿದೆ. ಆದರೆ ಉಂಡ ಮನೆಗೆ ಎರಡು ಬಗೆದು ಆತನ 'ಜೇಡ' ನೆಂಬ ಹೆಸರು ಅನ್ವರ್ಥವಾಗಬೇಕೆ? ಉಹು.

ಕರ್ಣನ ಮಾತುಗಳನ್ನು ಕೇಳಿ. 'ಈ ಮೀನು ತನ್ನ ಬಲೆಗೆ ಬೀಳುವುದಿಲ್ಲ' ಎಂದುಕೊಂಡ ಕೃಷ್ಣ ಹೊರಟು ಹೋದ. ಆತ ಅತ್ತ ಹೋಗುತ್ತಲೇ ಇತ್ತ ಕರ್ಣ ಗುಡುಗುಡು ಕಣ್ಣೀರು ಸುರಿಸುತ್ತಾ ಚಿಂತಾಕ್ರಾಂತನಾಗಿ 'ಸೋದರರನ್ನು ಕೊಲ್ಲುವಂತೆಯೂ ಇಲ್ಲ; ಸ್ವಾಮಿಗೆ ಮೋಸ

---

[1]ಅಭಿವಂದನೆ: 'ಪಂಪನಕರ್ಣ' ಕೆ. ವಿ. ಪುಟ್ಟಪ್ಪ ಪು 357.

ಮಾಡುವಂತೆಯೂ ಇಲ್ಲ. ಆದ್ದರಿಂದ ಮುಂದೆ ಯುದ್ಧ ಒದಗಿದಾಗ ತಾನೆ ಮುಂಚೆ ಯುದ್ಧಮಾಡಿ ತನ್ನ ಆತ್ಮಯಜ್ಞದ ಬಲಿದಾನ ಮಾಡಿಕೊಳ್ಳ ಬೇಕೆಂದು ನಿಶ್ಚಯಿಸುತ್ತಾನೆ. ಆದರೆ ಯುದ್ಧ ಪ್ರಾರಂಭವಾದಾಗ ಅದಕ್ಕೆ ಅವಕಾಶವಾಗುವುದಿಲ್ಲ; ಭೀಷ್ಮರಿಗೆ ಪಟ್ಟಗಟ್ಟಬೇಕೆಂದು ನಿಶ್ಚಯವಾಗು ತ್ತದೆ. ಕರ್ಣನ ಮನೋವೇದನೆ ಭೀಷ್ಮರ ತಿರಸ್ಕಾರರೂಪದಲ್ಲಿ ಕಾಣಿಸಿ ಕೊಳ್ಳುತ್ತದೆ. ಆತನು ಕೌರವನೊಡನೆ.

ಕಟ್ಟಿದ ಪಟ್ಟಮೆ ಸರವಿಗೆ
ನೆಟ್ಟನೆ ದೂರೆ; ಪಿಡಿದ ಬಿಲ್ಲೆ ದಂಟಿಗೆಣೆ ಕ
ಣ್ಗೆಟ್ಟ ಮುದುಪಂಗೆ; ಪಗೆವರ
ಸಿಟ್ಟೆಲ್ಸಂ ಮುರಿವೊಡೆನಗೆ ಪಟ್ಟಂಗಟ್ಟಾ.

ಅಯ್ಯಾ, ಈ ಮುದುಕನಿಗೆ ಕಟ್ಟಿದ ಸೇನಾಪತಿ ಪಟ್ಟ ಒಂದು ಬಾಳೆಯ ಪಟ್ಟಿಗೆ ಸಮ; ಆತ ಹಿಡಿದ ಬಿಲ್ಲು ಸಪ್ಪೆ ದಂಟಿಗೆ ಸಮಾನ: ಕಣ್ಣು ಕಾಣದ ಈ ಮುದುಕನಿಗೇಕೆ ಪಟ್ಟ? ಶತ್ರುಗಳ ಎಲುಬನ್ನು ಪುಡಿಪುಡಿ ಮಾಡ ಬೇಕೆಂಬ ಆಶೆಯಿದ್ದರೆ ನನಗೆ ಪಟ್ಟಕಟ್ಟು. 'ಕುಲವೃದ್ಧರನಾಜಿಗುಯ್ದು ಕೆಮ್ಮನೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ ಸುಯೋ ಧನಾ' (ಈ ಮುದುಕರನ್ನು ಯುದ್ಧರಂಗಕ್ಕೆ ಕರೆದೊಯ್ದು ಶತ್ರುಗಳ ಹಾಸ್ಯಕ್ಕೆ ಒಳಗಾದರೆ ಏನು ಭಾಗ್ಯ ಬಂದ ಹಾಗಾಯಿತು.) ಎಂದು ಕೇಳುತ್ತಾನೆ. ಭೀಷ್ಮರು ಪಾಂಡವಪಕ್ಷಪಾತಿಗಳೆಂಬ, ಹಣ್ಣು ಹಣ್ಣು ಮುದುಕರೆಂಬ ಕಾರಣದಿಂದ ಕರ್ಣನಲ್ಲಿ ಮೂಡಿದ್ದ ತಿರಸ್ಕಾರ ಇದರಲ್ಲಿ ಕಂಡು ಬರಬಹುದಾದರೂ, ತನ್ನ ಜನ್ಮವೃತ್ತಾಂತದಿಂದ ಮೂಡಿದ್ದ ಒಳ ತೋಟಿಯೂ ಇದಕ್ಕೆ ಕಾರಣವಾಗಿರಬಹುದು.

ಭೀಷ್ಮರನ್ನು ಮುದುಕರೆಂದು ಕರ್ಣ ಹೇಳಿದ ಮಾತು ಹದಿನಾರಾಣೆ ನಿಜ. ಪಂಪಕವಿ ಕೊಟ್ಟಿರುವ ಭೀಷ್ಮರ ಚಿತ್ರವನ್ನು ನೋಡಿ 'ಜೋಲ್ದ ಪುರ್ವನೆತ್ತಿಕಟ್ಟಿದ ಲಲಾಟಪಟ್ಟದೊಳ್ ಇಟ್ಟಳವೊಪ್ಪುವ ಬೀರವಟ್ಟಮುಂ' ಕೆಳಕ್ಕೆ ಕುಸಿದು ಜೋಲು ಬಿದ್ದಿರುವ ಹುಬ್ಬುಗಳನ್ನು ಮೇಲಕ್ಕೆ ಎತ್ತಿಕಟ್ಟಿ ದ್ದಾರೆ. ಅಂತಹ ಹಣೆಯ ಮೇಲೆ ವೀರಪಟ್ಟವಿದೆ. ಹೀಗೆ ಹುಬ್ಬುಗಳು ಜೋಲುಬಿದ್ದು ಕಣ್ಣನ್ನು ಮುಚ್ಚಿಹಾಕುವಷ್ಟು ಮುದುಕನಾಗಿ ಹೋಗಿ

ದ್ದಾನೆ, ಭೀಷ್ಮ. ಆದರೇನು? ದ್ರೋಣರು ಹೇಳುವಂತೆ ಭೀಷ್ಮರ ಮುಪ್ಪು, ಸಿಂಹದ ಮುಪ್ಪು ಮುಪ್ಪೆ? ಭೂಮಿ ತೂಕದ ಭೀಷ್ಮ ಕರ್ಣನ ಮಾತುಗಳಿಂದ ಕುಪಿತನಾಗಲಿಲ್ಲ. 'ಮುದುಕರ ಬಿಲ್‌ಬಲ್ಮೆ ಅಣ್ಣನೆಂದಂ ತುಟಿ' ಎಂದು ಹಸನ್ಮುಖದಿಂದ ನುಡಿದು ಗಂಭೀರವಾದ ದನಿಯಲ್ಲಿ ತನ್ನ ಪರಾಕ್ರಮವನ್ನು ಹೇಳಿಕೊಳ್ಳುತ್ತಾನೆ.

ಪಿಡಿಯೆಂ ಚಕ್ರಮನೆಂಬ ಚಕ್ರಿಯನಿಳಾ ಚಕ್ರಂ ಭಯಂಗೊಳ್ವಿನಂ
ಪಿಡಿಯಿಪ್ಪೆಂ ಕರಚಕ್ರಮಂ, ನರರಥಂ ತೂಳ್ದಾ ಕುರುಕ್ಷೇತ್ರದಿಂ
ಪಡುವೆಣ್ಗಾವುದ ಪೋಗೆ ಪೋಗಡಿಸುವೆಂ ನಿಚ್ಚಂ ಧರಾಧೀಶರಂ
ಪಡಲಿಟ್ಟಂತಿರೆ ಮಾಳ್ಪೆನೋವದೆ ಪಯಿಂಛಾಸಿರ್ವರಂ ಯುದ್ಧ
ದೊಳ್.

'ಚಕ್ರವನ್ನು ಹಿಡಿಯುವುದಿಲ್ಲ' ಎಂದು ಪ್ರತಿಜ್ಞೆಮಾಡಿರುವ ಶ್ರೀಕೃಷ್ಣನು ಲೋಕಕ್ಕೆಲ್ಲಾ ಭೀತಿಯನ್ನು ಉಂಟುಮಾಡುವಂತೆ ಕೈಲಿ ಚಕ್ರವನ್ನು ಹಿಡಿಯುವಂತೆ ಮಾಡುತ್ತೇನೆ. (ಮಹಾನುಭಾವನಾದ ಶ್ರೀಕೃಷ್ಣನು ಪ್ರತಿಜ್ಞೆಗೆ ತಪ್ಪಬೇಕು.) ಅರ್ಜುನನ ರಥ (ಅದರ ಬಾವುಟದಲ್ಲಿ ಹನುಮಂತ, ಸಾರಥಿಯಾಗಿ ಶ್ರೀಕೃಷ್ಣ) ಪಡುವಲ ದಿಕ್ಕಿಗೆ ಎಂಟು ಗಾವುದ ಕೊಚ್ಚಿಕೊಂಡು ಹೋಗುವಂತೆ ಹೊಡೆಯುತ್ತೇನೆ, ದಿನದಿನವೂ ಹತ್ತುಸಾವಿರ ಮಕುಟವರ್ಧನರು ಯುದ್ಧದಲ್ಲಿ ನೆಲಕ್ಕುರುಳುವಂತೆ ಯುದ್ಧಮಾಡುತ್ತೇನೆ.

ಭೀಷ್ಮರು ನುಡಿದಂತೆ ನಡೆದು ಕಡೆಗೆ ಶರಶಯ್ಯೆಯಲ್ಲಿ ಮಲಗಿದರು. 'ಭೀಷ್ಮಾನಂತರಂ ದ್ರೋಣಂ' ಅವರ ಸರದಿ ಮುಗಿದ ಮೇಲೆ ಕರ್ಣ. ಕರ್ಣ ಸೇನಾಪತಿಯಾಗುವ ಮುನ್ನ ಶರಶಯ್ಯೆಯಲ್ಲಿದ್ದ ಭೀಷ್ಮರ ಬಳಿಗೆ ಹೋಗಿ ಅವರ ಪಾದಗಳಿಗೆ ಅಡ್ಡಬಿದ್ದು

ಆಂ ಮಾತಱಿಯದೆ ಮುಳಿದುಂ
ನಿಮ್ಮಡಿಯಂ ನೋಯೆ ನುಡಿದೆನುಱದೇಳಿಸಲೇ
ನೆಮ್ಮಳವೆ? ಮಱೆವುದಾ ಮನ
ದುಮ್ಮಚ್ಚಮನಜ್ಜ ನಿಮ್ಮನೆರೆಯಲೆ ಬಂದೆಂ.

ತಾತ, ನಾನು ಮಾತಾಡಲು ಗೊತ್ತಿಲ್ಲದೆ ನಿಮ್ಮ ಪಾದಕ್ಕೆ ನೋವಾ

ಗುವಂತೆ ಮಾತನಾಡಿದೆ. ತಮ್ಮನ್ನು ಹೀಯಾಳಿಸುವಷ್ಟು ಯೋಗ್ಯತೆ ನನಗಿದೆಯೆ? ನನ್ನ ಆ ಕ್ರೋಧಬುದ್ಧಿಯನ್ನು ಮರೆಯಿರಿ. ನಿಮ್ಮನ್ನು ಕ್ಷಮೆ ಬೇಡುವುದಕ್ಕಾಗಿಯೆ ನಾನೀಗ ಬಂದಿದ್ದೇನೆ—ಎಂದು ಹೇಳಿಕೊಂಡನು. ಆತನ ಈ ವಿನಯವನ್ನು ಕಂಡು ಮಹಾನುಭಾವನಾದ ಭೀಷ್ಮ ಕರಗಿ ಹೋದ. ಕರ್ಣನ ಕಟುನುಡಿಗಳೆಲ್ಲವೂ ಕೌರವನ ಮೇಲಿನ ಸ್ವಾಮಿಭಕ್ತಿಯಿಂದ ಬಂದವುಗಳೆಂದು ಹೇಳಿ, ಅವನನ್ನು ಸಂತೈಸಿ 'ನೀನೆಮಗೆ ಕುಂತಿಯು ಗಾಂಧಾರಿಯು ಮಕ್ಕಳ ಲೆಕ್ಕದೆ ಮೊಮ್ಮನೈ' (ಅಯ್ಯಾ ನೀನೂ ಪಾಂಡವ ಕೌರವರಂತೆ ನಮ್ಮ ಮೊಮ್ಮಗನೇ ಕಣಯ್ಯ) ಎಂದು ಆತನನ್ನು ಸಮಾಧಾನಮಾಡುತ್ತಾನೆ. ಇಬ್ಬರೂ ಪರಸ್ಪರ ಅರಿಯದೆಯೇ 'ಅಜ್ಜ' 'ಮೊಮ್ಮಗ' ಎಂದು ಸಂಭೋಧಿಸುವುದು ಅತ್ಯಂತ ಮನೋಹರವಾಗಿದೆ.

ಕರ್ಣನ ಪಾತ್ರವನ್ನು ಚಿತ್ರರಿಸುತ್ತಿರುವ ಕವಿ ಕಾವ್ಯಸಮಾಧಿಗೆ ಏರಿ ತನ್ನ ನಾಯಕನಾರೆಂಬುದನ್ನೇ ಮರೆತು ಬಿಟ್ಟನೆಂದು ಕಾಣುತ್ತದೆ. ದೀಪ ಆರಿಹೋಗುವ ಮುನ್ನ 'ಫಗ್' ಎಂದು ಉರಿಯುವಂತೆ ಕಡೆಗಾಲದಲ್ಲಿ ಮಹಾಪರಾಕ್ರಮವನ್ನು ಪ್ರದರ್ಶಿಸಿ ಸಾವಿನ್ನಪ್ಪಿದ ಆ ಸೂರ್ಯಪುತ್ರನನ್ನು ಕುರಿತು ಕವಿ.

ನೆನೆಯದಿರಣ್ಣ ಭಾರತದೊಳಂ ಪೆಜಿರಾರುಮನೊಂದೆ ಚಿತ್ತದಿಂ
ನೆನೆವೊಡೆ ಕರ್ಣನಂ ನೆನೆಯ; ಕರ್ಣನೊಳಾರ್ದೊರೆ! ಕರ್ಣನೇಱು, ಕ
ರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನ ಚಾಗವೆಂದು ಕ
ರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ!

ಅಯ್ಯಾ, ಭಾರತದಲ್ಲಿ ನೆನೆಸಿಕೊಳ್ಳುವ ಹಾಗಿದ್ದರೆ ಇನ್ನಾರನ್ನೂ ನೆನಸಿಕೊಳ್ಳಬೇಡಿ; ಒಂದೆ ಮನಸ್ಸಿನಿಂದ ಕರ್ಣನನ್ನು ನೆನೆಸಿಕೊಳ್ಳಿ. ಕರ್ಣನಿಗೆ ಯಾರು ತಾನೆ ಸಮಾನರು? ಕರ್ಣನ ಶೌರ್ಯ, ಕರ್ಣನ ಸತ್ಯ, ಕರ್ಣನ ಸಾಹಸ, ಮಹಾ ಪುರುಷನಾದ ಕರ್ಣನ ತ್ಯಾಗ–ಇತ್ಯಾದಿಗಳು ಜನಜನಿತವಾಗಿರುವುದರಿಂದಲೆ ಭಾರತವು ಕರ್ಣರಸಾಯನವಾಗಿದೆ.

ಹೀಗೆ ಕರ್ಣನ ಪಾತ್ರದಲ್ಲಿ ಗ್ರೀಕ್ ರುದ್ರನಾಟಕಗಳಲ್ಲಿ ಬರುವ ದುರಂತನಾಯಕನ ಗುಣವಿಶೇಷಗಳೆಲ್ಲವೂ ಅಡಕವಾಗಿರುವುದನ್ನು ಕಂಡು ಆಶ್ಚರ್ಯವಾಗುತ್ತದೆ. ಶೌರ್ಯ ಔದಾರ್ಯಾದಿ ಸಕಲ ಸದ್ಗುಣಗಳಿಂದ ಕೂಡಿದ

ಆತ ಧರ್ಮಪರರಾದ ಪಾಂಡವರ ಪ್ರತಿಕಕ್ಷಿಯಾಗಿ ನಿಂತು ವಿಧಿಯ ಮುಸಕಕ್ಕೆ ತುತ್ತಾಗಿ ಹೋದ. ಪಂಪಕವಿ ಹಾಡಿರುವ ಆತನ ಚರಮ ಗೀತೆಯನ್ನು ಕೇಳಿದಾಗ ಹೃದಯ ಕಿವುಚಿದಂತಾಗುತ್ತದೆ; ಕಣ್ಣು ಹನಿ ಗೂಡುತ್ತದೆ; ಜೊತೆಗೆ ವಿಧಿ ಅಥವಾ ಅದೃಷ್ಟದ ದುರ್ದಮ್ಯತೆಯನ್ನು ಕುರಿತು ಭಯವೂ ಆಗುತ್ತದೆ. ಪಂಪಕವಿಯ ಕರ್ಣ ರನ್ನಕವಿಯ ದುರ್ಯೋಧನನಿಗೂ ನಾಗಚಂದ್ರನ ರಾವಣನಿಗೂ ಮಾದರಿಯಾಗಿ ನಿಂತು ಕನ್ನಡ ಸಾಹಿತ್ಯದ ತುಷ್ಟಿ ಪುಷ್ಟಿಗಳಿಗೆ ಸಹಾಯಕವಾಗಿದೆ. ಮಹಾಕವಿ ರನ್ನ ಪಂಪನನ್ನು ಬಹು ಭಕ್ತಿಯಿಂದ ಸ್ಮರಿಸಿ ಗೌರವಿಸಿದ್ದರೆ ನಾಗಚಂದ್ರನು ತನ್ನನ್ನು 'ಅಭಿನವ ಪಂಪ'ನೆಂದು ಕರೆದುಕೊಂಡು ಹೆಮ್ಮೆಪಟ್ಟುಕೊಂಡಿದ್ದಾನೆ. ಅಂದಿನಿಂದ ಇಂದಿನವರೆಗೆ ಸಹಸ್ರ ವರ್ಷಗಳಿಗಿಂತ ಹೆಚ್ಚು ಕಾಲ ಸಂದು ಹೋಗಿರುವುದಾದರೂ ಪಂಪನ ಹಿರಿತನ, ಪೂಜ್ಯತೆ ಅಚ್ಚಳಿಯದೆ ನಿಂತಿವೆ.

# ಪೊನ್ನ

ರತ್ನತ್ರಯರಲ್ಲಿ ಎರಡನೆಯವನಾದ ಪೊನ್ನನು ರಾಷ್ಟ್ರಕೂಟ ಚಕ್ರವರ್ತಿಯಾದ ಮುಮ್ಮಡಿ ಕೃಷ್ಣ (ಕ್ರಿ. ಶ. 939-968)ನ ಆಸ್ಥಾನ ಕವಿಯಾಗಿದ್ದ. ಆದ್ದರಿಂದ ಈತನ ಕಾವ್ಯರಚನೆ ಸುಮಾರು ಕ್ರಿ. ಶ. 950ರ ಹಿಂದು ಮುಂದಿನಲ್ಲಿ ನಡೆದಿರಬೇಕು. ಈತನೂ ಪಂಪನಂತೆ ವೆಂಗಿ ಮಂಡಲದಿಂದಲೇ ಬಂದವನೆಂದು ತೋರುತ್ತದೆ. ವೆಂಗಿಮಂಡಲದ ಪುಂಗನೂರಿನಲ್ಲಿ ನಾಗಮಯ್ಯನೆಂಬ ಒಬ್ಬ ಜೈನ ಬ್ರಾಹ್ಮಣನಿದ್ದ. ಆತನಿಗೆ ಮಲ್ಲಪ ಪುಣ್ಣಮಯ್ಯ—ಎಂಬ ಇಬ್ಬರು ವೀರಪುತ್ರರಿದ್ದರು. ಅವರು ತಮ್ಮ ಗುರುವಾದ ದಿನಚಂದ್ರದೇವನು ಕಾಲವಾಗಲು ಆತನ ಸದ್ಗತಿಗಾಗಿ ಪೊನ್ನನಿಂದ ಹದಿನಾರನೆಯ ತೀರ್ಥಂಕರನ ಭವಾವಳಿಗಳನ್ನು ಒಳಗೊಂಡ 'ಶಾಂತಿ ಪುರಾಣ'ವನ್ನು ಬರೆಸಿದರಂತೆ! ಅವರಲ್ಲಿ ಹಿರಿಯನಾದ ಮಲ್ಲಪನಿಗೆ ಅತ್ತಿಮಬ್ಬೆಯೆಂಬ ಮಗಳಿದ್ದಳು. 'ದಾನ ಚಿಂತಾಮಣಿ'ಯೆಂದು ಕೀರ್ತಿವೆತ್ತಿರುವ ಈ ಮಹನೀಯಳು ಪೊನ್ನನ ಶಾಂತಿಪುರಾಣದ ಸಹಸ್ರ ಪ್ರತಿಗಳನ್ನು

ಮಾಡಿಸಿ, ಸುವರ್ಣ ಜಿನಪ್ರತಿಮೆಗಳೊಡನೆ ಅವನ್ನು ದಾನಮಾಡಿದಳಂತೆ! ಬಹುಶಃ ಪೊನ್ನನು ಕಾವ್ಯರಚನೆಗೆ ತೊಡಗುವ ಮುನ್ನವೇ ಪಂಪಕವಿಯ ಕಾವ್ಯಗಳು ಪ್ರಕಟಗೊಂಡಿದ್ದವೊ ಏನೊ. ಪಂಪನ ಹೇಳಿಕೆಯನ್ನು ಅನುಕರಿಸುತ್ತಿರುವನೇನೊ ಎನ್ನುವಂತೆ ಈತನು 'ಲೋಕೋತ್ತರ ಲೌಕಿಕ ಪರಿಣತಿ ಪ್ರನ್ನಿಗಂಗೆ ಶಾಂತೀಶ್ವರ ರಾಮಕಥಾ ಪ್ರಶಸ್ತಿಯಿಂದಾದ ಕೃತಿಗಳಿಂ'—ಶಾಂತೀಶ್ವರ, ರಾಮ ಇವರ ಕಥಾ ಪ್ರಶಸ್ತಿಗಳಿಂದ ಕೂಡಿರುವ ಕಾವ್ಯಗಳಿಂದ ಪೊನ್ನನ ಧಾರ್ಮಿಕ ಲೌಕಿಕ ಪರಿಣತಿ ವ್ಯಕ್ತವಾಗುತ್ತದೆ—ಎಂದು ಹೇಳಿಕೊಂಡಿದ್ದಾನೆ. ಧರ್ಮಗ್ರಂಥವಾಗಿ 'ಶಾಂತಿಪುರಾಣ'ವನ್ನೂ ಲೌಕಿಕ ಗ್ರಂಥವಾಗಿ ರಾಮಕಥೆಯನ್ನೂ ಬರೆದಿರಬೇಕು. ಪಂಪನು ತನ್ನ ಭಾರತವನ್ನು 'ವಿಕ್ರಮಾರ್ಜುನ ವಿಜಯ'ವೆಂದು ಕರೆದರೆ ಪೊನ್ನನು ತನ್ನ ರಾಮಾಯಣವನ್ನು 'ಭುವನೈಕ ರಾಮಾಭ್ಯುದಯ' ಎಂದು ಹೆಸರಿಸಿದ್ದಾನೆ. ಬಹುಶಃ ಪಂಪ ಭಾರತದಲ್ಲಿ ಅರಿಕೇಸರಿ ವಿಕ್ರಮಾರ್ಜುನನಾಗಿ ವ್ಯವಹರಿಸುವಂತೆ ಇಲ್ಲಿ ಪೊನ್ನನ ಪೋಷಕನು ಶ್ರೀ ರಾಮನ ವೇಷಧಾರಿಯಾಗಿರಬಹುದೋ ಏನೊ! ಈ ಗ್ರಂಥ ಉಪಲಬ್ಧವಾಗಿಲ್ಲ. ದೊರೆತರೆ ಪೊನ್ನನ ಪೋಷಕನಿಗೆ ಸಂಬಂಧಿಸಿದಂತೆ ಸಾಕಷ್ಟು ಐತಿಹಾಸಿಕ ಅಂಶಗಳು ಬೆಳಕಿಗೆ ಬರಬಹುದೋ ಏನೊ! ಪೊನ್ನನು ತನ್ನ ಈ ಕಾವ್ಯದಲ್ಲಿ ಹದಿನಾಲ್ಕು ಆಶ್ವಾಸಗಳಿವೆಯೆಂದೂ 'ಪದಿನಾಲ್ಕುಂ ಭುವನಂಗಳ್ | ಪದಿನಾಲ್ಕಾಶ್ವಾಸ ರಚನೆಗಂ ಬೆಲೆಯಕ್ಕುಂ' (ಈ ಹದಿನಾಲ್ಕು ಆಶ್ವಾಸಕ್ಕೂ ಹದಿನಾಲ್ಕು ಲೋಕಗಳ ಬೆಲೆಯಾಗುತ್ತದೆ) ಎಂದು ಹೇಳಿಕೊಂಡಿದ್ದಾನೆ. ಈತನಿಗೆ ಉಭಯಭಾಷಾ ಕವಿಚಕ್ರವರ್ತಿಯೆಂಬ ಬಿರುದು ಬಂದಿತ್ತಂತೆ.

ಕವಿತಾ ವಿಳಾಸಮಂ ಚ
ಕ್ರವರ್ತಿ ತಾನಿರ್ದು ಮೆಚ್ಚಿ ಪೆಸರ್ಗೊಂಡೆರಡುಂ
ಕವಿತೆಯೊಳಮುಭಯಕವಿ ಚ
ಕ್ರವರ್ತಿಯೆನೆ ನೆಗಳ್ದನೀ ಕುರುಳ್ಗಳ ಸವಣಂ.

ಚಕ್ರವರ್ತಿ (ಮುಮ್ಮಡಿ ಕೃಷ್ಣ) ತನ್ನ ಕವಿತಾವಿಲಾಸವನ್ನು ಮೆಚ್ಚಿಕೊಂಡು ಈ 'ಕುರುಳ್ಗಳ ಸವಣ' (ತಲೆಕೂದಲಿರುವ ಸನ್ಯಾಸಿ)ನಿಗೆ 'ಉಭಯಕವಿತಾ ಚಕ್ರವರ್ತಿ'ಯೆಂಬ ಬಿರುದನ್ನು ಕೊಟ್ಟನೆಂದು ಪೊನ್ನಕವಿ ಹೇಳಿಕೊಂಡಿ

ದ್ದಾನೆ. ಜೈನ ಧರ್ಮವನ್ನು ಉಗ್ಘಡಿಸಿದ್ದಕ್ಕಾಗಿ ಆತನಿಗೆ 'ಕುರುಳ್ಗಳ ಸವಣ' ಎಂಬ ಹಿರಿಮೆಯ ಹೆಸರು ಬೇರೆ! ಇವುಗಳ ಹುಮ್ಮಸ್ಸಿನಲ್ಲಿ ಆತ ಮೈಮೆರೆತು

ಕನ್ನಡ ಕವಿತೆಯೊಳಸಗಂ
ಗನ್ನೂರ್ಮಡಿ ರೇಖೆಗಗ್ಗಳಂ ಸಕ್ಕದದೊಳ್
ಮುನ್ನುಳ್ಳ ಕಾಳಿದಾಸಂ
ಗನ್ನೂರ್ಮಡಿ ರಚನೆಯೊಳ್ ಕುರುಳ್ಗಳ ಸವಣಂ.

ಈ 'ಕುರುಳ್ಗಳ ಸವಣ' ತನ್ನ ಕವಿತಾ ಸಾಮರ್ಥ್ಯದಲ್ಲಿ ಕನ್ನಡದಲ್ಲಿ ಅಸಗ ನಿಗೂ. ಸಂಸ್ಕೃತದಲ್ಲಿ ಕಾಳಿದಾಸನಿಗೂ ನೂರ್ಮಡಿ ಮಿಗಿಲೆಂದು ಹೇಳಿ ಕೊಂಡಿದ್ದಾನೆ. ಆತನ ಈ ಉದ್ಧಟತನ, ಈ ವಾಗ್ಭೋರಣೆ, ಈ ಬಿರುದು ಗಳನ್ನೆಲ್ಲಾ ನೋಡಿ ಈತನೊಬ್ಬ ಮಹಾಕವಿಯೆಂಬ ಭಾವನೆಯಿಂದ ಆತನ ಮಹಾಗ್ರಂಥವಾದ ಶಾಂತಿ ಪುರಾಣವನ್ನು ಓದಹೊರಟರೆ ನಮಗೆ ಭ್ರಮ ನಿರಸನವಾದಂತಾಗುತ್ತದೆ. ಪೊನ್ನನು ತನ್ನ ಶಾಂತಿಪುರಾಣಕೃತಿ ಉಪಮಾ ತೀತವೆಂದೂ, ಪುರಾಣ ಚೂಡಾಮಣಿಯೆಂದೂ ಹೇಳಿಕೊಂಡಿರುವುದು ಬರಿಯ ಬಂಡವಾಳವಿಲ್ಲದ ಬಡಾಯಿ ಎನ್ನಿಸುತ್ತದೆ. ಹಾಲು ಸಕ್ಕರೆಗಳನ್ನು ಬೆರೆಸಿದಂತೆ ಕಾವ್ಯಧರ್ಮ, ಧರ್ಮಗಳನ್ನು ಹಿತಮಿತವಾಗಿ ಬೆರೆಸಿ ಮನೋ ಜ್ಞವಾಗಿ ಮಾಡಿರುವ ಪಂಪನ ಆದಿಪುರಾಣವನ್ನು ಓದಿ ಶಾಂತಿಪುರಾಣ ವನ್ನು ಕೈಗೆತ್ತಿಕೊಂಡರೆ ನೀರನ್ನು ಚಪ್ಪರಿಸಿದಂತಾಗುತ್ತದೆ. ಈ 'ಕುರುಳ್ಗಳ ಸವಣ' ಜೈನಾಗಮ ಧರ್ಮನಿರೂಪಣೆಯಲ್ಲಿ ರಸಭಾವಗಳನ್ನು ಹೊರಕ್ಕೆ ಟ್ಟಿದ್ದಾನೆ; ತನ್ನ ಪಾಂಡಿತ್ಯಪ್ರದರ್ಶನದಲ್ಲಿ ಲಾಲಿತ್ಯವನ್ನು ಗಾಳಿಗೆ ತೂರಿ ದ್ದಾನೆ. ಕಾಳಿದಾಸನಿಗೆ ನೂರ್ಮಡಿಯೆಂದು ಹೇಳಿಕೊಳ್ಳುವ ಈತನ ದಾಷ್ಟ್ಯಕ್ಕೆ ಏನು ಹೇಳೋಣ? ಎಲ್ಲಿಯ ಕಾಳಿದಾಸ, ಎಲ್ಲಿಯ ಪೊನ್ನ! ಕಾಳಿದಾಸನ ರಘುವಂಶದಲ್ಲಿ ಬರುವ ಇಂದುಮತಿ ಸ್ವಯಂವರ ವರ್ಣನೆಯ ಪದ್ಯಗಳನ್ನೆಲ್ಲಾ ತನ್ನ ಶಾಂತಿಪುರಾಣದ ಐದನೇ ಆಶ್ವಾಸದಲ್ಲಿ ಬರುವ ಜ್ಯೋತಿಃಪ್ರಭೆಯ ಸ್ವಯಂವರ ಸಂದರ್ಭಕ್ಕಾಗಿ, ಸ್ವಲ್ಪವೂ ಕೃತಜ್ಞತೆ ಯನ್ನು ಕೂಡ ಸೂಚಿಸದೆ, ಅನಾಮತ್ತಾಗಿ ಎತ್ತಿಕೊಂಡಿದ್ದಾನೆ. ಆತನ ಭಾಷಾಂತರವಾದರೂ ಲಲಿತವಾಗಿ ಮನೋಹರವಾಗಿದೆಯೆ? ಅದೂ ಇಲ್ಲ.

ಪೊನ್ನನು ‘ ಜಿನಾಕ್ಷರಮಾಲೆ ’ ಎಂಬ ಹೆಸರಿನಿಂದ ಜಿನಸ್ತೋತ್ರವೊಂದನ್ನು ರಚಿಸಿದ್ದಾನೆ. ಕಕಾರದಿಂದ ಳಕಾರದವರೆಗಿನ ಒಂದೊಂದು ಅಕ್ಷರದಿಂದಲೂ ಪ್ರಾರಂಭವಾಗುವ ಇಲ್ಲಿನ ಕಂದ ಪದ್ಯಗಳಲ್ಲಿ ಸಾಕಷ್ಟು ಚಮತ್ಕಾರವಿದೆ; ಆದರೆ ಭಕ್ತಿಭಾವದ ಔನ್ನತ್ಯ ಪರವಶತೆಗಳನ್ನೇನೂ ನಾವಿಲ್ಲಿ ಕಾಣುವಂತಿಲ್ಲ. ಈತ ‘ಗತ ಪ್ರತ್ಯಾಗತ’ ವೆಂಬ ಮತ್ತೊಂದು ಗ್ರಂಥವನ್ನೂ ಬರೆದಿರುವಂತೆ ಪ್ರತೀತಿ ಇದೆ; ಆದರೆ ಅದೂ ಉಪಲಬ್ಧವಾಗಿಲ್ಲ. ತಾಳೆಯ ಗರಿಯ ಮೇಲೆ ಕಂಠದಿಂದ ಅಕ್ಷರಗಳನ್ನು ಕೊರೆದು ಗ್ರಂಥ ರಚನೆಯಾಗಬೇಕಾಗಿದ್ದ ಆ ಕಾಲದಲ್ಲಿ ಜನರ ಮನಸ್ಸನ್ನು ಸೂರೆಗೊಳ್ಳಲಾರದ ಕೃತಿಗಳೆಲ್ಲಾ ಕಾಲಕ್ರಮದಲ್ಲಿ ಸತ್ತುಹೋಗಿದ್ದರೆ ಆಶ್ಚರ್ಯವೇನೂ ಅಲ್ಲ. ಈಗ ಉಳಿದುಕೊಂಡಿರುವ ಪೊನ್ನನ ಗ್ರಂಥಗಳೆರಡಕ್ಕೂ ಜೈನರ ಧರ್ಮಾನುರಕ್ತಿ ಕಾರಣವಾಗಿದ್ದರೂ ಇರಬಹುದು.

ಏನಾದರೇನು? ಪೊನ್ನನು ಅದೃಷ್ಟಶಾಲಿ. ಪಂಪನಂತಹ ಮಹಾಕವಿಗೆ ಇಲ್ಲದ ‘ ಕವಿ ಚಕ್ರವರ್ತಿ ’ ಬಿರುದು ಇವನ ಪಾಲಾಯಿತು, ಚಕ್ರವರ್ತಿಯ ಆಶ್ರಯ ದೊರೆತುದರಿಂದ ಅಷ್ಟೆ; ಮೇಲಕ್ಕೆತ್ತುವ ಮಹಾನುಭಾವರು ಸಿಕ್ಕಾಗ ಸಾಮಾನ್ಯನಿಗೂ ಅಸಾಧಾರಣ ಪದವಿ, ಪ್ರತಿಷ್ಠೆ ದೊರೆಯಬಹುದಾದ ಲೋಕರೂಢಿಗೆ ಪೊನ್ನನೊಂದು ಉದಾಹರಣೆ. ಇದ್ದಾಗ ಅಸಾಧಾರಣವಾದ ಮನ್ನಣೆಯನ್ನು ಪಡೆದ. ಆಮೇಲೂ ಆತನು ತನ್ನ ಸ್ಥಾನಬಲದಿಂದ ಮನ್ನಣೆಗೆ ಪಾತ್ರನಾದ. ಸಾಹಿತ್ಯ ಚರಿತ್ರೆಯಲ್ಲಿ ಆತನು ಕವಿಚಕ್ರವರ್ತಿತ್ರಯರಲ್ಲಿ ಒಬ್ಬನೆಂದು ಪರಿಗಣಿತನಾಗಿದ್ದಾನೆ; ರತ್ನತ್ರಯರಲ್ಲಿ ಒಬ್ಬನಾಗಿದ್ದಾನೆ. ಈತನ ಧರ್ಮತತ್ವನಿರೂಪಣೆ ಬಹಳ ನಿಖರವಾದುದೆಂಬ ಗೌರವದಿಂದ ಜೈನಧರ್ಮಪ್ರತಿಪಾದಕರಾದ ಕವಿಗಳೆಲ್ಲರೂ ಆತನನ್ನು ಹೊಗಳಿದ್ದಾರೆ. ವೈಯ್ಯಾಕರಣಿಗಳಾದ ಕೇಶಿರಾಜ, ನಾಗವರ್ಮ, ಭಟ್ಟಾಕಳಂಕ ಮೊದಲಾದವರು ಆತನ ಪದ್ಯಭಾಗಗಳನ್ನು ತಮ್ಮ ಸೂತ್ರಗಳ ಉದಾಹರಣೆಗಾಗಿ ಬಳಸಿಕೊಂಡಿದ್ದಾರೆ. ಪೊನ್ನನು ತನ್ನ ಕಾವ್ಯವನ್ನು ಪಂಡಿತರೂ, ಮೂರ್ಖರೂ ಒಟ್ಟಿಗೆ ಹೊಗಳುವರೆಂದು ಹೇಳಿಕೊಂಡಿದ್ದಾನೆ. ಶ್ರೀಮಾನ್ ಮುಗುಳಿಯವರು ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹೇಳಿರುವಂತೆ (ಪುಟ 106) ‘ಅವನ ಶಾಂತಿಪುರಾಣ ಶ್ರೇಷ್ಠಕೃತಿಯೆಂದು

ಹೊಗಳುವವರು ಪಂಡಿತರಾದರೂ ಇರಬೇಕು, ಮೂರ್ಖರಾದರೂ ಇರಬೇಕು.' ರಸಿಕರಿಗೆ ರಸದೌತಣವೇನೂ ಇಲ್ಲಿಲ್ಲ.

# ರನ್ನ

ಜೈನರ ಪವಿತ್ರ ಕ್ಷೇತ್ರವೆಂದು ಸುಪ್ರಸಿದ್ಧವಾಗಿರುವ ಶ್ರವಣಬೆಳುಗೊಳದಲ್ಲಿ ಸಣ್ಣದೊಂದು ಬೆಟ್ಟ; ಆ ಬೆಟ್ಟದ ಮೇಲೊಂದು ಬಂಡೆ. ಆ ಬಂಡೆಯ ಮಧ್ಯದಲ್ಲಿ ಸಹಸ್ರಾರು ವರ್ಷಗಳ ಮಳೆಗಾಳಿಗಳನ್ನು ಇದಿರಿಸಿ ಸ್ಥಿರವಾಗಿ ನಿಂತಿವೆ 'ಶ್ರೀ ಕವಿ ರತ್ನ' ಎಂಬ ಐದು ಅಕ್ಷರಗಳು. ಅದನ್ನು ಕೆತ್ತಿದವನು ರತ್ನನೆಂದೇ ಹೇಳುತ್ತಾರೆ. ಆತನ ವಿದ್ಯಾಭ್ಯಾಸ ಅಲ್ಲಿಯೇ ನಡೆಯಿತಂತೆ. ಬಾಲಕನಾದ ರತ್ನ ತನ್ನ ಬಾಲ್ಯಚಾಪಲ್ಯವನ್ನು ತೀರಿಸಿಕೊಳ್ಳಲು ಅದನ್ನು ಅಲ್ಲಿ ಕೊರೆದನೇನೊ! ಕನ್ನಡ ಸಾಹಿತ್ಯೋಪಾಸಕರಿಗೆ ರನ್ನನ ಈ ಕೈಬರಹವನ್ನು ಕಂಡು—ಅದು ರನ್ನನ ಕೈಬರಹವೆಂಬ ಭ್ರಮೆಯಿಂದಲಾದರೂ—ರೋಮಾಂಚವಾಗುತ್ತದೆ. ರತ್ನತ್ರಯರಲ್ಲಿ ಕಡೆಯವನಾದ ರನ್ನ ಅಥವಾ ರತ್ನನ ಅಂಕಿತನಾಮ ಅನ್ವರ್ಥನಾಮವೂ ಅಹುದು. ಆತನು ಕವಿರತ್ನ, ಅನರ್ಘ್ಯ ಕವಿರತ್ನ. ರತ್ನತ್ರಯವನ್ನು ಮೊದಲು ಹೆಸರಿಸಿದವನು ಆತನೇ.

ಕವಿಜನದೊಳ್ ರತ್ನತ್ರಯ
ಪವಿತ್ರಮೆನಿಸೆ ನೆಗಳ್ದ ಪಂಪನುಂ ಪೊನ್ನಿಗನುಂ
ಕವಿರತ್ನನು ಮೀ ಮೂವರ್
ಕವಿಗಳ್ ಜಿನಸಮಯ ದೀಪಕರ್ ಪೆಜರೊಳರೆ?

ಕವಿಗಳ ಸಮೂಹದಲ್ಲಿ ಜೈನಧರ್ಮವನ್ನು ಬೆಳಗುವ ಪಂಪ, ಪೊನ್ನ, ರನ್ನರು ಪವಿತ್ರವಾದ ರತ್ನತ್ರಯದಂತೆ ಪ್ರಸಿದ್ಧರಾದವರು. ಇವರಲ್ಲದೆ (ಇಂಥವರು) ಬೇರೆ ಇದ್ದಾರೆಯೆ? ಉಳಿದವರ ವಿಚಾರ ಹಾಗಿರಲಿ. ರನ್ನ ತನ್ನನ್ನು ತಾನೆ ಹೀಗೆ ನಿಸ್ಸಂಕೋಚವಾಗಿ ಹೊಗಳಿಕೊಳ್ಳುವುದೆ? ಈ ವಿಚಾರದಲ್ಲಿ ಪಂಪ ಪೊನ್ನರನ್ನೂ ಮೀರಿಸಿದ್ದಾನೆ ಕವಿರನ್ನ.

ರತ್ನ ಪರೀಕ್ಷಕನಾಂ ಕೃತಿ
ರತ್ನ ಪರೀಕ್ಷಕನೆನೆಂದು ಫಣಿಪತಿಯ ಫಣಾ

ರತ್ನಮುಮಂ ರನ್ನನ ಕೃತಿ
ರತ್ನಮುಮಂ ಪೇಳ್ ಪರೀಕ್ಷಿಪಂಗೆಂಟೆರ್ದೆಯೆ?

ನಾನು ರತ್ನ ಪರೀಕ್ಷಕನೆಂದು ಹೇಳಿಕೊಂಡು ಆದಿಶೇಷನ ಹೆಡೆಯಲ್ಲಿರುವ ರತ್ನವನ್ನೂ ಕಾವ್ಯ ವಿಮರ್ಶಕನೆಂದು ರನ್ನನ ಕಾವ್ಯರತ್ನವನ್ನೂ ಪರೀಕ್ಷಿಸಬೇಕೆಂದು ಹೊರಡಬೇಕಾದರೆ ನಿನಗೇನು ಎಂಟು ಎದೆಗಳಿವೆಯೆ? ಎಂದು ಕೇಳುತ್ತಾನೆ ಕವಿರತ್ನ!—'ಬಹುರತ್ನಾ ವಸುಂಧರಾ' ಎಂಬ ಹೇಳಿಕೆಯನ್ನು ಅಳಿಸಿ ಹಾಕಿ, 'ಈ ಲೋಕದಲ್ಲಿ ಒಬ್ಬನೇ ರತ್ನ' ಎನ್ನುವಂತೆ ಮಾಡಿಬಿಟ್ಟನಂತೆ. ಇವನ ಅರ್ಭಟವನ್ನು ಇನ್ನೂ ಕೇಳಿ—

ಆರಾತೀಯ ಕವೀಶ್ವರ
ರಾರುಂ ಮುನ್ನಾರ್ತರಿಲ್ಲ; ವಾಗ್ದೇವಿಯ ಭಂ
ಡಾರದ ಮುದ್ರೆಯನೊಡೆದಂ
ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ.

ಈ ಹಿಂದೆ ಯಾವ ಪೂರ್ವಕವಿಗೂ ಸಾಧ್ಯವಾಗಿರಲಿಲ್ಲ; ರನ್ನಕವಿ ತನ್ನ ರಸವತ್ಕವಿತೆಗಳಿಂದ—ಸಾರಸ್ವತವೆನಿಸಿಕೊಂಡ ಕವಿತೆಗಳಿಂದ—ಸರಸ್ವತಿಯ ಭಂಡಾರದ ಮುದ್ರೆಯನ್ನೊಡೆದು ಹಾಕಿದ.—(ಸರಸ್ವತಿಯ ಸಂಪತ್ತೆಲ್ಲವೂ ರನ್ನನ ಸ್ವತ್ತಾಯಿತು)

ರಸಭಾವಗಳನ್ನು ಅರಿತುಕೊಂಡು ಹೊಸ ದೇಸಿಯಲ್ಲಿ ಕಾವ್ಯರಚನೆಯನ್ನು ಮಾಡಬಲ್ಲ ರನ್ನ ತನ್ನ ಸೃಷ್ಟಿ ಶಕ್ತಿಯಲ್ಲಿ ಇನ್ನೊಬ್ಬ ಚತುರ್ಮುಖನಂತೆ! ಇಷ್ಟು ಹೇಳಿಕೊಂಡರೂ ಈತನದು 'ಬಂಡವಾಳವಿಲ್ಲದ ಬಡಾಯಿ' ಯೇನೂ ಅಲ್ಲ. ಅತನ ಕಾವ್ಯಗಳನ್ನು ಆಮೂಲಾಗ್ರವಾಗಿ ಓದಿದಮೇಲೆ ನಮಗೆ ಕಣಕದಷ್ಟೇ ಹೂರಣವೂ ಇದೆಯೆಂಬ ಸಮಾಧಾನ, ಸಂತೃಪ್ತಿ, ಸಂತೋಷಗಳುಂಟಾಗುತ್ತವೆ.

ರನ್ನನ ಕಾವ್ಯಗಳಲ್ಲಿ 'ಅಜಿತ ಪುರಾಣ' ಮತ್ತು 'ಗದಾಯುದ್ಧ' ಅಥವಾ 'ಸಾಹಸಭೀಮ ವಿಜಯ'ವೆಂಬ ಎರಡು ಇಡೀ ಗ್ರಂಥಗಳೂ 'ರನ್ನಕಂದ' ಎಂಬ ನಿಘಂಟುವಿನ ಕೆಲವು ಪದ್ಯಗಳು ಮಾತ್ರ ಉಪಲಬ್ಧವಾಗಿವೆ. 'ಚಕ್ರೇಶ್ವರ ಚರಿತೆ' 'ಪರಶುರಾಮ ಚರಿತೆ' ಎಂಬ ಮತ್ತೆರಡು ಗ್ರಂಥಗಳನ್ನೂ ಬರೆದಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. 'ಗದಾಯುದ್ಧ'ವೇ

'ಚಕ್ರೇಶ್ವರ ಚರಿತೆ'ಯಾಗಿರಬೇಕೆಂದು ಕೆಲವು ಪಂಡಿತರ ಊಹೆ. 'ಪರಶುರಾಮ ಚರಿತೆ'ಯೆಂಬುದು 'ಸಮರಪರಶುರಾಮ'ನೆಂದು ಪ್ರಖ್ಯಾತನಾಗಿ, ರನ್ನನ ಏಳಿಗೆಗೆ ಕಾರಣಕರ್ತನಾದ ಚಾವುಂಡರಾಯನನ್ನು ಕುರಿತ ಗ್ರಂಥವಿದ್ದರೂ ಇರಬಹುದು. 'ಇದಮಿತ್ಥಂ' ಎಂದು ಈ ವಿಚಾರದಲ್ಲಿ ಹೇಳುವುದು ಕಷ್ಟ.

ರನ್ನನು ತನ್ನ ಕಾವ್ಯಗಳಲ್ಲಿ ತನ್ನ ವಿಚಾರವನ್ನೆಲ್ಲಾ ಆನೂಲಾಗ್ರವಾಗಿ ಹೇಳಿಕೊಂಡಿದ್ದಾನೆ. ಆತನ ಜನನ ಬೆಳುಗಲಿ ನಾಡಿನ ಮುದುವೊಳಲು ಅಥವಾ ಮುಧೋಳ್‌ನಲ್ಲಿ; ಕ್ರಿ. ಶ. 949ಕ್ಕೆ ಸರಿಹೋಗುವ ಸೌಮ್ಯ ಸಂವತ್ಸರದಲ್ಲಿ. ತಾಯಿ ಅಬ್ಬಲಬ್ಬೆ, ತಂದೆ ಜಿನವಲ್ಲಭೇಂದ್ರ; ದೃಢಬಾಹು, ರೇಚಣ, ಮಾರಯ್ಯ ಎಂಬ ಮೂವರು ಸಹೋದರರು. ಕವಿಗೆ ಇಬ್ಬರು ಮಡದಿಯರು—ಜಕ್ಕಿ, ಶಾಂತಿ. ಬಹುಕಾಲ ಮಕ್ಕಳಿಲ್ಲದೆ ಇಳಿವಯಸ್ಸಿನಲ್ಲಿ ಆತನಿಗೆ ಒಬ್ಬ ಮಗ ಒಬ್ಬ ಮಗಳು ಜನಿಸಿದರು. ಮಗನಿಗೆ ತನ್ನ ಪೋಷಕನಾದ ಚಾವುಂಡರಾಯನ ನೆನಪಿಗಾಗಿ 'ರಾಯ'ನೆಂದೂ, ಮಗಳಿಗೆ ತನ್ನ ಮತ್ತೊಬ್ಬ ಪೋಷಕಳಾದ ಅತ್ತಿಮಬ್ಬೆಯ ನೆನಪಿಗಾಗಿ 'ಅತ್ತಿಮಬ್ಬೆ'ಯೆಂದೂ ನಾಮಕರಣ ಮಾಡಿದನು. ಈತನು ಶ್ರವಣಬೆಳುಗೊಳದಲ್ಲಿ ಅಜಿತಸೇನಾಚಾರ್ಯರೆಂಬ ಗುರುಗಳ ಬಳಿಯಲ್ಲಿ ವಿದ್ಯಾಭ್ಯಾಸ ಮಾಡಿದನು. ಕನ್ನಡ ಸಂಸ್ಕೃತಗಳಲ್ಲಿ ಸುಪ್ರಸಿದ್ಧವಾಗಿದ್ದ ಗ್ರಂಥಗಳೆಲ್ಲಾ ಆತನಿಗೆ ಕರತಲಾಮಲಕವಾಗಿರಬೇಕು. ಅನಂತರ

ಮೊದಲೊಳ್ ಸಾವಂತರಿನಿನಿ
ಸುದಿತೋದಿತನಾಗಿ ಮಂಡಲೇಶ್ವರನಿಂದ।
ಭ್ಯುದಯ ಪರನೆಸಿಸಿ ಚಕ್ರಿಯಿ
ಸುದಯ ಪರಂಪರೆಯನೆಯ್ದಿದಂ ಕವಿರನ್ನಂ

ಮೊದಲು ಸಾಮಂತರಾಜರಲ್ಲಿಯೂ ಮಂಡಲೇಶ್ವರರಲ್ಲಿಯೂ ಸ್ವಲ್ಪ ಮಟ್ಟಿಗೆ ಅಭ್ಯುದಯವನ್ನು ಪಡೆದು, ಕಡೆಗೆ ಚಕ್ರವರ್ತಿಯಿಂದ ಉದಯ ಪರಂಪರೆಯನ್ನು ಪಡೆದ–ಬಹುಶಃ ತನಗೆ ಆಶ್ರಯದಾತರಾಗಿದ್ದ ಅತ್ತಿಮಬ್ಬೆ, ಚಾವುಂಡರಾಯ ಮೊದಲಾದವರಿಂದ ಅಭ್ಯುದಯವನ್ನು ಪಡೆದು ಕಡೆಗೆ ಚಾಲುಕ್ಯ ಚಕ್ರವರ್ತಿಯಾದ ತೈಲಪ ಮತ್ತು ಆತನ ಮಗನಾದ ಸತ್ಯಾಶ್ರಯ

ಇವರ ಆಶ್ರಯದಲ್ಲಿ ಉದಯ ಪರಂಪರೆಯನ್ನು ಪಡೆದಿರಬೇಕು. ಚಕ್ರವರ್ತಿಯು ಆತನಿಗೆ ಕವಿಚಕ್ರವರ್ತಿಯೆಂಬ ಬಿರುದನ್ನೂ, ಛತ್ರ, ಚಾಮರ, ಆನೆ ಮೊದಲಾದ ಮರ್ಯಾದೆಗಳನ್ನೂ ದಯಪಾಲಿಸಿದನು.

ರನ್ನನ ಉಪಲಬ್ಧ ಕೃತಿರತ್ನಗಳಲ್ಲಿ ಅಜಿತ ಪುರಾಣ ಮೊದಲನೆಯದು. ಇದನ್ನು ಬರೆದುದು ಕ್ರಿ.ಶ. ೯93ರಲ್ಲಿ. ಇದರ ಹೆಸರೇ ಸೂಚಿಸುವಂತೆ ಇದು ಎರಡನೆಯ ತೀರ್ಥಂಕರನಾದ ಅಜಿತನ ಪುಣ್ಯಕಥೆ. ಹನ್ನೆರಡು ಆಶ್ವಾಸಗಳುಳ್ಳ ಈ ಚಂಪೂ ಗ್ರಂಥದಲ್ಲಿ ಉಳಿದ ಜೈನ ಪುರಾಣಗಳಲ್ಲಿ ಕಂಡು ಬರುವ ಭವಾವಳಿಯ ಗೊಂದಲವಿಲ್ಲ. ಅಜಿತನ ಪೂರ್ವಜನ್ಮಗಳಲ್ಲಿ ಒಂದನ್ನು ಮಾತ್ರ ಕುರಿತು ಇಲ್ಲಿ ಹೇಳಿದ್ದಾನೆ. ಪೊನ್ನನ ಶಾಂತಿಪುರಾಣದ ಸಾವಿರ ಪ್ರತಿಗಳನ್ನು ದಾನಮಾಡಿದ ದಾನಚಿಂತಾಮಣಿ ಅತ್ತಿಮಬ್ಬೆಯೇ ರನ್ನನ ಪೋಷಕಳಾಗಿದ್ದು ಆತನಿಂದ ಅಜಿತ ಪುರಾಣವನ್ನು ಬರೆಸಿದಳು. ಕವಿಯು ತನ್ನ ಈ ಪುರಾಣ ಕಾವ್ಯದಲ್ಲಿ ಅತ್ತಿಮಬ್ಬೆಯ ಇತಿಹಾಸವನ್ನೆಲ್ಲಾ ವಿಸ್ತಾರವಾಗಿ ಕೊಟ್ಟು ಆಕೆಯ ದಾನಗುಣವನ್ನು ಹಾಡಿ ಹರಿಸಿದ್ದಾನೆ; ಆಕೆಯ ಹೆಸರನ್ನು ಅಜರಾಮರವಾಗಿ ಮಾಡಿದ್ದಾನೆ. ರನ್ನನಿಂದ ಕಾವ್ಯವನ್ನು ಬರೆಸಿದುದಕ್ಕಾಗಿ ಆಕೆಯು ಅಭಿನಂದನೀಯಳೇ ಸರಿ. ಕವಿಯೇ ಹೇಳಿರುವಂತೆ ಇದು ಕಾವ್ಯರತ್ನವೂ ನಿಜ. ಪುರಾಣ ತಿಲಕವೂ ನಿಜ. ಕವಿಯು ಹೃದಯಸ್ಪರ್ಶಿಯಾದ ಹಲವು ಸನ್ನಿವೇಶಗಳನ್ನು ಇಲ್ಲಿ ಚಿತ್ರಿಸಿದ್ದಾನೆ. ಅಜಿತನು ಅಜಿತ ತೀರ್ಥಂಕರನಾಗಿ ಪರಿನಿಷ್ಕ್ರಮಣದಲ್ಲಿ ತಪಸ್ಸಿಗೆಂದು ಹೊರಟುಹೋಗುತ್ತಾನೆ. ಆತ ಹೊರಟುಹೋಗುತ್ತಲೆ ಆಯೋಧ್ಯಾನಗರ ಬಂಧುಗಳನ್ನೆಲ್ಲಾ ಬೀಳ್ಕೊಟ್ಟ ಮದುವೆಯ ಮನೆಯಂತಾಯ್ತು. ಅಂತಃಪುರಸ್ತ್ರೀಯರು ಗಳಗಳ ಅಳುತ್ತಾ

ಆವೀ ನೆರಪಿದ ದುಷ್ಕೃತ
ಮಾವುದು ಗಡ! ನಡೆಯಿಮೊಡನಸುಂಗಳೆದಪಮಾ
ದೇವಂ ಬಲ್ಲಿದನೆಮಗೆ ಮ
ನೋವಲ್ಲಭನಿಂತುಟೆಂದು ಬಗೆವೇಳ್ದಪೆನೆ

ನಾವೇನು ದುಷ್ಕೃತವನ್ನು ಮಾಡಿದ್ದೆವು? ನಡೆಯಿರಿ, ನಾವೆಲ್ಲರೂ ಒಟ್ಟಿಗೆ ಪ್ರಾಣಕಳೆದುಕೊಳ್ಳೋಣ. ಆತನೇ ನಮ್ಮ ಒಡೆಯ, ನಮ್ಮ ಪ್ರಾಣವಲ್ಲಭ,

ಆತ ಹೀಗೆಂದು ಹೇಗೆ ಬಲ್ಲೆ–ಎಂದು ಒಬ್ಬಳು ಅತ್ತರೆ ಮತ್ತೊಬ್ಬಳು

ಕಳೆ ಸಿರಿಗನ್ನಡಿಯಂ ಮಂ
ಗಳಪಸದನಮೇವುದಕ್ಕ ಕಾಲಲತಿಗೆಯಂ
ಕಳೆ ತೊಡೆದು ಕಣ್ಗೆ ಕಜ್ಜಲ
ವಿಳಾಸವಿನ್ನೇವುದೆಮಗೆವೇಗಯ್ದಪೆವೊ

ನನ್ನ ರನ್ನಗನ್ನಡಿಯನ್ನು ಆಚೆಗೆ ಒಗೆ; ಮಂಗಳವಾದ ಅಲಂಕಾರಗಳು ನನಗಿನ್ನೇತಕ್ಕೆ? ಅಕ್ಕ ನನ್ನ ಕಾಲಿಗೆ ಹಚ್ಚಿಕೊಂಡಿರುವ ಈ ಅರಗಿನ ಬಣ್ಣವನ್ನು ಒರಸಿಹಾಕು; ನನ್ನ ಕಣ್ಣಿಗೆ ಕಾಡಿಗೆ ಇನ್ನೇಕೆ? ಈ ವಿಳಾಸಗಳೆಲ್ಲಾ ಇನ್ನು ಯಾತಕ್ಕೋ ಎನ್ನುತ್ತಾಳೆ.—ಹಾಗೆಯೆ ಮತ್ತೊಬ್ಬಳು, ಮಗುದೊಬ್ಬಳು ತಮ್ಮ ಸುಖ ಸಾಧನಗಳನ್ನೆಲ್ಲಾ ನಿಂದಿಸಿ ಈಡಾಡುತ್ತಾರೆ. ತಮ್ಮ ದಾಸಿಯರನ್ನು ಕರೆದು

ಬಿಡಿಮಿಂದೀ ವರರಾಜ ಹಂಸೆಗಳನಿನ್ನೀ ರಾಜ ಕೀರಂಗಳಂ
ಬಿಡಿಮಿಂತೀ ಮೃಗಪೋತಕಂಗಳೆನಿವಂ ಕೊಂಡೊಯ್ದು ಕಾಂತಾರ
ದೊಳ್
ಬಿಡಿಮೀ ಬಾಜಿಪ ಬೀಣೆಯಂ ತಿಸರಿಯಂ ಕೊಳ್ಳೆಂದು ಬಲ್ಲಂಗಿವಂ
ಕುಡಿಮೇ ಗೆಯ್ದಪೆಮಾಮಿವಕ್ಕೆಮಗಿವಿರ್ದಿನ್ನೆಲ್ಲಮೇ ಗೆಯ್ವುದೊ

ಈ ರಾಜಹಂಸೆಗಳನ್ನೂ, ರಾಜಕೀರಗಳನ್ನೂ ಪಂಜರದಿಂದ ಬಿಟ್ಟುಬಿಡಿ; ಈ ಜಿಂಕೆಮರಿಯನ್ನು ತೆಗೆದುಕೊಂಡು ಹೋಗಿ ಕಾಡಿನಲ್ಲಿ ಬಿಟ್ಟುಬಿಡಿ; ಈ ವೀಣೆ ತಿಸರಿಗಳನ್ನು ಆ ವಿದ್ಯೆಯನ್ನು ಬಲ್ಲವರಿಗೆ ಕೊಟ್ಟುಬಿಡಿ. ಇವನ್ನು ಇಟ್ಟುಕೊಂಡು ನಾವೇನು ಮಾಡೋಣ?—ಎಂದು ಹೇಳಿ ಎಲ್ಲವನ್ನು ತೊರೆದು, ದಾಸದಾಸಿಯರಿಗೆಲ್ಲಾ ತಾವೇನಾದರೂ ತಪ್ಪುಮಾಡಿದ್ದರೆ ಕ್ಷಮಿಸುವಂತೆ ಕೇಳಿಕೊಂಡು, ತಮಗೆ ಇದುವರೆಗೂ ಭೋಗಸ್ಥಾನಗಳಾಗಿದ್ದ ಲತಾಭವನಗಳು, ಚಂದನದ್ರುಮಗಳು, ಅಶೋಕೆಗಳು, ಸಹಕಾರ ತಮಾಲ ಭೂರುಹಗಳು—ಇವುಗಳನ್ನು ಕುರಿತು 'ವಿಯೋಗವಮಾದುದೆಮಗಂ ನಿಮಗಂ' (ನಮಗೂ ನಿಮಗೂ ಇನ್ನು ವಿಯೋಗವಾಯಿತು) ಎಂದು ಹೇಳಿ ಗಳಗಳ ಅಳುತ್ತಾರೆ. ಗಂಡನನ್ನು ನೆನೆದು ಹಲುಬಿ ಹಂಬಲಿಸುತ್ತಾರೆ.

ಪಿರಿದುಂ ಪುಣ್ಯದೆ ಪತಿಯಂ
ಪರಮೇಶ್ವರ ಪಡೆದು ನಿನ್ನನಾವನುಭವಿಸು
ತ್ತಿರಲೆಯ್ದೆ ಪಡೆದೆವಿಲ್ಲಂ
ತರಾಯಮಾಯ್ತೆಮಗದೊಂದು ವಿಧಿವಶದಿಂ

ಬಹು ಪುಣ್ಯಮಾಡಿ ನಿನ್ನಂತಹ ಮಹಾನುಭಾವನನ್ನು ಗಂಡನನ್ನಾಗಿ ಪಡೆದೆವು; ಆದರೆ ಪಡೆದುದನ್ನು ಅನುಭವಿಸುವ ಪುಣ್ಯವನ್ನು ಮಾತ್ರ ಪಡೆಯಲಿಲ್ಲ. ವಿಧಿವಶದಿಂದ ನಮಗೆ ಅಗಲಿಕೆಯುಂಟಾಯಿತು.—ಈ ಅಗಲಿಕೆಯಿಂದ

ಏನೆಮ್ಮ ಮನಮೆ ಶೂನ್ಯಂ
ನೀನಿಲ್ಲದ ರಾಜಮಂದಿರಂ ಶೂನ್ಯಮಯೋ
ಧ್ಯಾನಗರಂ ಶೂನ್ಯಮಖಿಳಾ
ಸ್ಥಾನಂ ಶೂನ್ಯಂ ತ್ರಿಲೋಕಮಂಡನ ತಿಳಕಾ.

ಮೂರು ಲೋಕಗಳಿಗೂ ಅಲಂಕಾರವಾದ ತಿಲಕದಂತಿರುವ ಹೇ ಅಜಿತ ಮಹಾರಾಜ, ನೀನಿಲ್ಲದುದರಿಂದ ನಮ್ಮ ಮನಸ್ಸು ಶೂನ್ಯವಾಗಿದೆ; ಅರಮನೆ ಶೂನ್ಯವಾಗಿದೆ; ಅಯೋಧ್ಯಾನಗರ, ರಾಜಾಸ್ಥಾನ ಶೂನ್ಯವಾಗಿ ಹೋಗಿವೆ. ಆ ಹೆಣ್ಣುಗಳಿಗೆ ಎತ್ತೆತ್ತಲೂ ಬರಿಯ ಶೂನ್ಯ ಕವಿದಂತಾಗಿದೆ. ಅವರು ಉನ್ಮಾದಾವಸ್ಥೆಯನ್ನು ಹೊಂದಿ 'ಗುಣನಿಧಿಯೆಲ್ಲಿ? ಭುವನಪೂಜಿತನೆಲ್ಲಿ?' ಎಂದು ಮರುಗಿ ಹೇಳುತ್ತಾ, ಅರಮನೆಯ ಮೆಟ್ಟಲುಗಳನ್ನಿಳಿದು ಹೊರಗೆ ಬರುತ್ತಾರೆ. ಕಲ್ಲು ಕರಗಿಸುವಂತಹ ಕರುಣರಸ ದಡವುಕ್ಕಿ ಹರಿಯುತ್ತಿದೆ ಈ ಭಾಗದಲ್ಲಿ..

ಅಜಿತ ತೀರ್ಥಂಕರನ ಕಾಲದ ಚಕ್ರವರ್ತಿಯಾದ ಸಗರನ ಕಥೆಯೂ ಅಜಿತ ಪುರಾಣದಲ್ಲಿ ಒಂದು ಪರಿಶಿಷ್ಟದಂತೆ ಸೇರಿಕೊಂಡು ಬರುತ್ತದೆ. ಆ ಕಥೆಯು ಅತ್ಯಂತ ಹೃದಯಸ್ಪರ್ಶಿಯಾಗಿದೆ. ಸಗರ ಚಕ್ರವರ್ತಿಗೆ ಅರವತ್ತು ಸಾವಿರ ಮಕ್ಕಳು. ಅವರಲ್ಲಿ ರಾಜನಿಗೆ ಅಪಾರವಾದ ಪ್ರೇಮ. ಆತನ ಈ ಪುತ್ರವ್ಯಾಮೋಹವನ್ನು ಕಳೆಯುವುದಕ್ಕಾಗಿ ರನ್ನ ಕವಿಯು ಕಲ್ಪಿಸಿರುವ ಯೋಜನೆ ಹೃದಯಂಗಮವಾಗಿದೆ. ಒಮ್ಮೆ ಸಗರನ ಅರವತ್ತು ಸಹಸ್ರ ಮಕ್ಕಳೂ ಒಟ್ಟಾಗಿ ಬಂದು 'ನಮಗೆ ಏನಾದರೂ ಕೆಲಸವನ್ನು ಹೇಳು' ಎಂದು ತಂದೆಯನ್ನು ಕೇಳಿದರು. ಆತ 'ಅಯ್ಯಾ, ಉಂಡು ಉಟ್ಟು ಸುಖ

ವಾಗಿರಿ' ಎಂದ. ಮಕ್ಕಳು ಕೇಳಲಿಲ್ಲ. 'ಈ ತೋಳುಗಳು ವ್ಯರ್ಥವಾಗಿ ಮರ್ತ್ಯಶಕ್ಕೆ ಗುರಿಯಾಗಬೇಕೆ?' ಎಂದು ಗೋಗರೆದರು. ಕೊನೆಗೆ ರಾಜ 'ಅಯ್ಯಾ, ಕೈಲಾಸಪರ್ವತದಲ್ಲಿ ಭರತಚಕ್ರಿ ಅನೇಕ ರತ್ನಪ್ರತಿಮೆಗಳನ್ನು ಮಾಡಿಸಿಟ್ಟಿದ್ದಾನೆ. ಅವು ಮಾನವರಿಗೆ ಗೋಚರವಾಗದಂತೆ ಕಾಪನ್ನು ನಿರ್ಮಿಸಿ' ಎಂದು ಅಪ್ಪಣೆಕೊಟ್ಟ. ಅವರು ಹಸಾದವೆಂದು ಹೊರಟು ಹೋದರು. ಸಗರನನ್ನು ಪ್ರಬೋಧಿಸಲೆಂದು ಜನ್ಮಜನ್ಮಗಳಲ್ಲಿಯೂ ಹುಟ್ಟಿ ಬರುತ್ತಿರುವ ಆತನ ಮಿತ್ರ ಚೇತನ, ಮಣಿಕೇತು ದೃಷ್ಟಿವಿಷೋರಗನ ರೂಪ ವನ್ನು ತಾಳಿ ಭಗೀರಥನ ಹೊರತು ಅರವತ್ತು ಸಾವಿರ ಮಕ್ಕಳಲ್ಲಿ ಉಳಿದವ ರನ್ನೆಲ್ಲಾ ಸಾಯುವಂತೆ ಮಾಡಿದ. ಅನಂತರ ಬ್ರಾಹ್ಮಣ ವೇಷವನ್ನು ತಾಳಿ ರಾಜನ ಅರಮನೆಯ ಬಳಿಗೆ ಬಂದು ಹುಯ್ಯಲಿಡುವುದಕ್ಕೆ ಪ್ರಾರಂಭಿ ಸಿದ. ಕಾರಣವನ್ನು ವಿಚಾರಿಸಿದಾಗ 'ಅಯ್ಯಾ, ಅನೇಕ ದೇವರುಗಳಿಗೆ ಹರಕೆ ಹೊತ್ತು ಪಡೆದ ನನ್ನ ಮಗ 'ಜವನೆಂಬ ಸಿಡಿಲ್ ಸಿಡಿಲೆರಗಿ ದೊಡಾನುಂ ನಿನ್ನಡಿಗೆರಗಿದೆ' (ಯಮನೆಂಬ ಸಿಡಿಲು ಬಡಿಯಲಾಗಿ ನಾನು ನಿನ್ನ ಪಾದಕ್ಕೆ ಬಿದ್ದಿದ್ದೇನೆ.) 'ಎನಗೆ ಮರಣಂ ಶರಣಂ, ಮೇಣೆನಿತೆ ನಿನ್ನ ಚರಣಂ ಶರಣಂ (ನನಗೆ ಇಲ್ಲ ಮರಣವೇ ಶರಣು ಅಥವಾ ನಿನ್ನ ಪಾದಗಳೇ ಶರಣು) ಎಂದು ಹೇಳಿದ. ರಾಜ ಏನು ಮಾಡಬೇಕು? ಸತ್ತವರನ್ನು ಎತ್ತುವುದಕ್ಕೆ ಸಾಧ್ಯವೆ? ಆದ್ದರಿಂದ ಪುರೋಹಿತನ ಬುದ್ಧಿ ಮಾತಿನಂತೆ ಆತನು ಬ್ರಾಹ್ಮಣನೊಡನೆ 'ಅಯ್ಯಾ, ಸಾವು ಗೊತ್ತಿಲ್ಲದ ಮನೆಯಿಂದ ಹುಲ್ಲನ್ನೂ ಬೆಂಕಿಯನ್ನೂ ತಂದರೆ ನಿನ್ನ ಮಗನನ್ನು ಬದುಕಿ ಸುತ್ತೇನೆ' ಎಂದ. ಕಪಟ ಬ್ರಾಹ್ಮಣ ಹಾಗೆ ಹೋಗಿ ಹೀಗೆ ಬಂದು 'ಅಂತಹ ಮನೆಯಿಲ್ಲ' ಎಂದ. ಆಗ ಸಾವು ಅನಿವಾರ್ಯವೆಂದು ಮನಮುಟ್ಟು ವಂತೆ ಅವನಿಗೆ ಬೋಧಿಸಿದ.

ಆರಾರಂ ನುಂಗಿದನಿ
ಲ್ಲಾರಾರಂ ನೊಣೆದನಿಲ್ಲ? ಸವಿನೋಡಿದನಿ
ಲ್ಲಾರಾರಂ? ಸುರ ಮಾನವ
ನಾರಕ ತಿರ್ಯಕ್ ಸಮೂಹಮುಂ ಯಮರಾಜಂ

ಅಯ್ಯಾ, ಈ ಯಮರಾಜ ಯಾರು ಯಾರನ್ನು ತಾನೆ ನುಂಗಲಿಲ್ಲ?

ಯಾರು ಯಾರನ್ನು ಜಗಿಯಲಿಲ್ಲ? ಯಾರು ಯಾರನ್ನು ರುಚಿನೋಡಲಿಲ್ಲ? ದೇವ, ಮಾನವ, ನಾರಕಿ, ತಿರ್ಯಕ್ ಪ್ರಾಣಿಗಳಲ್ಲಿ ಯಾರನ್ನು ಬಿಟ್ಟಿದ್ದಾನೆ? —ಇತ್ಯಾದಿಯಾಗಿ ಬೇಕಾದಷ್ಟು ಬೋಧೆಮಾಡಿದ.

ಮೃತಪಟಹಂ ಜಯಪಟಹಂ
ಚಿತಾಗ್ನಿಧೂಮಂ ಜಯಧ್ವಜಂ, ಜನಕರುಣಾ
ರುತಿ ಜಯಮಂಗಳರುತಿಯೆನೆ
ಕೃತಾಂತರಾಜಂಗೆ ರಾಜ್ಯಚಿಹ್ನಮಿದಲ್ತೆ?

ಸತ್ತವರಿಗೆ ಮಾಡುವ ವಾದ್ಯ ಯಮನ ವಿಜಯವಾದ್ಯ; ಚಿತೆಯ ಹೊಗೆ ಅವನ ವಿಜಯ ವೈಜಯಂತಿ; ಜನರ ಅಳುವು ಅವನ ಜಯಕಾರ; ಇವೇ ಯಮರಾಜನ ರಾಜ್ಯ ಚಿಹ್ನೆಗಳು.

ಸಗರನ ಬೋಧನೆಯನ್ನು ಕೇಳುತ್ತಾ ಕುಳಿತಿದ್ದ ಕಪಟ ಬ್ರಾಹ್ಮಣ 'ಈ ನಿನ್ನ ಪೇಳ್ದ ಧರ್ಮಮಿದೇನೆನಗೆಯೊ ನಿನಗಮುಂಟೊ?' (ನೀನು ಹೇಳಿದ ಈ ಧರ್ಮವೆಲ್ಲವೂ ನನಗೆ ಮಾತ್ರವೋ ನಿನಗೂ ಉಂಟೊ' ಎಂದ. ರಾಜನು ನಗುತ್ತಾ 'ಎನಗಮು ಮುನ್ನಂ' (ನಿನಗಿಂತಲೂ ಮೊದಲು ನನಗೆ ಅನ್ವಯಿಸುತ್ತದೆ) ಎಂದ. ಒಡನೆಯೆ ಆ ಬ್ರಾಹ್ಮಣ 'ನಿನ್ನ ಅರವತ್ತು ಸಾವಿರ ಮಕ್ಕಳೂ ಸತ್ತರು' ಎಂದ. ಅಷ್ಟು ಹೊತ್ತಿಗೆ ಭಗೀರಥನೂ ಬಂದು ತಂದೆಗೆ ಆ ಕಠೋರವಾರ್ತೆಯನ್ನು ತಿಳಿಸಿದ. ಕೇಳಿ ಅಲ್ಲಿ ನೆರೆದಿದ್ದವರೆಲ್ಲಾ ನಡುಗಿದರು. ಸುದ್ದಿಯನ್ನು ಕೇಳಿ ರಾಣಿವಾಸದವರೆಲ್ಲರೂ ಅಲ್ಲಿಗೆ ಬಂದು ಗಳಗಳ ಅತ್ತರು. ಸಗರನ ರಾಣಿಯರು ಸತ್ತ ಮಕ್ಕಳನ್ನು ಯಮನಿಂದ ಬಿಡಿಸಿಕೊಂಡು ಬರುವಂತೆ ಗಂಡನನ್ನು ಕೇಳಿಕೊಂಡರು; ಸೊಸೆಯರೆಲ್ಲರೂ ಸಾಲಾಗಿ ಅಳುತ್ತಾ ನಿಂತುಕೊಂಡರು. ಶೋಕಸಾಗರದ ತೆರೆಗಳು ಬಂದು ಸಗರನನ್ನು ಅಪ್ಪಳಿಸಿದವು. ಆದರೆ ಆತನು ಸ್ವಲ್ಪವೂ ಚಲವಿಚಲಿತನಾಗ ಲಿಲ್ಲ. 'ಮೌನಂ ಸರ್ವಾರ್ಥಸಾಧನಂ' ಎಂದುಕೊಂಡ ಆತ. ಅಂದೇ ಆತನು ಸಂಸಾರವನ್ನು ತೊರೆದು ವಿರಕ್ತನಾದ. ಮಗನಾದ ಭಗೀರಥನಿಗೆ ರಾಜ್ಯವಿತ್ತು ತಪಸ್ಸಿಗೆ ಹೊರಟುಹೋದ. ಇಡೀ ಕಥೆಯು ಒಂದು ರಸಘಟ್ಟಿಯಂತಿದೆ.

ರನ್ನನ ವೈರಾಗ್ಯ ವರ್ಣನೆ ಅದ್ಭುತವಾಗಿದೆ. ಇಡೀ ಕನ್ನಡ ಸಾಹಿತ್ಯ

ವಲ್ಲಿಯೇ ಇಂತಹ ವರ್ಣನೆ ಅತ್ಯಪೂರ್ವ. ಕವಿಯ ಆತ್ಮರೋದನವೆ ಇಲ್ಲಿ ಹೆಪ್ಪುಗಟ್ಟಿ ಕುಳಿತಿದೆ. ಎಂತಹ ನಾಸ್ತಿಕನೂ ಈ ಪದ್ಯಗಳನ್ನೋದಿದರೆ ವೈರಾಗ್ಯವನ್ನು ತಾಳಿಯಾನು.

ಮತಿಗೆಟ್ಟು ಜೀವ ಧರ್ಮಾ
ಮೃತಮಂ ಸೇವಿಸದಧರ್ಮಮಂ ಸೇವಿಸಿ ದು
ರ್ಗತಿಗಿಳಿದೀ ಜವನೆಂಬಜಿ
ಪಿ ತಿಂಬ ದೈವಕ್ಕೆ ಪೋಗಿ ಪಾಳಂಬಡುವೈ

ಎಲೈ ಜೀವವೇ, ನೀನು ಧರ್ಮಾಮೃತವನ್ನು ಸೇವಿಸದೆ ಮತಿಗೆಟ್ಟು ಅಧರ್ಮವನ್ನು ಸೇವಿಸುತ್ತಾ ದುರ್ಗತಿಗೆ ಇಳಿದು ಯಮನೆಂಬ ಹುಡುಕಿ ತಿನ್ನುವ ದೈವಕ್ಕೆ ಆಹುತಿಯಾಗಿ ಹೋಗುವೆಯಲ್ಲಾ !

ಎನಿತೆನಿತು ಕಳಿದ ಭವಮಂ
ನೆನೆದಪೆ ? ಯೆನಿತೆನಿತು ಭವದ ಬಂಧುಗಳಂ ನೀ
ನೆನೆದಪೆ ? ಯೆನಿತೆನಿತೊಡಲಂ
ನೆನೆದಪೆ ಯೆಲೆ ಜೀವ ? ನೀನೆ ಪೇಳ್ ಪವಣೊಳವೆ ?

ಎಲೈ ಜೀವವೆ ನೀನು ಕಳೆದು ಬಂದಿರುವ ಎಷ್ಟು ಜನ್ಮಗಳನ್ನು ನೆನೆಯುತ್ತಿ ? ಎಷ್ಟು ಜನ್ಮದ ಬಂಧುಗಳನ್ನು ನೆನೆದುಕೊಳ್ಳುತ್ತಿ ? ಎಷ್ಟು ದೇಹಗಳನ್ನು ಸ್ಮರಿಸಿಕೊಳ್ಳುತ್ತಿ ? ನಿನಗೆ ಸಾಧ್ಯವೆ, ನೀನೆ ಹೇಳು ?

ಎನಿತಂ ಕಕ್ಕುಳಗುದಿದಪೆ ?
ಎನಿತಂ ಕಕ್ಕಳಗಳಲ್ದಪೈ ? ಜೀವನೆ ನೀ
ನೆನಿತಂ ಮಲ್ಮಲ ಮರುಗುವೆ ?
ಎನಿತಂ ಸಂಸಾರದೊಳಗೆ ತಿರ್ರನೆ ತಿರಿವೈ ?

ಎಲೆ ಜೀವ, ಕತಕತ ಎಷ್ಟು ಕುದಿಯುವೆ ? ಎಷ್ಟು ತಾನೆ ಗಳಗಳ ಅಳುತ್ತೀಯೆ ? ಎಷ್ಟು ತಾನೆ ಮಲಮಲ ಮರುಗುತ್ತಿ ? ಎಷ್ಟು ಬಾರಿ ಈ ಸಂಸಾರದಲ್ಲಿ ಗರಗರ ತಿರುಗುತ್ತೀಯೆ ?

ಕಡೆಯಿಲ್ಲದ ಸಂಸಾರದ
ಕಡೆಗಾಣಲ್ ಬಗೆವೆಯಪ್ಪೊಡೆನ್ನುಕ್ತಿಗೊಡಂ

ಬಡು ; ಜೀವ, ನಿನ್ನ ಕಾಲಂ
ಪಿಡಿವೆಂ ಧರ್ಮಮನೆ ಮಗುಳೆ ಬಲ್ಪಿಡಿವಿಡಿಯಾ

ಕೊನೆಯಿಲ್ಲದ ಈ ಸಂಸಾರದಿಂದ ಕಡೆಹಾಯಬೇಕಾದರೆ ನನ್ನ ಮಾತನ್ನು ಕೇಳು. ಎಲೈ ಜೀವವೆ, ನಿನ್ನ ಕಾಲು ಹಿಡಿದುಕೊಳ್ಳುತ್ತೇನೆ. ಧರ್ಮವನ್ನೆ ಮತ್ತೆ ಬಲವಾಗಿ ಹಿಡಿದುಕೊ.

ಈ ಸಂಸಾರದಲ್ಲಿ, ಜನನ ಮರಣದಲ್ಲಿ ಸುಖವಿಲ್ಲ. 'ಅಸಾರಮೀ ಸಂಸಾರಂ.'

ಅಂಗಜನ ಸುಖದ ಸಾಮ್ರಾ
ಜ್ಯಂಗಳ್ ಶರೀರ ಮಾನಸಾಗಂತುಕ ದುಃ
ಖಂಗಳೆನೆ ಮಾಳ್ಪವದಱಿಂ
ಪಿಂಗುವೆನಿನ್ನೆನಗೆ ಜಿನನ ಚರಣಂ ಶರಣಂ.

ಯಾವುದು ಮನ್ಮಥನ ಸುಖ ಸಾಮ್ರಾಜ್ಯವೆಂಬ ಸುಖಸಾಧನಗಳೊ ಅವು ಶರೀರ ಮತ್ತು ಮನಸ್ಸುಗಳ ದುಃಖಗಳನ್ನೇ ತರುತ್ತವೆ. ಆದ್ದರಿಂದ ಅವುಗಳನ್ನು ತ್ಯಜಿಸುತ್ತೇನೆ. ಭಗವಂತನ ಚರಣವೇ ನನಗೆ ಶರಣ.

ಕವಿಯ ಚೇತನ ಎಷ್ಟು ಸುಸಂಸ್ಕೃತವಾದುದು ? ಎಂತಹ ವೇದನೆಯನ್ನು ಅನುಭವಿಸುತ್ತಾ ಕವಿ ಬರೆಯುತ್ತಿದ್ದಾನೆ ? ಹೇಗೆ ನಮ್ಮ ಮನಸ್ಸನ್ನು ಸೆರೆಹಿಡಿದು ವಶವರ್ತಿಯಾಗಿ ಮಾಡಿಕೊಳ್ಳುತ್ತಿದ್ದಾನೆ.

ರನ್ನನ ಕವಿತಾ ಶಕ್ತಿ ಅದ್ಭುತವಾದುದು. ಆದರೂ ಇಡೀ ಅಜಿತ ಪುರಾಣವನ್ನು ಪಂಪನ ಆದಿಪುರಾಣದೊಡನೆ ಹೋಲಿಸಿದಾಗ ಅಲ್ಲಿನ ಭವ್ಯತೆ ಇಲ್ಲಿ ಇಲ್ಲವೆನಿಸುತ್ತದೆ.

ಇನ್ನು ರನ್ನನ 'ಗದಾಯುದ್ಧ'ವನ್ನು ಸ್ವಲ್ಪ ನೋಡೋಣ. ಇದು 'ಕೃತಿರತ್ನ'ವೆಂಬ ಕೀರ್ತಿಗೆ ಪಾತ್ರವಾಗಿದೆ. ಕವಿಯು ಹೇಳಿಕೊಂಡಿಲ್ಲವಾದರೂ ಇದು ಪಂಪನ ಭಾರತವನ್ನು ಎಲ್ಲ ವಿಧದಿಂದಲೂ ಅನುಕರಿಸಿದೆ. ಅದು 'ವಿಕ್ರಮಾರ್ಜುನ ವಿಜಯ'ವಾದರೆ, ಇದು 'ಸಾಹಸಭೀಮ ವಿಜಯ'. ಅಲ್ಲಿ ಅರ್ಜುನ ನಾಯಕನಾದರೆ ಇಲ್ಲಿನ ನಾಯಕ ಭೀಮ. ಪಂಪನು ಅರಿಕೇಸರಿಯನ್ನು ಅರ್ಜುನನೊಡನೆ ಸಮೀಕರಿಸಿ 'ಸಮಸ್ತ ಭಾರತ'ವನ್ನು

ಬರೆದಿದ್ದರೆ, ಇಲ್ಲಿ ಸತ್ಯಾಶ್ರಯನೊಡನೆ ಅಭೇದ ಭಾವವನ್ನು ಪಡೆದು ಮತ್ತೊಂದು 'ಸಮಸ್ತ ಗದಾಯುದ್ಧ' ಮೂಡಿದಂತಾಗಿದೆ. ಪಂಪಭಾರತದಲ್ಲಿ ಅರ್ಜುನನಿಗೆ ಪಟ್ಟ; ಇಲ್ಲಿ ಭೀಮನಿಗೆ. ಅಲ್ಲಿ ಅರಿಕೇಸರಿಯ ಇತಿಹಾಸ ಬಂದಿದ್ದರೆ ಇಲ್ಲಿ ಸತ್ಯಾಶ್ರಯನ ಇತಿಹಾಸ ಸುವಿಸ್ತಾರವಾಗಿ ಬಂದಿದೆ. ಈ ಲೌಕಿಕ ಕಾವ್ಯದಲ್ಲಿ ಕವಿ ಸ್ವಾತಂತ್ರ್ಯವನ್ನು ವಹಿಸಿ ಬೀಮನ ವಂಶ ವನ್ನು ಸತ್ಯಾಶ್ರಯನ ವಂಶಕ್ಕೆ ಸಮೀಕರಿಸ ಹೊರಟು ಸ್ವಲ್ಪ ಮಟ್ಟಿಗೆ ವಿಕೃತಿಯನ್ನೂ ಮಾಡಿದ್ದಾನೆ. ರಾಜಭಕ್ತಿಯ ಮತ್ತು ತಲೆಗೇರಿ ಕವಿ ಸ್ವಲ್ಪ ಪ್ರಜ್ಞೆ ತಪ್ಪಿರುವನೆಂದೆನಿಸುತ್ತದೆ. ರನ್ನನು ಪಂಪನ 'ವಿಕ್ರಮಾರ್ಜುನ ವಿಜಯ'ವನ್ನು ಅನುಕರಿಸಿರುವುದು ಮಾತ್ರವೇ ಅಲ್ಲ; ಅದನ್ನು ಆಮೂಲಾಗ್ರವಾಗಿ ಓದಿ ಹೃದ್ಗತಮಾಡಿಕೊಂಡಿದ್ದಾನೆ. ಆ ಕಾವ್ಯದ ಹದಿಮೂರನೆಯ ಆಶ್ವಾಸದಲ್ಲಿ ಬರುವ ಗದಾಸೌಪ್ತಿಕ ಪರ್ವಗಳ ಕಥೆ ಆತನ ಹೃದಯವನ್ನು ಸೂರೆಗೊಂಡಿದೆ; ಆ ಭಾಗವನ್ನು ತೆಗೆದುಕೊಂಡು ಸಮಗ್ರ ಕಾವ್ಯವನ್ನು ಬರೆಯುವಂತೆ ಪ್ರೇರಣೆಯಿತ್ತಿದೆ. ರನ್ನ ಕಾವ್ಯಸೃಷ್ಟಿಗೆ ಕೈಹಾಕಿದಾಗ, ಹೃದ್ಗತವಾಗಿದ್ದ ಪಂಪಭಾರತದ ಪದಗಳೂ ಪದ ಬಂಧ ಗಳೂ ಅವನ ಮನೋನೇತ್ರದೆದುರು ನರ್ತನ ಮಾಡುತ್ತಿದ್ದವೆಂದು ತೋರು ತ್ತದೆ; ಅವುಗಳನ್ನು ಆತನೂ ಬಳಸಿಕೊಂಡಿದ್ದಾನೆ. ಒಂದು ಕಡೆಯಂತೂ ಆತನ ಪದ್ಯವನ್ನು ಅಖಂಡವಾಗಿಯೇ ತೆಗೆದುಕೊಂಡು ತನ್ನ ಕಾವ್ಯದಲ್ಲಿ ಬಳಸಿಕೊಂಡಿದ್ದಾನೆ. ಹೊರ ನೋಟಕ್ಕೆ ರನ್ನನೊಬ್ಬ ಕೃತಿಚೋರನಂತೆ ಕಾಣಿಸಿದರೂ ಆಶ್ಚರ್ಯವಿಲ್ಲ. ಆದರೆ ಆಳವಾಗಿ ಅಭ್ಯಾಸಮಾಡಿದಮೇಲೆ ರನ್ನನ ಮಹತ್ತು, ಆತನ ಕವಿತಾಶಕ್ತಿಯ ಔನ್ನತ್ಯ, ಆತನ ಅದ್ಭುತ ಪ್ರತಿಭೆ, ಸನ್ನಿವೇಶರಚನಾ ಸಾಮರ್ಥ್ಯ ಅರ್ಥವಾಗುತ್ತದೆ. ರನ್ನನು ಸಂಸ್ಕೃತದ 'ವೇಣೀ ಸಂಹಾರ' ನಾಟಕದಿಂದಲೂ ಭಾಸನ 'ಊರುಭಂಗ' ನಾಟಕದಿಂದಲೂ ಪ್ರಭಾವಿತನಾಗಿದ್ದಾನೆ, ಪ್ರೇರಣೆಯನ್ನು ಪಡೆದಿದ್ದಾನೆ; ಅವುಗಳ ಸನ್ನಿವೇಶ ರಚನೆ, ಭಾವ ಭವ್ಯತೆಗಳ ಛಾಯೆಯನ್ನು 'ಗದಾ ಯುದ್ಧ' ಕಾವ್ಯದಲ್ಲಿ ಕಾಣಬಹುದು. ಆದರೂ ರನ್ನನ ಯಶಸ್ಸಿಗೆ ಲೋಪ ವಿಲ್ಲ, ಆತನ ಔನ್ನತ್ಯಕ್ಕೆ ಅಪೋಹವಿಲ್ಲ.

ಗದಾಯುದ್ಧದ ತಿರುಳು ಗದಾಪರ್ವ ಸೌಪ್ತಿಕಪರ್ವಗಳ ಕಥೆ ಮಾತ್ರ

ವಾದರೂ ಇಲ್ಲಿ ಇಡೀ ಭಾರತದ ಕಥೆಯೇ ಬಂದಿದೆಯೆಂದು ರನ್ನನ ಹೇಳಿಕೆ—

ಒಳಪೊಕ್ಕು ನೋಡೆ ಭಾರತ
ದೊಳಗಣ ಕಥೆಯೆಲ್ಲಮೀ ಗದಾಯುದ್ಧದೊಳಂ
ತೊಳಕೊಂಡಿತ್ತೆನೆ ಸಿಂಹಾ
ವಳೋಕನ ಕ್ರಮದಿನಜಿಪಿದಂ ಕವಿರನ್ನಂ

ನಿಜ: ಭಾರತದ ಮುಖ್ಯ ಘಟನೆಗಳೆಲ್ಲವನ್ನೂ ಓದುಗರಿಗೆ ನೆನಪು ಮಾಡಿಕೊಡುತ್ತಾನೆ, ಕವಿ. ಇದಕ್ಕೆ ಮುಖ್ಯಸಾಧನ ರನ್ನನ ನಾಟಕೀಯ ಶೈಲಿ. ಗದಾಯುದ್ಧವು ಕಾವ್ಯವಾಗಿದ್ದರೂ ಅದರ ಚೌಕಟ್ಟಿನಲ್ಲಿ ನಾಟಕವೊಂದು ಹುದುಗಿದೆ. ರನ್ನನು ಮೊದಲು ಇದನ್ನು ನಾಟಕವಾಗಿಯೇ ಬರೆಯಬೇಕೆಂದು ಬಯಸಿದ್ದನೋ ಏನೋ! ಮಿಲ್ಟನ್ ಮಹಾಕವಿ ತನ್ನ 'ಪ್ಯಾರಡೈಸ್‌ಲಾಸ್ಟ್' ಕಾವ್ಯವನ್ನು ನಾಟಕವಾಗಿಯೇ ಬರೆಯಬೇಕೆಂದು ಬಯಸಿದ್ದವನು ಯಾವ ಕಾರಣದಿಂದಲೋ ಅದನ್ನು ಕಾವ್ಯರೂಪದಲ್ಲಿ ಹೊರತಂದನಂತೆ. ರನ್ನನೂ ಹಾಗೆ ಮಾಡಿದ್ದರೂ ಮಾಡಿರಬಹುದು. ಗದಾಯುದ್ಧದಲ್ಲಿ ಕಾಣಬರುವ ರಸವತ್ತಾದ ಸಂಭಾಷಣಾ ಶೈಲಿ, ನಾಟಕೋಚಿತವಾದ ಕ್ರಿಯಾ ಸನ್ನಿವೇಶಗಳು ಮಾತ್ರವಲ್ಲದೆ ಕನ್ನಡದ ಮತ್ತಾವ ಕಾವ್ಯದಲ್ಲಿಯೂ ಕಾಣಬರದ ವಿದೂಷಕನ ಪಾತ್ರ ಕೂಡ ಈ ಕಾವ್ಯದಲ್ಲಿ ಕಾಣಬರುತ್ತದೆ. ಆದ್ದರಿಂದಲೇ ದಿವಂಗತ ಬಿ. ಎಂ. ಶ್ರೀಯವರು ಈ ೫೭೬ ಪದ್ಯಗಳ ಕಾವ್ಯವನ್ನು ೧೪೭ ಪದ್ಯಗಳಿಗೆ ಭಟ್ಟಿ ಇಳಿಸಿ, ಅತ್ಯಲ್ಪವಾದ ಬದಲಾವಣೆಗಳೊಡನೆ ಇದನ್ನೊಂದು ಅದ್ಭುತ ರುದ್ರನಾಟಕವಾಗಿ ಪರಿವರ್ತಿಸಿದ್ದಾರೆ. ಈ ನಾಟಕೀಯತೆಯಲ್ಲಿ ರನ್ನನಿಗೆ ಅಗ್ರಸ್ಥಾನ: ಇಲ್ಲಿಯೇ ಈತನಿಗೆ ಪಂಪನಿಗಿಲ್ಲದ ಕೋಡು ಮೂಡಿರುವುದು.

ಗದಾಯುದ್ಧದ ನಾಯಕ ಭೀಮ; ದುರ್ಯೋಧನ ಪ್ರತಿನಾಯಕ. ಪಂಪನ ಕರ್ಣನಂತೆ ರನ್ನನ ದುರ್ಯೋಧನನೂ ನಮ್ಮ ಪ್ರೇಮ ಕರುಣೆಗಳಿಗೆ ಆಸ್ಪದನಾಗುತ್ತಾನೆ. ಭಾರತಯುದ್ಧದ ಕಡೆಯದಿನ, ದುರ್ಯೋಧನನು ಸಂಜಯ ದ್ವಿತೀಯನಾಗಿ ರಣರಂಗವನ್ನು ಪ್ರವೇಶಿಸುತ್ತಾನೆ. ತನ್ನ ವೀರಾಧಿವೀರರೆಲ್ಲರೂ ಅಲ್ಲಿ ಮಡಿದು ಬಿದ್ದಿದ್ದಾರೆ. ಒಬ್ಬೊಬ್ಬರನ್ನು ಕಂಡಾಗಲೂ

ದುರ್ಯೋಧನನ ಕರುಳು ಕಿವಿಚಿದಂತಾಗುತ್ತದೆ; ಆತನ ಕಣ್ಣು ಹನಿಗೂಡುತ್ತದೆ; ರೋದನ ಹೊರಹೊಮ್ಮುತ್ತದೆ. ಅದರಲ್ಲಿಯೂ ಕರ್ಣ ದುಶ್ಶಾಸನರನ್ನು ಕಂಡಾಗ ಆತನು ಪಡುವ ಸಂಕಟ ದುರ್ಭರವಾಗುತ್ತದೆ. ದುರ್ಯೋಧನನೇನೂ ಸಜ್ಜನ ಶಿರೋಮಣಿಯಲ್ಲ. ಆದರೂ ರನ್ನನು ಆತನನ್ನು ಚಿತ್ರಿಸಿರುವ ರೀತಿಯಲ್ಲಿ ಆತನ ಪಾತ್ರ ನಮ್ಮ ಹೃದಯವನ್ನು ಸೂರೆಗೊಳ್ಳುತ್ತದೆ. ಶ್ಮಶಾನದಂತಿರುವ ರಣರಂಗದಲ್ಲಿ ಬರುತ್ತಿರುವಾಗ ಅವನು ಅಭಿಮನ್ಯುವಿನ ಕಳೇಬರವನ್ನು ಕಾಣುತ್ತಾನೆ. ಆ ವೀರಬಾಲಕನ ಅದ್ವಿತೀಯ ಪರಾಕ್ರಮ ಸುಯೋಧನನ ಕಣ್ಣಿಗೆ ಕಟ್ಟಿದಂತಾಗುತ್ತದೆ. ಅವನು ಶತ್ರು ಪುತ್ರನೆಂಬುದು ಆತನ ತಲೆಯಲ್ಲಿ ಸುಳಿಯುವುದಿಲ್ಲ. ತಟ್ಟನೆ 'ನಿನ್ನಂ ಪೆತ್ತಳ್ ಮೊಲೆವೆತ್ತಳೆ? ವೀರಜನನಿವೆಸರಂ ಪೆತ್ತಳ್' (ನಿನ್ನನ್ನು ಹೆತ್ತವಳು ಬರಿಯ ಮೊಲೆಗಳನ್ನು ಪಡೆದ ಹೆಣ್ಣು ಮಾತ್ರವಲ್ಲ; 'ವೀರಜನನಿ'ಯೆಂಬ ಹೆಸರನ್ನು ಪೆತ್ತವಳು) ಎನ್ನುತ್ತಾನೆ. ಆತನ ಮೆಚ್ಚಿಕೆ ಮುಂದುವರಿದು ಭಕ್ತಿಯಾಗಿ ಪರಿಣಮಿಸುತ್ತದೆ. ಆತನು

ಅಸಮಬಲ ಭವದ್ವಿಕ್ರಮ
ಮಸಂಭವಂ ಪೆರರ್ಗೆ ನಿನ್ನನಾನಿತಂ ಪ್ರಾ
ರ್ಥಿಸುವೆನಭಿಮನ್ಯು! ನಿಜ ಸಾ
ಹಸೈಕದೇಶಾನುಮರಣಮೆಮಗಕ್ಕೆ ಗಡಾ

'ಅದ್ವಿತೀಯ ಪರಾಕ್ರಮಿಯಾದ ಹೇ ಅಭಿಮನ್ಯು, ನಿನ್ನ ಪರಾಕ್ರಮ ಮತ್ತೊಬ್ಬರಲ್ಲಿ ಇರುವುದು ಅಸಂಭವ. ನಿನ್ನನ್ನು ನಾನು ಇಷ್ಟು ಮಾತ್ರ ಪ್ರಾರ್ಥಿಸುತ್ತೇನೆ–ನಿನ್ನ ಸಾಹಸದ ಒಂದು ಭಾಗ ರೂಪವಾದ ಮರಣ ನಮಗೂ ಆಗಲಿ' ಎಂದು ಹೇಳಿ ನಮಸ್ಕರಿಸುತ್ತಾನೆ—ಇದೇ ಉದಾತ್ತಮನೋಭಾವವೇ ಉಪಪಾಂಡವರ ತಲೆಗಳನ್ನು ಅಶ್ವತ್ಥಾಮ ತರಿದುತಂದಾಗಲೂ ಕಾಣಬರುತ್ತದೆ. ಸಾವಿನ ಸಂಕಟದಲ್ಲಿ ನರಳುತ್ತಾ ಬಿದ್ದಿರುವ ದುರ್ಯೋಧನನ ಮನಸ್ಸಂತೋಷವಾಗಲೆಂದುಕೊಂಡ ಅಶ್ವತ್ಥಾಮ ಪಾಂಡವ ವಧೆಗೆಂದು ಹೊರಟು ಕತ್ತಲಿನಲ್ಲಿ ತಿಳಿಯದೆ ಉಪಪಾಂಡವರ ತಲೆಗಳನ್ನು ಕತ್ತರಿಸಿ ತರುತ್ತಾನೆ. ಆ ತಲೆಗಳನ್ನು ಕಾಣುತ್ತಲೆ ಶತ್ರುವಂಶ ನಿಶ್ಶೇಷವಾಯಿತೆಂಬ ಸಂತೋಷಕ್ಕೆ ಬದಲಾಗಿ ಕೌರವನು 'ಪರಮಜ್ಞಾನಿಯೆ,

ವಿವೇಕವಿಕಳರವೊಲ್ ಬಾಲರ ತಲೆಯನರಿದು ತಂದೆಯೊ! ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ' (ಪರಮಜ್ಞಾನಿಯಾದ ಅಶ್ವತ್ಥಾಮ, ಕೇವಲ ಮೂಢರು ಮಾಡುವಂತೆ ಈ ಹಸುಮಕ್ಕಳ ತಲೆಗಳನ್ನು ಕತ್ತರಿಸಿ ತಂದೆಯಲ್ಲಾ ; ಅನ್ಯಾಯವಾಗಿ ಪಂಚಮಹಾಪಾತಗಳಲ್ಲಿ ಒಂದಾದ ಶಿಶುವಧೆಯ ಪಾತಕ ನಿನ್ನ ತಲೆಗೆ ಕಟ್ಟಿತೆ?) ಎಂದು ಮನ್ನುಲ ಮರುಗುತ್ತಾನೆ. ಇಂತಹ ಲೋಕೋತ್ತರ ಗುಣಗಳನ್ನು ಕಂಡು ವಿಮರ್ಶಕರು ದುರ್ಯೋಧನನನ್ನು 'ಮಹಾನುಭಾವ'ನ ಪಟ್ಟಕ್ಕೆ ಏರಿಸಿದ್ದಾರೆ. ಇದು ದುರ್ಯೋಧನನ ಒಂದು ಮುಖವಾದರೆ, ಮತ್ತೊಂದು ಮುಖದಲ್ಲಿ ಆತನು 'ಸಾಹಸ ಧನ.' 'ಛಲದಂಕ ಮಲ್ಲ.' ತನ್ನವರಿಗಾಗಿ ಕಣ್ಣೀರನ್ನು ಸುರಿಸುತ್ತಿರುವಾಗಲೇ ಶತ್ರು ಪಕ್ಷದವರನ್ನು ನೆನೆದು ಕಿಡಿಗರೆಯುತ್ತಾನೆ. ಯುದ್ಧ ಭೂಮಿಯಲ್ಲಿ ಆತ ಹೋಗುತ್ತಿರುವಾಗ ಮುಪ್ಪಿನ ತಾಯ್ತಂದೆಗಳು ಆತನನ್ನು ಹುಡುಕಿಕೊಂಡು ಬಂದು ವಿವೇಕ ಹೇಳುತ್ತಾರೆ—

ತಂದೆ ಆತನೊಡನೆ

ಯಮಸುತನಿಂಬುಕ್ಕೆವನೆಮಗಿನ್ನುಮೊಡಂಬಡು. ಕಂದ, ಸಂಧಿಯಂ
ಸಮಗೊಳಿಸಲ್ಕೆ ಸಂಜಯನನಟ್ಟುವೆ, ಭೀಮನೊಳಾದ ಬದ್ಧವೈ
ರಮನುಳಿ. ನೋಡದಿರ್ ಸುತ ಸಹೋದರ ದುಃಖಮನೀವುದರ್ಧರಾ
ಜ್ಯಮನವರ್ಗಣ್ಣ ! ಕಾಲ್ಗಿಡಿದು ಬೇಡುವೆನಂಧನಿತಂ ಸುಪುತ್ರನಂ.

ಅಯ್ಯಾ, ಧರ್ಮರಾಯನು ನಮ್ಮ ಮಾತನ್ನು ಈಗಲೂ ಗೌರವಿಸುತ್ತಾನೆ. ಕಂದ, ನೀನು ಸಂಧಿಗೆ ಒಪ್ಪಿಕೊ. ಈಗಲೆ ಪಾಂಡವರ ಬಳಿಗೆ ಸಂಜಯನನ್ನು ಕಳುಹಿಸುತ್ತೇನೆ. ನಿನ್ನ ಸುತ ಸಹೋದರರು ಸತ್ತುದನ್ನು ನೆನೆಯಬೇಡ. ಅಣ್ಣ, ಕುರುಡನಾದ ನಿನ್ನ ತಂದೆ ಕಾಲುಹಿಡಿದು ಬೇಡಿಕೊಳ್ಳುತ್ತಿದ್ದೇನೆ. ಅವರಿಗೆ ಅರ್ಧ ರಾಜ್ಯವನ್ನು ಕೊಟ್ಟುಬಿಡು—ಎಂದು ಬೇಡಿಕೊಂಡ.

ತಾಯಿ.—

ಸಮರವ್ಯಾಪಾರಂ ಮಾ
ಣ್ದು ಮಗನೆ ನಿಜಶಿಬಿರಪತ್ತ ಬಿಜಯಂಗೆಯ್, ಸ
ತ್ತ ಮಗಂದಿರ್ ಸತ್ತರ್, ನೀ
ನೆಮಗುಳ್ಳೊಡೆ ಸಾಲ್ವುದವರೆನಿಂ ತಂದಪೆವೆ?

ಯುದ್ಧವನ್ನು ನಿಲ್ಲಿಸಿ ನಿನ್ನ ಶಿಬಿರಕ್ಕೆ ಹಿಂತಿರುಗು. ಸತ್ತಮಕ್ಕಳು ಸತ್ತರು; ಅವರನ್ನು ಪುನಃ ತರಲಾದೀತೆ? ನೀನು ಒಬ್ಬನು ಉಳಿದು ಕೊಂಡರೆ ನಮಗೆ ಅಷ್ಟೇ ಸಾಕು.

ಎಂದು ಕಂಬನಿಗರೆಯುತ್ತಾಳೆ. ',ವೀರಶತಜನನಿ'ಎಂದು ಪ್ರಖ್ಯಾತಳಾಗಿದ್ದ ಗಾಂಧಾರಿ ಈಗ 'ದುಃಖಶತಜನನಿ'ಯಾಗಿದ್ದಾಳೆ. ಆದರೆ ಕೌರವನ ವೇದನೆ ಯನ್ನು ಅವನ ಹೃದಯವೇ ಬಲ್ಲುದು. ತನ್ನ ಒಡಹುಟ್ಟಿದ ನೂರ್ವರೂ ಸತ್ತು ಹೋಗಿದ್ದಾರೆ. ಅತ್ತ ಧರ್ಮರಾಯ ತನ್ನ ಸೋದರರಲ್ಲಿ ಒರ್ವನು ಸತ್ತರೂ ತಾನು ಅಗ್ನಿ ಪ್ರವೇಶಮಾಡುವುದಾಗಿ ಪ್ರತಿಜ್ಞೆಮಾಡಿದ್ದಾನೆ. ಅವನ ಸೋದರಪ್ರೇಮ ಕೌರವನ ಹೃದಯವನ್ನು ಸೂರೆಗೊಂಡಿದೆ. ಆದ್ದರಿಂದಲೆ ಆತ ತಾಯ್ತಂದೆಗಳನ್ನು ಕುರಿತು 'ಬಾಳ್ವೆನೆಂಬೆನ್ನಳಿಯಾ ಸೆಯಂ ಬಿಸುಡಿಮೆನ್ನವರಾದುದನಾಗದಿರ್ಪೆನೆ?'–ನಾನು ಬದುಕುವೆನೆಂಬ ವ್ಯರ್ಥವಾದ ಆಶೆಯನ್ನು ಬಿಸಾಡಿರಿ; ನನ್ನವರು ಆದ ಗತಿಯನ್ನೇ ನಾನೂ ಪಡೆಯುತ್ತೇನೆ—ಎಂದು ಹೇಳುತ್ತಾನೆ. ಒಮ್ಮೆಗೆ ಆತನ ಹೃದಯ ಅಗ್ನಿ ಪರ್ವತದಂತಾಗಿ ಲಾವಾರಸದಂತಹ ಮಾತುಗಳು ಆತನಿಂದ ಉಕ್ಕುತ್ತವೆ.

ಸಾಧಿಸುವೆಂ ಫಲ್ಗುಣನಿಂ
ಸಾಧಿಸುವೆಂ ಪವನಸುತನ ಬಸಿಜಿಂ ಹಾ ಕ
ರ್ಣಾ! ದುಶ್ಯಾಸನ! ತೆಗೆವೆಂ
ಸಾಧಿಸಿ ನಿರ್ದೋಷಿ ಯಮಜನೊಳ್ ಪುದುವಾಳ್ವೆಂ

ಅಯ್ಯೋ ಕರ್ಣ, ಅರ್ಜುನನಿಂದ ನಿನ್ನನ್ನು ಪಡೆಯುತ್ತೇನೆ: ಅಯ್ಯೋ ದುಶ್ಯಾಸನ, ಭೀಮನ ಹೊಟ್ಟೆಯನ್ನು ಬಗೆದು ನಿನ್ನನ್ನು ಪಡೆಯುತ್ತೇನೆ. ಹೀಗೆ ಇವರಿಬ್ಬರನ್ನು ಅಹುತಿ ತೆಗೆದುಕೊಂಡ ಮೇಲೆ. ನಿರ್ದೋಷಿಯಾದ ಧರ್ಮರಾಯನೊಡನೆ ಜೊತೆಯಾಗಿ ಬಾಳುತ್ತೇನೆ–ಎಂದು ತಾಯ್ತಂದೆ ಗಳಿಗೆ ಹೇಳುತ್ತಾನೆ. ದುಃಖದ ಅತಿರೇಕದಲ್ಲಿ ಆತನ ಹೃದಯದಲ್ಲಿ ಉದಿ ಸುವ ಈ ಧರ್ಮಬುದ್ಧಿಯನ್ನು ನೋಡಿ.

ಅಮ್ಮಗನೆ ನಿಮಗೆ ಧರ್ಮಜ
ನೇಮ್ಮಗಲ್ಲನೆ? ಬಳಿಕ್ಕೆ ನೀಮುಂ ತಾಮುಂ
ನಿಮ್ಮೊಳ್ ನೇರ್ಪಡುಗಿಡದೆ ಸು
ಖಮ್ಮನ್ನಿನ ತೆಜದೆ ಬಾಳ್ವುದಿನ್ ಬಿಡಿಮೆನ್ನಂ

ನಿಮಗೆ ನಾನು ಮಾತ್ರ ಮಗ, ಧರ್ಮರಾಜನು ಮಗನಲ್ಲವೆ? (ಆತನೂ ನಿಮ್ಮ ಮಗನೆ) ನಿಮ್ಮ ನಿಮ್ಮಲ್ಲಿ ಹೊಂದಿಕೊಂಡು ನೀವು ಸುಖವಾಗಿರಿ. ನನ್ನನ್ನು ಇನ್ನು ಕೈಬಿಡಿರಿ. (ನನ್ನ ಆಶೆ ನಿಮಗೆ ಬೇಡ)

ಇದು ರನ್ನ ಚಿತ್ರಿಸಿರುವ ಕೌರವನ ಪಾತ್ರದ ತಿರುಳು. ಆತನು ವೀರ ಕರುಣಗಳ ಒಂದು ಸಂಗಮಸ್ಥಾನ. ಆ ಮಾನಧನನ ಛಲ ನಮ್ಮ ಹೃದಯ ವನ್ನು ಸೂರೆಗೊಳ್ಳುತ್ತದೆ. ಆತನ ಸೋದರಪ್ರೇಮವನ್ನು ಮಿತ್ರಸ್ನೇಹ ವನ್ನು ಕಂಡು ಆತನ ನಿಶ್ಚಯವನ್ನು ಕದಲಿಸಲಾರದೆ, ಭೀಷ್ಮರಲ್ಲಿ ಸಮಾ ಲೋಚಿಸಿ ಮುಂದಿನ ಕಾರ್ಯವನ್ನು ನಿಶ್ಚಯಿಸುಮಂತೆ ತಿಳಿಸುತ್ತಾರೆ. ದುರ್ಯೋಧನನು ಒಪ್ಪಿ ಭೀಷ್ಮರ ಬಳಿ ಹೋಗುತ್ತಾನೆ. ದೇಸಿಗನಂತೆ ತನ್ನ ಬಳಿಗೆ ಬಂದ ಈ ಮೊಮ್ಮಗನನ್ನು ಕಂಡು ಅವರ ಹೃದಯ ಮರುಗುತ್ತದೆ.

ಧವಳ ಗಜೇಂದ್ರಮುಂ ಧವಳ ಚಾಮರಮುಂ ಧವಳಾತಪತ್ರಮುಂ
ಧವಳ ವಿಲೋಚನೋತ್ಪಲ ವಧೂಜನಂ ಬೆರಸಷ್ಟದಿಕ್ತಟಂ
ಧವಳಿಸೆ ಕೀರ್ತಿಯಿಂ ಧವಳಮಂಗಳಗೇಯದಿನೊಪ್ಪಿ ಬರ್ಪ ಕೌ
ರವ ಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೆ?

ಬಿಳಿಯ ಆನೆ, ಬಿಳಿಯ ಚಾಮರ, ಬಿಳಿಯ ಕೊಡೆ, ಬೆಳಗುವ ಕಣ್ಣ ಕಾಂತಿಯುಳ್ಳ ಅಂಗನಾಜನ—ಇವುಗಳಿಂದ ಕೂಡಿಕೊಂಡು ಎಂಟು ದಿಕ್ಕು ಗಳೂ ತನ್ನ ಕೀರ್ತಿಯಿಂದ ಬೆಳಗುವಂತೆ ಮಂಗಳಗೀತೆಗಳೊಡನೆ ಬರ ಬೇಕಾದ ಕೌರವಧವಳನು ಈಗ ಒಬ್ಬನೆ ಬರಬೇಕಾಯಿತೆ? ಎಂಬ ಭೀಷ್ಮರ ಮಿಡುಕು ನಮ್ಮ ಹೃದಯವನ್ನು ಕಲಕುತ್ತದೆ. ಇಲ್ಲಿ ಧವಳ (ಶುಭ್ರ, ಬಿಳುಪು, ಕಾಂತಿ) ಎಂಬ ಮಾತಿನ ಪುನರಾವರ್ತನೆಯಿಂದ ಸೃಷ್ಟಿಯಾಗುವ ವಾತಾವರಣ ಎಷ್ಟು ಮಾರ್ಮಿಕವಾಗಿದೆ? ಭೀಷ್ಮರು ಮೊಮ್ಮಗನನ್ನು ಇಷ್ಟು ಪೊಗಳಿ, ಚಂಡಿಯಾದ ಹುಡುಗನನ್ನು ಹಾದಿಗೆ ತರಲು ಪ್ರಯತ್ನಿ ಸುವ ಹಿರಿಯರಂತೆ ಪ್ರಯತ್ನಿಸಿ, 'ಸಂಧಿಮಾಡಿಕೊ' ಎಂದು ಹೇಳುತ್ತಾರೆ. ಆ ಮಾತನ್ನು ಕೇಳಿ ಕೌರವ ಮೆಟ್ಟಿ ಬೀಳುತ್ತಾನೆ. 'ಸಮರದೊಳೆನಗಜ್ಜ, ಪೇಳಿಮಾವುದು ಕಜ್ಜಂ?—ಅಜ್ಜ, ಯುದ್ಧದಲ್ಲಿ ನಾನೇನು ಮಾಡಲಿ? ಅದನ್ನು ಹೇಳಿ'—ಸಂಧಿಯಮಾತು ಬೇಡ.

ನೆಲಕಿಱುವೆನೆಂದು ಬಗೆದಿರೆ?
ಚಲಕಿಱುವೆಂ ಪಾಂಡುಸುತರೊಳೀ ನೆಲನಿದು ಪಾ
ಳ್ನೆಲನೆನಗೆ ದಿನಪ ಸುತನಂ
ಕೊಲಿಸಿದ ನೆಲನೊಡನೆ ಮತ್ತೆ ಪುದುವಾಳ್ವೆನೆ?

ನಾನು ರಾಜ್ಯಕ್ಕಾಗಿ ಹೋರಾಡುವೆನೆಂದುಕೊಂಡಿರ? ಇಲ್ಲ; ನಾನು ಹೋರಾಡುವುದು ಛಲಕ್ಕಾಗಿ. ಪಾಂಡವರೊಡನೆ ಕೂಡಿದ ಈ ರಾಜ್ಯವೆಂಬುದು ಒಂದು ಶ್ಮಶಾನವಿದ್ದಂತೆ! ಸೂರ್ಯಪುತ್ರನನ್ನು ಕೊಲ್ಲಿಸಿದ ಈ ಹಾಳು ಭೂಮಿಯನ್ನು ಮತ್ತೆ ಹಂಚಿಕೊಂಡು ರಾಜ್ಯವಾಳಲೇ?—ಸೀವಿಲ್ಲ, ದ್ರೋಣರಿಲ್ಲ, ಕರ್ಣನಿಲ್ಲ, ದುಶ್ಶಾಸನನಿಲ್ಲ. ನಾನು ಯಾರೊಡನೆ ರಾಜ್ಯಭಾರ ಮಾಡಲಿ? ಯಾರಿಗೆ ನನ್ನ ವೈಭವವನ್ನು ತೋರಿಸಿಕೊಂಡು ಮೆರೆಯಲಿ?—ಎಂದು ಹೇಳಿ ಭೀಷ್ಮರ ಬಾಯಿಮುಚ್ಚಿಸುತ್ತಾನೆ. ಅವರು ವೈಶಂಪಾಯನ ಕೊಳದಲ್ಲಿ ಆ ದಿನವನ್ನು ಕಳೆದು, ಮರುದಿನ ಬರುವ ಬಲರಾಮನೊಡನೆ ಸೇರಿಕೊಂಡು ಯುದ್ಧವನ್ನು ಮುಂದುವರಿಸುವಂತೆ ಬುದ್ಧಿ ಹೇಳುತ್ತಾರೆ. ಕೌರವನು ಇದಕ್ಕೆ ಒಪ್ಪಿದನಾದರೂ, 'ಹಾಡಿದ್ದನ್ನೇ ಹಾಡುವ ಕಿಸುಬಾಯಿ ದಾಸ'ನಂತೆ ಎಲ್ಲರೂ ಸಂಧಿಯ ಮಾತನ್ನೆ ಆಡುವುದನ್ನು ಕೇಳಿ ಆತನಿಗೆ ಅಸಹ್ಯವೇದನೆಯಾಗುತ್ತದೆ. ತನಗೆ ತಾನೆ

ಅರಿಯರ್ ಪಾಂಡವರೊಳ್
ವಿರೋಧಮುಂ ಬಿಸುಟು ಸಂಧಿಯುಂ ಮಾಡುವುದೆಂ
ಬರ ನುಡಿಯುಂ ಕೇಳಲ್ಕೆಂ
ದೆರಡುಂ ಕಿವಿಗಳುಮನೆನಗೆ ಬಿದಿ ಮಾಡಿದನೆ?

'ಶತ್ರುಗಳಾದ ಪಾಂಡವರಲ್ಲಿ ವಿರೋಧವನ್ನು ಬಿಟ್ಟು ಸಂಧಿಯನ್ನು ಮಾಡಿಕೊ ಎನ್ನುವವರ ಮಾತುಗಳನ್ನು ಕೇಳುವುದಕ್ಕಾಗಿಯೇ ಹಾಳು ವಿಧಿ ನನಗೆ ಈ ಕಿವಿಗಳನ್ನು ಕೊಟ್ಟಿರಬಹುದೆ?—ಎಂದು ಜಿಗುಪ್ಸೆಪಟ್ಟುಕೊಳ್ಳುತ್ತಾನೆ. ಹಿರಿಯರ ಮಾತಿಗಾಗಿ ಕೊಳದಲ್ಲಿ ತಲೆಮರೆಸಿಕೊಂಡನಾದರೂ, ಭೀಮನ ಮಾತುಗಳನ್ನು ಕೇಳುತ್ತಲೆ 'ನೀರೊಳಗಿರ್ದುಂ ಬೆಮರ್ತನುರಗಪತಾಕಂ' (ಹಾವೆ ಬಾವುಟವಾದ ದುರ್ಯೋಧನ ನೀರೊಳಗಿದ್ದು ಕೋಪದಿಂದ ಕಾಯ್ದು ಬೆವರಿಹೋದ). 'ರಸೆಯುಂ ಕಾಲಾಗ್ನಿರುದ್ರಂ ಪೊಱಮಡುವಂತೆ'

(ಪ್ರಳಯಕಾಲದ ರುದ್ರನು ಭೂಗರ್ಭದಿಂದ ಭೇದಿಸಿಕೊಂಡು ಹೊರಗೆ ಬರುವಂತೆ) ನೀರಿನಿಂದ ಹೊರಗೆ ಬಂದು ಭೀಮನೊಡನೆ ಹೋರಾಡಿ ಮಡಿದು ಬಿದ್ದ. ರನ್ನನು ಪಂಪಕವಿಯು ಬರೆದ ಚರಮ ಗೀತೆಯನ್ನೇ ತನ್ನ ಕಾವ್ಯದಲ್ಲಿಯೂ ಬಳಸಿಕೊಂಡಿದ್ದಾನೆ.

ನುಡಿದುದನೆಯ್ದೆ ತುತ್ತತುದಿಯೆಯ್ದುವಿನಂ ನುಡಿದಂ ಪಲಂ ಚಲಂ
ಬಿಡಿದುದನೆಯ್ದೆ ಮುಂಪಿಡಿದುದಂ ಪಿಡಿದಂ ಸಲೆ ಪೂಣ್ದು ಪೂಣ್ಕೆ ನೇ
ರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡ
ಲ್ವಡುವಿನಮಣ್ಮುಗುಂದದೆದಲೇನಭಿಮಾನಧನಂ ಸುಯೋಧನಂ.

ಆಡಿದಮಾತನ್ನೆ ಕಟ್ಟಕಡೆಯವರೆಗೂ ಆಡಿದ; ಪ್ರಾರಂಭದಲ್ಲಿ ಹಿಡಿದ ಛಲವನ್ನೇ ಕಡೆಯವರೆಗೂ ಸಾಧಿಸಿದ; ತನ್ನ ಪ್ರತಿಜ್ಞೆಯನ್ನೇ ನಡೆಯುವಷ್ಟು ಕಾಲವೂ ನಡಸಿದ; ತನ್ನ ದೇಹ ಬಿದ್ದು ಹೋಗುವವರೆಗೂ ಇನ್ನೊಬ್ಬರಿಗೆ ಹೆದರಿ ಬೆದರಿ ಬಾಳಲಿಲ್ಲ. ಇನ್ನೆಂತಹ ಆತ್ಮಾಭಿಮಾನಿಯೋ ಸುಯೋಧನ —ಬಹುಶಃ ರನ್ನನು ಈ ಪದ್ಯ ಪಂಪನ ದುರ್ಯೋಧನನಿಗಿಂತಲೂ ತನ್ನ ದುರ್ಯೋಧನನಿಗೇ ಹೆಚ್ಚು ಒಪ್ಪುವುದೆಂದು ಭಾವಿಸಿದನೋ ಏನೊ! ಈ ಚರಮ ಸ್ತುತಿಯೊಡನೆ ಸೂರ್ಯನನ್ನೂ ಆವೇಳೆಗೆ ಮುಳುಗಿಸಿ, 'ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್'—ಕುರುವಂಶದ ಸೂರ್ಯನಾದ ಕೌರವನೂ ಸೂರ್ಯನೂ ಅಸ್ತಂಗತರಾದರು-ಎಂದು ಹೇಳಿ, ಇನ್ನು ಕುರುವಂಶಕ್ಕೆ ಕತ್ತಲೆ ಕವಿಯಿತೆಂಬ ಸೂಚನೆಯಿಂದ ಕೌರವನನ್ನು ಗೌರವಿಸಿದ್ದಾನೆ.

ಮೇಲಿನ ಕೌರವ ಪ್ರಶಸ್ತಿಯನ್ನು ಕಂಡು ರನ್ನನು ತನ್ನ ಸ್ವಾಮಿಗೆ ದ್ರೋಹಮಾಡಿದನೆ? ಎಂಬ ಪ್ರಶ್ನೆಯನ್ನು ಯಾರಾದರೂ ಕೇಳಿಯಾರು? ರನ್ನನು ಬರೆದುದು ಸಾಹಸಭೀಮ ವಿಜಯ; ಸತ್ಯಾಶ್ರಯನನ್ನು ಭೀಮನಲ್ಲಿ ಅಂತರ್ಗತವಾಗಿ ಮಾಡಿ 'ಸಮಸ್ತ ಗದಾಯುದ್ಧ'ವನ್ನು ಇಲ್ಲಿ ಬರೆಯುತ್ತಿರುವುದು. ಆದ್ದರಿಂದ ಭೀಮನ ಪಾತ್ರ ಅತ್ಯಂತ ಉಜ್ವಲವಾಗಿಯೆ ಇದೆ. ಆ ಪಾತ್ರಕ್ಕೆ ತಕ್ಕ ಪ್ರೇರಕ ಶಕ್ತಿಯಾದ ದ್ರೌಪದಿಯೂ ಇಲ್ಲಿ ರಂಗುರಂಗಾಗಿ ಚಿತ್ರಿತಳಾಗಿದ್ದಾಳೆ. ವಿದೂಷಕನು ಆಕೆಯು 'ದೇವಾಸುರ ಯುದ್ಧಕ್ಕೆ ಕರಗಂಬೊತ್ತ ಡಾವರ ಡಾಕಿನಿ'—ದೇವಾಸುರರ ಯುದ್ಧಕ್ಕೆ ಮುನ್ನ ಶಕ್ತಿದೇವತೆಯ ಪೂಜೆಗಾಗಿ ಕರಗವನ್ನು ಹೊತ್ತಿರುವ ಪಿಶಾಚಿನಿ—ಎಂದು ಸಂಭೋಧಿಸಿ

ಕುರುಕುಲಮಂ ನುಂಗಿದೆ ಇ
ನ್ನರೆಬರುಮಂ ನುಂಗಲಿರ್ಪೆ ಕುರುಪತಿಯುಮನೀ
ಎರಡನೆಯ ಹಿಡಿಂಬೆಯನೆ
ಮ್ಮರಸಂ ರಕ್ಕಸಿಯನೆಲ್ಲಿ ತಂದನೊ ನಿನ್ನಂ ?

ಕೌರವ ವಂಶವನ್ನೆಲ್ಲಾ ನುಂಗಿದೆ; ಇನ್ನು ಉಳಿದಿರುವ ದುರ್ಯೋಧನನನ್ನೂ ನುಂಗಲು ಸಿದ್ಧವಾಗಿರುವೆ. ನೀನು ಎರಡನೆಯ ಹಿಡಂಬಿ; ನಿನ್ನಂತಹ ರಕ್ಕಸಿಯನ್ನು ನಮ್ಮ ಮಹಾರಾಜ ಎಲ್ಲಿಂದ ತಂದನೋ!—ಎಂದು ಹಾಸ್ಯಮಾಡುತ್ತಾನೆ. ಈ ಹಾಸ್ಯದಲ್ಲಿ ಸತ್ಯದ ಬಿತ್ತವೂ ಇದೆ. ಅವಳು ಭೀಮನನ್ನು ಕೆರಳಿಸುವ ಮೋಡಿಯನ್ನು ನೋಡಿ-

ಇಱಿವ ಬೆಡಂಗ ದೇವ ಪರಮೇಶ್ವರ ಸಾಹಸಭೀಮ ನಿನ್ನೊಳಾ
ರಿಱಿದು ಬರ್ದುಂಕುವರ್ ನಿಜಭುಜೋಗ್ರ ಗದಾಪರಿಘ ಪ್ರಹಾರದಿಂ
ಪಱಿವಱಿಯಾಗಿ ಪೊಣ್ಮವೆಣನಾಗಿ, ಮರುಳ್ಗುಣಿಸಾಗಿ ಯುದ್ಧದೊಳ್
ಕುಱಿದಱಿಯಾಗಿ ಬಿಳ್ದರಿಬಲಂಗಳೆ ಪೇಳವೆ ನಿನ್ನ ಬೀರಮಂ

ಕತ್ತರಿಸುವುದರಲ್ಲಿ ತನ್ನದೆ ಒಂದು ಬೆಡಗುಳ್ಳ, ಹೇ ಸ್ವಾಮಿ ಪರಮೇಶ್ವರ, ಸಾಹಸಭೀಮ, ನಿನ್ನೊಡನೆ ಯುದ್ಧಮಾಡಿ ಯಾರು ಬದುಕುತ್ತಾರೆ? ನಿನ್ನ ಭುಜದ ಗದೆಯಿಂದ ಕುರಿಯನ್ನು ಕತ್ತರಿಸಿದಂತಾಗಿ ಚೂರುಚೂರಾಗಿ ಬಿದ್ದಿರುವ ಈ ಶತ್ರುಸೇನೆ, ಬಾತು ಬಿದ್ದು ಪಿಶಾಚಿಗಳಿಗೆ ಆಹಾರವಾಗಿರುವ ಈ ಹೆಣಗಳು-ಇವುಗಳೆ ನಿನ್ನ ಪರಾಕ್ರಮವನ್ನು ಹೇಳುವುದಿಲ್ಲವೆ ?

ಒಡಲೊಡಮೆಯೆಂಬಿವೆರಡುಂ
ಕೆಡಲಿರ್ಪುವು ಕೆಡದ ಕಸವರಂ ಜಸಮದಱಿಂ
ಕೆಡುವೊಡಲೊಡಮೆಯನೆಂದುಂ
ಕೆಡದೊಡಮೆಗೆ ಮಾಱುಗುಡುವುದಿಱಿವ ಬೆಡಂಗಾ

ಒಡಲು, ಒಡವೆ (ದೇಹ.ಐಶ್ವರ್ಯ) ಇವೆರಡೂ ಕೆಟ್ಟುಹೋಗತಕ್ಕವುಗಳೇ. ಕೆಡದ ಚಿನ್ನವೆಂದರೆ ಕೀರ್ತಿ. ಆದ್ದರಿಂದ ಕೆಡುವ ಈ ಒಡವೆ ಒಡಲುಗಳನ್ನು ಕೊಟ್ಟು ಕೆಡದ ಒಡವೆಗಳನ್ನು ಕೊಳ್ಳಬೇಕು.

ಮಣಿಕನಕಂ ವಸ್ತು ವಿಭೂ
ಷಣಂಗಳಂ ಕೊಟ್ಟು ಪೆಂಡಿರೊಲ್ವರೆ ? ಗಂಡರ್

ಗುಣಮನೆ ಮೆಱೆವುದು ಶಸ್ತ್ರ
ವ್ರಣಮಂ ನಿನ್ನಂತೆ ಮೆಱೆವುದಿಱಿವ ಬೆಡಂಗ.

ಹೇ ಇರಿವ ಬೆಡಂಗ! ರತ್ನ, ಬಂಗಾರ, ಒಡವೆ ವಸ್ತು ಕೊಟ್ಟರೆ ಹೆಂಡಿರು ಒಲಿಯುತ್ತಾರೆಯೆ? ಗಂಡಸರಾದವರು ತಮ್ಮ ಗುಣವನ್ನು ಪ್ರದರ್ಶಿಸ ಬೇಕು; ನಿನ್ನಂತೆ ಬಾಣದ ಗಾಯಗಳನ್ನು ಪ್ರದರ್ಶಿಸಬೇಕು. ಆಗ ಒಲಿಯುತ್ತಾರೆ

ಭೀಮನು ದ್ರೌಪದಿಯನ್ನು ಕುರಿತು ಹೇಳುವ ಈ ಮಾತುಗಳನ್ನು ಕೇಳಿ—

ನೀನಗ್ನಿಪುತ್ರಿಯೈ ಪವ
ಮಾನ ತನೂಭವನೆ ನಾನ್; ಚಲಂ ಕೂಡಿರೆ ಸಂ
ಧಾನಮರಿನೃಪರೋಳೆಂತನ
ಲಾನಿಲ ಸಂಯೋಗಮುರಿಪದಿರ್ಕುಮೆ ಪಗೆಯಂ

ನೀನು ಬೆಂಕಿಯ ಮಗಳು. ನಾನು ಗಾಳಿಯ ಮಗ. ನಮಗೆ ಛಲವೊಂದು ಇದ್ದರೆ ಸಂಧಾನವೆಲ್ಲಿ ಬಂತು? ಬೆಂಕಿ ಗಾಳಿ ಸೇರಿ ಶತ್ರುಗಳನ್ನು ಸುಟ್ಟು ಹಾಕುವುದಿಲ್ಲವೆ?—ಮಾತುಗಳು ಎಷ್ಟು ಹರಿತವಾಗಿವೆ. ರನ್ನನು 'ಭೀಮ ನನ್ನ ಇಳಿಸಿಲ್ಲ. ದುರ್ಯೋಧನನನ್ನು ಏರಿಸಿರುವನು, ಘನತೆಗೊಯ್ದಿರುವನು' ಎಂದು ದಿವಂಗತ ಶ್ರೀಯವರು ಕನ್ನಡ ಕೈಪಿಡಿ (ಸಂ ೨, ಪು ೫೯೯) ಯಲ್ಲಿ ಹೇಳಿರುವ ಮಾತು ಅರ್ಥವತ್ತಾಗಿವೆ.

ಗದಾಯುದ್ಧವನ್ನು ಆಮೂಲಾಗ್ರವಾಗಿ ಓದಿದ ಮೇಲೆ ಕವಿ 'ಸರ ಸ್ವತಿಯ ಭಂಡಾರದ ಮುದ್ರೆಯನ್ನು ಒಡೆದಿರುವೆನು' ಎಂದು ಹೇಳಿಕೊಂಡಿ ರುವ ಮಾತು ಸುಳ್ಳೇನೂ ಅಲ್ಲವೆನ್ನಿಸುತ್ತದೆ.

# ಪಂಪಯುಗದ ಉಳಿದ ಕವಿಗಳು

## ೧. ಚಾವುಂಡರಾಯ

ಶ್ರವಣಬೆಳುಗೊಳದಲ್ಲಿ ಗೊಮ್ಮಟನ ಪ್ರತಿಮೆಯನ್ನು ನಿಲ್ಲಿಸಿ ಅಮರತೆಯನ್ನು ಪಡೆದ ಚಾವುಂಡರಾಯನು ಗಂಗರಾಜನಾದ ರಾಚಮಲ್ಲ (ಕ್ರಿ. ಶ. 974-984) ನ ಮಂತ್ರಿಯಾಗಿ, ಸೇನಾಪತಿಯಾಗಿ, ತನ್ನ ಪರಾಕ್ರಮದಿಂದ 'ಸಮರಪರಶುರಾಮ', 'ವೀರಮಾರ್ತಾಂಡ' 'ಪ್ರತಿಪಕ್ಷರಾಕ್ಷಸ' ಎಂಬ ಬಿರುದುಗಳನ್ನು ಗಳಿಸಿದನು: ಔದಾರ್ಯದಿಂದ ರಾಜನನ್ನು ಮೆಚ್ಚಿಸಿ 'ರಾಯ' ಎಂಬ ಬಿರುದನ್ನೂ ಜನರಿಂದ 'ಅಣ್ಣ' ಎಂಬ ಮೆಚ್ಚಿಗೆಯನ್ನೂ ಪಡೆದಿದ್ದವನು. ರತ್ನತ್ರಯರಲ್ಲಿ ಒಬ್ಬನಾದ ರನ್ನನ ಪೋಷಕನಾಗಿದ್ದವನು. ಹತ್ತನೆಯ ಶತಮಾನದ ಉಳಿದ ಕವಿಗಳಂತೆ ಈತನೂ ಕವಿಯೂ ಕಲಿಯೂ ಆಗಿದ್ದನು. ವಡ್ಡಾರಾಧನ ಉಪಲಬ್ಧವಾಗುವವರೆಗೆ ಚಾವುಂಡರಾಯನ 'ತ್ರಿಷಷ್ಟಿಲಕ್ಷಣ ಮಹಾಪುರಾಣ'ವೇ ಮೊದಲನೆಯ ಗದ್ಯಕಾವ್ಯವೆಂಬ ಪ್ರಶಸ್ತಿಗೆ ಪಾತ್ರವಾಗಿತ್ತು. ಈಗ ಆ ಪ್ರಶಸ್ತಿ ಇಲ್ಲವಾದರೂ ಅದರ ಪ್ರಾಮುಖ್ಯತೆಗೆ ಏನೂ ಅಪೋಹ ಬಂದಿಲ್ಲ. ಕನ್ನಡ ಗದ್ಯಸಾಹಿತ್ಯದ ಇತಿಹಾಸದಲ್ಲಿ ಚಾವುಂಡರಾಯನ ಕಾವ್ಯಕ್ಕೆ ಸಾಕಷ್ಟು ಮನ್ನಣೆ ಸಲ್ಲಬೇಕಾಗಿದೆ.

'ತ್ರಿಷಷ್ಟಿ ಲಕ್ಷಣ ಪುರಾಣ' ಅಥವಾ 'ಚಾವುಂಡರಾಯ ಪುರಾಣ' ಜೈನರಲ್ಲಿ ಪೂಜ್ಯರೆಂದು ಪರಿಗಣಿತರಾದ ತೀರ್ಥಂಕರರು, ಚಕ್ರವರ್ತಿಗಳು, ಇತ್ಯಾದಿ ೬೩ ಜನ ಶಲಾಕಾಪುರುಷರ ಕಥೆಗಳನ್ನು ಒಳಗೊಂಡಿದೆ. ಸಂಸ್ಕೃತದಲ್ಲಿ ಜಿನಸೇನ, ಗುಣಭದ್ರರು ಬರೆದಿರುವ ಮಹಾಪುರಾಣದ ಆಧಾರದಿಂದ ಬರೆಯುತ್ತಿರುವ ಈ ಗ್ರಂಥ ಜೈನರಿಗೆ ಬಹು ಪವಿತ್ರವಾದುದಾಗಿದೆ. ಕವಿಯು ಧರ್ಮದೊಡನೆ ಕಾವ್ಯಧರ್ಮವನ್ನು ತರಲು ಪ್ರಯತ್ನಿಸಿ ಬಹುಮಟ್ಟಿಗೆ ಕೃತಕೃತ್ಯನಾಗಿದ್ದಾನೆ. ಕಾವ್ಯದಲ್ಲಿ ಅಲ್ಲಲ್ಲಿಯೇ ಮಿನುಗುವ ಕಾವ್ಯಗುಣವನ್ನು ಕಂಡು ಕವಿಯನ್ನು ಮೆಚ್ಚಬಹುದು. ಪಾರಿಭಾಷಿಕ ಶಬ್ದಗಳು ಮತ್ತು ಸಂಸ್ಕೃತ ಸಮಾಸಗಳ ಬಾಹುಳ್ಯವಿರುವುದಾದರೂ ಗಾಂಭೀರ್ಯದಿಂದ ಕೂಡಿದ

ಸರಳತೆಯೊಡನೆ ಗದ್ಯ ಹರಿಯುತ್ತದೆ. ಕವಿಯ ಕೈಗೊಂಡಿರುವುದು ಆಗಮ ಸಾಹಿತ್ಯದ ಸೃಷ್ಟಿಯಾದುದರಿಂದ ಆತನು ಹೆಚ್ಚು ಸ್ವಾತಂತ್ರ್ಯವನ್ನು ವಹಿಸುವಂತಿಲ್ಲ. ಆದ್ದರಿಂದ ಆತನು ಅತ್ತಿತ್ತ ತಿರುಗದೆ ನೇರವಾಗಿ ತನ್ನ ಗುರಿಯತ್ತ ಸಾಗಿ ಕೃತಕೃತ್ಯನಾಗಿದ್ದಾನೆ.

**೨. ಮೊದಲನೆಯ ನಾಗವರ್ಮ**

'ಗದ್ಯಂ ಕವೀನಾಂ ನಿಕಷಂ ವದನ್ತಿ'—ಗದ್ಯವೇ ಕವಿಗಳ ಒರೆಗಲ್ಲು—ಎನ್ನುವಷ್ಟು ಗದ್ಯಕಾವ್ಯವನ್ನು ಮುಗಿಲೆತ್ತರಕ್ಕೆ ಒಯ್ದ ಮಹಾಕವಿ ಬಾಣಭಟ್ಟ, 'ಬಾಣೋಚ್ಛಿಷ್ಟಂ ಜಗತ್ಸರ್ವಂ'—ಜಗತ್ತಿನಲ್ಲಿರುವುದೆಲ್ಲವೂ ಬಾಣನ ಎಂಜಲು—ಎನ್ನುವಷ್ಟು ಸರಸ ವಿಷಯಗರ್ಭಿತವಾಗಿ ತನ್ನ ಕಾದಂಬರಿಯನ್ನು ಸಂಸ್ಕೃತದಲ್ಲಿ ಸೃಷ್ಟಿಸಿದನು. ಆ ಕೃತಿರತ್ನವನ್ನು ಕನ್ನಡಕ್ಕೆ ತಂದುಕೊಟ್ಟ ಕೀರ್ತಿ ನಾಗವರ್ಮನದು. ಸಂಸ್ಕೃತದ ಗದ್ಯಕಾವ್ಯವೊಂದನ್ನು ಕನ್ನಡದ ಚಂಪುವಿಗೆ ತಿರುಗಿಸ ಹೊರಟವರಲ್ಲಿ ಈತ ಮೊದಲಿಗ. ಈತನನ್ನು ಅನುಸರಿಸಿ ನೇಮಿಚಂದ್ರ, ದೇವಿಕವಿ, ಚೌಂಡರಸ ಮೊದಲಾದವರು ಇದೊಂದು ಸಂಪ್ರದಾಯವನ್ನೇ ಬೆಳೆಸಿದ್ದಾರೆ. ಇವರ ಸಾಲಿನಲ್ಲಿ ಕಾಲದ ದೃಷ್ಟಿಯಿಂದ ಮಾತ್ರವಲ್ಲದೆ ಯೋಗ್ಯತೆಯ ದೃಷ್ಟಿಯಿಂದಲೂ ನಾಗವರ್ಮನು ಅಗ್ರಗಣ್ಯ.

ಕರ್ಣಾಟಕ ಕಾದಂಬರಿ, ಛಂದೋಂಬುಧಿ, ಭಾಷಾಭೂಷಣ, ಕಾವ್ಯಾವಲೋಕನ, ವಸ್ತುಕೋಶ—ಈ ಐದು ಗ್ರಂಥಗಳು ನಾಗವರ್ಮ ಕೃತವೆಂದು ಗಣನೆಯಾಗಿವೆ. ಈ ಐದನ್ನೂ ಒಬ್ಬನೇ ಬರೆದನೆ, ಮೊದಲೆರಡನ್ನು ಒಬ್ಬ ನಾಗವರ್ಮ, ಉಳಿದುವನ್ನು ಎರಡನೆಯ ನಾಗವರ್ಮ ಬರೆದರೆ? ಮೊದಲನೆಯದನ್ನು, ಎರಡನೆಯದುನ್ನು, ಉಳಿದವುಗಳನ್ನು ಅನುಕ್ರಮವಾಗಿ ಬರೆದ ಮೂವರು ನಾಗವರ್ಮರಿರುವರೆ? ಈ ಪ್ರಶ್ನೆಗಳನ್ನು ಎತ್ತಿಕೊಂಡು ಸಾಕಷ್ಟು ವಾಗ್ವಾದ ನಡೆದಿದೆ. ಆ ರೇಜಿಗೆಯನ್ನು ಕೈಬಿಟ್ಟು ಬಹು ಜನ ಸಮ್ಮತವಾಗಿರುವಂತೆ, ಕರ್ಣಾಟಕ ಕಾದಂಬರಿ ಛಂದೋಂಬುಧಿಗಳನ್ನು ಬರೆದವನು ಮೊದಲ ನಾಗವರ್ಮನೆಂದು ನಾವು ಸ್ವೀಕರಿಸೋಣ. ನಾಗವರ್ಮಕವಿ ಪಂಪನಂತೆ ವೆಂಗಿದೇಶದ ವೆಂಗಿಪಳುವಿನವನೆಂದೂ ಕೌಂಡಿಣ್ಯ ಗೋತ್ರದ ವೆಣ್ಣಮಯ್ಯ-ಪೋಳಕಬ್ಬೆ ಎಂಬ ಬ್ರಾಹ್ಮಣದಂಪತಿಗಳ ಹಿರಿಯ

ಮಗನೆಂದೂ ಛಂದೋಂಬುಧಿಯ ಪದ್ಯಗಳಿಂದ ತಿಳಿದುಬರುತ್ತದೆ. ಕವಿರಾಜ, ಬುಧಾಬ್ಜವನ ಕಳಹಂಸ, ಕಂದಕಂದರ್ಪ, ನೆಗಳ್ತೆಗೋಜ—ಎಂಬಿವು ಆತನ ಬಿರುದುಗಳು.

ನಾಗವರ್ಮನ 'ಛಂದೋಂಬುಧಿ'ಯು ಕನ್ನಡ ಛಂದಸ್ಸನ್ನು ಕುರಿತು ತಿಳಿಸುವ ಮೊಟ್ಟಮೊದಲ ಗ್ರಂಥ. ಈಶ್ವರನು ಛಂದಶ್ಶಾಸ್ತ್ರವನ್ನು ಉಮೆಗೆ ಬೋಧಿಸಿದನಂತೆ! ಆದ್ದರಿಂದ ನಾಗವರ್ಮನೂ ತನ್ನ ಕೂರ್ತಮಡದಿಗೆ ಆ ಶಾಸ್ತ್ರವನ್ನು ಉಪದೇಶಿಸಹೊರಟಿರುವಂತೆ ತೋರುತ್ತದೆ.

ಮದನವತಿಯಕ್ಕರಂ ಚೌ
ಪದಿ ಗೀತಿಕೆ ಏಳೆ ತಿವದಿಯುತ್ಸಾಹಂ ಷ
ಟ್ಪದಿಯಕ್ಕರಿಕೆ ಕರಂ ಚೆ
ಲ್ವೊದವಿದ ಛಂದೋವತಂಸಮಬ್ಜದಳಾಕ್ಷೀ!

ಹೇ ಕಮಲನೇತ್ರೆ! ಮದನವತಿ, ಅಕ್ಕರ, ಚೌಪದಿ, ಗೀತಿಕೆ, ಏಳೆ, ತ್ರಿಪದಿ ಉತ್ಸಾಹ, ಷಟ್ಪದಿ, ಅಕ್ಕರಿಕೆ—ಇವು ಕನ್ನಡಕ್ಕೆ ಅಸಾಧಾರಣವಾದ ಛಂದೋಜಾತಿಗಳು—ಎಂದು ಹೇಳಿದ್ದಾನೆ. ತನ್ನ ನಿಯಮಗಳ ಲಕ್ಷಣವನ್ನು ವಿವರಿಸುವ ಪದ್ಯಗಳೇ ಆಯಾ ನಿಯಮಗಳ ಉದಾಹರಣೆಯೂ ಆಗುವಂತೆ ಬರೆದಿರುವ ಆತನ ಯೋಜನೆ ಚಾತುರ್ಯಪೂರ್ಣವಾಗಿರುವಂತೆ ಸಂಗ್ರಹ ಸಾಧಕವೂ ಆಗಿದೆ. ಇದನ್ನು ಕಂಡು ನಾವು ಮೆಚ್ಚಿಗೆಯನ್ನು ಸೂಚಿಸಬಹುದಾದರೂ ಛಂಧಶ್ಶಾಸ್ತ್ರವನ್ನು ಹೆಂಡತಿಗೆ ಹೇಳಹೊರಟ ಕವಿಯ ರಸಿಕತೆಗೂ, ನೀರಸವಾದ ಆ ಶಾಸ್ತ್ರವನ್ನು ಕೇಳುವಳೆಂದು ಪರಿಭಾವಿಸಬೇಕಾದ ಆ ಕವಿಪತ್ನಿಯ ತಾಳ್ಮೆ ಸಹೃದಯತೆಗೂ ನಾವು ಆಶ್ಚರ್ಯಪಡಬೇಕಾಗಿದೆ.

ನಾಗವರ್ಮನ ರಸಿಕತೆ, ಕಲಾಕೌಶಲ, ಕಲ್ಪನಾಶಕ್ತಿ, ಮಹೋನ್ನತ ಪ್ರತಿಭೆಗಳನ್ನು ಕಾಣಬೇಕಾದರೆ ನಾವು ಆತನ 'ಕರ್ಣಾಟಕ ಕಾದಂಬರಿ'ಗೆ ಹೋಗಬೇಕು. ಪಂಪ ರನ್ನರಂತೆ ಆತನೂ ಬಹುಶಃ ಕವಿಯೂ ಕಲಿಯೂ ಆಗಿದ್ದನೆಂದು ತೋರುತ್ತದೆ. ಭೋಜರಾಜನು ತನ್ನ ಕೃತಿಗೆ ಮೆಚ್ಚಿ ಕಾಳಿಂಗ, ಕಾಂಭೋಜ, ಬಾಹ್ಲೀಕ ಜಾತಿಯ ಕುದುರೆಗಳನ್ನು ಬಹುಮಾನವಾಗಿ ಕೊಟ್ಟನೆಂದು ಕವಿ ಹೇಳಿಕೊಂಡಿದ್ದಾನೆ. ಅಲ್ಲದೆ 'ಬೀರ ಸಿರಿಯಕ್ಕೆ ಭುಜಾ

ಸಿಗೆ ನಾಗವರ್ಮನಾ'—ನಾಗವರ್ಮನ ಭುಜವೆಂಬ ಕತ್ತಿಗೆ ವೀರಶ್ರೀ ಯುಂಟಾಗಲಿ—ಎಂಬ ಆತನ ಮಾತೂ ಆತನು ರಣೋತ್ಸಾಹಿಯಾಗಿದ್ದ ನೆಂದು ಊಹಿಸಲು ಸಹಾಯಕವಾಗಿದೆ. 'ವಿಕ್ರಮಾರ್ಜುನ ವಿಜಯ' ಅಥವಾ 'ಸಾಹಸಭೀಮ ವಿಜಯ'ದಂತೆ 'ಕರ್ಣಾಟಕ ಕಾದಂಬರಿ'ಯು ವಿಶದವಾದ ಇತಿಹಾಸವನ್ನು ಕೊಡುವ ಗೋಜಿಗೆ ಹೋಗದಿದ್ದರೂ, ತನ್ನ ಆ ಹಿಂದಿನ ಕಾವ್ಯಗಳ ಹಾದಿಯನ್ನೇ ಹಿಡಿದಿರುವಂತೆ ತೋರುತ್ತದೆ. ಪಂಪ ರನ್ನರಂತೆ ನಾಗಚಂದ್ರನೂ ತನ್ನ ಕಾವ್ಯದ ಕಥಾನಾಯಕನಾದ ಚಂದ್ರಾ ಪೀಡನೊಡನೆ ತನ್ನ ಆಶ್ರಯದಾತನಾದ ಚಂದ್ರರಾಜನನ್ನು ಹೋಲಿಸಿ ಅಥವಾ ಸಮೀಕರಿಸಿ ಕಾವ್ಯರಚನೆಯನ್ನು ನಡೆಸಿರುವಂತೆ ಭಾಸವಾಗುತ್ತದೆ. ಆದರೆ ಆ ಚಂದ್ರರಾಜನಾರೋ, ಆತನ ಬಾಳ ಕಥೆ ಎಷ್ಟರ ಮಟ್ಟಿಗೆ ಕಾದಂ ಬರಿಯ ಕಥೆಯನ್ನು ಹೋಲುತ್ತದೆಯೊ—ಅದನ್ನು ನಿರ್ಧರಿಸಲು ತಕ್ಕ ಸಾಧನಗಳು ಇಲ್ಲ.

ನಾಗವರ್ಮನು ಬಾಣಭಟ್ಟನ 'ಕಾದಂಬರಿ'ಯನ್ನು ಸಂಗ್ರಹಿಸಿ ಭಾಷಾಂತರಿಸ ಹೊರಟಿದ್ದಾನೆ. ಆದರೆ ಆತನು ಬರಿಯ ಭಾಷಾಂತರಕಾರ ನಲ್ಲ, ಅದ್ಭುತ ಪ್ರತಿಭೆಯುಳ್ಳ ಶ್ರೇಷ್ಠಕವಿ. ಆದ್ದರಿಂದಲೇ ಆತನು ಮೂಲ ದಲ್ಲಿ ಓದುಗರಿಗೆ ಬೇಸರ ಹಿಡಿಸಬಹುದಾದ ಸಂಸ್ಕೃತವರ್ಣನೆಗಳನ್ನು ಸಂಗ್ರ ಹಿಸುವುದರ ಜೊತೆಗೆ, ಮೂಲದಲ್ಲಿ ಹೆಪ್ಪುಗಟ್ಟಿ ಕುಳಿತಿರುವ ಪಾಂಡಿತ್ಯವನ್ನು ತನ್ನ ಪ್ರತಿಭೆಯ ಕಾವಿನಲ್ಲಿ ಕರಗಿಸಿ, ಲಲಿತವಾದ ಕಾವ್ಯಧಾರೆಯಾಗಿ ಹರಿ ಸುತ್ತಾನೆ. ಮೂಲದಲ್ಲಿ ವರ್ಣನೆಯೇ ಸರ್ವಾಧಿಕಾರಿಯಾಗಿದ್ದು, ಕಥೆ ಅದರ ಸೇವಕನಂತಿದ್ದರೆ ನಾಗವರ್ಮನು ಅವೆರಡನ್ನೂ ಪರಸ್ಪರ ಅವಲಂಬಿಸಿ ಮುಂದುವರಿಯುವಂತೆ ಮಾಡಿದ್ದಾನೆ.

ಕಥೆಯೊಳಗೆ ಕಥೆ ಹೆಣೆದುಕೊಂಡು ಹೋಗಿ ಅತ್ಯಂತ ಸಿಕ್ಕುಸಿಕ್ಕಾಗಿ ಬೆಳೆದುಕೊಂಡು ಹೋಗಿದೆ ಕಾದಂಬರಿಯ ಕಥೆ. ಈ ಕಥೆಯು ಗೊಂಡಾರಣ್ಯ ದಲ್ಲಿ ಪಾಂಡಿತ್ಯಪೂರ್ಣವಾದ ವರ್ಣನೆಗಳ ಮಧ್ಯೆ ಸಿಕ್ಕಿಕೊಂಡಾಗ, ಓದು ಗನು ಹಾದಿಗಾಣದೆ ಕಣ್ಣು ಬಿಡುತ್ತಾ ನಿಂತರೆ ಆಶ್ಚರ್ಯವೇನೂ ಇಲ್ಲ. ನಾಗ ವರ್ಮನು ವರ್ಣನೆಗಳ ಪೆಳೆಯನ್ನು ಸಾಕಷ್ಟು ಸವರಿರುವನಾದರೂ ಸಾಮಾನ್ಯ ಓದುಗನಿಗೆ ಅಲ್ಲಿ ದಾರಿ ತಪ್ಪುವುದು ಅನಿವಾರ್ಯ. ಆದರೇನು?

ಕೈಕೆಸರಾದರೆ ಬಾಯ್ ಮೊಸರು.' ಎಂತಹ ಮನಮೋಹಕವಾದ ಸೌಂದರ್ಯ ಅಲ್ಲಿದೆ! ಅದೆಂತಹ ನಾಗರಿಕ ಜಗತ್ತನ್ನು ನಾವು ಕಾಣುತ್ತೇವೆ! ಅದೇನು ನಯ, ಅದೇನು ವಿನಯ, ಅದೆಂತಹ ದಿವ್ಯ ಸಂಸ್ಕೃತಿ! ಮಾತಿನಲ್ಲಿ, ನಡತೆಯಲ್ಲಿ, ನಡವಳಿಕೆಯಲ್ಲಿ ಅದೇನು ಸ್ನೇಹ, ಅದೆಷ್ಟು ಮಾರ್ದವ, ಅದೆಂತಹ ಮಾಧುರ್ಯ! ಈ ಹೊಂಗನಸಿನ ದಿವ್ಯದೃಶ್ಯವನ್ನು ಕನ್ನಡಕ್ಕೆ ತಂದುಕೊಟ್ಟ ಕವಿ ಅಭಿನಂದನಾರ್ಹ! ಅದನ್ನು ಪಡೆದ ನಾವೂ ಧನ್ಯರು!

ಕಾವ್ಯದ ಹೆಸರೇ ಸೂಚಿಸುವಂತೆ ಇಲ್ಲಿನ ಕಥಾನಾಯಿಕೆ ಕಾದಂಬರಿ. ಈ ಅಂಕಿತನಾಮ ಅನ್ವರ್ಥನಾಮವೂ ಆಗುವಷ್ಟು ಮೋಹಕರೂಪಿನ ಆ ಹೆಣ್ಣು ಗಂಧರ್ವಕನ್ಯೆ. ಆಕೆಗೂ ಚಂದ್ರಾಂಶಸಂಭೂತನಾದ ರಾಜಕುಮಾರ ಚಂದ್ರಾಪೀಡನಿಗೂ ನಡೆದ ಪ್ರಣಯವ್ಯಾಪಾರ ಇದರ ವಸ್ತು. ಇದಕ್ಕೆ ಹೊಯ್‌ಕಯ್ಯಾಗಿ—ಬಹುಶಃ ಒಂದು ಕೈ ಮೇಲಾಗಿ—ಋಷಿಕುಮಾರ ಪುಂಡರೀಕ ಮತ್ತು ಅಪ್ಸರಕನ್ಯೆ ಮಹಾಶ್ವೇತೆಯರ ಪ್ರಣಯಕಥೆಯೂ ಯಮುಳನದಿಯಂತೆ ಮುಖ್ಯಕಥೆಯೊಡನೆ ಹರಿದು ಬರುತ್ತದೆ. ಮಹಾಶ್ವೇತೆಯನ್ನು ಮೋಹಿಸಿದ ಪುಂಡರೀಕನು ವಿರಹವೇದನೆಯನ್ನು ತಾಳಲಾರದೆ, ಅದರ ಉಲ್ಬಣಕ್ಕೆ ಕಾರಣನಾದ ಚಂದ್ರನನ್ನು ಶಪಿಸಿ ಮರಣಹೊಂದುತ್ತಾನೆ. ಆ ಶಾಪದಿಂದ ಚಂದ್ರಾಪೀಡನಾಗಿ ಹುಟ್ಟಿದ ಚಂದ್ರನು ಕಾದಂಬರಿಯನ್ನು ಮೋಹಿಸಿ, ಅವಳನ್ನು ವಿವಾಹವಾಗುವ ಮುನ್ನವೇ, ಪ್ರಿಯಸಖನಾದ ವೈಶಂಪಾಯನನ ಮರಣವೃತ್ತಾಂತವನ್ನು ಕೇಳಿ ದೇಹತ್ಯಾಗಮಾಡಿದವನು ಶೂದ್ರಕರಾಜನಾಗಿ ಹುಟ್ಟಿ, ಶಾಪವಿಮೋಚನೆಯಾದ ಮೇಲೆ ತನ್ನ ಹಿಂದಿನ ಚಂದ್ರಾಪೀಡದೇಹವನ್ನು ಪ್ರವೇಶಿಸಿ ಕಾದಂಬರಿಯನ್ನು ಪಡೆಯುತ್ತಾನೆ. ಪುಂಡರೀಕನೂ ಚಂದ್ರನಿಂದ ಶಾಪಗ್ರಸ್ತನಾಗಿ, ಚಂದ್ರಾಪೀಡನ ಗೆಳೆಯನಾದ ವೈಶಂಪಾಯನನಾಗಿ ಹುಟ್ಟಿ, ಪೂರ್ವಜನ್ಮದ ಸಂಸ್ಕಾರದಿಂದ ಮಹಾಶ್ವೇತೆಯನ್ನು ಮತ್ತೆ ಮೋಹಿಸಿ, ಪರಪುರುಷನೆಂಬ ಭ್ರಾಂತಿಯಿಂದ ಆಕೆ ಕೊಟ್ಟ ಶಾಪದ ಫಲವಾಗಿ ಗಿಳಿಯಾಗಿ ಹುಟ್ಟಿ, ಪುನಃ ಪುಂಡರೀಕ ಜನ್ಮವನ್ನು ಪಡೆದು ಮಹಾಶ್ವೇತೆಯನ್ನು ಮದುವೆಯಾಗುತ್ತಾನೆ. ಇದು ಸ್ಥೂಲವಾಗಿ ಕಾದಂಬರೀ ಕಥೆಯ ರೇಖಾಚಿತ್ರ. ಬುವಿ ಬಾನುಗಳಿಗೆ ಒಂದು ರಸಸೇತುವೆಯನ್ನು ನಿರ್ಮಿಸಿದಂತಿರುವ ಈ ಕಥೆ ಗಂಡು ಹೆಣ್ಣುಗಳ ದಿವ್ಯ

ಪ್ರೇಮವನ್ನು ಮನೋಹರವಾಗಿ ದಿಗ್ದರ್ಶಿಸುತ್ತದೆ. ಮೊದಲು ಬರಿಯ ಕಾಮವಾಗಿದ್ದುದು ಅಗಲಿಕೆಯ ನೋವಿನಲ್ಲಿ ಬೆಂದು, ಜನ್ಮಾಂತರಗಳನ್ನು ದಾಟಿಬರುವಾಗ ತನ್ನ ಕಾಳಿಕೆಯನ್ನು ಕಳೆದುಕೊಂಡು, ಕೊನೆಯಲ್ಲಿ ಅಚ್ಚ ಬಂಗಾರದಂತಹ ಪ್ರೇಮವಾಗುತ್ತದೆ. ಮೂರು ಜನ್ಮಗಳಷ್ಟು ದೀರ್ಘಕಾಲ ತಮ್ಮ ಪ್ರಿಯರಿಗಾಗಿ ಕಾದು ಕುಳಿತಿದ್ದ ಹೆಣ್ಣುಗಳು ತಮ್ಮ ನಿಷ್ಠೆಯಿಂದ, ತಪೋಮಹಿಮೆಯಿಂದ, ಪ್ರೇಮದಿಂದ ತಮ್ಮ ಗಂಡಂದಿರ ಉದ್ಧಾರಕ್ಕೆ ಕಾರಣರಾಗಿ ತಮ್ಮ ಇಷ್ಟಸಿದ್ಧಿಯನ್ನೂ ಪಡೆಯುತ್ತಾರೆ.

ಕಾದಂಬರಿಯ ಕಥೆ ಪ್ರಾರಂಭವಾಗುವುದು ಶೂದ್ರಕರಾಜನ ಆಸ್ಥಾನದ ವರ್ಣನೆಯೊಡನೆ. ವನಿತಾಸುಖ ಪರಾಙ್ಮುಖನಾದ ಆ ರಾಜನು ಒಂದು ದಿನ ಬೆಳಗ್ಗೆ ಒಡ್ಡೋಲಗದಲ್ಲಿ ಕುಳಿತಿರುವಾಗ ಪ್ರತೀಹಾರಿಯೊಬ್ಬನು ಅಲ್ಲಿಗೆ ಬಂದು ವಿನಯದಿಂದ

ಜನತಾಧೀಶ್ವರ ಬಿನ್ನಪಂ ತ್ರಿದಶಲೋಕಕ್ಕೇರುತಿರ್ದಾ ತ್ರಿಶಂ
ಕು ನರಾಧೀಶನ ಲಕ್ಷ್ಮಿ, ಶಕ್ರನ ಮಹಾ ಹುಂಕಾರದಿಂ ಬಿಳ್ದಳೆಂ
ಬಿನೆಗಂ ವಿಶ್ರುತ ದಕ್ಷಿಣಾಪಥದಿನೊರ್ವಳ್ ಕನ್ನೆ ಚಂಡಾಲೆ ದ
ರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ ಬಾಗಿಲೊಳ್

ಮಹಾರಾಜರಲ್ಲಿ ವಿಜ್ಞಾಪನೆ. ಸ್ವರ್ಗಕ್ಕೆ ಏರುತ್ತಿದ್ದ ತ್ರಿಶಂಕುಮಹಾರಾಜನ ಭಾಗ್ಯಲಕ್ಷ್ಮಿ, ಇಂದ್ರನ ಹುಂಕಾರದಿಂದ ಕೆಳಕ್ಕೆ ಬಿದ್ದಳೊ ಎಂಬಂತಿರುವ ಚಂಡಾಲಕನ್ಯೆಯೊಬ್ಬಳು ದಕ್ಷಿಣಾಪಥದಿಂದ ಬಂದು ತಮ್ಮನ್ನು ಕಾಣುವ ಅಪೇಕ್ಷೆಯಿಂದ ಒಂದು ಅರಗಿಳಿಯೊಡನೆ ಬಾಗಿಲಲ್ಲಿ ಬಂದು ನಿಂತಿದ್ದಾಳೆ. ಎಂದು ವಿಜ್ಞಾಪಿಸಿಕೊಂಡನು. ರಾಜನ ಅಪ್ಪಣೆಯಿಂದ ಆಕೆ ಆಸ್ಥಾನವನ್ನು ಪ್ರವೇಶಿಸಿದಳು. ಆಕೆಯ ದಿವ್ಯಸೌಂದರ್ಯವನ್ನು ಕಂಡ ಸಭಾಸದರು ಅಚ್ಚರಿಗೊಂಡರು. ಚಂಡಾಲಕನ್ಯೆಯ ಸೌಂದರ್ಯ ಅಷ್ಟು ಮನೋಹರವಾಗಿರುವಂತೆ ಸೃಷ್ಟಿಸಿದ ಬ್ರಹ್ಮನನ್ನು ರಾಜನು 'ದುರ್ವಿವೇಕ'ನೆಂದು ತೆಗಳಿ

ಇದನಱಿವೆಂ ಕಮಲಭವಂ
ಮೊದಲೊಳ್ ಮಾತಂಗಿಯೆಂದು ತಾಂ ಮುಟ್ಟದೆ ಮಾ
ಡಿದನಕ್ಕುಂ, ಕಯ್ಯೊಳ್ ಮು
ಟ್ಟದೊಡಿಂತಗ್ಗಳಿಸಿ ತೋರ್ಕುಮೆ ಲಾವಣ್ಯಂ?

ಬ್ರಹ್ಮನು ಇವಳನ್ನು ಚಂಡಾಲಜಾತಿಯುವಳೆಂದು ತನ್ನ ಕೈಯಿಂದ ಮುಟ್ಟದೆಯೇ ಸೃಷ್ಟಿಸಿರಬೇಕು. ಕೈಲಿ ಮುಟ್ಟಿದ್ದರೆ ಇವಳ ಲಾವಣ್ಯವು ಇಷ್ಟು ಅನರ್ಘ್ಯವಾಗಿ ಕಾಣಿಸುವುದು ಸಾಧ್ಯವಿತ್ತೆ? ಎಂದುಕೊಂಡ. ಆ ಮಾತಂಗಿಯ ಜೊತೆಯಲ್ಲಿ ಬಂದಿದ್ದ ಚಂಡಾಲ ಬಾಲಕನ ಕೈಯಲ್ಲಿ ಬಂಗಾರದ ಪಂಜರವಿತ್ತು. ಅದನ್ನು ರಾಜನ ಮುಂದೆ ಇಟ್ಟು ಅವನು ಅದರಲ್ಲಿರುವ ಅರಗಿಣಿ ಸಕಲಶಾಸ್ತ್ರಪಾರಂಗತನಾಗಿರುವುದಲ್ಲದೆ—

ವನಿತೆಯರೊಲವಿನ ಕಲಹದ
ಮುನಿಸುಗಳಂ ತಿಳಿಪುವಡೆಯೊಳತಿ ಚತುರಂ ತಾ
ನೆನಿಸಿರ್ದುಂ ವೈಶಂಪಾ
ಯನನೆನಿಪುದು ಪೆಸರೊಳೀ ಶುಕಂ ಭುವನಪತೀ

ಮಹಾರಾಜ, ಹೆಣ್ಣುಗಳ ಪ್ರೇಮಕಲಹದ ಕೋಪವನ್ನು ಹೋಗಲಾಡಿಸುವುದರಲ್ಲಿ ಅತಿ ಚತುರನಾದ ಈ ರಾಜಕೀರದ ಹೆಸರು ವೈಶಂಪಾಯನನೆಂದು ಎಂದು ಹೇಳಿದನು. ಅವನು ಪಂಜರದ ಬಾಗಿಲನ್ನು ತೆರೆಯುತ್ತಲೆ ಆ ಗಿಳಿ ತನ್ನ ಬಲಗಾಲನ್ನೆತ್ತಿ ರಾಜನಿಗೆ ನಮಸ್ಕರಿಸಿ ಅಸ್ಖಲಿತವಾಣಿಯಿಂದ

ವೀರರವೀರ ವಿಮುಕ್ತಾ
ಹಾರಂ ಭವದರಿವಧೂಸ್ತನದ್ವಿತಯಂ ಕ
ಣ್ಣೀರಿಂ ಮಿಂದೆದೆಗಿರ್ಚಿಂ
ದೋರಂತಿರೆ ಬೆಂದು ಚರಿಸುತಿರ್ಪುದು ತಪಮುಂ

ಆಯ್ಯಾ, ವೀರಾಧಿವೀರನೆ ನಿನ್ನ ಶತ್ರುಸ್ತ್ರೀಯರ ಸ್ತನದ್ವಯಗಳು ಮುಕ್ತಾಹಾರವಿಹೀನವಾಗಿ, ಕಣ್ಣೀರಿನಿಂದ ಸ್ನಾನಮಾಡಿ, ಹೃದಯಾಗ್ನಿಯಿಂದ ಬೆಂದು ತಪಸ್ಸನ್ನಾಚರಿಸುತ್ತಿವೆ ಎಂದು ಹೇಳಿತು. ಇದನ್ನು ಕೇಳಿದ ರಾಜನು ಆಶ್ಚರ್ಯಗೊಂಡನು. ಮಾತಂಗ ಕನ್ಯೆಗೆ ವಿಶ್ರಮಿಸುವಂತೆ ಹೇಳಿ, ವೈಶಂಪಾಯನ ಗಿಳಿಯನ್ನು ಮಹಾರಾಣಿಯರ ಅರಮನೆಗೆ ಕಳುಹಿಸಿ, ರಾಜನು ಸಭೆಯನ್ನು ವಿಸರ್ಜಿಸಿ, ಮಜ್ಜನ ಭೋಜನಾನಂತರ ವಿಶ್ರಾಂತಿ ಸುಖವನ್ನು ಅನುಭವಿಸುತ್ತಾ ಬಾಗಿಲು ಕಾಯುವವಳೊಡನೆ ಗಿಳಿಯನ್ನು ತರುವಂತೆ ಹೇಳಿಕಳುಹಿಸಿದನು. ಅವಳು ಪಂಜರದಲ್ಲಿದ್ದ ಗಿಳಿಯನ್ನು ಆತನ ಇದಿರಿಗೆ ಇಡುತ್ತಲೆ ರಾಜನು 'ದೇವಿಯರ ಅರಮನೆಯಲ್ಲಿ ಏನೇನನ್ನು

ಆಸ್ವಾದಿಸಿದೆ?' ಎಂದು ಅದನ್ನು ಕೇಳಿದನು. ಅದು 'ಮಹಾರಾಜ, ನಾನು ಏನನ್ನು ತಾನೆ ಆಸ್ವಾದಿಸಲಿಲ್ಲ?' ಎಂಬ ಪ್ರತಿಪ್ರಶ್ನೆಯೊಡನೆ ಪ್ರಾರಂಭಿಸಿ

ಕಳಕಂಠಲೋಚನಚ್ಛವಿ
ವಿಳಾಸಮುಂ ತಳೆದ ನೀಲಪಾಟಲ ಜಂಬೂ
ಫಳ ಮಧುರರಸಮನೀಂಟಿದೆ
ನಿಳೇಶ ಪಿರಿದಳ್ತಿಯಿಂ ಮನಂ ತಣಿವಿನೆಗಂ

ಮಹಾರಾಜ, ಕೋಗಿಲೆಯ ಕಣ್ಣ ಕಾಂತಿಯ ವಿಲಾಸವುಳ್ಳ ಕಪ್ಪು ಕೆಂಪುಮಿಶ್ರಿತವಾದ ಜಂಬು ನೇರಿಳೆಹಣ್ಣಿನ ಮಧುರವಾದ ರಸವನ್ನು ಸಂತೋಷದಿಂದ ನನ್ನ ಮನದಣಿಯುವಷ್ಟು ಕುಡಿದೆ

ಹರಿವಿದಳಿತ ಮದಗಜ ಕುಂ
ಭರಕ್ತ ಸಿಕ್ತಾರ್ದ್ರ ಮೌಕ್ತಿಕಪ್ರಕರದವೊಲ್
ಕರಮೆಸೆವ ದಾಡಿಮೀ ಬೀ
ಜರಾಜಿಯುಂ ತೆಗೆದು ರಸವನಾಸ್ವಾದಿಸಿದೆಂ

ಸಿಂಹವು ಆನೆಯ ಕುಂಭಸ್ಥಳವನ್ನು ಸೀಳಿದಾಗ ರಕ್ತದಿಂದ ತೊಯ್ದ ಮುತ್ತುಗಳಂತೆ ಹೊಳೆವ ದಾಳಿಂಬರೆ ಬೀಜವನ್ನು ಹೆಕ್ಕಿಕೊಂಡು ಅದರ ರಸವನ್ನು ಆಸ್ವಾದಿಸಿದೆ

ಆದತ್ತಾಮಳಕ ಫಳಾ
ಸ್ವಾದನೆಯಿಂ ತೃಪ್ತಿ, ದೇವ, ಗಳಪುತ್ತಿರಲೇಂ?
ಆದತ್ತಮೃತಂ ದೇವಿಯ
ರಾದರದಿಂ ತಮ್ಮ ಕೆಯ್ಯೊಳೂಡಿದರೆನ್ನಂ

ನಲ್ಲಿಯ ಹಣ್ಣನ್ನು ಆಸ್ವಾದಿಸಿ ತೃಪ್ತಿಯಾಯಿತು. ಪ್ರಭು, ಹೆಚ್ಚು ಹರಟುವುದೇಕೆ? ಮಹಾರಾಣಿಯವರು ಸ್ವತಃ ತಮ್ಮ ಕೈಯಿಂದ ಆಹಾರವನ್ನು ನನಗೆ ತಿನಿಸಿದರು. ಅದು ಅಮೃತವಾಯಿತು'
ಎಂದು ಪ್ರತ್ಯುತ್ತರ ಕೊಟ್ಟಿತು. ಅದರ ಮಾತುಗಳನ್ನು ಕೇಳುತ್ತಾ ರಾಜನು ಮುಗ್ಧನಾಗಿಹೋದನು. ಆತನು ಅತ್ಯಂತ ಕುತೂಹಲದಿಂದ ಅದರ ವೃತ್ತಾಂತವನ್ನು ಆದ್ಯಂತವಾಗಿ ಕೇಳಿದನು. ಅದು ತನ್ನ ಕರುಣದ ಕಥೆಯನ್ನು ಆಮೂಲಾಗ್ರವಾಗಿ ತಿಳಿಸಿತು.

ನಾಗವರ್ಮ ತನ್ನ ಕಾವ್ಯ ಕಥೆಯನ್ನು ಅವರಲ್ಲಿ ಬರುವ ಪಾತ್ರಗಳ ಮೂಲಕವೇ ಹೇಳಿ ಬೆಳೆಸಿದ್ದಾನೆ. ಗಿಳಿಯು ತಾನು ವಿಂಧ್ಯೆಯಲ್ಲಿ ಹುಟ್ಟಿದುದು, ಹುಟ್ಟುತ್ತಲೆ ತಾಯಿಯನ್ನು ಕಳೆದುಕೊಂಡುದು, ಮುಪ್ಪಿನ ತಂದೆಯೊಡನೆ ತಾನು ಬೆಳೆಯುತ್ತಿರುವಾಗ ಬೇಡನ ಕೈಗೆ ಸಿಕ್ಕಿ ತನ್ನ ತಂದೆ ಸತ್ತುದು, ತಾನು ದೈವವಶದಿಂದ ಬದುಕಿ ಜಾಬಾಲಿ ಋಷಿಯ ಆಶ್ರಮವನ್ನು ಸೇರಿದುದು—ಈ ಕಥೆಯನ್ನು ಕರುಳು ಕರುಗುವಂತೆ ಹೇಳಿಕೊಳ್ಳುತ್ತದೆ. ಜಾಬಾಲಿಋಷಿಯ ಆಶ್ರಮದಲ್ಲಿದ್ದ ಇತರ ಋಷಿಗಳು ಆ ಗಿಳಿಯ ಪೂರ್ವ ಜನ್ಮವೃತ್ತಾಂತವನ್ನು ಕೇಳಿದುದರಿಂದ ಸರ್ವಜ್ಞನಾದ ಜಾಬಾಲಿ ಅದರ ಪೂರ್ವವೃತ್ತಾಂತವನ್ನು ತಿಳಿಸುತ್ತಾನೆ. ಆ ಸಂದರ್ಭದಲ್ಲಿ ಚಂದ್ರಾಪೀಡನ ಕಥೆ ಬರುತ್ತದೆ. ಉಜ್ಜಯನಿಯ ರಾಜಕುಮಾರ ಚಂದ್ರಾಪೀಡನು ತನ್ನ ದಿಗ್ವಿಜಯ ಸಂದರ್ಭದಲ್ಲಿ, ಬೇಟೆಯಾಡುತ್ತಾ, ಇಂದ್ರಾಯುಧವೆಂಬ ತನ್ನ ಕುದುರೆಯನ್ನೇರಿ ಕಿನ್ನರ ಮಿಥುನಗಳನ್ನು ಅಟ್ಟಿಕೊಂಡು ಹೋಗಿ, ಬಳಲಿಕೆಯಿಂದ ನೀರನ್ನು ಹುಡುಕುತ್ತಾ ಅಚ್ಛೋದ ಸರೋವರಕ್ಕೆ ಬಂದನು. ಆ ಸರೋವರಕ್ಕೆ ಆತನನ್ನು ಆಹ್ವಾನಿಸುವಂತೆ ತೆಂಗಾಳಿ ಬಂದು ಆತನ ಮೇಲೆ ಬೀಸಿತು.

ಕುಮುದ ರಜಂಗಳೊಳ್ ಪೊರೆದು, ವಾಃಕಣಜಾಲಮನಾಂತು ಕೂಡೆ ವಿ
ಶ್ರಮಿಸಿ ತರಂಗಮಾಲಿಕೆಗಳೊಳ್ ಕಲಹಂಸನಿನಾದ ಬಂಭ್ರಮ
ದ್ಭ್ರಮರರವಂಗಳೊಳ್ ಬೆರಸಿ ಮಾರುತನೊಯ್ಯನೆ ಬಂದು ತೀಡಿದ
ತ್ತಮರ್ದೊಸೆದಪ್ಪಿಕೊಂಡು ಕರೆವಂತೆವೊಲಾ ಮನುಜೇಂದ್ರಚಂದ್ರನಂ

ಕುಮುದ ಪುಷ್ಪಗಳ ಪರಾಗದಿಂದ ತುಂಬಿಕೊಂಡು (ಸುವಾಸನೆಯಿಂದ ಕೂಡಿ), ನೀರ ತುಂತುರಗಳನ್ನು ಧರಿಸಿ (ಶೈತ್ಯ ಪೂರ್ಣವಾಗಿ), ಸರೋವರದ ತರಂಗಗಳಲ್ಲಿ ವಿಶ್ರಾಂತಿಯನ್ನು ಪಡೆದು (ಮಂದಗಮನವುಳ್ಳುವಾಗಿ), (ತೆಂಗಾಳಿಗಿರಬೇಕಾದ ಈ ಮೂರು ಗುಣಗಳ ಜೊತೆಗೆ) ಕಲಹಂಸ ಧ್ವನಿ ಮತ್ತು ದುಂಬಿಗಳ ಝೇಂಕಾರವನ್ನು ಹೊತ್ತು ಆ ರಾಜೇಂದ್ರ ಚಂದ್ರನನ್ನು ಸರೋವರಕ್ಕೆ ಬರಲು ಆಹ್ವಾನಿಸುವಂತೆ ತೆಂಗಾಳಿ ಬೀಸಿತು.

ಆ ಗಾಳಿ ಬಂದ ದಿಕ್ಕಿನಲ್ಲಿಯೇ ದಿವ್ಯವಾದ ಸರೋವರ—

ಎಲೆ ತಾರಾಗಂ ಹರಂ ಕಣ್ಣಿಡೆ ಕರಗಿದುದಂತಲ್ತು ರುದ್ರಾಟ್ಟಹಾಸಂ

ಜಲಮಾದತ್ತಲ್ತು, ಚಂದ್ರಾತಪಮಮೃತರಸಾಕಾರಮಾಯ್ತಲ್ತು, ಹೈಮಾಚಲಮಂಭೋರೂಪದಿಂದಂ ಪರಿಣಮಿಸಿದುದಂತಲ್ತು, ನೈರ್ಮಲ್ಯ ಶೋಭಾಕಲಿತಂ ತ್ರೈಲೋಕ್ಯಲಕ್ಷ್ಮೀ ಮಣಿಮುಕುರಮೆನಲ್ ಚೆಲ್ವದಾಯ್ತಚ್ಛ

ಷಂಡಂ

ಸರೋವರವನ್ನು ಕಾಣುತ್ತಲೆ ರಾಜಕುಮಾರನ ಬಾಯಲ್ಲಿ 'ಎಲೆ!' ಎಂಬ ಆಶ್ಚರ್ಯಸೂಚನೆ ಹೊರಬರುತ್ತದೆ. 'ಬೆಳ್ಳಿಯ ಬೆಟ್ಟ—ಕೈಲಾಸ—ಶಿವನ ಹಣೆಗಣ್ಣಿಂದ ಕರಗಿ ನೀರಾಯಿತೊ!'—ಎಂದು ಆತನು ಭ್ರಮಿಸುತ್ತಾನೆ. ಸೂರ್ಯಕಾಂತಿಯಲ್ಲಿ ಪಳಪಳ ಹೊಳೆಯುತ್ತಿರುವ ಆ ನೀರನ್ನು ಕಂಡು. ಆದರೆ ಶಿವನು ತನ್ನ ವಾಸಸ್ಥಳವನ್ನು ಕರಗಿಸಲು ಕಾರಣವಿಲ್ಲವಾದ್ದರಿಂದ ತನ್ನ ಮೊದಲ ಊಹೆ ತಪ್ಪೆಂದು ಗ್ರಹಿಸಿ, 'ಅಲ್ಲ, ಅದಲ್ಲ' ಎಂದುಕೊಂಡು, 'ರುದ್ರನ ಅಟ್ಟಹಾಸವೇ ಸರೋವರವಾಗಿರಬಹುದೆ?' ಎಂದುಕೊಳ್ಳುತ್ತಾನೆ, ದಡಕ್ಕೆ ಅಪ್ಪಳಿಸುತ್ತಿರುವ ಆ ಸರೋವರದ ಅಲೆಗಳನ್ನು ಕೇಳಿ. ಅದನ್ನೂ 'ಅಲ್ಲ'ವೆಂದುಕೊಂಡು, 'ಬೆಳುದಿಂಗಳೇ ಅಲ್ಲಿ ಹಾಲಿನ ಆಕಾರವನ್ನು ತಾಳಿ ನಿಂತಿರುವುದೆಂದು ಪರಿಭಾವಿಸುತ್ತಾನೆ. ಅದನ್ನೂ 'ಅಲ್ಲ'ವೆಂದು ಹೇಳಿ. ಹಿಮಾಲಯವೇ ನೀರಿನ ಆಕಾರವನ್ನು ತಾಳಿರಬೇಕೆಂದು ಕೊಳ್ಳುತ್ತಾನೆ, ಅದರ ವಿಸ್ತಾರವನ್ನು ಕಂಡು; ಕಟ್ಟಕಡೆಗೆ ಸರೋವರದ ದಂಡೆಯನ್ನೇ ಸೇರಿದಾಗ, ಸುತ್ತುಮುತ್ತಿನ ಪ್ರಕೃತಿ ಸೌಂದರ್ಯವನ್ನೆಲ್ಲಾ ಪ್ರತಿಬಿಂಬಿಸುತ್ತಿರುವ ಆ ಸರೋವರದ ನಿರ್ಮಲೋದಕವನ್ನು 'ತ್ರಿಲೋಕಲಕ್ಷ್ಮಿಯ ಸಿರಿಗನ್ನಡಿಯದು' ಎಂದುಕೊಳ್ಳುತ್ತಾನೆ.[1]

ಚಂದ್ರಾಪೀಡನು ಆ ಸರೋವರದಲ್ಲಿ ನೀರ್ಕುಡಿದು ವಿಶ್ರಮಿಸುತ್ತಿರುವಾಗ ದಿವ್ಯವಾದ ವೀಣಾಧ್ವನಿಯೊಂದು ಕೇಳಿಬರುತ್ತದೆ. ಅದರ ಜಾಡನ್ನೆ ಹಿಡಿದು ಬರಲು, ಅಲ್ಲೊಂದು ಸಿದ್ಧಾಯತನ ಕಂಡು ಬರುತ್ತದೆ. ಅದರ ಒಳಗಡೆಯಲ್ಲಿ ರತ್ನಪೀಠಘಟಿತವಾದ ಒಂದು ಮುತ್ತಿನ ಶಿಲಾಲಿಂಗ. ಅದರ ತಲೆಯ ಮೇಲೆ ಈಶ್ವರನ ಅಟ್ಟಹಾಸವೇ ಆಕಾರ ತಾಳಿದಂತೆ, ಆದಿಶೇಷನ ಅನಂತ

---

[1] ಕುವೆಂಪುರವರ—ತಪೋನಂದನ 'ಸರೋವರದ ಸಿರಿಗನ್ನಡಿಯಲ್ಲಿ' ಪು 75–77 ನೋಡಿ.

ಫಣೆಗಳಂತೆ, ಪೂರ್ಣಚಂದ್ರನ ಷೋಡಶ ಕಳೆಗಳಂತೆ ಬೆಳಗುತ್ತಿರುವ ಬಿಳಿಯ ಕಮಲಗಳು–ಆ ಮೂರ್ತಿಯ ಮುಂದೆ ಪೂಜೆಯಲ್ಲಿ ತೊಡಗಿರುವ ದಿವ್ಯ ಸುಂದರಿ. ಆಕೆಯ ದೇಹ ಶುಭ್ರಧವಳವಾಗಿದೆ.

ಅಮೃತಾಂಭೋರಾಶಿ ಪೂರಪ್ರತಿಮ ನಿಜತಪಸ್ಸಂಚಯಂ ಪರ್ವಿತೋ ಲೋ
ಕಮನೆಂಬಂತಿರ್ದ ದೇಹಾಂಶುಗಳ ಬಳಗದಿಂ ಕಾನನಾನೀಕಮಂ ದಂ
ತಮಯಂ ಮಾಳ್ಪಂತೆ ತಾರಾಚಳಮನಸದಳಂ ಸುಣ್ಣಿಪಂತೊರ್ವಳತ್ಯು
ತ್ತಮ ದಿವ್ಯಾಕಾರೆ ಕುಳ್ಳಿರ್ದತನು ಹರನನಾರಾಧಿಸುತ್ತಿರ್ದಳಾಗಳ್

ಕ್ಷೀರಸಾಗರದ ಪ್ರವಾಹದಂತಿರುವ ಆಕೆಯ ತಪಸ್ಸು ಲೋಕವೆಲ್ಲವನ್ನೂ ವ್ಯಾಪಿಸಿತೊ ಎಂಬಂತಿರುವ ಆಕೆಯ ದೇಹಕಾಂತಿಯಿಂದ ಅರಣ್ಯವನ್ನೆಲ್ಲಾ ದಂತಮಯವಾಗಿ ಮಾಡುವಷ್ಟು, ಬೆಳ್ಳಿಯ ಬೆಟ್ಟವನ್ನು ತನ್ನ ದೇಹಕಾಂತಿಯಿಂದ ನುಣುಪಾಗಿ ಮಾಡುವಷ್ಟು (ಬೆಟ್ಟದ ಉಬ್ಬು ತಗ್ಗುಗಳು ದೇಹಕಾಂತಿಯಿಂದ ಮುಚ್ಚಿಹೋಗಿ) ದಿವ್ಯರೂಪದ ಹೆಣ್ಣು ಶಿವನನ್ನು ಆರಾಧಿಸುತ್ತಿದ್ದಳು.

ಸಂಸ್ಕೃತದಿಂದ ಕಥೆಯನ್ನು ಕನ್ನಡಕ್ಕೆ ತಂದುಕೊಳ್ಳುತ್ತಿರುವ ನಾಗವರ್ಮಕವಿ ಮಾರ್ಗಶೈಲಿಯನ್ನು ಬಳಸುತ್ತಿರುವುದು ಸ್ವಾಭಾವಿಕವಾಗಿಯೇ ಇದೆ. ಆದರೆ ಸರಳವಾದ ದೇಶೀಶೈಲಿಯಲ್ಲಿಯೂ ಹೃದಯಂಗಮವಾಗಿ, ಇಂಪಾಗಿ ಆತ ಬರೆಯಬಲ್ಲ. ಮಹಾಶ್ವೇತೆಯೆಂಬ ತನ್ನ ಹೆಸರು ಸಾರ್ಥಕವಾಗುವಂತೆ ಇದ್ದ ಆಕೆಯ ಮೈಬಣ್ಣವನ್ನು ವರ್ಣಿಸುವ ಮತ್ತೊಂದು ಪದ್ಯವಿದು.

ಕಡೆದರೊ ಶಂಖದಿಂ, ತೆಗೆದರೊ ನವಮೌಕ್ತಿಕದಿಂ, ಮೃಣಾಳದಿಂ
ಪಡೆದರೊ, ದಂತದಿಂದೆಸೆಯೆ ಮಾಡಿದರೊ, ರುಚಿರೋಜ್ವಲಾಂಗಮಂ
ಬಿಡದಮೃತಾಂಶುರಶ್ಮಿಗಳ ಕುಂಚಿಗೆಯಿಂದಮೆ ಕರ್ಚಿ ಪಾರದಂ
ದೊಡೆದರೊ ಪೇಳೆನಲ್ ಕರಮೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ

ಶಂಖದಲ್ಲಿ ಕಡೆದು ಮಾಡಿದರೊ! ಹೊಸಮುತ್ತಿನಿಂದ ತಯಾರಿಸಿರುವರೊ! ಕಮಲದ ದಂಟಿನಿಂದ ನಿರ್ಮಿಸಿದರೊ! ದಂತದಿಂದ ಕೆತ್ತಿದರೊ! ಮನೋಹರವಾದ ಕಾಂತಿಯಿಂದ ಬೆಳಗುವ ಆಕೆಯ ದೇಹವನ್ನು ಬೆಳುದಿಂಗಳಲ್ಲಿ ತೊಳೆದು ಪಾದರಸವನ್ನು ಏನಾದರೂ ಲೇಪಿಸಿರುವರೊ!–ಎನ್ನುವಂತೆ ಆ ಸುಂದರಿಯ ರೂಪು ಕಂಗೊಳಿಸುತ್ತಿತ್ತು

ಆಕೆಯ ರೂಪು ಮಾತ್ರವಲ್ಲ, ಗುಣವೂ ಶುಭ್ರಧವಳವಾದುದೇ. ಆಕೆಯ ಪ್ರಭಾವಕ್ಕೆ ಒಳಗಾದ 'ಕಾದಂಬರಿ'ಯ ಪಾತ್ರಗಳೆಲ್ಲವೂ ಆ ಪ್ರಭಾವಳಿಯ ಜಾಹ್ನವಿಯಲ್ಲಿ ಮಿಂದು ಶುಭ್ರಧವಳರಾಗುತ್ತಾರೆ. ಮಿಂದು ಮಡಿಯುಟ್ಟು ಬಂದಿರುವ ಆಕೆಯ ತಲೆಗೂದಲು ಎಳೆಮಿಂಚಿನ ಚಿಗುರಿನಂತೆ ಚದರಿಹರಡಿದೆ; ಅದರ ಮೇಲೆ ನೀರಹನಿಗಳು ಇನ್ನೂ ಕಾಣಬರುತ್ತಿವೆ. ಆಕೆಯ ಕೈಲಿ ಮುತ್ತಿನ ಜಪಸರ, ನಡುವಿನಲ್ಲಿ ಬ್ರಹ್ಮಸೂತ್ರ, ಆಕೆಯ ವಯಸ್ಸು ?

ದಿವಿಜತೆಯಿಂ ದಿವಸಂಗಳ
ಪವಣರಿಯಲ್ಕಾರದಾದೊಡಂ ಸೊಗಯಿಸಿ ತೋ
ರ್ಪವಯವದಿಂದಂ ಪದಿನೆಂ
ಟು ಬರಿಸದಾಕೃತಿಯಿನಬ್ಜಮುಖಿ ಕಣ್ಗೆಸೆದಳ್

ದೇವತೆಯಾದ ಆಕೆಯ ವಯಸ್ಸನ್ನು ಇಷ್ಟೆಂದು ನಿರ್ಣಯಿಸುವುದು ಸಾಧ್ಯವಿಲ್ಲ. ಆದರೂ ಆಕೆಯ ದೇಹ ಸೌಂದರ್ಯವನ್ನು ನೋಡಿದರೆ ಆ ಕಮಲ ಮುಖಿಗೆ ಹದಿನೆಂಟೆಂದು ವಯಸ್ಸು ಹೇಳಬಹುದು. ಚಂದ್ರಾಪೀಡನು ದಿವ್ಯಕಂಠದಿಂದ ಶಿವನನ್ನು ಸ್ತೋತ್ರಮಾಡುತ್ತಿರುವ ಆಕೆಯ ಸೌಂದರ್ಯಕ್ಕೆ ಮಾರುಹೋಗಿ, ತನ್ನನ್ನು ಕಂಡೊಡನೆ ಆಕೆ ಮಾಯವಾಗದ ಪಕ್ಷದಲ್ಲಿ 'ಆಕೆ ಯಾರು? ಹೆಸರೇನು? ಈ ಚಿಕ್ಕವಯಸ್ಸಿನಲ್ಲಿ ತಪಸ್ಸು ಏಕೆ' ಇತ್ಯಾದಿಗಳನ್ನು ಕೇಳಬೇಕೆಂದುಕೊಂಡನು. ಆದರೆ, ಪೂಜೆ ಮುಗಿಯುತ್ತಲೆ ಆಕೆಯೇ ರಾಜಕುಮಾರನನ್ನು

ಒಸದಾಶ್ವಾಸಿಸುವಂತೆ ಪುಣ್ಯತತಿಯಿಂ ಮುಟ್ಟುವಂತಚ್ಛ ತೀ
ರ್ಥಸಮೂಹಾಂಬುಗಳಿಂದಭಿಷವಂ ಮಾಳ್ಪಂತೆ ಪೂತತ್ವಮಂ
ಪಸರಿಪ್ಪಂತೆ ಬರಂಗಳಂ ಪದಪಿನಿಂದೀವಂತೆ ದೃಕ್ಸೃಷ್ಟಿ ರಾ
ಜಿಸೆ ದಿವ್ಯಾಂಗನೆ ನೋಡಿದಳ್ ತಗುಳ್ದು ಚಂದ್ರಾಪೀಡ ಭೂಪಾಲನಂ

ಪ್ರೇಮದಿಂದ ಆಶ್ವಾಸಿಸುವಂತೆ, ಪುಣ್ಯಸಮೂಹದಿಂದ ಮುಟ್ಟುವಂತೆ, ಶುದ್ಧವಾದ ತೀರ್ಥೋದಕದಿಂದ ಅಭಿಷೇಕಮಾಡುವಂತೆ, ಪವಿತ್ರತೆಯನ್ನು ಹರಡುವಂತೆ, ಉತ್ಸಾಹದಿಂದ ವರಗಳನ್ನು ಕೊಡುವಂತೆ ಆಕೆಯ ಕಣ್ಣುಗಳು ಕಂಗೊಳಿಸುತ್ತಿರಲಾಗಿ, ಆಕೆ ಚಂದ್ರಾಪೀಡನನ್ನು ದೃಷ್ಟಿಯಿಂದ ಮುಟ್ಟಿ ನೋಡಿದಳು

ಆಕೆಯ ದೃಷ್ಟಿ ಸ್ನಿಗ್ಧಮಧುರವಾಗಿರುವಷ್ಟೆ ಆಕೆಯ ಮಾತು ಸುಸಂಸ್ಕೃತಿಯ ಸುವಾಸನೆಯಿಂದ ತುಂಬಿದೆ—

ಸ್ವಾಗತಮೇ ನಿನಗೆ ಮಹಾ
ಭಾಗನೆ ಮದ್ಭೂಮಿಗೆಂತು ಬಂದಯ್ ನೀನ
ಭ್ಯಾಗತನಾಗಲ್ವೇಳ್ಕೆಂ
ದಾಗಳ್ ನೃಪಸುತನನಳ್ಕರಿಂ ಸತಿ ನುಡಿದಳ್.

ಮಹಾನುಭಾವ ನಿನಗೆ ಸ್ವಾಗತ. ನೀನು ಅಭ್ಯಾಗತನಾಗಿರಬೇಕು. ನೀನು ಈ ನಮ್ಮ ಭೂಮಿಗೆ ಹೇಗೆ ಬಂದೆ? ಎಂದು ಅಕ್ಕರೆಯಿಂದ ಮಾತ ನಾಡಿಸಿದಳು.

ಆಕೆಯ ನೋಟನುಡಿಗಳಿಂದ ರಾಜಕುಮಾರನು ಕೃತಾರ್ಥನಾದಂತೆ ಭಾವಿಸಿ, ಆಕೆಯೊಡನೆ ಆಕೆಯ ಆಶ್ರಮಕ್ಕೆ ಹೋಗಿ, ಆಕೆಯ ಆತಿಥ್ಯದಿಂದ ತೃಪ್ತಿಗೊಂಡು ಆಕೆಯ ವೃತ್ತಾಂತವನ್ನು ಬೆಸಗೊಂಡ. ಆಕೆ ತನ್ನ ಕರು ಣೆಯ ಕಥೆಯುನ್ನು ಹೇಳುತ್ತಾ ಕಥೆಯ ಸುರಳಿಯನ್ನು ಹಿಂದಕ್ಕೆ ಬಿಚ್ಚಿ ದಳು. ಆಕೆಯ ಮತ್ತು ಪುಂಡರೀಕನ ದುರಂತ ಪ್ರಣಯ ಕಥೆಯನ್ನು ತಿಳಿಸಿದಮೇಲೆ, ಕಥಾತಂತುವನ್ನು ಮುಂದುವರಿಸುವುದಕ್ಕೂ ಕಾರಣಕರ್ತೆ ಳಾದಳು. ಆಕೆಯ ಕೃಪೆಯಿಂದ ರಾಜಕುಮಾರನಿಗೆ ಗಂಧರ್ವರಾಜಕುಮಾರಿ ಕಾದಂಬರಿಯ ದರ್ಶನವಾಯಿತು. ಮಹಾಶ್ವೇತೆ ಗಂಡನ ವಿರಹದಲ್ಲಿ ಸನ್ಯಾಸಿಜೀವನವನ್ನು ಸ್ವೀಕರಿಸಿರುವಾಗ, ಆಕೆಯ ಪ್ರಾಣಸಖಿಯಾದ ಕಾದಂಬರಿ ವಿವಾಹ ಜೀವನಕ್ಕೆ ಒಡಂಬಡುವಂತಿರಲಿಲ್ಲ ಆಕೆಗೆ ಚಂದ್ರಾ ಪೀಡನ ದರ್ಶನವನ್ನು ಮಾಡಿಸಿದರೆ ಅವಳ ಮನಸ್ಸಿಗೆ ನೆಮ್ಮದಿಯಾದೀ ತೆಂದು ಮಹಾಶ್ವೇತೆಯ ಎಣಿಕೆ. ಆಕೆ ರಾಜಕುಮಾರನನ್ನು ಕುರಿತು

ನಿನ್ನನಕಾರಣ ಬಾಂಧವ
ನಂ ನೋಡಿಯೆ ಶೋಕವಾರಿದುದು ಸುಜನರ ಲೋ
ಕೋನ್ನತರ ಪರಹಿತರ ನಿ
ಮ್ಮನ್ನರ ಬರವಾರ್ಗೆ ಸುಖಮನುತ್ಪಾದಿಸದೊ!

ಅಕಾರಣ ಬಾಂಧವನಾದ ನಿನ್ನನ್ನು ನೋಡಿದುದರಿಂದಲೆ ನನ್ನ ದುಃಖ ಎಷ್ಟೋ ಕಡಮೆಯಾಯಿತು. ಸಜ್ಜನನೂ ಲೋಕೋನ್ನತನೂ ಪರಹಿತನೂ

ಆದ ನಿನ್ನಂತಹವನ ಆಗಮನದಿಂದ ಯಾರಿಗೆ ತಾನೇ ಸುಖಸಂತೋಷ ವಾಗದೆ ಇದ್ದೀತು?—ಎಂದು ಹೇಳಿ ಆತನನ್ನು ಕಾದಂಬರಿಯ ಬಳಿಗೆ ಕರೆದೊಯ್ದಳು. ಕಾದಂಬರಿಯ ಕನ್ಯಾಂತಃಪುರವೇದರೆ

ಇದು ನಾರೀಮಯಮಪ್ಪ ಲೋಕಮಿದು, ಬೇರೊಂದಂಗನಾದ್ವೀಪಮಿಂ
ತಿದು ನಿಷ್ಪೂರುಷ ಲೋಕಮಿದು ಸರ್ಗಕ್ಕೆಂದು ಪದ್ಮೋದ್ಭವಂ
ಸುದತೀರತ್ನ ಸಮೂಹಮಂ ಪದಪಿನಿಂ ಬಯ್ಚಿಟ್ಟ ಭಂಡಾರಮ
ಪ್ಪುದೆನಲ್ ಸಂದಣಿಸಿರ್ದ ಸುಂದರಿಯರ್...............

ಇದು ನಾರಿಯರಿಂದ ತುಂಬಿದ ಲೋಕ; ಇದೊಂದು ಪ್ರತ್ಯೇಕವಾದ ಅಂಗನೆಯರ ದ್ವೀಪ; ಇದು ಪುರುಷರಹಿತವಾದ ಒಂದು ಲೋಕ; ಬ್ರಹ್ಮನು ಸ್ವರ್ಗಲೋಕಕ್ಕೆ ಆಗತ್ಯವಾದ ಅಪ್ಸರಿಯರ ಸಮೂಹವನ್ನು ತಂದು ಭದ್ರವಾಗಿ ಬಚ್ಚಿಟ್ಟಿರುವ ಸುದತೀರತ್ನಗಳ ಭಂಡಾರವೇ ಇದು— ಎನ್ನುವಂತೆ ಸುಂದರಿಯರಿಂದ ತುಂಬಿಹೋಗಿತ್ತು ಆ ಅಂತಃಪುರ ರಾಜನು ಇಕ್ಕೆಲಗಳಲ್ಲಿದ್ದ ಅವರ ಮಧ್ಯೆ ಅಂತಃಪುರದಲ್ಲಿ ಪ್ರವೇಶಮಾಡಿದನು.

ಎರಡುಂ ಪಕ್ಷದೊಳೋಲಗಕ್ಕೆ ಪದಪಿಂ ಬಂದಿರ್ದ ಕಾಂತಾಜನೋ
ತ್ಕರ ರತ್ನಾಭರಣ ಪ್ರಭಾಪ್ರಸರವಾದಂ ತಳ್ತು ತದ್ವೀಥಿಕಾಂ
ತರದೊಳ್ ಪೆರ್ಬೊನಲಂದದಿಂ ಪರಿಯೆ ಕಂಡಂತಾ ಪ್ರಭಾಪೂರದೊಳ್
ಭರದಿಂ ತಾನಿದಿರೀಸುವಂತೆ ನಡೆದಂ ಭೂಪಾಲವಿದ್ಯಾಧರಂ

ಒಡ್ಡೋಲಗಕ್ಕಾಗಿ ಬಂದಿದ್ದ ಕಾಂತಾಜನರು ಎರಡು ಪಕ್ಕಗಳಲ್ಲಿಯೂ ಕುಳಿತಿರುವಾಗ ಅವರ ರತ್ನಾಭರಣಗಳ ಕಾಂತಿ ಅವರ ಮಧ್ಯದಲ್ಲಿದ್ದ ಹಾದಿಯನ್ನೆಲ್ಲಾ ದೊಡ್ಡ ಪ್ರವಾಹದಂತೆ ತುಂಬಿದೆ. ಆ ಪ್ರಭಾ ಪ್ರವಾಹದಲ್ಲಿ ಬಹಳ ಪ್ರಯಾಸದಿಂದ ಇದಿರುಪ್ರವಾಹದಲ್ಲಿ ಈಜುವವನಂತೆ ರಾಜ ಕುಮಾರನು ನಡೆದುಕೊಂಡುಹೋದನು. ಇದಿರಿನಲ್ಲಿಯೇ ಕಾದಂಬರಿ ಕುಳಿತಿದ್ದಾಳೆ. ಓ!

ಪ್ರೋಳೆಯುತ್ತಿರ್ಪ ಮಹಾವರಾಹ ವದನೋದ್ಯದ್ದಂಷ್ಟ್ರಮಂ ನೆಮ್ಮಿ ನಿಂ
ದಳೊ ಭೂಕಾಂತೆಯೆನಲ್ಕೆ ನೀಲವಸನ ಪ್ರಚ್ಛನ್ನ ಪರ್ಯಂಕ ಮಂ
ಡಳದೊಳ್ ಬೆಳ್ಪಿಸೆದಿರ್ದ ಕೌಳುಡೆಯನೊಂದಂ ನೆಮ್ಮಿ ಕುಳ್ಳಿರ್ದ ಕೋ
ಮಳೆಯಂ ದೂರದೆ ನೋಡಿ ಕಂಡನರಸಂ ಕಾದಂಬರೀ ದೇವಿಯಂ!

ಹಿರಣ್ಯಾಕ್ಷನನ್ನು ಕೊಂದ ಆದಿವರಾಹನ ಕೋರೆದಾಡೆಗಳನ್ನು ನೆಮ್ಮಿ ನಿಂತ ಭೂದೇವಿಯಂತೆ ಆ ಕಾದಂಬರಿ ಕಪ್ಪುಬಟ್ಟೆಯಿಂದ ಆಚ್ಛಾದಿತವಾದ ಪರ್ಯಂಕದಲ್ಲಿ ಅಚ್ಚ ಬಿಳಿಯ ದಿಂಬೊಂದನ್ನು ಒರಗಿಕೊಂಡು ಕುಳಿತಿರ್ದ ಸುಕುಮಾರಿ ಕಾದಂಬರಿಯನ್ನು ರಾಜಕುಮಾರನು ದೂರದಿಂದಲೆ ನೋಡಿದನು.

ಆಕೆಯ ಸೌಂದರ್ಯ ರಾಜಕುಮಾರನ ಕಣ್ಣುಗಳನ್ನು ಸೆರೆಹಿಡಿಯಿತು.

ಇವಳಂ ನೋಡಲ್ ಪಡೆದೆ
ನ್ನ ವಿಲೋಚನವಾವ ನೋಂಪಿಯಂ ನೋಂತುವೊ ಮಾ
ಯ್ದ ವಿಧಾತ್ರನೇಕೆ ವಿರಚಿಸ
ನೊ ವಿಲೋಚನಮಯಮೆನಲ್ ಮದಿಂದ್ರಿಯಚಯಮಂ

ಇವಳನ್ನು ನೋಡಲು ಸಾಧ್ಯವಾದ ನನ್ನ ಕಣ್ಣುಗಳು ಏನು ಪುಣ್ಯ ಮಾಡಿದ್ದುವೊ! ಪಾಪಿ ಬ್ರಹ್ಮ ನನ್ನ ಪಂಚೇಂದ್ರಿಯಗಳನ್ನೂ ಕಣ್ಣುಗಳನ್ನಾಗಿಯೇ ಏಕೆ ಮಾಡಬಾರದಾಗಿತ್ತೊ!—ಎಂದುಕೊಂಡ. ಆ ರಾಜಕುಮಾರನಂತೆ ಕಾದಂಬರಿಗೂ ಪ್ರಥಮದರ್ಶನದಲ್ಲಿಯೇ ಪ್ರಣಯಾಂಕುರವಾಯಿತು.

ಒದವೆ ಪುಲಕಾಂಕುರಂಗಳ್
ಮೊದಲೊಳ್, ಭೂಷಣದ ರವಮೆರಡನೆಯ ಸೂಳ್ ಮು
ನ್ನಿದಿರೇಳೆ ತಾಂ ಬಳಿಕ್ಕಿರ
ದಿದಿರೆೞ್ದಳ್ ತರಳನಯನೆ ಸಂಭ್ರಮದಿಂದಂ

ಮೊದಲು ಆಕೆಯ ಹರ್ಷಪುಳಕಗಳು, ಎರಡನೆಯದಾಗಿ ಆಕೆಯ ಆಭರಣ ಧ್ವನಿ—ಇವು ರಾಜಕುಮಾರನ ಸುಖಾಗಮನವನ್ನು ಬಯಸಿದ ಮೇಲೆ ರಾಜಕುಮಾರಿ ಸಂಭ್ರಮದಿಂದ ಮೇಲಕ್ಕೆದ್ದು ರಾಜಕುಮಾರನನ್ನು ಇದಿರುಗೊಂಡಳಂತೆ!

ಚಂದ್ರಾಪೀಡ ಕಾದಂಬರಿಯರ ಸಮಾಗಮವೂ ಆತನು ಕಾದಂಬರಿಯ ಅತಿಥಿಯಾಗಿದ್ದು ಅಲ್ಲಿಂದ ಹಿಂದಿರುಗಿದುದೂ ಒಂದು ಸ್ವರ್ಗೀಯ ದೃಶ್ಯ. ಮಹಾಶ್ವೇತೆಗೆ ಕಾದಂಬರಿಯ ಮನಃಪರಿವರ್ತನೆಯನ್ನು ಕಂಡು ತುಂಬ ಸಂತೋಷವಾಗುತ್ತದೆ. ಅವರ ಪ್ರಣಯ ಜೀವನಕ್ಕೆ ಅಮೃತ ಸೇಚನೆಯನ್ನು ಮಾಡುವ ಕಾರ್ಯದಲ್ಲಿ ಉದ್ಯುಕ್ತಳಾದ ಆಕೆ ಕಾದಂಬರಿಯಿಂದ

ರಾಜಕುಮಾರನಿಗೆ ತಾಂಬೂಲವನ್ನು ಕೊಡಿಸುತ್ತಾಳೆ. ಕಾದಂಬರಿಗೆ ಆ ಕೆಲಸಮಾಡಲು ತುಂಬ ನಾಚಿಕೆ

ಆನಕ್ಕ ನಾಣ್ಚುವೆಂ ಪಿಡಿ
ನೀನೆ ನೃಪಂಗಿಕ್ಕು ತಂಬುಲಮನಱಿವೆನೆ ಪೇ
ೞೇನಾನುಮನಾನೆಂದತಿ ಲ
ಜ್ಜಾನತಮುಖಿಯಾಗಿ ಕಾಂತೆ ಮೆಲ್ಲನೆ ನುಡಿದಳ್

ಅಕ್ಕ ನನಗೆ ನಾಚಿಕೆ. ಹಿಡಿ, ನೀನೇ ರಾಜನಿಗೆ ತಾಂಬೂಲವನ್ನು ಕೊಡು. ನನಗೇನು ಗೊತ್ತಾಗುತ್ತೆ ನೀನೇ ಹೇಳು ಅಕ್ಕ ಎಂದು ಲಜ್ಜೆಯಿಂದ ತಲೆಬಾಗಿದವಳಾಗಿ ಅವಳು ಮೆಲ್ಲನೆ ಹೇಳಿದಳು. ಆದರೆ ಆ ಅಕ್ಕ ಬಲವಂತಮಾಡಿದಳು. ಕಾದಂಬರಿ ಚಂದ್ರಾಪೀಡನಿಗೆ ತಾಂಬೂಲವನ್ನು ಕೊಡಲೇಬೇಕಾಯಿತು.

ಬೆಮರಿಂ ಮುಳುಗಿದಪೆಂ ಸಂ
ಭ್ರಮದಿಂ ಬಿೞ್ದಪ್ಪೆನರಸ ಕೈಗುಡು ನೀಂ ಬೇ
ಗಮೆನಿಪ್ಪ ತೆಱದೆ ತಾಂಬೂ
ಲಮಿಳಿತಮಂ ಕಾಂತೆ ನೀಡಿದಳ್ ನಿಜಕರಮಂ

ನಾನು ಬೆವರಿನಲ್ಲಿ ಮುಳುಗಿಹೋಗುತ್ತಿದ್ದೇನೆ; ಸಂಭ್ರಮದಿಂದ ಬಿದ್ದುಹೋಗುತ್ತಿದ್ದೇನೆ; ಮಹಾರಾಜ, ನೀನು ಬೇಗ ನಿನ್ನ ಕೈಯಾಸರೆಯನ್ನು ಕೊಡು–ಎಂಬ ರೀತಿಯಲ್ಲಿ ತಾಂಬೂಲವಿರುವ ತನ್ನ ಕೈಯನ್ನು ಮುಂದಕ್ಕೆ ಚಾಚಿದಳು. ಚಂದ್ರಾಪೀಡನೂ ಅದನ್ನು ಸ್ವೀಕರಿಸುವುದಕ್ಕಾಗಿ ತನ್ನ ಪಂಚೇಂದ್ರಿಯಗಳೇ ಬೇರೆ ಬೇರೆ ರೂಪನ್ನು ತಾಳಿರುವುವೆಂಬಂತಿರುವ ಐದು ಬೆರಳುಗಳಿಂದ ಕೂಡಿರುವ, ತನ್ನ ಕೈಯನ್ನು ಚಾಚಿದನು. ಆ ತನ್ವಂಗಿ ತಾಂಬೂಲವನ್ನು ಕೊಟ್ಟಳು—

ಎನಸುಂ ಮುಂದೆ ನಖಾಂಶು ಸಿಳ್ಕೆ ನೃಪಹಸ್ತಾನ್ವೇಷಣಂಗೆಯ್ವವೋಲ್
ನಿನಗೆನ್ನಂ ಬಿಡದುಣ್ಮಿದೀ ಬೆಮರೆ ಕಯ್ನೀರಾಗಿರಲ್ ತೋರ್ಕೆಗೊ
ಟ್ಟನನಂಗಂ ಪಿಡಿ ನಿನ್ನ ಕೈಯೆಡೆಯ ನೊಂದಿರ್ದಪ್ಪುದಿನ್ನೆನ್ನ ಜೀ
ವನವೆಂಬಂದದಿನಿಕ್ಕಿದಳ್ ನಡುಗುತುಂ ತನ್ವಂಗಿ ತಾಂಬೂಲಮಂ

ಕಾದಂಬರಿಯ ಕೈಯುಗುರುಗಳ ಕಾಂತಿ ರಾಜನ ಹಸ್ತವನ್ನು

ಹುಡುಕುತ್ತಿರುವಂತೆ ಮೊದಲೇ ಮುಂದಕ್ಕೆ ಚಾಚಿಕೊಂಡು ಹೋಗಿರಲಾಗಿ, 'ಒಂದೇ ಸಮನಾಗಿ ಸುರಿಯುತ್ತಿರುವ ಬೆವರೇ ಧಾರೆಯ ನೀರಾಗಿರಲು, ಮನ್ಮಥನು ನನ್ನನ್ನು ನಿನಗೆ ಒಪ್ಪಿಸಿಕೊಡುತ್ತಿದ್ದಾನೆ, ಸ್ವೀಕರಿಸು; ಇನ್ನು ನನ್ನ ಜೀವನವು ನಿನ್ನ ಸ್ವಾಧೀನವಾಗಿದೆ'—ಎಂಬ ರೀತಿಯಿಂದ ಆ ಕೋಮಲೆ ನಡುಗುತ್ತಾ ತಾಂಬೂಲವನ್ನು ಕೊಟ್ಟಳು.

ಚಂದ್ರಾಪೀಡನು ಕಾದಂಬರೀ ದೇವಿಯ ಆತಿಥ್ಯದಿಂದ ಧನ್ಯನಾಗಿ ತನ್ನೂರಿಗೆ ಹಿಂದಿರುಗಿದನು. ಹಗಲಿರುಳೂ ಆಕೆಯದೇ ಯೋಚನೆ ಅವನಿಗೆ. ಕಾದಂಬರಿಗೂ ಅಷ್ಟೆ; ಅವನಿಲ್ಲದ ಜಗತ್ತು ಬರಿದಾದಂತಾಗಿತ್ತು. ರಾಜ ಕುಮಾರ ತನ್ನ ಸೇನೆಯನ್ನು ಸೇರುವ ಹೊತ್ತಿಗೆ ಕಾದಂಬರಿ ಅಸ್ವಸ್ಥ ಳಾಗಿರುವುದಾಗಿ ಸುದ್ದಿ ಬಂತು. ಒಡನೆಯೆ ರಾಜಕುಮಾರನು ಕಾದಂಬರಿಯ ಬಳಿಗೆ ಹಿಂದಿರುಗಿ, ವಿರಹವೇದನೆಯಿಂದ ಬಳಲುತ್ತಿದ್ದ ಆಕೆಯನ್ನು ಸಮಾಧಾನಪಡಿಸಿ ಹಿಂದಿರುಗಿದನು. ಮುಂದೆ ಕೆಲದಿನಗಳಲ್ಲಿಯೇ ಆತನು ಗೆಳೆಯನ ಮರಣವಾರ್ತೆಯನ್ನು ಕೇಳಿ, ಎದೆಯೊಡೆದು ಸಾಯುವನು. ಕಾದಂಬರಿ ಆತನ ಕಳೇಬರದೊಡನೆ ಸಹಗಮನೋದ್ಯುಕ್ತೆಯಾಗಿದ್ದಾಗ, ಚಂದ್ರನು ರಾಜಪುತ್ರನ ದೇಹವು ನಿತ್ಯವಾದುದೆಂದೂ ಆತನ ಸಮಾಗಮ ಬೇಗ ಆಗುವುದೆಂದೂ ಆಶ್ವಾಸನೆ ನೀಡುತ್ತಾನೆ. ಮಹಾಪತಿವ್ರತೆಯಾದ ಮಹಾಶ್ವೇತೆ ತನ್ನ ಗೆಳತಿಯನ್ನು ಕುರಿತು

ಎನಗಿದು ದೈವಮೆಂದು ಮನದೊಳ್ ಪರಿಭಾವಿಸಿ ಕಲ್ಲ ಮಣ್ಣ ರೂ
ಪನೆ ಗಡ ಪೂಜಿಸುತ್ತುಮಿರೆ ಸನ್ನಿದಮಾದಪುದೆಂದೊಡಕ್ಕ ನೆ
ಟ್ಟನೆ ಮನುಜೇಂದ್ರ ಚಂದ್ರಪೆಸರಿಂದೆಸೆವಗ್ಗದ ಚಂದ್ರಮೂರ್ತಿಯಂ
ಮನಮೊಸೆದರ್ಚಿಸುತ್ತುಮಿರೆ ಸನ್ನಿದನಪ್ಪುದಿದಾವ ಸಂದೆಗಂ।

ದೈವವೆಂಬ ಭಾವನೆಯಿಂದ ಕಲ್ಲುಮಣ್ಣುಗಳನ್ನು ಪೂಜಿಸಿದರೇ ಇಷ್ಟಾರ್ಥ ಸಿದ್ಧಿಯಾಗುತ್ತಿರುವಾಗ ಚಂದ್ರಾಪೀಡನೆಂಬ ಹೆಸರಿನಿಂದ ಸಾಕ್ಷಾತ್ ಚಂದ್ರನೇ ಬಂದಿರುವಾಗ, ಆತನ ದೇಹವನ್ನು ಭಕ್ತಿಯಿಂದ ಪೂಜಿಸಿದರೆ ಇಷ್ಟಾರ್ಥ ಸಿದ್ಧಿಯಾಗುವುದೆಂಬುದರಲ್ಲಿ ಯಾವ ಸಂದೇಹವಿದೆ? ಎಂದು ಹೇಳುತ್ತಾಳೆ. ಈ ಇಬ್ಬರು ಸಾಧ್ವಿಯರ ಪುಣ್ಯಕರ್ಮದಿಂದ ಅವರಿಬ್ಬರ ಪತಿಗಳೂ ದೊರೆತು ಅವರ ಬಾಳು ಪರಿಪೂರ್ಣತೆಯನ್ನು ಪಡೆಯು

ತ್ತದೆ. 'ಮಹಾಕವಿಪ್ರತಿಭೆಯ ಸ್ವಪ್ನ ಸುಂದರ ಸಾಹಸಗಳಲ್ಲಿ ಕಾದಂಬರೀ ಕಾವ್ಯವೂ ಒಂದದ್ಭುತ ಕೃತಿ. ಅದೊಂದು ಮೇಘಚುಂಬಿಯಾದ ಶೃಂಗಾರ ಗೋಪುರ. ಅದರ ತಳಪದಿ ಭೂಮಿಯ ಮೇಲಿರುವಂತೆ ಕಾಣುತ್ತದೆ. ಅದರ ತುದಿ ಬೆಳ್ಮುಗಿಲಿನ ಮುದ್ದಾಟದಲ್ಲಿ ಅರೆಮರೆಯಾಗಿದೆ. ಅದರ ಜಗತ್ತು ಹೊಸ ಮಳೆಯಲ್ಲಿ ಮಿಂದ ಮುಗಿಲ್ಗಳ ಮೇಲೆ ಮೂಡುವ ಸೂರ್ಯೋದಯದ ಚೈತ್ರಕಾನನಪಂಕ್ತಿಯ ವರ್ಣವೈವಿಧ್ಯದಿಂದಲೂ ಖಚಿತರಚನಾ ವೈಖರಿಯಿಂದಲೂ ಶೋಭಿಸುತ್ತಿದ್ದರೂ ಬೆಳ್ದಿಂಗಳ ರಾತ್ರಿಯಂತೆ ಹೊಂಗನಸಿನ ಹೊದಿಕೆಯಲ್ಲಿ ಧ್ಯಾನಶೀಲವಾಗಿದೆ' ಎಂಬ ಕವಿ ಕುವೆಂಪುರವರ ರಸವಿಮರ್ಶೆ[1] ಅರ್ಥವಾಗಬೇಕಾದರೆ, ಮಾನವನ 'ಹಂಬಲದ ಒಂದು ಹೊಂಗನಸಿನಂತೆ, ಮೋಹದ ಒಂದು ಐಂದ್ರಜಾಲಿಕ ಸೃಷ್ಟಿಯಂತೆ' ಇರುವ ಕಾದಂಬರಿಯನ್ನು ಆಮೂಲಾಗ್ರವಾಗಿ ಓದಿನೋಡಬೇಕು.

## ೩. ದುರ್ಗಸಿಂಹ (ಕ್ರಿ.ಶ. ೧೦೩೧)

ಸಂಸ್ಕೃತ ಪಂಚತಂತ್ರವನ್ನು ಕನ್ನಡಿಸಿಕೊಟ್ಟ ಕೀರ್ತಿ ದುರ್ಗಸಿಂಹನದು. ಈ ಗ್ರಂಥ ಪ್ರಪಂಚದ ಸಾಹಿತ್ಯದಲ್ಲಿ ಸರ್ವವ್ಯಾಪಿಯಾಗಿದೆ. ಜಗತ್ತಿನ ಮತ್ತಾವ ಲೌಕಿಕಕಾವ್ಯವೂ ಇವರಷ್ಟು ವಿಸ್ತಾರವಾದ ಪ್ರಸರಣೆಯನ್ನು ಪಡೆದಿಲ್ಲವೆಂದು ತೋರುತ್ತದೆ. ಸುಮಾರು ಐವತ್ತು ಭಾಷೆಗಳಲ್ಲಿ, ಇನ್ನೂರು ವಿವಿಧ ರೂಪರೀತಿಗಳಲ್ಲಿ ಈ ಗ್ರಂಥ ಹರಡಿಹೋಗಿದೆಯೆಂದು ಪ್ರೊ|| ಎಡ್ಗರ್ ಟನ್‌ರವರು ಹೇಳುತ್ತಾರೆ. ಕ್ರಿ. ಶ. ೧೧ನೆಯ ಶತಮಾನದಲ್ಲಿ ಮೊತ್ತ ಮೊದಲು ಯೂರೋಪಿಗೆ ಪರಿಚಯವಾದ ಈ ಗ್ರಂಥ ೧೫ನೇ ಶತಮಾನದ ಹೊತ್ತಿಗೆ ಗ್ರೀಕ್, ಲ್ಯಾಟಿನ್, ಸ್ಪ್ಯಾನಿಷ್, ಇಟಾಲಿಯನ್, ಜರ್ಮನ್, ಇಂಗ್ಲಿಷ್ ಇತ್ಯಾದಿ ಪಾಶ್ಚಾತ್ಯ ಭಾಷೆಗಳಲ್ಲೆಲ್ಲಾ ಭಾಷಾಂತರ ರೂಪದಿಂದ ಪರಿಚಿತವಾಯಿತಂತೆ! ದೇಶಾಂತರ ದ್ವೀಪಾಂತರಗಳನ್ನೆಲ್ಲಾ ವ್ಯಾಪಿಸಿಕೊಳ್ಳುತ್ತಿರುವ ಈ ಪಂಚತಂತ್ರ ಕನ್ನಡದಲ್ಲಿ ಮೈದೋರಿದುದು ದುರ್ಗಸಿಂಹನ ಕೃಪೆಯಿಂದ, ಹನ್ನೊಂದನೆಯ ಶತಮಾನದಲ್ಲಿ.

'ಪಂಚತಂತ್ರ' ದ ಆದಿಯಲ್ಲಿ ಕವಿ ಸ್ವವಿಷಯವನ್ನು ಸ್ವಲ್ಪಮಟ್ಟಿಗೆ

---

[1] ಕುವೆಂಪು : ತಪೋನಂದನ, ಪುಟ 1, 2.

ಹೇಳಿಕೊಂಡಿದ್ದಾನೆ. ಆತನು ಕರ್ಣಾಟಕವ ಕಿಸುನಾಡಿನ ಸೈಯಡಿಯೆಂಬ ಅಗ್ರಹಾರದವನಂತೆ! ಅಲ್ಲಿ ಸಕಲ ವಿದ್ಯಾಪಾರಂಗತನಾದ ದುರ್ಗಮಯ್ಯ ನೆಂಬ ಬ್ರಾಹ್ಮಣನಿದ್ದ. ಆತನ ಮಗ ಈಶ್ವರಾರ್ಯ. ಈ ಈಶ್ವರಾರ್ಯ ನಿಗೂ ಆತನ ಮಡದಿ ರೇವಾಂಬೆಗೂ ಮಗನಾಗಿ ಜನಿಸಿದ ಕವಿ ದುರ್ಗಸಿಂಹ. ಮಹಾಯೋಗಿಗಳಾದ ಶಂಕರಭಟ್ಟರು ಈತನ ಗುರುಗಳು. ಒಂದನೆಯ ಜಯಸಿಂಹ ಜಗದೇಕಮಲ್ಲನಲ್ಲಿ ಕವಿ ಸಂಧಿವಿಗ್ರಹಿಯಾಗಿ ಸೇರಿ, ಸುಖ ಜೀವನವನ್ನು ಬಾಳುತ್ತಾ ಅನೇಕ ಹರಿಹರದೇವಾಲಯಗಳನ್ನು ಕಟ್ಟಿಸಿ ಕೀರ್ತಿಶಾಲಿಯಾದ. ತನ್ನ ಗ್ರಂಥವನ್ನು ಕ್ರಿ. ಶ. ೧೦೩೧ರಲ್ಲಿ ಬರೆದ. ತನ್ನ ಗ್ರಂಥದ ಮೂಲದ ಮಹತ್ವವನ್ನು ಕುರಿತು ಕವಿ ಹೇಳುತ್ತಾನೆ—ಹಿಂದೆ ಗಿರಿ ತನೂಜೆ ಪರಶಿವನನ್ನು ಕುರಿತು ಅಪೂರ್ವವಾದ ಒಂದು ಕಥೆಯನ್ನು ಹೇಳು ವಂತೆ ಕೇಳಿಕೊಂಡಳು. ಶಿವನು ಆಕೆಯ ಇಷ್ಟವನ್ನು ಸಲ್ಲಿಸುತ್ತಿರಲು ಪುಷ್ಪದಂತನೆಂಬ ಗಣಧರನು ಅದನ್ನು ಕದ್ದು ಕೇಳುತ್ತಿದ್ದನು. ಕಾರಣಾಂತರ ಗಳಿಂದ ಭೂಲೋಕದಲ್ಲಿ ಗುಣಾಢ್ಯನೆಂಬ ಹೆಸರಿನಿಂದ ಹುಟ್ಟಬೇಕಾಗಿ ಬಂದ ಆ ಗಣಧರನು ಪೈಶಾಚಿಕ ಭಾಷೆಯಲ್ಲಿ ತಾನು ಶಿವನಿಂದ ಕೇಳಿದ್ದ ಕಥೆ ಯನ್ನೆಲ್ಲಾ ಬರೆದಿಟ್ಟ. ಅದೇ ಪ್ರಸಿದ್ಧವಾದ ಬೃಹತ್ಕಥೆ. ಅದರಿಂದ ಈ ಕಥೆಗಳನ್ನು ಆಯ್ದುಕೊಂಡು 'ಪಂಚತಂತ್ರ' ವೆಂಬ ಹೆಸರಿನಿಂದ ಬರೆದ, ವಸುಭಾಗಭಟ್ಟ. ತಾನು ಆ

> ವಸುಭಾಗ ಭಟ್ಟ ಕೃತಿಯಂ
> ವಸುಧಾಧಿಪ ಹಿತಮನಖಿಲ ವಿಬುಧಸ್ತುತಮಂ
> ಪೊಸತಾಗಿರೆ ವಿರಚಿಸುವೆಂ
> ವಸುಮತಿಯೊಳ್ ಪಂಚತಂತ್ರಮಂ ಕನ್ನಡದಿಂ

ವಸುಭಾಗ ಭಟ್ಟನು ಬರೆದು, ರಾಜರಿಗೆ ಹಿತಕರವಾದುದೂ, ವಿದ್ವಾಂಸರಿಂದ ಸ್ತೋತ್ರಪಾತ್ರವಾದುದೂ ಆದ ಪಂಚತಂತ್ರವೆಂದು ಭೂಮಿಯಲ್ಲೆಲ್ಲಾ ಪ್ರಸಿದ್ಧವಾಗಿರುವ ಕಥೆಯನ್ನು ಕನ್ನಡದಲ್ಲಿ ವಿರಚಿಸುತ್ತಿದ್ದೇನೆ—ಎಂದು ಕವಿ ಹೇಳುತ್ತಾನೆ. ಈಗ ವಸುಭಾಗಭಟ್ಟನ ಪಂಚತಂತ್ರ (ಸಂಸ್ಕೃತ) ಉಪಲಬ್ಧ ವಾಗಿಲ್ಲ. ಜಾವಾ ಸುಮಾತ್ರ ಮೊದಲಾದ ದ್ವೀಪಗಳಲ್ಲಿ ಆ ಪಂಚತಂತ್ರ ಬಳಕೆಯಲ್ಲಿತ್ತಂತೆ. ಅದರ ಪ್ರತಿಗಳು ಕೂಡ ಅಲ್ಲಿ ಕಾಣಬರುವುದಾಗಿ

ಡಾ॥ ವೆಂಕಟಸುಬ್ಬಯ್ಯನವರು ಸೂಚಿಸುತ್ತಾರೆ. ಆದರೆ ಅದು ನಮ್ಮಲ್ಲಿ ಬಳಕೆಯಲ್ಲಿಲ್ಲ. ಈಗ ನಮ್ಮಲ್ಲಿ ಬಳಕೆಯಲ್ಲಿರುವುದು ವಿಷ್ಣುಶರ್ಮ ಪೂರ್ಣಭದ್ರರ ಪಂಚತಂತ್ರಗಳು ಮಾತ್ರ. ವಸುಭಾಗಭಟ್ಟನ ಪಂಚತಂತ್ರದ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ನಮಗೆ ಈಗ ಇರುವ ಆಧಾರವೆಂದರೆ ಕನ್ನಡ ಪಂಚತಂತ್ರವೊಂದೇ. ಪಂಚತಂತ್ರದ ಚರಿತ್ರೆಯನ್ನು ಕ್ರಮಬದ್ಧವಾಗಿ ಅಭ್ಯಾಸಮಾಡಲು ವಸುಭಾಗಭಟ್ಟನ ಕಾವ್ಯವೂ ಅತ್ಯವಶ್ಯ. ಈ ದೃಷ್ಟಿಯಿಂದ ದುರ್ಗಸಿಂಹನ ಪಂಚತಂತ್ರ ಅತ್ಯಮೂಲ್ಯವಾದುದಾಗಿದೆ. ಈಗ ಪ್ರಚುರವಾಗಿರುವ ಸಂಸ್ಕೃತ ಪಂಚತಂತ್ರದಲ್ಲಿ ಕಾಣಬರದ ಅನೇಕ ಕಥೆಗಳು ಕನ್ನಡ ಪಂಚತಂತ್ರದಲ್ಲಿ ಕಾಣಬರುತ್ತವೆ.

ದುರ್ಗಸಿಂಹನ ಪಂಚತಂತ್ರ ಚಂಪೂರೂಪದಲ್ಲಿದೆ. ಇದರ ತಿರುಳು ಅರ್ಥಶಾಸ್ತ್ರ. ರಾಜತಂತ್ರದ ರೀತಿ ನೀತಿಗಳು, ದಿನದಿನದ ಜೀವನವಿಧಾನ ಇತ್ಯಾದಿ ವಿಷಯಗಳನ್ನು ಮನೋರಂಜಕವಾದ ರೀತಿಯಲ್ಲಿ ನಿರೂಪಿಸುತ್ತಿದ್ದುದರಿಂದ ಈ ಕಾವ್ಯವು ರಾಜಕುಮಾರರ ಆದರ ಗೌರವಗಳನ್ನು ಗಳಿಸಿತು. ಇದೊಂದು ಕ್ಷತ್ರಿಯಕುಮಾರರ ಪಠ್ಯಪುಸ್ತಕವೆಂದು ಹೇಳಿದರೂ ಅತಿಶಯೋಕ್ತಿಯಾಗದು. ಪಂಚತಂತ್ರದ ಪ್ರಸ್ತಾವನೆಯಲ್ಲಿರುವ ಕಥಾಭಾಗವು ಇದೇ ಸಂಗತಿಯನ್ನೆ ತಿಳಿಸುತ್ತದೆ. ಸೌರಾಷ್ಟ್ರಪ್ರದ ರಾಜನಾದ ಅಮರಶಕ್ತಿಯು ಸ್ವೇಚ್ಛಾಚಾರಿಗಳಾದ ತನ್ನ ಮೂವರು ಮಕ್ಕಳನ್ನು ತಿದ್ದಿ ಹಾದಿಗೆ ತರಲು ವಸುಭಾಗಭಟ್ಟನನ್ನು ಬೇಡಿದನಂತೆ. ಆತನು ಅರ್ಥಶಾಸ್ತ್ರದ ಐದು ಉಪಾಯಗಳನ್ನು ಒಳಗೊಂಡ ಐದು ಕಥೆಗಳನ್ನು ಹೇಳಿ ರಾಜಪುತ್ರರನ್ನು ಸನ್ಮಾರ್ಗಕ್ಕೆ ತಂದನಂತೆ! (೧) ಜೀವನಗೆಳೆಯರಲ್ಲಿ ಒಡಕು ಹುಟ್ಟಿಸುವ **ಭೇದೋಪಾಯ** (೨) ನಂಬದವರನ್ನು ನಂಬುವಂತೆ ಮಾತಾಡಿ ಅವರ ಒಳಹೊಗುವುದು **ವಿಶ್ವಾಸೋಪಾಯ** (೩) ಯಾವ ಕಾರ್ಯವನ್ನೂ ವಿಚಾರಮಾಡದೆ ಕೈಕೊಳ್ಳಬಾರದೆಂದು ಬೋಧಿಸುವ **ಪರೀಕ್ಷೋಪಾಯ** (೪) ಬೇರೆಯವರ ಮನಸ್ಸನ್ನು ತಿಳಿದುಕೊಂಡು ಸಂಧಾನದಿಂದ ಮೋಸಮಾಡುವುದು **ವಂಚನೋಪಾಯ** (೫) ಎಲ್ಲರನ್ನೂ ಅತಿಸ್ನೇಹದಿಂದ ತನ್ನವರನ್ನಾಗಿ ಮಾಡಿಕೊಳ್ಳುವುದು **ಮಿತ್ರಕಾರ್ಯೋಪಾಯ**. ಈ ಐದು ತಂತ್ರಗಳೂ ಪಿಂಗಳಕನೆಂಬ ಸಿಂಹಕ್ಕೂ ಸಂಜೀವಕ

ನೆಂಬ ಎತ್ತಿಗೂ ನಡೆದ ವ್ಯವಹಾರದಲ್ಲಿ ಆಚರಣೆಗೆ ಬಂದಿವೆ.

ಉಜ್ಜಯಿನಿಯಲ್ಲಿ ವರ್ಧಮಾನನೆಂಬ ಒಬ್ಬ ವೈಶ್ಯನಿದ್ದ. ಅವನು ವ್ಯಾಪಾರಕ್ಕೆಂದು ಹೊರಟಾಗ ಅವನ ಒಂದು ಎತ್ತು ಕುಂಟುಬಿತ್ತು. ಅದನ್ನು ಆರೈಕೆಮಾಡುವಂತೆ ಆಳುಗಳನ್ನು ನೇಮಿಸಿ ಅವನು ಹೊರಟುಹೋದ. ಆಳುಗಳು ಅದನ್ನು ಕಾಡುಪಾಲು ಮಾಡಿ ಹೊರಟುಹೋದರು. ಆ ಎತ್ತು ಕುಂಟುತ್ತಾ ಯಮುನಾತೀರವನ್ನು ಸೇರಿ, ಅಲ್ಲಿದ್ದ ಎಳೆಯ ಗರುಕೆಯನ್ನು ಮೇದು ಕೆಲವು ದಿನಗಳಲ್ಲಿಯೇ ಈಶ್ವರನ ವಾಹನದಂತಾಯಿತು. ಅದೇ ಅಡವಿಯಲ್ಲಿ ವಾಸವಾಗಿದ್ದ ಪಿಂಗಳಕನೆಂಬ ಸಿಂಹ ನೀರು ಕುಡಿಯಲೆಂದು ಯಮುನಾ ತೀರಕ್ಕೆ ಬರುತ್ತಿರಲು ಕೊಬ್ಬಿದ ಎತ್ತು ಒಂದು ಸಲ ಗುಟುರು ಹಾಕಿತು. ಅದನ್ನು ಕೇಳಿದ ಸಿಂಹ ಹೆದರಿ ನೀರು ಕುಡಿಯದೆ ಹಿಂದಕ್ಕೆ ಓಡಿ ಹೋಯಿತು. ಇದನ್ನು ಕಂಡ ಕರಟಕ ದಮನಕ ಎಂಬ ಬಳ್ಳುಗಳೆರಡು ಅದನ್ನು ಸಮಾಧಾನಗೊಳಿಸಿ ಸಿಂಹಕ್ಕೂ ಎತ್ತಿಗೂ ಗೆಳತನ ಬೆಳೆಸಿದವು. ಇದರ ಫಲವಾಗಿ ಸಿಂಹ ಅಹಿಂಸಾವಾದಿಯಾಯಿತು. ಅದು ತಿನ್ನುತ್ತಿದ್ದ ಬಳ್ಳುಗಳ ಹೊಟ್ಟೆಯ ಮೇಲೆ ತಣ್ಣೀರುಬಟ್ಟೆ ಬಿದ್ದಂತಾಯಿತು. ಅವು ಸಿಂಹಕ್ಕೂ ಎತ್ತಿಗೂ ದ್ವೇಷವನ್ನು ತಂದೊಡ್ಡಿ ಎತ್ತನ್ನು ಕೊಲ್ಲಿಸಿದವು. ಇದು ಮೊದಲ ತಂತ್ರದ ಕಥೆ. ಉಳಿದ ನಾಲ್ಕು ತಂತ್ರಗಳಲ್ಲಿ ಈ ಬಗೆಯಾದ ಹಲವು ಉಪಕಥೆಗಳನ್ನು ಒಳಗೊಂಡ ಅಖಂಡ ಕಥೆಯಿಲ್ಲ. ಕಥೆಗಳ ಮೂಲಕ ನೀತಿ ನಿರೂಪಣೆ ಎಷ್ಟೋ ಅಷ್ಟೆ. ಕಲಾದೃಷ್ಟಿಯಿಂದ ಪ್ರಥಮ ತಂತ್ರ ಸುಂದರವಾಗಿದೆ,

ದುರ್ಗಸಿಂಹನು ಒಳ್ಳೆಯ ಕತೆಗಾರ. ಅಷ್ಟೇ ಅಲ್ಲ ಬಹು ದೊಡ್ಡ ವಿಡಂಬನಕಾರ. ಪಿಂಗಳನ ಅರಮನೆ ಬಾಗಿಲಿನಲ್ಲಿ ಎರಡು ಕಾಡುಕೋಣಗಳನ್ನು ಬಾಗಿಲು ಕಾಯುವ ಕೆಲಸಕ್ಕೆ ನೇಮಿಸಿದ್ದಾನೆ. ಈ ಪೆದ್ದ ಪ್ರಾಣಿಗಳೊಡನೆ ಚತುರಮತಿಗಳಾದ ಬಳ್ಳುಗಳು ನಡೆದುಕೊಳ್ಳುವ ರೀತಿ ಹಾಸ್ಯರಸವನ್ನು ಉಕ್ಕಿಸಲು ಸಹಾಯಕವಾಗಿರುವುದಲ್ಲದೆ ಸ್ಥಾನಬಲದಿಂದ ಕೋಣನ ಬುದ್ಧಿಯವರು ಹೇಗೆ ನಡೆದುಕೊಳ್ಳುವರೆಂಬುದೂ ವಿದಿತವಾಗುತ್ತದೆ. ಸ್ವಾರ್ಥ ಸಾಧಕರ ವ್ಯವಹಾರಕ್ಕೆ ಬಳ್ಳುಗಳು ಕನ್ನಡಿ ಹಿಡಿಯುತ್ತವೆ. ರಾಜರು ಹೇಗೆ ಸಮಯ ಸಾಧಕರ ಕೈಗೊಂಬೆಗಳಾಗುವರೆಂಬುದು ಪಿಂಗಳಕನ ವ್ಯವ

ಹಾರದಿಂದ ಅರ್ಥವಾಗುತ್ತದೆ. ಕಪಟನುಡಿಗಳಿಂದ ಆತ ವ್ಯಕ್ತಿಗಳನ್ನು ಗೇಲಿಗೆಬ್ಬಿಸಲು ಎತ್ತಿದ ಕೈ ಎಂದು ತೋರುತ್ತದೆ. 'ಕೋತಿ' ಎಂಬುದಕ್ಕೆ 'ಗೋಲಾಂಗೂಲ' ಎಂದೋ, 'ಎತ್ತು' ಎಂಬುದಕ್ಕೆ 'ಶಾಕ್ವರ ಪರಿವೃಢ' ಎಂದೋ 'ನಾಯಿ' ಎನ್ನಲು 'ಸಾರಮೇಯ', 'ಜಾಯಿಲ' ಎಂದೋ ಹೇಳಿ ನಗುವನ್ನು ಎಬ್ಬಿಸುತ್ತಾನೆ. ಆತನ ಶೈಲಿ ಪಂಪ ರನ್ನಾದಿಗಳ ಶೈಲಿಯನ್ನು ಅನುಕರಿಸಿದೆ. ಈ ಪದ್ಯವನ್ನು ನೋಡಿ

ಅಸಿಮಿಷಚಾಪದಂತೆ ಸಿರಿ, ಶಾರದ ನೀರದ ಕಾಂತಿಯಂತೆ ಯೌ
ವನದೆಸಕಂ, ತೃಣಾಗ್ರಗತ ವಾಃಕಣಿಕಾಗಣದಂತೆ ಸಂದ ಜೀ
ವನಮುದಱಿಂ ಭವಪ್ರಭವಜೀವಿಗೆ ನಿರ್ಮಲ ಧರ್ಮಮಾರ್ಗದೊಳ್
ಮನಮೊಸೆದಾಗಳುಂ ನಡೆಯವೇಳ್ಪುದು ವಿಶ್ವಮೃಗೇಂದ್ರವಲ್ಲಭಾ

ಕಾಮನ ಬಿಲ್ಲಿನಂತೆ ಅಸ್ಥಿರವಾದುದು ಐಶ್ವರ್ಯ; ಶರದೃತುವಿನ ಮೋಡದಂತೆ ಚಂಚಲ ಯೌವನವೆಂಬುದು; ಹುಲ್ಲುಮೇಲಿನ ನೀರ ಹನಿಯಂತೆ ಜೀವನ ಅಶಾಶ್ವತ. ಆದ್ದರಿಂದ ಲೋಕದಲ್ಲಿ ಹುಟ್ಟಿದ ಪ್ರಾಣಿ ನಿರ್ಮಲಧರ್ಮ ಮಾರ್ಗದಲ್ಲಿಯೇ ಸದಾ ನಡೆಯಬೇಕು, ಮೃಗರಾಜ!—ಕಾವ್ಯಧರ್ಮ ಧರ್ಮಗಳೆರಡನ್ನೂ ಒಳಗೊಂಡ ಈ ಪದ್ಯವೊಂದನ್ನೇ ಪ್ರತ್ಯೇಕವಾಗಿ ಕೇಳಿದಾಗ ಪಂಪನೊ, ರನ್ನನೊ ಈ ಪದ್ಯದ ಕರ್ತೃವೆನಿಸೀತು! ಕನ್ನಡ ಸಂಸ್ಕೃತ ಪದಗಳನ್ನು ಬಳಸುವುದರಲ್ಲಿಯಂತೂ ಆತನೊಬ್ಬ ಸವ್ಯಸಾಚಿ. ಆತನ ಪದ್ಯಶೈಲಿ ಶುದ್ಧ ಮಾರ್ಗಶೈಲಿ; ಸಂಸ್ಕೃತಪ್ರಾಬಲ್ಯ ಹೆಚ್ಚು. ಆದರೆ ಅದು ಒಂದು ಉದ್ದಿಷ್ಟಸಾಧನೆಗೆ ಮಾತ್ರ. ಆತನಿಗೆ ಸರಳತೆಯೂ ವಾಚೋವಿಧೇಯವೇ. ಮೂಲ ಗ್ರಂಥವನ್ನು ಕಾಣದೆ ಆತನ ಭಾಷಾಂತರವನ್ನು ಕುರಿತು ಹೇಳುವುದು ಕಠಿಣವಾದರೂ ಆತನ ಬರವಣಿಗೆ ನಮಗೆ ಮೆಚ್ಚಿಗೆಯಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ, ಅದರಲ್ಲಿಯೂ ಕನ್ನಡ ಗದ್ಯದ ಬೆಳವಣಿಗೆಯಲ್ಲಿ ಹಿರಿಯ ಸ್ಥಾನವೊಂದು ಆತನಿಗೆ ಮೀಸಲಾಗಿದೆ. ಕವಿ ತನ್ನ ವಿಚಾರವನ್ನು ಕುರಿತು ಹೇಳಿಕೊಂಡಿರುವುದು ಅತಿಶಯೋಕ್ತಿಯೂಗಿರಬಹುದಾದರೂ ಅಸತ್ಯವಲ್ಲ.

ನಿಶ್ಚಿತಮನರಲ್ಲದರಂ
ದುಶ್ಚರಿತರನೆಯ್ದೆ ಪಡೆದ ದೋಷಕ್ಕಂ ಪ್ರಾ

ಯಶ್ಚಿತ್ತಮೆಂದು ಸಕಲ ವಿ
ಪಶ್ಚಿನ್ನಿಧಿಯೆನಿಪ ದುರ್ಗಸಿಂ ಬಿದಿ ಪಡೆದಂ

ನಿಶ್ಚಿತವಾದ ಮನಸ್ಸಿಲ್ಲದವರನ್ನೂ ದುರ್ಮಾರ್ಗರನ್ನೂ ಸೃಷ್ಟಿಸಿದ ಪಾಪವನ್ನು ಹೋಗಲಾಡಿಸಿಕೊಳ್ಳಲು ಪ್ರಾಯಶ್ಚಿತ್ತರೂಪವಾಗಿ ಬ್ರಹ್ಮನು ದುರ್ಗಸಿಂಹನನ್ನು ಪಡೆದ.

**೪. ಶಾಂತಿನಾಥ**

'ಸಹಜಕವಿ', 'ಚತುರಕವಿ', 'ಸರಸ್ವತೀ ಮುಖಮುಕುರ' 'ಜಿನಮತಾಂಭೋಜಿನೀ ರಾಜಹಂಸ' ಇತ್ಯಾದಿಯಾಗಿ ಹೊಗಳಿಕೊಂಡಿರುವ ಶಾಂತಿನಾಥನು 'ಸುಕುಮಾರ ಚರಿತಂ' ಎಂಬ ಚಂಪೂಕಾವ್ಯವನ್ನು ಬರೆದಿದ್ದಾನೆ. ಕ್ರಿ. ಶ. ೧೦೬೮ರಲ್ಲಿ ಹುಟ್ಟಿದ ಶಿಕಾರಿಪುರ ೧೩೬ನೆಯ ಶಾಸನವನ್ನು ಶಾಂತಿನಾಥನೇ ಬರೆದಿರಬೇಕೆಂಬ ಊಹೆಗೆ ಆಧಾರಗಳಿರುವುದರಿಂದಲೂ, ಅದರಲ್ಲಿ 'ಸುಕರ ರಸಭಾವದಿಂ ವರ್ಣಕದಿಂ ತತ್ವಾರ್ಥನಿಚಯದಿಂ ಸೂಕ್ತಮೆನಲ್ ಸುಕುಮಾರ ಚರಿತಮಂ ಪೇಳ್ದ ಕವೀಂದ್ರಾಗ್ರಣಿ'— ಮನೋಹರವಾದ ರಸಭಾವಗಳಿಂದಲೂ, ತತ್ವಾರ್ಥಗಳಿಂದಲೂ 'ಸೈ' ಎನಿಸಿಕೊಳ್ಳುವಂತಹ ಸುಕುಮಾರ ಚರಿತ್ರೆಯನ್ನು ಹೇಳಿದ ಕವಿಶ್ರೇಷ್ಠ— ಎಂಬ ಹೇಳಿಕೆ ಕಂಡುಬರುವುದರಿಂದಲೂ, 'ಸುಕುಮಾರ ಚರಿತಂ' ೧೦೬೮ಕ್ಕೂ ಮೊದಲೆ ಹುಟ್ಟಿರಬೇಕು. ಈ ಕವಿ ಚಾಳುಕ್ಯ ಚಕ್ರವರ್ತಿಗಳ ಪಸಾಯಿತನಾದ ಲಕ್ಷ್ಮಣರಾಜನ ಮಂತ್ರಿಯಾಗಿ, ಬನವಾಸೆ ೧೨೦೦೦ ಕ್ಕೆ ಅರ್ಥಾಧಿಕಾರಿಯಾಗಿದ್ದ. ಆತನ ತಂದೆ 'ಸತ್ಯರತ್ನಾಕರ'ನಾದ ಗೋವಿಂದರಾಜ; ತಮ್ಮ 'ವಾಗ್ಭೂಷಣ' ರೇವಣ; ಆರಾಧ್ಯದೈವ ಜಿನಪತಿ.

ಶಾಂತಿನಾಥನು ಪಂಪಕವಿಯು ಹೇಳಿಕೊಂಡಂತೆಯೇ 'ಈ ಸುಕುಮಾರ ಚರಿತದೊಳ್ ನೋಳ್ಪೆ ಕಾವ್ಯಧರ್ಮಮುಮುಸಮುಳ ಜಿನಧರ್ಮಮುಮಂ' ಎಂದು ಹೇಳಿಕೊಂಡಿದ್ದಾನೆ. ಆತನ ಕಾವ್ಯದಲ್ಲಿ ಧರ್ಮನಿರೂಪಣೆಗೇನೂ ಕೊರತೆಯಿಲ್ಲ. ಶ್ರೀ ಡಿ. ಎಲ್. ನರಸಿಂಹಾಚಾರ್ಯರು 'ಸುಕುಮಾರ ಚರಿತಂ' ಮುನ್ನುಡಿಯಲ್ಲಿ ಹೇಳಿರುವಂತೆ ಇಡೀ ಕಾವ್ಯದ ನಾಲ್ಕರಲ್ಲೊಂದು ಪಾಲನ್ನು ಮತತತ್ವನಿರೂಪಣೆಯೇ ತುಂಬಿಕೊಂಡಿರುವ ಈ ಕಾವ್ಯ 'ಜಿನಮತಾಚಾರದ ಸಣ್ಣ ಕೈಪಿಡಿಯಾಗಿಬಿಟ್ಟಿದೆ. ಜೈನಧರ್ಮ ಪರಿಭಾಷಾಶಬ್ದಗಳಿಂದ

ಕಿಕ್ಕಿರಿದು ಶಾಸ್ತ್ರವನ್ನು ನೆನಪಿಗೆ ತರುತ್ತ, ಸಾಮಾನ್ಯವಾಚಕರಿಗೆ ದುರವಗಾಹವಾಗಿವೆ.' ಆದರೆ ಆತನ ಹೇಳಿಕೆಯು ಮತ್ತರ್ಧಭಾಗವಾದ ಕಾವ್ಯಧರ್ಮ ಇಷ್ಟೇ ದಟ್ಟವಾಗಿ ವ್ಯವೆತ್ತಿದೆಯೆಂದು ಹೇಳುವಂತಿಲ್ಲ. ಆತನ ಕಥಾನಿರೂಪಣೆ ಮನೋಹರವಾಗಿದೆ; ಶೈಲಿ ಪ್ರೌಢವಾದರೂ ಸರಳವಾಗಿ ಲಲಿತವಾಗಿದೆ; ವರ್ಣನೆಗಳು ಹಿತಮಿತವಾಗಿವೆ. ಪಾತ್ರಗಳು ಸಜೀವವಾಗಿವೆ; ಸನ್ನಿವೇಶರಚನೆ ಸ್ವಾಭಾವಿಕವಾಗಿದೆ. ಈತನ ಕವಿತೆಯಲ್ಲಿ ಕವಿಸಮಯ ಮತ್ತು ಸಂಪ್ರದಾಯಗಳ ಅನುಸರಣೆ ಕಂಡುಬರುತ್ತದೆ. ಆದರೆ ಆತನ ಶೈಲಿಯ ಹರಿತ ನಮ್ಮ ಮನಸ್ಸನ್ನು ಸೂರೆಗೊಳ್ಳುತ್ತದೆ. ವಾಯುಭೂತಿಯು ತನ್ನ ಸೋದರನಾದವನನ್ನು ಕುರಿತು

ನೀಂ ಬೇವಾದೊಡೆ ನಿನ್ನ ಕು
ಟುಂಬಿನಿಯುಂ ಕಹ್ವೆಸೊರೆಯು ಕುಡಿಯೇಂ ಮಿಡಿಯೇ
ನೆಂಬಂತೆ ದರಸಿಯೋದಳ
ದೇಂ ಬಳ್ವಳ ಬಳದ ಬಂಧುತನಮಿನಿದಾಯ್ತೋ

ನೀನು ಬೇವಾದರೆ ನಿನ್ನ ಹೆಂಡತಿಯೂ 'ಕಹಿಸೋರೆಯ ಚಿಗುರೇನು ಕಾಯೇನು' ಎಂಬ ಗಾದೆಯಂತೆ ಕೆಡ-ಕಿಯಾದಳು. ಬಳಬಳ ಬೆಳೆದುಬಂದ ಬಂಧುತ್ವ ಏನು ಹಿತವಾಗಿದೆಯಲ್ಲ!' ಎಂದು ಹೇಳುವ ಮಾತು ಕತ್ತಿಯ ಮೊನೆಯಂತೆ ಹರಿತವಾಗಿದೆ.

ಸೂರ್ಯಮಿತ್ರಭಟ್ಟಾರಕನು ಅಳಿಯನೊಡನೆ ಹೇಳುವ ಈ ಮಾತುಗಳು ತೀರಾಗಿ ಸರಳವಾಗಿರುವಷ್ಟೆ ಪ್ರಭಾವಯುತವಾಗಿಯೂ ಇವೆ—

ಪಗೆಯಾವುದು ಕೆಳೆಯಾವುದು
ಬಗೆವೊಡೆ ಭಾವಿಸುವೊಡೆಂದು ನೋಡುವೊಡೆಂದುಂ
ಪಗೆ ಕರ್ಮಮೆ; ಕೆಳೆ ಧರ್ಮಮೆ
ಜಗದೊಳ್ಮುನಿಪತಿಗೆ ಪರಮ ಜಿನಪತಿ ಮತದಿಂ

ಹಗೆ ಯಾವುದು? ಕೆಳೆಯಾವುದು? ಆಲೋಚಿಸಿ, ಗಾಢವಾಗಿ ಚಿಂತಿಸಿ ನೋಡುವುದಾದರೆ ನಮ್ಮ ಹಗೆ ನಮ್ಮ ಕರ್ಮವೆ; ಗೆಳೆಯನೆಂಬುದು ಧರ್ಮವೇ. ಜಿನನ ಅಭಿಪ್ರಾಯದಂತೆ ಮುನಿಯಾದವನು ಆಲೋಚಿಸಬೇಕಾದುದೇ ಹೀಗೆ.

ಇಂತಹ ಸಂದರ್ಭಗಳಲ್ಲಿ ಶಾಂತಿನಾಥನು ಕಾವ್ಯಧರ್ಮ-ಧರ್ಮಗಳನ್ನು ಸಮನ್ವಯಗೊಳಿಸಿ ಕೃತಕೃತ್ಯನಾಗಿದ್ದಾನೆ.

**೫ ನಾಗಚಂದ್ರ**

ದ್ವಾರಸಮುದ್ರದ ಬಲ್ಲಾಳರಾಜನಿಗೆ ಧರ್ಮಚಂದ್ರನೆಂಬ ಬ್ರಾಹ್ಮಣ ಮಂತ್ರಿಯಿದ್ದ. ಈ ಮಂತ್ರಿಯ ಮಗ ಒಬ್ಬ ಉಪಾಧ್ಯಾಯ. ಆತ ತನ್ನ ವಿದ್ಯಾರ್ಥಿಗಳ ಬುದ್ಧಿಯನ್ನು ಉದ್ದೀಪನಗೊಳಿಸುವುದಕ್ಕಾಗಿ ಜ್ಯೋತಿಷ್ಮತೀ ತೈಲವನ್ನು ಮಾಡಿ ಒಂದು ಕುಡಿಕೆಯಲ್ಲಿ ಹಾಕಿ ಇಟ್ಟಿದ್ದ. ದಡ್ಡರಾದ ಹುಡುಗರಿಗೆ ಅರ್ಧ ತೊಟ್ಟು ಕೊಟ್ಟರೆ ಸಾಕಾಗಿತ್ತು. ಒಂದು ದಿನ ಅರಮನೆಯ ದಾಸಿಯಾದ 'ಕಂತಿ' ಎಂಬುವಳು ಅದರ ಮಹತ್ತ್ವನ್ನು ಅರಿಯದೆ ಕುಡಿಕೆಯನ್ನೆಲ್ಲಾ ಕುಡಿದು ಬರಿದು ಮಾಡಿದಳು. ಇದರಿಂದ ದೇಹದ ಉರಿಹತ್ತಿ ತಾಳಲಾರದೆ ಅವಳು ಬಾವಿಗೆ ಹಾರಿಕೊಂಡಳು. ನೀರು ಕುತ್ತಿಗೆಯತನಕ ಮಾತ್ರ ಇದ್ದುದರಿಂದ ಅವಳ ಪ್ರಾಣಹೋಗಲಿಲ್ಲ. ನೀರಿನಲ್ಲಿ ನಿಂತ ಅವಳ ಬಾಯಿಂದ ಅದ್ಭುತವಾದ ಕಾವ್ಯ ಹರಿದು ಬರಲು ಪ್ರಾರಂಭವಾಯಿತು. ಇವನ್ನು ಕೇಳಿ ಆಸ್ಥಾನ ಕವಿಯಾದ ಪಂಪ ಅಲ್ಲಿಗೆ ಬಂದು ಒಂದು ಸಾವಿರ ಸಮಸ್ಯೆಗಳನ್ನು ಅವಳಿಗೆ ಹೇಳಿ, ಅವಳಿಂದ ಸಮಸ್ಯಾಪೂರಣವನ್ನು ಪಡೆದನು. 'ದನಮಂ ಕಡಿಕಡಿದು ಬಸದಿಗೆಳೆಯುತ್ತಿರ್ದರ್'—ದನಗಳನ್ನು ಕಡಿದು ಜೈನರ ಬಸದಿಗೆ ಎಳೆಯುತ್ತಿದ್ದರು—ಎಂದು ಪಂಪ ಹೇಳಿದರೆ ಆಕೆ 'ವನದೊಳಗೆ ಪುಟ್ಟಿ ಬೆಳೆಯುತೆ, ತನಿಗಂಪಂ ಪತ್ತುದೆಸೆಗೆ ಬೀರುತ್ತಿರ್ಪಾ ಘನತರ ಸುರುಚಿರ ಸಚ್ಚಂ| ದನವಂ ಕಡಿಕಡಿದು ಬಸದಿಗೆಳೆಯುತ್ತಿರ್ಪರ್' —ವನದಲ್ಲಿ ಹುಟ್ಟಿಬೆಳೆದು ಸುವಾಸನೆಯನ್ನು ಹತ್ತು ದಿಕ್ಕುಗಳಿಗೂ ಬೀರುತ್ತಿರುವ ಚಂದನವನ್ನು ಬಸದಿಗೆ ಎಳೆಯುತ್ತಿದ್ದರು ಎಂದು ಸಮಸ್ಯಾಪೂರಣ ಮಾಡಿದಳು. ಇವರ ಈ ಸ್ಪರ್ಧೆಯನ್ನೊಳಗೊಂಡ ವಾಗ್ವಾದ ಪದ್ಯಗಳಿಗೆ 'ಕಂತಿ-ಹಂಪನ ಸಮಸ್ಯೆ' ಎಂಬ ಹೆಸರಿದೆ. ಈ ಕವಿಯಿತ್ರಿ ಬಲ್ಲಾಳರಾಜನ ಆಸ್ಥಾನದಲ್ಲಿ ಸುಪ್ರಸಿದ್ಧಳಾದಳಂತೆ! ಇದೊಂದು ದಂತಕಥೆ. ಈ ಕಥೆ ನಿಜವಾದರೆ ಅಭಿನವ ಪಂಪನೆಂದು ಪ್ರಸಿದ್ಧನಾಗಿರುವ ನಾಗಚಂದ್ರನು ಬಲ್ಲಾಳರಾಜನ ಕಾಲದಲ್ಲಿ (1100-1106) ಇದ್ದನೆಂದಾಗುತ್ತದೆ. ಅಲ್ಲದೆ ಕಂತಿಯೆಂಬ ಮೊಟ್ಟಮೊದಲ ಕನ್ನಡ ಕವಯಿತ್ರಿ ಆತನ

ಕಾಲದಲ್ಲಿ ಇದ್ದಳೆಂದಾಗುತ್ತದೆ. ಆದರೆ ಈ ಎರಡನ್ನೂ ಸಂಸ್ಥಾಪಿಸುವಷ್ಟು ಸಾಧನ ಸಾಮಗ್ರಿಗಳು ಸಾಲದುದರಿಂದ ಈ ಕಥೆ ಬರಿಯ ಕಥೆಯೇ ಹೊರತು ಸತ್ಯವಲ್ಲವೆಂದು ಪಂಡಿತರ ಅಭಿಪ್ರಾಯ. ಶ್ರೀಮಾನ್ ಗೋವಿಂದ ಪೈರವರು ಚಾಲುಕ್ಯ ಚಕ್ರವರ್ತಿಯಾದ ನಾಲ್ಮಡಿ ಸೋಮೇಶ್ವರ (ಕ್ರಿ.ಶ. ೧೧೦೦-೧೧೩೮)ನನ್ನು ನಾಗಚಂದ್ರ ಕವಿ ತನ್ನ 'ಮಲ್ಲಿನಾಥ ಪುರಾಣ'ದಲ್ಲಿ ಶ್ಲೇಷೆಯಿಂದ ಹೊಗಳಿರುವುದರಿಂದ ಆ ಕಾವ್ಯ ಕ್ರಿ.ಶ. ೧೧೦೦ಕ್ಕೂ ಹಿಂದಿನದೆಂಬ ಸಿದ್ಧಾಂತಕ್ಕೆ ಬಂದಿದ್ದಾರೆ. ಆದ್ದರಿಂದ ಈ ಕವಿಯು ಹನ್ನೊಂದನೆ ಶತಮಾನದ ಕಡೆಯ ಭಾಗ ಮತ್ತು ಹನ್ನೆರಡನೆಯ ಶತಮಾನದ ಆದಿ ಭಾಗದಲ್ಲಿ ಇದ್ದವನೆಂದು ಹೇಳಬಹುದು. ಈತನು ಬಿಜಾಪುರದವನಂತೆ!

ನಾಗಚಂದ್ರನ ಕಾವ್ಯಗಳು ಎರಡು–'ಮಲ್ಲಿನಾಥ ಪುರಾಣ,' 'ರಾಮಚಂದ್ರ ಚರಿತ ಪುರಾಣ'. ಎರಡೂ ಜೈನಾಗಮವನ್ನು ಒಳಗೊಂಡ ಕಾವ್ಯಗಳೇ. ಆದರೂ ಆತನ ಧರ್ಮಾಭಿಮಾನ ಕಾವ್ಯಧರ್ಮಕ್ಕೆ ಲೋಪವನ್ನು ತಂದಿಲ್ಲ. ನಾಗಚಂದ್ರನು ನಿಸ್ಸಂಶಯವಾಗಿಯೂ ಬಹು ದೊಡ್ಡ ಕವಿ. 'ಅಭಿನವ ಪಂಪ'ನೆಂಬ ಆತನ ಬಿರುದು ವ್ಯರ್ಥವಾದುದೇನೂ ಅಲ್ಲ. ಆತನು 'ಮಲ್ಲಿನಾಥ ಪುರಾಣ' ಎಂಬ ೧೯ನೆಯ ತೀರ್ಥಂಕರನ ಚರಿತವನ್ನೂ 'ರಾಮಚಂದ್ರ ಚರಿತ ಪುರಾಣ' ಎಂಬ ಜೈನರಾಮಾಯಣವನ್ನೂ ಬರೆದಿದ್ದಾನೆ. ಪಂಪನ 'ವಿಕ್ರಮಾರ್ಜುನ ವಿಜಯ'ವನ್ನು ಜನಪ್ರಿಯವಾಗಿ 'ಪಂಪ ಭಾರತ' ಎಂದು ಕರೆಯುವಂತೆ ಈ ಅಭಿನವ ಪಂಪನ ರಾಮಾಯಣ ಕಾವ್ಯವನ್ನು 'ಪಂಪ ರಾಮಾಯಣ'ವೆಂಬ ಹೆಸರಿನಿಂದ ಕರೆಯುವುದು ರೂಢಿಯಾಗಿದೆ.

ನಾಗಚಂದ್ರನ ಕಾವ್ಯಗಳಲ್ಲಿ 'ಮಲ್ಲಿನಾಥ ಪುರಾಣ'ವು ಮೊದಲ ಕೃತಿಯೆಂದು ಕಾಣುತ್ತದೆ. ಆತನ ರಾಮಾಯಣದಲ್ಲಿ ಕಾಣಬರುವ ಕಲಾಪರಿಣತಿ ಇದರಲ್ಲಿ ಕಂಡುಬರುವುದಿಲ್ಲ. ಇದರಲ್ಲಿ ಕವಿಯು ತೀರ್ಥಂಕರನ ಪೂರ್ವ ಜನ್ಮದ ಒಂದು ಕಥೆಯನ್ನು ಮಾತ್ರ ಹೇಳಿ ತೀರ್ಥಂಕರ ಜನ್ಮದ ಕಥೆಯನ್ನು ವಿಸ್ತರಿಸಿದ್ದಾನೆ. ಇಲ್ಲಿ ಇರುವ ಕಥೆ ಬಹು ಸ್ವಲ್ಪ–ಅದನ್ನು ಹದಿನಾಲ್ಕು ಅಧ್ಯಾಯಗಳಷ್ಟು ವಿಸ್ತಾರವಾಗಿ ಬರೆದಿರುವುದರಿಂದ ಕಥೆಗಿಂತಲೂ ವರ್ಣನೆಯೇ ಪ್ರಧಾನವಾಗಿರುವುದು ಸಹಜವಾಗಿಯೇ ಇದೆ. ಅಲ್ಲದೆ ಈ ಧಾರ್ಮಿಕ ಕಥೆಯಲ್ಲಿ ಕವಿಗೆ ಸಾಕಷ್ಟು ಸ್ವಾತಂತ್ರ್ಯವೂ ಇಲ್ಲ.

ಆದ್ದರಿಂದ ಈ ಕಾವ್ಯದಲ್ಲಿ ‘ಪಂಪರಾಮಾಯಣ’ದ ಪಾತ್ರ ಪರಿಪೋಷಣಾ ಪರಿಣತಿ ಕಾಣಬರುವುದಿಲ್ಲ. ಆದರೆ ಆತನ ವರ್ಣನೆಗಳು ಸಹಜ ಸುಂದರವಾಗಿ ಮನೋಹರವಾಗಿವೆ. ವೈಶ್ರವಣ ಮಹಾರಾಜನು ಸಿಡಿಲಿನಿಂದ ನೆಲಕ್ಕುರುಳಿದ ಆಲದಮರವೊಂದನ್ನು ಕಂಡು ಅಚ್ಚರಿಗೊಂಡುದೆ ವೈರಾಗ್ಯರಸಕ್ಕೆ ಒಂದು ಸೇತುವೆಯಾಯಿತಂತೆ! ಆ ಬಿದ್ದ ಮರವನ್ನು ವರ್ಣಿಸುತ್ತಾ ಕವಿ

ಸಿಡಿಲೆಂಬ ಜವನ ಕೊಡಲಿಯ
ಕಡುವೊಯ್ಲಿಂ ನೆಗೆದ ಬೇರ್ಗಳೊಡನೆ ನೆಲಂ ಬಾ
ಯ್ವಿಡೆ ಬೆಟ್ಟು ಕೆಡೆವ ತೆಱದಿಂ
ಕೆಡೆದಾಲಮನಿದಿರೊಳವನಿಪಾಲಂ ಕಂಡಂ

ಸಿಡಿಲೆಂಬುದೆ ಯಮನ ಕೊಡಲಿ. ಆ ಕೊಡಲಿಯ ಹೊಡೆತದಿಂದ ಮೇಲೆದ್ದ ಬೇರುಗಳೊಡನೆ ನೆಲವು ಬಾಯಿಬಿಡಲು (ಅಳಲು) ಬೆಟ್ಟವೆ ಮಗುಚಿ ಬಿದ್ದಂತೆ ನೆಲಕ್ಕೆ ಬಿದ್ದಿರುವ ಆಲದಮರವನ್ನು ಮಹಾರಾಜ ಕಂಡ-ಎಂದು ಹೇಳುತ್ತಾನೆ. ಇದೆ ಆತನ ವೈರಾಗ್ಯಕ್ಕೆ ಕಾರಣವಾಯಿತಷ್ಟೆ. ಮರುದಿನ ಬೆಳಕು ಹರಿದುದನ್ನು ಕವಿ ಬಣ್ಣಿಸುತ್ತಾ

ಮೂಡಣ ಸಂಜೆ ಕೆಂದಳಿರ ಕಾವಣದಂತಿರೆ. ಚಂದ್ರಮಂಡಳಂ
ಬಾಡಿದ ಮಾಧವೀಮಧುರ ಮಂಜರಿಯಂತಿರೆ, ತಾರಕಾಳಿ ನೀ
ರೋಡಿ ಕಳಲ್ದು ಬೀಳ್ವ ಕಳಿವೂಗೆಣೆಯಾಗಿರೆ ತಣ್ಣನಪ್ಪೆಲರ್
ತೀಡೆ ತಪೋವನಂಬೊಲತಿ ಪಾವನಮಾಯ್ತು ನಭಂ ಪ್ರಭಾತದೊಳ್

ಬೆಳಗು ಮುಂಜಾನೆಯ ಸಂಜೆಗೆಂಪು ಕೆಂಪುಚಿಗುರಿನ ಪರ್ಣಶಾಲೆಯಂತಿತ್ತು; ಚಂದ್ರಮಂಡಲವು ಬಾಡಿದ ಮಾಧವೀ ಪುಷ್ಪಗಳ ಗೊಂಚಲಿನಂತಿತ್ತು; ನಕ್ಷತ್ರಗಳು ಬತ್ತಿಹೋಗಿ ತೊಟ್ಟಿನಿಂದ ಉದಿರುವ ಹಣ್ಣುಹೂಗಳಂತಿದ್ದವು. ತಣ್ಣನೆಯ ಗಾಳಿ ಬೀಸುತ್ತಿರಲು ಆಕಾಶವು ತಪೋವನದಂತೆ ಬಹು ಪಾವನವಾಯಿತು (ಗಾಳಿಯಿಂದ ತುಂಬಿತ್ತು; ಶುಭ್ರವಾಯಿತು.)—ಎಂದು ಹೇಳುತ್ತಾನೆ.

ಕವಿಯು ಭಕ್ತಿಯಿಂದ ಮಾಡುವ ಜಿನಸ್ತುತಿಯಲ್ಲಿ ಧರ್ಮಾನುರಾಗದ ಹೊಳೆ ಹರಿಯುತ್ತಿದೆ.

ನಿನಗೆ ರಸಮೊಂದೆ ಶಾಂತಮೆ
ಜಿನೇಂದ್ರ, ಮನಮಾ ರಸಾಂಬುನಿಧಿಯೊಳಗವಗಾ
ಹನಮಿರ್ದು ಮಿಕ್ಕ ರಸಮಂ
ಕನಸಿನೊಳಂ ನೆನೆಯದಂತು ಮಾಡೆನಗರ್ಹಾ

ಹೇ ಜಿನ, ನಿನಗೆ ಪ್ರೀತಿಕರವಾದ ರಸವೆಂದರೆ ಶಾಂತಿರಸವೊಂದೆ. ಆದ್ದರಿಂದ ನನ್ನ ಮನಸ್ಸು ಆ ಶಾಂತಿರಸದಲ್ಲಿಯೇ ಮುಳುಗಿದ್ದು ಮಿಕ್ಕ ರಸಗಳನ್ನು ಕನಸಿನಲ್ಲಿಯೂ ನೆನಸದಂತೆ ಅನುಗ್ರಹಿಸು.

ಮಣಿಭೂಷಣ ಭರದಿಂ ತನು
ಕಿಣಮಪ್ಪುದದೇಕೆ ನಿನ್ನ ನಿರ್ಮಲಗುಣ ಭೂ
ಷಣಮಂ ದಯೆಗೆಯ್ ಪಡೆವೆಂ
ಪ್ರಣಯಮನಪವರ್ಗ ಲಕ್ಷ್ಮಿಗದರಿಂದರ್ಹಾ

ಭಾರವಾದ ರತ್ನಾಭರಣಗಳನ್ನು ತೊಟ್ಟು ದೇಹ ಜಡ್ಡುಗಟ್ಟುವುದು ಬೇಡ; ನಿನ್ನ ನಿರ್ಮಲವಾದ ಸುಗುಣಗಳೆಂಬ ಆಭರಣವನ್ನು ದಯಪಾಲಿಸು; ಅದನ್ನು ತೊಟ್ಟು ಮೋಕ್ಷಲಕ್ಷ್ಮಿಯ ಪ್ರಣಯವನ್ನು ಪಡೆಯುತ್ತೇನೆ.

ಭಕ್ತಿಭಾವಭರಿತವಾದ ಈ ಬಗೆಯ ಪದ್ಯಗಳು, ದಿವಂಗತ ಶ್ರೀಯವರು ಹೇಳಿದಂತೆ, ಅಭಿನವ ಪಂಪನ 'ಆತ್ಮಸಾರ.'

ನಾಗಚಂದ್ರನ ಕವಿತಾಶಕ್ತಿ ಸಂಪೂರ್ಣ ಅರಳಿರುವುದು ಆತನ 'ರಾಮಚಂದ್ರ ಚರಿತ'ದಲ್ಲಿ. ಇದರಲ್ಲಿ ಜೈನ ಸಂಪ್ರದಾಯಾನುಸಾರಿಯಾದ ರಾಮಾಯಣದ ಕಥೆ ಬಂದಿದೆ. ವಿಮಲಸೂರಿ (ಕ್ರಿ.ಶ. ೧ನೆಯ ಶತಮಾನ)ಯ 'ಪಉಮಚರಿಯ' (ಪ್ರಾಕೃತ) ವೂ ರವಿಷೇಣ (೭ನೆಯ ಶತಮಾನ) ನ 'ಪದ್ಮಪುರಾಣ' (ಸಂಸ್ಕೃತ) ವೂ ಇದಕ್ಕೆ ಆಕರಗಳೆಂದು ಪಂಡಿತರ ಅಭಿಪ್ರಾಯ. ಇವನು 'ವಿಮಲ ಸೂರಿಯ ಜಾಡನ್ನೇ ಚಾಚೂ ತಪ್ಪದೆ ಅನುಸರಿಸಿದ್ದಾನೆ, ಉತ್ಕೃಷ್ಟ ಕಲೆಯಿಂದ ತುಂಬಿದ ಮಾರ್ಪಾಟುಗಳಾವುವೂ ಅವನ ಕಾವ್ಯದಲ್ಲಿ ಕಂಡು ಬರುವುದಿಲ್ಲ' ಎಂದು ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ತಮ್ಮ 'ಪಂಪರಾಮಾಯಣ ಸಂಗ್ರಹ' ದ ಮುನ್ನುಡಿಯಲ್ಲಿ ಹೇಳಿರುವುದನ್ನು ನೋಡಿದರೆ ನಾಗವರ್ಮನಂತೆ ನಾಗಚಂದ್ರನೂ ಭಾಷಾಂತರಕಾರನೆಂದು ಪರಿಗಣಿತನಾಗಬೇಕಾಗುತ್ತದೆ. ಇಬ್ಬರೂ ಬಹು

ದೊಡ್ಡ ಭಾಷಾಂತರಕಾರ್ರರು, ಬಹು ಶ್ರೇಷ್ಠ ರೀತಿಯ ಸಂಗ್ರಹಕಾರರು. ಮಾತ್ರವಲ್ಲ; ಇಬ್ಬರ ಕಾವ್ಯಗಳಲ್ಲಿಯೂ ಅವರ ವ್ಯಕ್ತಿತ್ವ ಒಡಮೂಡಿದೆ. ಕವಿತಾ ಶಕ್ತಿಯಲ್ಲಿ ಪದಲಾಲಿತ್ಯದಲ್ಲಿ ನಾಗಚಂದ್ರನು ನಾಗವರ್ಮನಿಗಿಂತಲೂ ಮಿಗಿಲಾದವನೆಂದು ಹೇಳಬಹುದು.

ಜೈನರಾಮಾಯಣವು ವಾಲ್ಮೀಕಿರಾಮಾಯಣದಿಂದ ಭಿನ್ನವಾದುದು. ಇಲ್ಲಿ ಯಜ್ಞಯಾಗಾದಿಗಳ ಪ್ರಸಕ್ತಿಯಾಗಲಿ ಋಷಿಗಳು ಬ್ರಾಹ್ಮಣರು ಮೊದಲಾದವರ ವೃತ್ತಾಂತವಾಗಲಿ ಕಂಡುಬರುವುದಿಲ್ಲ. ಇಲ್ಲಿನ ರಾಮ ವಿಷ್ಣುವಿನ ಅವತಾರವೂ ಅಲ್ಲ, ಆತ ರಾವಣನನ್ನು ಕೊಲ್ಲುವವನೂ ಅಲ್ಲ; ಆತನು ಜೈನರ ಶಲಾಕಾಪುರುಷರಲ್ಲಿ ಒಬ್ಬನಾದ ಬಲದೇವ. ಆತನ ತಮ್ಮನಾದ ಲಕ್ಷ್ಮಣನು ವಾಸುದೇವ. ಇಲ್ಲಿನ ರಾವಣನು ಶಾಪಗ್ರಸ್ತನಾದ ವೈಕುಂಠದ ದ್ವಾರಪಾಲಕನಲ್ಲ; ಪ್ರತಿವಾಸುದೇವ. ಈತ ಸಾಯುವುದು ಲಕ್ಷ್ಮಣನಿಂದ. ಸೀತೆ ಅಯೋನಿಜೆಯಲ್ಲ; ಜನಕನ ಔರಸ ಪುತ್ರಿ, ಪ್ರಭಾಮಂಡಲನ ತಂಗಿ. ಸುಗ್ರೀವ ಹನುಮಂತಾದಿಗಳು ಕಪಿಗಳಲ್ಲ; ಕಪಿಧ್ವಜರು. ಇವರು ಸಮುದ್ರಕ್ಕೆ ಸೇತುವೆ ಕಟ್ಟುವುದಿಲ್ಲ; ಆಕಾಶಗಾಮಿನೀ ವಿದ್ಯೆಯ ಪ್ರಭಾವದಿಂದ ಸಮುದ್ರವನ್ನು ಹಾರಿಹೋಗುತ್ತಾರೆ. ವಾನರಧ್ವಜರೂ ರಾಕ್ಷಸರೂ ಬಂಧುಗಳು; ಹನುಮಂತನು ರಾವಣನ ತಂಗಿಯ ಅಳಿಯ. ರಾವಣನು ರಾಕ್ಷಸನಲ್ಲ! ಖೇಚರರಾಜ; ಅವನಿಗೆ ಹತ್ತು ತಲೆಗಳಿಲ್ಲ, ಕನ್ನಡಿಯಲ್ಲಿ ಹತ್ತು ತಲೆಗಳು ಪ್ರತಿಬಿಂಬಿಸಿದುದರಿಂದ ಅವನು ದಶಮುಖ. ಇಲ್ಲಿ ಮಂಥರೆಯ ಪ್ರಸಕ್ತಿಯಿಲ್ಲ. ವಾಲಿಯ ವಧೆಯಿಲ್ಲ; ಅವನು ವೈರಾಗ್ಯದಿಂದ ಸನ್ಯಾಸಿಯಾಗುತ್ತಾನೆ. ಇಲ್ಲಿನ ಹನುಮಂತ ಸಂಸಾರಿ; ಲಕ್ಷ್ಮಣನೂ ಹಲವು ಹೆಣ್ಣುಗಳನ್ನು ಮದುವೆಯಾಗುತ್ತಾನೆ.

ಹೀಗೆ ಪಂಪರಾಮಾಯಣವು ಮೂಲ ರಾಮಾಯಣದಿಂದ ಹಲವು ವ್ಯತ್ಯಾಸಗಳನ್ನು ಮಾಡಿಕೊಂಡಿದೆಯಾದರೂ ಅವೆಲ್ಲಕ್ಕೂ ತಲೆವಣಿಯಂತಿರುವ ವ್ಯತ್ಯಾಸ ರಾವಣನ ಪಾತ್ರ ಸೃಷ್ಟಿ. ಜೈನನಾದ ಕವಿ ರಾವಣನಲ್ಲಿ ಅಪಾರವಾದ ಅನುಕಂಪವನ್ನು ತೋರಿ ಅವನನ್ನೂ ಜೈನನನ್ನಾಗಿ ಮಾಡಿದ್ದಾನೆ. ಮಹಾನುಭಾವನಾದ ಆತ 'ಪರಾಂಗನಾವಿರತಿವ್ರತ'ವನ್ನು ಕೈಕೊಂಡವನು. ಒಮ್ಮೆ ನಳಕೂಬರನ ರಾಜಧಾನಿಯಾದ ದುರ್ಲಂಘ್ಯಪುರಕ್ಕೆ

ಆತನು ಮುತ್ತಿಗೆ ಹಾಕಿದನು. ನಳಕೂಬರನ ಹೆಂಡತಿ ರಾವಣನಲ್ಲಿ ಮೋಹಗೊಂಡಿದ್ದವಳು; ಆದ್ದರಿಂದ ದುರ್ಲಂಘ್ಯವಾದ ಆ ಪುರವನ್ನು ಗೆಲ್ಲುವ ಉಪಾಯವನ್ನು ದೂತಿಯ ಕೈಲಿ ಹೇಳಿಕಳುಹಿಸಿ, ತನ್ನನ್ನು ಸ್ವೀಕರಿಸುವಂತೆ ಬೇಡಿಕೊಳ್ಳುತ್ತಾಳೆ. ವಿಜಯಿಯಾದ ರಾವಣನು ಆ ದಿವ್ಯಸುಂದರಿಯ ಬೇಡಿಕೆಯನ್ನು ತಿರಸ್ಕರಿಸಿ, ತನ್ನ ಗಂಡನೊಡನೆ ಸುಖವಾಗಿರುವಂತೆ ಉಪದೇಶ ಮಾಡುತ್ತಾನೆ. ಭೂತ ಭವಿಷ್ಯದ್ವರ್ತಮಾನಗಳನ್ನು ತಿಳಿಸಬಲ್ಲ ಅವಲೋಕಿನೀ ವಿದ್ಯೆ ಆತನ ಕಿಂಕರನಾಗಿದೆ. ಆದರೇನು? ಬೆಂಕಿಯ ಕಿಡಿ ಮಸಿಯಾಗುವಂತೆ ಆತನ ಮನಸ್ಸು ಶ್ರೀರಾಮಪತ್ನಿಯಾದ ಸೀತೆಯಲ್ಲಿ ಚಂಚಲಗೊಳ್ಳುತ್ತದೆ. ಬರಸಿಡಿಲ ಬಳಿಯಲ್ಲಿರುವ ಕುಡಿಮಿಂಚಿನಂತೆ ಶ್ರೀರಾಮನ ಬಳಿಯಲ್ಲಿದ್ದ ಸೀತೆಯನ್ನು ಕಾಣುತ್ತಲೆ

ಬಲೆ ದೃಷ್ಟಿಗೆ ವಜ್ರದ ಸಂ
ಕಲೆ ಹೃದಯಕ್ಕೆನಿಪ ರೂಪವತಿ ಜಾನಕಿ ಕ
ಣ್ಬೊಲದೊಳಿರೆ ಪದ್ಮಪತ್ರದ
ಜಲಬಿಂದುವಿನಂತೆ ಚಲಿತಮಾದುದು ಚಿತ್ತಂ

ಸುಂದರಿಯಾದ ಸೀತೆ ಅವನ ದೃಷ್ಟಿಗೆ ಒಡ್ಡಿದ ಬಲೆಯಂತೆ, ಹೃದಯವನ್ನು ಕಟ್ಟಿಹಾಕುವ ವಜ್ರದ ಸಂಕೋಲೆಯಂತೆ ಆದಳು. ಅವನ ಮನಸ್ಸು ತಾವರೆ ಎಲೆಯಮೇಲಿನ ನೀರಹನಿಯಂತೆ ಚಂಚಲವಾಗಿ ಹೋಯಿತು. ಇದನ್ನು ಕಂಡ ಅವಲೋಕಿನೀ ವಿದ್ಯೆ ಆತನನ್ನು ಕುರಿತು

ಅನ್ನೆಯದಿಂ ನಡೆವವರಂ
ನೀನ್ ನಿಯಮಿಸುವೈ ದಶಾಸ್ಯ ಪೇಱನಾವನ್ ನಿ
ನ್ನನ್ನಿಯಮಿಸುವಂ ಮುನ್ನೀರ್
ಬೆನ್ನೀರೆನೆ ಬೆರಸಲಣ್ಣ ತಣ್ಣೀರೊಳವೆ?

ಅಯ್ಯಾ ದಶಾನನ ಲೋಕದಲ್ಲಿ ಅನ್ಯಾಯದಿಂದ ನಡೆವವರನ್ನು ಶಿಕ್ಷಿಸುವವನು ನೀನು; ನಿನ್ನನ್ನು ಶಿಕ್ಷಿಸುವವರಾರಿದ್ದಾರೆ? ಅಣ್ಣ, ಸಮುದ್ರದ ನೀರು ಬಿಸಿಯಾಗಿ ಹೋದರೆ ಅದಕ್ಕೆ ಬೆರೆಸಲು ತಣ್ಣೀರನ್ನು ಎಲ್ಲಿಂದ ತರಬೇಕು?–ಎಂದು ಹೇಳಿತು. ರಾವಣನ ಮನಸ್ಸು ಅವನ ಹತೋಟಿಗೆ ಬರಲಿಲ್ಲ. ವಿದ್ಯೆಯನ್ನು ಗದರಿಸಿ ಬಾಯಿ ಮುಚ್ಚಿಸಿದನು.

ಸೀತೆಯ ಮೇಲಿನ ಮೋಹದೊಡನೆ ರಾವಣನ ಅಧಃಪತನ ಪ್ರಾರಂಭವಾಗುತ್ತದೆ. ಪೂರ್ವಾರ್ಜಿತ ಕರ್ಮದಿಂದ ತಪ್ಪಿಸಿಕೊಳ್ಳುವುದು ಯಾರಿಗೆ ಸಾಧ್ಯ? ರಾವಣನು ದುರ್ವಿಧಿಯ ಕೈಗೊಂಬೆಯಾದನು. ಕಾಳೋರಗನನ್ನು ಕೈಲಿ ಹಿಡಿಯುವ ಬಾಲಕನಂತೆ ಅವಿವೇಕದಿಂದ ಸೀತೆಯನ್ನು ಅಪಹರಿಸಿದನು. ಆಕೆಯನ್ನು ಸೆರೆಯಲ್ಲಿಟ್ಟು ತನ್ನ ಸರ್ವಸ್ವವನ್ನೂ ಆಕೆಗೆ ಅರ್ಪಿಸುವುದಾಗಿ ಹೇಳಿ ತನ್ನನ್ನು ಸ್ವೀಕರಿಸುವಂತೆ ಬೇಡಿಕೊಂಡನು. ಆದರೆ ಆಕೆಯ ನಿಶ್ಚಯ ಕದಲಲಿಲ್ಲ. ರಾಮ ಲಕ್ಷ್ಮಣರೊಡನೆ ಯುದ್ಧ ಸನ್ನಿಹಿತವಾಯಿತು, ರಾವಣನಿಗೆ. ಈ ವಿಷಮ ಸನ್ನಿವೇಶದಲ್ಲಿ ವಿಭೀಷಣ ಆತನನ್ನು ತ್ಯಜಿಸಿಹೋಗುತ್ತಾನೆ. ಆದರೂ ರಾವಣ ಎದೆಗುಂದಲಿಲ್ಲ; ಮೂರು ಲೋಕಗಳನ್ನೂ ಗೆಲ್ಲಬಲ್ಲ 'ಬಹುರೂಪಿಣೀ ವಿದ್ಯೆ' ಯನ್ನು ಸಾಧಿಸಿದನು. ಅನಂತರ ಸೀತೆಯೊಡನೆ 'ಇನ್ನು ನನ್ನನ್ನು ಇದಿರಿಸಬಲ್ಲ ವೀರರಿಲ್ಲ; ರಾಮನ ಆಳಿಯಾಸೆಯನ್ನು ಬಿಟ್ಟು ನನ್ನನ್ನು ವರಿಸು' ಎಂದು ಹೇಳುವನು. ಇದನ್ನು ಕೇಳಿದ ಸೀತೆ ಭಯದಿಂದ ನಡುಗುತ್ತಾ ತನ್ನ ಗಂಡನ ಜೀವದಾನ ಬೇಡುತ್ತಾಳೆ. ಭಯ ಸಂಕಟಗಳಿಂದ ಮೂರ್ಛೆಹೋದ ಆ ಪತಿವ್ರತೆಯನ್ನು ಕಂಡು ರಾವಣನ ಮನಸ್ಸು ತಿಳಿಯಾಗುತ್ತದೆ.

ಕದಡಿದ ಸಲಿಲಂ ತಿಳಿವಂ
ದದೆ ತನ್ನಿಂ ತಾನೆ ತಿಳಿದ ದಶವದನಂಗಾ
ದುದು ವೈರಾಗ್ಯಂ ಸೀತೆಯೊ
ಳುದಾತ್ತನೊಳ್ ಪುಟ್ಟದಲ್ತೆ ನೀಲೀರಾಗಂ

ಬಗ್ಗಡವಾದ ನೀರು ತನಗೆ ತಾನೆ ತಿಳಿಯಾಗುವಂತೆ ರಾವಣನಿಗೆ ಸೀತೆಯಲ್ಲಿ ವೈರಾಗ್ಯ ಹುಟ್ಟಿತು. ಉದಾತ್ತನಾದ ವ್ಯಕ್ತಿಯಲ್ಲಿ ಕೆಟ್ಟಮೋಹ ಹುಟ್ಟುವುದಿಲ್ಲವಲ್ಲವೆ?

ರಾವಣನಿಗೆ ಕೃತಕಾರ್ಯಕ್ಕಾಗಿ ಪಶ್ಚಾತ್ತಾಪ ಹುಟ್ಟಿತು. ಆತನ ಮನಸ್ಸಿನಲ್ಲಿ

ರಾಮನಿನಗಲ್ಚಿ ತಂದಾ
ನೀ ಮಾಸಿನಿಗಿನಿತು ದುಃಖಮುಂ ಪುಟ್ಟಿಸಿದೆಂ
ಕಾಮವ್ಯಾಮೋಹದಿ ನಾ
ಶಾಮುಖಮಂ ಪುದಿಯೆ ದುರ್ಯಶಃ ಪಟಹರವಂ

ರಾಮನಿಂದ ಈ ಹೆಣ್ಣನ್ನು ಅಗಲಿಸಿತೆಂದು, ನನ್ನ ಕಾಮವ್ಯಾಮೋಹದಿಂದ ಎಷ್ಟು ಸಂಕಟವನ್ನು ಉಂಟುಮಾಡಿದೆ? ನನ್ನ ಅಪಕೀರ್ತಿಯ ದುಂದುಭಿಧ್ವನಿ ದಿಕ್ಕುಗಳನ್ನೆಲ್ಲಾ ತುಂಬಿಕೊಂಡಿತು—ಎಂದುಕೊಂಡನು. ಒಡನೆಯೆ ಸೀತೆಯನ್ನು ರಾಮನಿಗೆ ಒಪ್ಪಿಸಬೇಕೆಂಬ ಸದ್ಬುದ್ಧಿ ಆತನಲ್ಲಿ ಉದಿಸಿತು. ಆದರೆ ಆತನ ಅಭಿಮಾನ ಅದಕ್ಕೆ ಅವಕಾಶಕೊಡಲಿಲ್ಲ. ತನ್ನ ಬಾಹುಬಲವನ್ನು ಎರಡು ಸೈನ್ಯಗಳೂ ಹೊಗಳುವಂತೆ ಪ್ರದರ್ಶನಮಾಡಿ, ರಾಮ ಲಕ್ಷ್ಮಣರನ್ನು ಸೆರೆಹಿಡಿದು ತಂದು, ಸೀತೆಯನ್ನು ಅವರಿಗೆ ಒಪ್ಪಿಸುವುದಾಗಿ ನಿಶ್ಚಯಿಸಿಕೊಂಡನು. ಆದರೆ ಆ ಪ್ರಯತ್ನದಲ್ಲಿ ವಿಫಲನಾಗಿ ತನ್ನ ಪ್ರಾಣಕ್ಕೆ ಎರವಾಗುತ್ತಾನೆ. ಹೀಗೆ ದುರಂತನಾಯಕನಾಗಿ ಕಾವ್ಯಕ್ಕೆ ಕರುಣಾರಸವನ್ನು ನೀಡಿರುವ ರಾವಣನ ಪಾತ್ರದಲ್ಲಿ ಕವಿಗೆ ಇರುವ ಸಹಾನುಭೂತಿ, ಅನುಕಂಪ, ಆತ್ಮೀಯತೆ ಕಾವ್ಯದಲ್ಲಿ ಅಲ್ಲಲ್ಲಿ ಮಿಂಚಿನಂತೆ ಹೊಳೆಯುತ್ತದೆ.

ನಾಗಚಂದ್ರನನ್ನು 'ಅರ್ಥಾಂತರನ್ಯಾಸಾಲಂಕಾರ ಪ್ರಿಯ' ನೆಂದು ಕರೆಯುತ್ತಾರೆ. ಆತನ ಈ ಅರ್ಥಾಂತರನ್ಯಾಸದ ಒಲವು ಕಾವ್ಯಶೈಲಿಗೆ ಸತ್ವವನ್ನು ಒದಗಿಸಿದೆ. 'ಸಮುದ್ರ ಬಿಸಿಯಾದರೆ ತಣ್ಣೀರೆಲ್ಲಿ ತರುವುದು?' 'ಗುಣಹೀನನ ಸಿರಿಗಿಂತಂ ಗುಣಿಗಳ ಬಡತನವೆ ಲೇಸು'—ಗಾದೆಯಂತಹ ಇಂತಹ ನುಡಿಗಟ್ಟುಗಳು ನಾಗಚಂದ್ರನ ಲೋಕಾನುಭವಕ್ಕೂ ಸ್ಫೂರ್ತಿಗೂ ಸಾಕ್ಷಿಗಳಾಗಿವೆ. ಆತನ ಕಥೆಯ ಕಟ್ಟಡ, ಸನ್ನಿವೇಶರಚನೆ, ವರ್ಣನಾ ವೈಖರಿ, ಪಾತ್ರಸೃಷ್ಟಿ—ಅದರಲ್ಲಿಯೂ ದುರಂತರಾವಣನ ಪಾತ್ರಸೃಷ್ಟಿ—ಆತನ 'ಅಭಿನವ ಪಂಪ' ನೆಂಬ ಬಿರುದನ್ನು ಸಾರ್ಥಕಗೊಳಿಸಿವೆ.

ಪಂಪಯುಗದ ಎಲ್ಲೆಯೊಳಗೆ ಬರುವ ಮತ್ತಿಬ್ಬರು ಕವಿಗಳೆಂದರೆ **ನಯಸೇನ** ಮತ್ತು **ಬ್ರಹ್ಮಶಿವ**. ನಯಸೇನನ ಕಾಲ ಕ್ರಿ.ಶ ೧೧೧೨; ಆತನು ಬರೆದ ಕಾವ್ಯ ಧರ್ಮಾಮೃತ. ಹದಿನಾಲ್ಕು ಆಶ್ವಾಸಗಳ ಈ ಕಾವ್ಯದಲ್ಲಿ 'ಜಿನಮತದೊಳಿಸಿತು ಸಾರಮು। ದನಿತುಂ ಲೇಸಾಗಿ ತೋರ್ಪುದು' —ಜೈನಧರ್ಮದ ಸಾರಸರ್ವಸ್ವವೂ ಇದರಲ್ಲಿದೆ—ಎಂದು ಕವಿಯ ಹೇಳಿಕೆ. ಈ ಆಶ್ವಾಸಗಳ ಆದಿ ಅಂತ್ಯದಲ್ಲಿ ಬರುವ ಪದ್ಯಗಳಲ್ಲಿ ಕವಿ 'ಸುಕವಿ ನಿಕರ ಪಿಕಮಾಕಂದ' 'ಸುಕವಿ ಜನಮನಃ ಪದ್ಮಿನೀ ರಾಜಹಂಸ' ಎಂದು ಹೊಗಳಿಕೊಂಡಿದ್ದಾನೆ. ಈತನಿಗೆ 'ದಿಗಂಬರದಾಸ', 'ನೂತ್ನ ಕವಿತಾ

ವಿಲಾಸ' ಎಂಬ ಬಿರುದುಗಳು ಬೇರೆ ಇವೆ. ಧರ್ಮನಿರೂಪಣೆಗಾಗಿಯೇ ಹೊರಟಿರುವ ಈ ಕಾವ್ಯದ ವೈಶಿಷ್ಟ್ಯವೆಂದರೆ ಕಥೆಗಳ ಮೂಲಕ ಅದನ್ನು ಸಾಧಿಸಿರುವುದು. ಒಂದೊಂದು ಆಶ್ವಾಸದಲ್ಲಿಯೂ ಧರ್ಮದ ಒಂದು ಅಂಗವನ್ನು ಒಂದು ಸುಂದರವಾದ ಕಥೆಯ ಮೂಲಕ ಕವಿ ನಿರೂಪಿಸುತ್ತಾನೆ. ದೇಶೀಶೈಲಿ ಈತನ ಆದರ್ಶ. ಆತನ ಮಾತನ್ನು ಕೇಳಿ—

ಸಕ್ಕದಮಂ ಪೇಳ್ವೊಡೆ ನೆರೆ
ಸಕ್ಕದಮಂ ಪೇಳ್ಗೆ ; ಶುದ್ಧಗನ್ನಡದೊಳ್ ತಂ
ದಿಕ್ಕುವುದೆ ಸಕ್ಕದಂಗಳ
ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ.

ಸಂಸ್ಕೃತವನ್ನು ಹೇಳುವಂತಿದ್ದರೆ ಸಂಸ್ಕೃತವನ್ನೇ ಹೇಳಲಿ ; ಶುದ್ಧ ಕನ್ನಡದಲ್ಲಿ ಸಂಸ್ಕೃತವನ್ನು ತಂದು ಏಕೆ ತುರುಕಬೇಕು ? ತುಪ್ಪವನ್ನೂ ಎಣ್ಣೆಯನ್ನೂ ಏಕೆ ಬೆರಸಬೇಕು ?

ನಯಸೇನ ಇತರರಿಗೆ ಹೇಳಿದ ಈ ಮಾತನ್ನು ತಾನು ಕಾರ್ಯತಃ ಮಾಡಿ ತೋರಿಸಿದ್ದಾನೆ, ತನ್ನ ಕಾವ್ಯದಲ್ಲಿ.

ಕನ್ನಡಿಯಂ ತೋಱುವೊಡ।
ತ್ಯುನ್ನತ ಸಲ್ಲಕ್ಷಣಂಗೆ ಮುನಿಸಾಗದು ಮ
ತ್ತೆನ್ನದೆ ಮೂಕೊಱೆಯಂಗಂ।
ಕನ್ನಡಿಯಂ ತೋಱೆ ಬಡಿಗುಮಿಱಿಗುಂ ಕೊಲ್ಗುಂ

ಸುಂದರನಾದವನಿಗೆ ಕನ್ನಡಿಯನ್ನು ತೋರಿದರೆ ಅವನಿಗೆ ಸಿಟ್ಟು ಬರುವುದಿಲ್ಲ; ಅದು ಬಿಟ್ಟು ಮೂಗು ಹರಿದವನಿಗೆ ಕನ್ನಡಿಯನ್ನು ಹಿಡಿದರೆ ಅವನು (ರೇಗಿ) ಹೊಡೆದು ಬಡಿದು ಕೊಲ್ಲುತ್ತಾನೆ.

ಇದ್ದುದನ್ನು ಇದ್ದಹಾಗೆ ಹೇಳಿದಾಗ ಸಜ್ಜನನಿಗೂ ದುರ್ಜನನಿಗೂ ಆಗುವ ಪ್ರತಿಕ್ರಿಯೆಯನ್ನು ಕವಿ ಮೇಲಿನ ಪದ್ಯದಲ್ಲಿ ಎಷ್ಟು ಸರಳವಾಗಿ ಸುಂದರವಾಗಿ ಹೇಳಿದ್ದಾನೆ. ಎಷ್ಟು ಸೊಗಸಾದ ಹಾಸ್ಯ, ಎಂತಹ ಕಾಕು ; ನಗುನಗುತ್ತಲೆ ಎದುರಾಳಿಯನ್ನು ಮರ್ದಿಸುವ ಕವಿಜಾಣ್ಮೆ, ಮನೋಜ್ಞವಾದುದು. ಈ ಉದಾಹರಣೆಯನ್ನು ನೋಡಿ, ದುರ್ಜನರ ಸಹಜಗುಣಕ್ಕೆ!

ಕಲಿತನದಿಂದಂ ಲೋಗರ್ ।
ಪುಲಿಯಂ ಪಿಡಿದೊಡಮದೇಂ ಬಿಡೆಂಬರ್ ತಾವೊಂ
ದಿಲಿಯಂ ಪಿಡಿದೊಡಮದು ಪೆ।
ರ್ಬುಲಿಯೆಂಬರ್ ದುರ್ಜನರ್ಗೆ ತಾನಿದು ಸಹಜಂ

ಮಹಾಪರಾಕ್ರಮದಿಂದ ಒಬ್ಬನು ಒಂದು ಹುಲಿಯನ್ನು ಹಿಡಿದರೂ ಕೂಡ 'ಅದೇನು ಮಹಾ ಬಿಡಯ್ಯ' ಎನ್ನುತ್ತಾರೆ; ತಾವು ಒಂದು ಇಲಿಯನ್ನು ಹಿಡಿದರೆ 'ಅದು ಮಹಾ ಹೆಬ್ಬುಲಿ' ಎನ್ನುತ್ತಾರೆ. ಇದು ದುರ್ಜನರಿಗೆ ಸಹಜವಾದುದು.

ಎಲ್ಲಕ್ಕೂ ಹೆಚ್ಚಾಗಿ ಆತನ ಕಾವ್ಯದಲ್ಲಿ ಬರುವ ನಾಣ್ಣುಡಿಗಳು ಹೃದಯಂಗಮವಾಗಿವೆ. ಇವುಗಳ ವಿಪುಲತೆ ಜನರ ಮನಸ್ಸನ್ನು ಸೆರೆಹಿಡಿದು ಈತನ ಕಾವ್ಯವನ್ನು ಜನಪ್ರಿಯವಾಗಿ ಮಾಡಿದ್ದರೆ ಆಶ್ಚರ್ಯವೇನೂ ಇಲ್ಲ. 'ನಾಯಿಗೆ ನವಿಲಾಟವೆ?', 'ನಾಯಬಾಲ ಡೊಂಕು', 'ಕನಸಿನ ಛತ್ರಕ್ಕೆ ಗೋಣಿ ಒಡ್ಡಿದ', 'ಸಾಕ್ಷಿಯಿಲ್ಲದೆ ಸಾಲಕೊಟ್ಟಹಾಗೆ'—ಇತ್ಯಾದಿ ಗಾದೆಗಳು ಇಂದಿಗೂ ಸಜೀವವಾಗಿ ಉಳಿದುಕೊಂಡು ಬಂದಿವೆ.

ನಯಸೇನನು ಪಂಪರನ್ನಾದಿಗಳಂತೆ ಮಹಾಕವಿಯಲ್ಲದಿದ್ದರೂ ಕನ್ನಡದ ಮಾರ್ಗಶೈಲಿಯನ್ನು ಪ್ರತಿಭಟಿಸಿ, ಶುದ್ಧ ದೇಶೀಶೈಲಿಯಲ್ಲಿ ತನ್ನ ಚಂಪೂಕಾವ್ಯವನ್ನು ಹೊರಕ್ಕೆ ತಂದ ಕ್ರಾಂತಿಕಾರ. ಕಥೆಗಳ ಮೂಲಕ ಧರ್ಮಪ್ರಸಾರಕ್ಕೆ ಹೊರಟವರಲ್ಲಿ ಈತನು ಅಗ್ರಗಣ್ಯ. ಪರಮತ ವಿಡಂಬನೆಗೆ ಕಾವ್ಯದಲ್ಲಿ ಎಡೆಗೊಟ್ಟವರಲ್ಲಿಯೂ ಈತನು ಮೊದಲನೆಯವನೆಂದೇ ಹೇಳಬೇಕು. ಆತನ ವಿಡಂಬನೆ ಬುದ್ಧಿಪೂರ್ವಕವಾದುದಾದರೂ ವಿವೇಚನಾರಹಿತವಾದುದಲ್ಲ; ಎಲ್ಲೆ ಮೀರಿಲ್ಲ. ಈ ವಿಡಂಬನೆ ಮುಂದುವರಿದು ಮಡುಗಟ್ಟಿರುವುದನ್ನು ನೋಡಬೇಕಾದರೆ 'ಬ್ರಹ್ಮಶಿವ'ನನ್ನು ನೋಡಬೇಕು.

ಹನ್ನೆರಡನೆಯ ಶತಮಾನದ ಮಧ್ಯಕಾಲದಲ್ಲಿ ಇದ್ದ ಬ್ರಹ್ಮಶಿವನು ಒಮ್ಮೆ ಜೈನಮತದಿಂದ ಶೈವಮತಕ್ಕೆ ಸೇರಿ ಪುನಃ ಜೈನಮತಕ್ಕೆ ಹಿಂತಿರುಗಿದವನು. ಆದ್ದರಿಂದ ಇವನಿಗೆ ಜೈನೇತರ ಧರ್ಮಗಳ ಪರಿಚಯವೂ ಸಾಕಷ್ಟು ಇದ್ದಿರಬೇಕು. ಸೌರ, ಕೌಳ, ವೇದ, ಸ್ಮೃತಿ, ಪುರಾಣ—ಇವುಗಳ ಸಾರವನ್ನೆಲ್ಲಾ ತಾನು ಬಲ್ಲೆನೆಂದು ಕವಿ ಹೇಳಿಕೊಂಡಿದ್ದಾನೆ. ಆದ್ದರಿಂದಲೇ

ಈತನು ಅಲ್ಲಿನ ಹುಳಕುಗಳನ್ನೆಲ್ಲಾ ತನ್ನ ಕಾವ್ಯದಲ್ಲಿ ಎತ್ತಿಹಾಕಿ, ಗೇಲಿಗೆಬ್ಬಿಸುವುದು ಇವನಿಗೆ ಸಾಧ್ಯವಾಗಿದೆ.

ಬ್ರಹ್ಮಶಿವನು 'ಸಮಯ ಪರೀಕ್ಷೆ', 'ತ್ರೈಲೋಕ್ಯ ಚೂಡಾಮಣಿ' ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. 'ಸಮಯ:ಪರೀಕ್ಷೆ' ಮತಗಳ ಯೋಗ್ಯತೆಯನ್ನು ನಿರ್ಣಯಿಸುವ ಗ್ರಂಥ. ಕವಿಯು ಸಮಕಾಲಿಕವಾದ ಮತಗಳ ದೋಷಗಳನ್ನು ಎತ್ತಿತೋರಿಸಿ, ಜೈನಧರ್ಮವೇ ಸರ್ವಗ್ರಾಹ್ಯವೆಂದು ಸಿದ್ಧಾಂತಮಾಡಲು ಹೊರಟಿದ್ದಾನೆ. ಅದರಿಂದ ನಮಗೆ ಆ ಕಾಲದ ಧಾರ್ಮಿಕ ಜೀವನವನ್ನು ಅರ್ಥಮಾಡಿಕೊಳ್ಳಲು ಇದು ಸಹಾಯಕವಾಗಿದೆ. ಹದಿನೈದು ಅಧಿಕಾರಗಳಿರುವ ಈ ಕಾವ್ಯದಲ್ಲಿ ಕಂದವೃತ್ತಗಳೆ ಹೊರತು ಗದ್ಯದ ಪ್ರಸಕ್ತಿ ಇಲ್ಲ.

ಬ್ರಹ್ಮಶಿವನ ಭಾಷೆ ಸುಲಭ, ಬಂಧ ಬಂಧುರ; ಆದರೆ ನಾಲಿಗೆ ಮಾತ್ರ ಹರಿತ. ನಿರ್ದಯವಾಗಿ, ನಿರ್ದಾಕ್ಷಿಣ್ಯವಾಗಿ, ನಿರ್ಭಯವಾಗಿ ಪರಮತ ಖಂಡನೆಯ ಕಾರ್ಯಕ್ಕೆ ಕೈಯಿಕ್ಕಿ ಕೃತಕೃತ್ಯನಾಗಿದ್ದಾನೆ. ಇದೊಂದು ವೈಷ್ಣವರ ಮೇಲಿನ ಗದಾಪ್ರಹಾರ:

ಧರೆಗೊಡೆಯಂ ಚಕ್ರೇಶಂ
ತಿರಿಪನೆ ಬಲಿಯಲ್ಲಿ ಬೇಡಿ ಮೂಱಡಿ ನೆಲನಂ
ಸಿರಿಯೊಡೆಯಂ ಕೀಳಾಳಾ।
ಗಿರಲಱಿವನೆ ಪರಿಸುತಂ ಕಿರೀಟಿಯ ರಥಮಂ?

ಭೂನಾಥನಾದ ವಿಷ್ಣು ಬಲಿಯಲ್ಲಿ ಮೂರಡಿ ನೆಲವನ್ನು ಭಿಕ್ಷೆ ಬೇಡಬೇಕೆ? ಸಾಕ್ಷಾತ್ ಲಕ್ಷ್ಮೀಪತಿಯಾದವನು ಅರ್ಜುನನ ತೇರನ್ನು ನಡೆಸುವ ಗುಲಾಮನಾಗಬೇಕೆ?

ಆ ವಿಷ್ಣು ತನ್ನ ಗರ್ಭದಲ್ಲಿ ಜಗತ್ತನ್ನೆ ಇಟ್ಟುಕೊಂಡಿದ್ದಾನಂತೆ; ಹಾಗಾದರೆ ಅಸುರರೂ ಅಲ್ಲಿಯೇ ಇರುವರುತಾನೆ? ಪಾಪ, ಹರಿ ಆ ಅಸುರರನ್ನು ಕೊಂದುದರಿಂದ ಶರಣುಹೊಕ್ಕವರನ್ನೆ ಕೊಂದಂತೆ ಆಗಲಿಲ್ಲವೆ?

ಇನ್ನು ಶಿವನ ಗ್ರಹಚಾರ ಬಿಡಿಸುತ್ತಾನೆ—

ಅಱಿವಿಲ್ಲೆಂಬುದನಕ್ಷಸೂತ್ರ ಮಣಿಯಿಂ, ಕಾರುಣ್ಯಮಿಲ್ಲೆಂಬುದಂ
ಮಿಱುಗುತ್ತಿರ್ಪ ತಿಸೂಳದಿಂ, ತನಗಣಂ ನಾಣ್ಮುನ್ನಮಿಲ್ಲೆಂಬುದಂ

ವೊಜಿಗೆಟ್ಟರ್ಚಿಸ ಲಿಂಗದಿಂ. ತಪದ ಮಾತಿಲ್ಲೆಂಬುದಂ ಗೌರಿಯಿಂ
ದಜಂಪೇನೆಂದು ಜಡರ್ ಮೃಡಂಗೆಜಗುವರ್ ತ್ರೈಲೋಕ್ಯಚೂಡಾಮಣೀ ?

ಆ ಶಿವನು ಕೈಲಿ ಹಿಡಿದ ಜಪಮಾಲೆ ಅವನು ಅಜ್ಞಾನಿಯೆಂದು, ಹೊಳೆಯುವ ತ್ರಿಶೂಲ ಅವನು ನಿಷ್ಕರುಣಿಯೆಂದು. ಲಿಂಗಪೂಜೆ ಅವನು ನಿರ್ಲಜ್ಜನೆಂದು, ಅರ್ಧದೇಹದಲ್ಲಿರುವ ಗೌರಿ ಅವನು ತಪಸ್ವಿಯಲ್ಲವೆಂದು ಸ್ಪಷ್ಟವಾಗಿ ತೋರಿಸುತ್ತವೆ. ಆದರೂ ಜಡರು ಏನೆಂದು ಅವನನ್ನು ಪೂಜಿಸುತ್ತಾರೊ ?

ಮೇಲಿನ ಪದ್ಯ ಬ್ರಹ್ಮಶಿವನ 'ತ್ರೈಲೋಕ್ಯ ಚೂಡಾಮಣಿ'. ಜಿನ ಸ್ತೋತ್ರದ ಗ್ರಂಥದಿಂದ ಆಯ್ದುಕೊಂಡುದು. ಮೂವತ್ತಾರು ವೃತ್ತಗಳಿಂದ ಕೂಡಿದ ಈ ಜಿನಸ್ತೋತ್ರದಲ್ಲಿಯೂ ಭಕ್ತಿಗಿಂತ ಮತವಿಡಂಬನೆಯೇ ಹೆಚ್ಚು. ಬ್ರಹ್ಮನೇ ಮೊದಲಾದ ದೈವಗಳೆಲ್ಲವೂ ಆತನ ವಿಡಂಬನೆಗೆ ಆಹುತಿಯಾಗಿವೆ. ಜಗತ್ತಿನ ಸೃಷ್ಟಿಕರ್ತನೆಂದು ಉಗ್ಗಡಿಸುವ ಬ್ರಹ್ಮ ತನ್ನ ತಲೆಯನ್ನೇಕೆ ಉಳಿಸಿಕೊಳ್ಳಲಿಲ್ಲ? ಎಂದು ಕೇಳುತ್ತಾನೆ. ಮಾನವನ ಉದ್ಧಾರಕ್ಕೆ ಜೈನ ಧರ್ಮವೊಂದೇ ಶರಣ್ಯವೆಂದು ಹೇಳಿ ಅದಕ್ಕೆ ಕಾರಣ

ಪುಸಿವನೆ ತೊಲಗಾ, ಹಿಂಸೆಯೊ
ಳೆಸಗುತ್ತಿರ್ಪವನೆ ತೊಲಗು, ಪರವಧುವಿಂಗಾ
ಟಿಸುವವನೆ ತೊಲಗೆನುತ್ತುಂ
ಪಸರಿಸುವುದು ಜೈನಧರ್ಮಭೇರೀನಿನದಂ

'ಎಲಾ ಸುಳ್ಳುಹೇಳುವವನೆ ದೂರತೊಲಗು. ಎಲಾ ಪರಹಿಂಸಕನೆ ಆಚೆಗೆ ಹೋಗು; ಪರಸ್ತ್ರೀಗೆ ಆಸೆಪಡುವವನೆ ಹೋಗಾಚೆ' ಎಂದು ಜೈನ ಧರ್ಮದ ಭೇರೀನಿನಾದವು ಡಂಗುರ ಹೊಡೆದು ಸಾರುತ್ತಿದೆ.

ಬ್ರಹ್ಮಶಿವನ ವಿಡಂಬನೆಯಲ್ಲಿ ಅಲ್ಲಲ್ಲಿಯೇ ಮಿಂಚುವ ಲಘುವಾದ ಹಾಸ್ಯ ಮೋಹಕವಾಗಿದೆ. ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ನಗುತ್ತಾ ಒಮ್ಮೆ ಹೇಳಿದಂತೆ ಬ್ರಹ್ಮಶಿವನ ಕೈಲಿ ಬೈಸಿಕೊಳ್ಳುವುದೂ ಅನೇಕ ವೇಳೆ ಹಿತವಾಗಿರುತ್ತದೆ.

ಸುಮಾರು ಇದೇ ಕಾಲದವನಾದ (ಕ್ರಿ.ಶ ೧೧೪೦) **ಕರ್ಣಪಾರ್ಯನು** ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿನಾಥನ ಪುರಾಣವನ್ನು ಬರೆ

ದಿದ್ದಾನೆ, ಇತರ ಜೈನಪುರಾಣಗಳಂತೆ ಇಲ್ಲಿಯೂ ಜಿನನ ಗರ್ಭಾವತರಣವೆ ಮೊದಲಾದ ಪಂಚಕಲ್ಯಾಣಗಳ ಜೊತೆಗೆ ಹರಿವಂಶ ಕುರುವಂಶಗಳ ಕಥೆಯೂ ಬಂದಿದೆ. ಇದೇ ಇದರ ಪ್ರಾಮುಖ್ಯತೆ. ·ಜೈನಧರ್ಮಾನುಸಾರ ವಾದ ಮಹಾಭಾರತವೂ ಶ್ರೀಕೃಷ್ಣನ ಚರಿತ್ರೆಯೂ ವೈದಿಕಗ್ರಂಥಗಳಿಂದ ಭಿನ್ನವಾಗಿವೆ. ಕರ್ಣಪಾರ್ಯನು ಪಂಪಭಾರತವನ್ನು ಓದಿ ಅಲ್ಲಿನ ಕ್ರಮವನ್ನೆ ತನ್ನ ಭಾರತದ ಕಥೆಯಲ್ಲಿಯೂ ಅನುಸರಿಸಿರುವನೆಂದು ಊಹಿಸಲು ಅವಕಾಶವಿದೆ. ಅಲ್ಲಲ್ಲಿ ಕ್ವಚಿತ್ತಾಗಿ ಕಾಣುವ ವರ್ಣನಾ ಭಾಗಗಳಲ್ಲಿ ಸ್ವಲ್ಪ ಮಟ್ಟಿಗೆ ಈತನ ಕಾವ್ಯಶಕ್ತಿಯ ಔನ್ನತ್ಯವನ್ನು ಕಾಣಬಹುದು. ಕಾವ್ಯದ ಬಂಧ ಪ್ರೌಢವಾಗಿದೆ; ಶಬ್ದಾಲಂಕಾರಗಳ ಕುಣಿತವಿದೆ; ಹದಿನೆಂಟು ವರ್ಣನೆಗಳ ವಿಜೃಂಭಣೆಯೂ ಇದೆ. ಕಾವ್ಯಕ್ಕೆ ಜೀವಾಳವಾದ ರಸಕ್ಕೆ ಮಾತ್ರ ಇಲ್ಲಿ ಅಭಾವ. 'ಸಹಜ ಕವಿತಾ ರಸೋದಯ', 'ಭವ್ಯಜನವನ ಮಾರ್ತಾಂಡ', 'ಸಮ್ಯಕ್ತ್ವ ರತ್ನಾಕರ' ಇತ್ಯಾದಿ ಬಿರುದುಗಳಿವೆ. ಉಳಿದ ಬಿರುದುಗಳನ್ನು ಒಪ್ಪಿಕೊಂಡರೂ ಮೊದಲನೆಯನ್ನು ಸೈಯೆಂದು ಸಾಧಿಸು ವುದು ಕಷ್ಟ.

ನಯಸೇನನಲ್ಲಿ ಕುಡಿಯಿಟ್ಟು, ಬ್ರಹ್ಮಶಿವನಲ್ಲಿ ಬೆಳೆದ ಪರಮತ ವಿಡಂಬನೆ 'ವೃತ್ತವಿಲಾಸ'ನಲ್ಲಿ ಹೆಮ್ಮರವಾಗಿ ನಿಂತಿದೆ. ಸಂಸ್ಕೃತದ ಧರ್ಮ ಪರೀಕ್ಷೆಯನ್ನು ಕನ್ನಡದಲ್ಲಿ ಬರೆಯುತ್ತಿರುವುದಾಗಿ ಕವಿ ಹೇಳಿಕೊಂಡಿದ್ದಾನೆ ಈತನು ಒಳ್ಳೆಯ ಕತೆಗಾರ. ಕಾವ್ಯ ಆರಂಭವಾಗುವುದೇ ಒಂದು ಕಥೆ ಯಿಂದ. ಮನೋವೇಗ, ಪವನವೇಗ ಎಂಬ ರಾಜಕುಮಾರರಿಬ್ಬರು ಪಾಟಲಿ ಪುರಕ್ಕೆ ಹೋಗಿ, ಅಲ್ಲಿನ ಬ್ರಹ್ಮದೇವಾಲಯದಲ್ಲಿದ್ದ ನಗಾರಿಯನ್ನು ಹೊಡೆದು ಸಮೀಪದಲ್ಲಿದ್ದ ಸಿಂಹಾಸನದ ಮೇಲೆ ಕುಳಿತುಕೊಂಡರು. ಭೇರೀ ನಿನಾದ ಅಲ್ಲಿದ್ದ ಬ್ರಾಹ್ಮಣರನ್ನು ಅಲ್ಲಿಗೆ ಆಕರ್ಷಿಸಿತು. ನಗಾರಿ ಹೊಡೆದ ವರು ಬ್ರಾಹ್ಮಣರೊಡನೆ ವಾದಮಾಡಿ ಗೆದ್ದಮೇಲೆ ಸಿಂಹಾಸನವನ್ನು ಏರ ಬೇಕೆಂದು ನಿಯಮ. ಇದನ್ನು ತಿಳಿಸಿದ ಬ್ರಾಹ್ಮಣರು ಆ ರಾಜಪುತ್ರರನ್ನು 'ನೀವು ಯಾವ ಶಾಸ್ತ್ರದಲ್ಲಿ ಪಂಡಿತರು?' ಎಂದು ಕೇಳಿದರು. ರಾಜಕುಮಾ ರರು 'ನಮಗೇನೂ ತಿಳಿಯದು' ಎಂದು ಹೇಳಿ ಕೆಳಗೆ ಕುಳಿತುಕೊಂಡು, ಬ್ರಾಹ್ಮಣರಿಗೆ ಕಥೆಗಳನ್ನು ಹೇಳಿ ಆ ಮೂಲಕ ಅವರ ಮತವನ್ನು ಖಂಡಿಸಿ

ಜೈನಧರ್ಮದ ಪತಾಕೆಯನ್ನು ಮೇಲೆತ್ತಿದರು. ಅವರು ಹೇಳಿದ ಕಥೆಗಳು ಧರ್ಮ ಪರೀಕ್ಷೆಯ ತಿರುಳು. ಕವಿಯ ನಿರೂಪಣೆ ಸರಳ ಸುಂದರವಾಗಿದ್ದು ನಗೆಯ ತರಂಗಗಳನ್ನು ಎಬ್ಬಿಸುತ್ತದೆ. ದಿವಂಗತ ಶ್ರೀ ಆರ್. ನರಸಿಂಹಾ ಚಾರ್ಯರ 'ನಗೆಗಡಲು' ಇಲ್ಲಿಂದಲೇ ಎತ್ತಿಕೊಂಡುದೆಂಬುದನ್ನು ತಿಳಿದರೆ, ಇಲ್ಲಿನ ಹಾಸ್ಯದ ಸ್ವರೂಪ ಅರ್ಥವಾದೀತು. ವೃತ್ತವಿಲಾಸನು ಒಳ್ಳೆಯ ಕತೆಗಾರನಾಗಿರುವಂತೆ ಒಳ್ಳೆಯ ಕವಿಯೂ ಆಗಿದ್ದಾನೆ. ಅವನ ಈ ಪದ್ಯದಲ್ಲಿ ಕಾಣಬರುವ ಸಹಜತೆಯನ್ನು ನೋಡಿ.

ಪರಿಹರಿಸಿ ನಿದ್ರೆಯುಡುಗಿದ
ಕೊರಲಂ ನಿಮಿರ್ದೆತ್ತಿ ನೋಡಿ ನಾಲ್ದೆಸೆಯಂ ಕೇ
ಸರಮಂ ಬಿದಿರ್ದೆಱಂಕೆಯ
ನೆರಡಂ ಬಡಿದೆದ್ದು ಕೋಳಿ ಕೂಗಿದುದಾಗಳ್.

ನಿದ್ರೆಯಿಂದ ಎಚ್ಚತ್ತ ಕೋಳಿ ಕೊರಳನ್ನು ಎತ್ತರವಾಗಿ ಚಾಚಿ, ನಾಲ್ಕು ದಿಕ್ಕುಗಳನ್ನೂ ನೋಡುತ್ತಾ, ತನ್ನ ಕೇಸರವನ್ನು ಕೊಡವಿಕೊಂಡು, ಎರಡು ರೆಕ್ಕೆಗಳನ್ನೂ ಬಡಿಯುತ್ತಾ ಕೂಗಿತು. ಪದ್ಯ ಸುಂದರವಾಗಿರುವಷ್ಟೆ ಭಾವ ಸರಳವಾಗಿವೆ. ಈ ಸಹಜ ಸರಳತೆಯೇ ಈತನ ವಿಡಂಬನೆ ಹರಿತವಾಗಿರು ವುದಕ್ಕೆ ಸಹಾಯಕವಾಗಿದೆ.

ವೃತ್ತವಿಲಾಸನ ಕಾಲ ಹನ್ನೆರಡನೆಯ ಶತಮಾನದ ಮಧ್ಯಭಾಗ ವೆಂದು ಕವಿ ಚರಿತೆಕಾರರಾದ ಶ್ರೀ ಆರ್. ನರಸಿಂಹಾಚಾರ್ಯರ ಹೇಳಿಕೆ. ಆದರೆ ವಿದ್ವಾಂಸರನೇಕರು ಈ ಮತವನ್ನು ಒಪ್ಪದೆ ೧೪ ನೆಯ ಶತಮಾನ ದಲ್ಲಿ ಆತನಿದ್ದನೆಂದು ನಿರ್ಧರಿಸಿದ್ದಾರೆ. ಆದರೂ ಆತನನ್ನು ನಯಸೇನ, ಬ್ರಹ್ಮಶಿವರ ಪಂಥಕ್ಕೆ ಸೇರಿದವನೆಂಬ ಕಾರಣದಿಂದ ಇಲ್ಲಿಯೇ ಆತನ ವಿಚಾರವನ್ನು ಕುರಿತು ಪ್ರಸ್ತಾಪಮಾಡಲಾಗಿದೆ.

ಹನ್ನೆರಡನೆಯ ಶತಮಾನದ ಮಧ್ಯಕಾಲದಿಂದ ಕನ್ನಡ ಸಾಹಿತ್ಯದ ಸ್ವತಂತ್ರಯುಗ ಪ್ರಾರಂಭವಾಗುವುದಾದರೂ ಪಂಪನ ಪ್ರಭಾವಕ್ಕೆ ಒಳಗಾಗಿ ರೀತಿಯ ಶೈಲಿಯಲ್ಲಿ ಕೃತಿರಚನೆಮಾಡುವ, ಪಂಪನನ್ನು ಅನುಸರಿಸಿ ಗ್ರಂಥರಚನೆಮಾಡುವ ಸಂಪ್ರದಾಯ ಇಲ್ಲಿಗೆ ನಿಲ್ಲಲಿಲ್ಲ; ಬಹುಕಾಲದವರೆಗೆ ಮುಂದುವರಿಯಿತು ಎಂಬುದನ್ನು ನಾವು ಇಲ್ಲಿ ಅರಿತಿರಬೇಕು.

ಇನ್ನೊಂದು ವಿಚಾರ. ಸ್ವತಂತ್ರಯುಗಕ್ಕೆ ಪೂರ್ವದಲ್ಲಿಯೆ ಅನೇಕ ಶಾಸ್ತ್ರಗ್ರಂಥಗಳು ಕನ್ನಡದಲ್ಲಿ ಕಾಣಿಸಿಕೊಂಡವು. ' ಗಣಿತವಿಲಾಸ ' ನೆಂಬ ಬಿರುದು ಹೊತ್ತು ಕನ್ನಡದಲ್ಲಿ ಗಣಿತಶಾಸ್ತ್ರವನ್ನು ಮೊತ್ತಮೊದಲು ಬೆಳಕಿಗೆ ತಂದ ರಾಜಾದಿತ್ಯ (ಕ್ರಿ.ಶ. ೧೧೨೦), ' ಗೋವೈದ್ಯ ' ವನ್ನು ಬರೆದ ಕೀರ್ತಿವರ್ಮ (೧೧೨೫) ' ಕಲ್ಯಾಣ ಕಾರಕ ' ವೆಂಬ ವೈದ್ಯಗ್ರಂಥವನ್ನು ಬರೆದ ' ವಿಚಿತ್ರಕವಿ ' ಜಗದ್ದಳ ಸೋಮನಾಥ (೧೧೫೦), ' ಕಾವ್ಯಾವಲೋಕನ ' ' ಭಾಷಾಭೂಷಣ ', ' ವಸ್ತುಕೋಶ ' ಗಳನ್ನು ಬರೆದ ಎರಡನೆಯ ನಾಗವರ್ಮ (ಕ್ರಿ. ಶ. ೧೧೪೫), ' ಉದಯಾದಿತ್ಯಾಲಂಕಾರ ' ವೆಂಬ ಅಲಂಕಾರಶಾಸ್ತ್ರವನ್ನು ಬರೆದ ಉದಯಾದಿತ್ಯ (೧೧೫೦) ಮೊದಲಾದದರು ಉಲ್ಲೇಖಯೋಗ್ಯರು. ಇವರಲ್ಲಿ ಕೆಲವರು ಒಳ್ಳೆಯ ಕವಿತಾ ಶಕ್ತಿಯುಳ್ಳವರೂ ಆಗಿರುವಂತೆ ಕಂಡು ಬರುತ್ತಾರೆ ; ಕೆಲವರು ಕಾವ್ಯಗಳನ್ನು ಬರೆದಿರುವರೆಂಬ ಪ್ರತೀತಿಯೂ ಇದೆ. ಇವರೆಲ್ಲರೂ ಕನ್ನಡ ಸಾಹಿತ್ಯದ ತುಷ್ಟಿಪುಷ್ಟಿಗಳಿಗೆ ಕಾರಣರಾದುದರಿಂದ ಅಭಿನಂದನಾರ್ಹರೇ ಸರಿ.

# ಹರಿಹರಯುಗ ಅಥವಾ ಸ್ವಾತಂತ್ರ್ಯಯುಗ

ಮಾನವ ಇತಿಹಾಸದಂತೆ ಸಾಹಿತ್ಯದ ಇತಿಹಾಸವೂ ಕಾಲಕಾಲಕ್ಕೆ ಬದಲಾಯಿಸುತ್ತಾ ಹೋಗುತ್ತದೆ. ಭಾಷೆ ಜೀವಂತವಾಗಿರುವುದೆಂಬುದಕ್ಕೆ ಇದೊಂದು ಸಾಕ್ಷಿ. ಆದರೆ, ಬದಲಾವಣೆಯೆಂಬುದು ಇದ್ದಕ್ಕಿದ್ದಂತೆ ಒಂದೇ ದಿನದಲ್ಲಿ ನಡೆದು ಹೋಗುವ ಕೋಲಾಹಲವಲ್ಲ. ಅದಕ್ಕೆ ಸುವಿಸ್ತಾರವಾದ ಸುಧೀರ್ಘವಾದ ಒಂದು ಹಿನ್ನಲೆಯಿರುತ್ತದೆ. ಆ ಹಿನ್ನಲೆಯಲ್ಲಿ ಸುಪ್ತವಾಗಿಯೋ ಅರ್ಧಜಾಗ್ರತವಾಗಿಯೋ ಇರುವ ಈ ಕ್ರಾಂತಿಶಕ್ತಿಯು ಅನುಕೂಲ ಸನ್ನಿವೇಶ ಸಿಕ್ಕಿದೊಡನೆಯೇ ಸ್ಫೋಟನಗೊಳ್ಳುತ್ತದೆ. ಹನ್ನೆರಡನೆಯ ಶತಮಾನದ ಕನ್ನಡ ಸಾಹಿತ್ಯದಲ್ಲಿ ಇಂತಹ ಕ್ರಾಂತಿಯೊಂದನ್ನು ನಾವು ಕಾಣುತ್ತೇವೆ.

ಹನ್ನೆರಡನೆಯ ಶತಮಾನದಲ್ಲಿ ಕರ್ಣಾಟಕದ ರಾಜಕೀಯ ಸ್ಥಿತಿ ಅಷ್ಟೇನೂ ಸುವ್ಯವಸ್ಥಿತವಾಗಿದ್ದಂತೆ ಕಂಡುಬರುತ್ತಿಲ್ಲ. ಉತ್ತರ ಕರ್ಣಾಟಕದಲ್ಲಿ ಪ್ರಬಲರಾಗಿದ್ದ ಚಾಲುಕ್ಯರು ಹನ್ನೆರಡನೆಯ ಶತಮಾನದ ಮಧ್ಯದ ವೇಳೆಗೆ ಕಾಲಚುರ್ಯರಿಗೆ ಸೋತು ಮೂಲೆಗುಂಪಾದರು. ವಿಜಯಿಗಳಾದ ಕಾಲಚುರ್ಯರು ಆ ಶತಮಾನದ ಕೊನೆಯವೇಳೆಗೆ ಯಾದವರಪ್ರಾಬಲ್ಯಕ್ಕೆ ಅವಕಾಶಮಾಡಿಕೊಟ್ಟು ತಾವು ಅಜ್ಞಾತರಾಗಬೇಕಾಯಿತು. ಕರ್ಣಾಟಕದ ದಕ್ಷಿಣದಲ್ಲಿ ಹೊಯ್ಸಳರು ಪ್ರಬಲರಾಗಿ ಸಾಮ್ರಾಜ್ಯ ವಿಸ್ತರಣೆಯಲ್ಲಿ ತೊಡಗಿದ್ದರು. ಅವರಿಗೂ ಉತ್ತರ ಕರ್ಣಾಟಕದ ರಾಜರಿಗೂ ಪರಸ್ಪರ ಹೋರಾಟ ಅನಿವಾರ್ಯವಾಗಿತ್ತು. ನಾಡಿನ ರಾಜಕೀಯಸ್ಥಿತಿ ಹೀಗೆ ಅನಿಶ್ಚಿತವಾಗಿರುವಾಗ ಜನಜೀವನದಲ್ಲಿ ಶಾಂತಿಯೆಲ್ಲಿಯದು? ನಾಡಿನ ರಾಜಕೀಯಸ್ಥಿತಿಯಂತೆ ಧಾರ್ಮಿಕಸ್ಥಿತಿಯೂ ಕದಡಿ ಬಗ್ಗಡವಾಗಿದ್ದಿರಬೇಕು. ಹನ್ನೊಂದನೆಯ ಶತಮಾನದಲ್ಲಿ ಚೋಳರ ದಾಳಿಗೆ ಸಿಕ್ಕಿ ಕಳೆಗುಂದಿದ ಜೈನಮತ ಮತ್ತೆ ಮೊದಲಿನ ಕಾಂತಿಯನ್ನು ಪಡೆಯಲಿಲ್ಲ. ಇತರರ ಮೇಲೆ ಪ್ರಭಾವ ಬೀರುವುದಕ್ಕಿಂತಲೂ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳುವುದು ಅವರ ಅವಶ್ಯಕತೆಯಾಗಿತ್ತು. ಬ್ರಾಹ್ಮಣಮತ ತನಗೆ ತಾನೆ ನಾಚುವಷ್ಟು ನಿರರ್ಥಕ

ವಾಗಿ ಹೋಗಿತ್ತೆಂದು ತೋರುತ್ತದೆ. ಆದರ ಡಾಂಭಿಕತನ, ಮಡಿವಂತಿಕೆ, ಅರ್ಥಹೀನ ಆಚಾರ, ಜಾತೀಯತೆ ಇತ್ಯಾದಿಗಳು ಆ ಮತಾನುಯಾಯಿಗಳಿಗೇ ಅಸಹ್ಯವಾಗಿರಬೇಕು. ಇಲ್ಲದಿದ್ದರೆ ಹನ್ನೆರಡನೆಯ ಶತಮಾನದ ಆದಿಭಾಗದಲ್ಲಿ ರಾಮಾನುಜಾಚಾರ್ಯನ ವಿಶಿಷ್ಟಾದ್ವೈತ ಏಕೆ ಉದಿಸುತ್ತಿತ್ತು? ಹರಿಪಾರಮ್ಯವನ್ನು ಸಾರುವ ಬ್ರಾಹ್ಮಣಪಂಥ ವಿಶಿಷ್ಟಾದ್ವೈತಕ್ಕೆ ಎಡೆ ಮಾಡಿಕೊಟ್ಟರೆ, ಶಿವಪಾರಮ್ಯವನ್ನು ನಂಬಿದ್ದ ಬ್ರಾಹ್ಮಣಪಂಥ ವೀರಶೈವ ಅಥವಾ ಶಕ್ತಿವಿಶಿಷ್ಟಾದ್ವೈತಕ್ಕೆ ಪ್ರಚೋದನೆ ನೀಡಿರಬೇಕು. ಈ ವಿಚಾರದಲ್ಲಿ 'ಇದಮಿತ್ಥಂ' ಎಂಬ ಹಟ ನಮಗಿಲ್ಲ; ಸ್ವಲ್ಪ ಹೆಚ್ಚು ಕಡಮೆ, ಈ ಎರಡೂ ಪಂಥಗಳು ಏಕಕಾಲದಲ್ಲಿ ಉದಿಸಿರಬಹುದು. ವಿವರಣೆಗಳಲ್ಲಿ ವ್ಯತ್ಯಾಸವಿದ್ದರೂ, ಇವೆರಡರ ಧ್ಯೇಯವೂ ಒಂದೆ. ಮೋಕ್ಷದ ಹೆದ್ದಾರಿಗೆ ಅಡ್ಡವಾಗಿದ್ದ ಮತದ ಮುಳ್ಳುಬೇಲಿಯನ್ನು ಕಿತ್ತುಹಾಕುವುದರಲ್ಲಿ ಈ ಎರಡು ಮತಗಳೂ ಸಮಾನವಾಗಿಯೇ ಶ್ರಮಿಸಿದವು. ಎಲ್ಲ ಮತದವರಿಗೂ ಈ ಮತಗಳ ಬಾವುಟಗಳಡಿಯಲ್ಲಿ ಆಶ್ರಯದೊರೆಯಿತು; ಎಲ್ಲರಿಗೂ ಮೋಕ್ಷದ ಹೆಬ್ಬಾಗಿಲು ತೆರೆಯಿತು. ಶ್ರೀವೈಷ್ಣವಕ್ಕೆ ಮುದ್ರೆ ತ್ರಿಪುಂಡ್ರಗಳ ಲಾಂಛನವಾದರೆ, ವೀರಶೈವಕ್ಕೆ ಲಿಂಗವಿಭೂತಿಗಳ ಲಾಂಛನವಾಯಿತು. ಕರ್ಮಕಾಂಡ ವರ್ಣಾಶ್ರಮಗಳ ನಿರಾಕರಣೆಯನ್ನು ವಿಶಿಷ್ಟಾದ್ವೈತ ಒಪ್ಪುತ್ತದೆ, ಆದರೆ ಬೋಧಿಸುವುದಿಲ್ಲ. ಶಕ್ತಿವಿಶಿಷ್ಟಾದ್ವೈತ ಇದನ್ನು ಒಪ್ಪುತ್ತದೆ, ಸಾರುತ್ತದೆ. ಮಾನವಪ್ರೇಮ, ಸರ್ವಸಮಾನತೆ, ದೈವಭಕ್ತಿ, ನೈತಿಕಜೀವನ ಇತ್ಯಾದಿ ಗುಣಗಳು ಈ ಎರಡು ಪಂಥಗಳಿಗೂ ಸಮಾನವಾಗಿದ್ದವು.

ಹೀಗೆ ಧರ್ಮಜಗತ್ತಿನಲ್ಲಿ ಮೂಡಿದ ಕ್ರಾಂತಿ ಸಾಹಿತ್ಯಜಗತ್ತಿನಲ್ಲಿಯೂ ಪ್ರತಿಬಿಂಬಿಸಿದೆ. ರಾಮಾನುಜಾಚಾರ್ಯನು ತಮಿಳುನಾಡಿನಿಂದ ಬಂದವನು. ಆದ್ದರಿಂದ ಆತನು ಧರ್ಮೋಪದೇಶಕ್ಕೆ ಬಳಸಿಕೊಂಡ ಭಾಷೆ ತಮಿಳು. ಆತನ ಅನುಯಾಯಿಗಳಿಂದ ಆಗಿರಬಹುದಾದ ಸೇವೆ ತಮಿಳಿಗೆ ದೊರೆಯಿತು. ವೀರಶೈವಕ್ಕೆ ಕಂಕಣತೊಟ್ಟವನು ಕನ್ನಡಿಗ; ಆದ್ದರಿಂದ ಆತನ ಸೇವೆ ಕನ್ನಡ ಸಾಹಿತ್ಯದ ತುಷ್ಟಿಪುಷ್ಟಿಗಳಿಗೆ ಸಹಾಯಕವಾಯಿತು. ಹೀಗೆ ಹೇಳಿದಾಗ ಇವರ ಸೇವೆ ಆಯಾ ಭಾಷಾ ಸಾಹಿತ್ಯಗಳಿಗೆ ಮಾತ್ರವೇ ಪರಿಮಿತವಾಯಿತೆಂದು ಭಾವಿಸಬಾರದು. ತಮಿಳಿನಲ್ಲಿ ವೀರಶೈವ

ಧರ್ಮವೂ ಕನ್ನಡದಲ್ಲಿ ಶ್ರೀ ವೈಷ್ಣವ ಧರ್ಮವೂ ಇವೆ. ವಿಪುಲತೆಯ ದೃಷ್ಟಿಯಿಂದ ಮಾತ್ರ ಎರಡೂ ಬೇರೆಬೇರೆ ಧರ್ಮಗಳಿಗೆ ಎಡೆಗೊಟ್ಟಿವೆ. ಈಗ ಕನ್ನಡದಲ್ಲಿ ಕಾಣಿಸಿಕೊಂಡಿರುವ ಸಾಹಿತ್ಯದ ಸ್ವರೂಪವನ್ನು ಸ್ವಲ್ಪ ವಿಚಾರ ಮಾಡೋಣ.

ಕನ್ನಡ ಸಾಹಿತ್ಯದ ಸ್ವರ್ಣಯುಗಸ್ಥಾಪನಾಚಾರ್ಯನಾದ ಆದಿಕವಿ ಪಂಪ ಹತ್ತನೆಯ ಶತಮಾನದಲ್ಲಿ ಹರಿಯಬಿಟ್ಟ 'ಚಂಪೂ' ಚಕ್ರ ಹಲವು ಶತಮಾನಗಳವರೆಗೆ ಉರುಳಿ ನೂರಾರು ಹಿರಿಯ ಕಿರಿಯ ಕವಿಗಳಿಗೆ ಮಾರ್ಗದರ್ಶನ ಮಾಡಿಸಿತು. ಅದು ತೋರಿದ ಹೆದ್ದಾರಿ ಬರಬರುತ್ತಾ ಕಿರುದಾರಿಯಾಗಿ, ಕಾಲ್ದಾರಿಯಾಗಿ ಹದಿನೇಳನೆಯ ಶತಮಾನದ ಕೊನೆಗೆ ನಿಂತು ಹೋಯಿತು. ಈ ಹಾದಿಯಲ್ಲಿ ಹೊರಟ ಮೊದಲ ತಂಡದವರು ತಮ್ಮ ಅದ್ಭುತವಾದ ಪ್ರತಿಭೆ ಪಾಂಡಿತ್ಯಗಳಿಂದ ರಾಜರ ಮತ್ತು ರಾಜಾಸ್ಥಾನದವರ ಮನ್ನಣೆ ಮೆಚ್ಚುಗೆಗಳಿಗೆ ಪಾತ್ರರಾದರು. ಅವರ ಕಾವ್ಯಗಳು ಸಾಮಾನ್ಯವಾಗಿ ಸಂಸ್ಕೃತಕಾವ್ಯಗಳ ಆಧಾರದಿಂದ ಹುಟ್ಟಿದವುಗಳು. ಅವುಗಳ ವಸ್ತು, ರೀತಿಗಳೆರಡೂ ಸಂಸ್ಕೃತದ ಅನುಕರಣ. ಅಷ್ಟೇ ಅಲ್ಲ, ಅವರು ಬಳಸಿದ ಭಾಷೆಯೂ ಸಂಸ್ಕೃತಭೂಯಿಷ್ಠ. ಅನೇಕವೇಳೆ ತಾವು ಬರೆಯುತ್ತಿರುವುದು ಕನ್ನಡದಲ್ಲಿಯೆಂಬುದನ್ನೂ ಮರೆತು ಅಖಂಡ ವೃತ್ತಗಳನ್ನೆ ಸಂಸ್ಕೃತದಲ್ಲಿ ಬರೆದು ಕನ್ನಡ ಪದ್ಯಗಳ ಮಧ್ಯದಲ್ಲಿ ಸೇರಿಸಿದುದೂ ಉಂಟು. ಅವರ ಗುರಿ ರಾಜರ ಅನುಗ್ರಹ ಮತ್ತು ಪಂಡಿತರ ಮೆಚ್ಚಿಗೆಯಲ್ಲವೆ? ಅವುಗಳನ್ನು ಪಡೆದು ಅವರ ಕಾವ್ಯಗಳು ಕೃತಕೃತ್ಯವಾದವು. ಈಗ ಕೆಲವು ಕಾಲದ ಹಿಂದೆ ನಮ್ಮ ಜನರ ಪಾಂಡಿತ್ಯಕ್ಕೆ ಇಂಗ್ಲಿಷ್. ಒರಗಲ್ಲಾಗಿರಲಿಲ್ಲವೆ? ಅವರಿಗೆ, ಅವರ ಪಾಂಡಿತ್ಯಕ್ಕೆ ಜನಸಂಪರ್ಕವಿತ್ತೆ? ಇವರಂತೆಯೇ ಅಂದಿನ ಕವಿಪುಂಗವರಿಗೂ ಜನತಾಜನಾರ್ದನನಿಗೂ ಯಾವ ಸಂಬಂಧವೂ ಇರಲಿಲ್ಲ.

ಕನ್ನಡದ ಸಾಹಿತ್ಯ ಬೆಳೆದುದು ಬಹುಮಟ್ಟಿಗೆ ಧರ್ಮನಿರೂಪಣೆಯ ಸಾಧನವಾಗಿ. ಜನರಿಗೆ ಅರ್ಥವಾಗಬೇಕಾದರೆ ಜನರ ಭಾಷೆಯಲ್ಲಿಯೇ ಹೇಳಬೇಕು. ಈ ತತ್ತ್ವವನ್ನು ದೃಷ್ಟಿಯಲ್ಲಿಟ್ಟುಕೊಂಡೆ ಬೌದ್ಧರು ಸಂಸ್ಕೃತದಲ್ಲಿದ್ದ ಧರ್ಮತತ್ತ್ವಗಳನ್ನು ಅಂದಿನ ಜನರ ಭಾಷೆಯಾಗಿದ್ದ ಪಾಳಿಯಲ್ಲಿ ಪ್ರಸಾರಮಾಡಿದರು. ಬಹುಶಃ ಅವರು ಕನ್ನಡದಲ್ಲಿಯೂ ಬರೆದು ಅವು

ಖಿಲವಾಗಿರಬಹುದೇನೊ ಎಂದು ನಾವು ಈ ಗ್ರಂಥದ ಆರಂಭದಲ್ಲಿಯೇ ಸೂಚಿಸಿದ್ದೇವೆ. ಜೈನರೂ ಬೌದ್ಧರಂತೆಯೇ ತಮ್ಮ ಧರ್ಮಬೋಧೆಗೆ ಜನರ ಭಾಷೆಯಾದ ಪ್ರಾಕೃತವನ್ನು ಬಳಸಿ, ಆ ಭಾಷೆಗೆ ಧಾರ್ಮಿಕ ಭಾಷೆಯ ಘನತೆಯನ್ನು ಗಳಿಸಿಕೊಟ್ಟರು. ಅವರು ಪ್ರಾಂತಭಾಷೆಯಾದ ಕನ್ನಡದಲ್ಲಿ ಕೃತಿರಚನೆಗೆ ಕೈಹಾಕಿ ಹಲವು ಜೈನ ಪುರಾಣಗಳನ್ನು ಕನ್ನಡದಲ್ಲಿ ಬಳಕೆಗೆ ತಂದರು. ಆದರೆ ಅವು ರಾಜಾಸ್ಥಾನದ ಪಂಡಿತರ ಮೆಚ್ಚಿಗೆಗೂ ರಾಜರ ಕೃಪಾಯಾಚನೆಗೂ ಕೈನೀಡಿದವು. ಇವಲ್ಲದೆ, ಅಪ್ಪಟ ಕೃಪಾಯಾಚನೆ ಗಾಗಿಯೇ ಹುಟ್ಟಿದ ಲೌಕಿಕಕಾವ್ಯಗಳೂ ಉಂಟು. ಅವುಗಳಲ್ಲಿ ತಮ್ಮ ಆಶ್ರಯದಾತರನ್ನು ಇಂದ್ರ ಚಂದ್ರ ದೇವೇಂದ್ರನೆಂದು ಹೊಗಳುವುದು ಅನಿವಾರ್ಯವಾಗಿತ್ತು. ಅಷ್ಟೇ ಅಲ್ಲ, ಅವರು ಬಳಸುವ ಭಾಷೆಯೂ ರಾಜಾಸ್ಥಾನದ ಪೋಷಾಕಿನಂತೆ ಭವ್ಯವಾಗಿರಬೇಕಾಗಿತ್ತು. ಇವರ ಹೆಗ್ಗುರಿ ವಿಷಯ ನಿರೂಪಣೆಯಷ್ಟೆ ಪ್ರತಿಭೆಪಾಂಡಿತ್ಯಗಳ ಪ್ರದರ್ಶನವೂ ಆಗಿತ್ತು. ಇವರ ಪ್ರತಿಭೆ ಪಾಂಡಿತ್ಯಗಳಿಂದ ಮಂಡಿತಳಾದ ಕಾವ್ಯದೇವಿಯೂ ಇವರ ಆಶ್ರಯದಾತರಂತೆ ಸಿಂಹಾಸನಸ್ಥಳಾಗಿ ಕುಳಿತಿದ್ದಳು. ಜನಸಾಮಾನ್ಯರು ಇವುಗಳ ವೈಭವವನ್ನು ದೂರದಿಂದ ಕಂಡು ಭಕ್ತಿಯಿಂದ ಕೈಮುಗಿಯಬೇಕಾಗಿತ್ತೆ ಹೊರತು ಆ ವೈಭವದಲ್ಲಿ ಪಾಲುಗಾರರಾಗುವಂತಿರಲಿಲ್ಲ.

ಕನ್ನಡದಲ್ಲಿ ಸಾಹಿತ್ಯ ಸೃಷ್ಟಿಯಾಯಿತು. ಆದರೆ ಅದು ಜನತೆಯ ಸ್ವತ್ತಾಗಲಿಲ್ಲ. ಪಾಂಡಿತ್ಯ ಹೆಪ್ಪುಗಟ್ಟಿ ಕುಳಿತಿರುತ್ತಿದ್ದ ಆ ಕಾವ್ಯಗಳು ಜನರಿಗೆ 'ಸೀರಿಳಿಯದ ಗಂಟಲಲ್ಲಿ ಕಡುಬನ್ನು ತುರುಕಿದರು' ಎಂಬ ಗಾದೆಯಂತೆ ದುರವಗಾಹವಾಗಿ ಇದ್ದವು. ಇವುಗಳ ಭಾಷಾಶೈಲಿಗಳಲ್ಲಿ ಪರಿಷ್ಕರಣವಾಗಬೇಕೆಂಬ ಕೂಗು ಮೊದಲಿಂದಲೂ ಇತ್ತು. ಕನ್ನಡದಲ್ಲಿ ಉಪಲಬ್ಧವಾಗಿರುವ ಮೊಟ್ಟಮೊದಲ ಗ್ರಂಥ 'ಕವಿರಾಜಮಾರ್ಗ' ದಲ್ಲಿಯೇ ಕನ್ನಡ ಗ್ರಂಥದಲ್ಲಿ ಬಳಸಬೇಕಾದ ಸಂಸ್ಕೃತದ ವಿಚಾರದಲ್ಲಿ ಸಾಕಷ್ಟು ಚರ್ಚೆ ಕಂಡು ಬರುತ್ತದೆ. ಸಮರಸವಿಲ್ಲದ ಭಾಷಾಶೈಲಿಗಳು 'ನೆಲ್ಲು ಮೊಸರು ಕಲಸಿದಂತೆ' 'ಮುತ್ತು ಮೆಣಸು ಪೋಣಿಸಿದಂತೆ' ಎಂದು ಜರಿಯುತ್ತಾನೆ, ಆತ. ನಯಸೇನಕವಿ ಕನ್ನಡವನ್ನು ಬಳಸುವ ಕಡೆ ಸಂಸ್ಕೃತವನ್ನು ಇಡುವವನು ಕವಿಯೆ ಅಲ್ಲವೆಂದು ಹೇಳುತ್ತಾನೆ; ಹಾಗೆ ಮಾಡುವವರನ್ನು ಕುರಿತು 'ಬೆರೆಸಲ್

ತಕ್ಕುದೆ ಘೃತಮುಮಂ ತೈಲಮುಮಂ ?' ತುಪ್ಪ ಎಣ್ಣೆಗಳನ್ನು ಒಟ್ಟಿಗೆ ಬೆರೆಸು ತ್ತಾರೆಯೆ ಎಲ್ಲಿಯಾದರೂ ?—ಎಂದು ಛೀಗುಟ್ಟುತ್ತಾನೆ. ತಾನು ನುಡಿ ದಂತೆ ನಡೆದು ತನ್ನ ಕಾವ್ಯವನ್ನು ಸುಲಭವಾದ ಸರಳವಾದ ಕನ್ನಡದಲ್ಲಿ ರಚಿಸುತ್ತಾನೆ. ಈತನ ಘೋಷಣೆಯನ್ನು ಅಂಗೀಕರಿಸಿದವರಂತೆ ಬ್ರಹ್ಮಶಿವ, ವೃತ್ತವಿಲಾಸ—ಎಂಬ ವಿಡಂಬನಕಾರರೂ ತಮ್ಮ ಕಾವ್ಯಗಳನ್ನು ತಿಳಿಗನ್ನಡ ದಲ್ಲಿ ಬರೆಯುತ್ತಾರೆ. ಆದರೂ ಅವರು ಸ್ವೀಕರಿಸುವ ಛಂದಸ್ಸಿನ ಫಲವಾಗಿ ಅವರ ಕಾವ್ಯಗಳಲ್ಲಿ ಸಂಸ್ಕೃತ ಭಾಷೆಯ ಪ್ರಾಚುರ್ಯಕ್ಕೆ ಹೆಚ್ಚು ಅಪ್ರೋಹ ವಾಗಲಿಲ್ಲ. ಅವರ ಪ್ರತಿಭೆ ವಿದ್ವತ್ತುಗಳಿಗೆ ಮೂಲವಾದ ಸಂಸ್ಕೃತ ಬರುವುದು ಸಹಜವಾಗಿಯೂ ಇತ್ತು.

ಅಲಸಗಾಮಿಗಳಾದ ಸಂಪ್ರದಾಯಶೀಲರು ಕನ್ನಡ ಸಾಹಿತ್ಯದ ಸಂಸ್ಕ ರಣಕ್ಕಾಗಿ ಚಡಪಡಿಸುತ್ತಾ ಮೀನಮೇಷಗಳನ್ನು ಗುಣಿಸುತ್ತಿರುವಾಗ ಹನ್ನೆರಡನೆಯ ಶತಮಾನದಲ್ಲಿ ಕೋಲಾಹಲಕರವಾದ ಒಂದು ಕ್ರಾಂತಿಯೇ ನಡೆದುಹೋಯಿತು. ಈ ಕ್ರಾಂತಿಗೆ ನಾಂದಿಯನ್ನು ಹಾಡಿದವರು ವೀರಶೈವ ವಚನಕಾರರು. ನಿರಾಭರಣ ಸುಂದರಿಯಂತಿರುವ ಈ ವಚನವಾಙ್ಮಯ ಕನ್ನಡಕ್ಕೇ ಮೀಸಲಾದ. ಕನ್ನಡಕ್ಕೆ ಕೋಡನ್ನು ಮೂಡಿಸಿರುವ ಕನ್ನಡಿಗರ ಹಿರಿಯ ಸ್ವತ್ತು. ಈ ಜಾತಿಯ ವಾಙ್ಮಯ ಇತರ ದ್ರಾವಿಡಭಾಷೆಗಳ ಲ್ಲಾಗಲಿ ಆರ್ಯಭಾಷೆಗಳಲ್ಲಾಗಲಿ ಕಂಡುಬರುವುದಿಲ್ಲ. ಇವರ ಭಾವ ಭಾಷೆ ಗಳೆರಡೂ ಕನ್ನಡದ ನೆಲದಲ್ಲಿಯೇ ಹುಟ್ಟಿ, ಕನ್ನಡದ ವಾತಾವರಣದಲ್ಲಿಯೇ ಬೆಳೆದು ಅಪ್ಪಟ ಕನ್ನಡತನದಿಂದ ತುಂಬಿದವು.

ವಚನ ವಾಙ್ಮಯದ ಉದಯ ಧರ್ಮಜೀವನ ಮೂಲವಾದುದು. ಅದುವರೆಗೆ ಲೌಕಿಕಕಾವ್ಯಗಳಂತೆ ಧಾರ್ಮಿಕಕಾವ್ಯಗಳ ಉಗಮಕ್ಕೂ ರಾಜಾಸ್ಥಾನವೇ ಮೂಲವಾಗಿತ್ತು. ರಾಜರಿಂದ ದೊರೆಯುತ್ತಿದ್ದ ಪ್ರೋತ್ಸಾಹ, ಒತ್ತಾಸೆ, ಸಹಾಯಗಳೇ ಇದಕ್ಕೆ ಮುಖ್ಯಕಾರಣವಾಗಿದ್ದಿರಬೇಕು. ರಾಜರ ಬೆಂಬಲವನ್ನು ಪಡೆದ ಧರ್ಮ ಕತ್ತಿಯ ಮೊನೆಯಿಂದಲೊ, ಪ್ರಸಾದದ ಪ್ರಲೋಭನೆಯಿಂದಲೊ ತನ್ನ ಗುರಿಯನ್ನು—ಜನರ ಮತಾಂತರವನ್ನು—ಸಾಧಿಸುತ್ತಿತ್ತು. ' ಯುಗ ಯುಗಗಳ್ ಎರ್ದೆಗೆ, ಒರ್ದಿನಂ ಗದೆಗೆ '—ಜನರ ಮನಃ ಪರಿವರ್ತನೆಗೆ ಬೋಧನೆಯಿಂದ ಯುಗಗಳಷ್ಟು ದೀರ್ಘಕಾಲಬೇಕು ;

ಶಕ್ತಿ ಪ್ರದರ್ಶನದಿಂದ ಅದು ಒಂದೇ ದಿನದಲ್ಲಿ ನಡೆಯುತ್ತದೆ—ಎಂಬ ಭೀಮ ತತ್ವವನ್ನು ಅನುಸರಿಸುತ್ತಿದ್ದ ಕಾಲವದು. ನಿರಂಕುಶರಾದ ರಾಜರು ಆಳುತ್ತಿರುವಾಗ ರಾಜಕೀಯ ಅಧಿಕಾರದೊಡನೆ ಧಾರ್ಮಿಕಧಾರೆಯೂ ಮೇಲಿನಿಂದ ಕೆಳಗಿಳಿದು ಬರುತ್ತಿತ್ತು. ಹನ್ನೆರಡನೆಯ ಶತಮಾನದ ವೇಳೆಗೆ ನಾಡಿನ ರಾಜಕೀಯ ಸ್ಥಿತಿ ಹದಗೆಟ್ಟು, ರಾಜರು ಪರಸ್ಪರ ಕಿತ್ತಾಡುತ್ತಲೊ, ಸ್ವಾರ್ಥ ಸಾಧನೆಯಲ್ಲಿ ಆಸಕ್ತರಾಗಿಯೋ, ದೌರ್ಬಲ್ಯದ ಕುರುಹಾದ ಭೋಗವಿಲಾಸಗಳಲ್ಲಿ ಮಗ್ನರಾಗಿಯೋ ಇದ್ದಾಗ, ಧರ್ಮ ಅವರ ಕೈತಪ್ಪಿ ಸ್ವಾತಂತ್ರ್ಯದ ಕಹಳೆಯನ್ನು ಊದಿತೆಂದು ತೋರುತ್ತದೆ. ರಾಜಕೀಯ ಅನಿಶ್ಚಯತೆಯಲ್ಲಿ ಜನರು ಪಡುತ್ತಿದ್ದ ಕಷ್ಟಕಾರ್ಪಣ್ಯಗಳು ಒಂದು ಕಡೆ, ಕುರುಡನ ಕೈಹಿಡಿದು ಹೋಗುವ ಕುರುಡರಂತೆ ಡಾಂಭಿಕ ಆಚಾರಗಳ ಸಂಪ್ರದಾಯಶರಣರನ್ನು ಮೂಕಪ್ರಾಣಿಗಳಂತೆ ಅನುಸರಿಸುತ್ತಿರುವ ಜನಜಂಗುಳಿ ಮತ್ತೊಂದು ಕಡೆ, ದೈವಧರ್ಮಗಳ ಹೆಸರಿನಲ್ಲಿ ಸಮಾಜವನ್ನು ಶೋಷಿಸಿ ಸ್ವಾರ್ಥಸಾಧನೆಯನ್ನು ಮಾಡಿಕೊಳ್ಳುವ ಧರ್ಮನಿಯಂತ್ರಣ ಕರ್ತೃಗಳ ತಂಡ ಮಗುದೊಂದೆಡೆ—ಸಮಾಜದ ಈ ದಾರುಣ ದುಸ್ಥಿತಿಯನ್ನು ಕಂಡು ವಿಚಾರಪರರಾದ ಸಜ್ಜನರ ಮನಸ್ಸು ಕರಗಿತು. ಸಮಾನ ಸ್ವಾತಂತ್ರ್ಯದ ತಳಹದಿಯ ಮೇಲೆ ನೂತನ ಸಮಾಜವೊಂದನ್ನು ಸೃಷ್ಟಿಸಲು ಅವರು ಕೈಹಾಕಿದರು. ಅವರೇ ವಚನಕಾರರು. ಇಂದು ನಾವು ಸಮತಾವಾದವೆಂದು ಯಾವುದನ್ನು ಸಂಭಾವಿಸುತ್ತಿದ್ದೇವೆಯೊ ಅದನ್ನು ಈಗ ಸಹಸ್ರ ವರ್ಷಗಳ ಕೆಳಗೇ ಸಾರಿದ ಕೀರ್ತಿ ವಚನಕಾರರಿಗೆ ಸಲ್ಲಬೇಕು.

ವಚನವೆಂದರೆ ಮಾತು ಎಂದರ್ಥ. ನಾವು ಆಡುವ ಮಾತು ಗದ್ಯರೂಪವಾದುದು. ಆದ್ದರಿಂದ ಚಂಪೂಕಾವ್ಯಗಳಲ್ಲಿ ಅಲ್ಲಲ್ಲಿ ಬರುತ್ತಿದ್ದ ಗದ್ಯವನ್ನೂ ವಚನವೆಂದೇ ಕರೆಯುತ್ತಿದ್ದರು. ಗದ್ಯರಚನೆಗೆಲ್ಲಾ ಇದೇ ಹೆಸರಿತ್ತೆಂದು ತೋರುತ್ತದೆ. ಶಿವಶರಣರ ಬೋಧನೆಯು ಗದ್ಯರೂಪದಲ್ಲಿ ಇದ್ದುದರಿಂದ ಅದಕ್ಕೆ ವಚನವೆಂಬ ನಾಮಕರಣವಾಗಿರಬೇಕು. ಆದರೆ ಇಂದು ಶಿವಶರಣರ 'ವಚನ' ಎಂಬ ಪದವನ್ನು ಒಂದು ವಿಶೇಷಾರ್ಥದಲ್ಲಿ ಬಳಸುತ್ತಿದ್ದೇವೆ. ವಚನವೆಂಬುದು ಒಂದು ಅಧ್ಯಾತ್ಮಶಾಸ್ತ್ರ. ಇದಕ್ಕೆ ಷಟ್‌ಸ್ಥಲ ಶಾಸ್ತ್ರವೆಂದೂ ಹೆಸರಿದೆ. ನಮ್ಮ ಅಧ್ಯಾತ್ಮ ಶಾಸ್ತ್ರಕ್ಕೆಲ್ಲಾ ಸಂಸ್ಕೃತವೇ

ಮಾತೃಸ್ಥಾನ. ಅದು ಗೀರ್ವಾಣಭಾಷೆ. ಆ ದೇವಭಾಷೆಯೆ ನಮ್ಮ ಜ್ಞಾನ ಭಂಡಾರ. ಸುಸಂಸ್ಕೃತವಾದ ಆ ಭಾಷೆಯಿಂದಲೇ ನಮ್ಮ ಸಂಸ್ಕೃತಿ ಗುರು-ಶಿಷ್ಯ ಪರಂಪರೆಯಲ್ಲಿ ಹರಿದು ಬಂದಿದೆ. ಆದರೆ ಈ ಸೌಲಭ್ಯ ಯಾವುದೊ ಒಂದು ವಿಶಿಷ್ಟವರ್ಗಕ್ಕೆ ಮೀಸಲಾಗಿತ್ತು. ಜನಸಾಮಾನ್ಯರಿಗೆ ಇದು ಮೊಲದ ಕೋಡಾಗಿತ್ತು. ಇದನ್ನು ನಿವಾರಿಸಿ, ಜನಸಾಮಾನ್ಯರಲ್ಲಿ ಜ್ಞಾನ ಪ್ರಸಾರಮಾಡಲು ಹೊರಟರು ಬೌದ್ಧರು. ಜೈನರು. ಆದರೆ ನಿಜವಾಗಿಯೂ ಅದನ್ನು ಸಾಧಿಸಿದವರು ವಚನಕಾರರು.

ಭರತಖಂಡದ ಆಧ್ಯಾತ್ಮಜ್ಞಾನಕ್ಕೆ ವೇದಗಳು ಉಗಮಸ್ಥಾನ. ವೇದಗಳ ಆಧಾರದಿಂದಲೇ ಮೂಡಿಬಂದವು ಉಪನಿಷತ್ತುಗಳು. ಆದರೂ ವೇದೋಕ್ತವಾದ ಯಜ್ಞಯಾಗಾದಿ ಕರ್ಮಗಳಿಗಿಂತಲೂ ಜ್ಞಾನಮಾರ್ಗಕ್ಕೆ ಇಲ್ಲಿ ಪ್ರಾಮುಖ್ಯತೆ ಹೆಚ್ಚು. ಉಪನಿಷತ್ತುಗಳಿಂದ ಮುಂದಿನ ಹೆಜ್ಜೆ ಆಗಮಗಳು. ಇಲ್ಲಿ ತತ್ವ ಪ್ರತಿಪಾದನೆಗಿಂತ ಉಪಾಸನಾ ಕ್ರಮಕ್ಕೆ ಹೆಚ್ಚು ಪುರಸ್ಕಾರ. ಈ ಆಗಮಗಳಲ್ಲಿ ಎರಡು ವಿಧ—ದಕ್ಷಿಣಾಚಾರ, ವಾಮಾಚಾರ ಎಂದು. ಮೊದಲದು ವೇದವಿಹಿತ, ಎರಡನೆಯದು ಅವೈದಿಕ. ವೈದಿಕವಾದ ದಕ್ಷಿಣಾಚಾರವನ್ನು ಸ್ವೀಕರಿಸುವ ಇಪ್ಪತ್ತೆಂಟು ಶೈವಾಗಮಗಳು ವೀರಶೈವ ಧರ್ಮಕ್ಕೆ ಆಧಾರ. ಈ ಆಗಮಗಳು ಪರಾತ್ಪರ ಸಚ್ಚಿದಾನಂದ ಸ್ವರೂಪಿಯಾದ ಶಿವನನ್ನು ಕುರಿತ ಜ್ಞಾನವನ್ನು, ಶಿವಾದ್ವೈತವನ್ನು ಬೋಧಿಸುತ್ತವೆ. ಷಟ್‌ಸ್ಥಲ ಸಿದ್ಧಾಂತಕ್ಕೂ ಇವೇ ಮೂಲ. ವಚನಕಾರರು ಆಗಮೋಕ್ತವಾದ ಶಿವಾದ್ವೈತವನ್ನು ಸಾರಹೊರಟವರು. ಆದ್ದರಿಂದಲೇ ವಚನ ವಾಙ್ಮಯವನ್ನು 'ಕನ್ನಡದ ಶೈವಾಗಮ'ಗಳೆಂದು ಕರೆದು ಗೌರವಿಸಲಾಗಿದೆ.

ವಚನಕಾರರಿಗೆ ಆಗಮಗಳು ಆಧಾರ ಗ್ರಂಥಗಳಾದರೂ ವಚನಗಳು ಆಗಮಗಳ ಭಾಷಾಂತರವೇನೂ ಅಲ್ಲ. ಈ ಬಗೆಯಾದ ವಾಙ್ಮಯಕ್ಕೆ ವರ್ಚಸ್ಸು ಬಂದುದು ಬಸವಣ್ಣನಿಂದ. ಆದರೆ ಅದಕ್ಕೂ ಪೂರ್ವದಲ್ಲಿಯೇ ವಚನವಾಙ್ಮಯವಿದ್ದುದು ನಿರ್ವಿವಾದ. ನಮಗೆ ದೊರೆಯುವ ಮೊಟ್ಟ ಮೊದಲ ವಚನಕಾರ ದೇವರ ದಾಸಿಮಯ್ಯ. ಆತನ ವಚನಗಳನ್ನು ನೋಡಿದರೆ, ಆತನಿಗಿಂತಲೂ ಮೊದಲೇ ಇಂತಹ ವಾಙ್ಮಯವಿತ್ತೆಂದು ಊಹಿಸುವುದಕ್ಕೆ ಅವಕಾಶವಿದೆ. ವೀರಶೈವರಲ್ಲಿ, ಜೈನರ ತ್ರಿಷಷ್ಟಿಶಲಾಕಾ ಪುರುಷ

ರಂತೆ, ಅರವತ್ತುಮೂವರು ಪುರಾತನರು ಪ್ರಸಿದ್ಧರಾಗಿದ್ದಾರೆ. ಇವರೆಲ್ಲರೂ ಸಚ್ಚಾರಿತ್ರರಾದ ಸಜ್ಜನರು, ನಿಷ್ಠರಾದ ಉಜ್ವಲ ಶಿವಭಕ್ತರು, ಪವಾಡ ಪುರುಷರು. ಈ ಮಹಾನುಭಾವರ ನಡೆ ನುಡಿಗಳೇ ವಚನಗಳಿಗೆ ಆಧಾರ ವೆಂದು ತೋರುತ್ತದೆ. ಆದ್ದರಿಂದ ವಚನಗಳು ಬರಿಯ ಪುರಾಣದ ಬದನೆ ಕಾಯಿಯಾಗಿರದೆ ಜೀವಂತವಾದ ಆಚರಣೆಯ ಪಾವನ ಗಂಗಾಸ್ರೋತ ವೆಂದು ಅರ್ಥವಾಗುತ್ತದೆ. ಈ ಪುರಾತನರ ಹೆಸರುಗಳನ್ನು ನೋಡಿದರೆ ಅವರು ತಮಿಳರೆಂಬ ಭಾವನೆ ಬರುತ್ತದೆ. ಅವರ ಕಾಲ ಅಜ್ಞಾತ, ಅನಿರ್ದಿಷ್ಟ.

ವಚನಕಾರರ ಗುರಿ ಜನಜಾಗ್ರತಿ. ಆತ್ಮೋದ್ಧಾರದ ಹೆದ್ದಾರಿ ಸರ್ವರ ಸ್ವತ್ತಾಗಬೇಕೆಂಬುದು ಅವರ ಬಯಕೆ. ಆಬಾಲವೃದ್ಧರಾದ ಬಯಸುವವ ರೆಲ್ಲರಿಗೂ ಅದು ಅರ್ಥವಾಗಬೇಕು, ಅನುಸರಣ ಯೋಗ್ಯವಾಗಬೇಕು, ಅನು ಸರಣ ಸಾಧ್ಯವಾಗಬೇಕು. ಅಷ್ಟೇ ಹೊರತು ಆ ಉದಾರಚೇತನರು ಯಾವ ಬಹುಮಾನವನ್ನೂ ಬೇಡುವವರಾಗಿರಲಿಲ್ಲ, ಯಾವ ಪಾಂಡಿತ್ಯ ಪ್ರದರ್ಶನ ವನ್ನೂ ಮಾಡುವವರಾಗಿರಲಿಲ್ಲ, ಯಾವ ಕೀರ್ತಿಕಾಮನೆಯಿಂದಲೂ ಕಾರ್ಯ ರಂಗಕ್ಕೆ ಇಳಿದವರಾಗಿರಲಿಲ್ಲ. ಇವುಗಳನ್ನು ಬರೆದವರಲ್ಲಿ ಅನೇಕರು ತಮ್ಮ ಹೆಸರನ್ನೇ ಹೇಳಿಕೊಂಡಿಲ್ಲ. ಕೊನೆಗೆ ಇವರು ತಮ್ಮ ವಚನಗಳನ್ನು ತಾವೇ ಬರೆದಿಟ್ಟಿದ್ದರೋ ಅಥವಾ ಅವುಗಳನ್ನು ಕೇಳಿದವರು ಆ ವಚನಾಮೃತದ ಅಮೌಲ್ಯ ಮೌಲ್ಯ ಕಳೆದುಹೋಗಬಾರದೆಂದು ಬರೆದಿಟ್ಟರೊ ! ವಚನಕಾರ ರಲ್ಲಿ ಪಂಡಿತರಾದವರೂ ಇದ್ದಾರೆ, ಅಪಂಡಿತರಾದವರೂ ಇದ್ದಾರೆ. ಪಂಡಿತ ರಾದವರೂ ಪಾಮರರ ಮಾತಿನಲ್ಲಿಯೇ ಜ್ಞಾನಬೋಧೆ ಮಾಡಿದ್ದಾರೆ. ಇಲ್ಲಿ ಪಾಂಡಿತ್ಯಕ್ಕಿಲ್ಲ ಪುರಸ್ಕಾರ; ಸಾಧುಸಂತರ ಅನುಭವಕ್ಕೆ. ವೇದಾಗಮಗಳು ಸುರಿಸುತ್ತಿರುವ ನಿತ್ಯಸತ್ಯದ ದೇವಗಂಗೆ ಅನುಭಾವಿಗಳ ಹೃದಯದಲ್ಲಿ ತಂಗಿ, ಅಲ್ಲಿಂದ ಪುಟಿದು ಬುಗ್ಗೆಬುಗ್ಗೆಯಾಗಿ ಹರಿದು ಬಂದುದೇ ವಚನವಾಙ್ಮಯ. ತಿಳಿಗನ್ನಡದ ತೊಡಿಗೆಯುಟ್ಟು ಪಂಡಿತ ಪಾಮರರಿಬ್ಬರನ್ನೂ ಏಕಕಾಲ ದಲ್ಲಿಯೇ ಮೆಚ್ಚಿಸಬಲ್ಲ, ಮನಸ್ಸನ್ನು ಸೂರೆಗೊಳ್ಳಬಲ್ಲ ಈ ವಚನಗಳು ಜನರ ಉದ್ಧಾರಕ್ಕೆ ರಾಜಮಾರ್ಗವನ್ನು ಕಲ್ಪಿಸಿಕೊಟ್ಟವೆ.

ಅಧ್ಯಾತ್ಮ, ಧರ್ಮ, ನೀತಿ— ಇವುಗಳ ನಿರೂಪಣೆಯೇ ವಚನಗಳ

ವಸ್ತು. ಆದ್ದರಿಂದಲೇ ಶತಶತಮಾನಗಳು ಉರುಳಿಹೋದರೂ ಇವು ಅಜರಾಮರವಾಗಿ ಉಳಿದುಕೊಂಡು ಬಂದಿವೆ. ಮಾನವನನ್ನು ದೇವನನ್ನಾಗಿ ಮಾಡಬಲ್ಲ ಮಹೋನ್ನತ ಗುಣವೇ ಅವುಗಳ ಅಮರತೆಗೆ ಕಾರಣ. ಧರ್ಮವೆ ಉಸಿರಾದ ಈ ವಾಙ್ಮಯ ವೀರಶೈವ ಪಂಥದ ಆಧಾರಗ್ರಂಥ. ಯಾವುದೋ ರಸನಿಮಿಷದಲ್ಲಿ ಆದ ಅನುಭವದಿಂದ ತನಗೆ ತಾನೆ ಶರಣರ ಬಾಯಿಂದ ಹೊರಹೊಮ್ಮಿ ಬಂದ ಈ ಅನುಭವಾಮೃತ ಸಾರವತ್ತಾದ, ಸೂತ್ರಪ್ರಾಯವಾದ, ಅರ್ಥಗರ್ಭಿತವಾದ ವಚನರೂಪದಲ್ಲಿ ಮೂಡಿಬಂದಿತು. ಚಿಲುಮೆಯಲ್ಲಿ ನೀರು ಉಕ್ಕಿಬಂದಂತೆ ಸ್ವಾಭಾವಿಕವಾಗಿ, ಸ್ವಾನುಭವದಿಂದ ಉಕ್ಕಿಬಂದ ಈ ಆತ್ಮವಾಣಿಯನ್ನು ಅರ್ಥಮಾಡಿಕೊಳ್ಳುವುದು ಕಷ್ಟವೇನೂ ಅಲ್ಲ. ಯಾವುದೋ ಒಂದು ಅಮೋಘವಾದ ಆಧ್ಯಾತ್ಮಿಕತತ್ವ ನಾಲ್ಕಾರು ಪುಟ್ಟ ಪುಟ್ಟ ವಾಕ್ಯಗಳಲ್ಲಿ ಮೈದೋರುತ್ತದೆ. ಅನೇಕ ವೇಳೆ ಪ್ರಾಸಬದ್ಧವಾಗಿದ್ದು ಗಾದೆಯಂತೆ, ಸರಳವಾದರೂ ಸಾರವತ್ತಾದ ತಿಳಿಗನ್ನಡದಲ್ಲಿ ಮಿಂಚುತ್ತದೆ. ಮಹತ್ತಾದ ತತ್ವಗಳನ್ನು ಸುಲಭವಾದ ನುಡಿಗಳಲ್ಲಿ ನಿರೂಪಿಸುವ ಈ ವಚನಗಳನ್ನು 'ಕನ್ನಡದ ಉಪನಿಷತ್ತು'ಗಳೆಂದು ಕರೆದಿರುವುದು ಸಾರ್ಥಕವಾಗಿದೆ.

ವಚನಗಳನ್ನು ಬರೆದವರ ಸಂಖ್ಯೆ ಅಗಣಿತ. ಅದರಿಂದ ಪ್ರಯೋಜನ ಪಡೆದವರ ಸಂಖ್ಯೆ ಅದಕ್ಕೂ ಹೆಚ್ಚಿನದು. ಸರ್ವಸಮತೆಯನ್ನು ಸಾರಿದ ವೀರಶೈವ ಜಾತಿಮತಗಳ ಏರುಪೇರುಗಳನ್ನೂ ಗಂಡು ಹೆಣ್ಣೆಂಬ ಓರೆಕೋರೆಗಳನ್ನೂ ಒರಸಿಹಾಕಿ, ಯೋಗ್ಯತೆಯಿದ್ದವರೆಲ್ಲರೂ ಸ್ವಸ್ವರೂಪ ಜ್ಞಾನವನ್ನು ಪಡೆಯಲು ಅನುವುಮಾಡಿಕೊಟ್ಟಿತು. ಆದ್ದರಿಂದ ಎಲ್ಲ ಜಾತಿ, ಕುಲ, ಪಂಥದವರು ಇಲ್ಲಿ ಕಾಣಬರುತ್ತಾರೆ. ಸ್ತ್ರೀ, ಶೂದ್ರರು ಅಧ್ಯಾತ್ಮಜ್ಞಾನಕ್ಕೆ ಅನರ್ಹರೆಂಬ ಸಂಕುಚಿತ ಭಾವನೆ ಮಾಯವಾಯಿತು. ಅವರು ಅಧ್ಯಾತ್ಮಜ್ಞಾನಕ್ಕೆ ಅರ್ಹರಾದುದು ಮಾತ್ರವೇ ಅಲ್ಲ, ಅವುಗಳನ್ನು ಬೋಧಿಸುವ ಅರ್ಹತೆಯನ್ನೂ ಪಡೆದರು. ಕಾಯಕವೇ ಕೈಲಾಸ; ಈ ಕಾಯಕದಲ್ಲಿ ಮೇಲುಕೀಳುಗಳಿಲ್ಲ. ಕಟ್ಟಿಗೆ ಮಾರುವವನು, ಹಗ್ಗ ಹೊಸೆಯುವವನು, ಚಪ್ಪಲಿ ಹೊಲಿಯುವವನು, ಅಗಸ, ಬೆಸ್ತ, ಬೇಡ, ಕುಂಬಾರ—ಎಲ್ಲರೂ ಒಂದೇ. ಕುಲಕ್ಕಿಂತ ಶೀಲಮುಖ್ಯ, ನುಡಿಗಿಂತ ನಡೆ ಮುಖ್ಯ. ಶೀಲಶುದ್ಧರಾದವರು ಆಳವಾದ ಭಕ್ತಿಯಿಂದ ಅನುಭಾವಿಗಳಾಗಿ, ತಮಗೆ ಸ್ಫುರಿಸಿದ ಸತ್ಯವನ್ನು ವಚನ

ರೂಪದಲ್ಲಿ ಹೊರಗಿಟ್ಟರು. ಛಂದಸ್ಸಿನ ನಿಯಮವಿಲ್ಲದ, ಭಾಷಾಪ್ರೌಢಿಮೆಯ ಆಡಂಬರವಿಲ್ಲದ ಈ ವಚನಗಳನ್ನು ರಚಿಸುವುದು ಅಷ್ಟೇನೂ ಕಷ್ಟವಾಗಿರಲಿಲ್ಲ. ಆದ್ದರಿಂದ ಹೆಚ್ಚು ವಿದ್ಯಾವಂತರಲ್ಲದವರೂ, ಅನೇಕ ಸ್ತ್ರೀಯರೂ ವಚನಕಾರರಾದರು. ಈ ವಚನಗಳಲ್ಲಿ ಎಷ್ಟೋ ಭಾಗ ಈಗ ಲುಪ್ತವಾಗಿ ಹೋಗಿರಬೇಕು. ಅದರಲ್ಲಿ ಸ್ವಲ್ಪ ಭಾಗ ಹಾಗೆ ಹೋಗುವುದಕ್ಕೆ ಅರ್ಹವಾಗಿಯೂ ಇದ್ದಿರಬೇಕು. ಈಗ ಉಳಿದುಕೊಂಡು ಬಂದಿರುವ ವಚನವಾಙ್ಮಯವೆಲ್ಲವೂ ಬೆಳಕಿಗೆ ಬಂದಿದೆಯೆಂದೂ ಹೇಳುವಂತಿಲ್ಲ. ಆದರೂ ಈಗ ಬೆಳಕಿಗೆ ಬಂದಿರುವಷ್ಟರಿಂದಲೆ ಕನ್ನಡಭಾಷೆ, ಕನ್ನಡ ಸಾಹಿತ್ಯ ಹೆಮ್ಮೆಪಟ್ಟುಕೊಳ್ಳುವಂತಿದೆ.

ವಚನವಾಙ್ಮಯವು ಧರ್ಮಗ್ರಂಥವೊ. ಸಾಹಿತ್ಯವೊ? ಈ ಪ್ರಶ್ನೆಗೆ ನಮ್ಮ ಉತ್ತರ ಇಷ್ಟೆ—ವೇದಗಳು ಉಪನಿಷತ್ತುಗಳು ಧರ್ಮಗ್ರಂಥಗಳೋ ಸಾಹಿತ್ಯವೊ? ಇದಕ್ಕೆ ಕೊಡುವ ಉತ್ತರವೇ ವಚನವಾಙ್ಮಯಕ್ಕೂ ಅನ್ವಯಿಸುತ್ತದೆ. ವಚನಕಾರರು ಸಾಹಿತಿಗಳಲ್ಲ. ಸಾಹಿತ್ಯ ನಿರ್ಮಾಣಾಕಾಂಕ್ಷಿಗಳೂ ಅಲ್ಲ. ಅವರು ಸತ್ಯೋಪಾಸಕರಾದ ಸಾಧಕರು. ಆ ಶರಣಜೀವಿಗಳು ತಮಗಾದ ಅನುಭವವನ್ನು, ಉಳಿದವರ ಬಾಳಿಗೆ ಬೆಳಕಾಗಲೆಂಬ ಉದಾರ ಬುದ್ಧಿಯಿಂದ ಹೇಳಿದರು. ಇವು ಬಹುಮಟ್ಟಿಗೆ ಉಪದೇಶಾತ್ಮಕವಾದುವು, ಪ್ರಾರ್ಥನಾತ್ಮಕವಾದುವು. ಹಿಂದೆಯೇ ತಿಳಿಸಿರುವಂತೆ ಆಧ್ಯಾತ್ಮ. ಧರ್ಮ, ನೀತಿ—ಇವುಗಳ ನಿರೂಪಣೆಯೇ ಇವುಗಳ ತಿರುಳು. ಬೇರೆಬೇರೆ ವಚನಕಾರರ ಅನುಭವ ಬೇರೆ ಬೇರೆಯಾದರೂ ವಿಚಾರಸರಣಿ ಒಂದೇ—ಷಟ್ಸ್ಥಲ ಶಾಸ್ತ್ರ ನಿರೂಪಣೆ. ಸದಾಚಾರ ಸದ್ಭಕ್ತಿಗಳ ನಿರೂಪಣೆ. ಆದ್ದರಿಂದ ವಚನವಾಙ್ಮಯ ನಿರ್ವಿವಾದವಾಗಿಯೂ ಶಾಸ್ತ್ರಗ್ರಂಥ. ಅದು ವಚನಶಾಸ್ತ್ರ.

ವಚನಶಾಸ್ತ್ರ ಸಾಹಿತ್ಯದೃಷ್ಟಿಯಿಂದಲೂ ಸಾಧಾರಣವಾದುದೇನೂ ಅಲ್ಲ. ಇವು ಸರಳ, ಸುಲಭ, ಸ್ಪಷ್ಟ. ಕಿರಿದರಲ್ಲಿ ಹಿರಿದನ್ನು ನೋಡಬೇಕಾದರೆ ವಚನಗಳಿಗೆ ಹೋಗಬೇಕು. ಅವುಗಳ ಮಾತು ಎಷ್ಟು ಕಿರಿದೊ ಅವುಗಳಿಂದ ಮೂಡುವ ಬೆಳಕು ಅಷ್ಟು ಹಿರಿದು. ನಿರಾಡಂಬರವಾದ ಅಲ್ಲಿನ ನುಡಿಯು ಕಿಡಿ ಅಜ್ಞಾನದ ಕತ್ತಲೆಯನ್ನು ಹೇಳಹೆಸರಿಲ್ಲದಂತೆ ಮಾಡುವಷ್ಟು ಉಜ್ವಲವಾದುದು. ಹೃದಯದಿಂದ ನೇರವಾಗಿ ಹೊರಟ ಇಲ್ಲಿನ ಮಾತು ನೇರವಾಗಿ

ಹೃದಯವನ್ನು ಸೇರಿ, ಅಲ್ಲಿ ಚಿರಶಾಶ್ವತವಾದ ಒಂದು ಮುದ್ರೆಯನ್ನು ಒತ್ತಬಹುದು. ಒಮ್ಮೊಮ್ಮೆ ಈ ವಚನಗಳನ್ನು ಪಾದಗಳಾಗಿ ವಿಂಗಡಿಸುವಷ್ಟು ಛಂದೋಬದ್ಧವಾಗಿರಬಹುದು; ಕ್ವಚಿತ್ತಾಗಿ ಅಲಂಕಾರವೂ ಕಂಡುಬರಬಹುದು; ಪ್ರಾಸ, ತಾಳ, ಲಯಗಳಿಗೂ ಅಲ್ಲಲ್ಲಿ ಅವಕಾಶವಿರಬಹುದು; ಶ್ರೇಷ್ಠ ಕವಿಯ ಕಲ್ಪನಾಸಾಮರ್ಥ್ಯ ವರ್ಣನಾವೈಖರಿಗಳೂ ಭಾವಲಹರಿಯೂ ಅಲ್ಲಲ್ಲಿ ಕಾಣಬಹುದು; ಇಷ್ಟೆಲ್ಲಾ ಇದ್ದರೂ ಇವು ಪದ್ಯಗಳು ಅಲ್ಲ. ಕೆಲವು ವಚನಗಳನ್ನು ಹಿಂದೆ ಹಾಡುತ್ತಿದ್ದರೆಂಬುದಕ್ಕೆ ಸಾಕ್ಷಿಯಿದೆ; ಇಂದೂ ಹಲವನ್ನು ಹಾಡುತ್ತಾರೆ. ಅವು ಹಾಡುವುದಕ್ಕೆ ತಕ್ಕಂತೆ ಅಳವಡುತ್ತವೆ. ಆದರೂ ಅವು ಹಾಡುಗಳಲ್ಲ, ಪದ್ಯಗಳಲ್ಲ, ಗದ್ಯವೇ. ಕಾವ್ಯಮಯವಾದ ಗದ್ಯ.

ವಚನಶಾಸ್ತ್ರ ಗದ್ಯರೂಪದಲ್ಲಿರುವುದರಿಂದ ಅತಿಶಯವಾದ ಮಹತ್ತಿಗೆ ಅರ್ಹವಾಗಿದೆ. ಮಹೋನ್ನತ ಭಾವಗಳನ್ನು ಸುಲಭವಾದ ಮಾತುಗಳಲ್ಲಿ ಅಭಿವ್ಯಕ್ತಗೊಳಿಸಿದ ಈ ಗದ್ಯ ‘ಗದ್ಯಂ ಕವೀನಾಂ ನಿಕಷಂ ವದನ್ತಿ’ ಎಂಬ ಸೂಕ್ತಿಗೆ ಸಾರ್ಥಕತೆಯನ್ನು ಒದಗಿಸಿದೆ. ಸರಳ, ಸಂಗ್ರಹ, ಸಾರವತ್ತಾದ ಸ್ಫೂರ್ತಿಯುತವಾದ ಭಾಷೆಯಲ್ಲಿ ಶರಣರ ಸ್ವಾನುಭವಗಳನ್ನು ಹೊತ್ತುನಿಂತಿರುವ ಈ ಗದ್ಯ ಕನ್ನಡಕ್ಕೆ ಮಾತ್ರವೇ ಅಲ್ಲ, ಕನ್ನಡಿಗರಿಗೂ ಕೋಡು ಮೂಡಿಸಿವೆ. ಕನ್ನಡಭಾಷೆ ಮಹತ್ತಾದ ಭಾವಗಳನ್ನು ವ್ಯಕ್ತಪಡಿಸಬಲ್ಲುದೆಂಬ ವಿಚಾರದಲ್ಲಿ ಸಂದೇಹ ಪಡುವ ಕೆಲವರು ಈ ಇಪ್ಪತ್ತನೆಯ ಶತಮಾನದಲ್ಲಿಯೂ ನಮ್ಮಲ್ಲಿ ಇಲ್ಲದೆಹೋಗಿಲ್ಲ. ಕನ್ನಡಕ್ಕೆ ಆ ಶಕ್ತಿಯಿದೆ. ಮಹೋನ್ನತ ಭಾವಗಳನ್ನು ತಿಳಿಗನ್ನಡದಲ್ಲಿ ಹೇಳುವುದು ಸಾಧ್ಯ. ಆ ಸತ್ವ ಅದರಲ್ಲಿದೆ ಎಂಬುದನ್ನು ಕನ್ನಡಿಗರಾದ ವಚನಕಾರರು ಪ್ರಯೋಗಮಾಡಿ ತೋರಿಸಿಹೋಗಿದ್ದಾರೆ. ‘ತನ್ನ ತಾನರಿವರೆ ತನ್ನರಿವೇ ಗುರು’ ಸಂದೇಹವಾದಿಗಳು ಈ ವಚನಭಾಗವನ್ನು ಜಪಮಾಡಲಿ.

ನಮಗೀಗ ದೊರೆತಿರುವವರಲ್ಲಿ **ದೇವರ ದಾಸಿಮಯ್ಯನೇ** ಮೊಟ್ಟಮೊದಲ ವಚನಕಾರ. ಈತ ಚಾಲುಕ್ಯ ಜಯಸಿಂಹ (1015–1042)ನ ಕಾಲದಲ್ಲಿ ಇದ್ದವನು. ಈತನ ನೂರೈವತ್ತು ವಚನಗಳು ದೊರೆತಿವೆ. ಇವುಗಳ ಪ್ರಸಾದಗುಣ ಸ್ತೋತ್ರಾರ್ಹವಾದುದು. ಭಗವಂತನು ಜಗದ್ಭರಿತ

ನೆಂಬುದನ್ನು ಬೋಧಿಸ ಹೊರಟ ದಾಸಿಮಯ್ಯ ‘ ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ವಾಯು ನಿಮ್ಮ ದಾನ, ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ರಾಮನಾಥಾ ?’ ಎಂದು ಹೇಳುತ್ತಾನೆ. ಪರಮಾತ್ಮ ಸಾಧನೆಯಲ್ಲಿರುವ ಈತನಿಗೆ ಭೋಗಭಾಗ್ಯಗಳಾವುದೂ ಬೇಡ. ‘ ಕರಿಯನಿತ್ತೊಡೊಲ್ಲೆ, ಸಿರಿಯನಿತ್ತೊಡೊಲ್ಲೆ, ಹಿರಿದಪ್ಪ ರಾಜ್ಯವನಿತ್ತೊಡೊಲ್ಲೆ, ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆಇತ್ತಡೆ, ನಿನ್ನನಿತ್ತೆ ಕಾಣಾ ರಾಮನಾಥಾ’—ನನಗೆ ಆನೆಬೇಡ, ಐಶ್ವರ್ಯಬೇಡ ರಾಜ್ಯವೈಭವವೂ ಬೇಡ. ಶಿವಶರಣರ ಧರ್ಮವಾಕ್ಯಗಳೊಂದು ಕೇಳಿಬರುತ್ತಿದ್ದರೆ ಶಿವನೇ ಪ್ರತ್ಯಕ್ಷನಾದಷ್ಟು ಸಂತೋಷ— ಎಂದು ಆತನು ಹಾರೈಸುತ್ತಾನೆ. ಭಕ್ತಿ ಪಥದಲ್ಲಿ ಮುಂದುವರಿದವನಿಗೆ ನಿಷ್ಠೆಯೇ ಊರಿಗೋಲು. ಅಂತಹ ‘ನಿಷ್ಠೆಯುಳ್ಳ ಭಕ್ತ ನಟ್ಟಡವಿಯಲ್ಲಿರ್ದಡೇನು? ಅದು ಪಟ್ಟಣವೆಂದೆನಿಸುವುದು. ನಿಷ್ಠೆ ಇಲ್ಲದ ಭಕ್ತ ಪಟ್ಟಣದಲ್ಲಿದ್ದರೂ ಅದು ನಟ್ಟಡವಿ ಕಾಣಾ ರಾಮನಾಥಾ’ ಎಂಬುದು ಆತನ ನಿಲವು. ಭಕ್ತನಾದವನು ಜೀವನದಲ್ಲಿ ಬರುವ ಎಡರು ತೊಡರುಗಳಿಗೆ ಅಂಜಬಾರದು. ಅವುಗಳನ್ನು ಭಕ್ತರ ಸತ್ವ ಪರೀಕ್ಷೆಗಾಗಿ ಭಗವಂತನೇ ಒಡ್ಡುತ್ತಾನೆ. ‘ ಹರ ತನ್ನ ಭಕ್ತರ ತಿರಿವಂತೆ ಮಾಡುವ, ಒರೆದು ನೋಡುವ ಸುವರ್ಣದ ಚಿನ್ನದಂತೆ, ಅರೆದು ನೋಡುವ ಚಂದನದಂತೆ, ಅರೆದು ನೋಡುವ ಕಬ್ಬಿನ ಕೋಲಿನಂತೆ, ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದು ಎತ್ತಿಕೊಂಬ ನಮ್ಮ ರಾಮನಾಥನು’ ಎಂಬ ದಾಸಿಮಯ್ಯನ ನುಡಿಗಳು ನಮ್ಮ ಸಂಸ್ಕೃತಿಗೆ ಹಿಡಿದ ಸೊಡರಿನಂತಿವೆ.

ದೇವರ ದಾಸಿಮಯ್ಯನ ಸಮಕಾಲೀನನಾಗಿದ್ದ ಶಂಕರ ದಾಸಿಮಯ್ಯನೂ ವಚನಗಳನ್ನು ಹಾಡಿರುವನೆಂದೂ, ಇವರಿಬ್ಬರೂ ಪವಾಡ ಪುರುಷರೆಂದೂ, ವೀರಶೈವಪುರಾಣಗಳಿಂದ ತಿಳಿದುಬರುತ್ತದೆ. ಶಂಕರ ದಾಸಿಮಯ್ಯನವೆಂದು ಹೇಳುವ ಒಂದೆರಡು ವಚನಗಳೂ ಅಸ್ತಿತ್ವದಲ್ಲಿವೆ. ಅಷ್ಟು ಆಧಾರದಿಂದ ಆ ವಚನಗಳನ್ನು ಕುರಿತು ಅಭಿಪ್ರಾಯ ಸೂಚಿಸುವುದು ಅಷ್ಟೇನೂ ಉಚಿತವಲ್ಲ.

ಅದ್ವಿತೀಯ ವಚನಕಾರನಾದ ಬಸವಣ್ಣನಸಮಕಾಲಿಕರಾದರೂ ಆತನಿಗಿಂತಲೂ ಹಿರಿಯರಾದ ಇಬ್ಬರು ವಚನಕಾರರು ಉಲ್ಲೇಖಯೋಗ್ಯರಾಗಿ

ದ್ದಾರೆ. ಅವರಲ್ಲಿ ಒಬ್ಬ ಸಕಲೇಶ ಮಾದರಸ. ಆತನ ಹೆಸರೇ ಸೂಚಿಸುವಂತೆ ಆತನು ಪ್ರಟ್ಟದೊಂದು ರಾಜ್ಯಕ್ಕೆ ಅರಸನಾಗಿದ್ದವನು. ಭೋಗಜೀವನದ ಕ್ಷಣಿಕತೆಯನ್ನು ಅನುಭವಮಾಡಿಕೊಂಡು ವೈರಾಗ್ಯಕ್ಕೆ ತಿರುಗಿದವನು. ಆತನ ೩೩ ವಚನಗಳು ಉಪಲಬ್ಧವಾಗಿವೆ. ದೇವರದಾಸಿಮಯ್ಯನ ವಚನಗಳಿಗೆ 'ರಾಮನಾಥಾ' ಎಂಬುದು ಅಂಕಿತವಾಗಿದ್ದರೆ, ಈತನ ವಚನಗಳಿಗೆ 'ಸಕಳೇಶ್ವರಾ' ಎಂಬುದು ಅಂಕಿತ. ಈ ವಚನಗಳು ದೇವರದಾಸಿಮಯ್ಯನ ವಚನಗಳಿಗಿಂತಲೂ ಹೆಚ್ಚು ಸೂತ್ರಬದ್ಧವಾಗಿವೆ, ಮಾರ್ಮಿಕವಾಗಿವೆ. 'ಆಲಯಿಂದ ಬಿಟ್ಟು ಕಿರಿಯರಿಲ್ಲ, ನಿರಾಸೆಯಿಂದ ಬಿಟ್ಟು ಹಿರಿಯರಿಲ್ಲ. ದಯದಿಂದ ಬಿಟ್ಟು ಧರ್ಮವಿಲ್ಲ. ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ. ಸದಾಚಾರಕ್ಕೆ ಸಕಳೇಶ್ವರ ದೇವರಿಂದ ಬಿಟ್ಟು ದೈವವಿಲ್ಲ' ಎಂದು ಆತ ಮಾಡುವ ಬೋಧನೆ ಎಷ್ಟು ಸಂಗ್ರಹವಾಗಿದೆಯೊ ಅಷ್ಟೇ ಸಾರವತ್ತಾಗಿದೆ, ಪ್ರಭಾವಯುತವಾಗಿದೆ. ಈ ವಚನವನ್ನು ಓದಿದಾಗ ಬಸವಣ್ಣನ ವಚನಗಳು ಜ್ಞಾಪಕಕ್ಕೆ ಬರುತ್ತವೆ. ಸಾಹಿತ್ಯದ ದೃಷ್ಟಿಯಿಂದ ಈತನ ವಚನಗಳು ಮಹೋನ್ನತವಲ್ಲವೆಂದರೂ, ಶಾಸ್ತ್ರ ದೃಷ್ಟಿಯಿಂದ ಸ್ತೋತ್ರಯೋಗ್ಯವಾಗಿವೆ.

**ಪ್ರಭುದೇವ**

ಬಸವಣ್ಣನ ಸಮಕಾಲಿಕನಾದ ಮತ್ತೊಬ್ಬ ಹಿರಿಯನೆಂದರೆ **ಪ್ರಭುದೇವ**. ಆತನ ಹಿರಿತನ ಕಾಲದೇಶಗಳಿಗೆ ಸೀಮಿತವಾದುದಲ್ಲ. ಬಳ್ಳಿಗಾವೆಯೆಂಬ ಊರಿನ ನಿರಹಂಕಾರ—ಸುಜ್ಞಾನಿಗಳೆಂಬ ಶೈವದಂಪತಿಗಳ ಸುಪುತ್ರನಾಗಿ ಜನಿಸಿದ ಈತನು ಯೌವನದಲ್ಲಿಯೇ ಸಂಸಾರದ ಅನಿತ್ಯತೆಯನ್ನು ಅನುಭವದಿಂದ ಅರಿತು ವೈರಾಗ್ಯಪರನಾದನೆಂದು ತೋರುತ್ತದೆ. ಆಳವಾದ ಆತ್ಮಚಿಂತನೆಯಿಂದ ದಿವ್ಯಜ್ಞಾನಿಯಾಗಿ, ಹಲವು ಕಾಲ ದೇಶಪರ್ಯಟನೆ ಮಾಡಿ ನೊಂದಜೀವಗಳಿಗೆ ಶಿವಜ್ಞಾನದ ಅಮೃತವನ್ನುಣಿಸುತ್ತಾ ಶಿವಶರಣರ ಕಾಮಧೇನುವೆನಿಸಿದ್ದ ಬಸವಣ್ಣನ ಬಳಿಗೆ ಬಂದನು. ಲೌಕಿಕ ಪಾರಲೌಕಿಕಗಳೆರಡರಲ್ಲೂ ಪರಿಣತಜ್ಞಾನಿಯಾಗಿದ್ದ ಆತನು ಕಲ್ಯಾಣದಲ್ಲಿದ್ದ ಶಿವಶರಣರನ್ನೆಲ್ಲಾ ಸಂಘಟಿಸಿ, ಅವರ ಆತ್ಮೋನ್ನತಿಯನ್ನು ಸಾಧಿಸುವ ಮಹತ್ಕಾರ್ಯದಲ್ಲಿ ತತ್ಪರನಾದನು. ಸಾಧಕರ ಮಾರ್ಗದರ್ಶನಕ್ಕಾಗಿ ಅನುಭವಮಂಟಪ ಸ್ಥಾಪನೆಯಾಯಿತು. ಆಗಾಗ ಶರಣರ ಗೋಷ್ಠಿಗಳು

ನಡೆದು ಶಿವತತ್ತ್ವ ಶಿವಾಚಾರಗಳ ಚರ್ಚೆಗಳು ನಡೆಯುಲು ಏರ್ಪಾಟಾಯಿತು. ಬಸವಣ್ಣ, ಸಂಗನ ಬಸವಣ್ಣ, ಸಕಳೇಶ ಮಾದರಸ, ಮಹದೇವಿಯಕ್ಕ ಮೊದಲಾದ ವಿಭೂತಿಪುರುಷರು ತಮ್ಮ ಶಿವಾನುಭವಗಳನ್ನು ಅಲ್ಲಿ ವಿವರಿಸಿ ಹೇಳುತ್ತಿದ್ದರು. ಪ್ರಭುದೇವ ನಿಂತ ಎಡೆ ಕೈಲಾಸವಾಯಿತು. ಅನುಭವ ಮಂಟಪದ ಕೀರ್ತಿ ನಾಲ್ಕು ದಿಕ್ಕುಗಳಿಗೂ ಹಬ್ಬಿ ಶರಣರ ತಂಡವನ್ನು ಕಲ್ಯಾಣಕ್ಕೆ ಆಕರ್ಷಿಸಿತು. ಜಾತಿ ಕುಲ ಗೋತ್ರಗಳ ವ್ಯತ್ಯಾಸವಾಗಲಿ, ಲಿಂಗ ಭೇದವಾಗಲಿ ಇಲ್ಲದೆ, ಅರಸಿನಿಂದ ಆಳಿನವರೆಗೆ, ಸಂಸಾರಿಯಿಂದ ಸನ್ಯಾಸಿಯವರೆಗೆ, ಅಂತರಂಗ ಬಹಿರಂಗ ಶುದ್ಧಿಯುಳ್ಳ ಎಲ್ಲರಿಗೂ ಅಲ್ಲಿ ಪ್ರವೇಶ ದೊರೆಯಿತು. ಅನುಭಾವಿಗಳು ಪ್ರಭುದೇವನ ಉಪದೇಶದಿಂದ ಮುಮುಕ್ಷುಗಳಾದರು; ಭಕ್ತರು ಸಂಸಾರದ ದಂದುಗದಿಂದ ಉದ್ಧಾರ ವಾದರು. ಬಸವಣ್ಣ ಪ್ರಭುದೇವನಿಗಾಗಿ ಶೂನ್ಯಸಿಂಹಾಸನವನ್ನು ರಚಿಸಿ ದನು. ಶೂನ್ಯ ಎಂದರೆ ಬಯಲು ಅಥವಾ ಮುಕ್ತಿ. 'ಶೂನ್ಯಸಿಂಹಾಸನ' ವೆಂಬ ಹೆಸರಿನಿಂದ ಅನುಭವಮಂಟಪದ ಅಧ್ಯಕ್ಷನಾದ ಪ್ರಭುದೇವನಿಗೆ ಒಂದು ಆಸನವಿತ್ತೋ, ನಿರಾಕಾರದ ಸಿದ್ಧಿಯನ್ನು ಪಡೆದು ಏಕಕಾಲದಲ್ಲಿಯೇ ಸಾಕಾರ ನಿರಾಕಾರಗಳೆರಡೂ ಆಗಿದ್ದ ಆತ ಮೋಕ್ಷದ ಅಧಿಷ್ಠಾತೃವಾದನೊ! ಎರಡೂ ಇರಬಹುದು.

ಶೂನ್ಯಸಿಂಹಾಸನಾಸೀನನಾದ ಪ್ರಭುದೇವನ ನುಡಿಗಳು ದೇವವಾಣಿ ಯಂತೆ ಪ್ರಾಮಾಣಿಕವಾದವು, ಸತ್ಯನಿಷ್ಠವಾದುವು, ನಿರ್ದಾಕ್ಷಿಣ್ಯವಾದುವು. ಒಮ್ಮೆ ಸಹಸ್ರಾರು ಜನ ಶಿವಭಕ್ತರೆಲ್ಲರೂ ಬಸವಣ್ಣನ ಮೇಲೆ ಕೋಪಿಸಿ ಕೊಂಡು ಕಲ್ಯಾಣದಿಂದ ಹೊರಟುಹೋಗಲು ಸಿದ್ಧರಾದಾಗ ಪ್ರಭುದೇವನು ಅವರನ್ನು ವಿಡಂಬಿಸುತ್ತಾ 'ಅಂಗಜಂಗುಳಿಗಳೆಲ್ಲಾ ಅಶನಕ್ಕೆ ನೆರೆದರು. ಲಿಂಗದ ಹವಣನಿವರೆತ್ತ ಬಲ್ಲರು? ಕಾಯ ಜೀವಿಗಳು ಕಳವಳಧಾರಿಗಳು, ದೇವರ ಸುದ್ದಿಯನಿವರೆತ್ತ ಬಲ್ಲರು? ಮದ್ಯಪಾನವನುಂಡು ಮದವೆದ್ದ ಜೋಗಿಯಂತೆ ನುಡಿವರು ಗುಹೇಶ್ವರನ ನಿಲವನಿವರೆತ್ತ ಬಲ್ಲರು?' ಎಂದು ಗುಡುಗುತ್ತಾನೆ. ಉಳಿದ ಯಾವ ವಚನಕಾರನಲ್ಲಿಯೂ ಕಾಣಬರದ ನ್ಯಾಯ ನಿಷ್ಠುರತೆ ಆತನದು. ಆತನ ಎತ್ತರವೂ ಅಷ್ಟೆ: ಜಾತಿ ಮತ ಪಂಥ ಗಳಿಗೆ ಅತೀತನಾದ ಆ ಜ್ಞಾನಿಗೆ ತನ್ನದೆಂಬ ಅಭಿಮಾನವಾಗಲಿ, ಪರರ

ದೆಂಬ ಪಕ್ಷಪಾತವಾಗಲಿ ಇಲ್ಲ. ಇತರ ಸಂಪ್ರದಾಯಗಳಂತೆ ವೀರಶೈವ ಸಂಪ್ರದಾಯವನ್ನೂ ಕಟುವಾದ ಟೀಕೆಗೆ ಒಳಗುಮಾಡುತ್ತಾನೆ. ಆತನ ದೃಷ್ಟಿ ತೀಕ್ಷ್ಣ. ಬುದ್ಧಿ ಚುರುಕು. ನಾಲಿಗೆ ಹರಿತ. ಧರ್ಮದ ಹೆಸರಿನಲ್ಲಿ ನೇಮಗಳನ್ನು ಕೈಗೊಳ್ಳುವ ಅಂಧಶ್ರದ್ಧೆಯನ್ನು ಗೇಲಿಮಾಡುತ್ತಾ ‘ಹಾಲ ನೇಮದ ಹಿಡಿದಾತ ಬೆಕ್ಕಾಗಿ ಹುಟ್ಟುವ; ಕಡಲೆಯ ನೇಮದ ಹಿಡಿದಾತ ಕುದುರೆಯಾಗಿ ಹುಟ್ಟುವ; ಅಗ್ಘವಣಿಯ ನೇಮದ ಹಿಡಿದಾತ ಕಪ್ಪೆಯಾಗಿ ಹುಟ್ಟುವ; ಪುಷ್ಪದ ನೇಮದ ಹಿಡಿದಾತ ತುಂಬಿಯಾಗಿ ಹುಟ್ಟುವ; ಇವು ಷಟ್‌ಸ್ಥಲಕ್ಕೆ ಹೊರಗು. ಭಕ್ತಿನಿಷ್ಠೆಯಿಲ್ಲದವರ ಕಂಡರೆ ಮೆಚ್ಚ ಗುಹೇಶ್ವರ’ ಎನ್ನುತ್ತಾನೆ. ಒಬ್ಬೊಬ್ಬನೂ ತನ್ನ ಲಿಂಗವೇ ಮಹತ್ತಾದುದೆಂದು ಮೆರೆಯುವುದು ಆ ಅದ್ವೈತಿಗೆ ಹಿಡಿಸುವುದಿಲ್ಲ. ‘ಎನಗೊಂದು ಲಿಂಗ, ನಿನಗೊಂದು ಲಿಂಗ, ಮನೆಗೊಂದು ಲಿಂಗವಾಯಿತ್ತು. ಹೋಯಿತಲ್ಲಾ ಭಕ್ತಿಜಲದ ಕೊಡಿ! ಉಳಿ ಮುಟ್ಟಿದ ಲಿಂಗದ ಮನ ಮುಟ್ಟ ಬಲ್ಲುದೆ ಗುಹೇಶ್ವರಾ? ಎಂದು ಆತ ಕೇಳುತ್ತಾನೆ. ಇನ್ನೊಂದು ಹೆಜ್ಜೆ ಮುಂದಕ್ಕೆ ಹೋಗಿ ಸೃಷ್ಟಿಗೆ ಹುಟ್ಟಿದ ಶಿಲೆ; ಕಲ್ಲುಕುಟಿಗಂಗೆ ಹುಟ್ಟಿದ ಮೂರುತಿ; ಮಂತ್ರಕ್ಕೆ ಲಿಂಗವಾಯಿತ್ತಲ್ಲಾ! ಈ ಮೂವರಿಗೆ ಹುಟ್ಟಿದ ಮಗನ ಲಿಂಗವೆಂದು ಕೈವಿಡಿದ ಅಣ್ಣ ವ್ರತಗೇಡಿಗಳನೇನೆಂಬ ಗುಹೇಶ್ವರಾ!’ ಎಂಬ ಆ ಜ್ಞಾನಿಯ ಮಾತು ಮತನಿಷ್ಠರಾದವರಿಗೆ ನುಂಗಲಾರದ ತುತ್ತಾದರೆ ಆಶ್ಚರ್ಯವೇನೂ ಇಲ್ಲ. ‘ಕಲ್ಲು ದೇವರೆಂದು ಪೂಜಿಸುವರು; ಅಗದು ಕಾಣಿರೊ! ಅಗಡಿಗರಾದಿರಲ್ಲಾ! ಮುಂದೆ ಹುಟ್ಟುವ ಕೂಸಿಂಗೆ ಇಂದು ಮೊಲೆಯ ಕೊಡುವಂತೆ ಗುಹೇಶ್ವರಾ’ ಎಂಬ ಆತನ ಮಾತು ವಿಗ್ರಹಾರಾಧನೆಯ ಬುಡಕ್ಕೆ ಕೊಡಲಿಯನ್ನಿಡುತ್ತದೆ. ವಿಗ್ರಹವನ್ನು ಕಲ್ಲೆಂದು ಜರೆದವನು ವಿಗ್ರಹ ಪ್ರತಿಷ್ಠೆಯನ್ನು ಒಪ್ಪಿಯಾನೆ? ‘ಕಲ್ಲ ಮನೆಯ ಮಾಡಿ, ಕಲ್ಲ ದೇವರ ಮಾಡಿ, ಆ ಕಲ್ಲು ಕಲ್ಲ ಮೇಲೆ ಕೆಡೆದರೆ ದೇವರೆತ್ತ ಹೋದರೋ? ಲಿಂಗ ಪ್ರತಿಷ್ಠೆಯ ಮಾಡಿದವಂಗೆ ನಾಯಕ ನರಕ ಗುಹೇಶ್ವರ’ ಎಂಬ ಆತನ ನುಡಿಗೆ ಪೂರಕವಾಗಿ ‘ದೇಹಮೊಳಗೆ ದೇವಾಲಯವಿದ್ದು, ಮತ್ತೆ ಬೇರೆ ದೇವಾಲಯವೇಕೆ? ಎರಡಕ್ಕೆ ಹೇಳಲಿಲ್ಲಯ್ಯ! ಗುಹೇಶ್ವರ, ನೀನು ಕಲ್ಲಾದರೆ ನಾನೇನಪ್ಪೆನು’ ಎಂಬ ವಚನ ಬಂದಿದೆ. ಚಿನ್ಮಯ ಸ್ವರೂಪಿ

ಗಳಿಯವುದು ಬಹು ಕಷ್ಟ. ‘ನೆನೆ ನೆನೆಯೆಂದಡೆ ಏನ ನೆನೆವೆನಯ್ಯ? ಎನ ಕಾಯವೇ ಕೈಲಾಸವಾಯಿತ್ತು; ಮನವೆ ಲಿಂಗವಾಯಿತ್ತು, ತನುವೆ ಸಜ್ಜೆಯಾಯಿತ್ತು; ನೆನೆವಡೆ ದೇವನುಂಟೆ? ನೋಡುವಡೆ ಭಕ್ತನುಂಟೆ? ಗುಹೇಶ್ವರಲಿಂಗ ಲೀಯವಾಗಿತ್ತು.’ ಸರಳತೆಯೆ ಸಾಕಾರವೆತ್ತಂತಿರುವ ಈ ಅದ್ವೈತ ನಿರೂಪಣೆಯನ್ನು ನೋಡಿ—‘ಆನು ನೀನೆಂಬುದು ತಾನಿಲ್ಲ. ತಾನರಿದ ಬಳಿಕ ಮತ್ತೇನೂ ಇಲ್ಲ ಇಲ್ಲ. ಇಲ್ಲದ ಇಲ್ಲವೆ ಯೆಲ್ಲಿಂದ ಬಪ್ಪುದೊ? ಆನುವನರಿದು ತನುವ ಮರೆದು ಭಾವರಹಿತ ಗುಹೇಶ್ವರ.’ ಪ್ರಭುದೇವನ್ನು ಸಾಕಾರ ನಿರಾಕಾರ ಸ್ಥಿತಿಗಳೆರಡನ್ನೂ ಮೀರಿದ ಸ್ಥಿತಿಯನ್ನು ಅನುಭವಿಸಿದ್ದಾನೆ—ಅವೆರಡರ ಸ್ವರೂಪವನ್ನೂ ಎಷ್ಟು ಸೊಗಸಾಗಿ ನಿರೂಪಿಸುತ್ತಾನೆ. ‘ಆಕಾರ ನಿರಾಕಾರವೆಂಬೆರಡೂ ಸ್ವರೂಪಂಗಳು: ಒಂದು ಆಹ್ವಾನ ಒಂದು ವಿಸರ್ಜನ; ಒಂದು ವ್ಯಾಕುಳ, ಒಂದು ನಿರಾಕುಳ; ಉಭಯ ಕುಳರಹಿತ, ಗುಹೇಶ್ವರ, ನಿಮ್ಮ ಶರಣ ನಿಶ್ಚಿಂತನು.

ಪ್ರಭುದೇವನ ವಚನಗಳಲ್ಲಿ ಒಂದು ಗಣನೀಯವಾದ ಭಾಗ ಬೆಡಗಿನ ವಚನಗಳು. ಮೇಲುನೋಟಕ್ಕೆ ಅಸಂಬದ್ಧವಾಗಿರುವಂತೆ ಕಾಣುವ ಈ ವಚನಗಳಲ್ಲಿ ಬಹುಭಾಗ ವ್ಯಾಖ್ಯಾನ ಸಹಾಯವಿಲ್ಲದೆ ಅರ್ಥವಾಗುವುದು ಬಹು ಕಷ್ಟ. ಇಲ್ಲಿನ ಭಾಷೆ ತಂತ್ರಸಾಹಿತ್ಯದ ಭಾಷೆಯಂತೆ ಸಾಂಕೇತಿಕವಾದ ಭಾಷೆ. ಈ ವಚನಗಳಲ್ಲಿ ಅಡಗಿರುವ ಗುಪ್ತವಾದ ಅಥವಾ ಗುಹ್ಯವಾದ ಅರ್ಥವನ್ನು ಗಮನಿಸಿದಾಗ ಪ್ರಭುದೇವನು ಇಟ್ಟುಕೊಂಡಿರುವ ‘ಗುಹೇಶ್ವರ’ ಎಂಬ ಅಂಕಿತ ಸಾರ್ಥಕವಾಗುತ್ತದೆ. ಒಂದೆರಡು ಉದಾಹರಣೆಗಳನ್ನು ನೋಡೋಣ—‘ಆಕಾಶವ ಕಪ್ಪೆ ನುಂಗಿದರೆ, ಆಗಳೆ ಹತ್ತಿತ್ತು ರಾಹು ನೋಡಿರೆ ಅಪೂರ್ವಪತಿಶಯ! ಅಂಧಕ ಹಾವ ಹಿಡಿದ. ಇದುಕಾರಣ ಲೋಕಕ್ಕೆ ಅರುಹದೆ ನಾನರಿದೆನು ಗುಹೇಶ್ವರ.’—ಬ್ರಹ್ಮರಂಧ್ರದಲ್ಲಿರುವ ಕಾಂತಿ ಬಿಂದುವು ಪರಮಾಮೃತ ಸ್ವರೂಪವನ್ನು ಪಡೆಯಲು, ಕುಂಡಲಿಸ್ಥಾನದ ಸುಪ್ತಭುಜಂಗವು ಆ ಅಮೃತವನ್ನು ಆರೋಗಿಸುವುದು. ಇದರ ಸುಖವನ್ನು ಭಿನ್ನ ದೃಷ್ಟಿಯಿಲ್ಲದ ಭಕ್ತನು ಅರಿತು, ಅದನ್ನು ಲೋಕಕ್ಕೆ ತಿಳಿಸದೆ ಮೌನವಾಗಿದ್ದನು. ಸ್ವಲ್ಪ ಹೆಚ್ಚು ಕಡಮೆ ಈ ಅರ್ಥವನ್ನು ಕೊಡುವ ಈ ವಚನ ಅಧ್ಯಾತ್ಮವನ್ನರಿತವನಿಗೂ ಅನುಭವವೇದ್ಯ

ವಾಗುವುದು ಕಷ್ಟ. ಬೆಡಗಿನ ವಚನಗಳ ಬಹುಭಾಗ ಇಂತಹ ಕ್ಲಿಷ್ಟವಾದುದೇ. ಒಮ್ಮೊಮ್ಮೆ ಇವು ಸುಮನೋಹರವಾದ ಸರಳರೂಪವನ್ನು ಧರಿಸಿ ಸುಲಭಗ್ರಾಹ್ಯವಾಗುವುದೂ ಉಂಟು. 'ಕೆಂಡದ ಗಿರಿಯ ಮೇಲೆ ಒಂದು ಅರಗಿನ ಕಂಭವಿದ್ದುದ ಕಂಡೆ. ಅರಗಿನ ಕಂಭದ ಮೇಲೊಂದು ಹಂಸೆ ಇದ್ದುದ ಕಂಡೆ. ಕಂಭ ಬೆಂದು ಹಂಸೆ ಹಾರಿತ್ತು.' ಎಂಬಲ್ಲಿ ಜ್ಞಾನಗಿರಿಯ ಮೇಲೆ, ಅಶಾಶ್ವತವಾದ ದೇಹವೆಂಬುದು ಒಂದು ಅರಗಿನ ಕಂಭದಂತೆ ಇದೆ, ದೇಹಭಾವ ಕರಗಿಹೋಗುತ್ತಲೆ ದೇಹದಲ್ಲಿನ ಆತ್ಮ ಹಾರಿಹೋಗಿ ಪರಮಾತ್ಮನಲ್ಲಿ ವಿಲೀನವಾಗುತ್ತದೆ. ಇಲ್ಲಿನ ಕೆಂಡದ ಬೆಟ್ಟ ಅದರ ಮೇಲಿನ ಅರಗಿನ ಕಂಭ, ಅದರ ಮೇಲಿನ ಹಂಸೆ—ಇವುಗಳು ಯಥಾರ್ಥ ಚಿತ್ರವೂ ಮನೋಹರವಾಗಿಯೇ ಇವೆ. 'ಊರವ ಚೇಳಿನ, ಏರದ ಬೇನೆಯಲ್ಲಿ, ಮೂರು ಲೋಕವೆಲ್ಲಾ ನರಳಿತ್ತು. ಹುಟ್ಟದ ಗಿಡುವಿನ ಬಿಟ್ಟಲೆಯ ತಂದು ಮುಟ್ಟದೆ ಪೂಸಲು ಮಾಬುದು ಗುಹೇಶ್ವರ'—ಮಿಥ್ಯೆ ಎಂಬ ಚೇಳು ಕುಟುಕಲು ಅದರಿಂದ ಮೂರು ಲೋಕವೂ ಸಂಸಾರದ ಬೇನೆಗೆ ಸಿಕ್ಕಿ ನರಳುತ್ತದೆ. ಈ ಸಂಸಾರ ದುಃಖವೆಂಬ (ಚೇಳಿನ) ವಿಷಕ್ಕೆ ಜನನರಹಿತವಾದ ಶಿವಜ್ಞಾನ ಕ್ರಿಯೆಯೆಂಬ ಔಷಧಿಯನ್ನು ತನುಗುಣ ಸೋಂಕದೆ ಹಚ್ಚಲು, ಆ ವಿಷ ಪರಿಹಾರವಾಗುವುದು. ಇಂತಹ ಬೆಡಗಿನ ವಚನಗಳು ಸುಲಭಗ್ರಾಹ್ಯವಲ್ಲದುದರಿಂದ ಅವುಗಳಿಂದ ಕಾವ್ಯ ರಸಾಸ್ವಾದನೆ ಮಾಡುವುದು ಅಸಾಧ್ಯ.

ಸಂಗ್ರಹವಾಗಿ ಸಾರವತ್ತಾಗಿ ಒಡಮೂಡಿರುವ ಪ್ರಭುದೇವನ ಹಲವು ವಚನಭಾಗಗಳು ಆತನ ಉಜ್ವಲ ಪ್ರತಿಭೆಗೂ ಅದ್ವಿತೀಯ ಜ್ಞಾನಕ್ಕೂ ಅಸಾಧಾರಣವಾದ ಅನುಭವಕ್ಕೂ ಹಿಡಿದ ಸೊಡರಿನಂತಿವೆ. 'ತನ್ನ ತಾನರಿತರೆ ನುಡಿಯೆಲ್ಲ ಪರತತ್ವ', 'ವೇದವೆಂಬುದು ಓದಿನ ಮಾತು; ಶಾಸ್ತ್ರವೆಂಬುದು ಸಂತೆಯ ಸುದ್ದಿ; ಪುರಾಣವೆಂಬುದು ಪುಂಡರ ಗೋಷ್ಠಿ; ತರ್ಕವೆಂಬುದು ತಗರ ಹೋರಟೆ; ಭಕ್ತಿಯೆಂಬುದು ತೋರಿ ಉಂಬ ಲಾಭ.', 'ನಿನಗೆ ನೀ ಗುರುವಲ್ಲದೆ ನಿನ್ನಿಂದಧಿಕವಪ್ಪ ಗುರುವುಂಟೆ?', 'ದೇಹದೊಳಗೆ ದೇವಾಲಯವಿರ್ದು ಮತ್ತೆ ಬೇರೆ ದೇವಾಲಯವೇಕೆ?', 'ಸಾಸುವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ', 'ಮನ ಸೋಂಕಿದ ಸುಖವ ಮೊಟ್ಟೆಯ ಕಟ್ಟಬಹುದೆ?', 'ಮಾತೆಂಬುದು ಜ್ಯೋತಿರ್ಲಿಂಗ; ಸ್ವರವೆಂಬುದು ಪರತತ್ವ.'

ಪ್ರಭುವು ಶೂನ್ಯಸಿಂಹಾಸನದಲ್ಲಿ ಮಂಡಿಸಿ, ಅಧಿಕಾರವಾಣಿಯಿಂದ ಶರಣರನ್ನು ತಿದ್ದಿ ಸದಸದ್ವಿವೇಕವನ್ನೂ ಶಿವಭಕ್ತಿಯನ್ನೂ ಮೋಕ್ಷಮಾರ್ಗವನ್ನೂ ಬೋಧಿಸುತ್ತಾ, ಶರಣರೆಲ್ಲರೂ ಐಕ್ಯಸ್ಥಿತಿಯನ್ನು ಪಡೆಯುವ ಘಟ್ಟ ಬಂದಾಗ, ಅವರವರಿಗೆ ವಿಹಿತವಾದ ನಿರವಯಸ್ಥಿತಿಯನ್ನು ನಿರೂಪಿಸಿ, ತಾನೂ 'ಗುಹೇಶ್ವರನೆಂಬ ಲಿಂಗದ ನಿಜಸಮಾಧಿಯಲ್ಲಿ ನಿಂದು, ಪರವಶನಾಗಿ, ನಿರಾಳಕ್ಕೆ ನಿರಾಳ'ವಾದನು. ಹಾಗೆ ನಿರಾಳನಾಗುವ ಮುನ್ನ ಆತನು 'ಗೋರಕ್ಷ' ನೆಂಬ ಸಿದ್ಧನನ್ನು ಸಂಧಿಸಿ ಅವನಿಗೆ ಉಪದೇಶಮಾಡುವ ಸನ್ನಿವೇಶ ಅಲ್ಲಮಪ್ರಭುವಿನ ವ್ಯಕ್ತಿತ್ವದ ಮಹೋನ್ನತಿಯನ್ನು ಮನೋಜ್ಞವಾಗಿ ನಿರೂಪಿಸುತ್ತದೆ. ಗೋರಕ್ಷನು ಉತ್ತರದೇಶದ ಮತ್ಸ್ಯೇಂದ್ರನಾಥನೆಂಬ ಹಟಯೋಗಿಯ ಶಿಷ್ಯ. ಪಟ್ಟದಕಲ್ಲಿನ ದೊರೆ ನರವರ್ಮನ ಗೋಪಾಲಕನಾಗಿರುತ್ತಾ, ತನ್ನ ಸಾಧನೆಯಿಂದ ವಜ್ರಕಾಯನಾಗಿದ್ದನು. ಅವನ್ನು ಪರೀಕ್ಷಿಸಲೆಂದು ಪ್ರಭುದೇವನು ಕತ್ತಿಯಿಂದ ಅವನ ದೇಹವನ್ನು ತಾಡಿಸಲು, ಅದು ಖಣಿ ಕಟಿಲ್ ಎಂದು ಕಿಡಿಗಾರಿತೇ ಹೊರತು ಆತನ ದೇಹದ ಕೂದಲು ಕೊಂಕಲಿಲ್ಲ. ಪ್ರಭುದೇವನು ಇದನ್ನು ಕಂಡು ಆಶ್ಚರ್ಯಪಡಲಿಲ್ಲ, ಅವನ ಸಾಧನೆಯನ್ನು ಮೆಚ್ಚಲಿಲ್ಲ. ಅವನನ್ನು ತೆಗಳುತ್ತಾ 'ನಾರುಬೇರಿನ ಕುಟಿಲಕುಹಕದ ಯೋಗವಲ್ಲದು ನಿಲ್ಲಿರೊ! ಕಾಯ ಸಮಾಧಿ ಕರಣ ಸಮಾಧಿ ಯೋಗವಲ್ಲದು ನಿಲ್ಲಿರೊ! ನಿಜಸಮಾಧಿ ಗುಹೇಶ್ವರ' ಎಂದು ಹೇಳಿ, ಅದೇ ಕತ್ತಿಯಿಂದ ತನ್ನನ್ನು ಹೊಡೆಯುವಂತೆ ಗೋರಕ್ಷನಿಗೆ ಹೇಳಿದನು. ಗೋರಕ್ಷನ ಹೊಡೆತ ಗಾಳಿಗೆ ಕೊಟ್ಟ ಹೊಡೆತವಾಯಿತು. ಆಗ ಆ ಹಟಯೋಗಿಯು ಅಲ್ಲಮನಿಗೆ ಶರಣಾಗತನಾಗಿ 'ರಸವಾದಂಗಳ ಕಲಿತಲ್ಲಿ ಲೋಹಸಿದ್ಧಿಯಲ್ಲದೆ ರಸಸಿದ್ಧಿಯಾದುದಿಲ್ಲ, ನಾನಾ ಕಲ್ಪಯೋಗ ಅದೃಶ್ಯಕರಣಂಗಳ ಕಲಿತಲ್ಲಿ ಕಾಯಸಿದ್ಧಿಯಲ್ಲದೆ ಆತ್ಮಸಿದ್ಧಿಯಾದುದುಂಟೆ? ನಾನಾ ವಾಗ್‌ವಾದಗಳಿಂದ ಹೋರಿ ಮಾತಿನ ಮಾಲೆಯಾಯಿತ್ತಲ್ಲದೆ ಆತ್ಮ ರಹಿತವಾದುದಿಲ್ಲ. ನೀನಾನೆಂದಲ್ಲಿ ನೀನು ನಾನಾದೆಯಲ್ಲದೆ ನಾನು ನೀನಾದುದಿಲ್ಲ. ಗೋರಕ್ಷ ಪಾಲಕ ಮಹಾಪ್ರಭು ಸಿದ್ಧ ಸೋಮನಾಥಲಿಂಗವಾದೆಯಲ್ಲದೆ ಲೀಯವಾಗಿ ಆ ಲಿಂಗವೇ ಆದುದಿಲ್ಲ.' ಎಂದು ಹೇಳಿಕೊಂಡು, ಅಲ್ಲಮನಿಂದ ಉಪದೇವನ್ನು ಪಡೆದು ಅದ್ವೈತಸಿದ್ಧಿಯನ್ನು ಹೊಂದಿದನು.

ಅದ್ವೈತಸಿದ್ಧಿಯ ಮುಂದೆ ಹಟಯೋಗದ ಅಲ್ಪತೆಯನ್ನು ಆತ ಅರ್ಥಮಾಡಿಕೊಂಡನು. ಪ್ರಭುದೇವನ ವಚನಗಳು 'ಅಧರಕ್ಕೆ ಕಹಿ, ಉದರಕ್ಕೆ ರುಚಿ' ಎಂಬಂತಿರುವುದು ಮಾತ್ರವೇ ಅಲ್ಲ; ಆತನ ವಚನಗಳಲ್ಲಿ ಜಾತಿಕುಲಗೋತ್ರಗಳಿಗೆ ಅತೀತವಾದ, ಕಾಲ ದೇಶಗಳ ಎಲ್ಲೆಯನ್ನು ಮೀರಿದ ನಿತ್ಯಸತ್ಯದ ಪರಂಜ್ಯೋತಿ ಪ್ರತ್ಯಕ್ಷವಾಗಿದೆ.

**ಬಸವಣ್ಣ**

'ಬಾಗೆವಾಡಿ' ಎಂಬುದು ಒಂದು ಅಗ್ರಹಾರ. ಅಲ್ಲಿ ಮಾದಿರಾಜ—ಮಾದಾಂಬಿಕೆ ಎಂಬ ಶೈವಬ್ರಾಹ್ಮಣ ದಂಪತಿಗಳಿದ್ದರು. ಭಗವದ್ಭಕ್ತರಾದ ಆವರ ಪುಣ್ಯಗರ್ಭದಲ್ಲಿ ಜನಿಸಿದ, ಕಾರಣಿಕ ಪುರುಷ ಬಸವಣ್ಣ. ಚಿಕ್ಕಂದಿನಲ್ಲಿಯೇ ತಾಯ್ತಂದೆಗಳನ್ನು ಕಳೆದುಕೊಂಡು ತಬ್ಬಲಿಯಾದ ಈ ಮಗು 'ಶಿವಭಕ್ತಿಯ ಮುತ್ತಂತಿದ್ದ' ಮುತ್ತಜ್ಜಿಯ ಆಶ್ರಯದಲ್ಲಿ ಬೆಳೆದು ಹದಿನಾರು ವರುಷದ ಹರೆಯದವನಾದ. ಸ್ವಭಾವ ಸಹಜವಾಗಿಯೇ ವಿಚಾರಪರನೂ ದೈವಭಕ್ತನೂ ಆದ ಈತನಿಗೆ ಬ್ರಾಹ್ಮಣಮತದ ಕರ್ಮಮಾರ್ಗದಲ್ಲಿ ಜಿಹಾಸೆಹುಟ್ಟಿತು. ಆ ವೇಳೆಗಾಗಲೇ ಆತನಿಗೆ ಉಪನಯನವಾಗಿತ್ತೆಂದು ತೋರುತ್ತದೆ. ಕರ್ಮಲತೆಯಂತೆ ತೋರುತ್ತಿದ್ದ ತನ್ನ ಜನಿವಾರವನ್ನು ಕಿತ್ತು ಬಿಸುಟು, ಮಲಪ್ರಹರಿ–ಕೃಷ್ಣವೇಣಿಗಳ ಸಂಗಮದಲ್ಲಿದ್ದ ಕಪ್ಪಡಿ ಗ್ರಾಮಕ್ಕೆ ಬಂದನು. ಅಲ್ಲಿನ ಸಂಗಮಸ್ಥಳದಲ್ಲಿ ಸಂಗಮೇಶ್ವರನ ಗುಡಿಯಿತ್ತು. ಈಶಾನ್ಯನೆಂಬ ಶಿವಭಕ್ತ ಅಲ್ಲಿನ ಸ್ಥಾನಪತಿಯಾಗಿದ್ದ. ತೇಜಃಪುಂಜನಾಗಿದ್ದ ಯುವಕ ಬಸವಣ್ಣ ಆತನ ಕಣ್ಣಿಗೆ ಬಿದ್ದು ಕರುಣೆಗೆ ಪಾತ್ರನಾದ. ಬಸವಣ್ಣ ಆತನ ಶಿಷ್ಯನಾಗಿ ಸಂಗಮೇಶ್ವರನನ್ನು ಪೂಜಿಸುತ್ತಾ ಭಕ್ತಿಸಾಧನೆಯಲ್ಲಿ ತಲ್ಲೀನನಾದನು. ಕೆಲವು ಕಾಲದ ಮೇಲೆ ಒಂದು ದಿನ ಆತನ ಕನಸಿನಲ್ಲಿ ಶಿವನು ಪ್ರತ್ಯಕ್ಷನಾಗಿ, ಮಂಗಳವಾಡಕ್ಕೆ ಹೋಗುವಂತೆ ಆಜ್ಞಾಪಿಸಿದ ಹಾಗಾಯಿತು. ಮತ್ತೆ ಮತ್ತೆ ಅದೇ ಅನುಭವವಾಗಲು, ಭಾವುಕನಾದ ಬಸವಣ್ಣ ಶಿವನ ಆಜ್ಞೆಯನ್ನು ನೆತ್ತಿಯಲ್ಲಿ ಹೊತ್ತು ಮಂಗಳವಾಡಕ್ಕೆ ಹೋದ. ಅಲ್ಲಿ ರಾಜಭಂಡಾರಿಯಾದ ಸಿದ್ಧನಂಜೇಶನು ಈತನಿಗೆ ಆಶ್ರಯದಾತನಾದನು. ಮಕ್ಕಳಿಲ್ಲದ ಭಂಡಾರಿ ಚಾಣಾಕ್ಷನಾದ ಈ ಯುವಕನನ್ನು ಪುತ್ರಪ್ರೇಮದಿಂದ ತನ್ನ ಮನೆಯಲ್ಲಿಯೇ ಇರಿಸಿಕೊಂಡನು

ಬಸವಣ್ಣನ ಜಾಣತನ ರಾಜನಾದ ಬಿಜ್ಜಳನ ಕಿವಿಯನ್ನು ಮುಟ್ಟಿ ರಾಜಾಸ್ಥಾನದ ಮನ್ನಣೆ ದೊರೆಯಿತು. ಕೆಲಕಾಲವಾದ ನಂತರ ಸಿದ್ಧದಂಡೇಶನು ಕಾಲವಾಗಲು ಆತನ ಆಸ್ತಿ ಅಧಿಕಾರಗಳಿಗೆ ಬಸವಣ್ಣನೆ ಉತ್ತರಾಧಿಕಾರಿಯಾದನು. ಸುಂದರಿಯರಾದ ಗಂಗಾದೇವಿ ಮಾಯಿದೇವಿಯರು ಆತನ ಕೈ ಹಿಡಿದು, ಲೌಕಿಕ ಜೀವನದ ಅರಕೆಯನ್ನು ಹೋಗಲಾಡಿಸಿದರು. ಮುಂದೆ ಆತನು ಬಿಜ್ಜಳನ ಮಂತ್ರಿಯೂ ಆದ. ಮಾನವನು ಬಯಸಬಹುದಾದ ಅಧಿಕಾರ, ಐಶ್ವರ್ಯ, ಕೀರ್ತಿ, ರೂಪು, ಯೌವನ, ಕಾಮಿನಿ—ಎಲ್ಲವೂ ಬಸವಣ್ಣನಿಗೆ ಅಣಿಯಾಗಿದ್ದವು. ಆದರೆ ಬಸವಣ್ಣನು ಸುಖಲೋಲುಪನಾಗುವ ಸ್ವಭಾವದವನಲ್ಲ. ನೀರಿನಲ್ಲಿ ನೆಲಸಿದ್ದರೂ ಊರ್ಧ್ವಮುಖವಾಗಿರುವ ಕಮಲದಂತೆ ಆತ. ರಾಜನ ಭಂಡಾರಿಯಾಗುವ ವೇಳೆಗೆ ಆತನು ಭಕ್ತಿ ಭಂಡಾರಿಯೂ ಆಗಿದ್ದ. ತನ್ನ ಬಾಳೆಲ್ಲವನ್ನೂ ಆತ ಲೋಕಕಲ್ಯಾಣಕ್ಕಾಗಿ ಮೀಸಲಾಗಿಟ್ಟ. ನಿಷ್ಠನಾದ ಆ ಸಾಧಕನು ತನ್ನ ತನು ಮನ ಧನಗಳನ್ನು ಜಂಗಮಾರಾಧನೆಗೆ ವಿನಿಯೋಗಿಸಿದ. ಆತನ ಕೀರ್ತಿ ದಶದಿಕ್ಕುಗಳಲ್ಲಿಯೂ ಹಬ್ಬಿತು. ಶಿವಶರಣರೂ ತಂಡತಂಡವಾಗಿ ಮಂಗಳವಾಡಕ್ಕೆ ಬಂದರು. ಬಸವಣ್ಣನು ಅವರನ್ನು ಸಂಘಟಿಸಿ, ಅವರ ಇಹಪರಗಳೆರಡಕ್ಕೂ ಸಮಾನವಾಗಿ ಗಮನವನ್ನು ನೀಡಿದ. ಜಂಗಮರಿಗೆ ನಿತ್ಯ ದಾಸೋಹದ ಜೊತೆಯಲ್ಲಿ ಶರಣರ ಗೋಷ್ಠಿಯೂ ನಡೆಯುವಂತೆ ಅನುಭವಮಂಟಪವನ್ನು ಸ್ಥಾಪಿಸಿ, ಉಸಿರಾಡುವ ದೇವರಂತಿದ್ದ ಅಲ್ಲಮಪ್ರಭುವನ್ನು ಅಲ್ಲಿನ ಶೂನ್ಯಸಿಂಹಾಸನದ ಮೇಲೆ ಪ್ರತಿಷ್ಠಿಸಿದನು. ಆತನ ಪ್ರಯತ್ನದ ಫಲವಾಗಿ ವೀರಶೈವ ಮತದ ಉದ್ಧಾರವಾಯಿತು. ಸಮಾಜದಲ್ಲಿದ್ದ ಸಹಸ್ರದೋಷಗಳು ನಿವಾರಣೆಗೊಂಡು, ಮಾನವನು ಶ್ರೇಯಸ್ಸಿನ ಹಾದಿಯನ್ನು ಹಿಡಿದು ನಡೆಯಲು ಸಾಧ್ಯವಾಯಿತು. ಬಸವಣ್ಣನ ಜನ್ಮ ಸಾರ್ಥಕವಾಯಿತು. ಆತನ ಹೆಸರು ಅಮರವಾಯಿತು.

ಧರ್ಮನಿರತನಾದ ತ್ಯಾಗಜೀವಿಯನ್ನು ಅವತಾರಪುರುಷನೆಂದು ಕರೆದು ಗೌರವಿಸುವುದು ಸ್ವಾಭಾವಿಕ, ಆದ್ದರಿಂದ ಬಸವಣ್ಣನನ್ನು ಅವತಾರ ಪುರುಷನೆಂದು ಕರೆದುದರಲ್ಲಿ ಆಶ್ಚರ್ಯವೇನೂ ಇಲ್ಲ. ಕೈಲಾಸದಲ್ಲಿ ವೃಷಭಮುಖನೆಂಬ ಒಬ್ಬ ಗಣಪ ಶಿವನ ಪ್ರಸಾದರೂಪವಾದ ಪುಷ್ಪವನ್ನು ಶಿವನ

ಆಸ್ಥಾನದಲ್ಲಿದ್ದವರಿಗೆಲ್ಲಾ ಹಂಚುವಾಗ ಷಣ್ಮುಖನಿಗೆ ಕೊಡುವುದನ್ನೆ ಮರೆತ. ಆಕ್ಷೇಪಣೆ ಎತ್ತಿದಾಗ ತಾನು ಕೊಟ್ಟೆನೆಂದೇ ಸಾಧಿಸಿದ, ಆ ಗಣಪ. ಅವನ ತಪ್ಪನ್ನು ಪ್ರತ್ಯಕ್ಷವಾಗಿ ಕಂಡಿದ್ದ ಪರಶಿವನು ಕುಪಿತನಾಗಿ, ಭೂಮಿಯಲ್ಲಿ ಹುಟ್ಟಿ ಭಕ್ತರಿಗೆ ಪ್ರಸಾದವನ್ನು ಹಂಚಿ ಹಿಂದಕ್ಕೆ ಬರುವಂತೆ ಆಜ್ಞಾಪಿಸಿ ಆತನನ್ನು ಕಳುಹಿಸಿದನು. ಆತನೇ ಬಸವಣ್ಣ–ಎಂದು ಬಸವಣ್ಣನ ಅವತಾರದ ವಿವರಗಳ ಊಹಾಚಿತ್ರವೊಂದು ನಿರ್ಮಾಣವಾಯಿತು. ಇಷ್ಟೇ ಅಲ್ಲ. ಮನುಷ್ಯಾತೀತವಾದ ಹಲವು ಪವಾಡಗಳನ್ನೂ ಆತನು ಮೆರೆದನೆಂದು ಜನ ನಂಬಿಪ್ಪಾರೆ. ಇಂತಹ ನಂಬಿಗೆಯಿಂದ ಜನಸಾಮಾನ್ಯರ ಧರ್ಮನಿಷ್ಠೆಗೆ ಒಂದು ಊರೆಗೋಲು ದೊರೆತಂತಾಗುವುದರಿಂದ, ಅದು ಸ್ವಾಗತಾರ್ಹವೇ. ಆದರೆ ವಿಚಾರಪರರಾದವರು ಪವಾಡಗಳಷ್ಟರಿಂದಲೇ ತೃಪ್ತರಾಗದೆ, ಆತನ ಜೀವನದ ಮಾನವೀಯ ಮೌಲ್ಯಗಳನ್ನು ಅರಸ ಹೊರಡುತ್ತಾರೆ. ಅಂತಹವರ ಕಣ್ಣಿಗೆ ದೇವನು ಮಾನವನಾಗಿ ಬಂದಂತೆ ಕಾಣುವುದಿಲ್ಲ; ಮಾನವನು ದೇವನಾದಂತೆ, ತನ್ನ ಮಹತ್ಕಾರ್ಯಗಳ ಸೋಪಾನದಿಂದ ದೇವತ್ವಕ್ಕೆ ಏರಿದಂತೆ ಕಾಣಬರುತ್ತದೆ. ಬಸವಣ್ಣ ಈ ವಿಚಾರಪರರ ಉಜ್ಜುಗಲ್ಲಿನಮೇಲೂ ಹದಿನಾರಾಣೆಯ ಬಣ್ಣವನ್ನೇ ತೋರಬಲ್ಲ. ಆತನ ವಚನಗಳು ಆತನ ಅಂತರಂಗದಮೇಲೆ ಕ್ಷ ಕಿರಣಗಳನ್ನು ಚೆಲ್ಲಿ, ಆತನ ವ್ಯಕ್ತಿತ್ವದ ಸ್ಪಷ್ಟ ಚಿತ್ರವನ್ನು ತೋರಬಲ್ಲ ಸಾಧನಗಳಾಗಿವೆ. ಸಾಧನೆಯ ಹೆದ್ದಾರಿಯಲ್ಲಿ ಆತ ಹೆಜ್ಜೆ ಹೆಜ್ಜೆಯಾಗಿ ಮುಂದುವರಿದು ಹೇಗೆ ಸಿದ್ಧಪುರುಷನಾದನೆಂಬುದೂ ಅಲ್ಲಿ ಸ್ಪಷ್ಟವಾಗುತ್ತದೆ.

ಸಾಧಕನಾದವನಲ್ಲಿ ಸಹಜವಾಗಿ ಇರಬಹುದಾದ ಆಂತರಿಕ ಹೋರಾಟ ಅತ್ಯಂತ ಮಾರ್ಮಿಕವಾಗಿ ಚಿತ್ರಿತವಾಗಿದೆ, ಬಸವಣ್ಣನ ವಚನಗಳಲ್ಲಿ. ಪರಮೇಶ್ವರನನ್ನು ಕುರಿತು ಆತ 'ಅಯ್ಯಾ, ಅಯ್ಯಾ ಎಂದು ಕರೆವುತ್ತಲಿದೇನೆ; ಅಯ್ಯಾ ಅಯ್ಯಾ ಎಂದು ಒರಲುತ್ತಲಿದೇನೆ. ಓ ಎನ್ನಲಾಗದೆ ಅಯ್ಯಾ? ಆವಾಗಳೂ ನಿಮ್ಮ ಕರೆವುತ್ತಲಿದೇನೆ. ಮೌನವೇ ಕೂಡಲ ಸಂಗಮದೇವ?' ಎಂದು ಕರುಳು ಕರಗುವಂತೆ ಆತನು ಬೇಡಿಕೊಳ್ಳುತ್ತಿರುವುದು ಬರಿಯ ನಟನೆಯಲ್ಲ. 'ಅಕಟಕಟಾ, ಶಿವ ನಿನಗಿನಿತು ಕರುಣವಿಲ್ಲ. ಅಕಟಕಟಾ ಶಿವ ನಿನಗಿನಿತು ಕೃಪೆಯಿಲ್ಲ. ಏಕೆ ಹುಟ್ಟಿಸಿ?

ಇಹಲೋಕ ದುಃಖಿಯು, ಪರಲೋಕ ದೂರನ? ಏಕೆ ಹುಟ್ಟಿಸಿದೆ? ಕೂಡಲ ಸಂಗಮದೇವ ಕೇಳಯ್ಯ, ಎನಗಾಗಿ ಮತ್ತೊಂದು ತರುಮರಾದಿಗಳಿದ್ದಿಲ್ಲವೆ?' ಎಂಬ ಆತನ ಕರುಳರೋದನ ಹೃದಯ ಸ್ಪರ್ಶಿಯಾಗಿದೆ. 'ಎಂದೊ ಸಂಸಾರದಂದುಗ (ದುಃಖ) ಹಿಂಗುವುದು? ಎಂದೊ ಮನದಲ್ಲಿ ಪರಿಣಾಮವಹುದೆನಗೆ? ಎಂದೊ ಎಂದೊ! ಕೂಡಲ ಸಂಗಮದೇವಾ ಇನ್ನೆಂದೊ! ಪರಮಸಂತೋಷದಲ್ಲಿಹುದಿನ್ನೆಂದೊ!' ಆತನ ಮೋಕ್ಷಾಕಾಂಕ್ಷೆಯ ತೀವ್ರತೆಯು ರೋಮಾಂಚಕಾರಿಯಾಗಿದೆ. ಬಸವಣ್ಣನ ನುಡಿಗಳು ಊಹಾ ಚಿತ್ರಗಳಲ್ಲ, ಪುಸ್ತಕದ ಬದನೆಯ ಕಾಯಿಗಳಲ್ಲ; ಅನುಭವದ ಮೂಸೆಯಲ್ಲಿ ಕಾದು ಕರಗಿ, ಚಿಂತನೆಯ ಅಚ್ಚಿನಿಂದ ಹೊರಬಂದುವು. ಆದ್ದರಿಂದಲೆ ಅವು ಅಷ್ಟು ಹೃದಯಂಗಮವಾಗಿರುವುದು.

ದೈವಸಾಕ್ಷಾತ್ಕಾರಕ್ಕೆ ಚಿತ್ತೈಕಾಗ್ರತೆ ಅತ್ಯಗತ್ಯ. ಆದರೆ ಮಾನವ ಮನಸ್ಸು ಕೋತಿಯಂತೆ ಚಪಲ. ಬಸವಣ್ಣನಿಗೆ ಇದರ ಅನುಭವವಿದೆ. 'ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು. ನಿಂದಲ್ಲಿ ನಿಲ್ಲಲೀಯದೆನ್ನ ಮನವು. ಹೊಂದಿದಲ್ಲಿ ಹೊಂದಲೀಯದೆನ್ನ ಮನವು' ಎಂದು ಆತ ಮರುಗುತ್ತಾನೆ. ಈ ಕೋತಿಗೆ ಹೆಂಡ ಕುಡಿಸಿದಂತೆ ಮಾಯೆ ಬೇರೆ ತನ್ನ ಪ್ರಭಾವವನ್ನು ಬೀರುತ್ತಿದೆ. 'ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ. ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ. ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ, ಇದಾವಾವ ಪರಿಯಲ್ಲು ಕಾಡಿಹಿತ್ತು ಮಾಯೆ, ಈ ಮಾಯೆಯ ಕಳೆವರೆ ಎನ್ನಳವಲ್ಲ.' ಈ ಹಾಳು ಮಾಯೆ 'ನಾನೊಂದ ನೆನೆವರೆ ತಾನೊಂದ ನೆನೆವುದು; ನಾನಿತ್ತಲೆಳೆದರೆ ತಾನತ್ತಲೆಳೆವುದು' ಹೀಗೆ ಅಳಲಿಸಿ ಬಳಲಿಸಿ ಕಾಡುತ್ತಿರುವುದು. 'ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯ, ವಿಚಾರಿಸಿ ನೋಡೇನು ಹುರುಳಿಲ್ಲವಯ್ಯ' ಎಂದುಕೊಂಡ ಬಸವಣ್ಣ, ಹುರುಳಿಲ್ಲದ ಆ ಮನಸ್ಸಿಗೆ ಸ್ವಲ್ಪ ಕಡಿವಾಣವನ್ನು ತೊಡಿಸಿದೆ ಎಂದುಕೊಳ್ಳುವ ಹೊತ್ತಿಗೆ ಅದು 'ಅಂದಣವನೇರಿದ ಸೊಣಗನಂತೆ, ಕಂಡಡೆ ಬಿಡದು ಮುನ್ನಿನ ಸ್ವಭಾವವನು. ನುಡು ನಡು, ಮನವಿದು ವಿಷಯಕ್ಕೆ ಹರಿವುದು' ಇದನ್ನು ಕಂಡು ಮುಂದೋರದ ಬಸವಣ್ಣ 'ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯ; ಪಶುವೇನ

ಬಲ್ಲುದು? ಹಸುರೆಂದೆಳೆಸುವುದು' ಆದ್ದರಿಂದ ವಿಷಯ ಸುಖಕ್ಕೆ ಅವಕಾಶವಿಲ್ಲದ ಹಾಗೆ 'ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ. ಸುತ್ತಿಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ, ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ. ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸು ಕೂಡಲ ಸಂಗಮದೇವ' ಎಂದು ಬೇಡಿಕೊಳ್ಳುತ್ತಾನೆ. ವಿಷಯ ಸುಖದತ್ತ ಹರಿವ ಮನಸ್ಸನ್ನು ಗೆಲ್ಲುವುದು ಭಗವಂತನ ದಯೆಯಿಂದ ಮಾತ್ರವೇ ಸಾಧ್ಯವೆಂಬ ನಿಶ್ಚಯವನ್ನು ಮುಟ್ಟುವ ಮುನ್ನ ಆತನು ತನ್ನ ಮನೋದೌರ್ಬಲ್ಯವನ್ನು ಮುಚ್ಚಿಟ್ಟುಕೊಳ್ಳದೆ ಹೊರದೋರಿರುವುದು ಆತನ ದೊಡ್ಡ ಗುಣಕ್ಕೆ ಸಾಕ್ಷಿ.

ಕರ್ಮಮಾರ್ಗವನ್ನು ತ್ಯಜಿಸಿ ಭಕ್ತಿಮಾರ್ಗವನ್ನು ಕೈಕೊಂಡಿದ್ದ ಬಸವಣ್ಣನಿಗೆ ತನ್ನ ಮಾರ್ಗ ಬಹು ಕಷ್ಟಸಾಧ್ಯವೆಂದು ಬಹು ಬೇಗ ಅನುಭವಕ್ಕೆ ಬಂತು. ಜೀವಕ್ಕೆ ಅಂಟಿಬಂದ ವ್ಯಾಧಿಗಳಂತಿರುವ ಅಹಂಕಾರ ಮಮಕಾರಗಳಿಂದ ಮುಕ್ತನಾಗದ ಹೊರತು ಭಕ್ತಿಮಾರ್ಗ ಅಳವಡದು. ಸರ್ವಸಂಗಪರಿತ್ಯಾಗಮಾಡಿದೆನೆಂದು ಬಾಯಿಂದ ಆಡಿಬಿಟ್ಟ ಮಾತ್ರಕ್ಕೆ ಆಯಿತೆ? 'ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆ ಮಾರುವೋದೆನೆಂದರೆ, ತನುವನಲ್ಲಾಡಿಸಿನೋಡುವೆ ನೀನು! ಮನವನಲ್ಲಾಡಿಸಿ ನೋಡುವೆ ನೀನು! ಧನವನಲ್ಲಾಡಿಸಿ ನೋಡುವೆ ನೀನು! ಇವೆಲ್ಲಕಂಜದಿದ್ದರೆ ಭಕ್ತಕಂಪಿತ ನಮ್ಮ ಕೂಡಲ ಸಂಗಮದೇವ.' ಭಗವಂತ ಭಕ್ತನನ್ನು ಕಠಿಣವಾದ ಪರೀಕ್ಷೆಗೆ ಒಳಗುಮಾಡಿ, ಅವನ ಬೆಲೆಯನ್ನು ಕಟ್ಟುತ್ತಾನೆ. ಆದ್ದರಿಂದ 'ಶರಣರ ಭಕ್ತಿ ಬಾಳಬಾಯಿದಾರೆ. (ಕತ್ತಿಯ ಮೊನೆ) 'ಭಕ್ತಿಯೆಂಬುದು ಮಾಡಬಾರದು (ಮಾಡುವುದಕ್ಕೆ ಅಸಾಧ್ಯವಾದ್ದು). ಗರಗಸದಂತೆ ಹೋಗುತ್ತ ಕೊಯ್ವುದು, ಬರುತ್ತ ಕೊಯ್ವುದು. ಘಟಸರ್ಪನಲ್ಲಿ ಕೈ ದುಡುಕಿದರೆ ಹಿಡಿಯಲು ಮಾಬುದೆ?' ಆದ್ದರಿಂದ ಭಕ್ತನಾದವನು ಎಲ್ಲ ಚಿಂತೆಗಳನ್ನೂ ದೂರಮಾಡಿ ಭಗವಂತನ ಚಿಂತನೆಯೊಂದರಲ್ಲಿಯೇ ತಲ್ಲೀನನಾಗಬೇಕು. ಬಸವಣ್ಣ ಈ ಎತ್ತರದಲ್ಲಿ ನಿಂತು ಹೇಳುತ್ತಾನೆ. 'ಪರಚಿಂತೆ ಎಮಗೆ ಏಕಯ್ಯ? ನಮ್ಮ ಚಿಂತೆ ನಮಗೆ ಸಾಲದೆ? ಕೂಡಲ ಸಂಗಯ್ಯ ಒಲಿದಾನೋ ಒಲಿಯನೋ ಎಂಬ ಚಿಂತೆ ಹಾಸಲುಂಟು ಹೊದಿಯಲುಂಟು'

ಇಂತಹ ನಿಶ್ಚಿಂತ ಚಿಂತನೆಯಿಂದ ಆತನ ಮನಸ್ಸು ಸ್ಥಿರವಾಯಿತು. 'ವಚನ ದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಮನ ದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ, ಕೂಡಲ ಸಂಗಮದೇವ, ನಿಮ್ಮ ಚರಣಕಮಲದೊಳಗಾನು ತುಂಬಿ' ಎಂದು ಆತ ಹಾಡಿದನು. ಅಪಕ್ವವಾಗಿದ್ದ ಆತನ ಮನಸ್ಸು ಸಂತತವಾದ ಪರಿಶ್ರಮದಿಂದ ಪರಿಪಕ್ವದೆಸೆಯನ್ನು ಪಡೆಯಿತು. ಬೇಡುವವನೂ ನೀಡುವವನೂ ಮಾಡು ವವನೂ ಪರಮೇಶ್ವರನೇ ಹೊರತು ನಾನಲ್ಲ–ಎನ್ನುವಷ್ಟರಮಟ್ಟಿಗೆ ಆತನ ಭಕ್ತಿಭಂಡಾರ ತುಂಬಿಹೋಯಿತು. ಪರಂಜ್ಯೋತಿ ಸ್ವರೂಪನಾದ ಅಲ್ಲಮ ಪ್ರಭುವಿನ ಉಪದೇಶದಿಂದ ಆತನಿಗೆ ಆತ್ಮಜ್ಞಾನ ಮೂಡಿ, ಆತನೂ ಜ್ಯೋತಿಸ್ವರೂಪನೇ ಆದನು. ನಿತ್ಯಾನಂದಮಯನಾಗಿ ತನ್ನ ಉಪದೇಶಾ ಮೃತದಿಂದ ಅಸಂಖ್ಯಾತ ಶರಣರನ್ನು ಅಮೃತಪುತ್ರರನ್ನಾಗಿ ಮಾಡಿದನು. ತಾನು ನಡೆದುಬಂದ ಮುಕ್ತಿಮಾರ್ಗವನ್ನು ತನ್ನ ವಚನಗಳ ಮೂಲಕ ದಿಗ್ದರ್ಶನಮಾಡಿ, ಲೋಕಕಲ್ಯಾಣವನ್ನೂ ಸಾಧಿಸಿದನು.

ಬಸವಣ್ಣ ತನಗಿಂತಲೂ ಪೂರ್ವದವರ ವಚನಗಳನ್ನು ಕುರಿತು 'ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು, ತವರಾಜದ ನೊರೆ ತೆರೆ' ಎಂದು ಹೇಳಿರುವ ಮಾತು ಆತನ ವಚನಗಳಿಗೇ ಹೆಚ್ಚು ಶೋಭಿಸು ತ್ತದೆ. ಅದೆಷ್ಟು ಸರಳ, ಅದೆಷ್ಟು ಸುಲಭ, ಅದೆಷ್ಟು ಲಲಿತ! 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ. ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಲುಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ! ಇದೇ ಬಹಿರಂಗ ಶುದ್ಧಿ! ಇದೇ ನಮ್ಮ ಕೂಡಲಸಂಗನ ನೊಲಿಸುವ ಪರಿ!' ಈ ವಚನವನ್ನು ಕೇಳುತ್ತಿದ್ದರೆ 'ಸತ್ಯಂ ವದ, ಧರ್ಮ ಚರ, ಮಾತೃದೇವೋ ಭವ, ಪಿತೃದೇವೋ ಭವ' ಇತ್ಯಾದಿಯಾದ ವೈದಿಕ ವಾಕ್ಯಗಳು ಜ್ಞಾಪಕಕ್ಕೆ ಬರುತ್ತವೆ. ಅಷ್ಟೇ ಸರಳ, ಅಷ್ಟೇ ಸಂಗ್ರಹ, ಅಷ್ಟೇ ಪ್ರಭಾವಯುತ. ಆತನ ವಚನಗಳೆಂದರೆ ಸದಾಚಾರಸ್ಮೃತಿಗಳು. ಅವುಗಳ ಪ್ರಭಾವದಿಂದ ಸಮಾಜ ಸದಾಚಾರಯುಕ್ತವಾಗುತ್ತದೆ. ಸದಾ ಚಾರವೇ ಮುಕ್ತಿಗೆ ಸೋಪಾನವೆಂದು ಬಸವಣ್ಣನ ಬೋಧನೆ. ಬೌದ್ಧಮತ ದಲ್ಲಿಯೂ ನೀತಿಯ ನಡವಳಿಕೆ ಇದೆ. ಆದರೆ ದೈವವಿರಹಿತವಾದ ಬೌದ್ಧ

ಮತದಲ್ಲಿ ಬಸವಣ್ಣನ ಬೋಧನೆಯಲ್ಲಿರುವ ಫಲಸಂಬಂಧವಿಲ್ಲ. ಈ ವಚನ ವನ್ನು ನೋಡಿ—' ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲುವರು ಅಲ್ಲಿಯೂ ಸಲುವರಯ್ಯ. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲ ರಯ್ಯ, ಕೂಡಲ ಸಂಗಮದೇವ.' ಸಮಾಜಜೀವಿಯಾದವನು ಸುತ್ತು ಮುತ್ತಿನ ಹತ್ತು ಜನಕ್ಕೆ ಉಪಕಾರಿಯಾಗಿದ್ದು ಸೈ ಎನಿಸಿಕೊಂಡಾಗ ದೈವಕ್ಕೂ ಮಚ್ಚಿಗೆಯಾಗುವನು. ಇಹಪರಗಳೆರಡನ್ನೂ ಸಾಧಿಸುವ ಸುಲ ಭೋಪಾಯವೆಂದರೆ ದಯಾಶಾಲಿಯಾಗಿರುವುದು. ಅದೇ ಅತ್ಯಂತ ಶ್ರೇಷ್ಠ ವಾದ ಧರ್ಮ. ' ದಯವಿಲ್ಲದ ಧರ್ಮವೇವುದಯ್ಯ? ದಯವೇ ಬೇಕು ಸರ್ವ ಪ್ರಾಣಿಗಳೆಲ್ಲರಲ್ಲಿ. ದಯವೇ ಧರ್ಮದ ಮೂಲವಯ್ಯ.' ಎನ್ನುತ್ತಾನೆ ಬಸ ವಣ್ಣ. ಸ್ವರ್ಗ ನರಕ, ದೇವಲೋಕ ಮರ್ತ್ಯಲೋಕ ಎಂಬುವು ಬಸವಣ್ಣನ ಅಭಿಪ್ರಾಯದಲ್ಲಿ ಮತ್ತೆ ಬೇರೆ ಏನೂ ಅಲ್ಲ—' ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ; ಆಚಾರವೇ ಸ್ವರ್ಗ, ಅನಾಚಾರವೇ ನರಕ,' ಇನ್ನೂ ಸುಲಭವಾಗಿ ಹೇಳಬೇಕೆ? ಹಾಗಾದರೆ ಇಗೋ—'ಅಯ್ಯ ಎಂದಡೆ ಸ್ವರ್ಗ, ಎಲವೊ ಎಂದಡೆ ನರಕ. ದೇವಾ ಭಕ್ತ ಜಯ ಜೀಯ—ಎಂಬ ನುಡಿಯೊಳಗೆ ಕೈಲಾಸವಿದೆ.'

ಬಸವಣ್ಣನ ಬೋಧನಾವಿಧಾನ ಲಲಿತ ಸುಂದರವಾದ ಸಾಹಿತ್ಯರೂಪ ದಲ್ಲಿದೆ. ನೆರೆ ಕೆನ್ನೆಗೆ, ತೆರೆ ಗಲ್ಲಕೆ, ಶರೀರ ಗೂಡುವೋಗದ ಮುನ್ನ ; ಹಲ್ಲು ಹೋಗಿ ಬೆನ್ನುಬಾಗಿ, ಅನ್ಯರಿಂಗೆ ಹಂಗಾಗದ ಮುನ್ನ ; ಮುಪ್ಪಿಂದೊಪ್ಪವಳಿ ಯದ ಮುನ್ನ ; ಮೃತ್ಯು ಮುಟ್ಟದ ಮುನ್ನ ಪೂಜಿಸು ಕೂಡಲ ಸಂಗಮ ದೇವನ.' ಸಂಸಾರದ ಸುಖ ಕ್ಷಣಭಂಗುರ. ' ಸಂಸಾರವೆಂಬುದು ಗಾಳಿಯ ಸೊಡರು. ಸಿರಿಯೆಂಬುದೊಂದು ಸಂತೆಯ ಮಂದಿ ಕಂಡೆಯ್ಯ.' ಲೌಕಿಕ ವಾದ ಅಧಿಕಾರ ಗೌರವಗಳು ಅಸ್ಥಿರ—' ಹಂಜರ ಬಲ್ಲಿತೆಂದು ಅಂಜದೆ ಓದುವ ಗಿಳಿಯೇ, ಎಂದೆಂದೂ ಅಳಿಯೆನೆಂದು ಗುಡಿಗಟ್ಟಿದೆಯಲ್ಲಾ ನಿನ್ನ ಮನದಲ್ಲಿ! ಮಾಯಾ ಮಂಜರ ಕೊಲುವರೆ ನಿನ್ನ ಹಂಜರ ಕಾವುದೆ?' ಅಳಿಮನದವಸಿಗೆ ಶೀವದೀಕ್ಷೆಕೊಟ್ಟರೆ ಅದು ವ್ಯರ್ಥ, ' ಕುಂಬಳಕಾಯಿಗೆ ಕಬ್ಬುನದ ಕಟ್ಟಕೊಟ್ಟರೆ ಕೊಳೆವುದಲ್ಲದೆ ಬಲುಹಾಗ ಬಲ್ಲುದೆ?' ಹಾಗೆಯೆ ' ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದರ

ಗಂಜಳ ಬಿಡವಣ್ಣ.' 'ಮಣ್ಣ ಪುತ್ಥಳಿಯ ಮಾಣಡೆ ಜಲದಲ್ಲಿ ತೊಳೆದರೆ ನಿಚ್ಚಕ್ಕೆ ನಿಚ್ಚ ಕೆಸರಹುದಲ್ಲದೆ ಅದರಚ್ಚಿಗ ಬಿಡದಣ್ಣ.' ಮೂರ್ಖನಿಗೆ ದೀಕ್ಷೆ ಕೊಟ್ಟರೆ ಏನೂ ಪ್ರಯೋಜನವಿಲ್ಲ; 'ಓಡೆತ್ತ ಬಲ್ಲುದವಲಕ್ಕಿಯ ಸವಿಯ? ಕೋಡಗ ಬಲ್ಲುದೇ ಸೆಳೆಮಂಚದ ಸುಖವ?'

ಸಮಾಜದಲ್ಲಿದ್ದ ಕೊಳೆಕಸಗಳನ್ನು ತೊಳೆದು ಓರೆಕೋರೆಗಳನ್ನು ತಿದ್ದುವ ಕಷ್ಟಕಾರ್ಯದಲ್ಲಿ ಕಂಕಣಬದ್ಧನಾಗಿ ನಿಂತದ್ದ ಬಸವಣ್ಣನಿಗೆ ಸಾಕಷ್ಟು ಅಡ್ಡಿ ಆತಂಕಗಳು, ಪ್ರತಿಭಟನೆಗಳು, ನಿಂದೆ ನಿಷ್ಠುರಗಳು ಇದಿರಾಗಿರ ಬೇಕು. ಆದರೆ ಆ ಸತ್ವಶಾಲಿ ಇವುಗಳಿಗೆ ಸೊಪ್ಪುಹಾಕದೆ ನ್ಯಾಯನಿಷ್ಠುರ ನಾಗಿ ನಿಂತನು. 'ಆರು ಮುನಿದು ಎಮ್ಮನೇನ ಮಾಡುವರು? ಊರು ಮುನಿದು ನಮ್ಮನೆಂತು ಮಾಡುವರು? ನಮ್ಮ ಕುನ್ನಿಗೆ ಕೂಸ ಕೊಡಬೇಡ! ನಮ್ಮ ಸೊಣಗಂಗೆ ತಣಿಗೆಯಲ್ಲಿಕ್ಕಬೇಡ! ಆನೆಯಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ?' ಎಂಬ ಆತನ ನುಡಿಯ ಕಿಡಿಗಳು ಮನದ ಆವೇಗವನ್ನೂ ನಿರ್ದಾಕ್ಷಿಣ್ಯ ಸ್ವಭಾವವನ್ನೂ ತೋರುತ್ತವೆ. 'ದೇವನೊಬ್ಬ ನಾಮ ಹಲವು, ಪರಮ ಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದಡೆ ಕಿವಿಮೂಗ ಕೊಯ್ವನು. ಹಲವು ದೇವರ ಎಂಜಲ ತಿಂಬವನೇನೆಂಬೆನಯ್ಯ' ಎಂಬ ಆತನ ನುಡಿಗಳು ನಿಷ್ಠುರವಾಗಿದ್ದರೂ ಉದಾರವಾದ ಅರ್ಥಗರ್ಭಿತವಾಗಿವೆ. ಯಾರು ಯಾವ ಹೆಸರಿನಿಂದ ಕರೆದರೂ ಭಗವಂತನಿಗೇ ಸಲ್ಲುತ್ತದೆಯೆಂಬ ಉದಾರಚರಿತರಿಗೆ ವ್ಯಾಜ್ಯವೆಲ್ಲಿಯದು? ಆದರೆ ಊಸುರೊಳ್ಳಿಯಂತೆ ಕ್ಷಣ ಕ್ಕೊಂದು ಬಣ್ಣವನ್ನು ತಳೆವ ಅಧಮರನ್ನು ಸಹಿಸುವುದು ಹೇಗೆ? 'ಭಕ್ತರ ಕಂಡರೆ ಬೋಳಪ್ಪಿರಯ್ಯ; ಸವಣರ ಕಂಡರೆ ಬತ್ತಲೆಯಪ್ಪಿರಯ್ಯ; ಹಾರು ವರ ಕಂಡರೆ ಹರಿನಾಮವೆಂಬಿರಯ್ಯ; ಅವರವರ ಕಂಡರೆ ಅವರವರಂತೆ ಸೂಳೆಗೆ ಹುಟ್ಟಿದವರ ತೋರದಿರಯ್ಯ' ಎಂದು ಬಸವಣ್ಣ ಏಕನಿಷ್ಠೆಯಿಲ್ಲದವ ರನ್ನು ಛಿಮಾರಿಮಾಡುತ್ತಾನೆ. ಹಾಗೆಯೇ 'ಗಂಡ ಶಿವಲಿಂಗದೇವರ ಭಕ್ತ, ಹೆಂಡತಿ ಮಾರಿಮಸಣಿಯ ಭಕ್ತೆ; ಗಂಡ ಕೊಂಬುದು ಪಾದೋದಕ ಪ್ರಸಾದ, ಹೆಂಡತಿ ಕೊಂಬುದು ಸುರೆ ಮಾಂಸ' ಇಂತಹ ವೈಪರೀತ್ಯವನ್ನು ಆತ ಸಹಿಸಲಾರ.

ಸುತ್ತು ಮುತ್ತಿನ ಸಮಾಜದಲ್ಲಿ ತುಂಬಿತುಳುಕುತ್ತಿರುವ ಅಜ್ಞಾನ

ವನ್ನು ಕಂಡು ಆತನಿಗೆ ಕನಿಕರಯುಕ್ತವಾದ ರೋಷ. 'ಮಡಿಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ, ಹಣಿಗೆ ದೈವ, ಬಿಲ್ಲ ನಾರಿ ದೈವ-ಕಾಣಿರೊ! ಕೊಳಗ ದೈವ, ಗಿಣ್ಣಿಲು ದೈವ-ಕಾಣಿರೊ! ದೈವ ದೈವವೆಂದು ಕಾಲಿಡಲಿಂಬಿಲ್ಲ!' ಆ ದೈವಗಳೊ, ಅವುಗಳ ಸ್ವರೂಪ ಸ್ವಭಾವಗಳೊ-'ಹಾಳು ಮೊರಡಿಗಳಲ್ಲಿ, ಊರ ದಾರಿಗಳಲ್ಲಿ, ಕೆರೆ ಭಾವಿ ಹೂಗಿಡು ಮರಂಗಳಲ್ಲಿ,ಗ್ರಾಮ ಮಧ್ಯಂಗಳಲ್ಲಿ ಚೌಪಥ ಪಟ್ಟಣ ಪ್ರವೇಶದಲ್ಲಿ, ಹಿರಿಯಾಲದ ಮರದಲ್ಲಿ ಮನೆಯ ಮಾಡಿ; ಕರೆವೆಮ್ಮೆಯ, ಹಸುಗೂಸು ಬಸುರಿ ಬಾಣಂತಿ ಕುಮಾರಿ ಕೊಡಗೂಸೆಂಬವರ ಹಿಡಿದುಂಬ, ತಿರಿದುಂಬ, ಮಾರಯ್ಯ, ಬೀರಯ್ಯ, ಖೇಚರ ಗಾವಿಲ, ಅಂತರ ಬೆಂತರ, ಕಾಳಯ್ಯ, ಮಾರಯ್ಯ, ಮಾಳಯ್ಯ, ಕೇತಯ್ಯಗಳೆಂಬ ನೂರುಮಡಿಕೆಗೆ ನಮ್ಮ ಕೂಡಲಸಂಗಮದೇವ ಶರಣೆಂಬುದೊಂದೆ ದಡಿಸಾಲದೆ?' ಅಹುದು ಅರ್ಥಹೀನವಾದ ಈ ಅನಾಗರಿಕ ದೈವಗಳೂ ಅವುಗಳ ಪರವಾದ ಮೂಢನಂಬಿಕೆಗಳೂ ಅಳಿಯಬೇಕಾದರೆ ನಿಜವಾದ ದೈವಸ್ವರೂಪ ಅರ್ಥವಾಗಬೇಕು. ಆಗಿನಕಾಲದ ಮೂಢನಂಬಿಕೆಗಳಿಗೆ, ಅನಾಚಾರ ಅಜ್ಞಾನಗಳಿಗೆ ಪಂಜುಹಿಡಿದು ತೋರಿ ಆ ಪಂಜಿನಿಂದಲೇ ಅವುಗಳನ್ನು ದಹಿಸಿ ನಿರ್ನಾಮಮಾಡುವ ಕಾರ್ಯದಲ್ಲಿ ನಿಯೋಜಿತವಾಗಿವೆ, ಬಸವಣ್ಣನ ವಚನಗಳು. 'ಅರಗು ತಿಂದರೆ ಕರಗುವ ದೈವವ, ಉರಿಯ ಕಂಡರೆ ಮುರುಟುವ ದೈವವ, ಎಂತು ಸರಿಯೆಂಬೆನಯ್ಯ? ಅವಸರ ಬಂದರೆ ಮಾರುವ ದೈವವನೆಂತು ಸರಿಯೆಂಬೆನಯ್ಯ? ಅಂಜಿಕೆಯಾದರೆ ಹೂಳುವ ದೈವನನೆಂತು ಸರಿಯೆಂಬೆನಯ್ಯ?' ಎಂದು ಬಸವಣ್ಣ ಕೇಳುತ್ತಾನೆ. ತತ್ವಕ್ಕೂ ಕೃತಿಗೂ ಇರುವ ಅಂತರವನ್ನು ಎತ್ತಿ ಹಿಡಿದು 'ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು,ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ, ಉಂಬ ಜಂಗಮ ಬಂದರೆ ನಡೆ ಎಂಬರು; ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ' ಎಂದು ಜನರ ನಡವಳಿಕೆಯ ಪೊಳ್ಳನ್ನು ಬಯಲು ಮಾಡುತ್ತಾನೆ. ಅನಾಗರಿಕರಾದ ಅಜ್ಞಾನಿಗಳು ಹಾಗಿರಲಿ, ವೇದ ಶಾಸ್ತ್ರಗಳನ್ನು ಓದಿದ ಬ್ರಾಹ್ಮಣರು ಯಜ್ಞಯಾಗಾದಿಗಳ ಹೆಸರಿನಲ್ಲಿ ಮಾಡುವ ಪ್ರಾಣಿವಧೆ ಬಸವಣ್ಣನ ಹೃದಯವನ್ನೆ ಕಲಕಿದೆ. ಆತನು ಯಾಗಪಶುವಾಗಿ ಹೋಗುತ್ತಿರುವ ಹೋತನನ್ನು ಕುರಿತು ಹೇಳುವ ಮಾತು ಕಲ್ಲನ್ನೂ ಕರಗಿ

ಹೀತು 'ಮಾಕಿಪ ಮಾತಿಗೆ ನಿನ್ನ ಕೋಡಹಪೆಂದು ಎಲೆ ಹೋತಾ ಅಳು ಕಂಡಾ! ವೇದವನೋದಿದವರ ಮುಂದೆ ಅಳು ಕಂಡಾ! ಶಾಸ್ತ್ರವನೋದಿದವರ ಮುಂದೆ ಅಳು ಕಂಡಾ! ನೀನತ್ತುದಕೆ ತಕ್ಕುದ ಮಾಡುವ ಕೂಡಲ ಸಂಗಮದೇವಾ'

ಸರ್ವಸಮತೆಯನ್ನು ಸಾರಹೊರಟ ಬಸವಣ್ಣನಿಗೆ ಜಾತಿಯಲ್ಲಿನ ಮೇಲು ಕೀಳು ಅರ್ಥವಿಲ್ಲದುದು. 'ಕುಲವನರಸದಿರಿಂ ಭೋ' ಎನ್ನುತ್ತಾನೆ ಆತ. ಏಕೆಂದರೆ ಮಹಋಷಿಗಳೆಂದು ಪ್ರಖ್ಯಾತರಾದವರ ಮೂಲವನ್ನು ಬೆದಕಿದಾಗ ಬೆಕ್ಕಸ ಬಡುವಂತಾಗುತ್ತದೆ. 'ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಮಂಡೋದರಿ ಕಪ್ಪೆಯ ಮಗಳು...............ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ಕಶ್ಯಪ ಕಮ್ಮಾರ' ಇತ್ಯಾದಿ ಇತ್ಯಾದಿ. ಅಗಸ ಕಮ್ಮಾರ ಬ್ರಾಹ್ಮಣ ಮೊದಲಾದವರಲ್ಲಿ ಆತನಿಗೆ ಅಂತಹ ವ್ಯತ್ಯಾಸವೇನೂ ತೋರುತ್ತಿಲ್ಲ. ಎಲ್ಲರ ಜನನ ಕ್ರಮವೂ ಒಂದೆ; ಎಲ್ಲರೂ ಹರ್ಷ ವಿಷಾದಗಳಲ್ಲಿ ಆಶೆ ಆಮಿಷಗಳಲ್ಲಿ ಸಮಾನರೇ; 'ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ' ಒಬ್ಬೊಬ್ಬನದು ಒಂದೊಂದು ಕಾಯಕ. ಇದರಲ್ಲಿ ಮೇಲು ಕೀಳಿನ ಪ್ರಶ್ನೆಯೆಲ್ಲಿ? ಹುಟ್ಟಿನಿಂದ ಯಾರೂ ಮೇಲು ಕೀಳಲ್ಲ. ಮೇಲು ಕೀಳುಗಳು ಬರುವುದು ನಡವಳಿಕೆಯಿಂದ 'ಕೊಲುವವನೆ ಮಾದಿಗ ಹೊಲಸು ತಿಂಬವನೆ ಹೊಲೆಯ, ಕುಲವೇನೊ? ಅವದಿರ ಕುಲವೇನೊ?' ಎಂದು ಕೇಳಿ, ಭಕ್ತನೇ ಕುಲಜನೆಂಬ ಸಿದ್ಧಾಂತವನ್ನು ಆತ ಸ್ಥಾಪಿಸುತ್ತಾನೆ. ಹಾಗೆಯೆ ಮೇಲು ಕೀಳುಗಳೆಂಬುದು ಕಾಯಕಕ್ಕೂ ಅನ್ವಯಿಸುವುದಿಲ್ಲ; ಧರ್ಮದೀಕ್ಷೆಯನ್ನು ಪಡೆದಿದ್ದವರೆಲ್ಲರ ಕಾಯಕಗಳೂ ಪವಿತ್ರವೆ. ಎಲ್ಲರ ಸೇವೆಯೂ ಈಶಸೇವೆಯೆ. ಆದ್ದರಿಂದ ಮನೆಗೆ ಬಂದ ಭಕ್ತನ ಕಾಯಕವಾವುದೆಂದು ಕೇಳಿದರೆ ನನ್ನ ತಲೆದಂಡಪೆಂದು ಆತ ಹೇಳಿಕೊಂಡಿದ್ದಾನೆ. 'ಎಮ್ಮ ತಾಯಿ ನಿಂಬವ್ವೆ ನೀರನೆರೆದುಂಬಳು, ಎಮ್ಮಯ್ಯ ಚನ್ನಯ್ಯರಾಯ ಕಂಪಣವ ಹೊರುವ. ನಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು,' ಎಂದು ಹೇಳಿ ಸಮಾಜದಲ್ಲಿ ಸರ್ವಸಮಾನತೆಗೂ ಒಂದು ಆದರ್ಶವನ್ನು ಸ್ಥಾಪಿಸಿದನು.

ಯುಕ್ತಿ ಯುಕ್ತವಾಗಿದ್ದ ಬಸವಣ್ಣನ ವಚನಗಳೂ, ನುಡಿದಂತೆ ನಡೆಯುವ ಆತನ ಉದಾಹರಣೆಯೂ ಜನರನ್ನು ವೀರಶೈವಕ್ಕೆ ಆಕರ್ಷಿಸಿತು. ಆದರೆ ಅವರಲ್ಲಿ ಹಲವರು ತಮ್ಮ ಪೂರ್ವಸಂಸ್ಕಾರಕ್ಕೆ ಅಂಟಿಕೊಂಡು ಅರ್ಥವಿಲ್ಲದ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಬರುತ್ತಿದ್ದರು, ಇದನ್ನು ಕಂಡು ಬಸವಣ್ಣ ಕಿಡಿಕಿಡಿಯಾಗುತ್ತಾನೆ. 'ಪರುಷ ಮುಟ್ಟಿದ ಬಳಿಕ ಕಬ್ಬುನವಾಗದು, ನೋಡಾ' ಎಂದುಕೊಂಡು, ಕಬ್ಬಿಣ ಕಬ್ಬಿಣ ವಾಗಿಯೇ ಉಳಿಯಿತೆಂದಮೇಲೆ ಅದು ಸ್ಪರ್ಶಶಿಲೆಯ ಪ್ರಭಾವಕ್ಕೆ ಒಳಗಾಗದೆಯೇ ಇರಬೇಕು. ಈ ಕಬ್ಬಿಣವನ್ನು ರೂಪಾಂತರಿಸಬೇಕಾದರೆ ಕಾಸಿ, ಕರಗಿಸಿ, ರಾಸಾಯನಿಕ ಕ್ರಿಯೆಯನ್ನು ಪ್ರಯೋಗಿಸಬೇಕು. ಬಸವಣ್ಣನ ವಚನಗಳು ಅಂತಹ ಪ್ರಯೋಗಕ್ಕೆ ಸಮಾನವಾಗಿವೆ. ತಲೆಬೋಳಾದರೂ ಮನಬೋಳಾಗದ ಲಿಂಗಧಾರಿಗಳನ್ನು, ಭಕ್ತರಲ್ಲದ ವೇಷಧಾರಿಗಳನ್ನು, ಬಹಿರಾಡಂಬರದ ಆಟಮಟಭಕ್ತರನ್ನು ಆತ 'ಕುಳ್ಳಿದ್ದು ಲಿಂಗವ ಪೂಜಿಸಿ, ಅಲ್ಲದಾಟವನಾಡುವರಯ್ಯ; ಬೆಳ್ಳಿತ್ತಿನ ಮರೆಯಲ್ಲಿದ್ದು ಹುಲ್ಲೆಗೆ ಅಂಬತೊಡುವಂತೆ' ಎಂದು ಟೀಕಿಸುತ್ತಾನೆ. 'ಕುರಿವಿಂಡು ಕಬ್ಬಿನ ಉಲಿವತೋಟವ ಹೊಕ್ಕು ತೆರನನರಿಯದೇ ತನಿರಸದ ಹೊರಗಣೆಲೆಯನೇ ಮೇದುವು! ನಿಮ್ಮನರಿವ ಮದಕರಿಯಲ್ಲದೆ ಕುರಿಬಲ್ಲುದೇ ಕೂಡಲ ಸಂಗಮದೇವ?' ಎಂದು ತೆಗಳುತ್ತಾನೆ. 'ಹೊರಿಸಿಕೊಂಡು ಹೋದ ನಾಯಿ ಮೊಲನನೇನ ಹಿಡಿವುದಯ್ಯ?' ಎಂದು ಕಟಕಿಯಾಡುತ್ತಾನೆ. 'ಏತ ತಲೆವಾಗಿದರೇನು, ಗುರುಭಕ್ತನಾಗಬಲ್ಲುದೆ? ಇಕ್ಕುಳ ಕೈಮುಗಿದರೇನು, ಭೃತ್ಯಾಚಾರಿಯಾಗಬಲ್ಲುದೆ? ಗಿಳಿಯೋದಿದರೇನು, ಲಿಂಗ ವೇದಿಯಾಗಬಲ್ಲುದೆ?' ಎಂದು ವಿಡಂಬನಮಾಡುತ್ತಾನೆ. ಮತ್ತೊಬ್ಬರಿಂದ ಮನೆದೇವರನ್ನು ಪೂಜೆ ಮಾಡಿಸಿ, ತಾವು ಕೃತಕೃತ್ಯರಾದೆವೆಂದು ಭಾವಿಸಿದದರನ್ನು ಕಂಡಾಗಲಂತೂ ಆತನ ಕೋಪ ಕೆರಳಿ ಕೆಂಗೆಂಡವಾಗುತ್ತದೆ. ಆತ ಕೇಳುತ್ತಾನೆ–'ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು ಬೇರೊಬ್ಬರ ಕೈಯಲು ಮಾಡಿಸಬಹುದೆ?' ಎಂದು. ಈ ಮಾತನ್ನು ಕೇಳಿದಮೇಲೆ ದೇವರ ಪೂಜೆಗಾಗಿ ಹೆರವರನ್ನು ಬಯಸುವುದು ಸಾಧ್ಯವೆ?

ಗುರು ಲಿಂಗ ಜಂಗಮದಲ್ಲಿ ಎರಡರಿಯದ ಭಕ್ತಿಯನ್ನು ಬೆಳಸಿ

ಕೊಂಡಿದ್ದ ಬಸವಣ್ಣ ಅದನ್ನೆ ಜನರಿಗೂ ಬೋಧಿಸಿದ. ಶರಣರೊಡನೆ ಲಘುವಾಗಿ ನಡೆದುಕೊಳ್ಳುವುದು ಎಂಥ ಭಯಂಕರವೆಂಬುದನ್ನು ಹೇಗೆ ಕಣ್ಣಿಗೆ ಕಟ್ಟುವಂತೆ ಆತ ವರ್ಣಿಸುತ್ತಾನೆ, ನೋಡಿ–'ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸಿಕೊಂಬಂತೆ, ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ, ಹುಲಿಯ ಮೀಸೆಯ ಹಿಡಿದುಕೊಂಡು ಒಲಿದುಯ್ಯಲನಾಡುವಂತೆ, ಕೂಡಲಸಂಗನ ಶರಣರೊಡನೆ ಮರೆದು ಸರಸವಾಡಿದರೆ ಸುಣ್ಣಕಲ್ಲ ಮಡಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ!' ತಾನು ಬಿಜ್ಜಳರಾಜನ ಭಂಡಾರಿಯಾಗಿ, ಆತನ ಅನುಗ್ರಹವನ್ನು ಸಂಪಾದಿಸಿ, ಜಂಗಮದಾಸೋಹವನ್ನು ನಡಸುತ್ತಿರುವೆನೆಂದು ಹೇಳುವವರ ಬಾಯಿ ಕಟ್ಟುವಂತೆ ಆತ ' ಊರ ಮುಂದೆ ಹಾಲಹಳ್ಳ ಹರಿಯುತ್ತಿರಲು ಒದೆಯಾವಿನ ಬೆನ್ನ ಹರಿಯಲದೇಕಯ್ಯ? ಲಜ್ಜೆಗೆಡಲೇಕೆ, ನಾಣುಗೆಡಲೇಕೆ? ಕೂಡಲಸಂಗಮದೇವಯ್ಯನುಳ್ಳನ್ನಕ ಬಿಜ್ಜಳನ ಭಂಡಾರವೆನಗೇಕಯ್ಯ?' ಎಂದು ಹೇಳುತ್ತಾನೆ. ಆತ ಬಿಜ್ಜಳನ ಭಂಡಾರಿಯಾಗಿದ್ದುದು ಯಾವ ಸ್ವಾರ್ಥಕ್ಕಾಗಿಯೂ ಅಲ್ಲ. ನಿರ್ಭಯವಾದ, ನಿರ್ದಾಕ್ಷಿಣ್ಯವಾದ, ನಿಸ್ಸಂದಿಗ್ಧ, ನಿಶ್ಚಲ, ನಿಷ್ಠುರವಾದ ಆತನ ಮಾತುಗಳನ್ನು ಕೇಳಿ 'ಹೊತ್ತಾರೆಯೆದ್ದು ಕಣ್ಣ ಹೊಸೆವುತ್ತ ಎನ್ನ ಒಡಲಿಂಗೆ, ಎನ್ನ ಒಡವೆಗೆ, ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ!... ಭವಿ ಬಿಜ್ಜಳನ ಗದ್ದುಗೆಯ ಕಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವರಯ್ಯ ಪ್ರಮಥರು; ಕೊಡುವೆನುತ್ತರವನವರಿಗೆ–ಕೊಡಲಮ್ಮೆ! ಹೊಲೆಹೊಲೆಯರ ಮನೆಯ ಹೊಕ್ಕಾದರೆಯು, ಸಲೆ ಕೈಕೂಲಿಯ ಮಾಡಿಯಾದರೆಯು ನಿಮ್ಮ ನಿಲವಿಂಗೆ ಕುದಿವೆನಲ್ಲದೆ, ಎನ್ನ ಒಡಲವಸರಕ್ಕೆ ಕುದಿದೆನಾದರೆ ತಲೆದಂಡ ಕೂಡಲ ಸಂಗಮದೇವ' ಬಸವಣ್ಣನನ್ನು ಕೆಡೆನುಡಿದ ಪ್ರಮಥರು ಈ ನುಡಿಯನ್ನು ಕೇಳಿ ನಡುಗಿ ಹೋಗಿರಬೇಕು.

ಬಸವಣ್ಣ ನಿಷ್ಕಪಟನಾದ ಭಕ್ತಿಯೋಗಿ. ಆತನು ಸದಾಚಾರಿ, ಲಿಂಗನಿಷ್ಠ, ಭಕ್ತಿಭಂಡಾರಿ; ಆದರೆ ಆತನಿಗೆ ಹೊರಗಿನವರ ಮೆಚ್ಚಿಕೆಯೇನೂ ಅಗತ್ಯವಿಲ್ಲ. ಆತನಿಗೆ ಬೇಕಾದುದು ಐಹಿಕಸ್ಥಿತಿಯನ್ನು ಮರೆಸಬಲ್ಲ ಚಿತ್ಕಲಾ ದರ್ಶನ, ಬ್ರಹ್ಮಾನಂದ. ಅದು ದೊರೆಯುವವರೆಗೂ ಆತನು ತೀವ್ರವಾದ

ವೇದನೆಯನ್ನು ಅನುಭವಿಸಿದನು. ಹೊಗಳಿಕೆಯನ್ನು ಕೇಳಿದಾಗ ಆತ 'ಎನ್ನವರೊಲಿದು ಹೊನ್ನ ಶೂಲದಲಿಕ್ಕಿದರೆನ್ನ ಹೊಗಳಿ ಹೊಗಳಿ' ಎಂದು ಸಂಕಟಪಡುತ್ತಾನೆ. ಆತ್ಮವಿಮರ್ಶೆಯಲ್ಲಿ ತೊಡಗಿರುವ ಆತ ಒಳತೋಟಿಯನ್ನು ನಿಸ್ಪೃಹನಾಗಿ ಹೊರಹರಿಸಿದ್ದಾನೆ. ಆದ್ದರಿಂದಲೇ ಆತನು ಮಾನವಾತೀತನಾಗದೆ, ದೇವತ್ವ ಮನುಷ್ಯತ್ವಗಳು ಸಂಧಿಸುವ ಸ್ಥಾನದಲ್ಲಿ ನಿಂತಿದ್ದಾನೆ; ಆತನ ವಚನಗಳು ಉಜ್ವಲವಾದ ಕಾಂತಿಯಿಂದ ಕೋರೈಸುತ್ತಿವೆ. ಆತನು ಎತ್ತಿ ಹಿಡಿದ ಆದರ್ಶಕ್ಕೆ ಆತನೇ ಉದಾಹರಣೆಯನ್ನೂ ಒದಗಿಸಿದ್ದಾನೆ–'ನುಡಿದರೆ ಮುತ್ತಿನ ಹಾರದಂತಿರಬೇಕು! ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು; ನುಡಿದರೆ ಪಳಿಕದ ಶಲಾಕೆಯಂತಿರಬೇಕು! ನುಡಿದರೆ ಲಿಂಗ ಮೆಚ್ಚಿ ಅಹುದೆನಬೇಕು!'

ಲಿಂಗ ಮೆಚ್ಚಿ 'ಅಹುದು' ಎಂದುದರಿಂದಲೇ ಬಸವಣ್ಣ ಅಮೃತಪುತ್ರನಾದುದು, ಪವಾಡ ಪುರುಷನಾದುದು, ಮಾನವ ದೇವನಾದುದು. ಆತನ ವಚನಗಳಲ್ಲಿ ಧರ್ಮ ಕಾವ್ಯಧರ್ಮಗಳು ಸಮರಸವಾಗಿ ಬೆರೆತು, ಸ್ವಾದುವಾದ ಔಷಧದಂತೆ ಅವು ಮನೋಜ್ಞವಾಗಿ ಶ್ರೇಯಸ್ಸಾಧಕವಾಗಿವೆ–ಆದರೆ ಆತನ ಕಡೆಗಾಲದ ಚಿತ್ರ ಅಸ್ಪಷ್ಟವಾಗಿದೆ, ಸಂದಿಗ್ಧವಾಗಿದೆ. ಭಾರತದ ಶಾಸನದಲ್ಲಿ ಭರತಖಂಡವನ್ನು ಜಾತ್ಯತೀತ ರಾಷ್ಟ್ರವೆಂದು ಪರಿಗಣಿಸಿರುವಂತೆ, ಬಸವಣ್ಣನ ಸಂಘಟನೆಯಲ್ಲಿ ಜಾತ್ಯತೀತ ಸಮಾಜದ ವ್ಯವಸ್ಥೆ ಕಂಡುಬರುತ್ತದೆ. ಕಾಯಕದ ಮಹತ್ವವನ್ನು ಎತ್ತಿ ಹಿಡಿದು, ಬ್ರಾಹ್ಮಣನಿಂದ ಹೊಲೆಯನ ವರೆಗೆ ಎಲ್ಲರೂ–ಎಲ್ಲ ಕಾಯಕದವರೂ–ಸಮಾನರೆಂಬ 'ಸರ್ವಸಮತೆ'ಯನ್ನು ಆತ ಬೋಧಿಸಿದುದು ಸಂಪ್ರದಾಯವಾದಿಗಳಿಗೆ ನುಂಗಲಾರದ ತುತ್ತಾಗಿ ಪರಿಣಮಿಸಿತೆಂದು ತೋರುತ್ತದೆ. ಬಸವಣ್ಣನೂ ಸುಸಂಘಟಿತವಾಗಿದ್ದ ಆತನ ಶರಣಸಂಘದವರೂ ಇವಕ್ಕೆ ಸೊಪ್ಪು ಹಾಕದೆ ತಮ್ಮ ಕಾರ್ಯದಲ್ಲಿ ಮುಂದುವರಿದಿರಬೇಕು. ಸಮಾಜಸಂಸ್ಕರಣದ ಈ ಕಾವಿನಲ್ಲಿ ಬ್ರಾಹ್ಮಣಕನ್ಯೆಯೊಬ್ಬಳನ್ನು ಹೊಲೆಯರ ಹುಡುಗನೊಬ್ಬನಿಗೆ ಕೊಟ್ಟು ಮದುವೆಯಾಯಿತು. ಕ್ರಾಂತಿಕಾರಕವಾದ ಈ ವರ್ಣಸಂಕರವನ್ನು ಕಂಡು ಸನಾತನಿಯಾದ ರಾಜ ಕೆರಳಿ ಕೆಂಗೆಂಡವಾದ; ವಧೂವರರ ತಂದೆಗಳಾದ ಮಧುವಯ್ಯ ಹರಳಯ್ಯ–ಎಂಬುವರನ್ನು ಕ್ರೂರವಾಗಿ ಶಿಕ್ಷಿಸಿದ.

ಇದನ್ನು ಕಂಡು ರೊಚ್ಚಿಗೆದ್ದ ಸಮಾಜಸುಧಾರಕರು—ಶಿವಶರಣರು—ದಂಗೆಯೆದ್ದರು. ಜಗದೇವ ಬ್ರಹ್ಮಯ್ಯ-ಎಂಬ ಇಬ್ಬರು ವೀರಾವೇಶದಿಂದ ಬಿಜ್ಜಳನ ಸಭೆಗೆ ನುಗ್ಗಿ ಆತನನ್ನು ಇರಿದು ಕೊಂದರು. ಕೋಪದಿಂದ ಕುರುಡರಾಗಿದ್ದ ಮತಪ್ರೇಮಿಗಳ ಗುಂಪನ್ನು ಹತೋಟಿಯಲ್ಲಿರಿಸುವುದು ಬಸವಣ್ಣನಿಗೆ ಕೂಡ ಅಸಾಧ್ಯವಾಯಿತೆಂದು ತೋರುತ್ತದೆ. ರಾಜನ ಕೊಲೆಯಾಗುತ್ತಲೆ ರಾಜಸೈನ್ಯವು ಶರಣರನ್ನು ಶಿಕ್ಷಿಸುವ ಕಾರ್ಯವನ್ನು ಕೈಕೊಂಡಿತೆಂದು ತೋರುತ್ತದೆ. ಆಗ ಅವರೆಲ್ಲರೂ ದಿಕ್ಕುದಿಕ್ಕಿಗೆ ಚದರಿ ಓಡಿಹೋಗಿರಬೇಕು. ಬಸವಣ್ಣನೂ ಮಂಗಳವಾಡ ಅಥವಾ ಕಲ್ಯಾಣದಿಂದ ಹೊರಟುಹೋಗಿ, ಕಪ್ಪಡಿಸಂಗಮದಲ್ಲಿ ಶಿವೈಕ್ಯನಾಗಿರಬೇಕು. ಮಹಾಪುರುಷರನೇಕರಂತೆ ಆತನೂ ತಾನು ಬೋಧಿಸಿದ ತತ್ವವನ್ನು ಅನುಷ್ಠಾನಕ್ಕೆ ತರುವಲ್ಲಿ ಆತ್ಮಯಜ್ಞದ ಬಲಿದಾನದಿಂದ ಹುತಾತ್ಮನಾಗಬೇಕಾಯಿತೆಂದು ಕಾಣುತ್ತದೆ.

**ಮಹಾದೇವಿಯಕ್ಕ**

ವೀರಶೈವದ ಉದಾರ ತತ್ವದಿಂದ ಮೂಡಿಬಂದ ಹಲವು ವಚನಕಾರ್ತಿಯರಲ್ಲಿ ಮಹಾದೇವಿಯಕ್ಕ ಅಗ್ರಗಣ್ಯಳು. ಇದಕ್ಕೂ ಹಿಂದೆ ಕಾಣಬರುವ ಕವಯಿತ್ರಿ ಕಂತಿ ಕೇವಲ ಕಲ್ಪನೆಯ ವ್ಯಕ್ತಿಯೆಂದು ಹಲವು ವಿದ್ವಾಂಸರ ಮತವಾಗಿರುವುದರಿಂದ, ನಿರ್ವಿವಾದವಾದ ಅಸ್ತಿತ್ವವನ್ನು ಪಡಿದಿರುವ ಮಹಾದೇವಿಯಕ್ಕ, ಕನ್ನಡ ಸಾಹಿತ್ಯದ ಪ್ರಪ್ರಥಮ ಕವಯಿತ್ರಿಯೆಂಬ ಗೌರವಕ್ಕೂ ಪಾತ್ರಳಾಗುತ್ತಾಳೆ. ಆಕೆಯ ಬಾಳ ಕಥೆ ಕೌತುಕಯುಕ್ತವಾಗಿರುವಷ್ಟೆ ಮಹತ್ವಪೂರ್ಣವಾಗಿದೆ. ಉಡುತಡಿಯೆಂಬ ಒಂದು ಊರು. ಅಲ್ಲಿ ನಿರ್ಮಲಶೆಟ್ಟಿ-ಸುಮತಿ ಎಂಬ ವೀರಶೈವದಂಪತಿಗಳು. ಅವರಿಬ್ಬರ ಹೆಸರೂ ಸಾರ್ಥಕವಾಗುವಂತೆ ಹುಟ್ಟಿದ ಅವರ ಮಗಳೇ ಅಕ್ಕ ಮಹಾದೇವಿ. ಸೂಕ್ಷ್ಮಬುದ್ಧಿಯ ಈ ಹೆಣ್ಣು ಬೆಳೆಯುತ್ತಾ ಹೋದಂತೆ ಶಿವಭಕ್ತಿಯೂ ಜೊತೆಯಲ್ಲೆ ಬೆಳೆಯಿತು. ದಿವ್ಯಸುಂದರಿಯಾದ ಈ ಹೆಣ್ಣು ಹದಿನಾರರ ಹರೆಯವನ್ನು ಪಡೆದಾಗ, ಉಡಿತಡಿಯ ರಾಜನಾದ ಕೌಶಿಕನು ಅಕಸ್ಮಾತ್ತಾಗಿ ಆಕೆಯನ್ನು ಕಂಡು ಮೋಹಿತನಾದನು. ಜೈನನಾದ ರಾಜನಿಗೆ ಮಗಳನ್ನು ಕೊಡಲು ನಿರ್ಮಲಶೆಟ್ಟಿಗೆ ಇಷ್ಟವಿರಲಿಲ್ಲ. ಆದರೆ ರಾಜಕೋಪಕ್ಕೆ ಪಾತ್ರನಾಗಲು ಆತನಿಗೆ ಭಯ. ಈ ಸಂದಿಗ್ಧತೆಯನ್ನು ತಪ್ಪಿಸಲು ಮಹಾ

ದೇವಿಯಕ್ಕ ಮುಂದಾದಳು. ತನ್ನ ಗುರು ಲಿಂಗ ಜಗಮ ಪೂಜೆಗೆ ವಿಘ್ನವಾಗುವಂತಹ ಮೂರು ತಪ್ಪುಗಳನ್ನು ಮಾಡಿದೊಡನೆಯೇ ಆತನನ್ನು ಪರಿತ್ಯಜಿಸುವೆನೆಂಬ ಷರತ್ತುಗಳನ್ನು ಮುಂದಿಟ್ಟು, ಆಕೆ ರಾಜನನ್ನು ಮದುವೆಯಾದಳು. ಕಾಮಿಯಾದ ರಾಜ ಬಹು ಬೇಗ ಅಂತಹ ಮೂರು ತಪ್ಪುಗಳನ್ನು ಮಾಡಿದ. ಮಹಾರಾಣಿಯಾಗಿದ್ದ ಮಹಾದೇವಿ ತನ್ನ ಐಶ್ವರ್ಯ, ಅಂತಸ್ತು, ಅಧಿಕಾರ, ಭೋಗಭಾಗ್ಯಗಳನ್ನು ಕಾಲಿನಿಂದೊದೆದು, ದಿಗಂಬರೆಯಾಗಿ, ತನ್ನ ನೀಳವಾದ ತಲೆಗೂದಲಿನಿಂದಲೆ ಮೈ ಮಾನಗಳನ್ನು ಮುಚ್ಚಿಕೊಂಡು, ಶಿವಶರಣರ ಕೈಲಾಸದಂತಿದ್ದ ಕಲ್ಯಾಣಕ್ಕೆ ಹೊರಟಳು. ದಾರಿಯಲ್ಲಿ ಆಕೆಗೆ ಪರಿಪರಿಯಾದ ಕಷ್ಟಗಳು ಪ್ರಾಪ್ತವಾಗಿರಬೇಕು. ತಾಯಿತಂದೆಗಳು ಆಕೆಯ ಮನಸ್ಸನ್ನು ತಿರುಗಿಸಲು ಪ್ರಯತ್ನಿಸಿ ವಿಫಲರಾದರು; ಕೌಶಿಕನು ಶಿವಭಕ್ತನಂತೆ ವೇಷಧರಿಸಿ, ಅಕೆಯನ್ನು ಹಿಂದಕ್ಕೆ ಕರೆತರ ಹೊರಟು, ನಿಷ್ಫಲಗೊಂಡನು. ಇನ್ನೇನು, ಕಲ್ಯಾಣವನ್ನು ಪ್ರವೇಶಿಸಬೇಕು ಎನ್ನುವಷ್ಟರಲ್ಲಿ ಕಿನ್ನರ ಬೊಮ್ಮಯ್ಯನೆಂಬ ಶಿವಶರಣನು ಆಕೆಯನ್ನು ಕಂಡು, ಆಕೆಯನ್ನು ಪರಿಕಿಸುತ್ತಾನೆ. ಆದರೇನು? ಅಕ್ಕಮಹಾದೇವಿ ಆತನನ್ನು ಕುರಿತು.

"ಎಲೆ ಅಣ್ಣಾ ಅಣ್ಣಾ, ನೀವು ಮರುಳಲ್ಲಾ! ಅಣ್ಣಾ ಎನ್ನ ನಿನ್ನಳವೆ, ಹದಿನಾಲ್ಕು ಲೋಕವ ನುಂಗಿದ ಕಾಮನ ಬಾಣದ ಗುಣ ಎನ್ನ ನಿನ್ನಳವೆ? ವಾರುವ ಮುಗ್ಗಿದಡೆ ಮಿಡಿಯು ಹರಿಯು ಹೊಯ್ಬರೆ? ಮುಗ್ಗಿದ ಭಂಗವ ಮುಂದೆ ರಣದಲ್ಲಿ ತಿಳಿವುದು. ನಿನ್ನ ನೀ ಸಂಹರಿಸಿ ಕೈದುವ ಕೊಳ್ಳಿರಣ್ಣಾ. ಚೆನ್ನಮಲ್ಲಿಕಾರ್ಜುನನೆಂಬ ಹಗೆಗೆ ಬೆಂಗೊಡದಿರಣ್ಣಾ!"—ಎಂದು ಹೇಳುತ್ತಾಳೆ. ಪಶ್ಚಾತ್ತಾಪಗೊಂಡ ಕಿನ್ನರಯ್ಯ 'ಶರಣಾರ್ಥಿ ಎಲೆ ತಾಯೆ ಎಮ್ಮವ್ವ' ಎಂದು ಆಕೆಗೆ ನಮಸ್ಕರಿಸಿ, ಆಕೆಯನ್ನು ಅನುಭವಮಂಟಪಕ್ಕೆ ಕರೆತರುತ್ತಾನೆ. ಅಲ್ಲಿ ಅಲ್ಲಮ ಬಸವಣ್ಣ ಮೊದಲಾದ ಪ್ರಮುಖರು ಆಕೆಯ ಭಕ್ತಿಭಾವವನ್ನು ಒರೆಹಚ್ಚಿ ನೋಡುತ್ತಾರೆ. ಮೊದಲು ಪ್ರಭುದೇವ ಕೇಳುತ್ತಾನೆ—ಅವ್ವಾ, ನೀನು ಹದಿನಾರರ ಹರೆಯದ ದಿವ್ಯ ಸುಂದರಿ ಹೀಗೆ ಬಂದಿರುವೆಯಲ್ಲಾ! 'ನಿನ್ನ ಪತಿ ಯಾರೆಂಬುದ ಹೇಳಾ ಎಲೆ ಅವ್ವಾ' ಎಂದು. ಮಹಾದೇವಿ ಹೇಳುತ್ತಾಳೆ—

'ಹರನೇ, ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ! ಹಸೆಯ ಮೇಲಣ ಮಾತು ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರ ಕಳುಹಿದರೆನ್ನವರು. ಭಸ್ಮವನೆ ಹೂಸಿ, ಕಂಕಣವನೆ ಕಟ್ಟಿ ಚೆನ್ನಮಲ್ಲಿಕಾರ್ಜುನ ತನಗೆ ನಾನಾ ಬೇಕೆಂದು.'

'ಪಚ್ಚೆಯದ ನೆಲಕಟ್ಟು, ಕನಕದ ತೋರಣ, ವಜ್ರದ ಕಂಭ, ಪವಳದ ಚಪ್ಪರವಿಕ್ಕಿ ಮದುವೆಯ ಮಾಡಿದರೆಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈದಾರೆ, ಸ್ಥಿರಸೇಸೆಯನಿಕ್ಕಿ ಚೆನ್ನಮಲ್ಲಿಕಾರ್ಜುನ ನೆಂಬ ಗಂಡಗೆನ್ನ ಮದುವೆಯ ಮಾಡಿದರು.'

'ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ, ಭಯವಿಲ್ಲದ ನಿರ್ಭಯದ ಚೆಲುವಂಗೆ ನಾನೊಲಿದೆನವ್ವ. ಎಡೆ ಇಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ ಚೆಲುವಂಗಾನೊಲಿದೆ ಎಲೆ ಅವ್ವ. ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ ನಾನು, ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ, ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು.'

ಅಕ್ಕನ ಮಾತಿನಿಂದ ಸಂತೋಷಗೊಂಡ ಪ್ರಭುದೇವ ಮತ್ತೆ ಕೇಳಿದ-ಅಮ್ಮ, ಕೂದಲಿಂದ ದೇಹವನ್ನು ಮುಚ್ಚಿಕೊಂಡಿರುವ ನಿನಗೆ ಅಭಿಮಾನ ಹೋದಂತಾಯಿತೆ? ಎಂದು. ಅಕ್ಕ ಉತ್ತರಕೊಟ್ಟಳು—

'ಕಾಯ ಕರ್ರನೆ ಕಂದಿದರೇನಯ್ಯ? ಕಾಯ ಮಿರ್ರನೆ ಮಿಂಚಿದರೇನಯ್ಯ? ಅಂತರಂಗ ಶುದ್ಧವಾದ ಬಳಿಕ ಚೆನ್ನಮಲ್ಲಿಕಾರ್ಜುನಲಿಂಗವು ಒಲಿದ ಕಾಯವು ಹೇಗಿದ್ದರೇನಯ್ಯ?'

'ಫಲ ಪಕ್ವವಾದಲ್ಲದೆ ಹೊರಗಣ ಸಿಪ್ಪೆ ಒಪ್ಪಗೆಡದು. ಕಾಮನ ಮುದ್ರೆಯ ಕಂಡು ನಿಮಗೆ ನೋವಾದಿತ್ತೆಂದು ಆ ಭಾವದಿಂದ ಮುಚ್ಚಿದೆ. ಇದಕ್ಕೆ ನೋವೇಕೆ? ಕಾಡದಿರಣ್ಣಾ, ಚೆನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದವಳ.'

ಪ್ರಭುದೇವನು ಮತ್ತೊಂದು ಸಂದೇಹವೆತ್ತಿದ-ಇಂದ್ರಿಯಬಾಧೆಗೆ ಒಳಗಾದ ದೇಹಿಗಳು ನಿಷ್ಕಾಮನಾದ ನಿರ್ಗುಣನಲ್ಲಿ ಹೇಗೆ ಸಂಬಂಧ ಬೆಳಸಬಹುದು? ಎಂದು. ಅಕ್ಕನ ಉತ್ತರ ಹಿಂದೆಯೆ ಸಿದ್ಧವಾಯಿತು.

'ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯ. ಕಾಯದ ಸಂಗವ ವಿವರಿಸಬಲ್ಲಡೆ ಕಾಯದ ಸಂಗವೇ ಲೇಸು ಕಂಡಯ್ಯ. ತಾಯಿ ರಕ್ಕಸಿಯಾದಂತೆ ಕಾಯವಿಕಾರವು. ಚೆನ್ನ ಮಲ್ಲಿಕಾರ್ಜುನಯ್ಯ, ನೀನೊಲಿದವರು ಕಾಯಗೊಂಡಿದ್ದರೆನಬೇಡ.'

ಅಕ್ಕನವರ ಮಾತುಗಳಿಂದ ಸಂತೋಷಗೊಂಡ ಪ್ರಭುದೇವ ಮತ್ತಷ್ಟು ಪ್ರಶ್ನೆಗಳನ್ನು ಕೇಳಿ ಅಲ್ಲಿ ನೆರೆದವರೆಲ್ಲರಿಗೂ ಅಕ್ಕನ ಮಹೋನ್ನತಿಯನ್ನು ಪ್ರದರ್ಶಿಸಿದ. ಅಕ್ಕನ ತಾಳ್ಮೆ ಸಮತೆಗಳನ್ನು ಆತ ಮೆಚ್ಚಿ ತಲೆದೂಗಿದ. ಅಕ್ಕನ ಮಾತಿನಲ್ಲಿಯೆ ಆಕೆಯ ಸ್ವಭಾವವಿಮರ್ಶೆಯನ್ನು ಕಾಣಬಹುದು:-

'ಚಂದನವ ಕಡಿದು ಕೊರೆದು ತೇದಡೆ ನೊಂದೆನೆಂದು ಕಂಪಬಿಟ್ಟಿತ್ತೆ? ತಂದು ಸುವರ್ಣವ ಕಡಿದೊರೆದಡೆ ಬೆಂದು ಕಳಂಕ ಹಿಡಿದಿತ್ತೆ? ಸಂದು ಸಂದು ಕಡಿದು ಕಬ್ಬನು ತಂದು ಗಾಣದಲಿಕ್ಕಿ ಬೆಂದ ಪಾಕಗಳು ಸಕ್ಕರೆಯಾಗಿ ನೊಂದೆನೆಂದು ಸವಿಯಬಿಟ್ಟಿತ್ತೆ? ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೆ? ಎನ್ನ ತಂದೆ ಚೆನ್ನ ಮಲ್ಲಿಕಾರ್ಜುನ ದೇವಯ್ಯ ಕೊಂದಡೆ ಶರಣೆಂಬುದ ಮಾಣೆ.'

ತನ್ನನ್ನು ಪ್ರಶ್ನಿಸಿ ಹಿಂಸಿಸುತ್ತಿರುವವರಿಗೆ ಆಕೆ ಕೊಟ್ಟಿರುವ ಮೇಲಿನ ಉತ್ತರ ಆಕೆಯ ಮಹಿಮೆಯನ್ನು ಮುಗಿಲೆತ್ತರಕ್ಕೆ ಕೊಂಡೊಯ್ಯುತ್ತದೆ. ಅವರ ಪ್ರಶ್ನೆಗಳಿಗೆ ಉತ್ತರ ನೀಡುತ್ತಾ, ತನ್ನ ಹಿಂದಿನ ಕುಂದುಗಳನ್ನೆಲ್ಲಾ ಅವರ ಮುಂದಿಟ್ಟಾಗಲೂ ಅವರು ನೋಯುವುದಿಲ್ಲವಂತೆ! ಲೋಕೋತ್ತರವಾದ ಈ ಸೌಜನ್ಯವನ್ನು ಕಂಡು ನಾವು ಬೆರಗಾಗುತ್ತೇವೆ. ನಾವು ಮಾತ್ರವೇ ಅಲ್ಲ; ಅನುಭವಮಂಟಪದಲ್ಲಿದ್ದ ಹಿರಿಯರೆಲ್ಲ ಆಕೆಯನ್ನು ಮೆಚ್ಚಿ ಹೊಗಳುತ್ತಾರೆ. ಚೆನ್ನಬಸವಣ್ಣನು ಆಕೆಗಿತ್ತಿರುವ ಈ ಶಿಫಾರಸುಪತ್ರವನ್ನು ನೋಡಿ.

'ಅಜಕೋಟಿ ವರುಷದವರೆಲ್ಲರೂ ಹಿರಿಯರೆ? ಹುತ್ತೇರಿ ಬೆಟ್ಟಬೆಳೆದ ತಪಸ್ವಿಗಳೆಲ್ಲರೂ ಹಿರಿಯರೆ? ನಡುಮುರಿದು, ತಲೆನಡುಗಿ, ನೆರೆತೆರೆ ಹೆಚ್ಚಿ, ಮತಿಗೆಟ್ಟು, ಒಂದನಾಡಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೆ? ಅನುವರಿದು ಘನವ ಬೆರೆಸಿ, ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚೆನ್ನಸಂಗಯ್ಯನಲ್ಲಿ ಬೆರೆಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕನಿಗಾಯಿತ್ತು.'

ಎಲ್ಲರ ಗೌರವಕ್ಕೂ ಪಾತ್ರಳಾಗಿ, ಅನುಭವಮಂಟಪದ ಪ್ರಮುಖ ಸದಸ್ಯಳಾಗಿ, ತನ್ನ ಭಕ್ತಿಭಾವದಿಂದ ಅನುಭವನಿರೂಪಣೆಯಿಂದ ಸುತ್ತು ಮುತ್ತಿನವರಿಗೆ ಮಾರ್ಗದರ್ಶಕಳಾಗಿ ಅಕ್ಕಮಹಾದೇವಿ ಹಲವುಕಾಲ ಕಲ್ಯಾಣ ದಲ್ಲಿ ನಿಂತಳು. ಕೆಲವು ಕಾಲವಾದಮೇಲೆ ಆಕೆ ಏಕಾಂತವನ್ನು ಬಯಸಿ, ಶ್ರೀಶೈಲಕ್ಕೆ ಹೊರಟಿರಬೇಕು. ಶಿವಭಕ್ತರೆಲ್ಲರೂ ಅತ್ಯಂತ ಸಂಭ್ರಮದಿಂದ ಆಕೆಯನ್ನು ಬೀಳ್ಕೊಟ್ಟರೆಂದು ತೋರುತ್ತದೆ. ಏಕಾಂಗಿಯಾಗಿ ಹೋಗುತ್ತಿದ್ದ ಆಕೆಯನ್ನು ಕಂಡು ಯಾರಾದರೂ ಕಳವಳವನ್ನೂ ಸೂಚಿಸಿದರೊ ಏನೊ! ಅದನ್ನು ಕಂಡು ಆಕೆ ಬಹಳ ಕಳಕಳಿಯಿಂದ

'ಹುಟ್ಟಿದೆ ಶ್ರೀ ಗುರುವಿನ ಹಸ್ತದಲ್ಲಿ. ಬೆಳೆದೆನು ಅಸಂಖ್ಯಾತರ ಕರುಣದೊಳಗೆ. ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥ ವೆಂಬ ಸಕ್ಕರೆಯನಿಕ್ಕಿದರು ನೋಡಾ! ಇಂತಿಪ್ಪ ತ್ರಿವಿಧಾಮೃತವ ದಣಿಯ ಲೆರೆದು ಸಲಹಿದರೆನ್ನ ವಿವಾಹವ ಮಾಡಿದಿರಿ. ಸಯವಪ್ಪ (ಅನುರೂಪನಾದ) ಗಂಡಗೆ ಕೊಟ್ಟಿರಿ. ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ. ಬಸವಣ್ಣ ಮೆಚ್ಚಲು ಒಗೆತನವ ಮಾಡುವೆ. ಚೆನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮುಂಡೆಗೆ ಹುವ್ವ ತಾಹೆನಲ್ಲದೆ, ಹುಲ್ಲ ತಾರೆನು. ಅವಧರಿಸಿ ನಿಮ್ಮಡಿಗಳೆಲ್ಲರು. ಮರಳಿ ಬಿಜಯಂಗೈವುದು. ಶರಣಾರ್ಥಿ'—ಎಂದು. ಹೇಳಿದಳೆಂದು ತೋರುತ್ತದೆ. ಗಿರಿಯ ಕಡೆಗೆ ನಡೆದು ಬರುತ್ತಾ ತನಗೆ ತಾನೆ (ಅಥವಾ ಜೊತೆಯಲ್ಲಿದ್ದ ಗೆಳತಿಯರೊಡನೆ)

'ಗಿರಿಯಲ್ಲದೆ ಹುಲ್ಲುಮೊರಡಿಯಲ್ಲಾಡುವುದೇ ನವಿಲು? ಕೊಳನಲ್ಲದೆ ಕಿರಿವಳ್ಳಕ್ಕೆಳಸುವದೇ ಹಂಸೆ? ಮಾಮರ ತಳಿತಲ್ಲದೆ ಸ್ವರಗೈವುದೇ ಕೋಗಿಲೆ? ಪರಿಮಳವಿಲ್ಲದ ಪುಷ್ಪಕ್ಕೆಳಸುವದೇ ಭ್ರಮರ? ಎನ್ನ ದೇವ ಚೆನ್ನಮಲ್ಲಿಕಾರ್ಜುನನಲ್ಲದೆ ಅನ್ಯಕ್ಕೆಳಸುವುದೇ ಎನ್ನ ಮನ?' ಎಂದು ಕೊಳ್ಳುತ್ತಾಳೆ.

ಶ್ರೀಶೈಲವನ್ನು ಸೇರಿದಮೇಲೆ, ಅಲ್ಲಿನ ಪ್ರಕೃತಿಸಾನ್ನಿಧ್ಯದಲ್ಲಿ ಅಕ್ಕನ ಕವಿಚೇತನ ಗರಿಗೆದರಿ ಮೇಲೇರಿರಬೇಕು. ಲಿಂಗಪತಿ ಅಂಗಸತಿ ಸ್ಥಿತಿ ಬಲಿತು ಆಕೆ ಚೆನ್ನಮಲ್ಲಿಕಾರ್ಜುನನಿಗಾಗಿ ಹಲುಬಿ ಹಂಬಲಿಸುತ್ತಾಳೆ. ಭಕ್ತಿಭಾವಭರಿತವಾಗಿದ್ದ ಆ ಸಾತ್ವಿಕ ಜೀವಕ್ಕೆ ಸುತ್ತಮುತ್ತಿನ ಪ್ರಕೃತಿ

ಯೆಲ್ಲವೂ ಚೇತನಾಮಯವಾಗಿದೆ. 'ಅಳಿಸಂಕುಳವೇ, ಮಾಮರವೇ, ಬೆಳುದಿಂಗಳೇ, ಕೋಗಿಲೆಯೇ ನಿಮ್ಮ ನಿಮ್ಮನೆಲ್ಲರನು ಒಂದು ಬೇಡುವೆನು, ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೇ.' 'ಚಿಲಿಮಿಲಿಯೆಂದೋದುವ ಗಿಳಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ? ಸರವೆತ್ತಿ ಪಾಡುವ ಗಿಳಿಗಳಿರಾ, ನೀವು ಕಾಣಿರೇ ನೀವು ಕಾಣಿರೆ? ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೆ ನೀವು ಕಾಣಿರೆ? ಕೊಳನ ನಡೆಯಾಡುವ ಹಂಸೆಗಳಿರಾ, ನೀವು ಕಾಣಿರೆ ನೀವು ಕಾಣಿರೆ? ಗಿರಿಗಹ್ವರ ದೊಳಗಾಡುವ ನವಿಲುಗಳಿರಾ, ನೀವು ಕಾಣಿರೆ ನೀವು ಕಾಣಿರೆ? ಚೆನ್ನ ಮಲ್ಲಿಕಾರ್ಜುನನೆಲ್ಲಿರ್ದಹನೆಂದು ನೀವು ಹೇಳಿರೆ ನೀವು ಹೇಳಿರೆ!' ಹೀಗೆ ಹೊರನೋಟಕ್ಕೆ ಅಸಂಬದ್ಧವಾಗಿ ತೋರುವಂತೆ ದಿವ್ಯೋನ್ಮಾದದಲ್ಲಿ ಮುಳುಗಿರುವ ಮಹಾದೇವಿಯಕ್ಕ ತನ್ನ ವಿರಹವನ್ನು ಸಹಿಸಲಾರದೆ—

'ಕಿಚ್ಚಿಲ್ಲದ ಬೇಗೆಯಲಿ ಬೆಂದೆನವ್ವಾ! ಏರಿಲ್ಲದ ಗಾಯದಲ್ಲಿ ನೊಂದೆನವ್ವಾ! ಸುಖವಿಲ್ಲದ ಧಾವತಿಗೊಂಡೆನವ್ವಾ! ಚೆನ್ನಮಲ್ಲಿಕಾರ್ಜುನ ದೇವರಿಗೊಲಿದು ಬಾರದ ಭವಂಗಳಲ್ಲಿ ಬಂದೆನವ್ವಾ!' 'ಅಕ್ಕ ಕೇಳವ್ವ, ಅಕ್ಕಯ್ಯ ನಾನೊಂದು ಕನಸ ಕಂಡೆ. ಅಕ್ಕಿಯಡಕೆ ತೆಂಗಿನಕಾಯಿ ಕಂಡೆ. ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು ಭಿಕ್ಷಕ್ಕೆ ಬಂದುದ ಕಂಡೆನವ್ವ, ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು. ಚೆನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು.' 'ಹೊಳೆವ ಜಡೆಯಮೇಲೆ ಎಳೆವೆಳದಿಂಗಳು. ಫಣಿಮಣಿ ಕುಂಡಲದವ ನೋಡವ್ವಾ! ರುಂಡಮಾಲೆಯ ಕೊರಳವನ ಕಂಡರೆ ಬರ ಹೇಳವ್ವಾ. ಗೋವಿಂದನ ನಯನ ಉಂಗುಟದ ಮೇಲಿಪ್ಪುದು'–ಎಂದು ಹೇಳಿಕೊಳ್ಳುವುದು ಭಾಗವತದಲ್ಲಿ ಬರುವ ರಾಧೆಯ ವಿರಹವನ್ನು ಜ್ಞಾಪಕಕ್ಕೆ ತರುತ್ತದೆ.

ಎರಡಿಲ್ಲದ ಭಕ್ತಿಯಿಂದ ಭಗವಂತನಿಗಾಗಿ ಹಂಬಲಿಸಿದ ಆ ದಿವ್ಯ ಜೀವಕ್ಕೆ ಸಿದ್ಧಿ ದೊರೆಯಿತು, ಆತ್ಮಸಾಕ್ಷಾತ್ಕಾರವಾಯಿತು. ಅಕ್ಕ ಆನಂದ ದಿಂದ ಹಾಡಿದಳು—'ಹೊಳೆವ ಕೆಂಜೆಡೆಗಳು, ಮಣಿಮಕುಟ, ಒಪ್ಪುವ ಸುಲಿಪಲ್ಲ, ನಗೆಮೊಗದ ಕಂಗಳ ಕಾಂತಿಯಿಂ ಈರೇಳು ಭುವನಮಂ ಬೆಳಗುವ ದಿವ್ಯಸ್ವರೂಪನ ಕಂಡೆ, ನಾನು, ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು.

ಗಂಡಗಂಡರೆಲ್ಲ ಹೆಂಡಹೆಂಡಿರಾಗಿ ಆಳುವ ಗರುವನ ಕಂಡೆ ನಾನು. ಜಗದಾದಿ ಶಕ್ತಿಯೊಳು ಬೆರಸಿಯೊಡನಾಡುವ ಪರಮಗುರು ಚೆನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು.' 'ಕದಳಿ ಎಂಬುದ ಗೆಲ್ದು ಸಲೆ ಬದುಕಿ ಬಂದು ಕದಳಿಯ ಬನದಲ್ಲಿ ಭವಹರನ ಕಂಡೆನು. ಭವಗೆಟ್ಟ ಮಗಳೆಂದು ಕರುಣದಿಂ ತೆಗೆದು ಬಿಗಿದಪ್ಪಿದರೆ ಚೆನ್ನಮಲ್ಲಿಕಾರ್ಜುನನ ಹೃದಯದಲ್ಲಿ ಅಡಗಿದೆನು.' ಅಹುದು, ನೀರು ನೀರಿನಲ್ಲಿ ಬೆರೆದಂತೆ, ಜ್ಯೋತಿ ಜ್ಯೋತಿಯಲ್ಲಿ ಬೆರೆದಂತೆ ಅಕ್ಕನ ಆತ್ಮ ಪರಮಾತ್ಮನಲ್ಲಿ ಸೇರಿತು. ಆಕೆಯ ಅಮರ ಕೀರ್ತಿ ಇಲ್ಲಿಯೇ ನೆಲೆನಿಂತಿತು.

ಬಸವಣ್ಣನವರ ವಚನಗಳಂತೆ ಅಕ್ಕನ ವಚನಗಳೂ ಸತ್ವಯುಕ್ತವಾಗಿ, ಸಾಹಿತ್ಯಮಯವಾಗಿವೆ; ಭಾವಗೀತೆಯ ಮಾಧುರ್ಯದಿಂದ ತುಂಬಿವೆ. ಆಕೆಯ ಹಲವಾರು ವಚನಗಳು ಆಕೆಯ ಹೃದಯಮಂದಿರದ ಗರ್ಭಗುಡಿಯಲ್ಲಿ ಹಚ್ಚಿಟ್ಟಿರುವ ನಂದಾದೀವಿಗೆಗಳಾಗಿ, ಅಲ್ಲಿ ಪ್ರತಿಷ್ಠಿತವಾಗಿರುವ ಆತ್ಮಚರಿತ್ರಾರೂಪದ ಸುಂದರ ಪ್ರತಿಮೆಗಳನ್ನು ಬೆಳಗುತ್ತವೆ. ಸಾಹಸಿಯಾಗಿ ಸತ್ಯಶೋಧಕಳಾಗಿರುವ ಈ ಧರ್ಮವೀರಳು ಸ್ಫೂರ್ತಿಯುತವಾಗಿ ಆವೇಶಪೂರ್ಣವಾಗಿ ಹಾಡಿರುವ ಹಲವು ವಚನಗಳು ಓದುಗರ ಹೃದಯವನ್ನು ಮಿಡಿದು, ಆನಂದದ ಅಲೆಗಳನ್ನು ಎಬ್ಬಿಸುತ್ತವೆ. 'ಬೆಟ್ಟದಮೇಲೊಂದು ಮನೆಯಮಾಡಿ ಮೃಗಗಳಿಗಂಜಿದಡೆಂತಯ್ಯ! ಸಮುದ್ರದ ತಡಿಯಲ್ಲಿ ಮನೆಯಮಾಡಿ ನೊರೆ ತೆರೆಗಳಿಗಂಜಿದಡೆಂತಯ್ಯ! ಸಂತೆಯೊಳೊಂದು ಮನೆಯಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ! ಮಲ್ಲಿಕಾರ್ಜುನ ದೇವ ಕೇಳಯ್ಯ, ಲೋಕದಲಿ ಹುಟ್ಟಿರ್ದ ಬಳಿಕ ಸ್ತುತಿನಿಂದೆಗಳು ಬಂದಡೆ, ಮನದಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು' ಎಂಬ ವಚನದಲ್ಲಿ ಆಕೆಯ ಲೋಕಾನುಭವ ಎಷ್ಟು ಸುಲಭವಾಗಿ, ಆದರೂ ಎಷ್ಟು ಸಾರವತ್ತಾಗಿ ಹೊರಹೊಮ್ಮಿದೆ? ಆಕೆಯಿದ್ದ ಕಾಲದಲ್ಲಿಯೇ ಆಕೆಯ ವಚನಗಳು ಮಹೋನ್ನತವಾದ ಗೌರವಕ್ಕೆ ಪಾತ್ರವಾಗಿದ್ದವೆಂದು ತೋರುತ್ತದೆ. ಚೆನ್ನಬಸವಣ್ಣನು ಆಕೆಯ ವಚನಗಳ ಮಹತ್ವವನ್ನು ವರ್ಣಿಸುತ್ತಾ

'ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ, ಪ್ರಭು

ದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲ ಚೆನ್ನ ಸಂಗಯ್ಯನಲ್ಲಿ ಮಹಾದೇವಿಯಕ್ಕನ ಒಂದು ವಚನ ಕಾಣಾ ಸಿದ್ಧರಾಮಯ್ಯ'—ಎಂದು ಹೇಳುತ್ತಾನೆ. ಆತನ ಈ ಗೌರವ ಸಾಹಿತ್ಯ ದೃಷ್ಟಿಯಿಂದ ಮಹದೇವಿಯಕ್ಕನಿಗೆ ಅಗತ್ಯವಾಗಿಯೂ ಸಲ್ಲತಕ್ಕುದೆ.

ಅಕ್ಕಮಹಾದೇವಿ ಅರವತ್ತೇಳು ತ್ರಿಪದಿಗಳನ್ನೊಳಗೊಂಡ 'ಯೋಗಾಂಗತ್ರಿವಿಧಿ' ಎಂಬ ತಾತ್ವಿಕ ಗ್ರಂಥವೊಂದನ್ನೂ ಬರೆದಿದ್ದಾಳೆ. ಆಕೆಯ ವಚನಗಳಂತೆ ತ್ರಿಪದಿಗಳೂ ಆಕೆಯ ಅನುಭಾವ ಆತ್ಮ ಚರಿತ್ರಾಂಶ ಗಳಮೇಲೆ ಬೆಳಕನ್ನು ಚಲ್ಲುತ್ತವೆ.

ಕೋಟಿರವಿಶಶಿಗಳ್ಗೆ ಮೀಟಾದ ಪ್ರಭೆ ಬಂದು| ನಾಟಿತು ಎನ್ನ ಮನದೊಳಗದರಿಂದ| ದಾಟಿದೆನೊ ಭವದ ಕೊಳಗಳ

ಈ ಮಾದರಿಯ ಈ ತ್ರಿಪದಿಗಳಲ್ಲಿ ಬೆಡಗಿನ ವಚನಗಳ ಛಾಯೆಯೂ ಕಂಡುಬರುತ್ತದೆ.

**ಮುಕ್ತಾಯಕ್ಕ ಮಹದೇವಿಯಮ್ಮ, ಲಕ್ಕಮ್ಮ**

ಸಾಹಿತ್ಯ ದೃಷ್ಟಿಯಿಂದ ಅಲ್ಲದಿದ್ದರೂ ಅಧ್ಯಾತ್ಮ ದೃಷ್ಟಿಯಿಂದ ಮಹಾದೇವಿಯಕ್ಕನಿಗೆ ಹೆಗಲೆಣೆಯಾಗಿ ನಿಲ್ಲಬಲ್ಲ ಇನ್ನೂ ಹಲವು ವಚನ ಕಾರ್ತಿಯರಿದ್ದಾರೆ. ಶೂನ್ಯ ಸಂಪಾದನೆಯಲ್ಲಿ ಕಾಣಿಸಿಕೊಂಡಿರುವ ಮುಕ್ತಾಯಕ್ಕ, ಮಹಾದೇವಿಯಮ್ಮ, ಲಕ್ಕಮ್ಮ ಇವರು ಅಂತಹವರು. ಮುಕ್ತಾಯಕ್ಕನು ಪರಮಜ್ಞಾನಿಯಾದ ಅಜಗಣ್ಣನ ತಂಗಿ. ತನ್ನ ಅಣ್ಣ ಕಾಲವಾಗಲು ಆಕೆ ಗೋಳಾಡುತ್ತಿರುತ್ತಾಳೆ. ಆದರೆ ಆಕೆಯು ಅಳುತ್ತಾ ಆಡುವ ಮಾತು ಜ್ಞಾನಿಯ ಮಾತು. ಲೋಕ ಸಂಚಾರ ಮಾಡುತ್ತಾ ಆಕೆಯ ಬಳಿಗೆ ಬಂದ ಅಲ್ಲಮ ಪ್ರಭು 'ನೀರಾರು?' ಎಂದು ಆಕೆಯನ್ನು ಕೇಳುತ್ತಾನೆ. ಆಕೆ 'ಒಬ್ಬರಿಗೂ ಹುಟ್ಟದೆ ಅಯೋನಿಯಲ್ಲಿ ಬಂದು ದುರ್ಬುದ್ಧಿಯಾದವಳನೇನೆಂಬನಣ್ಣಾ! ತಲೆಯುಳಿದು ನೆಲೆಗೆಟ್ಟು ಬೆಳಗುವ ಜ್ಯೋತಿ ಎನ್ನ ಅಜಗಣ್ಣ ತಂದೆಯ ಬೆನ್ನಬಳಿಯವಳಾನಯ್ಯಾ' ಎಂದು ಹೇಳುತ್ತಾಳೆ. ಪ್ರಭುದೇವನಿಗೆ ಅಜಗಣ್ಣ ಪರಮಜ್ಞಾನಿಯೆಂಬುದು ಗೊತ್ತು. ಆತನನ್ನು ಹೊಗಳಿ ಆತನ ಸಾವು ಸಾವಲ್ಲ, ಐಕ್ಯಸ್ಥಿತಿ—ಎಂದು ಹೇಳುತ್ತಾನೆ.

ಮುಕ್ತಾಯಕ್ಕ ಅಜ್ಞಾನಿಯೇನಲ್ಲ; ತನ್ನ ಅಣ್ಣನಮೇಲಿನ ಮೋಹ ಆಕೆಯ ಜ್ಞಾನಾಗ್ನಿಯಮೇಲೆ ಬೂದಿಯಂತೆ ಕುಳಿತಿದೆ. ಆಕೆ ಅಲ್ಲಮನೊಡನೆ ಚಕಮಕಿ ನಡೆಸಿ. ಕೊನೆಗೆ ಆತನಿಂದ ಜ್ಞಾನೋಪದೇಶವನ್ನು ಪಡೆದು, ತನ್ನ ಸಾಧನೆಯನ್ನು ಮುಂದುವರಿಸಿ ಮುಕ್ತಳಾಗುತ್ತಾಳೆ. ಮಹದೇವಿಯಮ್ಮ ಮೋಳಿಗೆ ಮಾರಯ್ಯನೆಂಬ ಮಹಾ ಶಿವಭಕ್ತನ ಮಡದಿ. ಆಕೆ ಮಹಾ ಪತಿವ್ರತೆ. ತನ್ನ ಗಂಡನ ಅಪೇಕ್ಷೆಯಂತೆ ಆತನಿಗೆ ಐಕ್ಯಸ್ಥಳದ ರಹಸ್ಯವನ್ನು ವಿವರಿಸಿ ಹೇಳುತ್ತಾಳೆ—'ಕಾಯವುಳ್ಳನ್ನಕ್ಕ ಲಿಂಗಪೂಜೆ. ಆತ್ಮವುಳ್ಳನ್ನಕ್ಕ ಅರಿವಿನ ಭೇದ. ಪುರುಷನೀ ಸತಿನಾನೆಂಬಲ್ಲಿ ಉಭಯದ ಬೀಜ; ನಾನೀನೆಂಬನ್ನಕ್ಕ ಅಂಗದ ಲಿಂಗದಲ್ಲಿಯೆ ನಿರಂಗವಾಗಬೇಕು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ,' 'ಕಾಯಭ್ರಮೆಯಿಂದ ಕೈಲಾಸ. ಜೀವಭ್ರಮೆಯಿಂದ ಮಹದ ಕೂಟವೆಂಬುದು. ಕಾಯದ ಜೀವದ ಭೇದವನರಿತಲ್ಲಿ ಅತ್ತಲಿತ್ತಲೆಂದು ಮತ್ತೆ ಹಲುಬಲಿಲ್ಲ. ಇದು ನಿಶ್ಚಯದ ಕೂಟ.' '....ಪರುಷಪಾಷಾಣದಂತೆ ಭಿನ್ನಭಾವವಿಲ್ಲದೆ ಅರಿದರುಹಿಸಿಕೊಂಬ ಕುರುಹು ಏಕವಾದಲ್ಲಿ ಐಕ್ಯಸ್ಥಲ ಎನ್ನಯ್ಯ. ಇದಕ್ಕೆ ಭಿನ್ನಭಾವವಿಲ್ಲ. ಅದು ಎನ್ನ ನಿನ್ನ ಕೂಟದ ಸುಖದಂತೆ. ಇದ ಚನ್ನಾಗಿ ತಿಳಿದು ನೋಡಿಕೊಳ್ಳಿ. ಅಲ್ಲಿ ಇಲ್ಲಿ ಎಂಬ ಗೆಲ್ಲಗೂಳಿತನ ಬೇಡ. ಹಾಗೆಂಬಲ್ಲಿಯೆ ಬಯಲಾಗಬೇಕು.' ವಿನಯವನ್ನು ಮುಂದಿಟ್ಟುಕೊಂಡೆ ಆತ್ಮಜ್ಞಾನವನ್ನು ಬೋಧಿಸುತ್ತಿರುವ ಈ ಶಿವಶರಣೆಯ ವ್ಯಕ್ತಿತ್ವ ವೇದದ್ರಷ್ಟಾರರಾದ ಮೈತ್ರೇಯಿ ಗಾರ್ಗಿಯರನ್ನು ಜ್ಞಾಪಕಕ್ಕೆ ತರುತ್ತದೆ. ಲಕ್ಕಮ್ಮ ಆಯದಕ್ಕಿ ಮಾರಯ್ಯನೆಂಬ ಮಹಾಶಿವಭಕ್ತನ ಕೂರ್ತಮಡದಿ. ಶರಣರ ಹೊಲಗಳಲ್ಲಿ ನೆಲಕ್ಕೆ ಉದಿರಿರುವ ದವಸದ ಕಾಳನ್ನು ಆಯ್ದು ತಂದು ಶರಣಸಮೂಹಕ್ಕೆ ದಾಸೋಹಮಾಡುವ ನಿಯಮ ಮಾರಯ್ಯನದು. ಒಮ್ಮೆ ಆತ ಪ್ರಭುದೇವನೊಡನೆ ವೇದಾಂತ ಗೋಷ್ಠಿಯಲ್ಲಿರುವಾಗ ಲಕ್ಕಮ್ಮ ಆತನ ಬಳಿಗೆ ಬಂದು ಆತನ ಕಾಯಕವನ್ನು ಜ್ಞಾಪಿಸುತ್ತಾಳೆ. ಆತ ಓಡಿಹೋಗಿ ಬಸವಣ್ಣನ ಮನೆಯ ಅಂಗಳದಲ್ಲಿ ಚಲ್ಲಿದ್ದ ಅಕ್ಕಿಯನ್ನು ಮೂಟೆಕಟ್ಟಿ ತಂದನು. ಅಗತ್ಯವಾದುದಕ್ಕಿಂತಲೂ ಹೆಚ್ಚು ಅಕ್ಕಿಯನ್ನು ತಂದ ಗಂಡನನ್ನು ಹೆಂಡತಿ ಆಕ್ಷೇಪಿಸಿದಳು. ಆತ ಹೆಂಡತಿಯ ಮಾತಿನಂತೆ ಅಗತ್ಯವಾದಷ್ಟನ್ನು ಮಾತ್ರ ಇಟ್ಟುಕೊಂಡು,

ಉಳಿದುದನ್ನು ಬಸವಣ್ಣನ ಅಂಗಳದಲ್ಲಿಯೇ ಚೆಲ್ಲಿ ಬಂದು, ತನಗೆ ಮುಕ್ತಿ ಪದ ಮಾರ್ಗವನ್ನು ಬೋಧಿಸುವಂತೆ ಆಕೆಯನ್ನು ಕೇಳಿಕೊಂಡನು. ಆಕೆ 'ಮಾಡುವ ಮಾಟವುಳ್ಳನ್ನಕ್ಕ ಬೇರೊಂದು ಪದವನರಸಲೇತಕ್ಕೆ? ದಾಸೋಹ ವೆಂಬ ಸೇವೆಯ ಬಿಟ್ಟು ನೀಸಲಾರದೆ ಕೈಲಾಸವೆಂಬ ಆಸೆ ಬೇಡ. ಮಾರಯ್ಯ ಪ್ರಿಯ ಅಮರೇಶ್ವರಲಿಂಗವಿದ್ದ ಠಾವೆ ಕೈಲಾಸ,' 'ಕೈದಕೊಡುವರಲ್ಲದೆ ಕಲಿತನವ ಕೊಡುವರುಂಟೆ ಮಾರಯ್ಯಾ, ಹೆಣ್ಣು ಕೊಡುವರಲ್ಲದೆ ಕೂಟ ಕ್ಕೊಳಗಾದವರುಂಟೆ ಮಾರಯ್ಯ? ಕಳುವ ಚೋರಂಗೆ ಬಡವರೆಂದು ದಯ ವುಂಟೆ ಮಾರಯ್ಯ? ಮಾನವ ನೋಡಿ ಭಕ್ತಿಯ ನೋಡಿಹೆನೆಂಬವಂಗೆ ಎಮ್ಮಲ್ಲಿ ಗುಣವ ಸಂಪಾದಿಸಲಿಲ್ಲ ಮಾರಯ್ಯ. ಶೂಲವ ಹಾಯುಬಂದಲ್ಲಿ ಮತ್ತಿನ್ನು ಸಾವಿಂಗೆ ಹಂಗುಪಡಲೇಕೆ?'' ಎಂದು ಹೇಳಿ, ಅಹಂಕಾರವಳಿದು, ತ್ರಿವಿಧದಾಸೋಹಮಾಡುವುದೆ ಮಹಾಘನ ಲಿಂಗೈಕ್ಯವೆಂದು ಬೋಧಿಸು ತ್ತಾಳೆ. ಈ ದಂಪತಿಗಳು ನುಡಿನಡೆಗಳೊಂದಾಗಿ, ಬಸವಣ್ಣನೇ ಮೊದಲಾದ ಶಿವಭಕ್ತರ ಮೆಚ್ಚಿಗೆಗೂ ಆದರಕ್ಕೂ ಪಾತ್ರರಾಗಿ ಬಾಳಿ ಲಿಂಗೈಕ್ಯರಾದರು.

**ಚನ್ನಬಸವಣ್ಣ**

ಅನುಭವ ಮಂಟಪದಲ್ಲಿದ್ದ ಹಿರಿಯರಲ್ಲಿ ಬಸವಣ್ಣನ ಸೋದರಳಿಯ ನಾದ ಚನ್ನಬಸವಣ್ಣನಿಗೆ ವಿಶಿಷ್ಟವಾದ ಒಂದು ಸ್ಥಾನವುಂಟು. ಜ್ಞಾನಕ್ಕೆ ಅಲ್ಲಮನೂ ಭಕ್ತಿಗೆ ಬಸವಣ್ಣನೂ ಪ್ರಸಿದ್ಧರಾಗಿರುವಂತೆ ಚನ್ನಬಸವಣ್ಣನು ವೀರಶೈವ ಧರ್ಮದ ಆಚಾರ ನಿರೂಪಣೆಗೆ ಪ್ರಸಿದ್ಧನಾಗಿದ್ದಾನೆ. ಈತನ ವಚನಗಳು ವೀರಶೈವಾಚಾರದ ಆಧಾರ ಗ್ರಂಥದಂತಿವೆ. ಅನೇಕ ಕಡೆಗಳಲ್ಲಿ ಆತನು ಆಗಮಗಳಿಂದ ವಾಕ್ಯಗಳನ್ನು ಉದ್ಧರಿಸಿ ತನ್ನ ಹೇಳಿಕೆಗೆ ಆಧಾರ ಗಳನ್ನು ಒದಗಿಸುತ್ತಾನೆ. ಪ್ರಭುದೇವನೇ ಆದಿಯಾಗಿ ಅನುಭವ ಮಂಟಪದ ಹಿರಿಯ ಶರಣರೆಲ್ಲರೂ ಆತನಲ್ಲಿ ಅಪಾರವಾದ ಆದರ ಗೌರವಗಳನ್ನು ತೋರಿ ದ್ದಾರೆ. ಬಸವಣ್ಣನನ್ನು ದಣ್ಣಾಯಕ (ದಂಡನಾಯಕ) ಎಂದು ಕರೆದು, ಆತನ ಕಾರ್ಯರಂಗದಲ್ಲಿ ಆತನ ಬಲಗೈಯಂತೆ ಇದ್ದ ಚನ್ನಬಸವಣ್ಣನನ್ನು ಚಿಕ್ಕದಣ್ಣಾಯಕನೆಂದು ಕರೆದು ಗೌರವಿಸಿದ್ದಾರೆ. ಆದರೆ ಈತನ ವಚನ ಗಳಲ್ಲಾಗಲಿ 'ಕರಣಹಸುಗೆ,' 'ಮಂತ್ರಗೋಪ್ಯ' 'ಮಿಶ್ರಗೋಪ್ಯ'ಮುಂತಾದ ಗ್ರಂಥಗಳಲ್ಲಾಗಲಿ ಕಾವ್ಯಾಂಶ ಬಹಳ ಕಡಮೆ. ಆತನ ವಚನಗಳಲ್ಲಿ

ಕಾಣಬರುವ ಆತ್ಮಪ್ರತ್ಯಯವೂ ಸ್ಪಷ್ಟೋಕ್ತಿಯೂ ಸ್ತೋತ್ರಾರ್ಹವಾದರೂ ಅನ್ಯಮತ ಅನ್ಯದೈವಗಳಲ್ಲಿ ತೋರುವ ಅಸಹನೆ ಕಟುನುಡಿಗಳು ಸಮನ್ವಯ ದೃಷ್ಟಿಗೆ ಆತಂಕವಾಗಿವೆ. ಆತನ ವಚನಗಳಲ್ಲಿ ಅಲ್ಲಲ್ಲಿ ಮಿಂಚುವ ಪ್ರತಿಭೆ ಮನೋಹರವಾಗಿದೆ. 'ಒಟ್ಟಬಯಲೆಲ್ಲ ಗಟ್ಟಿಗೊಂಡೊಡೆ ಸ್ವರ್ಗ ಮರ್ತ್ಯ ಪಾತಾಳಕ್ಕೆ ಠಾವಿನ್ನೆಲ್ಲಿಹುದೊ? ಮೇಘಜಲವೆಲ್ಲ ಮುತ್ತಾದಡೆ ಸಪ್ತ ಸಾಗರಂಗಳಿಗೆ ಉದಕವಿನ್ನೆಲ್ಲಿಹುದೊ? ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದಡೆ, ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲ್ಲಿಹುದೊ?— ಗುರುಭಕ್ತಿಂ ಪರಿತ್ಯಜ್ಯ ಸದ್ಯೋಽಪಿ ನರಕಂ ವ್ರಜೇತ್— ಇಂತೆಂದುದಾಗಿ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಸಾವಿರಕೊಬ್ಬ ಸತ್ಯ. ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ,' ಎಂಬಂತಹ ವಚನಗಳು ಆತನ ಆಳವಾದ ಆಲೋಚನೆಗೂ ಉನ್ನತವಾದ ಪ್ರತಿಭೆಗೂ ಸಾಕ್ಷಿಯಾಗಿವೆ. ಅಲ್ಲಮ ಪ್ರಭು ಆತನನ್ನು 'ಮಹಾಜ್ಞಾನಿ' ಎಂದು ಕರೆದಿರುವುದು ಸಾರ್ಥಕವಾಗುವಂತೆ ಆತನು ತನ್ನ ವಿಸ್ತಾರವಾದ ಶಾಸ್ತ್ರಜ್ಞಾನವನ್ನು ತನ್ನ ವಚನಗಳಲ್ಲಿ ಹೊರದೋರಿದ್ದಾನೆ. ಕಾರ್ಯಕಾರಣ ಸಂಬದ್ಧವಾಗಿ ಶಾಸ್ತ್ರವಿಚಾರವನ್ನು ಪ್ರತಿಪಾದಿಸಬೇಕಾಗಿರುವ ಈತನ ವಚನಗಳು ಹಲವೆಡೆಗಳಲ್ಲಿ ಸುದೀರ್ಘವಾಗಿಯೂ ಹರಿದುಹೋಗಿವೆ.

### ಸಿದ್ಧರಾಮಯ್ಯ

ಮೊರಡಿಯ ಮುದ್ದ–ಸುಗ್ಗವ್ವೆ ಎಂಬ ಸಾತ್ವಿಕ ದಂಪತಿಗಳ ಇಳಿವಯಸ್ಸಿನಲ್ಲಿ ಹುಟ್ಟಿದ ಸಿದ್ಧರಾಮಯ್ಯನು ಹೊರನೋಟಕ್ಕೆ ಅರೆಬೆಪ್ಪನಂತೆ ಕಾಣುತ್ತಾ ಬಾಲ್ಯದ ಮರೆಯ ಪರಬ್ರಹ್ಮನಾಗಿ ಬೆಳೆದು ತಾರುಣ್ಯವನ್ನು ಪಡೆದನು. ಒಮ್ಮೆ ಭಕ್ತರ ಜೊತೆಯಲ್ಲಿ ಶ್ರೀಶೈಲಕ್ಕೆ ಹೋಗಿಬಂದ ಈ ತರುಣ ಶಿವಭಕ್ತಿಭಾವ ಭರಿತನಾಗಿ, ವೈರಾಗ್ಯದಿಂದ ಮನೆಯನ್ನು ಬಿಟ್ಟು ಹೊರಟು, ಸ್ವಂತವಾದ ಒಂದು ಮಠವನ್ನು ಸ್ಥಾಪಿಸಿಕೊಂಡು ಅಲ್ಲಿ ನೆಲಸಿದನು. ಕರ್ಮಯೋಗಿಯಾದ ಆತನ ಕೀರ್ತಿ ಸುತ್ತಲೂ ಹಬ್ಬಿ ಹಲವಾರು ಜನರನ್ನು ಆತನ ಆಶ್ರಮಕ್ಕೆ ಆಕರ್ಷಿಸಿತು. ಅವರ ಸಹಾಯದಿಂದ ಆತನು ಅಲ್ಲಿಯೇ ಸೊನ್ನಲಿಗೆ ಎಂಬ ಒಂದು ಪಟ್ಟಣವನ್ನು ಕಟ್ಟಿಕೊಂಡು, ಹಲವಾರು ಶಿವದೇವಾಲಯಗಳನ್ನು ನಿರ್ಮಿಸಿ, ದೊಡ್ಡದೊಂದು ಕೆರೆಯನ್ನು

ಕಟ್ಟಿಸಿ, ಅನೇಕ ಪವಾಡಗಳನ್ನು ಮೆರೆದನು. ಹೀಗಿರಲು, ಲೋಕಸಂಚಾರ ಹೊರಟಿದ್ದ ಪ್ರಭುದೇವನು ಸೊನ್ನಲಿಗೆಗೆ ಬಂದು, ಈ ಕರ್ಮಯೋಗಿಯನ್ನು 'ಒಡ್ಡ'ನೆಂದು ಕರೆದು ಆತನನ್ನು ತನ್ನೊಡನೆ ಕಲ್ಯಾಣಕ್ಕೆ ಕರೆದೊಯ್ದನು. ಶಿವದೀಕ್ಷೆಯಿಲ್ಲದಿದ್ದರೂ, ಮಹಾಮಹಿಮನಾಗಿದ್ದ ಈತನನ್ನು ಅಲ್ಲಿನ ಶರಣವೃಂದ ಆದರದಿಂದ ಬರಮಾಡಿಕೊಂಡಿತು. ಸಿದ್ಧರಾಮನು ಚನ್ನ ಬಸವಣ್ಣನಿಂದ ವೀರಶೈವ ದೀಕ್ಷೆಯನ್ನು ಪಡೆದು, ಅನುಭವಮಂಟಪದ ಶರಣಗೋಷ್ಠಿಯಲ್ಲಿ ಪ್ರತಿಷ್ಠಿತನಾಗಿ, ಭಕ್ತಿಸಾಧನೆಯಿಂದ ಜೀವವನ್ನು ಸವೆಸಿ ಶಿವೈಕ್ಯನಾದನು.

ಗಹನವಾದ ವಿಷಯಗಳನ್ನು ಬಲು ಸರಳವಾಗಿ ಸುಲಭವಾಗಿ ನಿರೂಪಿಸುವುದು ಸಿದ್ಧರಾಮಯ್ಯನ ವಚನಗಳ ವೈಶಿಷ್ಟ್ಯ. ಆತನ ಭಾಷೆ ಭಾವಗಳೆರಡೂ ಸುಸ್ಪಷ್ಟ. ಅವುಗಳಲ್ಲಿ ಪಾರಿಭಾಷಿಕ ಪದಗಳ ಗೊಂದಲವೂ ಇಲ್ಲ. ಅಲ್ಲಲ್ಲಿ ಆತನ ಆತ್ಮಕಥೆಯ ಮೇಲೆ ಬೆಳಕು ಚೆಲ್ಲುವ ಸೂಚನೆಗಳನ್ನು ಒಳಗೊಂಡಿರುವುದರಿಂದ ಅವು ಕಥಾನಕದ ರಮಣೀಯತೆಯನ್ನು ಪಡೆಯುತ್ತವೆ.

' ವೇಷವ ಧರಿಸಿ ಫಲವೇನಯ್ಯ, ವೇಷದಂತಾಚರಣೆ ಇಲ್ಲದನ್ನಕ್ಕ? ವೇದಾಂತವನೋದಿ ಫಲವೇನಯ್ಯ, ಬ್ರಹ್ಮ ತಾವಾಗದನ್ನಕ್ಕ? ನಾನು ಕೆರೆಯ ತೋಡಿ ಫಲವೇನಯ್ಯ ಪುಣ್ಯತೀರ್ಥಗಳು ಬರದನ್ನಕ್ಕ ಕಪಿಲಸಿದ್ಧ ಮಲ್ಲಿನಾಥ?'

'ಭಕ್ತಿಯ ಬೆಳಸಿ ಹೇಳಿದೆನಲ್ಲದೆ ಭಕ್ತಿಯ ಮಾಡಿ ಬೆಳೆಯಲಿಲ್ಲ, ನಾನು. ಭಕ್ತಿಯ ಶಕ್ತಿ ಬಸವಣ್ಣಂಗಾಯಿತ್ತು. ಜ್ಞಾನದಶಕ್ತಿ ಚೆನ್ನ ಬಸವಣ್ಣಂಗಾಯಿತ್ತು. ಯೋಗದ ಸಿದ್ಧಿ ಸಿದ್ಧರಾಮಂಗಾಯಿತ್ತು ನಿಮ್ಮರ ಮನೆಯಲ್ಲಿ ನೋಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.'

' ನದಿಯ ನೀರು ಹೋದವಯ್ಯ ಸಮುದ್ರಕ್ಕೆ : ಸಮುದ್ರದ ನೀರು ಬರವಯ್ಯ ನದಿಗೆ. ನಾನು ಹೋದೆನಯ್ಯ ಲಿಂಗದಕಡೆಗೆ; ಲಿಂಗ ಬಾರದು ನೋಡಯ್ಯ ನನ್ನ ಕಡೆಗೆ. ಮಗ ಮುನಿದರೆ ತಂದೆ ಮುನಿಯನು. ನಾ ಮುನಿದರೆ ನೀ ಮುನಿಯೆ ನೋಡಯ್ಯ ಕಪಿಲಸಿದ್ಧ ಮಲ್ಲಿನಾಥಾ.'

ಆತನ ವಚನಗಳೆಲ್ಲ ಪುಟ್ಟ ಪುಟ್ಟ ವಾಕ್ಯಗಳು-ಭಾವದ ಭಾರದಿಂದ

ಬಳುಕುತ್ತಾ ನಿಂತಿವೆ, ಅವು. ಶಿವನನ್ನು ಕುರಿತು 'ನಿನ್ನ ಕಾಟ ಎನ್ನ ಪ್ರಾಣದೋಟ' ಎಂದೊ 'ನೀನಿಕ್ಕಿದ ತೊಡಕ ಬಿಡಬಾರದು, ನೀವು ಬಿಡಿಸಿದ ತೊಡಕನಿಕ್ಕಬಾರದು' ಎಂದೊ ಹೇಳುವಲ್ಲಿ ಆತನು ತನ್ನ ನಿಲವನ್ನು ಸೂಚಿಸುತ್ತಾನೆ. 'ಅಂಗವೆಂದರೆ ಅಜ್ಞಾನ, ಲಿಂಗವೆಂದರೆ ಸುಜ್ಞಾನ' 'ಕಾಯವಿಡಿದಿಹನ್ನಕ್ಕ ಕಾಮವೇ ಮೂಲ, ಜಿವ ವಿಡಿದಿಹನ್ನಕ್ಕ ಕ್ರೋಧವೇ ಮೂಲ, ವ್ಯಾಪ್ತಿಯುಳ್ಳನ್ನಕ್ಕ ಸಕಲ ವಿಷಯಕ್ಕೆ ಆಶೆಯೇ ಮೂಲ, ಎನ್ನ ಆಶೆಯ ಪಾಶ ಗಾಸಿ ಮಾಡುತ್ತಿದೆ. ಶಿವಯೋಗದ ಲೇಸಿನ ಠಾವ ತೋರು ಕಪಿಲ ಸಿದ್ಧ ಮಲ್ಲಿಕಾರ್ಜುನಾ' ಎಂದು ಆತನು ಅರಿಷಡ್ವರ್ಗಗಳ ಸ್ವರೂಪವನ್ನು ದಿಗ್ದರ್ಶಿಸುತ್ತಾನೆ. ಕರ್ಮ ಭಕ್ತಿ ಜ್ಞಾನ ಮಾರ್ಗಗಳ ಸ್ವರೂಪವನ್ನು 'ಕಾಯ ನಾನೆಂದರೆ ಕರ್ಮಕಾಂಡಿ. ಸಕಲಕ್ರಿಯೆ ಈಶಾರ್ಪಣವೆಂದರೆ ಭಕ್ತಿಕಾಂಡಿ. ಸಕಲ ಕರ್ಮ ಸಾಕ್ಷಿ ಎಂದರೆ ಜ್ಞಾನಕಾಂಡಿ' ಎಂದು ಬಹು ಮಾರ್ಮಿಕವಾಗಿ ನಿರೂಪಿಸುತ್ತಾನೆ. ಅಲ್ಲಮಪ್ರಭುವಿನ ಪ್ರಭಾವ ಆತನ ಮೇಲೆ ಮುದ್ರಿತವಾಗಿರುವುದೂ ಆತನ ಅನೇಕ ವಚನಗಳಲ್ಲಿ ಕಂಡುಬರುತ್ತದೆ. 'ಅಲ್ಲದಯ್ಯಗಳು ಇಲ್ಲದಾಟಕ್ಕೆ ಮೈಗೊಟ್ಟು ಕೇಡು ನೋಡಾ! ಇಲ್ಲದಯ್ಯಗಳು ಅಲ್ಲದಾಟಕ್ಕೆ ಮೈಗೊಡರು ನೋಡಾ. ಇಂದೆಲ್ಲ ಅಲ್ಲಮನ ಬಲ್ಲ ಬೋಧೆಯಿಂದ ಸಲ್ಲೀಲೆಯಾಗಿತ್ತು ವಲ್ಲಭ ಶಿವ ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾ.' ಇಂತಹ ಬೆಡಗಿನ ವಚನಗಳ ಮಾದರಿಗಳು ಅಲ್ಲಲ್ಲೆ ಕಂಡು ಬರುತ್ತವೆ. ಈತನು ಮೇಲಿಂದ ಮೇಲೆ ತಾನೊಬ್ಬ ಯೋಗಸಾಧಕ, ಯೋಗಿ ಎಂದು ಹೇಳಿಕೊಂಡಿದ್ದಾನೆ 'ಅಭ್ಯಾಸ ಯೋಗವನತಿಗಳೆದು ಶಿವಯೊಗಿಯಾದೆ' ಎಂದು ಹೇಳಿಕೊಂಡಿರುವುದನ್ನು ನೋಡಿದರೆ ಈತನು ಪತಂಜಲಿಯ ಯೋಗಶಾಸ್ತ್ರವನ್ನು ಅಭ್ಯಾಸಮಾಡಿರಬೇಕು. ಕರ್ಮಯೋಗಿಯಾಗಿದ್ದ ಈತನು ಪ್ರಭುದೇವನ ಪ್ರಭಾವದಿಂದ ಜ್ಞಾನಯೋಗಿಯ ಮಟ್ಟಕ್ಕೆ ಏರಿದನೆಂದೂ ತೋರುತ್ತದೆ. ಆತನಲ್ಲಿ ಆದ ವಿಕಾಸವನ್ನು ಆತನ ವಚನಗಳು ಸ್ಪಷ್ಟಗೊಳಿಸುತ್ತವೆ.

**ಆದಯ್ಯ**

ವಚನಕಾರರಲ್ಲಿ ಒಬ್ಬನಾದ ಆದಯ್ಯ ಗುಜರಾತಿನ ದ್ವಾರಕಾಪಟ್ಟಣ

ದಿಂದ ವ್ಯಾಪಾರಕ್ಕಾಗಿ ಕನ್ನಡನಾಡಿಗೆ ಬಂದವನೆಂದು ತಿಳಿದುಬರುತ್ತದೆ. ಈತನು ಧಾರವಾಡಜಿಲ್ಲೆಯ ಲಕ್ಷ್ಮೇಶ್ವರದಲ್ಲಿ ತನ್ನ ಉದ್ಯೋಗದಲ್ಲಿ ತೊಡಗಿರುವಾಗ ಪಾರಿಸೆಟ್ಟಿಯೆಂಬ ಜೈನ ವಣಿಕನ ಮಗಳಾದ ಪದ್ಮಾವತಿಯೆಂಬ ಸುಂದರಿ ಈತನನ್ನು ಮೋಹಿಸಿ, ಆತನ ಇಷ್ಟದಂತೆ ಶಿವದೀಕ್ಷೆಯನ್ನು ವಹಿಸಿ ಈತನನ್ನು ಮದುವೆಯಾದಳು. ಕಾಲಕ್ರಮದಲ್ಲಿ ಆತನು ಅತ್ಯಂತ ಪ್ರಬಲವಾಗಿ ಲಕ್ಷ್ಮೇಶ್ವರದಲ್ಲಿದ್ದ ಪ್ರಸಿದ್ಧ ಜೈನ ಬಸದಿಯಲ್ಲಿ ಸೋಮೇಶ್ವರನನ್ನು ಸ್ಥಾಪಿಸಿ, ಶಿವಶರಣರಲ್ಲಿ ಬಹು ಗಣ್ಯನೆಂದು ಪ್ರಸಿದ್ಧನಾದನು. ಆತನ 'ಸೌರಾಷ್ಟ್ರ ಸೋಮೇಶ್ವರಾ' ಎಂಬ ಅಂಕಿತದಿಂದ ಹಲವು ವಚನಗಳನ್ನು ಬರೆದಿದ್ದಾನೆ. ಸಾಹಿತ್ಯದೃಷ್ಟಿಯಿಂದ ಅವುಗಳು ಮಹತ್ತ್ವಾಗಿಲ್ಲದಿದ್ದರೂ ಆತನು ಶ್ರೇಷ್ಠಶರಣನಾಗಿದ್ದನೆಂಬುದಕ್ಕೆ ಸಾಕ್ಷಿಯಾಗಿವೆ. ಗುಜರಾತಿಯೊಬ್ಬನು ಇಲ್ಲಿ ನೆಲೆಸಿ. ಕನ್ನಡವನ್ನು ಕಲಿತು, ಅದರಲ್ಲಿ ವಚನರಚನೆಯನ್ನು ಮಾಡಿದುದಕ್ಕಾಗಿ ಆತನು ಅಭಿನಂದನಾರ್ಹ. ಹಡಪದ ಅಪ್ಪಣ್ಣ, ಮಡಿವಾಳ ಮಾಚಯ್ಯ, ಸೊಡ್ಡಳ ಬಾಚರಸ, ಡೋಹರ ಕಕ್ಕಯ್ಯ, ಬಹುರೂಪಿ ಚೌಡಯ್ಯ, ಮೋಳಿಗೆ ಮಾರಯ್ಯ, ಏಕಾಂತದ ರಾಮಯ್ಯ, ಮೇದಾರ ಕೇತಯ್ಯ, ಕೋಲ ಶಾಂತಯ್ಯ, ಗೋರಕ್ಷ--ಮೊದಲಾದ ಬಹುಸಂಖ್ಯಾತರಾದ ಶರಣರು ವಚನರಚನೆಗೆ ಕೈಹಾಕಿ ಕೀರ್ತಿಶಾಲಿಗಳಾಗಿದ್ದಾರೆ. ಅವರೆಲ್ಲರ ವಚನಗಳನ್ನು ವಿವೇಚಿಸುವುದು ಇರಲಿ, ಅವರೆಲ್ಲರ ಹೆಸರುಗಳನ್ನು ಹೇಳುವುದು ಕೂಡ ಇಲ್ಲಿನ ಎಲ್ಲೆಗೆ ಮೀರಿದ ಕೆಲಸ.

ಹನ್ನೆರಡನೆಯ ಶತಮಾನದ ಕಲ್ಯಾಣವನ್ನು ನೆನೆದರೆ ಮೈಯೆಲ್ಲ ರೋಮಾಂಚಗೊಳ್ಳುತ್ತದೆ. ಪ್ರಭುದೇವ, ಬಸವಣ್ಣ, ಚೆನ್ನಬಸವಣ್ಣ—ವೈರಾಗ್ಯ, ಭಕ್ತಿ, ಜ್ಞಾನಗಳ ಸಂಕೇತದಂತಿರುವ—ಈ ತ್ರಿಮೂರ್ತಿಗಳು ಕಾರ್ಯರಂಗದ ಚಾಲನಶಕ್ತಿಗಳಾಗಿ ಸಂಚರಿಸುತ್ತಿದ್ದುದನ್ನು ಮನೋನೇತ್ರದ ಇದಿರಿನಲ್ಲಿ ತಂದುಕೊಂಡರೆ, ಪ್ರಭಾವಲಯ ಪರಿವೇಷ್ಟಿತರಾದವರಂತೆ ಚಲಿಸುತ್ತಿರುವ ಅವರ ಹಿಂದೆ ಮುಂದೆ ನಡೆದಾಡುತ್ತಿದ್ದಿರಬಹುದಾದ ಶರಣತಿಂಥಿಣಿಯನ್ನು ಪರಿಭಾವಿಸಿಕೊಂಡಾಗ, ಅಲ್ಲಿನ ಅನುಭವಮಂಟಪ, ಅಲ್ಲಿಗೆ ಧಾವಿಸುತ್ತಿರುವ ಶರಣಸಮೂಹ, ಅಲ್ಲಿ ನಡೆಯುತ್ತಿರುವ ಧರ್ಮಜಿಜ್ಞಾಸೆ, ಹಿರಿಯಶರಣರ ಅನುಭಾವನಿರೂಪಣೆ–ಇತ್ಯಾದಿಗಳನ್ನು ಚಿತ್ರಿಸಿಕೊಂಡಾಗ

ಮನಸ್ಸು ದಿವ್ಯದರ್ಶನದಿಂದಾದ ಆನಂದವನ್ನು ಪಡೆಯುತ್ತದೆ. ಕಾಯಕಕ್ಕೆ ಮಹತ್ವವನ್ನು ಕೊಟ್ಟು, ಸರ್ವಸಮತೆಯ ಆದರ್ಶವನ್ನು ಎತ್ತಿಹಿಡಿದಾಗ, ಸಮಾಜದ ಎಲ್ಲ ಪದರಗಳಿಂದಲೂ ಬಂದ ಜನಸಮೂಹ ಅದರಡಿಯಲ್ಲಿ ಆಶ್ರಯವನ್ನು ಪಡೆಯಿತು. ಪ್ರತಿಯೊಂದು ಕಾಯಕವನ್ನೂ ಶಿವಾರ್ಪಣ ಬುದ್ಧಿಯಿಂದ ನಡೆಸುತ್ತಿರುವಾಗ ಅವುಗಳಲ್ಲಿ ಮೇಲು ಕೀಳುಗಳ ಪ್ರಸಕ್ತಿ ಯೆಲ್ಲಿ? ಕಾಯಕವೇ ಗೌರವಾಸ್ಪದ (Dignity of Labour)ವೆಂದು ಹೇಳಿ, ಸಮಾಜದ ಏರುಪೇರುಗಳನ್ನು ಅಳಿಸಿಹಾಕಲು, ಕಂಕಣಕಟ್ಟಿದ್ದ, ಅಗಣಿತ ಮತ ಅಸಂಖ್ಯಾತ ದೇವದೇವಿಯರುಗಳ ಗೊಂದಲವನ್ನೆಲ್ಲಾ ನಿಲ್ಲಿಸಿ, ಒಂದೆ ಮತ ಒಂದೆ ದೈವವನ್ನು ಸ್ಥಾಪಿಸಲು ಸೊಂಟಕಟ್ಟಿ ನಿಂತಿದ್ದ ನೀತಿಯ ನೆಲೆಗಟ್ಟಿನ ಮೇಲೆ ಧರ್ಮವನ್ನು ಸಂಸ್ಥಾಪಿಸಿ, ಸಮಾಜವನ್ನು ಸಂಪೂರ್ಣ ವಾಗಿ ಪರಿಷ್ಕರಿಸಬೇಕೆಂದು ಪಣ ತೊಟ್ಟಿದ್ದ ಶರಣರು ತಮ್ಮ ನುಡಿನಡೆ ಗಳಲ್ಲಿ ಏಕವಾಗಿದ್ದು ಜನಮನವನ್ನು ಆಕರ್ಷಿಸಿದರು. ಜನರಲ್ಲಿ ಹೊಸ ದೃಷ್ಟಿ ಮೂಡಿತು, ನೂತನ ಸಮಾಜಸೃಷ್ಟಿಗೆ ಸ್ಫೂರ್ತಿ ದೊರೆಯಿತು. ಆದ್ದರಿಂದಲೆ ಏಕಕಾಲದಲ್ಲಿ ಅಸಂಖ್ಯಾತರು ಶರಣಪಂಥಕ್ಕೆ ಸೇರಿ ವಚನ ಗಳನ್ನು ರಚಿಸಿದರು. ಅವರೆಲ್ಲರ ಆದರ್ಶ ಆಶೋತ್ತರಗಳು ಒಂದೇ ಇರ ಬಹುದಾದರೂ ಅವರ ಬುದ್ಧಿ, ಜ್ಞಾನ, ಸಂಸ್ಕಾರ, ಸಂಸ್ಕೃತಿ, ಪ್ರತಿಭೆ— ಇವುಗಳಲ್ಲಿ ಸಾಕಷ್ಟು ಏರುಪೇರುಗಳಿದ್ದುದು ಸಹಜವಾಗಿಯೇ ಇದೆ. ಅಗಸ, ಕುಂಬಾರ, ಚಮ್ಮಾರ ಮೊದಲಾದ ವೃತ್ತಿಯವರೆಲ್ಲರೂ ವೀರಶೈವ ಧರ್ಮ ಧ್ವಜದ ಅಡಿಯಲ್ಲಿ ಸೇರಿದೊಡನೆಯೆ ಸಮಾನ ಧರ್ಮಸೋದರರಾದರು, ನಿಜ. ಆದರೆ ಅವರ ಬುದ್ಧಿ ಜ್ಞಾನ ಪ್ರತಿಭೆಗಳಲ್ಲಿ ಅವರಲ್ಲಿ ಸಮಾನತೆ ಹೇಗೆ ಸಾಧ್ಯ? ಉಜ್ವಲ ಪ್ರತಿಭೆ ಆಳವಾದ ಅನುಭವಗಳಿಲ್ಲದ ನಿರೂಪಣೆ ಸಂಪ್ರದಾಯಶೀಲವಾಗುತ್ತದೆ, ಅಥವಾ ಅನುಕರಣಲೋಲವಾಗುತ್ತದೆ; ಶರಣರ ಸ್ತುತಿ, ಸಮಾಜದ ಟೀಕೆ, ವೀರಶೈವಾಚಾರ ಮತ್ತು ಭಕ್ತಿವೈರಾಗ್ಯ ಗಳ ಬೋಧನೆ—ಇವುಗಳ ಚರ್ವಿತಚರ್ವಣವಾಗುತ್ತದೆ. ಹಲವು ವೇಳೆ ರೂಕ್ಷವಾಗಿ, ವಿರೂಪವಾಗಿ, ಗ್ರಾಮ್ಯವಾಗಿ ಇರುವ ಅಸಹನೆಯ ನುಡಿಗಳು ಕಾಣಿಸಿಕೊಂಡು, 'ಕನ್ನಡದ ಉಪನಿಷತ್ತು'ಗಳೆಂಬ ಇವುಗಳ ಕೀರ್ತಿಗೆ ಕಳಂಕವಾಗುವುದೂ ಉಂಟು. 'ನವಿಲನ್ನು ನೋಡಿ ಕೆಂಬೂತ ಪುಕ್ಕ ತೆರೆದು

ಕೊಂಡಿತು' ಎಂಬ ಗಾದೆಗೆ ಉದಾಹರಣೆಯಾಗಬಲ್ಲ ವಚನಗಳಿಲ್ಲದೆ ಹೋಗಿಲ್ಲ. ಅಧ್ಯಾತ್ಮ ರಹಸ್ಯಗಳನ್ನು ಒಗಟಾಗಿ ಹೇಳುವುದಕ್ಕೆ ಬದಲಾಗಿ ಒಗಟುಗಳನ್ನೆ ಅಧ್ಯಾತ್ಮವೆಂದು ಕರೆದರೂ ಸರಿಯೆ. ಸತ್ಯನಿಷ್ಠುರರಾಗುವುದಕ್ಕೆ ಬದಲಾಗಿ ನಿಷ್ಠುರವನ್ನೇ ಸತ್ಯವೆಂದು ಭ್ರಮಿಸಿದರೂ ಸರಿಯೆ.

ಬಸವಣ್ಣನ ಜೀವಿತದ ಕಡೆಯಭಾಗದಲ್ಲಿ ಕಲ್ಯಾಣದಲ್ಲಾದ ರಾಜಕೀಯ ಕ್ರಾಂತಿ ಅಲ್ಲಿನ ವಚನಕಾರರನ್ನು – ಶರಣರನ್ನು – ದಿಕ್ಕುದಿಕ್ಕಿಗೆ ಚೆದುರಿಸಿತಷ್ಟೆ. ನೂತನ ಧರ್ಮದ ಅಧ್ವರ್ಯುಗಳಾಗಿದ್ದ ಮೂವರೂ ಮೂರು ಕಡೆಗೆ—ಬಸವಣ್ಣ ಸಂಗಮಕ್ಕೆ, ಪ್ರಭುದೇವ ಶ್ರೀಶೈಲಕ್ಕೆ, ಚನ್ನಬಸವಣ್ಣ ಉಳವಿಗೆ—ಹೋಗಿ ಶಿವೈಕ್ಯರಾದರು. ಇವರೊಡನೆ ಹೊರಟ ಇವರ ಅನುಯಾಯಿಗಳೂ, ದಿಕ್ಕುದಿಕ್ಕಿಗೆ ಚೆದರಿಹೋಗಿರಬಹುದಾದ ಇತರ ಶರಣರೂ ತಮ್ಮ ಧರ್ಮಕ್ಕೆ ಆಧಾರಗ್ರಂಥಗಳಂತಿದ್ದ ವಚನವಾಙ್ಮಯವನ್ನೂ ತಮ್ಮ ಜೊತೆಯಲ್ಲಿ ಕೊಂಡೊಯ್ದಿರಬೇಕು. ತಮ್ಮ ಧರ್ಮಕ್ಕೆ ಬಂದ ಈ ವಿಪತ್ತನ್ನು ಪರಿಹರಿಸಿ, ಮತ್ತೆ ವೀರಶೈವವನ್ನು ಮಹೋನ್ನತಿಗೇರಿಸುವ ಪ್ರಯತ್ನಗಳು ಈ ಶರಣವೃಂದದಿಂದ ನಡೆಯಿತೆಂದು ತೋರುತ್ತದೆ. ಹನ್ನೆರಡನೆಯ ಶತಮಾನದ ಕಡೆಯಲ್ಲಿ ಆದಯ್ಯ ಮತ್ತು ಏಕಾಂತದ ರಾಮಯ್ಯ—ಈ ಇರ್ವರು ಶರಣರ ಮುಖಂಡರಾಗಿ ನಿಂತು ಧರ್ಮಸ್ಥಾಪನೆಗಾಗಿ ಸಾಹಸ ನಡೆಸಿದರು. ಆ ಕಾರ್ಯದಲ್ಲಿ ಅವರು ಸಾಕಷ್ಟು ವಿಜಯಿಗಳಾಗಿರಬಹುದಾದರೂ ವಚನವಾಙ್ಮಯದ ಬೆಳವಣಿಗೆಯೇನೊ ಅಲ್ಲಿಗೆ ನಿಂತುಹೋಯಿತು. ಹದಿಮೂರನೆಯ ಶತಮಾನದ ಪೂರ್ವಾರ್ಧದಲ್ಲಿ ಹೊಯ್ಸಳ ರಾಜರ ಮಂತ್ರಿಯಾಗಿದ್ದ ಕೆರೆಯ ಪದ್ಮರಸನು ವೀರಶೈವ ಧರ್ಮದ ಏಳಿಗೆಗೆ ಸಹಾಯಕನಾದನು. ಅದೇ ಕಾಲದಲ್ಲಿ ಮಹಾಕವಿಗಳಾದ ಹರಿಹರ ರಾಘವಾಂಕರು ಕಾವ್ಯ ಸೃಷ್ಟಿಗೆ ಕೈಯಿಟ್ಟು ವೀರಶೈವ ಧರ್ಮದ ಪ್ರಚಾರ ಪ್ರಸಾರಗಳಿಗೆ ಸಹಾಯಕರಾದರು. ಆದರೆ ಅವರು ಪ್ರಧಾನವಾಗಿ ಕವಿಗಳೇ ಹೊರತು ವಚನಕಾರರಂತೆ ಧರ್ಮೋಪದೇಶಕರಲ್ಲ. ಅವರು ವಚನಕಾರರನ್ನು ಕುರಿತು ಕಾವ್ಯ ಪುರಾಣಗಳನ್ನು ಬರೆದರೆ ಹೊರತು ವಚನಗಳನ್ನು ಬರೆಯಲಿಲ್ಲ. ಹಾಗೆ ಬರೆಯುವಾಗ ಆಯಾ ವಚನಕಾರರ ವಚನಗಳನ್ನು ಸ್ವಲ್ಪ ಮಟ್ಟಿಗೆ ತಮ್ಮ ಕಾವ್ಯಗಳಲ್ಲಿ ಬಳಸಿಕೊಂಡರು. ಹಾಗೆ

ಬಳಸಿಕೊಳ್ಳುವಾಗ ಅಂಥಾ ವಚನಗಳು ಹುಟ್ಟಿರಬಹುದಾದ ಸನ್ನಿವೇಶ ಸಂದರ್ಭಗಳ ಮೇಲೆ ಬೆಳಕು ಚೆಲ್ಲಿದ್ದಾರೆ.

ಹೀಗೆ ವೀರಶೈವವು ತಲೆಯೆತ್ತಿ ಗರಿಕಟ್ಟಿಕೊಳ್ಳುತ್ತಿರುವಷ್ಟರಲ್ಲಿಯೇ, ಹದಿಮೂರನೆಯ ಶತಮಾನದ ಕಡೆಯ ಭಾಗದಲ್ಲಿ, ಇಡೀ ದಕ್ಷಿಣಭಾರತಕ್ಕೇ ಭಯಂಕರವಾದ ಪೀಡೆ ಹೊಕ್ಕಂತೆ ಅಲ್ಲಾವುದ್ದೀನ್ ಖಿಲ್ಜಿಯ ದಾಳಿ ನಡೆಯಿತು. ಪ್ರಬಲವಾಗಿದ್ದ ಹಿಂದೂ ರಾಜ್ಯಗಳೆಲ್ಲವೂ ಮಣ್ಣುಗೂಡಿ ಹೋದವು. ಕ್ರೂರವಾದ ಕೊಲೆಗೆ ತುತ್ತಾಗಿ ಹಿಂದೂಗಳ ರಕ್ತ ಹೊಳೆಯಾಗಿ ಹರಿಯಿತು; ಅವರ ಧರ್ಮಗ್ರಂಥಗಳೆಲ್ಲವೂ ಅಗ್ನಿಗೆ ಆಹುತಿಯಾದವು. ಈ ಹುಚ್ಚು ಹೊಳೆಗೆ ಸಿಕ್ಕಿ ವಚನಸಾಹಿತ್ಯದ ಬಹುಭಾಗ ಕೊಚ್ಚಿ ಹೋಯಿತೆಂದು ತೋರುತ್ತದೆ. ಇದಾದ ಕೆಲವು ಕಾಲದ ಮೇಲೆ, ಹದಿನಾಲ್ಕನೆಯ ಶತಮಾನದ (ಸು. ೧೩೩೬) ವಿಜಯನಗರ ರಾಜ್ಯಸ್ಥಾಪನೆಯಾಗಿ ದಕ್ಷಿಣಭಾರತದಲ್ಲಿ ಮತ್ತೆ ಶಾಂತಿ ನೆಲಸಿದಂತಾಯಿತು. ವಿಜಯನಗರದ ಅರಸರು ಮೇಲಿಂದ ಮೇಲೆ ಮಹಮ್ಮದೀಯರನ್ನು ಸೋಲಿಸಿ, ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿದರು. ಉದಾರಚರಿತರಾದ ಅವರು ಎಲ್ಲ ಧರ್ಮದವರನ್ನೂ ಸಮಾನವಾಗಿ ಕಂಡು, ಪ್ರೋತ್ಸಾಹ ನೀಡಿದರು. ಹದಿನೈದನೆಯ ಶತಮಾನದ ಆದಿ ಭಾಗದಲ್ಲಿ ರಾಜನಾಗಿದ್ದ ಪ್ರೌಢರಾಯದೇವನು ವೀರಶೈವ ಧರ್ಮಕ್ಕೆ ಒತ್ತಾಸೆ ನೀಡಿದನು. ಆ ಶತಮಾನದ ಉತ್ತರಾರ್ಧದಲ್ಲಿ ತೋಂಟದ ಸಿದ್ಧಲಿಂಗಯತಿ (ಸು. ೧೪೭೦) ಈಗಿನ ತುಮಕೂರು ಜಿಲ್ಲೆಯಲ್ಲಿರುವ ಎಡೆಯೂರೆಂಬ ಸ್ಥಳದಲ್ಲಿದ್ದ ತನ್ನ ಮಠವನ್ನು ವೀರಶೈವ ಧರ್ಮಜಾಗ್ರತಿಯ ಕೇಂದ್ರವನ್ನಾಗಿ ಮಾಡಿದನು. ಹೀಗೆ ಅರಮನೆ ಗುರುಮನೆಗಳಿಂದ ಒದಗಿಬಂದ ಸಹಾಯದ ಫಲವಾಗಿ ವಚನವಾಙ್ಮಯಕ್ಕೆ ಮತ್ತೆ ಗುರುದೆಸೆ ಬಂದಂತಾಯಿತು. ಅಳಿಯದೆ ಉಳಿದಿದ್ದ ವಚನಗಳನ್ನೆಲ್ಲಾ ಸಂಗ್ರಹಿಸಿ, ಅವುಗಳನ್ನು ಷಟ್‌ಸ್ಥಲಾನುಕ್ರಮವಾಗಿ ವಿಂಗಡಿಸುವ ಕಾರ್ಯ ಭರದಿಂದ ನಡೆಯಿತು. ಅಷ್ಟೇ ಅಲ್ಲ, ಹಾಗೆ ಪರಿಷ್ಕರಿಸಿದ ವಚನಗಳಿಗೆ ಟೀಕೆ ಭಾಷ್ಯಗಳೂ ಹುಟ್ಟಿಕೊಂಡವು. ಈ ಎಲ್ಲಾ ಉತ್ಸಾಹಕ್ಕೂ ಕಿರೀಟಪ್ರಾಯವಾದುದೆಂದರೆ 'ಶೂನ್ಯ ಸಂಪಾದನೆ' ಯ ಉದಯ.

'ಶೂನ್ಯ ಸಂಪಾದನೆ' ಒಂದು ಅದ್ಭುತವಾದ ಗ್ರಂಥ. ಹನ್ನೆರಡನೆಯ

ಶತಮಾನದ ಕಲ್ಯಾಣದಲ್ಲಿ ಶರಣರ ಗೋಷ್ಠಿ ನಡೆಯುತ್ತಿದ್ದ ಅನುಭವ ಮಂಟಪವನ್ನು, ಮುನ್ನೂರು ವರ್ಷಗಳಷ್ಟು ಆಚೆ ನಿಂತು, ಛಾಯಾಚಿತ್ರ ತೆಗೆದುಕೊಳ್ಳುವ ಕಾರ್ಯ ಇಲ್ಲಿ ನಡೆದಿದೆ. ಎಲ್ಲವನ್ನೂ ನಿಷ್ಪಕ್ಷಪಾತವಾಗಿ ನಿರ್ಣಯಿಸಬಲ್ಲ ಸಾಕ್ಷೀಭೂತಚೇತನನಾಗಿ ಶೂನ್ಯಸಿಂಹಾಸನದಲ್ಲಿ ಮಂಡಿಸಿರುವ ಪ್ರಭುದೇವ, ಪರಮಜ್ಞಾನಿಯಾದ ಆತನ ಸಮ್ಮುಖದಲ್ಲಿ ತಮ ತಮಗುಚಿತವಾದ ಸ್ಥಾನಗಳಲ್ಲಿ ಕುಳಿತಿರುವ ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮಯ್ಯ, ಮುಕ್ತಾಯಕ್ಕ, ಮಹಾದೇವಿಯಕ್ಕ, ಮೋಳಿಗಯ್ಯ, ಮಡಿವಾಳಯ್ಯ ಮೊದಲಾದ ಅಸಂಖ್ಯಾತ ಶರಣರು, ಅವರ ವಿಚಾರ ಮಂಥನದಲ್ಲಿ ಉದಿಸುತ್ತಿರುವ ಧರ್ಮದ ನವನೀತ—ದಿವ್ಯವಾದ ಈ ಚಿತ್ರವನ್ನು ನಮ್ಮ ಕಣ್ಣೆದುರಿಗೆ ತಂದು ನಿಲ್ಲಿಸುವ 'ಶೂನ್ಯ ಸಂಪಾದನೆ' ವೀರಶೈವದ ಧರ್ಮಯಾತ್ರಿಕರಿಗೆ ಒಂದು ಬೆಳಗುಗಂಬದಂತಿದೆ. ಹನ್ನೆರಡನೆಯ ಶತಮಾನದ ಪ್ರಮುಖ ವಚನಕಾರರೆಲ್ಲರೂ ಇಲ್ಲಿ ಕಾಣಿಸಿಕೊಂಡಿದ್ದಾರೆ. ಅವರಲ್ಲಿ ಹಲವರು ನಡೆಸಿದ ಧಾರ್ಮಿಕ ಚರ್ಚೆಯೇ ಈ ಮಹಾ ಗ್ರಂಥ.

ಶೂನ್ಯ ಸಂಪಾದನೆಯನ್ನು ನೋಡಿ, ಇದು ಅನುಭವಮಂಟಪದ ಪ್ರತಿಕೃತಿಯೆಂಬ ಭ್ರಾಂತಿ ಸಲ್ಲದು. ಅದರಂತೆಯೇ 'ಪ್ರಭುದೇವನ ಶೂನ್ಯ ಸಂಪಾದನೆ' ಎಂಬ ಹೆಸರಿನಿಂದ ಅದು ಪ್ರಭುದೇವವಿರಚಿತವೆಂದು ಭಾವಿಸಿದರೂ ತಪ್ಪಾಗುತ್ತದೆ. ಈ ಗ್ರಂಥದ ಕೇಂದ್ರ ವ್ಯಕ್ತಿ ಪ್ರಭುದೇವನೆ ಹೊರತು ಆತ ಗ್ರಂಥಕರ್ತನಲ್ಲ. ಸುಮಾರು ಹದಿನಾಲ್ಕನೆಯ ಶತಮಾನದ ಕಡೆಯಲ್ಲಿಯೊ ಹದಿನೈದನೆಯ ಶತಮಾನದ ಆರಂಭದಲ್ಲಿಯೊ ಇದ್ದಿರಬಹುದಾದ (ಕಾಲ ಗೊತ್ತಿಲ್ಲ) ಶಿವಗಣಪ್ರಸಾದಿ ಮಹದೇವಯ್ಯ ಎಂಬಾತನು ಈ ಗ್ರಂಥದ ಸಂಕಲನಕಾರನೆಂದು ತಿಳಿದುಬರುತ್ತದೆ.[1] ಹನ್ನೆರಡನೆಯ ಶತಮಾನದಲ್ಲಿದ್ದ ಹಲವು ಹಿರಿಯ ಶರಣರ ವಚನಗಳನ್ನು ಸಂಕಲಿಸಿ ಈ ಕೃತಿರಚನೆಯಾಗಿದೆ. 'ಕಾಯಕ ನಿಂದಿತ್ತು ಹೋಗಯ್ಯಾ ಎನ್ನಾಳ್ದನೆ....ಬೇಗ ಹೋಗು ಮಾರಯ್ಯ', 'ಲಿಂಗದಲ್ಲಿ ವಿಯೋಗಕ್ಕೆ

---

[1] ಶೂನ್ಯ ಸಂಪಾದನೆಯನ್ನು ಕುರಿತು—ಶ್ರೀ ಎಂ. ಚಿದಾನಂದ ಮೂರ್ತಿ.

ತೆರಹಿಲ್ಲ ಕೇಳಾ ಸಂಗನ ಬಸವಣ್ಣ', 'ಬಸವಣ್ಣ ಗುರುವಾದ ಕಾರಣ ನಾನು ನಿಮಗೆ ಚಿಕ್ಕ ತಮ್ಮ ಕೇಳಾ ಪ್ರಭುವೆ'—ಇಂತಹ ನೂರಾರು ವಚನಗಳು ಶರಣರಲ್ಲಿ ಪರಸ್ಪರ ನಡೆದ ಸಂಭಾಷಣೆಗೆ ಸಾಕ್ಷಿಯಾಗಿವೆ. ಅಂತಹ ಸಂಭಾಷಣೆಗಳು ಮೂಡಿ ಬಂದಿರಬಹುದಾದ ಸಂದರ್ಭ ಸನ್ನಿವೇಶಗಳನ್ನು ಊಹಿಸಿ, ಅಥವಾ ಶರಣರ ಜೀವನಚರಿತ್ರೆ ಸಂಪ್ರದಾಯದ ಕಥೆಗಳಲ್ಲಿ ಆಯಾ ವಚನಗಳಿಗೆ ಸೂಕ್ತವಾಗಿರುವ ಸಂದರ್ಭಗಳನ್ನು ಆಯ್ದುಕೊಂಡು, ಆಯಾ ಶರಣರ ವಚನಗಳನ್ನು ಅವರವರ ಬಾಯಲ್ಲಿಯೇ ಇಟ್ಟು ಕಟ್ಟಿ, ರೂಪಿಸಿರುವ ಸಂಕಲನಗ್ರಂಥವಿದು. ಶರಣನೊಬ್ಬನು ತನ್ನೊಂದು ಅಥವಾ ಕೆಲವು ವಚನಗಳ ಮೂಲಕ ಸಂವಾದವನ್ನು ಪ್ರಾರಂಭಿಸುತ್ತಾನೆ; ಮತ್ತೊಬ್ಬ ಶರಣನು ತನ್ನ ವಚನದ ಮೂಲಕ ಸಂವಾದವನ್ನು ಮುಂದುವರಿಸಬಹುದು ಅಥವಾ ಪ್ರಭುದೇವನೇ ಆ ಸಂವಾದಕ್ಕೆ ಉತ್ತರರೂಪವಾಗಿ ತನ್ನೊಂದು ವಚನವನ್ನು ಹೇಳಬಹುದು. ಸಂಕಲನಕಾರನು ಈ ಇಬ್ಬರ ವಚನಗಳಿಗೂ ತನ್ನೊಂದು ಮಾತಿನಿಂದ ಸಂಬಂಧಸೂತ್ರವನ್ನು ಕಲ್ಪಿಸುತ್ತಾನೆ. ಒಮ್ಮೊಮ್ಮೆ ಟೀಕಾಚಾರ್ಯನಂತೆ ಆತನು ಈ ಸಂದರ್ಭದ ವಚನಗಳಿಗೆ ವಿವರಣೆಯನ್ನೂ ನೀಡಬಹುದು. ಹೀಗೆ ಕುತೂಹಲಜನಕವಾದ ದೃಶ್ಯಾಂಶದಿಂದ ಕೂಡಿರವುದರಿಂದ ಇವುಗಳನ್ನು ಓದಬೇಕೆಂಬ ಕುತೂಹಲ ಹುಟ್ಟುವುದು ಸಹಜವಾಗಿಯೇ ಇದೆ. ಪಂಚತಂತ್ರವು ರಾಜಕುಮಾರರ ಪಠ್ಯಪುಸ್ತಕವಾದಂತೆ 'ಶೂನ್ಯಸಂಪಾದನೆ' ವೀರಶೈವದ ಅನುಭಾವ ಸಾಹಿತ್ಯದ ಪಠ್ಯಪುಸ್ತಕವಾಗಲು ಯೋಗ್ಯವಾಗಿದೆ. ಇದು ಬಹುಬೇಗ ಅತ್ಯಂತ ಜನಪ್ರಿಯವಾಯಿತೆಂದು ತೋರುತ್ತದೆ. ಅರ್ಧ ಅಥವಾ ಮುಕ್ಕಾಲು ಶತಮಾನಗಳೊಳಗಾಗಿ ಇದು ನಾಲ್ಕು ಸಂಸ್ಕರಣಗಳನ್ನು ಪಡೆದಂತೆ ಕಂಡುಬರುತ್ತದೆ.[2] ಈಗ ಅಚ್ಚಾಗಿ ಪ್ರಕಟವಾಗಿರುವುದು ನಾಲ್ಕನೆಯ ಬಾರಿ ಪರಿಷ್ಕೃತವಾದ ಗೂಳೂರು ಸಿದ್ಧವೀರಣ್ಣೊಡೆಯರದು.

'ಶೂನ್ಯಸಂಪಾದನೆ' ಎಂದರೆ ದೈವಸಾಕ್ಷಾತ್ಕಾರವನ್ನು ಅಥವಾ ದಿವ್ಯಾನುಭವವನ್ನು ಪಡೆಯುವುದು ಎಂದರ್ಥ. ತನ್ನ ಮಾತೇ ಜ್ಯೋತಿ

---

[2] ಶೂನ್ಯ ಸಂಪಾದನೆಯನ್ನು ಕುರಿತು—ಶ್ರೀ ಎಂ. ಚಿದಾನಂದ ಮೂರ್ತಿ.

ಲಿಂಗವಾಗಿದ್ದ ಪ್ರಭುದೇವನ ದಿವ್ಯವಾಣಿ ಅಜ್ಞಾನ ಅಲ್ಪಜ್ಞಾನಗಳ ಕತ್ತಲನ್ನು ಕಳೆದು, ಸುಜ್ಞಾನವ ಬೆಳಕನ್ನು ನೀಡಿ, ತನ್ನ ಪ್ರಭಾವಲಯದಲ್ಲಿ ಬಂದ ಮುಕ್ತಾಯಕ್ಕ, ಸಿದ್ಧರಾಮಯ್ಯ, ಮರುಳು ಶಂಕರ, ಬಸವಣ್ಣ, ಚೆನ್ನಬಸವಣ್ಣ, ಮಡಿವಾಳಯ್ಯ, ಆಯ್ದಕ್ಕಿ ಮಾರಯ್ಯ, ಮೋಳಿಗೆಯ್ಯ, ನುಲಿಯ ಚೆಂದಯ್ಯ, ಘಟ್ಟಿವಾಳಯ್ಯ, ಮಹಾದೇವಿಯಕ್ಕ, ಗೋರಕ್ಷ— ಇವರಿಗೆ ಕ್ರಮವಾಗಿ ಶೂನ್ಯಸಂಪಾದನೆಯ ಭಾಗ್ಯವನ್ನು ಕರುಣಿಸಿದುದು ಶೂನ್ಯಸಂಪಾದನೆಯಲ್ಲಿ ಕಂಡು ಬರುತ್ತದೆ 'ಹೂವಿನಿಂದ ನಾರು ಸ್ವರ್ಗಕ್ಕೆ' ಎಂಬಂತೆ ಅಸಂಖ್ಯಾತ ಶರಣರು ಆ ಹಿರಿಯರ ಸಂಭಾಷಣೆಯಿಂದ ಶೂನ್ಯ ಸಂಪಾದನೆಯ ಮಾರ್ಗವನ್ನು ಕಂಡುಕೊಂಡಿರಬಹುದು. ಕಲ್ಯಾಣಕಾರಕವಾದ ಈ ಮಹಾಗ್ರಂಥವನ್ನು ಕುರಿತು ಶ್ರೀ ರಾನಡೆಯವರು ತಮ್ಮ Path-way to God in Kannada Litrature ಎಂಬ ಗ್ರಂಥದಲ್ಲಿ (ಪುಟ ೬-೭) It is a very extrordinary work. The dialogues in Shunya Sampadane are planned very much on the lines of Platonic dialogues—ಇದೊಂದು ಅಸಾಧಾರಣ ಗ್ರಂಥ. ಶೂನ್ಯಸಂಪಾದನೆಯ ಸಂಭಾಷಣೆಗಳನ್ನು ಬಹುಮಟ್ಟಿಗೆ ಪ್ಲೇಟೋ ಸಂಭಾಷಣೆಗಳ ಮಾದರಿಯಲ್ಲಿ ಯೋಜಿಸಲಾಗಿದೆ—ಎಂದು ತಮ್ಮ ಮೆಚ್ಚಿಗೆಯನ್ನು ಸೂಚಿಸಿದ್ದಾರೆ. ಅಲ್ಲಿನ ಸಾಕ್ರಟೀಸನ ಸ್ಥಾನದಲ್ಲಿ ಇಲ್ಲಿನ ಅಲ್ಲಮ ನಿಲ್ಲುತ್ತಾನೆ'[3]ಂದು ಹೇಳುತ್ತಾರೆ. ಶೂನ್ಯಸಂಪಾದನೆ (೧೯೫೮) ಪುಟ ೧೩ಲ್ಲಿ 'ಆಕಾಶದಲ್ಲಿ ಅದ್ಭುತಗಳಿರುವಂತೆ ನೆಲದ ಮೇಲೆಯೂ ಅದ್ಭುತಗಳಿವೆ; ಸಾಹಿತ್ಯಕ್ಷೇತ್ರದಲ್ಲಿಯೂ ಇವೆ. ಶೂನ್ಯಸಂಪಾದನೆ ಅಂತಹ ಅದ್ಭುತಗಳಲ್ಲಿ ಒಂದು'[4] ಎಂದು ಹೇಳಿದ್ದಾರಂತೆ! ಈ ಅತ್ಯುಕ್ತಿಯನ್ನು ಅದಕ್ಕೆ ಆರೋಪಿಸಿದರೂ ತಪ್ಪೇನಿಲ್ಲ.

---

3–4 ಶೂನ್ಯ ಸಂಪಾದನೆಯನ್ನು ಕುರಿತು—ಶ್ರೀ ಎಂ. ಚಿದಾನಂದ ಮೂರ್ತಿ

# ಸ್ವತಂತ್ರ್ಯಯುಗದ ಕವಿಗಳು

ಕನ್ನಡ ಸಾಹಿತ್ಯಕ್ಕೆ ಪ್ರೇರಕ, ಪ್ರಚೋದಕ, ಪ್ರಬೋಧಕ ಪೋಷಕ —ಶಕ್ತಿನಿರ್ವಿವಾದವಾಗಿಯೂ ಧರ್ಮವೇ. ಆದ್ದರಿಂದ ನಮ್ಮ ಸಾಹಿತ್ಯದಲ್ಲಿ ಧರ್ಮಪ್ರಾಚುರ್ಯ ಕಂಡುಬರುವುದು ಸಹಜವಾಗಿಯೇ ಇದೆ. ಒಬ್ಬನೇ ಸೂರ್ಯನಲ್ಲಿ ಬೆಳಕು ಬಿಸಿಲುಗಳೆರಡೂ ಇರುವುವಾದರೂ ಬೆಳಕನ್ನು ಬಿಸಿಲೆಂದಾಗಲಿ, ಬಿಸಿಲನ್ನು ಬೆಳಕೆಂದಾಗಲಿ–ಅವೆರಡೂ ವೈಜ್ಞಾನಿಕವಾಗಿ ಒಂದೇ ಶಕ್ತಿಯಾದರೂ–ಕರೆಯುವುದಿಲ್ಲ. ಈ ದೃಷ್ಟಿಯಿಂದಲೆ ನಾವು ವಚನ ವಾಙ್ಮಯವನ್ನು ವಿವೇಚಿಸುವಾಗ ಅದರ ಕರ್ತೃಗಳು ಕವಿಗಳಲ್ಲವೆಂದೂ, ಅವರ ಗುರಿ ಕಾವ್ಯಸೃಷ್ಟಿಯಲ್ಲವೆಂದೂ ಸ್ಪಷ್ಟಪಡಿಸಿದ್ದೇವೆ. ವಚನಕಾರರ ಗುರಿ ಸತ್ಯಸಾಕ್ಷಾತ್ಕಾರವೇ ಹೊರತು ಕಾವ್ಯಾನಂದವಲ್ಲ. ಕಾರ್ಖಾನೆಯಲ್ಲಿ ಸಕ್ಕರೆ ತಯಾರಿಸುವಾಗ ಇತರ ಕೆಲವು ಉಪಸಾಮಗ್ರಿಗಳು (Byproducts) ಯಂತ್ರದಿಂದ ಹೊರಬಿದ್ದರೂ ಅದು ಸಕ್ಕರೆಯ ಕಾರ್ಖಾನೆಯೇ ಹೊರತು ಉಪಸಾಮಗ್ರಿಗಳ ಕಾರ್ಖಾನೆಯಲ್ಲ. ಈ ದೃಷ್ಟಿಯಲ್ಲಿ ನಾವು ವಚನಕಾರರನ್ನು ಶಾಸ್ತ್ರಜ್ಞರೆಂದೊ ಅನುಭಾವಿಗಳೆಂದೊ ಸಂತರೆಂದೊ ಕರೆಯಬಹುದು. ಭರತಖಂಡದ ಸಾಹಿತ್ಯರಾಶಿಯನ್ನು ಕಾವ್ಯ ಮತ್ತು ಶಾಸ್ತ್ರವೆಂದು ವಿಂಗಡಣೆ ಮಾಡುವುದು ಕಷ್ಟಸಾಧ್ಯವೇ ಹೊರತು ಅಸಾಧ್ಯವೇನೂ ಅಲ್ಲ. ಯಾವುದು ಧರ್ಮಕ್ಕೆ ಪ್ರಮಾಣಭೂತವಾಗಬಲ್ಲುದೊ ಅದು ಶಾಸ್ತ್ರ; ಯಾವುದು ಧರ್ಮಪ್ರಮಾಣವಾಗುವುದಕ್ಕಿಂತಲೂ ಹೆಚ್ಚಾಗಿ ಆನಂದಸ್ಯಂದಿಯಾಗಬಲ್ಲುದೊ ಅದು ಕಾವ್ಯ. ಅವೆರಡರ ಎಲ್ಲೆಯನ್ನೂ ಗೆರೆಯೆಳೆದು ತೋರಿಸಬೇಕೆಂಬ ಆಗ್ರಹ ನಲ್ಲದು. ಒಟ್ಟಿನಲ್ಲಿ ಅದು ಯಾವ ಗುಂಪಿನದೆಂದು ಅರ್ಥವಾದರೆ ಸಾಕು. ವಚನವಾಙ್ಮಯವನ್ನು ವೀರಶೈವಧರ್ಮದ ಪ್ರಮಾಣ ಗ್ರಂಥವೆಂದು ಸ್ವೀಕರಿಸಲಾಗಿದೆ; ಆದ್ದರಿಂದ ಅದು ಶಾಸ್ತ್ರ. ಶ್ರೇಷ್ಠವಾದ ಕಾವ್ಯಗುಣ ಅದರಲ್ಲಿ ಕಾಣಬರಬಹುದಾದರೂ, ಕಾವ್ಯಗುಣದಲ್ಲಿ ಅದಕ್ಕಿಂತಲೂ ಕೆಳಮಟ್ಟದಲ್ಲಿರುವ ಸಾಹಿತ್ಯಸಮುದಾಯವನ್ನು ಕಾವ್ಯವೆಂದು ಸ್ವೀಕರಿಸಿದರೂ ಅದು ಧರ್ಮಗ್ರಂಥವೇ. ಕವಿ ಕುವೆಂಪುರವರು ಪಾಶ್ಚಾತ್ಯ

ಕವಿಯೊಬ್ಬನ ಮಾತಿನಲ್ಲಿ ಹೇಳುವಂತೆ ‘ ಸಂತನಾಗಲು ಬಲ್ಲ ಆವನು, ಸುಧೀರ ಮತಿ, ಕವಿಯಾಗಲೊಲ್ಲ ; ’ ಏಕೆಂದರೆ ‘ ನೂರು ಕಾವ್ಯದ ಸಾರ ಒಂದು ಸಾಕ್ಷಾತ್ಕಾರ.’ ಬಾಳಿಗೂ ಕಲೆಗೂ ಇರುವ ವ್ಯತ್ಯಾಸವೆಂದರೆ ‘ಕಲೆ ಸಂಸ್ಕೃತಿ ವಿಲಾಸ ; ಬಾಳ್ ಸೃಷ್ಟಿಗೆ ವಿಕಾಸ.’ ಆದ್ದರಿಂದ ಸತ್ಯಸಾಕ್ಷಾತ್ಕಾರಕ್ಕಾಗಿ ಶ್ರಮಿಸುವ ವಚನಕಾರರನ್ನು ನಾವು ಸಂತರೆಂದು ಕರೆಯಬೇಕೇ ಹೊರತು ಕವಿಗಳೆಂದಲ್ಲ. ಕವಿಗಳೆಂದೂ ಅಥವಾ ಕವಿಗಳೆಂದೇ ಕರೆದು ಅವರನ್ನು ಗೌರವಿಸಿದೆವೆಂದುಕೊಳ್ಳುವವರಿದ್ದರೆ ನಮ್ಮ ಅಡ್ಡಿ ಇಲ್ಲ. ಆದರೆ ಒಂದು ಮಾತು. ವಚನಕಾರರು ಕವಿಗಳಲ್ಲದಿದ್ದರೂ ಮುಂದಿನ ಕವಿಗಳಿಗೆಲ್ಲರಿಗೂ ಸಾಕಷ್ಟು ಪ್ರಚೋದನೆ ಪ್ರೇರಣೆಗಳನ್ನು ನೀಡಿರುವರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಇಷ್ಟೇ ಅಲ್ಲ, ಅನೇಕ ವಚನಕಾರರು ತಮ್ಮ ಉದಾತ್ತ ಜೀವನವನ್ನೇ ಕಾವ್ಯವಸ್ತುವಾಗಿ ಒದಗಿಸಿದ್ದಾರೆ.

ಸ್ವಲ್ಪ ಹೆಚ್ಚುಕಡಮೆ ವಚನಕಾರರ ಸಮಕಾಲದಲ್ಲಿಯೇ ವೀರಶೈವ ತತ್ತ್ವಗಳನ್ನು ಒಳಗೊಂಡ ಕಾವ್ಯರಚನೆಯೂ ಆರಂಭವಾಯಿತೆಂದು ತೋರುತ್ತದೆ. ಇಂತಹ ಕಾವ್ಯಕರ್ತೃಗಳಲ್ಲಿ ಕೊಂಡಗುಳಿಯ ಕೇಶಿರಾಜನೆಂಬುವನು ಮೊಟ್ಟಮೊದಲ ಕವಿ. ಈತನ ಕಾಲ ಇನ್ನೂ ಅನಿರ್ದಿಷ್ಟ. ಹರಿಹರಕವಿಯು ಈತನನ್ನು ಭಕ್ತಿಯಿಂದ ಸ್ತುತಿಸುವುದರಿಂದ ಈತನು ಹರಿಹರಕವಿಗಿಂತಲೂ ಹಿಂದಿನವನೆಂಬುದು ನಿರ್ವಿವಾದ. ಬಸವಣ್ಣನಿಗಿಂತಲೂ ಐವತ್ತು ವರ್ಷ ಹಿಂದಿನವನೆಂದು ಹೇಳಿಕೆ ಇದೆ. ಕೇಶಿರಾಜನು ವಿಪುಲವಾದ ಗ್ರಂಥರಾಶಿಯನ್ನು ಸೃಷ್ಟಿಸಿರುವನೆಂಬ ಪ್ರತೀತಿ ಇದ್ದರೂ ಈಗ ಉಪಲಬ್ಧವಾಗಿರುವುದು ‘ಷಡಕ್ಷರಿ ಕಂದ’ವೆಂಬ ಒಂದು ಗ್ರಂಥಮಾತ್ರ. ಷಡಕ್ಷರೀಮಂತ್ರದ ಮಹಿಮೆಯನ್ನು ಸಾರುವ ಈ ಪುಟ್ಟ ಗ್ರಂಥವು ಕೇಶಿರಾಜನ ಕವಿಹೃದಯವನ್ನು ವ್ಯಕ್ತಗೊಳಿಸಲು ಸಾಧಕವಾಗಿದೆ.

ತರಿಯಲ್ ಮೋಹದ ಕಿಚ್ಚಂ,
ಪರಿಯಲ್ ಭವಪಾಶಮುಂ, ಮನೋಜನ ಬಿಲ್ಲಂ
ಮುರಿಯಲ್ ಮಾಯೆಯ ಬೇರಂ
ಕೀರಿಯಲ್ ಜಪಮೋಂ ನಮಶ್ಶಿವಾಯೆಂಬ ಪದಂ

ಮೋಹದ ಬೆಂಕಿಯನ್ನು ನಂದಿಸುವುದಕ್ಕೆ. ಸಂಸಾರ ಬಂಧನವನ್ನು ಹರಿದು

ಹಾಕುವುದಕ್ಕೆ, ಮನ್ಮಥನ ಬಿಲ್ಲನ್ನು ಮುರಿದು ಹಾಕುವುದಕ್ಕೆ, ಮಾಯೆಯ ಬೇರನ್ನು ಕತ್ತರಿಸಿಹಾಕುವುದಕ್ಕೆ 'ಓಂ ನಮಃಶ್ಶಿವಾಯ' ಎಂಬ ಪದವು ಶಕ್ತವಾಗುತ್ತದೆ.

ಅಟಮಟದ ಮಾತನಾಡಿಯೆ
ತುಟಿಮಿಡುಕಲದೇಕೆ ಜನನ ಮರಣಾರ್ಣವದಾ
ತಟವಂ ಸಾರ್ಚುವ ತೆಪ್ಪಂ
ದಿಟವಿದು ಕೇಳೋಂನಮಃಶ್ಶಿವಾಯೆಂಬ ಪದಂ

ಮೋಸದ ಮಾತುಗಳಿಂದ ಮರುಳುಗೊಳಿಸಿ, ಜಪಮಾಡುವೆನೆಂದು ನಟಿಸುತ್ತಾ ತುಟಿಗಳನ್ನು ಅಲುಗಿಸಿದರೆ ಬಂದ ಭಾಗ್ಯವೇನು? ಹುಟ್ಟು ಸಾವುಗಳೆಂಬ ಸಾಗರದ ದಡಕ್ಕೆ ನಮ್ಮನ್ನು ಒಯ್ಯಬಲ್ಲ ತೆಪ್ಪದಂತಿದೆ 'ಓಂ ನಮಃಶ್ಶಿವಾಯ' ಎಂಬ ಪದ.

ಕವಿಕಾವ್ಯವಸ್ತುವಾಗಬಲ್ಲ ಸಾಮಗ್ರಿ ಇಲ್ಲಿ ಬಹು ಸ್ವಲ್ಪ; ಆದರೆ ಪ್ರತಿಭಾವಂತನಾದ ಈ ಕವಿ ನೀರಸವಾದ ವೇದಾಂತವಿಚಾರವೂ ರಸಸ್ಯಂದಿಯಾಗುವಂತೆ ಮಾಡಿದ್ದಾನೆ. ಕಂದಪದ್ಯಗಳ ರಚನೆಯಲ್ಲಿಯೂ ಆತನು ಸಿದ್ಧಹಸ್ತನೇ ಸರಿ. ಆದರೆ ಸ್ವತಂತ್ರಯುಗವೆಂದು ಯಾವ ಅರ್ಥದಲ್ಲಿ ನಾವು ಈ ಗ್ರಂಥಭಾಗವನ್ನು ಹೆಸರಿಸಿರುವೆವೊ ಆ ವಸ್ತು ಮತ್ತು ರೀತಿಗಳ ನವೀನತೆಯನ್ನೇನೂ ನಾವು ಈತನಲ್ಲಿ ಕಾಣಲಾರೆವು. ವಚನಶಾಸ್ತ್ರದ ಪ್ರಚೋದನೆಯಿಂದ ಮೂಡಿದ ನೂತನ ದೃಷ್ಟಿಯೇನೂ ಇಲ್ಲಿಲ್ಲ. ಹಿಂದಿನ ಸಂಪ್ರದಾಯವನ್ನೇ ಈತನೂ ಮುಂದುವರಿಸಿದ್ದಾನೆ. ಭಾವ, ಭಾಷೆ, ರೀತಿಗಳಲ್ಲಿ, ಕನ್ನಡ ಸಾಹಿತ್ಯಜಗತ್ತಿನ ಚಿರನೂತನತೆಯನ್ನು, ಅದ್ಭುತಕ್ರಾಂತಿಯನ್ನು ಕಾಣಬೇಕಾದರೆ ಮಹಾಕವಿ ಹರಿಹರದೇವನಲ್ಲಿಗೆ ಹೋಗಬೇಕು.

## ಹರಿಹರದೇವ

ಯಾವ ಶ್ರೇಷ್ಠಕವಿಯ ಹೆಸರಿನಿಂದ ಈ ಸ್ವತಂತ್ರಯುಗದ ಉಲ್ಲೇಖವಾಗಿದೆಯೋ, ಆ ಮಹಾಕವಿ ಹರಿಹರ ಹುಟ್ಟಿದುದು ಕನ್ನಡನಾಡಿನ ಪವಿತ್ರಕ್ಷೇತ್ರವಾದ ಹಂಪೆಯಲ್ಲಿ. ಇದರ ಒಂದು ಪಕ್ಕದಲ್ಲಿ ಜಗತ್ತಿನ ಏಳುಬೀಳುಗಳನ್ನು ಸಮಚಿತ್ತದಿಂದ ನೋಡುತ್ತಾ, ಧ್ಯಾನಸ್ಥಿಮಿತಮೂರ್ತಿಯಂತೆ ಕುಳಿತಿರುವ ಋಷ್ಯಮೂಕ ಪರ್ವತ; ಮತ್ತೊಂದು ಪಕ್ಕದಲ್ಲಿ

ಲೋಕಕಲ್ಯಾಣವನ್ನು ಹಾಡಿ ಹರಸುತ್ತಾ ಹರಿಯುತ್ತಿರುವ ದಕ್ಷಿಣದ ಗಂಗೆ ತುಂಗಭದ್ರೆ; ಈ ಇರ್ವರನ್ನೂ ಸೇವಿಸಲು ಸಿದ್ಧವಾಗಿ ನಿಂತಿರುವ ಭಕ್ತ ಸಮೂಹದಂತೆ ಸುತ್ತ ಎತ್ತೆತ್ತಲೂ ಹಬ್ಬಿ ನಿಂತಿರುವ ಕಾಡು. ಈ ಪ್ರಶಾಂತ ಪ್ರಕೃತಿದೇವಿಯ ಮಡಿಲಲ್ಲಿ ಕುಳಿತು, ಪುರಾಣ ಇತಿಹಾಸಗಳಿಗೆ ವಸ್ತುವನ್ನು ನೀಡುವ ಲೀಲೆಯಲ್ಲಿ ತೊಡಗಿದೆ, ಹಂಪೆ. ದೇವಾಧಿದೇವನಾದ ವಿರೂಪಾಕ್ಷನು ಈ ಲೀಲಾನಾಟಕರಂಗದ ಅಧಿದೇವತೆಯಾಗಿ ಕುಳಿತು, ಅದರ ಲೀಲೆಯಲ್ಲಿ ತಾನೂ ಪಾಲುಗಾರನಾಗಿದ್ದಾನೆ. ಆತನ ಭಕ್ತರಾದ ಮಹದೇವಭಟ್ಟ-ಶರ್ವಾಣಿಯರೆಂಬ ಸಾತ್ವಿಕ ದಂಪತಿಗಳ ಪುಣ್ಯಗರ್ಭದಲ್ಲಿ ಹಿರಿಯಮಗನಾಗಿ ಹುಟ್ಟಿದವನು ಹರಿಹರ. ಆತನ ತಂಗಿ ರುದ್ರಾಣಿ. ಅಣ್ಣತಂಗಿಯರು ತಾಯ್ತಂದೆಗಳ ಕಣ್ಮಣಿಗಳಾಗಿ ಬೆಳೆದು ದೊಡ್ಡವರಾದರು. ರುದ್ರಾಣಿ ಹಂಪೆಯಲ್ಲಿದ್ದ ಸಜ್ಜನ ಶಿವಭಕ್ತನೊಬ್ಬನನ್ನು ಕೈಹಿಡಿದು ಸದ್ಗೃಹಿಣಿ ಯೆನಿಸಿಕೊಂಡಳು. ಆಕೆಯ ಪುಣ್ಯಗರ್ಭದಲ್ಲಿ ಜನಿಸಿದವನೇ ರಾಘವಾಂಕ ಕವಿ. ಹರಿಹರನು ಮಾಯಿದೇವ ಎಂಬ ಗುರುಗಳಲ್ಲಿ ವಿದ್ಯಾಭ್ಯಾಸಮಾಡಿ, ಬಹುಶಃ ಗಣಿತದಲ್ಲಿ ಪಾರಂಗತನಾಗಿ, ದ್ವಾರಸಮುದ್ರದ ಹೊಯ್ಸಳರಾಜ ನರಸಿಂಹ ಬಲ್ಲಾಳನಲ್ಲಿ ಕರಣಿಕನಾದನು. ಸ್ವಭಾವತಃ ಭಗವದ್ಭಕ್ತನಾದ ಹರಿಹರನ ವಯಸ್ಸಿನೊಡನೆ ಆತನ ಭಕ್ತಿಯೂ ಬೆಳೆಯಿತು. ಕರಣಿಕನಾದ ಆತನು ಕಾರಣಪುರುಷನಾಗುವ ಸನ್ನಿವೇಶ ಒದಗಿಬಂದಿತು. ಒಮ್ಮೆ ಆತನು ಒಡ್ಡೋಲಗದಲ್ಲಿ ಕುಳಿತಿರುವಾಗ ಇದ್ದಕ್ಕಿದ್ದಂತೆಯೇ ಆತನು ತನ್ನ ಲೆಕ್ಕಣಿಕೆಯನ್ನು ಕೆಳಗಿಟ್ಟು ಅಂಗೈಗಳನ್ನು ಉಜ್ಜಿಕೊಳ್ಳಲು ಆರಂಭಿಸಿದನು. ಇದನ್ನು ಕಂಡು ಕುತೂಹಲಗೊಂಡ ರಾಜನು ಅದಕ್ಕೆ ಕಾರಣವನ್ನು ಕೇಳಿ ದಾಗ ಹಂಪೆಯ ವಿರೂಪಾಕ್ಷನ ಗುಡಿಯಲ್ಲಿ ಮೇಲುಕಟ್ಟಿನ ಬಟ್ಟೆಗೆ ಹತ್ತಿದ್ದ ಉರಿಯನ್ನು ತಾನು ಆರಿಸಿದುದಾಗಿ ಆತನು ಉತ್ತರಕೊಟ್ಟ. ಸಂದೇಹ ಗೊಂಡ ರಾಜನು ಇದರ ಸತ್ಯತೆಯನ್ನು ಪರೀಕ್ಷಿಸಲೆಂದು ಹಂಪೆಗೆ ದೂತರನ್ನು ಅಟ್ಟಿದ. ಅವರು ಅಲ್ಲಿಗೆ ಹೋಗಿಬಂದು ಹರಿಹರನ ಮಾತು ಸತ್ಯವೆಂದು ಹೇಳಿದರು. ರಾಜ ಆಶ್ಚರ್ಯಗೊಂಡ. ಆದರೆ ಹರಿಹರನಿಗೆ ರಾಜನ ಊಳಿಗ ಅಸಹ್ಯವಾಯಿತು. ಆತನು ಸೇವಾವೃತ್ತಿಯನ್ನು ಕಿತ್ತೊಗೆದು, ಹಂಪೆಗೆ ಹಿಂದಿರುಗಿ, ವಿರೂಪಾಕ್ಷನ ಪೂಜೆಯಲ್ಲಿಯೂ ಆತನ ಕೃಪೆಯಿಂದ ಬುಗ್ಗೆ

ಯಾಗಿ ಎದ್ದ ಸತ್ಕಾವ್ಯಗಳ ರಚನೆಯಲ್ಲಿಯೂ ತನ್ನ ಆಯುಸ್ಸನ್ನು ಸವೆಸಿ ಶಿವೈಕ್ಯನಾದನು.

ವೀರಶೈವ ಪುರಾಣಗಳಲ್ಲಿ ಉಕ್ತವಾಗಿರುವ ಆತನ ಈ ಜೀವನಚರಿತ್ರೆಯಲ್ಲಿ ಮೇಲೆ ಹೇಳಿದ ಪವಾಡ ಸತ್ಯವಾದುದಾಗಿರಲಿ. ಆಗದಿರಲಿ : ಆತನು ಕೆಲಕಾಲ ರಾಜಾಸ್ಥಾನದಲ್ಲಿದ್ದು, ಊಳಿಗದಲ್ಲಿ ಬೇಹಾಸೆಗೊಂಡು ಹಂಪೆಗೆ ಹಿಂದಿರುಗಿದುದು ಸತ್ಯವೆಂಬುದರಲ್ಲಿ ಸಂಶಯವಿಲ್ಲ. ಆತನ ಗ್ರಂಥಗಳಲ್ಲಿ ಆತನ ಆತ್ಮಕಥೆಯ ಸ್ಥೂಲರೇಖೆಗಳನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದು. ಸ್ಪಷ್ಟ ಇತಿಹಾಸದ ಅಭಾವದಲ್ಲಿ, ಕಾರ್ಯಕಾರಣಸಂಬದ್ಧವಾದ ಊಹೆಯ ಬೆನ್ನೇರಿಹೋಗುವುದೇ ಉಪಾಯ. ಆತನ ಶತಕಗಳಲ್ಲಿ ಒಂದಾದ ಪಂಪಾಶತಕದಲ್ಲಿ—

ಪೋಗೆನೆ ಪೋಪ, ಬಾರೆಲವೊ ಬಾರೆನೆ ಜೀಯ ಹಸಾದವೆಂದು ಬೆ
ಳ್ಪಾಗುತೆ ಬರ್ಪ, ಮಾಣೆಲವೊ ಸುಮ್ಮನಿರೆಂದಡೆ ಸುಮ್ಮನಿರ್ಪ, ಮ
ತ್ತಾಗಳೆ ಝಂಕಿಸುತ ನಡುಗಿ ಬೀಳುವ ಸೇವೆಯ ಕಷ್ಟವೃತ್ತಿಯಂ
ನೀಗಿದೆನಿಂದು ನಿಮ್ಮ ದೆಸೆಯಿಂ ಕರುಣಾಕರ ಹಂಪೆಯಾಳ್ದನೆ!

ಹೇ ಪಂಪಾಪತಿ ವಿರೂಪಾಕ್ಷ! 'ಹೋಗೊ' ಎಂದೊಡನೆ ಬಾಯಿಮುಚ್ಚಿಕೊಂಡು ಹೋಗಬೇಕು; 'ಬಾರೊ ಇಲ್ಲಿ' ಎಂದೊಡನೆ 'ಮಹಾಸ್ವಾಮಿ, ಏನಪ್ಪಣೆ' ಎಂದು ನಡುಗುತ್ತ ಹೋಗಬೇಕು. 'ಮುಚ್ಚೊ ಬಾಯಿ' ಎಂದರೆ ಬಾಯಿಮುಚ್ಚಿ ಮೌನವಾಗಿರಬೇಕು, ಯಾವಾಗಲು ಗದಗುಟ್ಟಿ ನಡುಗುತ್ತ ಬಿದ್ದಿರಬೇಕು. ಇಂತಹ ಕೀಳು ಸೇವಾವೃತ್ತಿ ನಿಮ್ಮ ಕೃಪೆಯಿಂದ ಇಂದು ನೀಗಿತು ಎಂದು ಹೇಳಿರುವುದು ಆತನ ಆತ್ಮಕಥನದ ಒಂದು ದಿಗ್ದರ್ಶನವೆಂದೇ ತೋರುತ್ತದೆ. ಅದೇ ಶತಕದ ಮತ್ತೊಂದು ಪದ್ಯದಲ್ಲಿ ತನ್ನ ಜೀವನದ ಆದರ್ಶವನ್ನು ಎತ್ತಿ ಹಿಡಿಯುತ್ತಾ

ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ ಅಕ್ಕಟಾ
ತನತನಗಿಂದ್ರ, ಚಂದ್ರ, ರವಿ, ಕರ್ಣ, ದಧೀಚಿ, ಬಲೀಂದ್ರರೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ, ನೀನಹರ್ನಿಶಂ
ನೆನೆ, ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ

ಅಯ್ಯಾ ಮಾನವ, ಎಂದೊ ಒಂದುದಿನ ಎಲ್ಲರಂತೆ ತಾನೂ ಸಾಯುವ

ಕೇಳಿ: ಮನುಷ್ಯಮಾತ್ರನನ್ನು ಯಾವುದೋ ದುರಾಶೆಯಿಂದ ಇಂದ್ರ, ಚಂದ್ರ, ಸೂರ್ಯ, ಕರ್ಣ, ದಧೀಚಿ ಮೊದಲಾದ ಮಹಾನುಭಾವರೆಂದು ಕರೆದು ಹೊಗಳುತ್ತಾ ಹಾಳಾಗಬೇಡ. ಅದಕ್ಕೆ ಬದಲು ಮಹಾಮಹಿಮನಾದ ಹಂಪೆಯ ವಿರೂಪಾಕ್ಷನನ್ನು ಹಗಲಿರುಳೂ ಧ್ಯಾನಮಾಡುತ್ತಾ, ಕೀರ್ತಿಸುತ್ತಾ ಪೂಜೆಮಾಡು.—ಎಂದು ಹೇಳುತ್ತಾನೆ. ಇದನ್ನು ನೋಡಿದರೆ ರಾಜನ ಊಳಿಗದಲ್ಲಿ ಆತನಿಗಿದ್ದ ಜಿಹಾಸೆ ಮತ್ತಷ್ಟು ದೃಢಪಡುತ್ತದೆ. ಹರಿಹರನು ಹಾಕಿಕೊಟ್ಟ ಈ ಸ್ವತಂತ್ರಮನೋವೃತ್ತಿಯ ಹೆದ್ದಾರಿಯನ್ನು ಸ್ವತಂತ್ರ ಯುಗದ ಬಹುಮಂದಿ ಕವಿಗಳು (ಅಲ್ಲಿಂದ ಮುಂದಿನವರೂ ಕೂಡ) ಅನುಸರಿಸಿ, ಅದೊಂದು ಸಂಪ್ರದಾಯವನ್ನೇ ಕನ್ನಡದಲ್ಲಿ ಬೆಳೆಸಿದ್ದಾರೆ.

ಸೇವಾವೃತ್ತಿಯಲ್ಲಿನ ಜಿಹಾಸೆಯೂ ಭಗವಂತನ ಮೇಲಿನ ಭಕ್ತಿಯೂ ಹರಿಹರಕವಿಯ ಹೃದಯವನ್ನು ತುಂಬಿ ಹೊರಹರಿದು ಬಂದಿವೆ, ಪಂಪಾಶತಕದಲ್ಲಿ. ಕವಿಯು ದ್ವಾರಸಮುದ್ರವನ್ನು ಬಿಟ್ಟು ಹಂಪೆಗೆ ಮರಳಿದ ದಿನ ಅಲ್ಲಿನ ಸೋಮನಾಥ ದೇವಾಲಯದಲ್ಲಿ ತಂಗಿದ್ದನೆಂದೂ ಆ ರಾತ್ರಿ ಪರಶಿವನು ಹಂಪೆಯ ರಾಜನ ಕನಸಿನಲ್ಲಿ ಕಾಣಿಸಿಕೊಂಡು ಹರಿಹರಕವಿಯನ್ನು ಸತ್ಕರಿಸುವಂತೆ ಅಪ್ಪಣೆಮಾಡಿದನೆಂದೂ ಮರುದಿನ ಬೆಳಗ್ಗೆ ರಾಜನು ಆತನನ್ನು ಕರೆತರುವಂತೆ ಪಲ್ಲಕ್ಕಿಯನ್ನು ಕಳಿಸಲು, ಅದರಲ್ಲಿ ಕುಳಿತು ಬರುತ್ತಾ ಕವಿಯು ಪಂಪಾಶತಕವನ್ನು ಹಾಡಿದನೆಂದೂ ಪುರಾಣಗಳ ಹೇಳಿಕೆ. ಇದು ನಿಜವಾದರೆ ಹರಿಹರನ ಕಾವ್ಯಕರ್ಮ ಪಂಪಾಶತಕದಿಂದ ಪ್ರಾರಂಭವಾಯಿತೆಂದು ಹೇಳಬೇಕಾಗುತ್ತದೆ. ವೀರಶೈವ ಕವಿಗಳ ಶತಕಸಾಹಿತ್ಯಸೃಷ್ಟಿಗೆ ಪಂಪಾಶತಕವೇ ನಾಂದಿ. ಹರಿಹರನು ರಕ್ಷಾಶತಕವೆಂಬ ಮತ್ತೊಂದು ಶತಕಗ್ರಂಥವನ್ನೂ ಬರೆದಿದ್ದಾನೆ. ಇದರಲ್ಲಿ ಹರಿಹರನ ಭಕ್ತಿ ಹೆಚ್ಚು ನಿಶ್ಚಲವಾಗಿ ಪರಿಪಕ್ವವಾಗಿರುವುದನ್ನು ನಾವು ಕಾಣುತ್ತೇವೆ.

ಬಿಡೆನೀಶಾ ನಿಮ್ಮ ಪದಾಬ್ಜವನೆಲೆಲೆ ಬಿಡೆಂ ಸೀಳ್ದೊಡಂ ಪೋಳ್ದೊಡಂ ಪೊ
ಯ್ದೊಡದಂತಿಂತೆಂದುಮೊಂದುಂ ಬಿಡೆನಭವ ಬಿಡೆಂ ಸರ್ವಥಾ ಮಾಣೆನಾಂ ಬ
ಲ್ಪಿಡಿದೆಂ ಮತ್ತತ್ತಮಿತ್ತಂ ಚಲಿಸೆನೆಲೆ ಮಮ ಸ್ವಾಮಿ ನಿಮ್ಮಾಜ್ಞೆಯಿಂದಂ
ಮೃಡನೇ ಭಕ್ತ್ಯರ್ಥಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ

ಪರಮೇಶ್ವರಾ, ನಾನು ನಿನ್ನ ಪಾದಪದ್ಮಗಳನ್ನು ಬಿಡುವುದಿಲ್ಲ. ನನ್ನನ್ನು

ಸೀಳಲಿ, ಎರಡು ಹೋಳುಮಾಡಲಿ, ಕ್ರೂರವಾಗಿ ಹಿಂಸಿಸಿ ಶಿಕ್ಷಿಸಲಿ, ಏನೇ ಮಾಡಲಿ, ನಿನ್ನ ಪಾದಗಳನ್ನು ಭದ್ರವಾಗಿ ಹಿಡಿಯುತ್ತೇನೆ, ಬಿಡುವುದಿಲ್ಲ. ಇದೇ ನಿನ್ನ ಅಪ್ಪಣೆಯೆಂಬಂತೆ ತಿಳಿದು ನಿಶ್ಚಲನಾಗಿರುತ್ತೇನೆ. ಭಕ್ತರ ಭಕ್ತಿಯನ್ನು ಮೆಚ್ಚುವ ಹೇ ಸ್ವಾಮಿ, ವಿರೂಪಾಕ್ಷ, ನನ್ನನ್ನು ಕಾಪಾಡು. ಎಂದು ಕವಿ ಬೇಡುವಲ್ಲಿ ಆತನ ಭಕ್ತಿ ಮಾತ್ರವಲ್ಲ, ಆತನ ಕವಿತಾಶಕ್ತಿಯೂ ತನ್ನ ನೆಲೆಯನ್ನು ಕಂಡುಕೊಂಡಿದೆ. ಅರಳು ಹುರಿದಂತೆ ಚಟಪಟನೇಳುವ ಆ ಮಾತುಗಳ ರಭಸ, ಶಬ್ದಗಳ ಪುನರಾವರ್ತನೆ, ಒಂದೇ ಭಾವವನ್ನು ವಿಧವಿಧವಾಗಿ ಹೇಳಿ ಓದುಗನ ಮನಸ್ಸಿನಲ್ಲಿ ಆ ಭಾವವನ್ನು ಖಚಿತಗೊಳಿಸುವ ಆ ಉತ್ಸಾಹ—ಈ ಕಾವ್ಯಗುಣಗಳೂ ಇಲ್ಲಿ ಅರಳಲು ಆರಂಭಿಸಿವೆ.

ಹರಿಹರನ ಶತಕಗಳು ಆತನ ಭಕ್ತಿಯನ್ನು ಚಿತ್ರಿಸುವ, ಭೋಗ ವಿರತಿ ವೈರಾಗ್ಯಗಳನ್ನು ವಿವರಿಸಿ ಹೇಳುವ ಆತ್ಮಚರಿತ್ರೆಗಳು. ಅಷ್ಟೇ ಅಲ್ಲ, ಅವು ಉತ್ತಮ ಸಾಹಿತ್ಯಕೃತಿಗಳು. ಧರ್ಮಪ್ರತಿಪಾದನೆಗೆ ತೊಡಗಿದ್ದರೂ ಅವು ನೀರಸವಾಗಿಲ್ಲ. ಭಾವಗೀತೆಗಳಂತೆ ಭಾವಪುಷ್ಟಿಯನ್ನು ಪಡೆದು ಹೃದಯಂಗಮವಾಗಿವೆ. ಪಂಪಾಶತಕದಲ್ಲಿ ಹರಿಹರನ ಭಕ್ತಿ ಸಾಧಕನ ಉದ್ರೇಕದಿಂದ ಕೂಡಿದ್ದರೆ ರಕ್ಷಾಶತಕದಲ್ಲಿ ಅದು ಸಿದ್ಧಪುರುಷನ ಪ್ರಶಾಂತತೆಯನ್ನು ಪಡೆದಿದೆ. ಇವೆರಡು ಶತಕಗಳೂ ಕನ್ನಡ ಶತಕಸಾಹಿತ್ಯದ ಚೂಡಾಮಣಿಗಳಂತಿವೆ.

ಹರಿಹರ ಕವಿ ಮೇಲಿನ ಶತಕಗಳಲ್ಲದೆ ಮುಡಿಗೆಯ ಅಷ್ಟಕ, ಗಿರಿಜಾ ಕಲ್ಯಾಣ, ಶಿವಶರಣರ ರಗಳೆಗಳು—ಇನ್ನೂ ಬರೆದಿದ್ದಾನೆ. ಮುಡುಗೆಯ ಅಷ್ಟಕವೆಂಬುದು ಹರಿಹರನ ಪವಾಡವೊಂದನ್ನು ನಿರೂಪಿಸುವ ಎಂಟು ವೃತ್ತಗಳ ಪುಟ್ಟಗ್ರಂಥ. ಒಂದು ದಿನ ಕವಿ ವಿರೂಪಾಕ್ಷ ದೇವಾಲಯವನ್ನು ಪ್ರದಕ್ಷಿಣೆ ಮಾಡಿ, ನಂದಿಗೆ ನಮಸ್ಕರಿಸುತ್ತಿರುವಾಗ ಆತನ ಟೋಪಿ ಕೆಳಕ್ಕೆ ಬಿತ್ತಂತೆ. ಹತ್ತಿರದಲ್ಲಿದ್ದ ಪಟಿಂಗನೊಬ್ಬ ಅದನ್ನು ಕಂಡು ಕವಿಯನ್ನು ಹಂಗಿಸಿದನಂತೆ. ಅದನ್ನು ಕೇಳಿ ಹರಿಹರನು ' ಶಿವನೇ ಪರದೈವವೆಂದು ಸವಾಲು ಹಾಕುತ್ತೇನೆ. ಈ ಸವಾಲನ್ನು ಸ್ವೀಕರಿಸುವವನು ಟೋಪಿಯನ್ನು ಮೇಲಕ್ಕೆ ಎತ್ತಲಿ 'ಎಂದು ಪಂಥಕಟ್ಟಿದನಂತೆ. ಆಗ ಸೃಷ್ಟಿಸಿದ ಅಷ್ಟಕವಿದು. ಈ ಆಶುಕವಿತ್ವದಲ್ಲಿ ಕಾವ್ಯದೃಷ್ಟಿಯಿಂದ ಗಮನಾರ್ಹವಾದುದೇನೂ ಇಲ್ಲ.

ಈ ಎಂಟು ಪದ್ಯಗಳಲ್ಲಿಯೂ ಕ್ಷಕಾರಪ್ರಾಸವನ್ನು ನಿರ್ವಹಿಸಿರುವುದು ಆಶ್ಚರ್ಯಕರವಾಗಿದೆ.

ಹರಿಹರಕವಿಯು ಸ್ವತಂತ್ರಯುಗದ ಕವಿಗಳಲ್ಲಿ ಅಗ್ರಗಣ್ಯ. ಯುಗಪುರುಷನಾದ ಆತನ ಮಹೋನ್ನತಿ ಸಂಪೂರ್ಣ ಅರಳಿರುವುದು ಆತನ ಶಿವಶರಣರ ರಗಳೆಗಳಲ್ಲಿ. ಆದರೆ ಆತನ ಗಿರಿಜಾಕಲ್ಯಾಣವು ಕಳಪೆಯೇನೂ ಅಲ್ಲ. ಈ ಕೃತಿನಿರ್ಮಾಣಕ್ಕೆ ಸಂಬಂಧಿಸಿದ ದಂತಕಥೆಯೊಂದು ಪ್ರಚಲಿತವಾಗಿರುವುದು ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳಿಗೆಲ್ಲರಿಗೂ ಪರಿಚಿತವಾದುದು. ಹರಿಹರದೇವನು ಶಿವಶರಣರ ಕಥೆಗಳನ್ನು ಅಚ್ಚಕನ್ನಡದ ರಗಳೆಯ ಛಂದಸ್ಸಿನಲ್ಲಿ ಬರೆದ. ಇವುಗಳನ್ನು ಆಮೂಲಾಗ್ರವಾಗಿ ಓದಿ ಆನಂದಾನುಭವಮಾಡದ ಅರಸಿಕರಾರೋ ಆತನನ್ನು 'ರಗಳೆಯ ಕವಿ' ಎಂದು ಹಾಸ್ಯಮಾಡಿದರಂತೆ. ಇದರಿಂದ ಕೆರಳಿದ ಕವಿ, ತಾನೂ ಚಂಪೂಗ್ರಂಥವನ್ನೂ ಪ್ರೌಢಶೈಲಿಯಲ್ಲಿ ಬರೆಯಬಲ್ಲೆನೆಂದು ತೋರಿಸುವುದಕ್ಕಾಗಿ 'ಗಿರಿಜಾಕಲ್ಯಾಣ' ವನ್ನು ಬರೆದ. ಈ ಕಥೆ ಎಷ್ಟು ಪೊಳ್ಳೆಂಬುದನ್ನು ಹರಿಹರಕವಿಯ ಕೃತಿಗಳನ್ನೆಲ್ಲಾ ಆಮೂಲಾಗ್ರವಾಗಿ ಓದಿದವರು ಅರ್ಥಮಾಡಿಕೊಳ್ಳಬಲ್ಲರು. ಆತನ ಕವಿತಾಶಕ್ತಿ ತನ್ನ ಆದರ್ಶದ ತುತ್ತ ತುದಿಯನ್ನು ಮುಟ್ಟಿರುವುದು ಆತನ ರಗಳೆಗಳಲ್ಲಿಯೇ.

ಗಿರಿಜಾಕಲ್ಯಾಣದ ಕಥಾವಸ್ತು ಮತ್ತು ನಿರೂಪಣಾ ವಿಧಾನ—ಎರಡೂ ಹಳೆಯವೇ. ದಕ್ಷನ ಯಜ್ಞಸಮಯದಲ್ಲಿ ಅಪಮಾನಿತಳಾದ ಪರಮೇಶ್ವರಿ ಯಜ್ಞಕುಂಡದಲ್ಲಿ ಧುಮುಕಿ ಪ್ರಾಣತ್ಯಾಗಮಾಡಿದಳು. ಇದನ್ನು ಕೇಳಿ ನೊಂದ ಪರಶಿವನು ತಪೋಮಗ್ನನಾದನು. ಪರಮೇಶ್ವರಿ ಗಿರಿರಾಜನ ಮಗಳಾದ ಗಿರಿಜೆಯಾಗಿ ಹುಟ್ಟಿ ಬೆಳೆಯುತ್ತಿದ್ದಳು. ಈ ಸಮಯದಲ್ಲಿ ತಾರಕನೆಂಬ ರಕ್ಕಸನು ಹುಟ್ಟಿಕೊಂಡು ಮೂರು ಲೋಕಕ್ಕೂ ಮಾರಿಯಂತಾಗಿದ್ದನು. ಅಗಲಿದ ಶಿವಶಿವೆಯರು ಮತ್ತೆ ಒಂದುಗೂಡಿ ಅವರಿಂದ ಕುಮಾರಸಂಭವವಾಗುವವರೆಗೆ ಆ ರಕ್ಕಸನಿಗೆ ಮರಣವಿಲ್ಲ. ದುಃಖಾರ್ತರಾದ ದೇವತೆಗಳು ಮುಂಗಾಣದೆ ಶಿವನ ತಪೋಭಂಗಕ್ಕಾಗಿ ಮನ್ಮಥನನ್ನು ನೇಮಿಸಿದರು. ಆ ವೇಳೆಗೆ ಗಿರಿಜೆಯೂ ಪರಶಿವನ ಬಳಿಯಲ್ಲಿ ಪೂಜಾಸಕ್ತಳಾಗಿದ್ದಳು. ಆಕೆಯ ಸಹಾಯದಿಂದ ತನ್ನ ಕಾರ್ಯರಂಗಕ್ಕಿಳಿದ

ಮನ್ಮಥನು ಕೃತಕಾರ್ಯನಾಗುವುದಕ್ಕೆ ಬದಲಾಗಿ ಹರನ ನೇತ್ರಾಗ್ನಿಗೆ ಸಿಕ್ಕಿ ದಗ್ಧನಾದನು. ದಿವ್ಯಾಲಂಕಾರಭೂಷಿತೆಯಾಗಿದ್ದ ಗಿರಿಜೆಯನ್ನು ಶಿವನು ಕಣ್ಣೆತ್ತಿಯೂ ನೋಡಲಿಲ್ಲ. ತನ್ನ ಬಾಹ್ಯಸೌಂದರ್ಯಕ್ಕೆ ಆದ ಪರಾಭವವನ್ನು ಕಂಡ ಗಿರಿಜೆ ವೈರಾಗ್ಯಪರಳಾಗಿ ಕಠೋರ ತಪಸ್ಸನ್ನು ಕೈಕೊಂಡಳು. ಬಾಹ್ಯ ಸೌಂದರ್ಯದಿಂದ ಸಾಧಿಸಲಾರದುದನ್ನು ಆಕೆಯ ಅಂತರಂಗಶುದ್ಧಿ ಸಾಧಿಸಿತು. ಶಿವನು ಆಕೆಯ ತಪಸ್ಸಿಗೆ ಮೆಚ್ಚಿ, ಪ್ರತ್ಯಕ್ಷನಾಗಿ, ಆಕೆಯನ್ನು ಅರ್ಧಾಂಗಿ ಯಾಗಿ ಸ್ವೀಕರಿಸಿದನು. ಶಿವ-ಶಿವೆಯರ ಸಮಾಗಮದಿಂದ ಕುಮಾರಸ್ವಾಮಿ ಉದಿಸಿ, ತಾರಕನನ್ನು ಕೊಂದು ಲೋಕಶಾಂತಿಯನ್ನು ಸಂಸ್ಥಾಪಿಸಿದನು. ಇದು ಶೈವಪುರಾಣದ ಕಥೆ. ಈ ಕಥೆಯನ್ನು ಮಹಾಕವಿ ಕಾಳಿದಾಸನು ತನ್ನ 'ಕುಮಾರ ಸಂಭವ' ಕಾವ್ಯದಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಹರಿಹರಕವಿಯ 'ಗಿರಿಜಾಕಲ್ಯಾಣ' ವು ಇದೇ ಪರಂಪರೆಯ ಮತ್ತೊಂದು ಸಂತಾನ. ಈ ಕಾವ್ಯನಿರೂಪಣೆಗಾಗಿ ಆತನು ಬಳಸಿರುವ ಚಂಪು ರೀತಿಯು ಹಳೆಯ ಸಂಪ್ರದಾಯದ ಅನುಸರಣೆಯೇ. ಮಹಾಕಾವ್ಯದಲ್ಲಿ ಹದಿನೆಂಟು ವರ್ಣನೆಗಳಿರಬೇಕೆಂಬ ನಿಯಮಕ್ಕೊ ಕಟ್ಟುಬಿದ್ದು, ಕಾವ್ಯಮಧ್ಯದಲ್ಲಿ ಒಂದು ವೇಶ್ಯಾವಾಟಿಯನ್ನು ನಿರ್ಮಿಸಿ, ಪಾಪ! ಹಿಮವಂತನೊಡನೆ ನಾರದನೂ ಅಲ್ಲೆಲ್ಲಾ ಚಂದ್ರಿಕಾವಿಹಾರವನ್ನು ಮಾಡುವಂತೆ ನೇಮಿಸಿದ್ದಾನೆ. ವಸಂತ ವರ್ಣನೆ, ಸಮುದ್ರವರ್ಣನೆ, ಪುರವರ್ಣನೆ, ಬೇಟೆಯ ವರ್ಣನೆ—ಕಥೆಯ ಏಕಮುಖತೆಗೆ ಭಂಗಬಂದರೂ ಚಿಂತೆಯಿಲ್ಲ, ಮಹಾಕಾವ್ಯಪಟ್ಟ ತಪ್ಪದಿದ್ದ ರಾಯಿತು—ಮೊದಲಾದ ಸುದೀರ್ಘ ವರ್ಣನೆಗಳು ಆ ಸಂಪ್ರದಾಯವೆಂಬ ಎರಕದಿಂದಲೇ ಹೊರಬಂದವುಗಳು.

ಹರಿಹರಕವಿಯು ಸಂಪ್ರದಾಯಶರಣನಾಗಿಯೇ ಕಾವ್ಯಕರ್ಮಕ್ಕೆ ಕೈಹಾಕಿದ್ದರೂ ಆತನ ಚೇತನ ಅವ್ಯಕ್ತವಾಗಿಯೇ ನೂತನತೆಯನ್ನು ದರ್ಶಿ ಸುತ್ತಿತ್ತು. ತನ್ನ ಕಾವ್ಯಕನ್ನಿಕೆಗೆ ಆತನು ಮಾಡಿದ ನಾಮಕರಣವೇ ಇದಕ್ಕೆ ಸಾಕ್ಷಿ. ಇದು 'ತಾರಕಸಂಹಾರ' ವಲ್ಲ, 'ಕುಮಾರಸಂಭವ' ವಲ್ಲ; 'ಗಿರಿಜಾಕಲ್ಯಾಣ.' ಇಲ್ಲಿನ ಮುಖ್ಯ ವ್ಯಕ್ತಿ, ಕಥಾನಾಯಿಕೆ ಗಿರಿಜೆ. ಆಕೆಯ ಜನನ, ಬಾಲ್ಯಲೀಲೆ, ಆಕಾಂಕ್ಷೆ, ಆಶಾಭಂಗ, ಉಗ್ರತಪಸ್ಸು, ಸಿದ್ಧಿ, ಕಲ್ಯಾಣ—ಹೀಗೆ ಇದು ಗಿರಿಜೆಯ ಬಾಳಕಥೆ. ಉಳಿದ ಪಾತ್ರಗಳೆಲ್ಲವೂ—

ಶಿವನ ಪಾತ್ರವೂ ಕೂಡ—ಆಕೆಯ ಪಾತ್ರಪೋಷಣೆಗೆ ಸಹಾಯಕವಾಗಿವೆ. ಸಂಪ್ರದಾಯದ ಕಥೆಯಲ್ಲಿ ಕುಮಾರಸಂಭವ ಅಥವಾ ತಾರಕಸಂಹಾರವೇ ಕಥೆಯ ಶಿಖರವಾಗಿದ್ದರೆ, ಇಲ್ಲಿ ಗಿರಿಜಾಕಲ್ಯಾಣವೇ ಕಥೆಯ ಗುರಿ, ಶಿಖರ. ಕಥೆಯ ವಿವರಗಳಲ್ಲಿಯೂ ಕವಿಯು ಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಅವುಗಳೆಲ್ಲವೂ ಉಚಿತವಾಗಿವೆಯೆಂದೇನೂ ಹೇಳುವಂತಿಲ್ಲ. ಶಿವನ ತಪೋಭಂಗಕ್ಕಾಗಿ ಮನ್ಮಥನನ್ನು ನೇಮಿಸುವ ಕಾರ್ಯವನ್ನು ನಾರಾಯಣನೇ ವಹಿಸಿಕೊಂಡಿರುವುದೂ, ಆ ತಂದೆ ಮಕ್ಕಳ ಸಂಭಾಷಣೆಯೂ ಅಸ್ವಾಭಾವಿಕ, ಅನುಚಿತ. ಇಂತಹ ಕೆಲವು ಬದಲಾವಣೆಗಳನ್ನು ಬಿಟ್ಟರೆ ಹರಿಹರಕವಿಯ ಬದಲಾವಣೆಗಳು ಆತನ ಔಚಿತ್ಯಜ್ಞಾನಕ್ಕೂ ಶ್ರೀಮಂತ ಪ್ರತಿಭೆಗೂ ಸಾಕ್ಷಿಯಾಗಿವೆ.

ಹರಿಹರಕವಿಯ ಸನ್ನಿವೇಶರಚನಾ ಕೌಶಲವು ಅದ್ಭುತವಾದುದು. ಮನ್ಮಥದಹನದ ಸನ್ನಿವೇಶವು ಇದಕ್ಕೆ ಉತ್ತಮ ಉದಾಹರಣೆ. ಮನ್ಮಥನು ತನ್ನ ಪುಷ್ಪಬಾಣವನ್ನು ಶಿವನಿಗೆ ಗುರಿಯಿಟ್ಟು ನಿಂತಿದ್ದಾನೆ. ಆತನಿಗೆ ಸಹಾಯಕಳಾಗಿ ಪುಷ್ಪಾಲಂಕಾರಭೂಷಿತೆಯಾದ ದಿವ್ಯಸುಂದರಿ ಗಿರಿಜೆ ಸ್ಥಾಣುವಿನ ಮುಂದುಗಡೆ ನಿಂತಿದ್ದಾಳೆ. ಅಗೋ ಕಬ್ಬಿನ ಬಿಲ್ಲಿನಿಂದ ಹಾರಿ ಬಂದ ಪುಷ್ಪಬಾಣ ಶಿವನನ್ನು ಬಡಿಯಿತು. ಒಡನೆಯೇ ಆತನ ಸಮಾಧಿ ಸಡಲಿತು. ಆತನು ಕೋಪದಿಂದ ನಸು ಕಣ್ತೆರೆದನು. ಮನ್ಮಥನ ಪುಷ್ಪ ಬಾಣಕ್ಕಿಂಲೂ ಮೋಹಕಳಾಗಿದ್ದ ಗಿರಿಜೆಯನ್ನು ಆತ ಗಮನಿಸಲಿಲ್ಲ. ಬಾಣ ಬಂದ ಕಡೆ ದೃಷ್ಟಿಯನ್ನು ತಿರುಗಿಸಿದ. ಒಡನೆಯೆ

ಇಟ್ಟಣಿಸಿ ಘುಡುಘುಡಿಸಿ ಕಿಡಿ
ಗುಟ್ಟಿ ಕನಲ್ದಡಸಿ ಸಿಡಿಲ ಬಳಗದ ಮುಳಿಸಂ
ತೊಟ್ಟುದು ಬಿಸುಗಣ್ಣುರಿ ಪೊರ
ಮಟ್ಟುದು ಸುಟ್ಟುದು ರತೀಶನಂ ನಿಮಿಷಾರ್ಧಂ

ಶಿವನ ಹಣೆಗಣ್ಣುರಿ ದಟ್ಟವಾಗಿ ಉಲ್ಬಣಿಸಿ, ಕಿಡಿಗಾರುತ್ತ ತೀವ್ರವಾದ ಸಿಡಿಲಿನ ಬಳಗದಂತಹ ಕಾವನ್ನು ಒಳಗೊಂಡು ನಿಮಿಷಾರ್ಧದಲ್ಲಿ ಮನ್ಮಥನನ್ನು ಸುಟ್ಟುಹಾಕಿತು. ಇಷ್ಟು ಹೇಳಿದುದರಿಂದ ತೃಪ್ತಿಯಾಗುವಂತಹುದಲ್ಲ, ಹರಿಹರನ ಉತ್ಸಾಹ. ಆ ಉರಿಗಣ್ಣಿನ ಜ್ವಾಲೆ ಹುಟ್ಟಿ, ಹೊತ್ತಿ,

ಧಗಧಗ ಉರಿವುದು ಓದುಗನ ಮನಸ್ಸಿನಲ್ಲಿ ನಟ್ಟು ನಿಲ್ಲಬೇಕು, ಕಣ್ಣಿಗೂ ಕಟ್ಟಿ ನಿಲ್ಲಬೇಕು.

ಪೊಗೆದುದು ಪೊತ್ತಿದತ್ತು ಕಿಡಿಯಿಟ್ಟುದು ನಾಲ್ದೆಸೆದೋರಿದತ್ತು ಬಾ
ನ್ಗೊಗೆದುದು ನಿಂದು ಪೊಂಬೇಗುವಂ ಪರಪುತ್ತ್ರದು ಧಂ ಧಗಿಲ್ ಧಗಿ
ಲ್ಧಗಿಲೆನೆ ತಟ್ಟಿದುದು, ಮುಟ್ಟಿತು, ಸುಟ್ಟಿತು, ತಿಂದು ತೇಗಿದ
ತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ

ಶಿವನ ಹಣೆಗಣ್ಣ ಉರಿ ಹೊಗೆಯನ್ನು ಕಾರಿತು. ಹೊತ್ತಿಕೊಂಡಿತು. ಕಿಡಿ ಸೂಸಿತು. ನಾಲ್ಕುದಿಕ್ಕುಗಳಿಗೂ ಹಬ್ಬಿತು,ಮಹತ್ತಾದ ಬೇಗನ್ನು ಚೆಲ್ಲುತ್ತಾ ಆಕಾಶದೆತ್ತರಕ್ಕೆ ಬೆಳೆದುನಿಂತಿತು, ಧಗಧಗನೆ ಉರಿಯುತ್ತಾ ಮನ್ಮಥನನ್ನು ಆಟ್ಟಿಕೊಂಡುಹೋಯಿತು. ಆವನನ್ನು ಮುಟ್ಟುತ್ತಲೇ ಸುಟ್ಟುಹಾಕಿತು. ಹೀಗೆ ತನ್ನನ್ನು ಧೈರ್ಯದಿಂದ ಇದಿರಿಸಿದ ಪುಷ್ಪಬಾಣನನ್ನು ತಿಂದು ತೇಗಿತು. ಇಷ್ಟು ಹೇಳುವುದರಿಂದ ಕೇಳುವವರ ಮನಸ್ಸಿನಲ್ಲಿ ಹಣೆಗಣ್ಣುರಿಯ ಭೀಕರತೆ ಬೋಧೆಯಾಗುತ್ತದೆಯೋ ಇಲ್ಲವೊ! ಆ ಭೀಕರತೆ ಮನವಟ್ಟಾಗದ ಹೊರತು ಹರಿಹರನಿಗೆ ಸಮಾಧಾನವಿಲ್ಲ. ಆದ್ದರಿಂದ ಅವರ ವರ್ಣನೆ ಮುಂದುವರಿಸುತ್ತಾ

ಅರರೇ ಭುಘುಗು ಭಾಪುರೇ ಭುಗುಭುಗು ಪ್ರಜ್ವಾಲೆ ಮುಜ್ಜುಯ್ಯ ದೇ
ವರೆ ಕೋಪಾನಳ ವಿಸ್ಫುಲಿಂಗಮುಮು ಪ್ರದ್ಯೋತಮುಯ್ಯಯ್ಯ ಭೀ
ಕರವಾಹಾ ಛಿಣಿ ಛಿಳ್ ಛಿಟಿಲ್ ಛಲರೆ ಛಾಳಾಛೀಳವೆಂದೆಂದು
ನಿರ್ಜರಲೋಕಂ ಬೆರಗಾಗೆ ಸುಟ್ಟುದು ವಿರೂಪಾಕ್ಷಾಕ್ಷಿ ಕಂದರ್ಪನಂ

ಶಿವನ ಹಣೆಗಣ್ಣುರಿ ಅದ್ಭುತ ಭಯಂಕರಾಕಾರವನ್ನು ತಾಳಿ ಮನ್ಮಥನನ್ನು ಸುಟ್ಟುಹಾಕಿತು. ಆಕಾಶದಲ್ಲಿ ನಿಂತಿದ್ದ ದೇವತೆಗಳು ಅದನ್ನು ಕಂಡು ನಡುಗಿಹೋದರು—ಎಂದು ಹೇಳುತ್ತಾನೆ. ಈ ಪದ್ಯಕ್ಕೆ ಪದಶಃ ಅರ್ಥ ಹೇಳುವುದು ಕಷ್ಟ; ಹಾಗೆ ಹೇಳಬೇಕಾದ ಅಗತ್ಯವೂ ಇಲ್ಲ. ಮಾತುಗಳನ್ನು ಕೇಳುತ್ತಿರುವಂತೆ ಅದರ ಭಾವ ಮನಸ್ಸಿಗೆ ಸ್ಫುರಿಸುತ್ತದೆ. ಭಾಷೆಯಲ್ಲಿ ಅನುಕರಣಶಬ್ದಗಳ ಸಾರ್ಥಕತೆಯನ್ನು ನಾವು ಇಲ್ಲಿ ಮನಗಾಣುತ್ತೇವೆ. ಮಾತುಗಳ ಅರ್ಥಕ್ಕಿಂತ ಪದಗುಂಫನವೇ ಅವುಗಳ ಅರ್ಥಸ್ವಾರಸ್ಯವನ್ನು ಹೃದಯದ ಮೇಲೆ ಅಚ್ಚೊತ್ತಿಯಂತೆ ಮುದ್ರಿಸಬಲ್ಲವು. ಇಲ್ಲಿ ಕವಿಯೊಬ್ಬ ಶಬ್ದ

ಗಾರುಡಿಗನಾಗಿ ಅಸಾಧಾರಣವಾದ ವಾತಾವರಣವೊಂದನ್ನು ತನ್ನ ಓದುಗರ ಕಣ್ಣೆದಿರಿಗೆ ಕಟ್ಟಿ ನಿಲ್ಲಿಸುತ್ತಾನೆ. ಹಣೆಗಣ್ಣುರಿಗೆ ಸಿಕ್ಕ ಮನ್ಮಥ ಘರಿಲೆಂದುರಿದು 'ಬೆಂದ ನುಲಿಯಂತೆ' ನಿಂದನಂತೆ! ಕವಿಯ ಕಲ್ಪನಾಶಕ್ತಿ ಆತನ ಅನುಭವಕ್ಕೆ ಎಂತಹ ನಿರೂಪಣಾಶಕ್ತಿಯನ್ನು ಒದಗಿಸಿದೆ! ಬೆಂದ ಹಗ್ಗದಲ್ಲಿ ಆಕಾರವಿದೆ, ಸತ್ವವಿಲ್ಲ; ಬೆಂದ ಕಾಮನಲ್ಲಿ ಕರಿಕಾದ ಆಕಾರವಿದೆ. ಸತ್ವವಿಲ್ಲ. ಸ್ವಲ್ಪ ಮುಟ್ಟಿದರೆ ಸಾಕು, ಸುಟ್ಟ ಹಗ್ಗವು ಬೂದಿಯಾಗಿ ಬೀಳುವಂತೆ ಮನ್ಮಥನೂ ಆಕಾರವನ್ನು ಕಳೆದುಕೊಂಡು ಬೂದಿಯಾಗಿ ಕೆಳಗುರುಳುತ್ತಾನೆ.

ಕಾಮನ ಪ್ರಳಯದಿಂದ ರತಿಯ ಬಾಳು ಮರುಭೂಮಿಯಾಯಿತು. ಸೌಂದರ್ಯದ ಸಾಕಾರಮೂರ್ತಿಯಾಗಿದ್ದ ಶಿವೆ ತನ್ನ ಆರಾಧನೆಯಲ್ಲಿಯೇ ತೊಡಗಿದ್ದರೂ ಅವಳನ್ನು ಕಣ್ಣೆತ್ತಿ ನೋಡದೆ ಹೊರಟುಹೋದ ಆ ನಿರ್ವಿಕಾರಮೂರ್ತಿಯಾದ ಪರಮೇಶ್ವರನು ರತಿಯ ಮೊರೆಯನ್ನು ಕೇಳುತ್ತಾನೆಯೆ? ಆತನು ಕ್ಷಣಮಾತ್ರದಲ್ಲಿ ಅಂತರ್ಧಾನವಾದ. ಮನ್ಮಥನ ಮಡದಿಯಾದ ರತಿ ಅನಿರೀಕ್ಷಿತವಾಗಿ ಅಷ್ಟು ಬೇಗ ನಡೆದುಹೋದ ದುರಂತವನ್ನು ಕಂಡು ದಿಗ್ಭ್ರಮೆಯಿಂದ ಗಳಗಳ ಅತ್ತಳು. ಹರಿಹರಕವಿ ಕರುಣರಸದ ಹೊನಲನ್ನೇ ಹರಿಸಿದ್ದಾನೆ ಈ ಭಾಗದಲ್ಲಿ. ರತಿಯು ಪ್ರಲಾಪಿಸುತ್ತಾ

ಎಳೆಯನೆ ಸುಕುಮಾರನೆ ಸದ
ಮಳನೆ ಸುಖಪ್ರದನೆ ಸೊಬಗೆ ಸುರತರುವೇ ತ
ತ್ಫಳಮೆ ಸುಧಾರಸವೇ ನಿ
ನ್ನಳವರಿಯದೆ ನೊಸಲಕಣ್ಣ ಮುಸುಕಂ ತೆರೆದೈ

ಪ್ರೇಮಮಯ, ಕೋಮಲಾಂಗ, ಪರಿಶುದ್ಧ, ಸುಖದಾಯಕ, ಸುಂದರ, ಕಲ್ಪವೃಕ್ಷ, ಅದರ ಫಲ, ಅಮೃತರಸ–ಇಂತಹ ಮೃದುಭಾವಗಳ ಮೂರ್ತಿಯಂತಿರುವ ನೀನು ನಿನ್ನ ಶಕ್ತಿಯನ್ನು ಮೀರಿ, ಶಿವನ ಹಣೆಗಣ್ಣಿನ ಮುಸುಕನ್ನು ತೆಗೆದೆಯಲ್ಲಾ ಎಂದು ಆತನ ಅತಿಸಾಹಸವನ್ನು ನೆನೆದು ಮಿಡುಕಿದಳು. ಸುಖಸೌಂದರ್ಯಗಳ ಅಧಿದೇವತೆಯಂತಿರುವ ಮನ್ಮಥನು ಮಡಿದುದರಿಂದ

ಲಾವಣ್ಯಂ ಲಯಮಾಯ್ತು, ವಿಭ್ರಮವಿಳಾಸಂ ಮಾಯಮಾಯ್ತು ಕ್ಕೆಟಾ

ಜೀವಂ ಬೆಂದುದು, ಚೆಲ್ವು ಸತ್ತುದು, ಸುಖಂ ಹಾಳಾಯ್ತು, ಕಂದರ್ಪ ಸ
ದ್ಭಾವಂ ಭಸ್ಮಮದಾಯ್ತು, ವೈಮೆ ಮಡಿಯಿತ್ತುತ್ಸಾಹವಿಂಗಿತ್ತದಿ
ನ್ನೇವೇಳ್ವೆಂ ನಡೆವೆತ್ತ ಸಾರ್ವೆಸೆಳೆಗಿನ್ನೇನಪ್ಪೆನೆಂತಿರ್ಪೆನೋ

ಲಾವಣ್ಯ ನಾಶವಾಯಿತು, ವಿಲಾಸ ಮಾಯವಾಯಿತು, ಜೀವ ಬೆಂದು ಹೋಯಿತು. ಸೌಂದರ್ಯ ಸತ್ತಿತು, ಸುಖ ಹಾಳಾಯಿತು, ಸದ್ಭಾವವು ಬೂದಿಯಾಯಿತು, ಮಹಿಮೆ ಮಡಿಯಿತು, ಉತ್ಸಾಹ ಇಂಗಿತು. ಇನ್ನೇನು ಹೇಳಲಿ, ಎಲ್ಲಿಗೆ ಹೋಗಲಿ, ಏನಾಗಲಿ, ಹೇಗಿರಲಿ?—ಎಂದು ಹಳಹಳಿಸುತ್ತಾಳೆ. ತನ್ನ ಗಂಡನ ದಿನಚರಿಯನ್ನು ಮನಸ್ಸು ನೆನೆದುಕೊಳ್ಳುತ್ತದೆ—

ಬೆಳಗಾಯಿತ್ತುಪ್ಪವಡಿಸು
ತೊಳಗುವ ಮಣಿಮುಕುರಮಂ ನಿರೀಕ್ಷಿಸು ಹಂಸಾ
ವಳಿಯಂ ನಡಪಾಡಿಸು ಕೋ
ಕಿಳನಾದಮನಾಲಿಸುಸಿರದಿರ್ಪುದೆ ಮದನಾ

ಬೆಳಗಾಯಿತು, ಮೇಲಕ್ಕೇಳು; ಹೊಳೆಯುವ ರತ್ನದ ಕನ್ನಡಿಯಲ್ಲಿ ಮುಖ ನೋಡಿಕೊ. ಹಂಸಗಳಿಗೆ ನಡಗೆಯನ್ನು ಕಲಿಸು. ಕೋಗಿಲೆಗಳ ಸಂಗೀತವನ್ನು ಕೇಳು. ನಿತ್ಯದ ಈ ಕಾರ್ಯವನ್ನು ಮಾಡದೆ ಸುಮ್ಮನಿರುವುದೆ? ಮನ್ಮಥ ತನ್ನಲ್ಲಿ ಪ್ರೇಮದಿಂದಿದ್ದವನು!

ಎಂದುಂ ಮುಳಿದೊಡೆ ತಿಳಿವಂ
ಮುಂದಿಟ್ಟಲ್ಲದೆ ಮದೀಶ ಮುಳಿಸಿಲ್ಲಿಲ್ಲೀ
ಯಂದಂ ಪೊಸತಿಂದಿನ ಮುಳಿ
ಸೆಂದಿನ ಮುಳಿಸಿನವೊಲಲ್ಲ ಮದನನೃಪಾಲ

ನನ್ನ ಜೀವಿತೇಶನಾದ ಮದನಮೋಹನರಾಜ, ನಿನಗೆ ಕೋಪಬಂದರೆ ವಿವೇಕವನ್ನು ಹೇಳುವ ಸ್ವಭಾವವೇ ಹೊರತು ಕೋಪದಿಂದ ಮಾತು ಬಿಟ್ಟುದಿಲ್ಲ. ನಿನ್ನ ಇಂದಿನ ರೀತಿಯೆ ಹೊಸದು. ಇಂದಿನ ನಿನ್ನ ಕೋಪ ಎಂದಿನಂತಹ ಕೋಪವಲ್ಲ. ಇಂದಿನ ಕೋಪ ತನ್ನನ್ನು ಎಂದೆಂದಿಗೂ ಅಗಲಿ ಹೋಗುವಂತಹ ಕೋಪ. ರತಿಯು ಅವನ್ನು ಸಹಿಸಲಾರದೆ

ಮನೆದೇವತೆಯರಿರಾ, ನಂ
ದನ ದೇವತೆಯರಿರ, ದೆಸೆಯ ದೇವತೆಯರಿರಾ

ಘನಪಾಪಂ ಪುದಿದಿರ್ದೀ
ವನಿತೆಯನೊಳಕೊಳ್ಳಿರೇ, ಅನಾಥೆಯನೆನ್ನಂ

ಮನೆದೇವತೆಯರೆ, ವನದೇವತೆಯರೆ, ದಿಗ್ದೇವತೆಯರೇ, ಮಹಾಪಾಪ ಪೂರಿತಳಾಗಿ ಅನಾಥೆಯಾಗಿರುವ ನನ್ನನ್ನು ನಿಮ್ಮೊಳಗೆ ಸೇರಿಸಿಕೊಳ್ಳಿ—ಎಂದು ಹಲುಬಿ ಹಂಬಲಿಸಿದಳು. ಅತ್ತು ಅತ್ತು ಅವಳು ನೆಲದಮೇಲೆ ಹೊರಳಾಡುತ್ತಿರಲು ಗಿರಿಜೆ ಅವಳ ಬಳಿಗೆ ಬಂದು ಮೈ ಮೊಗಗಳನ್ನು ಸವರಿ ಸಮಾಧಾನಮಾಡಿದಳು. ರತಿಗೆ ಆಕೆಯನ್ನು ಕಂಡು ದುಃಖ ಮರುಕೊಳಿಸಿತು ; ಆಕೆಯ ಪಾದಗಳಲ್ಲಿ ಹೊರಳಾಡುತ್ತಾ

ಕರುಣಿಸು ತಾಯೇ ತವರೇ
ಪರಿರಕ್ಷಿಸು, ದಯೆಯೊಳೀಕ್ಷಿಸುಡುಗಿಸು ನೋವಂ
ಪರಿಹರಿಸು ದುಃಖಮಂ, ವರ
ಗಿರಿರಾಜತನೂಜೆ, ಕಾದುಕೊಳ್ ಎನ್ನಸುವಂ

ತಾಯೇ, ನನ್ನ ತವರೇ, ನನ್ನನ್ನು ಕಾಪಾಡು ; ದಯೆಯಿಂದ ನನ್ನನ್ನು ನೋಡಿ ನನ್ನ ನೋವನ್ನು ಹೋಗಲಾಡಿಸು, ದುಃಖವನ್ನು ಪರಿಹರಿಸು, ನನ್ನ ಪ್ರಾಣವನ್ನು ಉಳಿಸು—ಎಂದು ಬೇಡಿಕೊಂಡಳು. ಪರಮೇಶ್ವರಿಯು ರತಿಗೆ ಅಭಯಪ್ರದಾನಮಾಡಿ ಅವಳನ್ನು ಸಮಾಧಾನಗೊಳಿಸಿದಳು. ಕಥೆಯು ಈ ಘಟ್ಟವನ್ನು ಮುಟ್ಟುವಷ್ಟರಲ್ಲಿ ನಾವು ರತಿದೇವಿಯ ದುಃಖದಲ್ಲಿ ಭಾಗಿಗಳಾಗಿ ಆಕೆಯೊಡನೆ ನಾವೂ ಕಣ್ಣೀರು ಮಿಡಿಯುತ್ತೇವೆ. ಪಾರ್ವತೀ ದೇವಿಯೂ ಇದೇ ಮನೋಭಾವವನ್ನು ತಾಳಿದಳೆಂದು ತೋರುತ್ತದೆ. ಆಕೆಗೆ ಪರಮೇಶ್ವರನ ನಡವಳಿಕೆ ಸ್ವಲ್ಪವೂ ಸರಿಯೆನಿಸಲಿಲ್ಲ. ಆಕೆ ತನ್ನ ಸಖಿಯರಾದ ಜಯ ವಿಜಯೆಯರೊಡನೆ—

ಆನಿಂತಿಂತರ್ಚಿಸುತ್ತುಂ, ಗತಿ ಮತಿ ಪತಿ ಎನ್ನಾಯು ಎನ್ನಾತ್ಮತತ್ವಂ
ತಾನೆಂದುತ್ಸಾಹದಿಂದಿರ್ದಚಳ ಪತಿಯು ಮೇನಾಖ್ಯೆಯೊಂದಳ್ಕರಂ ಬಿ
ಟ್ಟಾನಂದಂಗೂಡಿ ಕಾರುಣ್ಯಮನನವರತಂ ಪಾರುತಿರ್ಪಲ್ಲಿ ಪೇಳಿಂ
ತೇನೆಂದುಂ ನೋಡದುಗ್ರಂ ರಜತಗಿರಿಗೆ ಪೋದಂ ನಿಕೃಷ್ಟಾತ್ಮನಾದಂ

ನಾನು ಹೀಗೆ ಪೂಜಿಸುತ್ತಾ ನನ್ನ ಗತಿ, ಮತಿ, ಆಯುಸ್ಸು, ಆತ್ಮತತ್ವ—ಎಲ್ಲವೂ ಆತನೇ ಎಂದುಕೊಂಡು, ತನ್ನ ತಂದೆ ಹಿಮವಂತ ತಾಯಿ ಮೇನೆ

ಇವರ ಪ್ರೇಮವನ್ನು ಕೂಡ ಸೂರೆಗೊಟ್ಟು, ಕೇವಲ ಆತನ ಕರುಣೆಯನ್ನು ಮಾತ್ರವೇ ಪ್ರಾರ್ಥನೆಮಾಡುತ್ತಾ ನಿರೀಕ್ಷಿಸುತ್ತಿರುವಾಗ ಇದೊಂದನ್ನೂ ನೋಡದೆ ಆ ಉಗ್ರನು ತನ್ನ ಬೆಳ್ಳಿಯ ಬೆಟ್ಟಕ್ಕೆ ಹೊರಟು ಹೋದುದರಿಂದ ಆತನು ನಿಕೃಷ್ಟಾತ್ಮನಾದನು.—ಎಂದು ಶಿವನನ್ನು ತೆಗಳಿ ಆ 'ಚಲದ ಲಲನೆ' 'ಬಲ್ಪಿನ ಭಾವಕಿ' 'ಏಕನಿಷ್ಠಾನಿಧಿ' ಉಗ್ರ ತಪಸ್ಸನ್ನು ಕೈಕೊಳ್ಳುತ್ತಾ

ತಾನಿರ್ದಲ್ಲಿಗೆ ನಡೆತಂ
ದಾನರ್ಚಿಸೆ ಕಾಮವೈರಿ ನುಡಿಯಿಸದಂತ
ರ್ಧಾನಕ್ಕೆ ಸಂದನದರಿಂ
ದಾನಿರ್ದಲ್ಲಿಗೆ ಸಮಂತು ತನ್ನನೆ ತರ್ಪೆಂ

ಆತನು ಇದ್ದಲ್ಲಿಗೇ ನಾನು ಬಂದು ಪೂಜಿಸಲು ಆ ಕಾಮವೈರಿಯಾದ ಶಿವನು ನನ್ನನ್ನು ಮಾತನಾಡಿಸದೆ ಮಾಯವಾಗಿ ಹೋದನಾದ್ದರಿಂದ ಆತನೇ ನಾನಿರುವಲ್ಲಿಗೆ ನೇರವಾಗಿ ಬರುವಂತೆ ಮಾಡುತ್ತೇನೆ—ಎಂದು ಪ್ರತಿಜ್ಞೆಯನ್ನು ಕೈಕೊಂಡಳು.

ಗಿರಿಜೆಯು ತನ್ನ ಪ್ರತಿಜ್ಞೆಯನ್ನು ನೆರವೇರಿಸಿಕೊಳ್ಳುವಷ್ಟರಲ್ಲಿ ಹರಿಹರದೇವನ ಕವಿತಾಶಕ್ತಿಯು ತನ್ನ ಪ್ರತಿಭೆ ಕಲ್ಪನೆಗಳ ರೆಕ್ಕೆಯನ್ನು ಕೆದರಿ ವಿಹಂಗಮವಿಹಾರಿಯಾಗುತ್ತದೆ. ಗಿರಿಜೆ ಬೇಸಗೆ ಮಳೆ ಚಳಿಗಳನ್ನು ಲೆಕ್ಕಿಸದೆ ಬಟ್ಟಬಯಲಿನಲ್ಲಿ ಕುಳಿತು ಘೋರತಪವನ್ನು ಆಚರಿಸಿದಳು. ಆಕೆಯ ತಪಸ್ಸಿನ ತಾಪ ಸ್ವತಃ ಸೂರ್ಯನಿಂದಲೂ ಸಹಿಸಲಸಾಧ್ಯವಾಗಿತ್ತಂತೆ! ಆತನು ಆಕೆಯು ತಪಸ್ಸುಮಾಡುತ್ತಿದ್ದ ಸ್ಥಳವನ್ನು ಬಿಟ್ಟು, ಮಗ್ಗುಲು ಹಾದಿಯಿಂದ ನುಸುಳಿಕೊಂಡು ಹೋಗುತ್ತಿದ್ದನಂತೆ! ಮೃಗಪಕ್ಷಿಗಳು ಹತ್ತಿರದಲ್ಲಿ ಎಲ್ಲಿಯೂ ಸುಳಿದಾಡುವಂತಿಲ್ಲ, ಗಾಳಿ ಅಲ್ಲಿ ಕಾಣಿಸಿಕೊಳ್ಳುವಂತಿಲ್ಲ, ಆಕಾಶಗಾಮಿಗಳು ಮೇಲ್ಗಡೆ ಆ ಹಾದಿಯಲ್ಲಿ ಹೋಗುವಂತಿಲ್ಲ. ಇಂತಹ ಸನ್ನಿವೇಶದಲ್ಲಿ ಬೇಸಗೆ ಬಂತು. ಭಯಂಕರ ಬೇಸಗೆ. ಮೃಗಪಕ್ಷಿಗಳೆಲ್ಲವೂ ಬಿಸಿಲನ್ನು ತಾಳಲಾರದೆ ಸತ್ತುರುಳಿದುವು, ಬೆಟ್ಟಗಳು ಉರಿದು ಹೋದವು, ಸಮುದ್ರ ಬತ್ತಿತು, ಭೂಮಿ ಕಾದು ಕೆಂಗೆಂಡವಾಯಿತು. ಬಿಸಿಲು, ಬಿಸಿಲು, ಎಲ್ಲೆಲ್ಲಿಯೂ ಬಿಸಿಲು.

ಮರದಡಿಯೊಳ್, ಕಾನನದೊಳ್
ಗಿರಿತಟದೊಳ್ ಬಟ್ಟ ಬಯಲೊಳ್ ಅಂಬರತಳದೊಳ್

ಕರಿಯ ಬಿಸಿಲ್, ಉರಿಯ ಬಿಸಿಲ್, ಅ
ಚ್ಚರಿಯ ಬಿಸಿಲ್ ಪಿರಿಯ ಬಿಸಿಲ್ ಅಖಂಡಿತದ ಬಿಸಿಲ್

ನೆರಳಿದ್ದ ಕಡೆ ಅದು ನೆರಳಲ್ಲ, ಕರಿಯ ಬಿಸಿಲು; ಆ ಬಿಸಿಲಿನಲ್ಲಿ ಉರಿಯ ಬಿಸಿಲು, ಆಶ್ಚರ್ಯದ ಬಿಸಿಲು, ಹಿರಿಯ ಬಿಸಿಲು, ಅಖಂಡ ಬಿಸಿಲು ಎಂದು ವಿಭಾಗಮಾಡಬೇಕೇ ಹೊರತು ಬಿಸಿಲಿಲ್ಲದ ಸ್ಥಳವಿಲ್ಲ. ಆಗ ಉಳಿದ ಪ್ರಾಣಿಗಳಿರಲಿ, ಮದ್ದಾನೆಯೊಂದು ಪಡುತ್ತಿರುವ ಈ ದುರವಸ್ಥೆಯ ಚಿತ್ರವನ್ನು ನೋಡಿ—

ನಡೆಯಲೊಂದಡಿಯಿಟ್ಟು, ಕಾಯ್ದ ನೆಲನಂ ಕಾಲ್ಮುಟ್ಟಿ ಚುಯ್
ಎಂದು ಬೆಂ
ದೊಡೆ ಮತ್ತೊಂದಡಿಯೆತ್ತಲಾರದಳಲಿಂ ಕಣ್ಮುಚ್ಚಿ ಹಸ್ತಾಗ್ರಮಂ
ಕಡೆವಾಯೊಳ್ ಸೆರೆಯಿಟ್ಟು, ನೆತ್ತಿ ಬಿರಿದೆತ್ತಲ್ ಮುತ್ತುಗಳ್ ಸುತ್ತಲುಂ
ಸಿಡಿಯುತ್ತಿರ್ಪಿನಮಿರ್ದುದೊಂದತಿ ಮದೇಭಂ ಭೀಷ್ಮದೊಳ್ ಗ್ರೀಷ್ಮ
ದೊಳ್

ಮದ್ದಾನೆಯೊಂದು ಪಾಪ, ಮುಂದಕ್ಕೆ ಹೋಗಲೆಂದು ಒಂದು ಹೆಜ್ಜೆ ಇಟ್ಟಿತು; ಬೆಂಕಿಯಂತೆ ಕಾದ ನೆಲವನ್ನು ತಾಕುತ್ತಲೆ ಆ ಕಾಲು ಚುಯ್ ಎಂದು ಬೆಂದು ಹೋಯಿತು. ಆಗ ಆ ಪ್ರಾಣಿ ಮತ್ತೊಂದು ಕಾಲನ್ನು ಎತ್ತಲಾರದೆ ಸಂಕಟದಿಂದ ಕಣ್ಮುಚ್ಚಿಕೊಂಡು, ತನ್ನ ಸೊಂಡಿಲನ್ನು ಬಾಯಲ್ಲಿಟ್ಟುಕೊಂಡು ನಿಂತು ಬಿಟ್ಟಿತು. ಬಿಸಿಲಿನ ಝಳಕ್ಕೆ ಅದರ ನೆತ್ತಿ ಒಡೆದು ಅಲ್ಲಿನ ಮುತ್ತುಗಳೆಲ್ಲವೂ ಚಲ್ಲಾಪಿಲ್ಲಿಯಾಗಿ ಸಿಡಿದುಹೋದುವು. ಇಂತಹ ಭಯಂಕರ ನಡುಬೇಸಗೆಯಲ್ಲಿ ಗಿರಿಜೆ ಪಂಚಾಗ್ನಿ ಮಧ್ಯದಲ್ಲಿ ಕುಳಿತು ತಪಸ್ಸು ಮಾಡಿದಳು. ಹರಿಹರಕವಿ ಹೇಳುತ್ತಾನೆ 'ನೆರೆಗಂಗಾಧರನಂ ಶಶಿಧರನಂ ನೆನೆದು ಕಳೆದಳಾ ಬೇಸಗೆಯಂ' ಎಂದು. ಅಹುದು ಆ ಗಂಗಾಧರ, ಶಶಿಧರ ಸಲಹದಿರ್ದರೆ ಸುಮಕೋಮಲೆಯಾದ ಗಿರಿಜೆ ಅದೆಂತು ಆ ಬಿರು ಬೇಸಗೆಯನ್ನು ಕಳೆಯುತ್ತಿದ್ದಳು? ಬೇಸಗೆಯಂತೆ ಮಳೆಗಾಲವೂ ಆಕೆಯ ತಪಸ್ಸಿಗೆ ಪ್ರತಿಸ್ಪರ್ಧಿಯಾದ ಪ್ರಕೃತಿಶಕ್ತಿಯಾಗಿಯೇ ಪರಿಣಮಿಸಿತು. ಹಗಲಿರುಳೂ ಬಿಡದೆ ಸುರಿಯಿತು. ಮಿಂಚು ಗುಡುಗುಗಳ ಭೈರವವಾಗಲಿ ಆಲಿಕಲ್ಲುಗಳ ರಭಸವಾಗಲಿ ಆಕೆಯ ನಿಷ್ಠೆಯ ಮುಂದೆ ನಿಸ್ತೇಜ

ವಾದವು. ಆಕೆ 'ಕೋಡದೆ, ಕೊಂಕದೆ, ಬಾಡದೆ, ಬಳ್ಕದೆ, ಸೆಡೆಯದೆ, ಸೇಡು ಗೊಳ್ಳದೆ, ಬೆದರದೆ, ಬಲಂಗೆಡದೆ ಮುಸಂಗುಂದದೆ, ಕಲನಂ ಸಾರದೆ. ಸಹಾಯಮಂ ಪಾರದೆ' ತಪಸ್ಸು ಮಾಡಿದಳು. ಆಮೇಲೆ ಚಳಿಗಾಲ ಬಂತು. ಅದು ಶಿಶಿರರಾಜನ ಆಡಳಿತ. ಆತನು ಜನರಿಂದ ಶಿಶಿರನಾಟ್ಯವನ್ನು ಆಡಿಸಿದನಂತೆ. ಅದಕ್ಕೆ ವಾದ್ಯ ಹಲ್ಲುಗಳು, 'ಹು ಹು ಹು' ಎಂಬುದೇ ಹಾಡು, ಕೈಗಳೇ (ಛಳಿಯಿಂದ ಉಜ್ಜಿಕೊಂಡಾಗ) ಈ ಹಾಡಿಗೆ ಶೃತಿಯಾಗಿರುವ ತಂಬೂರಿ. ಆ ಛಳಿಯ ಮಹಿಮೆ ಮಹತ್ತಾದುದು–'ನುಡಿಯೆ ಹು ಹು, ನಡೆಯ ಮಾತೇಕೆ? ಒಡಲೇ ಪ್ರಾಣಂಗೆ ಚಳಿಯ ಕುಪ್ಪುಸವಾಯ್ತು' ಮಾತೆಂದರೆ 'ಹು ಹು 'ಎಂಬುದಷ್ಟೆ; ಓಡಾಡುವ ಪ್ರಸಕ್ತಿ ಎಲ್ಲಿ ಬಂತು? ಈ ದೇಹವೇ ಒಳಗಿನ ಪ್ರಾಣಕ್ಕೆ ಚಳಿಯ ಅಂಗಿಯಾಯ್ತಂತೆ? ಬೆಂಕಿ ಚಳಿಯನ್ನು ತಾಳಲಾರದೆ ಕಾಷ್ಠಗರ್ಭವನ್ನು ಪ್ರವೇಶಿಸಿಬಿಟ್ಟನಂತೆ!

ಪುಟ್ಟಿತು ಚಳಿ, ಬಳೆದುದು ಚಳಿ
ಕೊಟ್ಟುದು ಚಳಿ, ಕೊಂಡುದೆಲ್ಲಮುಂ ಚಳಿ ಚಳಿ ಎಂ
ದುಟ್ಟುದು ಚಳಿ, ತೊಟ್ಟುದು ಚಳಿ
ಮೆಟ್ಟಿತು ಚಳಿ, ಮುಟ್ಟಿತೆಲ್ಲ ಚಳಿ ಪೊಸ ಚಳಿಯೊಳ್

ಹುಟ್ಟಿದುದೆಲ್ಲಾ ಚಳಿ, ಬೆಳೆದುದೆಲ್ಲಾ ಚಳಿ, ಕೈಲಿ ಹಿಡಿದು ಕೊಟ್ಟುದೂ ಪರರಿಂದ ಕೊಂಡುದೂ ಚಳಿ, ಚಳಿಯೆಂದು ಉಟ್ಟ ಬಟ್ಟೆ, ತೊಟ್ಟ ಬಟ್ಟೆ, ಮೆಟ್ಟಕೊಂಡ ಕಾಲ್ಮರೆ—ಒಟ್ಟನಲ್ಲಿ ಮುಟ್ಟಿದುದೆಲ್ಲಾ ಚಳಿ—ಸರ್ವಂ ಚಳಿಮಯಂ ಜಗತ್—ಅಷ್ಟೆ. ಕವಿಯ ಅನುಭವ, ಸೌಂದರ್ಯದೃಷ್ಟಿ ಅಮೋಘವಾದುವೇ ಸರಿ!

ಇಂತಹ ಬೇಸಗೆ ಮಳೆ ಚಳಿಗಳನ್ನು ಲೆಕ್ಕಿಸದೆ, ಪ್ರಾಣವನ್ನು ಪಣವಾಗಿ ಒಡ್ಡಿ ತಪಸ್ಸುಮಾಡಿದ ಗಿರಿಜೆಯ ಸತ್ವಶಕ್ತಿ ಸ್ಥಾಣುವನ್ನು ಚಲಿಸಿತು. ಆತನು ವಟುವೇಷವನ್ನು ಧರಿಸಿ ಆ 'ನಾರಸೀರೆಯ ಧೀರೆ' ಯ ಬಳಿಗೆ ವಟುವೇಷದಿಂದ ಓಡಿಬಂದ. ಅವನ ಸ್ವರೂಪವನ್ನು ಅರಿಯದ ಗಿರಿಜೆಯ ಸಖಿಯರು ಆತನನ್ನು ಅತಿಥಿಯೆಂದು ಬಗೆದು ಉಪಚರಿಸಿದರು. ಎಳೆ ಬಾಳೆಯ ಸುಳಿಯೆಲೆಯಲ್ಲಿ ನಳನಳಿಸುವ ಕಂದ ಮೂಲಗಳನ್ನೂ ಜಂಬು ಕದಳಿ ಫಲಗಳನ್ನೂ ಕೊಟ್ಟು 'ಎಲೆ ಅತಿಥಿ, ಬಳಲ್ದಿರಿ; ಈ ಫಲದಿಂದ

ನಿಮ್ಮ ಹಸಿವನ್ನು ಅಡಗಿಸಿ' ಎಂದು ಹೇಳಿದರೆ, ಆ ಕಪಟವಟು 'ಹೈ, ಫಲವಂಕೊಂಡಪೆವೀ ಲಲನೆಯದಾರ್ ? ತಪವಗಣ್ಯನಾವನ ಪುಣ್ಯಂ?' —ಹೋ, ಹಣ್ಣು ತಿನ್ನುತ್ತೇನೆ, ಇರಲಿ ; ಆ ಸುಂದರಿ ಯಾರು? ಅಸದೃಶ ವಾದ ಆಕೆಯ ತಪಸ್ಸಿಗೆ ಕಾರಣನಾದ ಪುಣ್ಯವಂತನಾರು ?–ಎಂದು ಮೆಲ್ಲನೆ ಬಾಲ ಬಿಚ್ಚಿದ. 'ಅಯ್ಯಾ ಹಣ್ಣು ತಿನ್ನುವುದು ಬಿಟ್ಟು ಹೆಣ್ಣಿನ ಚಿಂತೆ ನಿನಗೇಕೆ ?' ಎಂದು ಆ ಸಖಿಯರು ಕೇಳಿದರೆ ಆ ಬ್ರಾಹ್ಮಣವಟು ನಗುತ್ತಾ

ಬೆಸಗೊಂಡೊಡೆ ದೋಷಮೆ ? ಈ
ಪೊಸಕನ್ನೆ ತಪೋನಿರೋಧದಿಂದಿರ್ದೊಡೆ ಸೈ
ರಿಸಬರ್ಪುದೆ, ತಪಮಂ ಮಾ
ಣಿಸುವವರಿಲ್ಲಾ ? ಸಹಾಯಸಂಪದವಿಲ್ಲಾ ?

ಕೇಳಿದರೆ ಏನು ತಪ್ಪು ? ಈ ಹೊಸಕನ್ಯೆ ತಪಸ್ಸಿನ ಆಯಾಸಕ್ಕೆ ಸಿಕ್ಕಿರು ವಾಗ ಅದನ್ನು ಸೈರಿಸಲು ಸಾಧ್ಯವೆ? ಆಕೆಯನ್ನು ತಪಸ್ಸಿನಿಂದ ಬಿಡಿಸುವವರು ಯಾರೂ ಇಲ್ಲವೆ? ಅಂತಹ ಸಹಾಯ ಸಂಪತ್ತು ಯಾವುದೂ ಆಕೆಗೆ ಇಲ್ಲವೇ? ಎಂದು ಕೇಳಿದ. ಹತ್ತಿರದಲ್ಲಿ ಜಪಮಾಡುತ್ತಿದ ಗಿರಿಜೆಗೆ ಆ ವಟುವಿನ ಮಾತು ಕೇಳಿ ಸ್ವಲ್ಪ ಕೋಪ ಬಂತು. ಜಪ ನಿಂತಿತು. ಜಪಸರ ಓರೆಯಾಯಿತು, ಕಣ್ಣನ್ನು ನಸುದೆರೆದು ಆ ಅಧಿಕ ಪ್ರಸಂಗಿಯತ್ತ ನೋಡಿ ದಳು. ನೋಡಿ ಮನಸ್ಸಿಗೆ ಕೋಪಕ್ಕೆ ಬದಲಾಗಿ ಏನೋ ಹರ್ಷವಾದಂತಾ ಯಿತು. ಆಕೆಯ ಮಧುರದೃಷ್ಟಿಯನ್ನು ಕಂಡು ಕಪಟವೇಷದ ಶಂಕರನಿಗೂ ತಡೆಯಲಾರದಷ್ಟು ಸಂತೋಷವಾಯಿತು. ಇನ್ನೇನು ಸ್ವಸ್ವರೂಪದಿಂದ ಕಾಣಿಸಿಕೊಳ್ಳಬೇಕು ; ಅಷ್ಟರಲ್ಲಿ ಆತ ಸಂವರಿಸಿಕೊಂಡ—

ನೆಗೆವ ಜಡೆಮುಡಿಯನೊತ್ತು
ತ್ತೊಗೆವ ಭುಜಾಳಿಯನಡಂಗಿಸುತ್ತೂರುಗಳಿಂ
ಮಿಗುವ ವೃಷಭೇಂದ್ರನಸೌಂಕು
ತ್ತಗಲದೆ ನಿಜರೂಪದೊಳಗೆ ಗಜಬಜಿಸುತ್ತಂ

ಜಡೆ ಮುಡಿ ಮೇಲಕ್ಕೇಳುವುದನ್ನು ಹಾಗೆಯೇ ಒತ್ತಿದನಂತೆ! ಹೊರಬರುವ ಎಂಟು ಭುಜಗಳನ್ನು ಹಾಗೆಯೇ ಅಡಗಿಸಿದನಂತೆ! ಹೊರಹೊರಡಲಿದ್ದ ನಂದೀಶ್ವರನನ್ನು ತೊಡೆಗಳಿಂದ ಹಾಗೆಯೇ ಒತ್ತಿ ಹಿಡಿದನಂತೆ! ಸ್ವಸ್ವರೂಪ

ಒಳಗಡೆಯಿಂದ ಮಿಸುಕಾಡುತ್ತಿರಲು ಅದನ್ನು ಹಾಗೆಯೇ ಸಮಾಧಾನ ಮಾಡಿದ. ಗಿರಿಜೆಯೊಡನೆ ಸ್ವಲ್ಪ ವಿನೋದ ಮಾಡಬೇಕೆನ್ನಿಸಿತು. 'ಎಳೆ ಬೆಳುದಿಂಗಳಿಗೆ ಸಹ ಅಳುಕುವಂತಹ ಶಿರೀಷಪುಷ್ಪಸದೃಶವಾದ ನಿನ್ನ ದೇಹಕ್ಕೆ ಈ ಒರಟು ನಾರುಸೀರೆ ಏಕೆ? ಸುಕುಮಾರಿಯಾದ ನೀನು ಯಾರಿಗಾಗಿ ಈ ತಪಸ್ಸು ಮಾಡುತ್ತಿದ್ದಿ? ಕೋಮಲೆಯಾದ ನಿನ್ನನ್ನು ಈ ಕಷ್ಟಕ್ಕೆ ಒಳಗುಮಾಡಿದ ಪಾಪಿ ಯಾರು?' ಎಂದ. ಆಗಜೆ ಹೇಳಲೋ ಬೇಡವೋ ಎಂದುಕೊಂಡು ಕೊನೆಗೆ 'ಶಂಕರನಿಗಾಗಿ' ಎಂದು ಲಜ್ಜೆಯಿಂದ ಹೇಳಿದಳು. ಕೇಳಿ ಕಪಟವಟು ತನ್ನ ಕಪಟನುಡಿಯನ್ನು ಪ್ರಾರಂಭಿಸಿದ—'ಅಯ್ಯಯ್ಯೋ, ಅವನು ಕಾಮಹರ, ಮುಕ್ಕಣ್ಣ. ವೇದಶಾಸ್ತ್ರಗಳನ್ನೆಲ್ಲಾ ಬಿಟ್ಟವನು, ಶ್ಮಶಾನದಲ್ಲಿ ವಾಸವಾಗಿರುವವನು.

ನೀನಿನಿಯಳ್, ವಿಷಮಾತಂ,
ನೀನತಿ ಮೃದು, ಕಠಿಣಗುಣಗಣಾಶ್ರಯನಾತಂ,
ನೀನಬಲೆ, ಉಗ್ರನಾತಂ,
ನೀನುರುತರ ಭೀರು, ಸರ್ಪಭೂಷಣನಾತಂ

ನೀನು ಅಮೃತರೂಪಿ, ಆತ ವಿಷ; ನೀನು ಅತ್ಯಂತ ಮೃದು, ಆತ ಕಠಿಣ ಗುಣಕ್ಕೆ ಆಶ್ರಯ; ನೀನು ಅಬಲೆ, ಅವನು ಉಗ್ರ; ನೀನು ಭೀರು, ಅವನು ಭಯಂಕರವಾದ ಸರ್ಪಾಭರಣ—ಇಬ್ಬರಿಗೂ ಹಗಲು ರಾತ್ರಿಗಳಷ್ಟು ವ್ಯತ್ಯಾಸ. ಅವನ ಉಡುಪು ಹುಲಿದೊಗಲು, ಹಾವು ತಲೆಯಾಭರಣ, ಹಣೆಗಣ್ಣು, ಎಲುಬಿನ ಆಯುಧ, ಹೆಣಗಳ ಹಸಿತಲೆಯ ಮಾಲೆ ಅವನ ಕೊರಳ ಹಾರ, ಕೈಲೊಂದು ತ್ರಿಶೂಲ—ಈ ಭಯಂಕರ ರೂಪವನ್ನು ಏನೆಂದು ಮೆಚ್ಚಿದೆ?"

ಕಪಟವಟುವಿನ ಶಿವನಿಂದೆಯನ್ನು ಕೇಳಿ ಗಿರಿಜೆಗೆ ಕೋಪವುಕ್ಕಿತು. ಪತಿನಿಂದೆಯನ್ನು ಕೇಳಲಾರದೆ ಆಕೆ ಕೈಲಿದ್ದ ವಿಭೂತಿಯಿಂದ ಆತನನ್ನು ಹೊಡೆದಳು. ವಿಭೂತಿ ದೇಹವನ್ನು ತಾಗುತ್ತಲೆ ವಟುವೇಷ ಜಾರಿ ಹೋಯಿತು. ಕವಿ ಕೇಳುತ್ತಾನೆ—'ಶಿವನಾದೊಡೇಂ? ಪುಸಿ ದಿಟಕ್ಕೆ ನಿಲ್ಲುವುದೆ?' ಎಂದು. ಕೋಪದಿಂದ ಒಗೆದ ವಿಭೂತಿ ಜೀರಿಗೆ ಬೆಲ್ಲವಾಯಿತು. ಪ್ರತ್ಯಕ್ಷನಾದ ಶಿವನು ಲಜ್ಜೆಯಿಂದ ತಲೆಬಾಗಿ ನಿಂತಿದ್ದ ಗಿರಿಜೆಯ ಪುಣ್ಯ

ಹಸ್ತವನ್ನು ಹಿಡಿದು, ಆಕೆಯ ಪ್ರಾರ್ಥನೆಯಂತೆ ಕಾಮನು ಅನಂಗರೂಪದಿಂದ ರತಿಪತಿಯಾಗಿರಲೆಂದು ಅನುಗ್ರಹಿಸಿದನು: ಮುಂದೆ ಗಿರಿಜಾಕಲ್ಯಾಣದೊಡನೆ ಕಾವ್ಯ ಮುಗಿಯುತ್ತದೆ. 'ಸುರ ತರುವಿನಂತೆ, ಸುಜನರ ಸಿರಿಯಂತೆ ಸರೋಜದಂತೆ, ಸುಧಾಕರ ಕಿರಣದಂತೆ' ತನ್ನ ಕಾವ್ಯವು ಅಖಿಳಜನಸೇವ್ಯವೆಂದು ಕವಿ ಹೆಮ್ಮೆಯಿಂದ ಹೇಳಿಕೊಂಡಿರುವುದು ಸಾರ್ಥಕವಾಗಿದೆ.

ಗಿರಿಜಾಕಲ್ಯಾಣವು ಒಂದು ಸುಂದರವಾದ ಚಂಪೂಕೃತಿ. ಈ ಜಾತಿಯ ಕಾವ್ಯಗಳಲ್ಲಿ ಇದಕ್ಕೆ ಅಪೂರ್ವವಾದ ಒಂದು ಸ್ಥಾನವೂ ಇದೆ. ಆದರೆ ಇಷ್ಟರಿಂದಲೇ ಆತನು ಯುಗಪುರುಷ ಪಟ್ಟಕ್ಕೇರಲಿಲ್ಲ. ಆತನನ್ನು ಆ ಪಟ್ಟಕ್ಕೆ ಏರಿಸಿದುದು ಶಿವಶರಣರ ರಗಳೆಗಳು. ಗಿರಿಜಾಕಲ್ಯಾಣವನ್ನು ಬರೆದಾಗ ಕವಿಯು ಇನ್ನೂ ತರುಣನಾಗಿದ್ದನೆಂದು ತೋರುತ್ತದೆ. ಬುದ್ಧಿ ಮನಸ್ಸುಗಳೂ ಆ ತಾರುಣ್ಯದ ಕಾವಿನಲ್ಲಿಯೇ ಇದ್ದಿರಬೇಕು. ತನ್ನ ಕಾವ್ಯದಲ್ಲಿ ಅಪಾರವಾದ ಅಭಿಮಾನವೂ ಇದ್ದಿರಬೇಕು. 'ನೀರಸರರಿವಂತೇಸಿದು ತಾರೆಲೆಯೇ ಬೀದಿವಾಡೆ ನೆರವಿಯ ತುಮುಕೆ?' ಎಂದು ಗರ್ಜಿಸುತ್ತಾನೆ. ಜನಸಾಮಾನ್ಯರೂ ಅವರ 'ಬೀದಿವಾಡು' ಗಳೂ ಅವನ ದೃಷ್ಟಿಯಲ್ಲಿ ಆಗ ಕೀಳು. ತನ್ನ ಕೃತಿ ರಾಜಸಭೆ, ಬ್ರಹ್ಮಸಭೆ, ದೇವಸಭೆಗಳಲ್ಲಿ ಗೌರವಕ್ಕೆ ಅರ್ಹವಾಗತಕ್ಕುದೆಂದು ಅವನ ಹೆಮ್ಮೆ. ಆತನು ಗಿರಿಜಾಕಲಾಣವನ್ನು ಬರೆದು ಮುಗಿಸುವಷ್ಟರಲ್ಲಿ ಹರಭಕ್ತಿ ರಕ್ತಗತವಾಗಿ ಹೋಗಿರಬೇಕು. ಹೊರಗಿನ ಗೌರವ ಮನ್ನಣೆಗಳ ಪೊಳ್ಳು ಮನದಟ್ಟಾಯಿತೇನೊ! ತಾನು ಕೀಳ್ಗಂಡಿದ್ದ ಜನಸಾಮಾನ್ಯರಲ್ಲಿ ಅಪಾರವಾದ ಕರುಣೆ ಮಮತೆಗಳು ಬೆಳೆದು ಹೆಮ್ಮರವಾಗಿರಬೇಕು. ಅದರ ಸುಮಧುರ ಫಲಗಳೇ ರಗಳೆಗಳು. ವಸ್ತು ರೀತಿಗಳಲ್ಲಿ ಭಾವ ಭಾಷೆಗಳಲ್ಲಿ ಹರಿಹರನ ಕಾವ್ಯಶಕ್ತಿ ಕ್ರಾಂತಿಕಾರಕವಾದ ಹೊಸ ಹಾದಿಯನ್ನು ಹಿಡಿಯಿತು. ಇವಕ್ಕೆ ವಚನವಾಙ್ಮಯವೇ ಪ್ರೇರಕವಾಗಿರಬೇಕೆಂದು ಊಹಿಸಿದರೆ ಸ್ವಲ್ಪವೂ ತಪ್ಪಾಗಲಾರದೆಂದು ತೋರುತ್ತದೆ.

True magnanimity Consists in deviating from the beaten path–ಸವೆದ ಹಾದಿಯನ್ನು ಬಿಟ್ಟು ಹೊಸ ಹೆದ್ದಾರಿಯೊಂದನ್ನು ನಿರ್ಮಿಸುವುದೇ ಹಿರಿತನದ ಲಕ್ಷಣವಂತೆ! ಹರಿಹರನು ತನ್ನದೇ ಹೆದ್ದಾರಿಯನ್ನು ನಿರ್ಮಿಸಬಲ್ಲ ಇಂತಹ ಮಹಿಮಾನ್ವಿತನೇ. ಸ್ವತಂತ್ರ ಮನೋ

ವೃತ್ತಿ ಅವನ ಹುಟ್ಟುಗುಣ. ಗಿರಿಜಾಕಲ್ಯಾಣದಲ್ಲಿಯೇ ಅವನ ಈ ಸ್ವಭಾವ ತಕ್ಕ ಮಟ್ಟಿಗೆ ವ್ಯಕ್ತವಾಗಿದೆ. ಪ್ರಾಸಸ್ಥಾನದಲ್ಲಿ ರಳ, ಕುಳ, ಕ್ಷಳಗಳನ್ನು ಬೆರೆಸಬಾರದೆಂಬುದು ಛಂದಶ್ಶಾಸ್ತ್ರದ ನಿಯಮ. (ಕನ್ನಡದಲ್ಲಿ ಮೂರು ಬಗೆಯ ಳಕಾರಗಳಿವೆ. 'ಡ'ಕಾರವನ್ನು ಒತ್ತಿ ಉಚ್ಚರಿಸುವಾಗ ಹುಟ್ಟುವ 'ಳ' ರಳ ('ೞ'); 'ಲಳಯೋರಭೇದಃ' ಎಂಬ ನಿಯಮದಂತೆ ಸಂಸ್ಕೃತದಲ್ಲಿ ಲಕಾರಕ್ಕೆ ಬದಲಾಗಿ ಬಳಸುವ 'ಳ', ಇದು ಕ್ಷಳ; ಕನ್ನಡದಲ್ಲಿ ಸ್ವಾಭಾವಿಕವಾಗಿ ಇರುವ 'ಳ'ಕಾರ ಕುಳ. ಇವುಗಳಲ್ಲಿ ರಳವು ಉಚ್ಚಾರಣೆಗೆ ಕಷ್ಟ; ನಾಲಗೆಯನ್ನು ಎತ್ತಿ ಮಡಿಸಿಕೊಂಡು ಉಚ್ಚರಿಸಬೇಕು. ಈ ಉಚ್ಚಾರಣೆ ಈಗ ಸತ್ತುಹೋಗಿದೆ. ಉಚ್ಚಾರಣೆಗೆ ಕಷ್ಟವಾಗಿ ಅರೆಜೀವದಲ್ಲಿದ್ದ ಈ ರಳವನ್ನು ಉಳಿಸಬೇಕೆಂದು ಹದಿಮೂರನೆಯ ಶತಮಾನದ ಪ್ರಸಿದ್ಧ ವ್ಯಾಕರಣಕಾರನಾದ ಕೇಶಿರಾಜ ತನ್ನ 'ಶಬ್ದಮಣಿದರ್ಪಣ'ದಲ್ಲಿ ಹಲವಾರು ನಿಯಮಗಳನ್ನು ನಿರೂಪಿಸಿದ್ದಾನೆ. ಅದರ ರೋಗ ಹರಿಹರನ ಕಾಲಕ್ಕೆ ಕಾಣಿಸಿಕೊಂಡಿತ್ತೆಂದು ತೋರುತ್ತದೆ.) ಕವಿಗಳು ಪ್ರಾಸಸ್ಥಾನದಲ್ಲಿ ಈ ರಳವನ್ನು ತಪ್ಪುತಪ್ಪಾಗಿ ಬಳಸುತ್ತಿದ್ದರು; ಆದರೆ ಅದನ್ನು ಬಿಡುವಷ್ಟು ಧೈರ್ಯವಿಲ್ಲ. ಪಂಡಿತರ ಅಂಕುಶದ ಹೆದರಿಕೆ. ಈ ಅತಂತ್ರಸ್ಥಿತಿ ಹರಿಹರನ ಸ್ವತಂತ್ರಮನೋವೃತ್ತಿಗೆ ಸರಿಬೀಳಲಿಲ್ಲ. ಅವನು ಸಿಡಿದೆದ್ದು ಗುಡುಗಿದ.

ನೋಡುವೊಡೊಂದಕ್ಕರ ಮದು
ಮಾಡುವೊಡೊಚ್ಚರಣೆಗರಿದು ಮೂರುಂ ತೆರರೆನಂ
ಕೂಡೆ ಕವಿತತಿ ವಿಚಾರಿಸ
ಬೇಡದರಿಂ ರಳ ಕುಳ ಕ್ಷಳಂಗಳನಿದರೊಳ್

ವಿಚಾರಮಾಡಿ ನೋಡಿದರೆ 'ೞ' ಎಂಬುದು 'ಳ'ವೇ. ಅದರ ಉಚ್ಚಾರಣೆ ಬಹಳ ಕಷ್ಟ. ಆದ್ದರಿಂದ ತನ್ನ ಕಾವ್ಯದಲ್ಲಿ ರಳ ಕುಳ ಕ್ಷಳಗಳೆಂಬ ವ್ಯತ್ಯಾಸಗಳನ್ನು ವಿಚಾರಿಸಬೇಡಿ; ತಾನು ಆ ನಿಯಮವನ್ನು ಪಾಲಿಸುವುದಿಲ್ಲವೆಂದು ಆತನು ಘಂಟಾಘೋಷವಾಗಿ ಹೇಳುತ್ತಾನೆ. ಆತನ ಈ ಸ್ವತಂತ್ರ ಮನೋವೃತ್ತಿ ಸಂಪೂರ್ಣ ಅರಳಿರುವುದು ಆತನ ರಗಳೆಗಳಲ್ಲಿ.

ಹನ್ನೆರಡನೆಯ ಶತಮಾನದ ಧಾರ್ಮಿಕಕ್ರಾಂತಿಯೆಂಬ ಮೆಕ್ಕಲು ಭೂಮಿಯ ಮೇಲೆಯೇ ಬೆಳೆದು ನಿಂತಿರುವ ಮಹೋನ್ನತ ವಟವೃಕ್ಷ, ಹರಿ

ಹರದೇವ. ಭೂಮಿಯಲ್ಲಿ ಬೇರುಬಿಟ್ಟು ಆಕಾಶದಲ್ಲಿ ಅರಳಿರುವ ಆ ಮಹಾ ವೃಕ್ಷದ ಎತ್ತರ ಬಿತ್ತರಗಳನ್ನು ಮಹತ್ತಾಗಿ ಬೆಳಿಸಲು ಸಹಾಯಕವಾಗಿರುವ ಬಿಳಲುಗಳಂತಿವೆ, ಆತನ ರಗಳೆಗಳು. ಅವುಗಳ ಸಂಖ್ಯೆ ನೂರ ಆರೆಂದು ನಿಶ್ಚ ಯಿಸಲಾಗಿದೆ. ಇವು ಒಂದೊಂದೂ ಹರಪಾರಮ್ಯವನ್ನು ಸಂಸ್ಥಾಪಿಸ ಹೊರಟು ಕೃತಕೃತ್ಯವಾಗಿವೆ. ಈ ರಗಳೆಗಳನ್ನು ಸ್ಥೂಲವಾಗಿ ಕಥನಾತ್ಮಕ ಭಾವಗೀತಾತ್ಮಕವೆಂದು ಎರಡು ಪಂಗಡಗಳಾಗಿ ವಿಂಗಡಿಸಬಹುದು. ವೀರ ಶೈವರಲ್ಲಿ ಅರವತ್ತು ಮೂವರು ಪುರಾತನರು ಪ್ರಸಿದ್ಧರಾಗಿದ್ದಾರೆ. ಇವರೆ ಲ್ಲರೂ ಬಹುಮಟ್ಟಿಗೆ ತಮಿಳರು. ಸುಮಾರು ಕ್ರಿ.ಶ. ೧೧೪೫ರಲ್ಲಿದ್ದ ಶಕ್ಕಿ ಳಾರ್ ಎಂಬ ತಮಿಳುಕವಿ 'ಪೆರಿಯ ಪುರಾಣಂ' ಎಂಬ ತನ್ನ ಕಾವ್ಯದಲ್ಲಿ ಈ ಪುರಾತನರ ಕಥೆಯನ್ನು ಬಿತ್ತರಿಸಿದ್ದಾನೆ. ಹರಿಹರಕವಿಯು ಈ ಕಾವ್ಯದ ಆಧಾರದ ಮೇಲೆ ತನ್ನ ಹಲವು ರಗಳೆಗಳನ್ನು ಬರೆದಿದ್ದಾನೆ. ಆದರೆ ಮೂಲ ವನ್ನು ಆಮೂಲಾಗ್ರವಾಗಿ ಓದಿ ನೋಡದ ಹೊರತು ಆದರ ವಿಚಾರದಲ್ಲಿ ಹರಿಹರನ ಋಣ ಎಷ್ಟೆಂಬುದನ್ನು ನಿರ್ಧರಿಸುವುದು ಕಷ್ಟ. ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ತಮ್ಮ 'ಹಂಪೆಯ ಹರಿಹರ' ಎಂಬ ಪುಸ್ತಿಕೆಯಲ್ಲಿ 'ಪೆರಿಯ ಪುರಾಣದ ಹೆಸರುಗಳಲ್ಲಿ ಕೆಲವು ಹರಿಹರನಲ್ಲಿಲ್ಲ. ಅಲ್ಲದೆ ಅರವತ್ತುಮೂರಕ್ಕಿಂತ ಹೆಚ್ಚಾದ ಹೆಸರುಗಳು ಅದರಲ್ಲಿ ಇರುವಂತೆ ಕಾಣುತ್ತದೆ........ಅರವತ್ತುಮೂವರ ಕಥಾಸಾರಾಂಶವನ್ನು ಕೊಟ್ಟ ಮೇಲೆ ಹರಿಹರನು ಕರಿಕಾಲ, ಸಿಂಬಿಯಕ್ಕ, ಮಾದಾರ ಚನ್ನಯ್ಯ—ಈ ಮೂವರ ಕಥೆಗಳನ್ನು ಸೇರಿಸಿ ಒಟ್ಟು ಅರವತ್ತಾರು ಪುರಾತನರು ಎಂದು ಹೇಳಿದ್ದಾನೆ' ಎಂದು ತಿಳಿಸುತ್ತಾರೆ. ತಾನು ಸ್ವೀಕರಿಸಿರುವ ಕಥೆಗಳಲ್ಲಿ ಹರಿಹರನು ಬೇಕಾ ದಷ್ಟು ಬದಲಾವಣೆಗಳನ್ನು ಮಾಡಿರುವನೆಂದೂ ಅವರು ಅಭಿಪ್ರಾಯಪಡು ತ್ತಾರೆ. ಹರಿಹರನು ಪುರಾತನರನ್ನು ಮಾತ್ರವೇ ಅಲ್ಲದೆ ಅಲ್ಲಮ, ಬಸವಣ್ಣ ಇತ್ಯಾದಿ ಇಪ್ಪತ್ತೆಂಟು ನೂತನರ ಕಥೆಗಳನ್ನೂ ರಗಳೆಯಲ್ಲಿ ಬರೆದಿದ್ದಾನೆ. ಈ ನೂತನರಲ್ಲಿ ಹಲವರನ್ನು ಆತ ಪ್ರತ್ಯಕ್ಷವಾಗಿಯೇ ಕಂಡಿದ್ದರೂ ಇರ ಬಹುದು ; ಉಳಿದವರ ವಿಚಾರದಲ್ಲಿ ಅವರನ್ನು ಕಂಡವರು ಹೇಳಿದ ಕಥೆಗಳು ಆತನಿಗೆ ಆಧಾರವಾಗಿರಬಹುದು. ಈ ನೂತನ ಪುರಾತನರನ್ನು ಕುರಿತು ಬರೆದ ರಗಳೆಗಳು ಕಥನಾತ್ಮಕ ರಗಳೆಗಳು. ಇಲ್ಲಿನ ಕಥೆಗಳು ತಮಿಳು ಗ್ರಂಥದ

ಆಧಾರದಿಂದ ಬರೆದುವಿರಲಿ, ತಾನೇ ಕಂಡು ಅಥವಾ ಕೇಳಿ ಬರೆದವುಗಳಿರಲಿ, ಅವುಗಳಲ್ಲೆಲ್ಲಾ ಹರಿಹರನ ವ್ಯಕ್ತಿತ್ವ ತನ್ನ ಚಿರಮುದ್ರೆಯನ್ನೊತ್ತಿರುವು ದೆಂಬುದರಲ್ಲಿ ಸಂದೇಹವಿಲ್ಲ.

ಹರಿಹರನ ಭಾವಗೀತಾತ್ಮಕವಾದ ರಗಳೆಗಳು ಸುಮಾರು ಹತ್ತು ಹನ್ನೆರಡು ಇವೆ. ಇವುಗಳಲ್ಲಿ ಪಂಚಾಕ್ಷರಿ, ವಿಭೂತಿ, ರುದ್ರಾಕ್ಷಿ ಇತ್ಯಾದಿಗಳ ಮಹಿಮೆಯನ್ನು ಎತ್ತಿತೋರಿಸುವ ಹಲವು ವಸ್ತುನಿಷ್ಠವಾದವು; ಪಿಂಡೋತ್ಪತ್ತಿ, ಪುಷ್ಪ ಇತ್ಯಾದಿ ಕೆಲವು ವ್ಯಕ್ತಿನಿಷ್ಠವಾದುವು. ಈ ವ್ಯಕ್ತಿನಿಷ್ಠವಾದ ರಗಳೆಗಳಲ್ಲಿ ಹರಿಹರನ ಆತ್ಮಕಥೆ ಸ್ವಲ್ಪಮಟ್ಟಿಗೆ ವ್ಯಕ್ತವಾಗಿದೆಯೆಂದು ಪಂಡಿತರು ಊಹಿಸುತ್ತಾರೆ. ಆ ಊಹೆಯಂತೆ ಹರಿಹರನು ಸಂಸಾರಿಯಾಗಿ ಹೆಂಡತಿ ಮಕ್ಕಳೊಡನೆ ಜೀವನದ ಸುಖದುಃಖಗಳನ್ನು ಅನುಭವಿಸಿದನೆಂದು ಹೇಳಬೇಕಾಗುತ್ತದೆ. ಆತನ 'ಪಿಂಡೋತ್ಪತ್ತಿ ರಗಳೆ' ಯಲ್ಲಿ ಬರುವ ಈ ಸಾಲುಗಳನ್ನು ಗಮನಿಸಿ—ಜೀವಾಣುವು ತಾಯಿಯ ಗರ್ಭವನ್ನು ಪ್ರವೇಶಿಸಿ ದಂದಿನಿಂದ ಹುಟ್ಟಿ ಬೆಳೆದು ಯೌವನಸ್ಥನಾಗುವವರೆಗಿನ ಕಷ್ಟ ಕೋಟಲೆ ಗಳನ್ನು ಜೀವನದಲ್ಲಿ ಜಿಹಾಸೆ ಹುಟ್ಟುವಂತೆ, ವೈರಾಗ್ಯ ಒಡಮೂಡುವಂತೆ ವರ್ಣಿಸಿ, ಕವಿಯು

> ಬಳಿಕ ಯವ್ವನಮಾಗೆ ತಾಯ್ ತಂದೆಗಳ್ ಕಂಡು
> ತೀದೊಂದು ಮದುವೆಯಂ ಮಾಡಲ್ ಮನಂಗೊಂಡು
> ................... ........................................
> ...........................................................
> ಪಶುವಿನ ಕೊರಳೊಳೊಂದು ಪಾಶಮಂ ಬಿಗಿವಂತೆ
> ಮಿಸುಕದಂತಲ್ಲೊಂದು ಎಳೆಮರನ ಬಿಗಿವಂತೆ
> ದೈತೆಯಂ ತಂದೊರ್ಬಳಂ ಮದುವೆಯಂ ಮಾಡಿ

ಜೀವಿಯನ್ನು ಸಂಸಾರಬಂಧನಕ್ಕೆ ಸಿಲುಕಿಸಿದರು. ದೈತೆ (ರಾಕ್ಷಸಿ)ಯನ್ನು ಮದುವೆಯಾಗಿ, ವಿರಸದಾಂಪತ್ಯವಾದುದರಿಂದಲೋ, ಯವ್ವನ ಧನ ರೂಪ ಗಳ ಜೊತೆಗೆ ದುರ್ಬೋಧರ ಸಹವಾಸದಿಂದಲೋ ಆವನು

> ತಲೆಹುಳಿತ ನಾಯಂತೆ ಪುಗದ ಮನೆಯಂ ಪೊಕ್ಕು
> ಲಲನೆಯರ ನುಣ್ಣನೆಯ ಚೋಹಕ್ಕೆ ಮನವಿಕ್ಕು

ಅಡ್ಡಹಾದಿಯನ್ನು ಹಿಡಿದ. ಕೆಲ ಕಾಲ

ಪುಳಿತ ಪೆಣನಂ ಕಡಿವುತಿರ್ಪ ಪಳಿ ನಾಯಂತೆ
ಕಳಿತ ಮಾಂಸಕ್ಕಳುಪಿ ತಿಂಬ ಬಳ್ಳುವಿನಂತೆ

ಇಂದ್ರಿಯಕ್ಕೆ ಆಳಾಗಿ 'ಸಂತತಂ ಯವ್ವನದ ನರಕದೊಳ್ ಮುಳುಗಿರಲು' ಕೈಲಿದ್ದ ಕಾಸೂ ಮೈಲಿದ್ದ ಶಕ್ತಿಯೂ ಮುಗಿದವು. ಅವನ ವಿಲಾಸದ ಹೆಣ್ಣುಗಳು

ನಡೆವೆಣನೆ ನುಡಿವೆಣನೆ ಬಾಳ್ವೆಣನೆ ಪೋಗೆಂದು
ಬಡಿಯದಿರು ಬಾಲವಂ ಸುಡು ನಾಯಿ ಥೂ ಎಂದು

ಆತನನ್ನು ತೊಲಗಿಸಿದರು. ಅವನಿಗೆ ಬುದ್ಧಿ ಬಂತು. ಆದರೆ ಕಾಲ ಮಿಂಚಿ ಹೋಗಿತ್ತು. ಮನೆ ಬರಿದು, ಮೈತುಂಬ ಸಾಲ. 'ಸಾಲದಿಂ ಸಿಗ್ಗಾಗಿ ಪಲ ಉಪವಾಸಂ ಪತ್ತಿ' ಸಂಕಟಪಟ್ಟ. 'ಬಾಲಕರ್ ಬಾಲೆಯರ್ ಕೊಯಿದು ತಿನುತಿರೆ ಮುತ್ತಿ,' ಆ ಮಕ್ಕಳ ಕಾಟಕ್ಕಾಗಿ, ಅವರ ಹೊಟ್ಟೆ ಬಟ್ಟೆಗಳಿಗಾಗಿ ಆರಂಬವನ್ನು ಕೈಕೊಳ್ಳಬೇಕಾಯಿತು. ಅದು ವ್ಯರ್ಥವಾಗಲು ವ್ಯಾಪಾರಕ್ಕೆ ಕೈಹಾಕಿದ. ಅದರಲ್ಲಿ 'ಮೊದಲುಮಂ ಲಾಭಮಂ ಕಾಣದೆ—ಅಸಲು ಲಾಭಗಳೆರಡೂ ಇಲ್ಲದಂತಾಗಲು—ಸೇವಾವೃತ್ತಿಯನ್ನು ಕೈಕೊಳ್ಳಬೇಕಾಯಿತು. ಅದು ಮತ್ತೂ ದುಃಖಕರವಾಗಿತ್ತು—

ಪತಿಯಪ್ಪ ನಿನ್ನನರಿಯದೆ ನರರ್ಗಾಳಾಗಿ
ಮತಿಗೆಟ್ಟು ಧೃತಿಗುಂದಿ ಮರ್ತ್ಯರ್ಗೆ ತೊತ್ತಾಗಿ
ನಡುವಿರುಳು ಪೋಗೆನಲು ನಾಲ್ಗಾವುದಂ ಪೋಗಿ
ಎಡಹುತ್ತುಂ ತಾಗುತ್ತುಂ ಲಘುವಾಗಿ ಮರುಳಾಗಿ

ಜೀವ ರೋಸಿತು; ಮರುಗಿ ಕತಕತ ಕುದಿಯಿತು: ಭಿಕ್ಷಾಟನೆಯನ್ನು ಕೆಯ್ಕೊಂಡ.

ಎಂಟುಗೇಣುದ್ದಮಂ ಗೇಣುದ್ದದೊಳ್ ಸಿಲಿಸಿ
ಎಂಟುಮುಡಿ ಕಾರ್ಪಣ್ಯಮಂ ಮುಖದೊಳಳವಡಿಸಿ
ಸಿಂದವರ್ಗಳಂ ಬೇಡಿ ನೆರೆದವರ್ಗಳಂ ಬೇಡಿ
ಬಂದವರ್ಗಳಂ ಬೇಡಿ ಬಲ್ಲವರ್ಗಳಂ ಬೇಡಿ
ತಾನುಳಿಯನುಳಿದೆಲ್ಲರನಾವಗಂ ಬೇಡಿ
ಏನೆಂಬೆನೆಲ್ಲಿಯುಂ ಪಡೆಯದೆ ಮೊಗಂ ಬಾಡಿ

ಈ ಕಟು ಅನುಭವಗಳಿಂದ ಆತನಿಗೆ, ಸಂಸಾರವು ದುಃಖಮೂಲವೆಂದು ಮನದಟ್ಟಾಗಿ, 'ಆನೇಕೆ ಸಂಸಾರವೇಕೆ ಕೇಳೆಲೆ ತಂದೆ, ನೀನು ಎನಗೊಡ್ಡಿದ ಮಹೇಂದ್ರಜಾಲಂ ತಂದೆ' ಎಂಬ ಘಟ್ಟವನ್ನು ಮುಟ್ಟಿದ. ಶಿವನ ಕರುಣೆಯನ್ನು ಬೇಡಿದ.

ನಿತ್ಯಲಿಂಗಾರ್ಚನೆಯೊಳಿರಿಸೆನ್ನನೆಲೆ ದೇವ
ಸತ್ಯ ಶರಣರ ನಡುವೆ ನಲಿಸೆನ್ನನೆಲೆ ದೇವ.

ಭಕ್ತನ ಈ ಆರ್ತನಾದ ಭಗವಂತನನ್ನು ಮುಟ್ಟಿತು. ಆತನು ಸರ್ವಸಂಗ ಪರಿತ್ಯಾಗ ಮಾಡಿ, ಶಿವಪೂಜೆ ಶಿವಕೀರ್ತನೆಗಳಿಂದ ಆನಂದದಲ್ಲಿ ಮಗ್ನನಾದ.

'ಪಂಪೋತ್ಪತ್ತಿಯ ರಗಳೆ'ಯಲ್ಲಿ ಕವಿಯ ಪೂರ್ವಾಶ್ರಮಜೀವನ ಚಿತ್ರಿತವಾಗಿದ್ದರೆ—ಹರಿಹರ ಕವಿಯ ಕಾವ್ಯಗಳಲ್ಲಿ ಕಾಣಬರುವ ಜೀವನದ ಹರವನ್ನು ನೋಡಿದರೆ ಆತನ ಲೋಕಾನುಭವ ಬಹು ವಿಸ್ತಾರವಾದುದೆಂದೇ ಅನ್ನಿಸುತ್ತದೆ—'ಪುಷ್ಪ ರಗಳೆ'ಯಲ್ಲಿ ಆತನ ವಿರಕ್ತ ಜೀವನದ ದಿವ್ಯ ಸಂದರ್ಶನವಾಗುತ್ತದೆ. ಆತನು ಬೆಳಗಿನ ಝಾಮಕ್ಕೆ ಎದ್ದು, ವಿಭೂತಿಯನ್ನು ಧರಿಸಿ, ಹೂವಿನ ಕರಡಿಗೆಯೊಂದನ್ನು ಕೈಲಿ ಹಿಡಿದು, ಶಿವಗೀತಗಳನ್ನು ಹರುಷದಿಂದ ಹಾಡುತ್ತಾ, ಶಿವಭಕ್ತರ ಕೀರ್ತಿಯನ್ನು ಕೈವಾರಿಸುತ್ತಾ 'ಪರಿಮಳದ ಸುಗ್ಗಿ, ಸೌರಭದ ಸಂದಣಿಯೆನಿಪ' ಹೂದೋಟಕ್ಕೆ ಹೊರಡುತ್ತಾನೆ. ಬಾಯಿ ಹಾಡುತ್ತಿದೆ, ಮನಸ್ಸು ಕುಣಿಯುತ್ತಿದೆ. ಚೆಂದ ಚೆಂದದ ಕುಸುಮವೃಂದವನ್ನು ನಲಿನಲಿದು ನೋಡುತ್ತಾನೆ

ಅಳಿಯೆರಗದನಿಲನಲುಗದ ರವಿಕರಂ ಪುಗದ
ಬೆಳೆಬೆಳೆದು ನಳನಳಿಸಿ ಮಘಮಘಿಸಿ ಕವಲಿಡಿದ

ಇರುವಂತಿಗೆಯ ಪುಷ್ಪವನ್ನು ಕಂಡು 'ಪಶುಪತಿಯಂಗೋಲೈಸ ಪೂವ ನೀಡಾ' ಎಂದು ಅದನ್ನು ಬೇಡಿ 'ತನಗಿಂಪು ತೀವಿರ್ದ ಪೊಚ್ಚ ಪೊಸ ಪೂಗಳಂ ಕೊಂಡು, ಕುಕಿಲಿದುಪ್ಪತುಂ ಕುಣಿವುತುಂ ನಡೆತಂದು' ಸಂಪಗೆಯನ್ನು ಕಾಣುತ್ತಾನೆ. ಅದನ್ನು ಕುರಿತು—

ಎನನ್ನ ಸಂಪಿಗೆಯೆ ಶಿವನ ಸಿರಿಮುಡಿಗಿಂದು
ನೀನೀವ ಪೊಸ ಕುಸುಮಮಂ ನೀಡು ನೀಡೆಂದು

ಅವುಗಳನ್ನು ಕುಯ್ದುಕೊಂಡು ಸೇವಂತಿಗೆಯ ಹತ್ತಿರಕ್ಕೆ ಬರುತ್ತಾನೆ

ದೇವಂಗೆ ದೇವರ ಶಿಖಾಮಣಿಯ ಜಡೆಮುಡಿಗೆ
ಸೇವಂತಿ! ನೀನೀವ ಪೂಗಳಂ ನೀಡೆನಗೆ

ಎಂದು ಪನ್ನೀರ ಪರಿಮಳದ ಆ ಹೂಗಳನ್ನು ಶೇಖರಿಸಿದ ಮೇಲೆ ಮಲ್ಲಿಗೆ ಮಾಧವಿಗಳನ್ನೂ ಆದಿಗರ್ಂದಿ ಪುಷ್ಪಗಳನ್ನೂ ಬೇಡಿ ಪಡೆದು, ಜಾಜಿಯ ಬಳಿಗೆ ಬಂದು

ಜಾತಿ ನೀನೇ ಸಕಲ ಪುಷ್ಪ ಜಾತಿಗೆ ಜಾತಿ
ಭೂತೇಶ್ವರನ ಜಡೆಯ ಮುಡಿಗೇರಿದೊಡೆ ಜಾತಿ

ಎಂದು ಅದನ್ನು ಹೊಗಳಿ, ಹೊಸ ಕುಸುಮಗಳನ್ನು ಪಡೆದು ಕೇತಕಿಯ ಬಳಿಗೆ ಬರುತ್ತಾನೆ. ಅದನ್ನು ಕಂಡು ಆತನಿಗೆ—

ಹೊರಗೆ ಮುಳ್ಳೊಳಗೆ ಕಂಪಕ್ಕಕ್ಕು ನಿನ್ನ ಪರಿ
ಹೆರೆಸೂಡಿದನ ಗುಪ್ತ ಭಕ್ತನಂತಿರ್ಪ ಪರಿ
ಆಹ ದೆಸೆದೆಸೆಗೆ ಬೀರುವ ಸುಗಂಧದ ಸೂರೆ
ಆಹ ಕೇತಕಿ ನಿನ್ನ ಪರಿಮಳದ ಪರಿ ಬೇರೆ
ಪರಿಮಳಂ ಸುಳಿಗೊಂಡು ಬೆಳೆದು ಕವಲೆರಿಯಿತ್ತೊ!
ಉರವಣಿಸಿ ಬಳಿವ ಪರಿಮಳಕೆ ಗರಿಮೂಡಿತ್ತೊ!

ಎನ್ನಿಸುತ್ತದೆ. ಕೇತಕೀ ಪುಷ್ಪಗಳನ್ನು ಸಂಗ್ರಹಿಸಿದ ಮೇಲೆ ಪಡ್ವಳಿ, ಬಿಳಿಯ ಕಸ್ತೂರಿ, ಮೊಲ್ಲೆ, ಮರುಗ, ಮುಡಿವಾಳಗಳನ್ನು ಮಾತನಾಡಿಸಿ ದವನದ ಹತ್ತಿರಕ್ಕೆ ಬರುತ್ತಾನೆ. ಅದನ್ನು ಕಂಡರೆ ಕವಿಗೆ ಬಲು ಪ್ರೀತಿ

ದವನವೇ ಶಿವನ ಪರಿಮಳದ ಹಬ್ಬವೆ ಬಾರ
ಭುವನದೊಳ್ ನಿನಗೆ ಸರಿಯಿಲ್ಲ ಸೌರಭಸಾರ

ಎಂದು ಕುಣಿಯುತ್ತಾ ಹೋಗಿ ಅದನ್ನು ಶೇಖರಿಸುತ್ತಾನೆ. ಪರಿಮಳದರಸಿ ಸುರಹೊನ್ನೆ, ಕಮಲ, ನೆಯ್ದಿಲೆ, ಲಿಂಗದೊಲವಾದ ಚಂಗಣಗಿಲೆ ಇತ್ಯಾದಿ ಹೂಗಳೆಲ್ಲವನ್ನೂ ಬಿಡಿಸಿಕೊಂಡು, ಒಂದು ಎಳೆಯ ಮಾವಿನ ಮರದ ಕೆಳಗಿದ್ದ ಚಂದ್ರಕಾಂತ ಶಿಲಾತಲದಲ್ಲಿ ಕುಳಿತು, ಕೆಳಗೆ ಬಾಳೆಯೆಲೆಯನ್ನು ಹಾಸಿ, ಅದರ ಮೇಲೆ ತಿರಿತಂದ ಪುಷ್ಪಗಳನ್ನೆಲ್ಲ ಮೃದುವಾಗಿ ಸುರಿದು ಸರಸಿಜ ಸೂತ್ರದಿಂದ ಅವುಗಳನ್ನು ಮಾಲೆಕಟ್ಟುತ್ತಾನೆ. ಅವುಗಳನ್ನು ಆತ ಬಳಸುವ ರೀತಿ ಎಷ್ಟು ಕೋಮಲವಾಗಿದೆಯೆಂದರೆ—

ಕೈ ಮುಟ್ಟೆ ಮುಟ್ಟದೆ ಮನಂ ಮುಟ್ಟೆ ಕಟ್ಟುತುಂ
ಕೈ ಮರೆದು ಪೂ ಬೀಳೆ ಮಿಗೆ ಸತ್ತು ಹುಟ್ಟುತುಂ
ನೋಡಿದಡೆ ಪೂ ಬಾಡುಗೆಂದು ಕಣ್ಮುಚ್ಚುತುಂ
ನಾಡೆ ನೆನೆದೊಡೆ ಕುಂದುಗೆಂದು ಮನವೆಚ್ಚುತುಂ

ಅವುಗಳ ಹಾರವನ್ನು ಕಟ್ಟುತ್ತಾನೆ. ಆ ವೇಳೆಗೆ ದುಂಬಿಗಳು ಹೂಗಳನ್ನರಸುತ್ತಾ ತೋಟಕ್ಕೆ ಬರುತ್ತವೆ. ಅಲ್ಲಿ ಹೂಗಳೇ ಇಲ್ಲ! ಅವು 'ಪರಿಮಳದ ಪಥವಿಡಿದು' ಹರಿಹರನ ಬಳಿಗೆ ಬರುತ್ತವೆ. ಆ ಭಗವದ್ಭಕ್ತ ಅವುಗಳನ್ನು ನಿವಾರಿಸುತ್ತಾ—

ಜೇಡೆಲಿರಿ ಹಂಪೆಯರಸನ ಕುಮಾರಂ ಪಿತಗ
ಸಾಡಂಬರಂಗಳ ಕೊಳ್ಳಸಾರಡಿಗೆರಗ
ಅಳಿಯೂಸೆ ಬೇಡ, ನಿಮಗಿಲ್ಲಿ ಸೋಲುವರಿಲ್ಲ
ಗಳಗಳನೆ ಬಂದಂತೆ ಮರಳಿ ಗಳಗಳನೆಲ್ಲ

ಎಂದು ಗದರಿಸಿ, ಒಂದೆರಡು ಸಂಪಗೆಯರಲ್ಗಳನ್ನು ಅವುಗಳ ಕಡೆ ಬೀಸಿ ಓಡಿಸುತ್ತಾನೆ. ಅನಂತರ ಪರಮೇಶ್ವರನ ಗುಡಿಗೆ ಬಂದು, ಆತನು ನಿದ್ದೆಯಿಂದ ಏಳುವವರೆಗೂ ಕಾದಿದ್ದು, ಅನಂತರ ಮೆಲ್ಲನೆ

ಏನೆನ್ನ ಶಿವನೆ! ಉಪ್ಪವಡಿಸಿರ್ದಾ ತಂದೆ
ಏನಯ್ಯ! ತಳುವಿರ್ದನೆನುತಲಿರ್ದಾ ತಂದೆ
ಅಳಿಗಳೆರಗದ ಗಂಧವಹನಲುಗದಲರ್ಗಳಂ
ಎಳಸಿ ತಂದೆಂ ತಂದೆ! ದೇವ ಪೊಸ ಪೂಗಳಂ

ಎಂದು ಹೇಳಿ, ಹತ್ತಿರಕ್ಕೆ ಹೋಗಿ ಸೇವಂತಿಗೆ ಹೂವಿನ ಪನ್ನೀರಿಂದ ಮುಖ ತೊಳೆದು, ಪರಾಗದ ವಿಭೂತಿಯಿಟ್ಟು, ಕೇತಕಿಯ ನುಣ್ಣೆಸಳ್ಗಳಿಂದ ಶಿವನ ಜಟೆಯನ್ನು ಸಿಕ್ಕುಬಿಡಿಸಿ, ಶಶಿಕಳೆ ನೋಯದಂತೆ ಸುರನದಿ ತುಳುಕದಂತೆ ಅದನ್ನು ಗಂಟುಹಾಕಿ, ಪುಷ್ಪದಿಂದ ಅಲಂಕರಿಸುತ್ತಾನೆ. ಭಗವಂತನ ಅರ್ಚನೆ ಕೀರ್ತನೆಗಳಲ್ಲಿ ಆತನು ಮಯ್ಮರೆದು ಆನಂದಸಾಗರದಲ್ಲಿ ಮುಳುಗಿ ಹೋಗುತ್ತಾನೆ. ಆತನ ಪುಷ್ಪಾಪಚಯ ಪರಶಿವನ ಅಲಂಕರಣವೊಡನೆ ಕನ್ನಡ ಸಾಹಿತ್ಯದೇವಿಯ ಅಲಂಕರಣವಾಗಿಯೂ ತನ್ನ ಅಸ್ತಿತ್ವವನ್ನು ಸಾರ್ಥಕ ಪಡಿಸಿಕೊಂಡಿದೆ.

ಹರಿಹರಕವಿಯು ಕಥನಾತ್ಮಕವಾದ ರಗಳೆಗಳಲ್ಲಿ ಕಾಣಬರುವ ಜಗತ್ತು ವಿಶಾಲವಾಗಿರುವಷ್ಟೆ ವೈವಿಧ್ಯಮಯವಾಗಿದೆ. ಅಷ್ಟೇ ಅಲ್ಲ, ಅಲ್ಲಿನ ವಾತಾವರಣವೆಲ್ಲವೂ ಭಕ್ತಿಭರಿತವಾದುದು. ಅಲ್ಲಿ ಸಂಚರಿಸುವವರು ಶಿವಶರಣರು. ಅವರಲ್ಲಿ ಮಕ್ಕಳಿಂದ ಹಿಡಿದು ಮುದುಕರವರೆಗೆ ಎಲ್ಲ ವಯಸ್ಸಿನವರೂ ಇದ್ದಾರೆ. ಅವರ ಸ್ವಭಾವ, ಅಭಿರುಚಿ, ಜೀವನದೃಷ್ಟಿ, ಭಕ್ತಿಮಾರ್ಗ–ಇತ್ಯಾದಿಗಳಲ್ಲಿ ಎಷ್ಟೋ ಭಿನ್ನತೆಯಿದೆ. 'ಕಾಯಕವೇ ಕೈಲಾಸ'ವೆಂಬ ತತ್ತ್ವ ಎಲ್ಲರಿಗೂ ಸಮಾನವಾದರೂ ಒಬ್ಬ ಬೇಡ, ಒಬ್ಬ ಬೆಸ್ತ, ಒಬ್ಬ ಅಗಸ, ಒಬ್ಬ ಕುಂಬಾರ–ಹೀಗೆ ನಾನಾ ವೃತ್ತಿಯ ಜನ ಅವರು. ಅವರಲ್ಲಿ ಗಂಡಸರುಂಟು ಹೆಂಗಸರುಂಟು ಹಸುಗೂಸುಗಳುಂಟು. ಇಲ್ಲಿನ ಶರಣರೆಲ್ಲರೂ ನಿಸ್ಸೀಮರಾದ ಭಕ್ತರಾಗಿರುವಂತೆ ತಾವು ಕೈಕೊಂಡ ವೃತ್ತಿಯಲ್ಲಿಯೇ ಒಂದು ಆದರ್ಶವನ್ನು ಕಲ್ಪಿಸಿಕೊಂಡು, ಆ ವೃತ್ತಿಯನ್ನೇ ಅಧ್ಯಾತ್ಮಕ್ಕೆ ಅಳವಡಿಸಿಕೊಂಡವರು. ತನ್ನ ಆತ್ಮೋನ್ನತಿಯನ್ನು ಸಾಧಿಸಿಕೊಂಡಿರುವ ಹರಿಹರದೇವನಂತಹ ಕವಿಯ ಕಾವ್ಯಸೃಷ್ಟಿಯಲ್ಲಿ ಅವರೆಲ್ಲರೂ ಜೀವಂತರಾಗಿ ವ್ಯವಹರಿಸುತ್ತಾರೆ. ಕವಿಯ ಆತ್ಮ ದೇವರಿಗಾಗಿ ಹಂಬಲಿಸಿತು; ತನ್ನ ಆತ್ಮೋದ್ಧಾರವನ್ನು ಸಾಧಿಸಿತು. ತನ್ನಂತೆಯೆ ಅದನ್ನು ಸಾಧಿಸಿಕೊಂಡ ಶಿವಶರಣರ ಜೀವಿತಗಳನ್ನು ಆತನ ಕೈಯ ಕುಂಚ ಅತ್ಯಂತ ಸ್ವಾಭಾವಿಕವಾಗಿ ಚಿತ್ರಿಸಬಲ್ಲುದು. ಅವರ ಕಥೆಗಳನ್ನು ಹೇಳುವಲ್ಲಿ ಕವಿಗೆ ಅಪಾರವಾದ ಉತ್ಸಾಹ. ಆ ಉತ್ಸಾಹದ ತುಂಬು ನೆರೆಯಲ್ಲಿ ಕಥಾಪ್ರವಾಹ ಓದುಗರನ್ನೂ ಎಳೆದುಕೊಂಡು ವೇಗವಾಗಿ ತನ್ನ ಗಮ್ಯಸ್ಥಾನವನ್ನು ಮುಟ್ಟುತ್ತದೆ. ಕವಿಯ ಕಥನಾತ್ಮಕ ರಗಳೆಗಳಲ್ಲಿ ಯಾವುದನ್ನು ಓದಿದರೂ ಇದು ಸ್ಪಷ್ಟವಾಗುತ್ತದೆ. ಆತನ ದೃಷ್ಟಿಯೆಲ್ಲವೂ ಕಥಾನಾಯಕನಲ್ಲಿ ಕೇಂದ್ರೀಕೃತವಾಗಿ, ತನ್ನ ಹೆಗ್ಗುರಿಯನ್ನು ನೇರವಾಗಿ ಮುಟ್ಟುತ್ತದೆ.

ಅಧ್ಯಾತ್ಮದ ಮಹೋನ್ನತಿಗೇರಿರುವ ಹರಿಹರಕವಿಯ ಮನಸ್ಸು ಸಾತ್ತ್ವಿಕವಾಗಿ, ಪರಿಶುದ್ಧವಾಗಿ, ಮಗುವಿನ ಮನಸ್ಸಿನಷ್ಟು ಸರಳವಾಗಿ ಹೋಗಿದೆ. ಇಂತಹ ಮುಗ್ಧ ಸರಳತೆಗೆ ಪರಶಿವನು ಬಹುಬೇಗ ಒಲಿಯುವನು. 'ಪುಷ್ಪರಗಳೆ'ಯಲ್ಲಿ ಹರಿಹರದೇವನ ಈ ಮುಗ್ಧ ಸರಳತೆಯನ್ನು ನಾವಾಗಲೇ ಕಂಡಿದ್ದೇವೆ. ಆತ ಶಿವನೊಡನೆ ಮಾತನಾಡುತ್ತಾನೆ, ಆತನ ತಲೆ ಬಾಚು

ತ್ತಾನೆ, ಹೂ ಮುಡಿಸುತ್ತಾನೆ. ಊಟ ಮಾಡಿಸುತ್ತಾನೆ. ಇಂತಹ ಸಾತ್ವಿಕ ಶಿವಭಕ್ತನ ಕವಿತಾಶಕ್ತಿ ಸೃಷ್ಟಿಸಿರುವ ಶಿವಶರಣರಲ್ಲಿಯೂ ಅದೇ ಮುಗ್ಧ ಸರಳತೆ ಕಂಡುಬರುವುದು ಆಶ್ಚರ್ಯವೇನೂ ಅಲ್ಲ. ಪರಮೇಶ್ವರನು ಹಾಲಾ ಹಲವನ್ನು ಕುಡಿದನೆಂದು ಕೇಳಿ ಮುಗ್ಧಭಕ್ತನಾದ ರುದ್ರಪಶುಪತಿ ಗೋಗರೆ ಅಳುತ್ತಾ

ಉರಿಯೇಕೆ ಹೂವೇಕೆ ? ವಿಷವೇಕಮೃತವೇಕೆ ?
ಹರನೇಕೆ ಗರಳವೇಕಾನಿತ್ತ ಬರಲೇಕೆ ?

ಎಂದುಕೊಂಡು ಪಂಚಾಕ್ಷರಿಯ ಜಪದಿಂದ ಪರಶಿವನ ಅಪಮೃತ್ಯುವನ್ನು ಹೋಗಲಾಡಿಸುವೆನೆಂದು ನಿಶ್ಚಯಿಸಿದ. ಅದಕ್ಕಾಗಿ ಅವನು ಸಮುದ್ರಕ್ಕೆ ಹೋಗಿ, ಕುತ್ತಿಗೆಯುಮಟ್ಟ ನೀರಿನಲ್ಲಿ ನಿಂತು, ಏಕೈಕಮನಸ್ಸಿನಿಂದ ಪಂಚಾಕ್ಷರಿಯ ಜಪದಲ್ಲಿ ಮಗ್ನನಾದ. ಇದನ್ನು ಕಂಡು ನಾವಾರಾದರೂ ನಕ್ಕು ನುಡಿವಂತೆ ಕವಿಯೇ ಹೇಳುತ್ತಾನೆ—

ಜ್ವಲನಂ ಜ್ವರಂಗೊಂಡನೆಂದು ಮಂತ್ರಿಸುವಂತೆ
ಜಲಕೆ ಶೀತಂ ಬಂದುದೆಂದು ಭಾವಿಸುವಂತೆ
ಮಾರುತಂಗುರಿ ಪತ್ತಿತೆಂದು ಮಾಣಿಸುವಂತೆ

ಈ ಮುಗ್ಧಭಕ್ತ ಕಾಲಸಂಹಾರನ ಜೀವವುಳಿಸಹೊರಟಿದ್ದಾನೆ. ಬಾಹ್ಯ ಪ್ರಜ್ಞೆಯಿಲ್ಲದೆ ನಿಂತಿರುವ ಅವನ ದೇಹವನ್ನೆಲ್ಲಾ ಜಲಚರಗಳು ತಿಂದು ಹಾಕುತ್ತವೆ. ಅವನು ಬರಿಯ ಅಸ್ಥಿಪಂಜರವಾಗಿ ನಿಲ್ಲುತ್ತಾನೆ—ಆ ಅಸ್ಥಿಗಳು 'ಅಸ್ಥಿಮಾಲಾಧರಂಗರ್ಪಿತವಿವೆಂಬಂತೆ.' ಅದರೇನು ? ದೇಹ ಬಿದ್ದರೂ ನಿಷ್ಠೆ ಅಲುಗಲಿಲ್ಲ. ಶಿವನು ಕಪಟವೇಷದಿಂದ ಅವನಿಗೆ ಕಾಣಿಸಿ ಕೊಂಡು ಅವನನ್ನು ರೇಗಿಸಿ, ಕೊನೆಗೆ ಸ್ವಸ್ವರೂಪವನ್ನು ತೋರಿಸುತ್ತಾನೆ. ಇಂತಹ ಮುಗ್ಧ ಭಕ್ತಿ 'ಕೋಳೂರ ಕೊಡಗೂಸು'ನಲ್ಲಿ ಮತ್ತೂ ರಮ್ಯ ವಾಗಿದೆ. ಕೊಡಗೂಸು ಹತ್ತುವರುಷದ ಬಾಲೆ. ತನ್ನ ತಾಯಿ ನೈವೇದ್ಯ ಮಾಡುತ್ತಿದ್ದ ಹಾಲನ್ನು ಶಿವನು ಕುಡಿಯುವನೆಂದೇ ಅವಳ ಭಾವನೆ. ತಾನೇ ಒಮ್ಮೆ ಕುಡಿಸಬೇಕೆಂದು ಅವಳ ಆಸೆ. ಅಂತಹ ಸಮಯ ಸಿಕ್ಕಾಗ ಹಾಲಿನೊಡನೆ ಶಿವದೇವಾಲಯಕ್ಕೆ ಬಂದಳು. ಅಲ್ಲಿ ಕಲ್ಲಿನ ವಿಗ್ರಹ ಕುಡಿಯುವುದೆಂತು ? ಆದರೆ ಕೊಡಗೂಸಿಗೆ ಅದು ಕಲ್ಲಲ್ಲ, ಸಾಕ್ಷಾತ್ ಪರಮೇಶ್ವರ. ಮಾತನಾಡದೆ ಶಿವ ಸುಮ್ಮನಿರುವುದೇಕೆ ?

ಎಮ್ಮವ್ವೆ ಕಳುಹಿದಳದೇಕುಸಿರದಿರ್ದಪ್ಪೆ
ಎಮ್ಮಯ್ಯ ದಮ್ಮಯ್ಯ ಸುಮ್ಮನೇಕಿರ್ದಪ್ಪೆ
ನೊರೆಯಾರಿ ಬಿಸಿಗುಂದಿ ಸವಿಗೆಡುವುದೆಲೆ ದೇವ
ನೊರೆವೆರಸಿ ಸವಿವಾಲನಾರೋಗಿಸೆಲೆ ದೇವ

ಎಂದು ಕೇಳಿಕೊಂಡಳು. ಶಿವನಿಗೆ ಹಾಲಿಗಿಂತಲೂ ಅವಳ ಮಾತೇ ಹೆಚ್ಚು ರುಚಿ. ಆದ್ದರಿಂದ ಮತ್ತಷ್ಟು ಅದನ್ನು ಕೇಳಬೇಕೆಂಬ ಆಶೆ, ಸುಮ್ಮನಿದ್ದ. ಮುಗ್ಧಬಾಲೆ ಅಳುತ್ತಳುತ್ತಾ ಅಂಗಲಾಚಿಕೊಂಡಳು

ಹಾಲ್ಗುಡಿಯದಿರ್ದೊಡೆಮ್ಮವ್ವೆ ಬಡಿದಪಳಯ್ಯ
ಹಾಲ್ಗುಡಿಯದಿರೆ ಮನೆಗೆ ಹೋಗಲಂಜುವೆನಯ್ಯ
ಹಾಲನೆರೆಯದೆ ತಾಯನೆಂತು ನೋಡುವೆನಯ್ಯ
ಹಾಲನೆಂತಾದೊಡಂ ಕುಡಿಯಯ್ಯ, ಕುಡಿಯಯ್ಯ

ಹುಡುಗಿಯ ಈ ಮುಗ್ಧಸರಳತೆ ಶಿವನನ್ನು ಮೆಚ್ಚಿಸಿತು. ಆತ ಹಾಲು ಕುಡಿದ, ಬಾಲೆಗೆ ಮುಕ್ತಿಯಿತ್ತ.

ಈ ಕಥೆಗಳನ್ನು ಪ್ರತಿಕೃತಿದೃಷ್ಟಿಯಿಂದ ನೋಡುವುದಕ್ಕಿಂತಲೂ ಪ್ರತಿಮಾದೃಷ್ಟಿಯಿಂದ ಗಮನಿಸುವುದು ಹೆಚ್ಚು ಉಚಿತವೆಂದು ತೋರುತ್ತದೆ. ಮುಗ್ಧಸರಳತೆಗೆ ದೈವಶಕ್ತಿ ಎಷ್ಟು ಬೇಗ ಒಲಿಯುವುದೆಂಬುದು ಈ ಕಥಾ ಪ್ರತಿಮೆಯ ಹಿಂದಿರುವ ಸಂದೇಶ. ಎರಡರಿಯದ ಭಕ್ತಿ. ಶುದ್ಧ ಮನಸ್ಸು, ಕವಲಿಲ್ಲದ ನಂಬಿಕೆ, ನಿಷ್ಠೆ—ಇವು ಏನೂ ಅರಿಯದ ಎಳೆಯ ಮನಸ್ಸಿಗೆ ಅಥವಾ ಅಪಾರ ಸಾಧನೆಯಿಂದ ಬೆಳೆದ ಮನಸ್ಸಿಗೆ ಮಾತ್ರ ಸಾಧ್ಯ.

ಕಾಯಕವನ್ನು ಅಧ್ಯಾತ್ಮಕ್ಕೆ ಅಳವಡಿಸಿಕೊಂಡ ಶರಣರು ಹಲವರನ್ನು ಹರಿಹರಕವಿ ನಮಗೆ ತೋರಿಸಿದ್ದಾನೆ. ಅವರಲ್ಲಿ ಕುಂಬಾರ ಗುಂಡಯ್ಯನ ಚಿತ್ರ ಅತ್ಯಂತ ಮನೋಹರವಾಗಿದೆ. ಗುಂಡಯ್ಯನು ವೃತ್ತಿಯಲ್ಲಿ ಕುಂಬಾರ. ಆತನು ಸಂಪಾದಿಸಿದುದನ್ನೆಲ್ಲಾ ಶಿವಭಕ್ತರ ಸೇವೆಗೆ ಅರ್ಪಿಸಿ, ಭಗವಂತನನ್ನು ಮೆಚ್ಚಿಸಿದನು. ಆತನ ಭಕ್ತಿಗೆ ಒಲಿದ ಶಿವನು ಅವನು ಮಡಕೆಯನ್ನು ತಟ್ಟುವ ತಾಳಕ್ಕೆ ಸರಿಯಾಗಿ ನಿತ್ಯವೂ ನರ್ತನಮಾಡುತ್ತಾನೆ. ಕಥೆ ಇಷ್ಟೆ. ಆದರೆ ಹರಿಹರಕವಿಯು ಇಷ್ಟನ್ನೆ ಬಳಸಿಕೊಂಡು ಒಂದು ರಸದ ಮಡುವನ್ನೆ ನಿರ್ಮಿಸಿದ್ದಾನೆ. ಪರಶಿವನ ತಾಂಡವನೃತ್ಯವನ್ನು ಪ್ರತ್ಯಕ್ಷ ಕಂಡವರಂತೆ

ನಾವು ಮೈಮರೆತು, ದಿವ್ಯ ಜಗತ್ತೊಂದನ್ನು ದರ್ಶಿಸಿದವರಂತೆ ತಲ್ಲೀನರಾಗುತ್ತೇವೆ. ಆ ನಟರಾಜನು

ದಶಭುಜಮುಂ ದಿಕ್ತಟಕಂ ಪಸರಿಸಿ
ಎಸೆವ ಕರಂಗಳನೆತ್ತಲ್ ನೇವಿಸಿ
ಒಂದು ಪದಂ ಪಾತಾಳವನೊತ್ತಲ್
ಒಂದು ಪದಂ ಬ್ರಹ್ಮಾಂಡವನೊತ್ತಲ್
ಜಡೆಗಳ್ ಬೆಂಬಳಿವಿಡಿದಾಡುತ್ತಿರೆ
ಮುಡಿಯೊಳ್ ಸುರನದಿ ತುಳ್ಕಾಡುತ್ತಿರೆ
ತಡಿಯೊಳ್ ಶಶಿಕಳೆಯಲ್ಲಾಡುತ್ತಿರೆ
ಕಡು ಚೆಲ್ವಳಕಂ ಕುಣಿದಾಡುತ್ತಿರೆ
ಮಿಸುಗುವ ಡಮರುಗ ಢಂ ಢಂ ಢಣಲೆನೆ
ಕಿಸುಳದಿ ಪರಿಯುವ ತಾರಂ ಕಿರ್ರನೆ
ತಿರುಗುತ್ತಿರೆ ಅಹಿಗಳ್ ಹೆಡೆಯೆತ್ತಲು
ಕರಿಯು ತೊವಲ್ ನಭಮುಂ ಜೋಹರಿಸಲು
ಸರಸಿಜಭವನ ಶಿರಂ ಬೊಬ್ಬಿಡುತಿರೆ
ಸುರರ ಶಿರೋಮಾಲಿಗಳುಲಿವುತ್ತಿರೆ
ಪೊಂಗೆಜ್ಜೆಗಳ ರವಂ ಘುಲು ಘುಲುಕೆನೆ
ತೊಂಗಲ ಗಂಟೆ ಢಣಂ ಢಂ ಢಣಲೆನೆ
ಆಡಿದನಾಡಿದನಾಹಾ ಶಂಕರ

ಹಾಗೆ ನರ್ತನಮಾಡುತ್ತಿರುವಾಗ ಸುರಲೋಕದ ವಾದ್ಯಗಳೂ ಅವುಗಳನ್ನು ಬಾರಿಸಲು ತುಂಬುರ ನಾರದರೂ ಅಲ್ಲಿಗೆ ಬಂದರಂತೆ. ಆದರೆ ಶಿವನು ಅವೇನೂ ಬೇಡವೆಂದು ಹೇಳಿ 'ಮಡಕೆಯ ವಾದ್ಯಂ ಸಾಲ್ಗೆ'—ಗುಂಡಯ್ಯ ಮಡಿಕೆಯನ್ನು ತಟ್ಟುತ್ತಿರುವ ತಾಳವೇ ಸಾಕೆಂದು—ಹೇಳಿದನಂತೆ! ಪರಶಿವನ ನಾಟ್ಯವನ್ನು ಕಂಡು ಗುಂಡಯ್ಯನಿಗೂ ಆವೇಶ ಬಂದಿತು.

ಶಿವನಂ ಕಂಡಾ ಭಕ್ತಂ ಕುಣಿಯಲು
ಶಿವಭಕ್ತನ ಕೂಡಭವಂ ಕುಣಿಯಲು
ಇರ್ವರಸೇಕ್ಷಿಸಿ ಗಣಪಂ ಕುಣಿಯಲು

ಸರ್ವಸ್ಥಾವರ ಜಂಗಮವಾಡಲು
ಮಡಕೆಯ ಶಬ್ದಕ್ಕಾಡುತ್ತಿರ್ದಂ
ಮೃಡನಖಿಳರುವೆರಸಾಡುತ್ತಿರ್ದಂ

ಕೃತಿಯ ಒಂದೊಂದು ಸಾಲೂ, ಒಂದೊಂದು ನುಡಿಯೂ ಶಿವನೊಡನೆ ಕುಣಿಯುತ್ತಿವೆ, ಓದುವವರನ್ನೂ ಕೇಳುವವರನ್ನೂ ಕುಣಿಸುತ್ತಿವೆ. ಕಥೆಯಿಲ್ಲವಲ್ಲಿಯೂ ಕೃತಿ ಕ್ರಿಯಾಪೂರ್ಣವಾಗಿದೆ, ರೋಮಾಂಚಕಾರಿಯಾಗಿದೆ.

ಹರಿಹರದೇವನು ಭಕ್ತ, ಕವಿ, ಭಕ್ತಕವಿ. ಆತನ ದೃಷ್ಟಿ ಆಧ್ಯಾತ್ಮಿಕ. ಆದರೆ ಐಹಿಕವನ್ನು ಆತನು ದೂರುವುದಿಲ್ಲ. ಭೂಮಿಯಮೇಲೆ ನಿಂತೇ ಆಕಾಶದತ್ತ ಅವಲೋಕಿಸುವಂತೆ ಆತನ ಬೋಧನೆ. ಮಲಹಣ-ಮಲುಹಣಿಯರ ಕಥೆಯನ್ನು ನೋಡಿ—ಮಲುಹಣ ಕಾಶ್ಮೀರ ದೇಶದ ಸುವರ್ಣಭಟ್ಟನ ಮಗ. 'ಸುವರ್ಣಭಟ್ಟ' ಅಂಕಿತನಾಮವಾಗಿರುವಂತೆ ಅನ್ವರ್ಥನಾಮವೂ ನಿಜ. ಆತ ತನ್ನ ಮಗ ದಿನವೊಂದಕ್ಕೆ ಸಹಸ್ರ ಹೊನ್ನುಗಳನ್ನು ವೆಚ್ಚಮಾಡುತ್ತಾ ಹೋದರೂ ನೂರು ವರ್ಷಗಳಿಗೆ ಸಾಕಾಗುವಷ್ಟು ಹೊನ್ನುಗಳನ್ನು ಕೇಖರಿಸಿಟ್ಟು ಹೋದ. ಮಲುಹಣ 'ಕುಸುಮಬಾಣನ ಕೀರ್ತಿ ಬೆಳೆವಂತೆ' ಬೆಳೆದು ಹರೆಯಕ್ಕೆ ಕಾಲಿಟ್ಟ. ಆತನ ಹರೆಯವನ್ನು ಆನಂದದಲ್ಲಿ ಅದ್ದುವಂತಹ ದಿವ್ಯಸುಂದರಿ ಮಲುಹಣಿ—ದೇವದಾಸಿ ಪದ್ಮಾವತಿಯ ಮಗಳು–ಕಣ್ಣಿಗೆ ಬಿದ್ದಳು. ಅವಳ ರೂಪು ಅವನ 'ಕರಣವನೊಕ್ಕಲಿಕ್ಕಿ, ಭಾವಮಂ ಬರಿಕೈದು, ಚಿತ್ತಮಂ ತೊತ್ತಳದುಳಿದು' ಆಕರ್ಷಿಸಿತು. ಅವನನ್ನು ಕಂಡು ಮಲುಹಣಿಗೂ ಹಾಗೇ ಆಯಿತು—'ಮನಂ ಬೆದರಿ ಹೃದಯಂ ನಡುಗಿ, ತನು ಬೆಮರ್ತು, ಗತಿ ಸ್ತಂಭಿಸಿ' ಅವಳು ಮೂರ್ಛೆಹೋದಳು. ಇಬ್ಬರೂ ಒಂದಾಗಿ ಪ್ರಣಯಪ್ರಪಂಚದಲ್ಲಿ ಎಣೆಯಿಲ್ಲದ ಜೋಡಿಗಳಾಗಿ ನಲಿದರು. ಕವಿಯು ಗಂಡು ಹೆಣ್ಣುಗಳ ಚೆಲುವನ್ನ ಮನೋಜ್ಞವಾಗಿ ವರ್ಣನೆ ಮಾಡಿದ್ದಾನೆ. ಇದು ಮಲುಹಣಿಯ ಚಿತ್ರ.

ಅಳಿ ತುಡುಂಕದ ಮಘ ಮಘಿಪ ಬಿರಿಮುಗುಳಂತೆ
ಎಳಸುವ ಚಕೋರಿ ಮೊಗವಿಡದ ಚಂದ್ರಿಕೆಯಂತೆ
ಪಿಕಚಂಚು ಸಂಚಾರವಿಲ್ಲದೆಳೆದಳಿರಂತೆ

ಶುಕಮುಖದಿ ಅಣ್ಣೆವಳಿಯದ ಪಕ್ವಫಳದಂತೆ
ತೊಳತೊಳಗಿ ಬೆಳೆವುತಿರ್ದಳ್ ಚಂದ್ರಕಳೆಯಂತೆ

ಶ್ರೀಮಾನ್ ಸ. ಸ. ಮಾಳವಾಡರು ತಮ್ಮ 'ಹರಿಹರನ ರಗಳೆಯಲ್ಲಿ ಜೀವನ ದರ್ಶನ' ಎಂಬ ವಿಮರ್ಶಾಗ್ರಂಥದಲ್ಲಿ (ಪು. ೪೧) ಹೇಳಿರುವಂತೆ—'ಅರಳಿದ ಪುಷ್ಪಕ್ಕೆ ಭ್ರಮರನಾಗಿ, ಬೆಳುದಿಂಗಳಿಗೆ ಚಕೋರನಾಗಿ, ತಳಿರಿಗೆ ಗಿಳಿಯಾಗಿ ಮಲುಹಣಿಗೆ ಮಲುಹಣನು ಬರುವನೆಂಬುದನ್ನು ಕವಿಯು ಇಲ್ಲಿ ಧ್ವನಿಯುಕ್ತವಾಗಿ ವರ್ಣಿಸಿದ್ದಾನೆ'. ಹರಿಹರ ಕವಿ ವರ್ಣಿಸಿರುವ ಅವರ ಪ್ರಣಯ ಜೀವನ ಚಿತ್ರ ಸೊಗಸಾದ ಒಂದು ಪ್ರಣಯಸೂಕ್ತದಂತಿದೆ—'ಸುಕುಮಾರಾಂಗಿಯೊಳೊಲ್ದು ನೆರೆವ ಸುಖಸಮಯದೊಳ್ ಕರುಣವೆಲ್ಲಂ ನೋಟ, ನೋಟವೆಲ್ಲಂ ನುಡಿ, ನುಡಿಯೆಲ್ಲಂ ವಿರಹ, ವಿರಹವೆಲ್ಲಂ ದೈನ್ಯ, ದೈನ್ಯವೆಲ್ಲಂ ಸಾತ್ವಿಕಂ, ಸಾತ್ವಿಕವೆಲ್ಲಂ ಮೆಯ್, ಮೆಯ್ಯೆಲ್ಲಂ ಕೂಟಂ, ಕೂಟವೆಲ್ಲಂ ಮನಂ, ಮನವೆಲ್ಲಂ ಮೆಚ್ಚು, ಮೆಚ್ಚೆಲ್ಲಂ ಸೋಲಂ, ಸೋಲಮೆಲ್ಲಂ ರಸಮಯಮಾಗೆ' ಅವರು ಯುಗವೊಂದು ಕ್ಷಣವಾಗಿ ಕಾಲ ಕಳೆದರು. ಸುವರ್ಣಭಟ್ಟ ನೂರುವರ್ಷಕ್ಕೆಂದು ಇಟ್ಟ ಹಣ ಹತ್ತು ವರ್ಷಕ್ಕೆ ಖರ್ಚಾಯಿತು. ವೇಶ್ಯೆಯಾದ ಪದ್ಮಾವತಿ ಹಣವಿಲ್ಲದ ಮಲುಹಣನನ್ನು ಮನೆಬಿಟ್ಟು ಓಡಿಸಿದಳು. ಕಾಮಿಯಾದ ಮಲುಹಣನಿಗೆ ಸದಾ ಅವಳ ಚಿಂತೆ. ಅವಳ ವಿರಹವನ್ನು ತಡೆಯಲಾರದೆ ಅವನು ಅವಳ ಮನೆಯ ಮುಂದಿನ ಎಂಜಲಗುಣಿಯಲ್ಲಿ ರಾತ್ರಿಯೆಲ್ಲಾ ಅವಳ ಜಪಮಾಡುತ್ತಾ ನಿಂತುಕೊಳ್ಳುತ್ತಾನೆ. ಮೇಲಿನಿಂದ ಬಿದ್ದ ಮಂಜು ಅವನ ಮೈಮೇಲೆ ಸುರಿದು ಅವನು ಹಿಮದ ಬೊಂಬೆಯಂತೆ ಆಗುತ್ತಾನೆ. ಇದನ್ನು ಕಂಡು ಮಲುಹಣಿ ಮನಮರುಗಿ, ತನ್ನ ಸಖಿಯರಿಂದ ಅವನ ಮೇಲಿದ್ದ ಹಿಮವನ್ನೆಲ್ಲಾ ತೆಗೆಯಿಸಿ, ಅಪಾರವಾದ ಮಮತೆಯಿಂದ 'ಎನ್ನ ಮೇಲಿಕ್ಕುವ ಈ ಚಿತ್ತದಾತುರತೆಯನ್ನು ಪನ್ನಗಾಭರಣನೊಳಗೆ ಇಡು. ಇದರಿಂದ ನನ್ನಂತಹ ಕೋಟಿ ಮಲುಹಣಿಯರು ನಿನಗೆ ದೊರೆತಾರು' ಎಂದು ಬುದ್ಧಿ ಹೇಳಿದಳು. ಅಷ್ಟು ಸಾಕು ಮಲುಹಣನ ಚಿತ್ತ ಪರಿವರ್ತನೆಗೆ. ದೀಪ ಆರುವುದಕ್ಕೆ ಇರುವ ಗುಂಡಿಯೇ ಹೊತ್ತಿಕೊಳ್ಳುವುದಕ್ಕೂ ಸಾಕಲ್ಲವೆ? ಮಲುಹಣಿಯ ಮೇಲಿನ ಕಾಮದಲ್ಲಿದ್ದ ಚಿತ್ತೈಕಾಗ್ರತೆ ಪರಶಿವನ ಮೇಲಿನ ಪ್ರೇಮದ ಚಿತ್ತೈಕಾಗ್ರತೆಯಾಗಿ ಪರಿ

ವರ್ತನಗೊಂಡಿತು. ಎಂತಹ ಪರಿವರ್ತನೆ! ಅದೆಷ್ಟು ಬೇಗ! ಮಲಹಣ— ಮಲಹಣಿಯರು ಶಿವನಕೃಪೆಯಿಂದ ದಂಪತಿಗಳಾಗುತ್ತಾರೆ. ತೀವ್ರವಾಗಿದ್ದ ಅವರ ಕಾಮೋದ್ರೇಕ ಭಕ್ತಿಯ ಪರಿಪಾಕವಾಗಿ ಪರಿಣಮಿಸುತ್ತದೆ. ಅವ ರಿರ್ವರೂ

ಕಾಮಮುಂ ಕ್ರೋಧಮುಂ ಶಂಕರಂಗರ್ಪಿತಂ
ನೇಮಮುಂ ಪ್ರೇಮಮುಂ ಶಶಿಧರಂಗರ್ಪಿತಂ
ಕೂಟಮುಂ ತೃಪ್ತಿಯುಂ ತ್ರಿಣಯನಿಂಗರ್ಪಿತಂ
ನೋಟಮುಂ ಬೇಟಮುಂ ಪುರಹರಂಗರ್ಪಿತಂ

ಹೀಗೆ ಬಾಳಿ ಶಿವಸಾಯುಜ್ಯವನ್ನು ಪಡೆಯುತ್ತಾರೆ. ಮನುಷ್ಯ ಸುಖಾಭಿ ಲಾಷಿ, ಆದರೆ ಆ ಸುಖ ಬರಿಯ ಮೃಗಮರೀಚಿಕೆ. ಅದರಲ್ಲಿರುವ ಅಲ್ಪ ಸ್ವಲ್ಪ ಸುಖದ ಆಭಾಸವನ್ನು ಅನುಭವಿಸುವುದಕ್ಕೂ ಪರಮೇಶ್ವರನ ಅನು ಗ್ರಹ ಅಗತ್ಯ. ಒಮ್ಮೆ ಆ ಅನುಗ್ರಹವಾಯಿತೆಂದರೆ ಅಲ್ಪವಾದುದರ ಮೇಲಿನ ಆಳಿಯಾಸೆ ಅಳಿಯುತ್ತದೆ; ಭೂಮವನ್ನು ಮನಸ್ಸು ಸ್ವೀಕರಿಸು ತ್ತದೆ; ಧನ್ಯವಾಗುತ್ತದೆ. ಹರಿಹರ ಕವಿಯ ಲೋಕಾನುಭವವೂ ಆಳ ವಾದುದಾಗಿಯೇ ಇರಬೇಕು. 'ಪಿಂಡದ ರಗಳೆ' ಯಲ್ಲಿ ಆತನು ವೇಶ್ಯೆಯರ ಕುಟಿಲತನ ಕಾಠಿಣ್ಯಗಳನ್ನು ಸಂಗ್ರಹವಾದರೂ ಸಾರವತ್ತಾಗಿ ವರ್ಣಿಸಿದ್ದಾನೆ. 'ಮಲುಹಣ ರಗಳೆ' ಯಲ್ಲಿನ ಪದ್ಮಾವತಿ ಅದಕ್ಕೆ ಮತ್ತೊಂದು ಉದಾಹರಣೆ. ಆದರೆ ವೇಶ್ಯೆಯರಲ್ಲಿ ಸಜ್ಜನರಾದವರಿಗೂ ಅಭಾವವಿಲ್ಲ. ಹರಿಹರನ ಜೀವನದಲ್ಲಿಯೇ ಅಂತಹ ಸಜ್ಜನಳೊಬ್ಬಳ ಕಥೆಯನ್ನು ನಾವು ಕೇಳುತ್ತೇವೆ. ಆಂಧ್ರದೇಶದ ದಿವ್ಯಸುಂದರ ವೇಶ್ಯೆ ಯೊಬ್ಬಳು ಹರಿಹರನ 'ನಂಬಿಯಣ್ಣನ ರಗಳೆ' ಯನ್ನು ಓದಿ ಕವಿಯ ರಸಿಕತೆಗೆ ಮನಸೋತು ಆತನನ್ನು ನೋಡುವ ಕೂಡುವ ಆಶೆಯನ್ನು ಬೆಳಸಿ ಕೊಂಡು ಹರಿಹರನ ಬಳಿಗೆ ಬಂದಳು. ಆದರೆ ಅವಳು ಕಂಡುದೇನು? ರುದ್ರಾಕ್ಷಿ ವಿಭೂತಿಗಳನ್ನು ಧರಿಸಿ, ಕಾಷಾಯವಸ್ತ್ರದಲ್ಲಿದ್ದ ವಿರಾಗಿಯನ್ನು. ಇದನ್ನು ಕಾಣುತ್ತಲೆ ಆಕೆಯ ರತಿ ವಿರತಿಯಾಯಿತು. ಆಕೆ ಹರಿಹರದೇವ ನಿಂದ ದೀಕ್ಷೆಪಡೆದು ಶಿಷ್ಯಳಾದರು. ಇಂತಹ ಅನುಭವದ ಫಲವಾಗಿಯೋ ಏನೋ, ಮಲುಹಣ ಮಲುಹಣಿಯರ ಜೀವನ ಪ್ರಣಯಜಗತ್ತಿನಿಂದ

ವಿರಕ್ತಿಜೀವನಕ್ಕೆ ಒಮ್ಮೆಯೇ ಹಾರಿದುದು ಅತ್ಯಂತ ರಮ್ಯವಾಗಿರುವಷ್ಟೇ ಸ್ವಾಭಾವಿಕವಾಗಿದೆ.

ಹರಿಹರದೇವನ ರಗಳೆಗಳಲ್ಲಿ ತಲೆವಣಿಯಂತಿರುವುದು 'ಬಸವರಾಜ ದೇವರ ರಗಳೆ,' ಇದರ ನಾಯಕನಾದ ಬಸವಣ್ಣನು ಕವಿಯ ಸಮಕಾಲಿಕ ನಲ್ಲದಿರಬಹುದಾದರೂ ಪುರಾತನರಂತೆ ಕೇವಲ ಪುರಾಣಪುರುಷ ನಾದವನೇನೂ ಅಲ್ಲ. ಆತನನ್ನು ಪ್ರತ್ಯಕ್ಷ ಕಂಡವರನೇಕರು ಆಗ ಇನ್ನೂ ಜೀವಿಸಿದ್ದರು. ಅವರಿಂದ ಕವಿಯು ಆ ಮಹಾಪುರುಷನ ಜೀವಿತ ಕಥೆಯನ್ನು ಸಂಗ್ರಹಿಸಿ, ಆತನ ಅಲೌಕಿಕವಾದ ಧಾರ್ಮಿಕಜೀವನವನ್ನು ದಿವ್ಯ ಮನೋಹರವಾಗಿ ಚಿತ್ರಿಸಿದ್ದಾನೆ. ಹದಿನಾರರ ಹರೆಯದ ಬಸವಣ್ಣ ಕರ್ಮ ಲತೆಯಂತಿದ್ದ ಜನ್ನಿವಾರವಂ ಕಿತ್ತು ಬಿಸುಟು, ಗೃಹತ್ಯಾಗಿಯಾಗಿ, ಕಪ್ಪಡಿ ಸಂಗಮಕ್ಕೆ ಹೊರಟುಬಂದ. ಅಲ್ಲಿ ಈಶಾನ್ಯ ಗುರುಗಳ ಆಶ್ರಯ ದೊರೆ ಯಿತು. ಬಸವಣ್ಣ ಸಂಗಮೇಶ್ವರನ ಪೂಜೆಯಲ್ಲಿ ತತ್ಪರನಾದ. 'ಪುಷ್ಪರಗಳೆ'ಯಲ್ಲಿ ನಾವು ಕಂಡ ಹರಿಹರದೇವನೇ ಇಲ್ಲಿಯೂ ಶಿವಪೂಜೆಗೆ ಪುಷ್ಪಗಳನ್ನು ಎತ್ತಿತರುವ ಬಸವಣ್ಣನಲ್ಲಿ ಪರಕಾಯಪ್ರವೇಶಮಾಡಿ ನಮಗೆ ಗೋಚರಿಸುತ್ತಾನೆ. ಪುಷ್ಪವನ್ನೆತ್ತಿಕೊಂಡು, 'ಬದುಕಿದೆಂ ಬದುಕಿದನೆನುತ್ತೆ ನದಿಗೈತಂದು,' ಅಲ್ಲಿ ಶೋಧಿಸಿದ ಅಗ್ಘವಣಿಯನ್ನು ಬಿಂದಿಗೆಯಲ್ಲಿ ತುಂಬಿ ಕೊಂಡು, 'ಇಹಪರದ ಪುಣ್ಯಪುರುಷ'ನಾದ ಬಸವಣ್ಣ 'ನಲಿನಲಿದು ನೇಹವಂಕುರಿಸುತಿರೆ ಕೈಪುಕ್ಕು' ಶಿವಸಾನ್ನಿಧ್ಯಕ್ಕೆ ಬರುತ್ತಾನೆ.

ಬರವನೆಳಸಿರ್ದಯ್ಯ ದೇವ ತಳುವಿದೆನೆಂದು
ಉರವಣಿಸಿ ಬರತಿರ್ದೆ ತಂದೆ ಮುಳಿಯದಿರೆಂದು
ಎನ್ನಯ್ಯ ಎನ್ನರಸ ಎನ್ನ ಬಂಧುವೆ ಎನುತ
ಎನ್ನ ಕಣ್ಣುಂ ಗತಿಯೆ ಮತಿಯೆ ಕರುಣಿಪುದೆನುತ
ಅಲ್ಲಿ ಕತ್ತುರಿಯ ಶ್ರೀಗಂಧಂಗಳಿಂ ಪೂಸಿದ
ಸಲ್ಲಲಿತದಿರವಂತಿ ಸಂಪಗೆಗಳಿಂ ಪೊರೆದ
ನುತಶೀತಳಂಗಳಂ ಪೊಂಗಳಸದೊಳು ತೀವಿ
ಅತಿಶಯಾನಂದಾಶ್ರುವಂ ಕಣ್ಗಳೊಳು ತೀವಿ
ಕೊಂಡಾಡಿ ಕೊಂಡಾಡಿ ಮಜ್ಜನಕ್ಕೆರೆವುತಂ

ಮುಂಡಾಡಿ ಮುಂಡಾಡಿ ನೊಸಲೊಳಚ್ಚೊತ್ತುತಂ
ಚಂದ್ರಚೂಡಂಗೆ ಸಿರಿಗಂಧಮನಲಂಕರಿಸಿ
ಸಾಂದ್ರ ಸೌರಭ್ಯಮಯ ಪುಷ್ಪದಿಂ ಸಿಂಗರಿಸಿ
ಪೂಜೆಯಂ ನೋಡಿ ಮೆಚ್ಚದೆ ಪೂಜೆಯಂ ಮಾಡಿ
ಓಜೆಗೆಟ್ಟರುಹುಗೆಟ್ಟತಿ ಲಲ್ಲೆಯಂ ಮಾಡಿ
ನಯನಂಗಳೊಳು ಪೂಜೆ ಬರದಂದೆ ನೋಡುತಂ
ಭಯಭಕ್ತಿಯಿಂ ಪೂಜೆ ಮೆರೆವಂತೆ ಮಾಡುತಂ
ಚಿತ್ತದೊಳು ಪೂಜೆಯಚ್ಚೊತ್ತಿದಂತರ್ಚಿಸುತೆ
ಚಿತ್ತದೊಳು ಪೂಜೆ ಪುಟ್ಟಿರ್ದಂತೆ ಈಕ್ಷಿಸುತೆ

ಪೂಜಿಸಿದ ಮೇಲೆ ಧೂಪ ದೀಪ ನೈವೇದ್ಯಗಳಾದವು. ಕರ್ಪೂರದ ವೀಳೆಯವನ್ನು ಅರ್ಪಿಸಿ, ಮಂಗಳಾರತಿ ಎತ್ತಿ, ಕನ್ನಡಿಯನ್ನು ತೋರಿಸಿ, ಬಗೆಬಗೆಯಾಗಿ ಸ್ತುತಿಸಿದ ಮೇಲೆ

ಎನ್ನ ಕಣ್ಣೊಳಗೆ ಪರಿದಾಡು ಕೂಡಲ ಸಂಗ
ಎನ್ನ ಮನದೊಳಗೆ ಕುಣಿದಾಡು ಕೂಡಲ ಸಂಗ

ಎಂದು ಬೇಡಿಕೊಂಡನು. ಭಗವಂತನನ್ನು ನೋಡುತ್ತ ನೋಡುತ್ತ ಆತನ ಸಾತ್ವಿಕ ರಸ ಮಸಗಿತು

ಮಣಿ ಮಣಿದು ಕುಣಿ ಕುಣಿದು ಕೆಲೆ ಕೆಲೆದು ನಲಿದಾಡಿ
ತಣಿ ತಣಿದು ತಕ್ಕೈಸಿ ಮಿಕ್ಕು ಮಲೆಮಲೆದಾಡಿ
ಆಡುತಾಡುತ್ತಲ್ಲಿ ಪೊಗಳ್ಪದಂ ನೆರೆ ಮರೆತು
ನೋಡ ನೋಡುತ್ತಲ್ಲಿ ನೋಟಮುಂ ಮಿಗೆ ಮರೆದು
ಕಣ್ಮುಚ್ಚಿ ಗದಗದಿಸಿ ಜೋಲ್ದು ಜೊಂಪಿಸಿ ಬಿದ್ದು
ಉಣ್ಮುವ ಶಿವಾನಂದ ರಸದ ಹೊನಲೊಳಗದ್ದು
ಈಸಾಡಿ ಗಂಗಾಧರನ ಚರಣಮಂ ಪಿಡಿದು
ಲೇಸಾಗಿ ಚಿತ್ತದೊಳು ಸಂಗನಂ ನೆರೆ ಪಿಡಿದು

'ಸುಖಮೂರ್ಛೆ' ಯಿಂದ ನೆಲಕ್ಕೆ ಬಿದ್ದು ಆನಂದಮಯನಾಗಿ ಹೋಗುತ್ತಾನೆ. ದಿವಂಗತ ಪ್ರೊ. ವೆಂಕಣ್ಣಯ್ಯನವರು ಹೇಳಿರುವಂತೆ 'ಈ ವರ್ಣನೆಯು ಎಷ್ಟು ಉಜ್ವಲವಾಗಿರುವುದೆಂದರೆ ನಾಸ್ತಿಕನ ಹೃದಯದಲ್ಲಿ ಕೂಡ

ಭಕ್ತಿಭಾವವನ್ನು ಉದ್ರೇಕಿಸುವಂತಿದೆ;' ನಿಜ. ಹರಿಹರನು ವರ್ಣನೆಗೆ ತೊಡಗಿದನೆಂದರೆ ಓದುವವರ, ಅಥವಾ ಕೇಳುವವರ ಹೃದಯದಲ್ಲಿ ನೆಲೆನಿಲ್ಲುವಂತೆ ವಿಸ್ತಾರವಾಗಿ ಭವ್ಯವಾಗಿ ವರ್ಣಿಸುತ್ತಾನೆ. ಆದರೆ ಆತನ ವರ್ಣನೆಯಾಗಲಿ ಕಥೆಯಾಗಲಿ ಔಚಿತ್ಯದ ಕೊಲೆಯನ್ನು ಮಾತ್ರ ಮಾಡುವುದಿಲ್ಲ. ಆತನ ಗುರಿ ಬಸವಣ್ಣನ ಧಾರ್ಮಿಕಜೀವನದ ನಿರೂಪಣೆ. ಅದಕ್ಕೆ ಅಗತ್ಯವಾದ ಬಸವಣ್ಣನ ಗುರು ಲಿಂಗ ಜಂಗಮಾರಾಧನೆ, ಆತನ ಪವಾಡಗಳು ಇವುಗಳನ್ನು ತನ್ನ ಮನತಣಿಯುವಂತೆ ವರ್ಣಿಸಿದ್ದಾನೆ. ಆದರೆ ಆತನ ಹುಟ್ಟಿದೂರು, ತಾಯ್ತಂದೆಗಳು, ಆತನ ವಿವಾಹ—ಇತ್ಯಾದಿ ವಿಚಾರಗಳಲ್ಲಿ ಆತನ ವರ್ಣನಾಶಕ್ತಿ ನಿರ್ಲಿಪ್ತವಾಗಿದೆ. ತನ್ನ ಮನೆಗೆ ಬಂದ ಶಿವಭಕ್ತ ಕಿನ್ನರಿ ಬೊಮ್ಮಯ್ಯ ತಾನು ಈರುಳ್ಳಿಯನ್ನು ನಿಂದಿಸಿದುದಕ್ಕಾಗಿ ಕೋಪಗೊಂಡು ಹೊರಟುಹೋದಾಗ ಆತನನ್ನು ಹಿಂದಕ್ಕೆ ಕರೆತರುವುದಕ್ಕಾಗಿ ಬಸವಣ್ಣ ಉಳ್ಳಿಯ ವಿಜೃಂಭಣೆಯನ್ನೇ ಒಂದು ಸ್ಥಲದ ತುಂಬ ಮೆರೆಸಿರುವಂತೆ ವರ್ಣಿಸಿರುವ ಕವಿ, ಬಸವಣ್ಣನ ಮದುವೆಯನ್ನು ವರ್ಣಿಸುವ ಗೋಜಿಗೇ ಹೋಗದಿರುವುದು ಅತ್ಯಂತ ಉಚಿತವಾಗಿದೆ. ಆತನು ಹೇಳುತ್ತಿರುವುದು ಬಸವಣ್ಣನ ಧಾರ್ಮಿಕ ಜೀವನವನ್ನೇ ಹೊರತು ಆತನ ರಸಿಕ ಜೀವನವನ್ನಲ್ಲ. ಕಥೆಯ ಬೆಳವಣಿಗೆಯಲ್ಲಿಯೂ ಅಷ್ಟೆ. ಬಸವಣ್ಣನ ಧಾರ್ಮಿಕ ಜೀವನಕ್ಕೆ ಅಗತ್ಯವಾದ ಘಟನೆಗಳನ್ನು ಮಾತ್ರ ಆಯ್ದುಕೊಳ್ಳುತ್ತಾನೆ. ಇಷ್ಟೇ ಅಲ್ಲ; ಆತನ ಯಾವ ರಗಳೆಯನ್ನೇ ತೆಗೆದುಕೊಳ್ಳಲಿ, ಕಥಾನಾಯಕನ ಜೀವಿತ ವೃತ್ತಾಂತವನ್ನು ಬಿಟ್ಟು ಅನಾವಶ್ಯಕವಾದ ಕಥೆಗಳನ್ನು ಸ್ವಲ್ಪವೂ ಸೇರಿಸುವುದಿಲ್ಲ. ಬಹುಶಃ, ಈ ಕಾರಣದಿಂದಲೆ ಹರಿಹರನ ಕಾವ್ಯಕ್ಕೆ ಪುರಾಣದ ಗೌರವ ದೊರೆಯದೆ ಸ್ವಲ್ಪಮಟ್ಟಿಗೆ ಅಜ್ಞಾತವಾಯಿತೆಂದು ತೋರುತ್ತದೆ. ಇದನ್ನು ಬೆಳಕಿಗೆ ತಂದು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟ ದಿವಂಗತ ವೆಂಕಣ್ಣಯ್ಯನವರು 'ಬಸವಪುರಾಣ ಹುಟ್ಟಿದಮೇಲೆ ಹರಿಹರನ ಈ ರಗಳೆಯ ಗ್ರಂಥಕ್ಕೆ ಪುರಸ್ಕಾರ ಉಳಿಯಲಿಲ್ಲ. ಮಿಕ್ಕವರ ಮಾತು ಹೋಗಲಿ, ಬಸವಣ್ಣನ ಚರಿತ್ರೆಯನ್ನು ಬರೆದ ಭೀಮಕವಿ, ಷಡಕ್ಷರಿ ಮೊದಲಾದವರು ಕೂಡ ಹರಿಹರನು ಬಸವರಾಜ ದೇವರ ರಗಳೆಯನ್ನು ಬರೆದನೆಂಬುದನ್ನು ತಮ್ಮ ಗ್ರಂಥಗಳಲ್ಲಿ ಸ್ಮರಿಸಿಲ್ಲ. ಹೀಗಾಗಿ ಹರಿಹರನು

ಈ ರಗಳೆಯನ್ನು ಬರೆದನೆಂಬುದನ್ನೇ ಜನರು ಕಾಲಕ್ರಮದಲ್ಲಿ ಮರೆತು ಬಿಟ್ಟರು! ಪರಿಸ್ಥಿತಿ ಎಲ್ಲಿಗೆ ಇಳಿದಿರುವುದೆಂದರೆ ಈ ರಗಳೆಯನ್ನು ಹರಿಹರನೇ ಬರೆದನೆಂದರೆ ಈಗ ನಂಬುವುದು ಕೂಡ ಕಷ್ಟವಾಗಿದೆ' ಎಂದು ಹೇಳುತ್ತಾರೆ. ಕಾವ್ಯದಲ್ಲಿ ಏಕಮುಖತೆಯೆಂಬುದು ಒಂದು ಮಹತ್ಸಾಧನ; ಕವಿ ಸಾಧಿಸಬೇಕಾಗಿರುವ ಒಂದು ಪ್ರಮುಖ ಕಾವ್ಯಗುಣ. ಬಣ್ಣದ ಕನ್ನಡಕವನ್ನು ಧರಿಸಿ ಇದನ್ನು ಕಾಣದೆ ಹೋದರೆ, ಇದಕ್ಕೆ ತಕ್ಕ ಪುರಸ್ಕಾರ ದೊರೆಯದೆ ಹೋದರೆ ಅದು ಬರೆದವನ ದುರದೃಷ್ಟ; ಯಾರಿಗಾಗಿ ಬರೆದನೊ ಅವರ ವಿವೇಚನಾದಾರಿದ್ರ್ಯ.

ಹರಿಹರ ಕವಿ ಸೃಷ್ಟಿಸಿ ನಮ್ಮೆದುರಿಗೆ ನಿಲ್ಲಿಸಿರುವ ಬಸವಣ್ಣನ ವ್ಯಕ್ತಿಚಿತ್ರ ಮಹೋನ್ನತವಾದುದು. ಆತನು ತನ್ನ ಸರ್ವಸ್ವವನ್ನೂ ಗುರುಲಿಂಗ ಜಂಗಮಕ್ಕರ್ಪಿಸಿ, 'ಲಿಂಗ ಜಂಗಮ ಪ್ರಸಾದ ಹೃದಯ' ನಾಗಿರಲು ಮಾಹೇಶ್ವರಕುಲವು ಆತನನ್ನು ಕುರಿತು 'ಎಲೆ ಬಸವ, ಬಸವಣ್ಣ, ಬಸವಯ್ಯ, ಬಸವರಸ, ಬಸವಿರಾಜ, ಬಸವಿದೇವ, ಕೇಳಯ್ಯ. ನಿನ್ನ ನೇಮ ವಿದಾರ್ಗುಂಟು! ಗುರುಲಿಂಗದೊಳೆರಡಿಲ್ಲದಿಪ್ಪೆ. ಶರಣರ ಸಂಗನೆಂದೆ ಕಾಣ್ಬೆ. ಬಂದ ಭಕ್ತರನತ್ಯಾದರಿಪೆ. ಬಪ್ಪ ಭಕ್ತರಂ ಹರುಷದಿಂದಿರ್ಗೊಂಬೆ, ಬೇಡಿದುದ ಶರಣರ್ಗಿಲ್ಲೆನ್ನದೀವೆ. ಬೇಡಲೊಲ್ಲದವರ್ಗೆ ಮಿಗಿಲಾಗಿ ಆರಾಧಿಪೆ.... ....ಶರಣರಂ ಸಂಗನೆಂದಲ್ಲದೆ ಕಾಣೆ. ನಿಚ್ಚ ಶಿವರಾತ್ರಿಯನಚ್ಚರಿಯಿಂ ಮಾಳ್ಪೆ, ಜಂಗಮ ಪ್ರಾಣಿಯಾಗಿಪ್ಪೆ ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ, ನೋಡೆ, ನುಡಿಯೆ, ಮೆಚ್ಚೆ, ಕೇಳೆ. ಶಿವಸಮಯವ ನುದ್ಧರಿಸುವೆ' ಎಂದು ಕೀರ್ತಿಸಿದರು. ಈ ಕೀರ್ತನೆ ಸ್ಪಷ್ಟವಾಗಿ ಕಾರ್ಯರೂಪದಲ್ಲಿ ನಮ್ಮ ಕಣ್ಣೆದುರಿಗೆ ಕಟ್ಟಿ ನಿಲ್ಲುತ್ತದೆ, 'ಬಸವರಾಜದೇವರರಗಳೆ' ಯನ್ನು ಓದಿದರೆ. ಆತನ ಭಕ್ತಿಯನ್ನು ಒರೆಹಚ್ಚಿ ನೋಡುವ ಸನ್ನಿವೇಶಗಳು ಆತನ ಜೀವನದಲ್ಲಿ ಬರದೆ ಹೋಗಲಿಲ್ಲ. ಆದರೆ ಯಾವ ಸನ್ನಿವೇಶದಲ್ಲಿಯೂ ಹದಿನಾರಾಣೆಯ ಬಣ್ಣಕ್ಕೆ ಲೋಪಬರಲಿಲ್ಲ. ಸಾಕ್ಷಾತ್ ಪರಶಿವನೇ ಅವನ ಪರೀಕ್ಷೆಗೆಂದು ವಿಟಜಂಗಮ ರೂಪಿನಿಂದ ಬಂದು 'ಬಸವ ಬಸವಾ, ನಾವು ಹೆಂಗೂಸಿಲ್ಲದೆ ಇರ್ದುದಿಲ್ಲ' ಎಂದು ಬೇಡಿದ. ಬೇಡಿದ ಭಕ್ತರಿಗೆ ಬೇಡಿದುದನ್ನು ನೀಡುವ ಪ್ರತಿಜ್ಞೆ ಬಸವಣ್ಣನದು. ಆತ ವಿಟಜಂಗಮನಿಗೆ ಹೆಣ್ಣನ್ನು

ಹೊಂದಿಸಲು ಪ್ರಯತ್ನಿಸಿದ. ಆದರೆ ಅಂದು 'ಪಟ್ಟಣದ ಪಣ್ಯಾಂಗನೆಯರೆಲ್ಲಂ ಕೂಡಿ ದಂಪತಿಗಳಾಗಿರೆ' ಬಸವಣ್ಣ ಆಶ್ಚರ್ಯದಿಂದ 'ತನ್ನ ಮಾಯೆವೆನ್ನಂ ಕೊಳುವುದೆ?..........ಸಿರಿ ಸರಸ್ವತಿಯರಂ ಕೀಳ್ಮಾಡುವ ತನ್ನರಸಿ ಮಾಯಿದೇವಿಯುಂ ತಂದುಕೊಡುವೆಂ' ಎಂದುಕೊಂಡು ಆಕೆಯನ್ನು ವಿಟ ಜಂಗಮನಿದ್ದ 'ಸೆಜ್ಜೆವನೆಯುಂ ಪುಗಿಸಿ, ಮುಚ್ಚುಳಸಿಕ್ಕಿಕೊಂಡು, ಬಸವಂ ಪೊರವಾಗಿಲೋಳಿರೆ' ಅತ್ತ ಮಾಯಿದೇವಿ ಮಲಗಿದ್ದ ವಿಟಜಂಗಮನನ್ನು ಎಬ್ಬಿಸಿದಳು. ಆಕೆಯು ಮುಟ್ಟಿದೊಡನೆಯೇ 'ಮಾಯೆಯ ಜವನಿಕೆಯುಂ ತೆಗೆವಂತೆ' ಶಿವನು ಪ್ರತ್ಯಕ್ಷನಾದ. ಅದನ್ನು ಕಂಡು ಮಾಯಿದೇವಿ ಆಶ್ಚರ್ಯದಿಂದ 'ಬಸವ ಬಸವಾ ಜಂಗಮದೇವರು ಸಂಗಮದೇವರಾದರು' ಎಂದು ಕೂಗಿಕೊಂಡಳು. ಬಸವರಾಜನು ಸ್ವಲ್ಪವೂ ಆಶ್ಚರ್ಯವನ್ನು ಸೂಚಿಸದೆ 'ತಾಯೆ, ತಾಯೆ, ಮುನ್ನವಾರೆಂದು ಕೊಟ್ಟೆಂ?' ಎಂದು ಪ್ರಶ್ನಿಸುತ್ತಾನೆ. ಪರೀಕ್ಷಿಸಲು ಬಂದ ಶಿವನು ಸೋತು, ನಾಚಿಕೆಯಿಂದ ಅಂತರ್ಧಾನನಾಗುತ್ತಾನೆ. ಹೀಗೆ ಬಸವಣ್ಣ ತಾನೆ ಹೇಳಿದ 'ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು' ಎಂಬ ನುಡಿಗೆ ತಾನೆ ಉದಾಹರಣೆಯಾಗಿ ದೇವಮಾನವನಾದನು.

ಹರಿಹರ ಕವಿಯು ರಗಳೆಯಲ್ಲಿ ಕೃತಿರಚನೆಮಾಡಲು ಹೊರಟುದು ಸಾಮಾನ್ಯಜನರ ಉದ್ಧಾರಕ್ಕಾಗಿ. ಶಿವಶರಣರ ಪುಣ್ಯಚರಿತ್ರೆ ವಿಶಾಲ ಜಗತ್ತಿನ ಸ್ವತ್ತಾಗಲೆಂಬುದು ಆತನ ಉದಾರಚೇತನದ ವಿಶಾಲದೃಷ್ಟಿ. ಅದ್ದರಿಂದಲೇ ಆತನು ಚಂಪೂಕೃತಿರಚನೆಯಲ್ಲಿ ಸಿದ್ಧಹಸ್ತನಾಗಿದ್ದರೂ ಅದನ್ನು ಬಿಟ್ಟು ಜನಜೀವನಕ್ಕೆ ಸಮೀಪವಾದ, ಅಚ್ಚಗನ್ನಡದ ರಗಳೆಯ ಛಂದಸ್ಸನ್ನು ತನ್ನ ಕಾವ್ಯವಾಹಕವಾಗಿ ಬಳಸಿಕೊಂಡನು. ಕವಿಯ 'ಗಿರಿಜಾ ಕಲ್ಯಾಣ' ವನ್ನು ಆಮೂಲಾಗ್ರವಾಗಿ ಓದಿದರೆ ಆತನ ಪಾಂಡಿತ್ಯ ಪ್ರೌಢಿಮೆಗಳು ಅಸಾಧಾರಣವೆಂಬುದು ನಮಗೆ ಮನವರಿಕೆಯಾಗುತ್ತದೆ. ಆತನ ಕಾವ್ಯಭಾಗಗಳನ್ನು ಕೇಶಿರಾಜನಂಥ ದೊಡ್ಡ ವೈಯಾಕರಣಿ ಉದಾಹರಣೆಗಳಾಗಿ ಬಳಸಿಕೊಂಡಿರುವುದನ್ನು ನೋಡಿದರೆ ಇದು ಮತ್ತಷ್ಟು ಸ್ಪಷ್ಟವಾಗುತ್ತದೆ. 'ಗಿರಿಜಾಕಲ್ಯಾಣ' ದ ಪದ್ಯಗಳನ್ನು ಹದಿಮೂರನೆಯ ಶತಮಾನದಲ್ಲಿದ್ದ ಮಲ್ಲಿಕಾರ್ಜುನನು ತನ್ನ 'ಸೂಕ್ತಿ ಸುಧಾರ್ಣವ' ಎಂಬ ಪೂರ್ವಕವಿ

ಕಾವ್ಯ ಸಂಗ್ರಹ ಗ್ರಂಥದಲ್ಲಿ ಸೇರಿಸಿರುವುದು ಹರಿಹರನ ಕವಿತಾ ಪ್ರಾಢಿಮೆಗೆ ದೊಡ್ಡ ಸಾಕ್ಷಿ. ಆತನು ಚಂಪೂ ಕಾವ್ಯಗಳನ್ನೇ ಬರೆಯುವುದನ್ನು ಮುಂದುವರಿಸಿದ್ದರೆ ಬಹುಶಃ ಆತನೂ ಪಂಪ ರನ್ನರಂತೆ ಪಡಿತಂಮನ್ಯನಾಗುತ್ತಿದ್ದನು. ಆದರೆ ಹರಿಹರನ ಅನುರಕ್ತಿ ಕೀರ್ತಿಯ ಕಡೆ ಒಲಿಯಲಿಲ್ಲ, ಲೋಕಕಲ್ಯಾಣದ ಕಡೆ ಒಲಿಯಿತು. ಆದ್ದರಿಂದಲೇ ಅತನು ತನ್ನ ಪಾಂಡಿತ್ಯವನ್ನು ತುಳಿದು 'ಜನರ ಮಾತಿನಲ್ಲಿ, ಜನರ ಛಂದಸ್ಸಿನಲ್ಲಿ ಕಾವ್ಯ ಸೃಷ್ಟಿಯನ್ನು ಕೈಕೊಂಡನು. ವ್ಯಾಕರಣ ನಿಯಮಗಳನ್ನು ಕೂಡ ಆತನು ಅನೇಕ ವೇಳೆ ಮೀರುತ್ತಾನೆ. ಕವಿ ಕುವೆಂಪುರವರು 'ಕಾವ್ಯಕೆ ಪ್ರಮಾಣಂ ಕರ್ಣಂ, ವ್ಯಾಕರಣಮಲ್ತು, ವ್ಯಾಕರಣಮೇಕೆಂಬೆಯೇನ್ ? ಮರೆವುದಕೆ ಕಲ್ತು' ಎಂದು ಹೇಳುವಲ್ಲಿ ಕಾಣಬರುವ ಕವಿಸಹಜ ನಿರಂಕುಶಮತಿಯೇ ಹರಿಹರನದೂ.

ರಗಳೆಯ ಛಂದಸ್ಸು ಪೂರ್ವದಿಂದಲೂ ಕನ್ನಡ ಸಾಹಿತ್ಯದಲ್ಲಿ ಬಳಕೆಯಲ್ಲಿತ್ತು. ಆದರೆ ಎಲ್ಲೋ ಕ್ವಚಿತ್ತಾಗಿ ಮಾತ್ರ. ಅದನ್ನು ಸಮಗ್ರ ಗ್ರಂಥಗಳನ್ನು ಬರೆಯುವುದಕ್ಕೆ ಬಳಸಿಕೊಂಡ ದಿಟ್ಟತನ ಹರಿಹರನದು. ಆತನು ಬರೆಯಹೊರಟ ಶಿವಶರಣರ ಕಥೆಗಳಿಗೆ ನಿರರ್ಗಳವಾಗಿ ಹರಿಯುವಂತಹ ಛಂದಸ್ಸಾಗಿ ಕಾಣಿಸಿತು, ರಗಳೆ; ಅದನ್ನು ಬಳಸಿಕೊಂಡ. ಅದರೆ ಆದಿ ಅಂತ್ಯಗಳಲ್ಲಿ ಪ್ರಾಸವನ್ನು ಬಳಸಿದುದರಿಂದ ದೀರ್ಘವಾದ ಕಥೆಗಳಲ್ಲಿ ಅತನ ಛಂದಸ್ಸು ಕೇಳುವವರನ್ನು ಬೇಸರಗೊಳಿಸಬಹುದು. ಆತನು ಇನ್ನೊಂದು ಹೆಜ್ಜೆ ಮುಂದುವರಿದು ಪ್ರಾಸದ ನಿಯಮವನ್ನೂ ಕಿತ್ತುಹಾಕಿದ್ದರೆ, ಇಂದಿನ ಸರಳರಗಳೆಯಂತೆ ಎಂತಹ ದೀರ್ಘನಿರೂಪಣೆಗೂ ಅದು ಸರಿಹೋಗುತ್ತಿತ್ತು. ಅದಕ್ಕೆ ಬದಲಾಗಿ ಹರಿಹರ ಕವಿ ದೀರ್ಘವಾದ ಜೀವನ ಚರಿತ್ರೆಗಳನ್ನು ನಿರೂಪಿಸುವಾಗ ಅವುಗಳನ್ನು ಬೇರೆ ಬೇರೆಯ ಸ್ಥಲಗಳಾಗಿ ವಿಂಗಡಿಸಿ, ಒಂದು ಸ್ಥಲವನ್ನು ರಗಳೆಯಲ್ಲಿಯೂ ಮತ್ತೊಂದನ್ನು ಗದ್ಯದಲ್ಲಿಯೂ ಬರೆಯ ಹೊರಟ. ಕನ್ನಡ ಸಾಹಿತ್ಯದಲ್ಲಿ ಗದ್ಯಕಾವ್ಯಗಳು ಬಹು ಸ್ವಲ್ಪ. ಚಂಪೂ ಕಾವ್ಯಗಳಲ್ಲಿ ಅಲ್ಲಲ್ಲಿ ಕಥೆಯ ಕೊಂಡಿಯಾಗುವುದಕ್ಕಾಗಿ ಗದ್ಯವನ್ನು ಬಳಸುತ್ತಿದ್ದರು. ಆದರೆ ಹರಿಹರ ಕವಿ ಇಡೀ ಒಂದು ಸ್ಥಲವನ್ನೆಲ್ಲಾ ಗದ್ಯದಲ್ಲಿಯೇ ರಚಿಸುತ್ತಾನೆ. ಆತನ ರಗಳೆಯಂತೆ ಗದ್ಯವೂ ಕಥಾ

ನಿರೂಪಣೆಗೆ ಸೊಗಸಾಗಿ ಹೊಂದಿಕೊಳ್ಳುತ್ತದೆ. ಹರಿಹರಕವಿಗೆ ಮೇಲ್ಪಂಕ್ತಿ ಯಾಗಿ ದೊರೆತ ಗದ್ಯ ಚಂಪೂಗ್ರಂಥಗಳದಲ್ಲ, ವಚನಕಾರರದು. ಹರಿಹರನ ಕೈಲಿ ಗದ್ಯಸಾಹಿತ್ಯ ಮೈದುಂಬಿಕೊಂಡು ಕಳೆಗೂಡಿತು. ಕನ್ನಡ ಗದ್ಯ ಸಾಹಿತ್ಯದ ಚರಿತ್ರೆಯಲ್ಲಿ ಹರಿಹರಕವಿ ಒಂದು ಮೈಲಿಗಲ್ಲು.

ಹರಿಹರ ಕವಿ ಕನ್ನಡಸಾಹಿತ್ಯದಲ್ಲಿ ನೂತನ ಪಥವೊಂದನ್ನು ನಿರ್ಮಿಸಿ ಯುಗಪುರುಷನಾದ. ಇದರ ಜೊತೆಗೆ ಆತನ ಕಾವ್ಯಗಳು ರಸಮಯ ವಾಗಿವೆ. ಇದಕ್ಕೂ ಹೆಚ್ಚಾಗಿ ಆತನು ಲೋಕಕಲ್ಯಾಣವನ್ನು ಸಾಧಿಸಿದ ಸಂತರ ಚರಿತ್ರೆಗಳನ್ನು ಚಿತ್ರಿಸಿ, ಓದುಗರು ಆತ್ಮಕಲ್ಯಾಣವನ್ನು ಪಡೆಯಲು ಮಾರ್ಗದರ್ಶನ ಮಾಡಿಸಿದ. ಪ್ರೊ. ಡಿ. ಎಲ್. ನರಸಿಂಹಾಚಾರ್ಯರು ಹೇಳುವಂತೆ 'ಅವನ ಸಂಪರ್ಕದಿಂದ ನಮ್ಮ ಹೃದಯ ಗಂಗಾಸ್ನಾನ ಮಾಡಿದಂತಾಗುತ್ತದೆ.' ಆದ್ದರಿಂದಲೇ ವೀರಶೈವ ಕವಿಗಳೆಲ್ಲರೂ ತಮ್ಮ ಕಾವ್ಯಾರಂಭದಲ್ಲಿ ಆತನಿಗೊಂದು ಪುಷ್ಪಾಂಜಲಿಯನ್ನು ಅರ್ಪಿಸಿ, ಕೃತಿ ರಚನೆಗೆ ತೊಡಗುತ್ತಾರೆ. ಹನ್ನೆರಡನೆಯ ಶತಮಾನದ ಕಡೆಯ ಭಾಗ ಮತ್ತು ಹದಿಮೂರನೆಯ ಶತಮಾನದ ಆದಿ ಭಾಗದಲ್ಲಿದ್ದ ಆ ಕವಿ ತನ್ನ ಕಾಲದ ಸೀಮಾಪುರುಷ. ಷಡಕ್ಷರ ಕವಿ ಆತನನ್ನು ಕುರಿತು 'ಹರೀಶ್ವರಸ್ತ್ರೇನ ಕವಿಃ ಕಃ' ಎಂಬ ಮಾತು ಕಾಲಗರ್ಭದಿಂದ ತೂರಿ ಬಂದು, ಉತ್ತರವಿಲ್ಲದೆ ಅನುರಣಿತವಾಗುತ್ತಿದೆ.

**ಹರಿಹರನ ರಗಳೆಗಳು—೧೦೬**

I **ಪುರಾತನರ ರಗಳೆಗಳು**—(೧) ಅತಿಭಕ್ತ (೨) ಅಮರನೀತಿ (೩) ಅಯ್ಯಡಿ (೪) ಅರಿವಾಳ್ತಾಂಡ (೫) ಅಃಪೋತಿ (೬) ಆನಾಯನಾರ (೭) ಇರಿಭಕ್ತ (೮) ಇಹಃ ಪಗೆಯಾಂಡ (೯) ಇಳೆಯಾಂಡ ಗುಡಿಮಾರ (೧೦) ಎಡೆಗಣೆಯ ಪೆರುಮಾಳೆ (೧೧) ಏಣಾಧಿನಾಥ (೧೨) ಒಲಘಾಂಡ ಮೂರ್ತಿ (೧೩) ಕಡೆವೂರ ಕಾರಿ (೧೪) ಕಣಂಬುಲ್ಲ ನಂಬಿ (೧೫) ಕಣ್ಣಪ್ಪ (೧೬) ಕಲಿಕಂಪ (೧೭) ಕಲಿಕಾಮದೇವ (೧೮) ಕಲಿಯ ನಾಯ್ಯರ (೧೯) ಕಳೆಚಂಗ ಚೋಳ (೨೦) ಕಳೆಚಂಗ ಪೆರುಮಾಳ (೨೧) ಕರಿಕಾಲಮ್ಮೆ (೨೨) ಕುಲಚ್ಚರಿ (೨೩) ಕೊಂಗುಲಿಯ ಕಲಿಯ (೨೪) ಕೊಲ್ಲಿಲಿ (೨೫) ಗಣನಾಥ ದೇವ (೨೬) ಚಂಡೇಶ ಪಿಳ್ಳೆ (೨೭) ಚೇರು ತೊಣೆಯಾಂಡ

(೨೮) ಚೇರಮ (೨೯) ಜಡೆಯ ನಾಯನಾರ-ಸುಜ್ಞಾನಿ (೩೦) ತಿರು ನೀಲ ಕಂಠ (೩೧) ತಿರು ನೀಲಕಂಠ ಪಾಣ (೩೨) ತಿರು ನೀಲ ನಕ್ಕ (೩೩) ತಿರು ಕುರಂಪೆಯ ತೊಂಡ (೩೪) ತಿರುನಾಳ್ಪೋವ (೩೫) ತಿರು ಮೂಲದೇವ (೩೬) ನಂಬಿಯಣ್ಣ (೩೭) ನಮಃ ಶಿವಾಯ ಮುರುಘ (೩೮) ನಮಿನಂದಿ (೩೯) ನರಸಿಂಗ ಮುನಿ (೪೦) ನಿಡುಮಾರದೇವ (೪೧) ನೈಶ (೪೨) ಪೊಗಲ್ ತೊಣೆಯಾಂಡ (೪೩) ಪಾಂಡ್ಯ ಮಹಾದೇವಿ (೪೪) ಪೂಸಲೆಯಾಂಡ (೪೫) ಪೆರುಮಳಲಿಯ ಕುರುಂಬ (೪೬) ಮಾನಕಂಜಾರ (೪೭) ಮೂರ್ಖ (೪೮) ಮೆರೆ ಮಿಂಡದೇವ (೪೯) ಮೋನಿ ಇಡವ (೫೦) ರುದ್ರ ಪಶುಪತಿ (೫೧) ವರದಂಡಿ ಭಕ್ತ (೫೨) ವರಕೃತಾಂತ (೫೩) ವರಶಕ್ತಿ (೫೪) ವಾಗೀಶ್ವರ (೫೫) ವಾಯಿಲಾರ (೫೬) ಸಾಂಖ್ಯತೊಂಡ (೫೭) ಸಿರಿಯಾಳ (೫೮) ಸೇದಿರಾಜ (೫೯) ಸೋಮಾಸೀ ಮಾರ (೬೦) ಚೆನ್ನಯ ಮಾದರ (೬೧) ನಂಬಿಯಕ್ಕ (೬೨) ತಿಲ್ಲೈವೇಳಾಂಥರರು (೬೩) ಪೊಯ್ಯಡಿ (೬೪) ಮನು ಚೋಳ

II **ನೂತನರ ರಗಳೆಗಳು**—(೧) ಅಮ್ಮವ್ವೆ (೨) ಆದಯ್ಯ (೩) ಉದ್ಭಟ (೪) ಏಕಾಂತ ರಾಮಿ ತಂದೆ (೫) ಓಹಿಲಯ್ಯ (೬) ಕುಂಬಾರ ಗುಂಡಯ್ಯ (೭) ಕೆಂಭಾವಿ ಭೋಗಣ್ಣ (೮) ಕೇಶಿರಾಜ ದಣ್ಣಾಯಕ (೯) ಕೋವೂರ ಬೊಮ್ಮಯ್ಯ (೧೦) ಕೋಳೂರ ಕೊಡಗೂಸು (೧೧) ತೆಲಗು ಜೊಮ್ಮಣ್ಣ (೧೨) ಪ್ರಭುದೇವ (೧೩) ಬಸವೇಶ್ವರ (೧೪) ಬಾಣ (೧೫) ಬಾಹೂರ ಬೊಮ್ಮಯ್ಯ (೧೬) ಮಲುಹಣ (೧೭) ಮಹದೇವಿಯಕ್ಕ (೧೮) ಮಳೆಯ ದೇವರಾಜ (೧೯) ಮಾರುಡಿಗೆ ನಾಚಿತಂದೆ (೨೦) ಮಾಸೂಟ ಚೌಂಡಯ್ಯ (೨೧) ರೇವಣ ಸಿದ್ಧ (೨೨) ವೈಜಕವ್ವೆ (೨೩) ಶಂಕರ ದಾಸಿಮಯ್ಯ (೨೪) ಸಾಮವೇದಿ (೨೫) ಸುರಗಿ ಚೋಳಯ್ಯ (೨೬) ಹಲಾಯುಧ (೨೭) ಹಾವಿನ ಹಾಳ ಕಲ್ಲಯ್ಯ (೨೮) ಹೇರೂರ ಹೆಣ್ಣು

III **ಸಂಕೀರ್ಣ ರಗಳೆಗಳು**—(೧) ಪಿಂಡೋತ್ಪತ್ತಿ (೨) ಪುಷ್ಪ (೩) ಲಿಂಗಾರ್ಚನೆ (೪) ಹಂಪೆಯರಸ (೫) ಗುಣಸ್ತೋತ್ರ (೬) ಜಯ (೭) ನಮಃ ಶಿವಾಯ (೮) ಪಂಚಾಕ್ಷರಿ (೯) ಪಂಪಾಕ್ಷೇತ್ರ (೧೦) ಮಹಿಮಾ (೧೧) ರುದ್ರಾಕ್ಷಿ (೧೨) ವಿಭೂತಿ

**IV ಕೈಲಾಸದ ಕಥೆಯ ರಗಳೆಗಳು**—(೧) ದಕ್ಷಧ್ವರ (೨) ಭೃಂಗಿ. **ಕವಿ ರಾಘವಾಂಕ**

ಹತ್ತನೆಯ ಶತಮಾನದ ಪಂಪ, ರನ್ನರು; ಹದಿಮೂರನೆಯ ಶತಮಾನದ ಹರಿಹರ, ರಾಘವಾಂಕರು—ಈ ಜೋಡಿಗಳು ಕನ್ನಡದೇವಿಯ ಮುಡಿಗುಡಿಗಿಟ್ಟ ಜೋಡುಕಲಶಗಳು. ಪಾಡಿತ್ಯ, ಪ್ರತಿಭೆ, ಶ್ರೀಮಂತಜೀವನ–ಇವುಗಳಿಗೆ ಪಂಪರನ್ನರು ಪ್ರತೀಕಗಳಾಗಿದ್ದರೆ ಈಶಭಕ್ತಿ, ಮಾನವಪ್ರೇಮ, ಸ್ವತಂತ್ರಮನೋವೃತ್ತಿ–ಇವುಗಳಿಗೆ ಹರಿಹರ ರಾಘವಾಂಕರು ಪ್ರತಿನಿಧಿಗಳು. ಮೊದಲ ಜೋಡಿ ರಾಜಾಸ್ಥಾನದಲ್ಲಿ ಮಾನ್ಯ; ಎರಡನೆಯ ಜೋಡಿ ಜನತಾಜನಾರ್ದನನ ಗೌರವಕ್ಕೆ ಭಾಗಿ. ರನ್ನಕವಿ ಆದಿಕವಿಯಿಂದ ಸ್ಫೂರ್ತಿಯನ್ನು ಪಡೆದ; ರಾಘವಾಂಕ ಶಿವಕವಿಯಿಂದ ಸ್ಫೂರ್ತಿಯನ್ನು ಮಾತ್ರವೇ ಅಲ್ಲ, ತಾನು ಹರಿಹರನ 'ವರಸುತ'ನೆಂದು ಹೇಳಿಕೊಳ್ಳುವಷ್ಟು ಮಾರ್ಗದರ್ಶನವನ್ನು ಪಡೆದ. ಇದು ಸಹಜವಾದುದೇ. ರಾಘವಾಂಕನು ಹರಿಹರನಿಗೆ ದೂರದವನೇನಲ್ಲ, ಸೋದರಳಿಯ; ಸೋದರಿ ರುದ್ರಾಣಿಯ ಮಗ. ಸೂಕ್ಷ್ಮಮತಿಯಾಗಿ ಪ್ರತಿಭಾಶಾಲಿಯಾಗಿದ್ದ ಈ ಸೋದರಳಿಯನಲ್ಲಿ ಹರಿಹರನಿಗೆ ಅಪಾರವಾದ ಮಮತೆ. ತಾನೇ ಸ್ವತಃ ಈ ಮಗುವಿನ ಶಿಕ್ಷಣ ರಕ್ಷಣೆಗಳನ್ನು ವಹಿಸಿಕೊಂಡು, ಆತನನ್ನು ಮುಂದಕ್ಕೆ ತಂದನು. ಗಣಿಯ ರತ್ನ ಸಾಣೆಗೆ ಸಿಕ್ಕಿ ಉಜ್ವಲಕಾಂತಿಯನ್ನು ಪಡೆಯಿತು. ದೈವದತ್ತವಾದ ಪ್ರತಿಭೆಯೊಡನೆ ಗುರುದತ್ತವಾದ ಪಾಂಡಿತ್ಯವೂ ಸೇರಿ ಸುವರ್ಣಕ್ಕೆ ಸುವಾಸನೆ ಬಂದಂತಾಯಿತು. ಶಿವನ ಸಾನ್ನಿಧ್ಯ, ಶಿವಕವಿಯ ಸಹವಾಸ, ಶಿವಭಕ್ತರ ಸಾಹಚರ್ಯ–ಇವುಗಳ ಫಲವಾಗಿ ರಾಘವಾಂಕನಲ್ಲಿ ಧರ್ಮ ಕಾವ್ಯಧರ್ಮಗಳು ಅವಳಿಜವಳಿಯಾಗಿ ಬೆಳೆದು ಬಂದುವು. ಆತನ ಕಾವ್ಯಶಕ್ತಿ ಅಂಕುರಿಸಿ ಅರಳಾಯಿತು. ಅದರ ಸುವಾಸನೆ ದೇಶದಲ್ಲೆಲ್ಲಾ ವ್ಯಾಪಿಸಿತು. ಪುಷ್ಪದ ಕಂಪಿಗೆ ದುಂಬಿಗಳು ಬಂದೆರಗುವಂತೆ ಆತನ ಕೀರ್ತಿ ರಾಜಾಸ್ಥಾನದ ಗಮನವನ್ನು ಸೆಳೆಯಿತು. ಆತನು ತನ್ನ ಅಮರಕೃತಿ 'ಹರಿಶ್ಚಂದ್ರ ಕಾವ್ಯ'ವನ್ನು ಹಂಪೆಯ ರಾಜನಾದ ದೇವರಾಜನ ಸಭೆಯಲ್ಲಿ ಓದಿ 'ಕವಿ ಶರಭ ಭೇರುಂಡ' ಎಂಬ ಬಿರುದನ್ನು ಪಡೆದನು. ಆತನು 'ಉಭಯ ಕವಿ ಕಮಲ ರವಿ'–ಕನ್ನಡ ಸಂಸ್ಕೃತಗಳೆರಡರಲ್ಲೂ ದೊಡ್ಡ ಕವಿ–'ಉಭಯ ಕವಿ ಶರಭ

ಭೇರುಂಡ—ಕನ್ನಡ ಸಂಸ್ಕೃತ ಕವಿಗಳಲ್ಲಿ ಶರಭನಂತಿರುವವರನ್ನು ಮೀರಿಸಿ ಗಂಡಭೇರುಂಡನಂತಿರುವವನು,—'ಅದಟ ಕವಿ ನಿಕರ ಚೌದಂತ '—ಶೂರ ಕವಿಗಳಿಗೆ ಐರಾವತ—ಎಂಬ ಬಿರುದುಗಳನ್ನೂ ಈತನು ಪಡೆದಿದ್ದನೆಂದು ತಿಳಿದುಬರುತ್ತದೆ.

ಹರಿಹರ ಪುಣ್ಯಶಾಲಿ. 'ಶಿಷ್ಯಾದಿಚ್ಛೇತ್ ಪರಾಜಯಂ' ಎಂಬ ಸೂಕ್ತಿ ಆತನಲ್ಲಿ ಸಾರ್ಥಕವಾಯಿತು. ಆತನು ರಳಪ್ರಯೋಗದಲ್ಲಿ ನಿಯಮೋಲ್ಲಂಘನೆ ಮಾಡಿದ; ಚಂಪೂ ಸಂಪ್ರದಾಯವನ್ನು ತ್ಯಜಿಸಿ, ರಗಳೆಯ ಛಂದಸ್ಸಿನಲ್ಲಿ ತನ್ನ ಕಾವ್ಯಗಳನ್ನು ಬರೆದ. ಕವಿ ರಾಘವಾಂಕನು ತನ್ನ ಗುರುವಿನ ನಿರಂಕುಶಮತಿಯನ್ನು ಮುಂದುವರಿಸಿ, 'ಷಟ್ಪದಿ ಬ್ರಹ್ಮ'ನೆಂಬ ಕೀರ್ತಿಗೆ ಪಾತ್ರನಾದ. ರಾಘವಾಂಕನಿಗಿಂತಲೂ ಮುಂಚೆ ಷಟ್ಪದಿಯಿತ್ತು; ಆದರೆ ಬರಿಯ ಶರಷಟ್ಪದಿ ಮಾತ್ರ ಕ್ವಚಿತ್ತಾಗಿ ಕಾವ್ಯದಲ್ಲಿ ಬಳಕೆಯಾಗಿತ್ತು. ರಾಘವಾಂಕನು ಬಹುಶಃ ಷಟ್ಪದಿಯಲ್ಲಿ ವೈವಿಧ್ಯವನ್ನು ತರಲು ಸಾಕಷ್ಟು ಪ್ರಯೋಗಗಳನ್ನು ಮಾಡಿದನೆಂದು ತೋರುತ್ತದೆ. ಆತನು ತನ್ನ ಕಾವ್ಯಗಳನ್ನೆಲ್ಲಾ ವಾರ್ಧಕಷಟ್ಪದಿಯಲ್ಲಿ ಬರೆದಿರುವುದಾಗಿ ಕಂಡುಬರುತ್ತದೆ. ಆದರೆ ಆತನ 'ವೀರೇಶ್ವರ ಚರಿತೆ'ಯಲ್ಲಿನ ಷಟ್ಪದಿರಚನೆ ವಿಲಕ್ಷಣವಾಗಿದೆ. ಅದರ ಸಾಲುಗಳಲ್ಲಿರುವ ಮಾತ್ರಾಸಂಖ್ಯೆ ಇತರ ವಾರ್ಧಕ ಷಟ್ಪದಿಗಳ ಪಾದಗಳಲ್ಲಿನಂತೆಯೇ ಇರುವುದಾದರೂ ಗಣಗಳು ಮಾತ್ರ ಐದು ಮಾತ್ರೆಯ ಗಣಗಳಿಗೆ ಬದಲಾಗಿ ನಾಲ್ಕು ಮಾತ್ರೆಯ ಗಣಗಳಾಗಿವೆ. ರಾಘವಾಂಕನ ಕಾವ್ಯಗಳಲ್ಲಿ 'ಶರಭ ಚಾರಿತ್ರ,' 'ಹರಿಹರ ಮಹತ್ವ' ಎಂಬೆರಡು ಗ್ರಂಥಗಳು ಇನ್ನೂ ದೊರೆತಿಲ್ಲ. ಕವಿಯು ಅವುಗಳನ್ನೂ ವಾರ್ಧಕಷಟ್ಪದಿಯಲ್ಲೆ ಬರೆದು ಇನ್ನೇನಾದರೂ ಪ್ರಯೋಗಗಳನ್ನು ನಡಸಿರಬಹುದೇ ಎಂಬ ಕುತೂಹಲ ಹುಟ್ಟುವುದು ಸಹಜವಾಗಿಯೇ ಇದೆ.

ಈವರೆಗೆ ಉಪಲಬ್ಧವಾಗಿರುವ ರಾಘವಾಂಕನ ಗ್ರಂಥಗಳು ನಾಲ್ಕು—ಹರಿಶ್ಚಂದ್ರ ಕಾವ್ಯ, ವೀರೇಶ ಚರಿತೆ, ಸಿದ್ಧರಾಮ ಪುರಾಣ, ಸೋಮನಾಥ ಚರಿತೆ. ಇವುಗಳಲ್ಲಿ ಕಾವ್ಯದೃಷ್ಟಿಯಿಂದ ಅಗ್ರಗಣ್ಯವಾದುದು ಹರಿಶ್ಚಂದ್ರ ಕಾವ್ಯ. ಅದರ ಹಿರಿತನವನ್ನು ಹೇಳುತ್ತಾ ಕವಿಯು ಕಾವ್ಯದ ಹುರುಳನ್ನೂ ನಿರೂಪಿಸುತ್ತಾನೆ—

ವಸುಧಾಧಿಪತಿ ಹರಿಶ್ಚಂದ್ರ ಘನಸತ್ಯನೆಂ
ದೊಸೆದು ವಾಸಿಷ್ಠನಿಂದ್ರಂಗೆನಲು ಕೌಶಿಕಂ
ಹುಸಿ ಮಾಳ್ಪೆನೆಂದು ಭಾಷೆಯನಿತ್ತು ಧರೆಗೆ ಬಂದವನಿಪನ ಸತಿಪುತ್ರರ
ಅಸುವಂತ್ಯವೆನೆ ನಿಗ್ರಹಂ ಮಾಡೆ ತಪ್ಪದಿರೆ
ಶಶಿಮೌಳಿ ಶ್ರೀ ವಿಶ್ವನಾಥ ಭೂಪಂಗೆ ಕರು
ಣಿಸಿ ಸಕಲ ಸಾಮ್ರಾಜ್ಯವಿತ್ತಾತನಂ ಮೆರೆದ ಕೃತಿ ಪುಣ್ಯದಾ
ಕೃತಿಯಿದು

ವಸಿಷ್ಠ ಋಷಿಯು ದೇವೇಂದ್ರನೊಡನೆ ಹರಿಶ್ಚಂದ್ರನು ಪರಮಸತ್ಯವಂತನೆಂದು ಹೇಳಿದ. ವಿಶ್ವಾಮಿತ್ರನು ಆ ಮಾತನ್ನು ಹುಸಿಮಾಡುವೆನೆಂದು ಪ್ರತಿಜ್ಞೆಮಾಡಿ, ಅದಕ್ಕೆ ತಕ್ಕಂತೆ ರಾಜನ ಹೆಂಡತಿ ಮಕ್ಕಳ ಪ್ರಾಣ ಹೋಗುವಷ್ಟು ಆತನಿಗೆ ಹಿಂಸೆಕೊಟ್ಟ. ಆದರೂ ಹರಿಶ್ಚಂದ್ರನು ಸತ್ಯಕ್ಕೆ ತಪ್ಪದಿರಲು ಪರಮೇಶ್ವರನು ಆತನಿಗೆ ಪ್ರತ್ಯಕ್ಷನಾಗಿ, ಪೂರ್ವ ಪದವಿಯನ್ನಿತ್ತು ಲೋಕದಲ್ಲಿ ಮೆರೆದ ಈ ಕೃತಿ ಪುಣ್ಯದ ಆಕೃತಿಯುಳ್ಳದು. ಇದನ್ನು ಬರೆದ ಕವಿ 'ಚತುರ ಕವಿರಾಯ ಹಂಪೆಯ ಹರೀಶ್ವರನ ವರಸುತನುಭಯ ಕವಿ ಕಮಲರವಿ ರಾಘವಾಂಕ ಪಂಡಿತ.' ಮಾವನಂತೆ ಅಳಿಯನೂ ಪರಮ ಶಿವಭಕ್ತ. ಪ್ರಾಣವೇ ಹೋಗುವಂತಿದ್ದರೂ ಕೂಡ 'ಹಂಪೆಯರಸನ ಪೊಗಳ್ವ ನಾಲಗೆಯೊಳನ್ಯ ದೈವದ ಭವಿಗಳಂ ಕೀರ್ತಿಪೆನಾದಡೆ ಮನಸಿಜಾರಿಯ ಭಕ್ತನಲ್ಲ ತಾನು' ಎಂಬ ಕೆಚ್ಚುಳ್ಳವನು. ತನ್ನ ಈ ಕಾವ್ಯ ಕನ್ನಿಕೆಯನ್ನು ಹಡೆದು ವಿರೂಪಾಕ್ಷನಿಗೆ ಧಾರೆಯೆರೆದು ಕೊಟ್ಟನಂತೆ! ಆ ಕನ್ನೆಗೆ

ರಸ ಜೀವ ಭಾವವೊಡಲರ್ಥವವಯವ ಶಬ್ದ
ವಿಸರವೇ ನುಡಿಯಲಂಕಾರ ತೊಡಿಗೆಯು ತ
ವೆ ಸುಲಕ್ಷಣವೆ ಲಕ್ಷಣ ವಿಮಳಪದನ್ಯಾಸ ನಡೆ ರೀತಿ ಸುಕುಮಾರತೆ
ರಸಿಕತನ ಸುಳಿ ಸುಖಂ ನಿಳಯವಂತಪ್ಪ ಯೀ
ಪೊಸ ಕಾವ್ಯಕನ್ನಿಕೆಯ ಪಡೆದು ಪಂಪಾಂಬಿಕೆಯ
ರಸ ವಿರೂಪಾಕ್ಷಂಗೆ ಕೊಟ್ಟ ಹಂಪೆಯ ರಾಘವಾಂಕನೇಂ ಕೃತ
ಕೃತ್ಯನೋ

ನವರಸಗಳೇ ಜೀವ, ಭಾವವೇ ದೇಹ, ಅರ್ಥವೇ ಅಂಗಾಂಗಳು, ಶಬ್ದಗಳ ಸಮೂಹವೇ ಮಾತು, ಕಾವ್ಯದ ಅಲಂಕಾರಗಳೇ ಅವಳ ಆಭರಣಗಳು, ಕಾವ್ಯಲಕ್ಷಣವೇ ಅವಳ ಸುಲಕ್ಷಣ, ಪದಗಳ ಜೋಡಣೆಯೇ ನಡಗೆ, ಕಾವ್ಯರೀತಿಯೇ ಅವಳ ಸೌಕುಮಾರ್ಯ, ರಸಿಕತನವೇ ಅವಳ ಸುಳಿ, ಕಾವ್ಯಾನಂದವೇ ಅವಳ ಮನೆ—ಇಂತಹ ಹೊಚ್ಚ ಹೊಸ ಕಾವ್ಯಕನ್ನಿಕೆಯನ್ನು ಹಡೆದು, ಪಂಪಾಂಬಿಕೆಯ ಅರಸನಾದ ವಿರೂಪಾಕ್ಷನಿಗೆ ಕೊಟ್ಟ ರಾಘವಾಂಕನು ಏನು ಧನ್ಯನೋ! ಅಹುದು ಆತನು ಧನ್ಯನೇ. ಕಾವ್ಯದಲ್ಲಿ ರಸವೇ ಜೀವವೆನ್ನುವ ಗುಟ್ಟನ್ನು ಅರಿತ ರಸಋಷಿ ರಾಘವಾಂಕ. ಆತನು ತನ್ನ ಕಾವ್ಯದಲ್ಲಿ ಹೊಸಕನ್ನಿಕೆಗೆ ಹೋಲಿಸಿರುವುದೂ, ಆ ಕನ್ನೆಯನ್ನು ಭಗವಂತನಿಗೆ ಅರ್ಪಿಸಿರುವುದೂ ಎಂತಹ ಮಾರ್ಮಿಕವಾದ ಸುಂದರ ಕಲ್ಪನೆ! ಆ ಕಾವ್ಯಕನ್ನಿಕೆ ಕವಿಯ ಭಾವಗಳ ಸಮಾವೇಶದಿಂದ ಸೃಷ್ಟಿಯಾದ ಒಡಲಿನಲ್ಲಿ, ರಸದ ಜೀವವನ್ನು ಪಡೆದವಳು. ಆಕೆಯ ಅಂಗಾಂಗಗಳು ಸುಪುಷ್ಟವಾಗಿ, ಮಾಂಸಲವಾಗಿ ಮೋಹಕವಾಗಿ ಕಾಣಿಸಬೇಕಾದರೆ ಅಲ್ಲಿನ ಮಾತುಗಳು ಅರ್ಥವತ್ತಾಗಿರಬೇಕು. ಅದರಲ್ಲಿ ಬಳಕೆಯಾದ ಮಾತುಗಳು ಸಜೀವವಾಗಿ ಕಾವ್ಯಕನ್ನಿಕೆಯೇ ನಿಂತು ಮಾತನಾಡುವಂತಿರಬೇಕು. ಸ್ವಭಾವ ಸುಂದರಿಯಾದವಳು ಒಡವೆಗಳಿಂದ ಅಲಂಕೃತಳಾದರೆ ಸುವರ್ಣಕ್ಕೆ ಸುವಾಸನೆ ಬಂದಂತೆ; ಕಾವ್ಯಕನ್ನಿಕೆ ಕಾವ್ಯಾಲಂಕಾರಗಳಿಂದ ಶೋಭಿಸುತ್ತಿದ್ದಾಳೆ. ಮಾತುಗಳ ಜೋಡಣೆಯೂ ಮನೋಹರವಾಗಿದೆ. ಜೊತೆಗೆ ಸುಕುಮಾರಾದಿ ಕಾವ್ಯಗುಣಗಳೂ ಹೆಣ್ಣಿನ ಸದ್ಗುಣಗಳಂತೆ ಇಲ್ಲಿವೆ. ಇಂತಹ ಸರ್ವಾಂಗ ಸುಂದರಿಯಾದ ದಿವ್ಯಕಾವ್ಯಕನ್ನೆಯನ್ನು ಶಿವನಿಗೆ ಅರ್ಪಿಸಬಲ್ಲವನು ಸುಕೃತಿಯಲ್ಲದೆ ಮತ್ತೇನು ?

ರಾಘವಾಂಕನ 'ಹರಿಶ್ಚಂದ್ರಕಾವ್ಯ'ವು ರನ್ನನ 'ಗದಾಯುದ್ಧ'ದಂತೆ ತನ್ನ ಕಾವ್ಯದ ಚೌಕಟ್ಟಿನಲ್ಲಿ ನಾಟಕವೊಂದನ್ನು ಹೊತ್ತು ಕುಳಿತಿರುವ ಕೃತಿ. ಗದಾಯುದ್ಧದಂತೆ ಇದನ್ನೂ ಅತ್ಯಲ್ಪವಾದ ಬದಲಾವಣೆಗಳೊಡನೆ ನಾಟಕವಾಗಿ ಪರಿವರ್ತಿಸಿಯೂ ಆಗಿದೆ. ಈ ಕಾವ್ಯರೂಪದ ನಾಟಕ ಪ್ರಾರಂಭವಾಗುವುದು ಮಂಗಳಕರವಾದ ದೇವೇಂದ್ರನ ಆಸ್ಥಾನದ ದೃಶ್ಯದಿಂದ. ಆತನು ಒಂದು ಇರುಳು ಒಡ್ಡೋಲಗವನ್ನು ನೆರಹಿದ್ದಾನೆ. ಸಭಾ

ಸದರ ಮಧ್ಯದಲ್ಲಿ ಋಷಿಗಳು, ಅವರ ಮಧ್ಯದಲ್ಲಿ ನದಿಗಳ ಮಧ್ಯದ ಗಂಗೆ ತುಂಗೆಯರಂತೆ ವಿಶ್ವಾಮಿತ್ರ ವಸಿಷ್ಠರು. ದೇವೇಂದ್ರನ ದೃಷ್ಟಿ ಸಭೆಯ ಮೇಲೆಲ್ಲಾ ಒಮ್ಮೆ ಹರಿದು ಈ ಋಷಿಗಳ ಮೇಲೆ ನೆಲೆಸಿತು. ಆತ ಕೇಳಿದ— 'ಇಕ್ಷ್ವಾಕು ವಂಶದರಸುಗಳೊಳತಿ ಬಲರೆನಿಸಿ ಮನ ವಚನ ಕಾಯದೊಳ ಗೊಮ್ಮೆಯುಂ ಹುಸಿ ಹೊದ್ದದಂತೆ ನಡೆವ ಕಲಿಗಳಾರಯ್ಯ?' ಎಂದು. ವಸಿಷ್ಠರು ಹೇಳಿದರು—'ಹಿಂದಣರಸುಗಳನುದ್ಧರಿಸಲೆಂದವತರಿಸಿದ ವಸುಧಾಧಿಪತಿ ಹರಿಶ್ಚಂದ್ರನಾತನ ಸತ್ಯದೆಸಕಮಂ ಪೊಗಳೆನ್ನಳವೇ? ಫಣಿಪತಿಗರಿದು, ಶಶಿಮೌಳಿಯಾಣೆ.' ವಸಿಷ್ಠನ ವಿರೋಧಿ ವಿಶ್ವಾಮಿತ್ರ. ತುಂಬಿದ ಸಭೆಯಲ್ಲಿ ಮೊದಲು ವಸಿಷ್ಠನನ್ನು ಇಂದ್ರ ಪ್ರಶ್ನಿಸಿದುದು ಆತನಿಗೆ ಸಹಿಸಲಿಲ್ಲ. ಇದರ ಮೇಲೆ ವಸಿಷ್ಠ 'ಏತಿ' ಎಂದುದಕ್ಕೆಲ್ಲಾ ಅವನು 'ಪ್ರೇತಿ'. ಅಲ್ಲದೆ ಆತನಿಗೆ ಜನರಲ್ಲಿ ದೋಷ ಹುಡುಕುವುದೇ ಸ್ವಭಾವ. ಆದ್ದರಿಂದ ಆತ ಸಿಡಿದೆದ್ದು 'ನಿಲ್ ನುಡಿಯಬೇಡ, ಬೇಸರದೆ ಕೇಳ್ವ ದೇವೇಂದ್ರನುಂಟೆಂದಿಂತು ಹೇಸದ ಕಟಕಟ ಸೊರಹುವರೆ?' ಎಂದ. ವಸಿಷ್ಠ 'ಅವನಧಿಕನಲ್ಲದನೆ?' ಎಂದರೆ ವಿಶ್ವಾಮಿತ್ರ 'ರಾಸಿ ಹೊನ್ನುಂಟಧಿಕನಹನು' ಎಂದ. 'ಹೊನ್ನ ಮಾತೀ ಸಭೆಯೊಳೇಕೆ? ಸತ್ಯನೆ? ಹೇಳು' ಎಂದು ಕೇಳಿದರೆ 'ಸತ್ಯ ಲೇಶವಂತವ ನಾಳ್ವ ದೇಶದೊಳು ಕೇಳ್ದರಿಯೆ' ಎಂದು ಉತ್ತರವಿತ್ತ. ಅಷ್ಟೇ ಅಲ್ಲ, ಹರಿಶ್ಚಂದ್ರ ಸುಳ್ಳನೆನ್ನುವುದಕ್ಕೆ ಒಂದು ನಿದರ್ಶನವನ್ನೂ ಕೊಟ್ಟ. ವಸಿಷ್ಠನ ಬಾಯಿ ಕಟ್ಟಿದಂತಾಯಿತು. ಆದರೂ ಆತನು 'ಹಲವು ಮಾತೇಕಾ ಹರಿಶ್ಚಂದ್ರ ಭೂನಾಥನೊಳಗಸತ್ಯವನು ಕಾಣಿಸಲು ಬಲ್ಲರು ಧಾತ್ರಿಯೊಳು ಮುನ್ನ ಹುಟ್ಟಿದವರಿಲ್ಲಿನ್ನು ಹುಟ್ಟುವರ ಕಾಣೆ. ನಾನಿದ ಬಲ್ಲೆನು. ಉಳಿದವರ ಹವಣೇನು?' ಎಂದ. ಇದನ್ನು ಕೇಳಿ ವಿಶ್ವಾಮಿತ್ರನ ಕೋಪ ಕೆಂಗೆಂಡವಾಯಿತು. 'ನಿಲ್, ಆಡದಿರು, ಬಾಯಿ ಹಿರಿದುಂಟೆಂದು. ವನಧಿ ಪರಿಯಂತ ಧರೆಗರಸಾತನದರೊಳಂ ಧನವುಳ್ಳ ಶಿಷ್ಯನಾಗಿಹನು. ನಿನಗತಿ ವಿಪುಳ ಧನವನಾರಾಧಿಸುವನಂತಲ್ಲದಾತನಾರಯ್ಕೆಯೊಳಗಿರ್ಪ ನೀನು. ಎಸಿತನಗ್ಗಲಿಸಿ ಬಣ್ಣಿಸಲೊಪ್ಪದಯ್ಯ?' ಎಂದು ಕಟಕಿಯಾಡಿದನು. ಇಬ್ಬರ ಶಾಂತಿಯೂ ಕಲಕಿತು. ಹರಿಶ್ಚಂದ್ರನು ಸತ್ಯವನ್ನು ಬಿಡನೆಂದು ವಸಿಷ್ಠನೂ ಆತನಿಂದ ಅಸತ್ಯವನ್ನು ಆಡಿಸುವೆನೆಂದು ವಿಶ್ವಾಮಿತ್ರನೂ

ಘೋರವಾದ ಪ್ರತಿಜ್ಞೆ ಮಾಡುತ್ತಾರೆ. ಆಗ ದೇವಸಭೆಯ ಚಿತ್ರ ಹೀಗಿತ್ತಂತೆ!

ಧರೆಗಗನವಡಸಿ ಕಾದುವಡೆಡೆಯಲಿಹ ಚರಾ
ಚರವೆಲ್ಲಿ ಹೊಗಲಿ ಮುನಿದಖಿಳಮಂ ಸುಟ್ಟೊಸೆದು
ಮರಳಿ ಹುಟ್ಟಿಸಬಲ್ಲ ಮುನಿಗಳಿಬ್ಬರ ಶಾಂತಿಸವೆದ ಕದನದ ಮುಖದಲಿ
ಇರಬಾರದೇಳಬಾರದು ನುಡಿಯಬಾರದಂ
ತಿರಬಾರದಹುದೆನಲು ಬಾರದಲ್ಲೆನಬಾರ
ದೆರಡುಂ ನಿರೋಧದಿಂದೊಡ್ಡೋಲಗಂ ಚಿಂತೆ ಮುಸುಕಿ ಸೈವೆರಗಾದುದು.

ಭೂಮಿ ಆಕಾಶಗಳು ಪರಸ್ಪರ ದ್ವೇಷದಿಂದ ಹೋರಾಡಲು, ಅವುಗಳ ಮಧ್ಯದಲ್ಲಿನ ಚರಾಚರಜಗತ್ತು ಎಲ್ಲಿ ಹೊಕ್ಕರೂ ಬಿಡದೆ ಕೋಪದಿಂದ ಅದನ್ನು ಭಸ್ಮಮಾಡಿ ಮತ್ತೆ ಅದನ್ನು ಸೃಷ್ಟಿಸುವಂತಹ ಶಕ್ತರು, ಆ ಋಷಿಗಳಿಬ್ಬರೂ. ಅವರು ಶಾಂತಿಯನ್ನು ಕಳೆದುಕೊಂಡು ಯುದ್ಧಮುಖದಲ್ಲಿರುವಾಗ ಆ ಸಭಾಸದರು ಅಲ್ಲಿ ಇರುವಂತೆ ಇಲ್ಲ, ಎದ್ದು ಹೋಗುವಂತೆ ಇಲ್ಲ; ಮಾತನಾಡುವಂತೆ ಇಲ್ಲ, ಸುಮ್ಮನಿರುವಂತೆಯೂ ಇಲ್ಲ; ಅಹುದು ಎನ್ನುವಂತಿಲ್ಲ; ಅಲ್ಲ ಎನ್ನುವಂತಿಲ್ಲ; ಆದ್ದರಿಂದ ಅಸ್ತಿನಾಸ್ತಿಗಳಿಗೆ ಅವಕಾಶವಿಲ್ಲದೆ ಆ ಒಡ್ಡೋಲಗವು ಚಿಂತೆಯಿಂದ ದಿಗ್ಭ್ರಮೆಗೊಂಡಿತ್ತು. ಅವರ ವಾಗ್ವಾದ ಮುಂದುವರಿದು ಮುಂದಿನ ಕಥೆಗೆ ಅಸ್ತಿಭಾರವನ್ನು ಹಾಕುತ್ತದೆ. ನಾಟಕರೂಪದಲ್ಲಿ ಬರೆದಾಗ ಇದೊಂದು ಸುಂದರವಾದ ದೃಶ್ಯವಾಗುತ್ತದೆ.

ವಸಿಷ್ಠ ವಿಶ್ವಾಮಿತ್ರರ ಜಗಳ ಹರಿಶ್ಚಂದ್ರನ ಕಷ್ಟಕ್ಕೆ ಮೂಲವಾಗುತ್ತದೆ, 'ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು' ಎಂಬ ಗಾದೆಗೆ ತಕ್ಕಂತೆ. ವಿಶ್ವಾಮಿತ್ರನು ತನ್ನ ಪ್ರತಿಜ್ಞೆಯನ್ನು ಈಡೇರಿಸಿಕೊಳ್ಳಲು ಅಣಿಯಾಗುತ್ತಾನೆ. ಆದರಿಂದ ಈಗ ಕಾರ್ಯರಂಗವು ಸ್ವರ್ಗದಿಂದ ಭೂಮಿಗೆ ಇಳಿಯುತ್ತದೆ. ವಿಶ್ವಾಮಿತ್ರನು ತನ್ನ ಅಂತರಂಗವನ್ನು ಅರಿಯದ ಋಷಿಗಳಿಗೆ ಹಚ್ಚಿಕೊಟ್ಟು, ಅವರಿಂದ ಹರಿಶ್ಚಂದ್ರನು ಸುವರ್ಣಯಾಗವನ್ನು ಕೈಗೊಳ್ಳುವಂತೆ ಯೋಜಿಸುತ್ತಾನೆ. ಯಾರು ಏನು ಕೇಳಿದರೂ ಅದನ್ನು ದಾನವಾಗಿ ಕೊಡುವೆನೆಂದು ಯಜ್ಞಕರ್ತೃ ಪ್ರತಿಜ್ಞೆ ಕೈಕೊಂಡ. ಈ ಪ್ರತಿಜ್ಞೆಯನ್ನು ಭಂಗಪಡಿಸುವೆನೆಂದುಕೊಂಡ ವಿಶ್ವಾಮಿತ್ರ ಆತನ ಬಳಿಗೆ ಬಂದು, ಆನೆ

ಯನ್ನೇರಿ ಕವಡೆಯನ್ನು ಮೇಲಕ್ಕೆಸೆದರೆ ಎಷ್ಟು ಎತ್ತರ ಹೋಗಬಹುದೋ ಅಷ್ಟುದ್ದದ 'ಪೊಸ ಪೊನ್ನರಾಶಿಯನೀವುದರಸ' ಎಂದು ಕೇಳಿದ. ಹರಿಶ್ಚಂದ್ರ ಸ್ವಲ್ಪವೂ ಸಂಕೋಚವಿಲ್ಲದೆ 'ತಥಾಸ್ತು' ಎಂದ. ವಿಶ್ವಾಮಿತ್ರನ ಎಣಿಕೆ ತಪ್ಪಾಯಿತು; ಹಣದ ರಾಶಿ ಸಿದ್ಧವಾಯಿತು. ವಿಶ್ವಾಮಿತ್ರ ಅದನ್ನು ಬೇಕಾದಾಗ ತೆಗೆದುಕೊಳ್ಳುವುದಾಗಿ ತಿಳಿಸಿ, ಅದನ್ನು ಅವನಲ್ಲಿಯೇ ನ್ಯಾಸವಾಗಿಟ್ಟ. ತನ್ನ ಕಾರ್ಯ ಮೊದಲ ತುತ್ತಿಗೆ ನೊಣ ತಿಂದಂತಾದುದರಿಂದ, ತನ್ನ ಪ್ರತಿಜ್ಞೆಯ ಮೊದಲ ಕಂತು ವಿಫಲವಾದುದರಿಂದ ಆತನು ಖತಿಗೊಂಡ. ನಾನಾ ಮೃಗಪಕ್ಷಿಗಳನ್ನು ಸೃಷ್ಟಿಮಾಡಿ, ದೇಶದಲ್ಲೆಲ್ಲಾ ಕ್ಷೋಭೆಯನ್ನುಂಟು ಮಾಡಿದ. ಇದರ ಫಲವಾಗಿ ರಾಜನು ಬೇಟೆಯನ್ನು ಕೈಕೊಳ್ಳಬೇಕಾಯಿತು. ಆಗ ವಿಶ್ವಾಮಿತ್ರನು ಒಂದು ಮಾಯೆಯ ಹಂದಿಯನ್ನು ಸೃಷ್ಟಿಮಾಡಿ ರಾಜನಿದ್ದ ಸ್ಥಳಕ್ಕೆ ಕಳುಹಿಸಿದನು. ಅದು ರಾಜನ ಪಡೆಯನ್ನೆಲ್ಲಾ ಕೊಂದು ಕಳವಳವನ್ನು ಹುಟ್ಟಿಸಿತು. ಬೇಡ ಪಡೆಯವನೊಬ್ಬನು ಜೀವಭಯದಿಂದ ರಾಜನ ಬಳಿಗೆ ಓಡಿ ಬರುತ್ತಿದ್ದಾನೆ—ರಾಘವಾಂಕನ ವರ್ಣನಾ ವೈಖರಿಯನ್ನು ನೋಡಿ—

ಬಿಟ್ಟತಲೆ, ಗಿಡುಹಿಡಿದು ಕಳೆದುಡುಗೆ, ಕಾಡ ಮುಳ್ಳು
ನಟ್ಟು ಕುಂಟುವ ಪದಂ, ಬೆನ್ನ ಬಿಗುಹಳಿದೆಳಲ್ವ
ಮೊಟ್ಟೆಗೂಳೆಡಹಿ ಕೆಡೆದೊಡೆದ ಮೊಳಕಾಲ್, ತೇಕುವಳ್ಳೆಗಳು
ವೆರಸೊರಲುತ
ಕೆಟ್ಟೋಡುತಿರಲೊರ್ವನವನ ಕಂಡಿದಿರಡ್ಡ
ಗಟ್ಟಿ ಕೇಳಲು ಹು ಹು ಹು ಹುಲಿಯಲ್ಲ ಹಂದಿಯರೆ
ಯಟ್ಟಿ ಬರುತಿರ್ದುದೆನೆ ಯೆಲ್ಲಿ ತೋರೆನಲು ನೀವೇ ಅರಸಿಕೊಂಬುದೆಂದ॥

ಕೂದಲು ಬಿರಿಹೊಯ್ದ ತಲೆ, ಓಡಿ ಬರುವಾಗ ಗಿಡಕ್ಕೆ ಸಿಕ್ಕಿಕೊಂಡು ಕಳಚಿ ಹೋಗಿರುವ ಉಡುಗೆಗಳು, ಕಾಡಿನ ಮುಳ್ಳು ನೆಟ್ಟು ಕುಂಟುತ್ತಿರುವ ಪಾದ, ಬೆನ್ನಿಗೆ ಬಿಗಿದಿದ್ದ ಗಂಟು ಸಡಿಲವಾಗಿ ಹಿಂದೆ ಜೋತಾಡುತ್ತಿರುವ ಬುತ್ತಿಯ ಗಂಟು, ಎಡವಿ ಬಿದ್ದು ಜಜ್ಜಿಹೋಗಿರುವ ಮೊಳಕಾಲು, ಏದುತ್ತಿರುವ ಪಕ್ಕೆಲುಬುಗಳು—ಇವುಗಳಿಂದ ಕೂಡಿ ಭಯದಿಂದ ಕಿರಿಚಿಕೊಳ್ಳುತ್ತಾ ಓಡುತ್ತಿದ್ದಾನೆ. ಹಾಗೆ ಓಡುವವನನ್ನು ಮತ್ತೊಬ್ಬನು ಸಂಧಿಸಿ 'ಏಕಯ್ಯ ಹೀಗೆ ?'

ಎಂದು ಕೇಳಲು ಒಂದು ಕಡೆ ಭಯ ಮತ್ತೊಂದು ಕಡೆ ಆಯಾಸ—ಇವುಗಳಿಂದ ಅವನ ಬಾಯಲ್ಲಿ ಮಾತು ಸರಾಗವಾಗಿ ಬರುವಂತಿಲ್ಲ; 'ಹು ಹು ಹು ಹುಲಿ ಅಲ್ಲ, ಹಂದಿ ಅಟ್ಟಿಸಿಕೊಂಡು ಬರುತ್ತಿದೆ'ಎಂದು ಉಗ್ಗುತ್ತಾನೆ. 'ಎಲ್ಲಿ ತೋರಿಸಯ್ಯ' ಎಂದರೆ ಅವನಿಗೆ ಬೆರಳುಮಾಡಿ ತೋರಿಸುವಷ್ಟು ವ್ಯವಧಾನವಿಲ್ಲ; 'ನೀವೇ ಹುಡುಕಿಕೊಳ್ಳಿ' ಎಂದು ಓಡುತ್ತಲೆ ಉತ್ತರ ಕೊಡುತ್ತಾನೆ. ಭಯಭರಿತನಾದ ಆ ಬೇಡನ ಚಿತ್ರ, ಪದ್ಯವನ್ನು ಓದುತ್ತಿದ್ದಂತೆಯೇ, ಕಣ್ಣಿಗೆ ಕಟ್ಟಿ ನಿಲ್ಲುತ್ತದೆ. ಸರಳ ಸುಂದರವಾಗಿ ಮಾತ್ರವೇ ಅಲ್ಲ, ಅತ್ಯಂತ ಸ್ವಾಭಾವಿಕವಾಗಿಯೂ ವರ್ಣಿಸುವುದರಲ್ಲಿ ರಾಘವಾಂಕ ಎತ್ತಿದ ಕೈ.

ಮಾಯೆಹಂದಿಯನ್ನು ಕೊಲ್ಲಲು ರಾಜನೇ ಸ್ವತಃ ಧನುರ್ಧಾರಿಯಾಗಬೇಕಾಯಿತು. ಅದನ್ನು ಅಟ್ಟಿಕೊಂಡು ಆತನು ತನಗರಿವಿಲ್ಲದೆಯೇ ವಿಶ್ವಾಮಿತ್ರನ ಆಶ್ರಮವನ್ನು ಪ್ರವೇಶಿಸಿದ. ಅಲ್ಲೊಬ್ಬ ಋಷಿ ಆತನ ಕಣ್ಣಿಗೆ ಬಿದ್ದ. ಉತ್ಸಾಹಮೂರ್ತಿಯಾದ ಹರಿಹರನ ಶಿಷ್ಯ ರಾಘವಾಂಕನು ಗುರುವಿನಂತೆಯೇ ಉತ್ಸಾಹದಿಂದ ಋಷಿಯ ಚಿತ್ರವನ್ನು ಕೊಡುತ್ತಾ 'ಹೊಗಳುತ್ತ, ಹಾರಯಿಸುತುಬ್ಬುತ್ತ, ಕೊಬ್ಬುತ್ತ, ನಗುತ, ನಲಿಯುತ್ತ, ಹಾಡುತ್ತಾಡುತಾನಂದವೊಗೆಯುತ್ತಿದ್ದ' ನೆಂದು ಹೇಳುತ್ತಾನೆ. ಆ ಋಷಿಯು ಹೇಳಿದ ಮಾತು ಮಾತ್ರ ಹರಿಶ್ಚಂದ್ರನ ಉತ್ಸಾಹವನ್ನೆಲ್ಲಾ ಉಡುಗಿಸಿತು. ಅದು ವಿಶ್ವಾಮಿತ್ರಾಶ್ರಮ! ಗುರು ವಸಿಷ್ಠರು ಅಲ್ಲಿಗೆ ಹೋಗದಂತೆ ನಿಷೇಧಿಸಿದ್ದರು. ವಿಧಿ ತನ್ನನ್ನು ಅಲ್ಲಿಗೆ ಎಳೆತಂದುದಕ್ಕಾಗಿ ರಾಜನು 'ಪ್ರೊಯ್‌ವಡೆದಂತೆ ಹಾವಗಿದು ಬಿಟ್ಟಂತೆ' ಬಗೆಬೆದರಿ ಖಿನ್ನನಾದನು. ಚಿಂತೆಯಲ್ಲಿ ಮುಳುಗಿದ ರಾಜ ತನ್ನ ಮಡದಿಯ ತೊಡೆಯಮೇಲೆ ತಲೆಯಿಟ್ಟು, ಕಾದ ತಲೆಯನ್ನು ತಂಪುಮಾಡಿಕೊಳ್ಳಲು ಯತ್ನಿಸಿದನು. ಆದರೆ ಭಯಂಕರವಾದ ಕನಸೊಂದು ಮುಂದೆ ಬರುವ ಕೇಡಿಗೆ ಸೂಚನೆಯಂತೆ ಕಾಣಿಸಿಕೊಳ್ಳುತ್ತದೆ. ಆತ ಕಂಡ ಕನಸನ್ನು ಹೆಂಡತಿಗೆ ಹೇಳುತ್ತಾನೆ—

ಘುಡುಘುಡಿಸುತೊಬ್ಬ ಮುನಿ ಬಂದು ನಾನೋಲಗಂ
ಗೊಡುವ ಮಣಿಮಂಟಪದ ಕಂಭವೆಲ್ಲವನು ತಡೆ
ಗಡಿದು ಹೊಂಗಳಸಂಗಳಂ ಮಾಣದೊಡೆಬಡಿದು ನೆರೆದ ಸಭೆಯೊಳಗೆನ್ನನು

ಕೆಡಹಿ ಸಿಂಹಾಸನವನೊಯ್ವಾಗಳೆನ್ನೆದೆಯ
ನಡರ್ದೊಂದು ಕಾಗೆ ಕರದುದು ಬಳಿಕ್ಕಾಂ ಗಿರಿಯ
ನಡರ್ದು ಶಿಖರದೊಳೆಸೆವ ಮಣಿಗೃಹಂಬೊಕ್ಕೆನಿದರಂತಸ್ಥವೇನೆಂದನು.

ಘರ್ಜನೆಮಾಡಿಕೊಂಡು ಬಂದ ಋಷಿಯೊಬ್ಬ ರಾಜನ ಒಡ್ಡೋಲಗವನ್ನು ಪ್ರವೇಶಿಸಿ, ರತ್ನಖಚಿತವಾದ ಆ ಸಭಾಂಗಣದ ಕಂಭಗಳನ್ನೆಲ್ಲಾ ಕಡಿದು ಹಾಕಿ, ಬಂಗಾರದ ಕಳಸಗಳನ್ನು ಒಡೆದುಹಾಕಿ, ತುಂಬಿದ ಸಭೆಯಲ್ಲಿದ್ದ ರಾಜನನ್ನು ಕೆಳಕ್ಕೆ ಕೆಡವಿ, ಆತನ ಸಿಂಹಾಸನವನ್ನು ಕೊಂಡೊಯ್ದನು. ಆಗ ಕೆಳಗೆ ಬಿದ್ದಿದ್ದ ರಾಜನ ಎದೆಯ ಮೇಲೆ ಕಾಗೆಯೊಂದು ಹತ್ತಿ ಕೂಗ ತೊಡಗಿತು. ಇಷ್ಟಾದಮೇಲೆ ಆ ರಾಜ ಪರ್ವತವೊಂದನ್ನೇರಿ ಅದರ ಶಿಖರ ದಲ್ಲಿದ್ದ ರತ್ನಖಚಿತವಾದ ಅರಮನೆಯೊಂದನ್ನು ಹೊಕ್ಕನು. ಈ ಕನಸನ್ನು ಕೇಳಿ ರಾಣಿಯ ಹೃದಯವೂ ನಡುಗಿತು. ಆದರೂ ಆಕೆ "ಏನಾದರೂ ಆಗಲಿ, ಕಡೆಗೆ ನಿನ್ನ ಹರಣಕ್ಕೆ ಕೇಡು ಬಂದಡೆ ಬರಲಿ, ಸತ್ಯವನ್ನು ಮಾತ್ರ ಬಿಡ ಬೇಡ" ಎಂದು ರಾಜನಿಗೆ ಉಪದೇಶಿಸಿದಳು. ಆ ವೇಳೆಗೆ ವಿಶ್ವಾಮಿತ್ರನು ಹಂದಿಯ ಸಾವಿನ ನೆಪದಿಂದ 'ಕೋಪಗಿಚ್ಚು ಭುಗಿಲೆಂದುರಿದು'. 'ಸಿಕ್ಕಿದ ನಲಾ ಭೂಪಸಿಂಹ. ನಾನಾಯ್ತು ತಾನಾಯ್ತು. ಕೆಡಿಸದೆ ಮಾಣೆನ್' ಎಂದು ಹೂಂಕರಿಸುತ್ತಿರಲು, ಅವನ ಹುಂಕಾರದಿಂದ ಇಬ್ಬರು ಹೆಣ್ಣುಗಳು ಹುಟ್ಟಿದರು. ಮುನಿಯಾದವನಿಗೆ ಕೋಪ, ದ್ವೇಷ, ಅನಿಮಿತ್ತ ವೈರ—ಇವು ಹೊಲೆ. ಅದರಿಂದ ಹುಟ್ಟಿದ ಹೆಣ್ಣುಗಳು ಹೊಲತಿಯರೇ. ಅವರನ್ನು ಕುರಿತು ವಿಶ್ವಾಮಿತ್ರನು 'ಜನಪತಿ ಹರಿಶ್ಚಂದ್ರ ಬಂದು ನಮ್ಮ ತಪೋ ವನದಲ್ಲೈದನೆ, ನೀವು ಸರ್ವಬುದ್ಧಿಗಳೊಳಾತನ ಮರುಳು ಮಾಡುತಿರಿ. ಹೋಗಿ' ಎಂದು ಹೇಳಿ ಅಟ್ಟಿದನು. ಅವರು ಆತನಲ್ಲಿಗೆ ಬಂದು ತಮ್ಮ ದಿವ್ಯವಾದ ಸಂಗೀತದಿಂದ ರಾಜನನ್ನು ಮೆಚ್ಚಿಸಿದರು. ಆತನು ಅವರಿಗೆ ತನ್ನ ಆಭರಣಗಳನ್ನು ತೆಗೆದು ಬಹುಮಾನವಾಗಿ ಕೊಟ್ಟನು. ಅವರು ಅದನ್ನು ಸ್ವೀಕರಿಸದೆ ಆತನೊಡನೆ ವಾಗ್ವಾದಕ್ಕೆ ನಿಂತರು. ರಾಘವಾಂಕ ಕವಿಯ ನಾಟಕೀಯ ಶೈಲಿ ಇಲ್ಲಿ ಮುಗಿಲು ಮುಟ್ಟಿದೆ

ಗಾನರಾಣಿಯರು—"ಬಡತನದ ಹೊತ್ತಾನೆ ದೊರಕಿ ಫಲವೇನು? ನೀರಡ
ಸಿರ್ದ ಹೊತ್ತಾಜ್ಯ ದೊರಕಿ ಫಲವೇನು? ರುಜೆಯಡಸಿ ಕೆಡೆದಿಹ

ಪೊತ್ತು ರಂಭೆ ದೊರೆಕೊಂಡಲ್ಲಿ ಫಲವೇನು? ಸಾವ ಹೊತ್ತು ಪ್ರೌಢವಿಯೊಡೆತನ ದೊರಕಿ ಫಲವೇನು? ಕಡುಪಿಸಿಲು ಹೊಡೆದು ಬೆಂಡಾಗಿ ಬೀಳ್ವಮಗೆ ನೀನೊಲಿದು ಮಣಿದೊಡಿಗೆಗಳನಿತ್ತು ಫಲವೇನು?.... ನಿನ್ನ ಮುತ್ತಿನ ಸತ್ತಿಯನಿತ್ತು ಸಲಹು.'

ರಾಜ—'ರವಿಕುಲದ ಪೀಳಿಗೆಯೊಳೊಗೆದ ರಾಯರ್ಗೆ ಪಟ್ಟವ ಕಟ್ಟುವಂದಿದಿಲ್ಲದಡರಸುತನ ಸಲ್ಲದವನಿಯೊಳು, ಯುದ್ಧರಂಗದೊಳಿದಂ ಕಂಡ ಹಗೆಗಳು ನಿಲ್ಲರ್, ಇದರ ಕೆಳಗೆ ಕವಿವ ನೆಳಲೊಳಗಾವನಿರ್ದನಾತಂಗೆ ತಾಂ ತವಿಲ್ ಎಡರು ಬಡತನಂ ರೋಗವಪಕೀರ್ತಿ ಪರಿಭವಭಯಂ ಹರಿವುದು. ಇದನರಿದರಿದು ಸತ್ತಿಗೆಯ ಕೊಡಬಹುದೇ?

ಗಾನರಾಣಿಯರು—'ಅನುನಯದೊಳೆಲ್ಲವಂ ಕೊಡಬಹುದು, ಬಿಡಬಹುದು'

ರಾಜ—'ಜನನಿಯಂ ಜನಕನಂ ನಲ್ಲಳಂ ದೈವಮಂ ಮನವಾರ ನಂಬಿ ನಚ್ಚಿರ್ದ ಪರಿವಾರಮಂ ಕೊಡುವ ಬಿಡುವತಿ ಕಲಿಗಳು ಜನರೊಳಗೆ ಜನಿಸರು.'

ಗಾನರಾಣಿಯರು—'ನೀವೀಗ ಪೇಳ್ದನಿತರೊಳು ಬೇಡಿದಡೆ ಕೊಡಬೇಡ, ಕೊಡೆಯನೀಯೆನೆ ಲೋಭವೇಕರಸ?'

ರಾಜ—'ಲೋಗರಿಗೆ ಕೊಡಬಾರದಾಗಿ ಸತಿ, ವಂಶಗತವಾಗಿ ಬಂದುದರಿಂದ ತಂದೆ, ಪಟ್ಟವ ಕಟ್ಟುವಾಗಲ್ ಅರ್ಚಿಸಿಕೊಂಬುದಾಗಿ ದೈವಂ, ನೆಳಲತಂಪನೊಸೆದೀವುದಾಗಿ ಸಾಗಿಸುವ ತಾಯ್, ಧುರದೊಳರಿಗಳಂ ನಡುಗಿಸುವುದಾಗಿ ಚತುರಂಗಬಲವೆನಿಸಿತೀ ಛತ್ರ: ಎಂಬಾಗಳಿದನರಿದರಿದು ಬೇಡುವರನತಿ ಮರುಳರೆನ್ನರೇ ಮೂಜಗದೊಳು.'

ಗಾನರಾಣಿಯರು—'ಇಳೆಯೊಳಗೆ ಹೆಸರುಳ್ಳ ದಾನಿಯೆಂಬುದನು ಕೇಳ್ದಿಳಸಿ ಕಟ್ಟಾಸೆವಟ್ಟಯ್ತಂದು ಬೇಡಿ ನಿಷ್ಫಳವಾಗದಂತೆ, ನಾವತಿ ಮರುಗದಂತೆ, ಅಳಲದಂತೆ, ಬಿಸುಸುಯ್ಯದಂತೆ, ತಿಳಿದು ನೀನೆಮಗೆ ವಲ್ಲಭನಾಗಿ ಚಿತ್ತದುಮ್ಮಳಿಕೆಯಂ ಕಳೆ ಹರಿಶ್ಚಂದ್ರ ಭೂನಾಥ!' (ಎಂದು ಕೈಮುಗಿಯುತ್ತಾರೆ)

ರಾಜ—(ತನಗೆ ತಾನೇ) 'ಲಲಿತವಸುಮತಿ ಹುಟ್ಟುವಂದು ಹುಟ್ಟಿದ ಸೂರ್ಯಕುಲದ ರಾಯರ್ಗೆ ವಂಶದೊಳು ಕೀರ್ತಿಯೊಳು ಭುಜಬಲದೊಳು

ಒರೆದೊರೆಯೆನಿಸಿ ಕನ್ನಿಕೆಯರಂ ಕೊಡುವ ಭೂಪರಿಲ್ಲ ಇಂದು ತನಕ, ಹೊಲತಿಯರು ಬಂದು ಆವು ಸತಿಯರಾದಪ್ಪೆವೆಂಬುಲಿಹ ವೆಂಬುದು ಬಂದ ಕಾಲ ಗುಣವೊ! ಸಿಂದ ನೆಲದ ಗುಣವೊ!

[ರಾಜನು ಕೋಪಿಸಿಕೊಳ್ಳುತ್ತಾನೆ]

ಗಾನರಾಣಿಯರು--[ರಾಜನ ಅಭಿಪ್ರಾಯವನ್ನು ಗ್ರಹಿಸಿ] ಪಾವನಕ್ಷೀರವುಂ ಕೊಡುವ ಕೆಚ್ಚಲಮಾಂಸವಾವ ಲೇಸು? ಇಸಿದುಳ್ಳ ಮಧುವನೊಸೆ ದೀವ ನೊಳವಾವ ಲೇಸು? ಅಧಿಕ ಕಸ್ತೂರಿಯ ಕೊಡುವ ಮೃಗ ನಾಭಿ ತಾನಾವ ಲೇಸು? ದೇವರಿಗೆ ಸಲ್ಲವೆ? ಉತ್ತಮ ಗುಣಂಗಳಿ ರ್ದಾವ ಕುಂದಂ ಕಳೆಯಲಾರವವನೀಶ? ಇಂದೆಮ್ಮ ರೂಪ ಜವ್ವನ ವಿರಲು ಕುಲದ ಮಾತೇಕೆ?

ರಾಜ—ಅಕ್ಕಕ್ಕ ಬಚ್ಚಲುದಕಂ ತೀಳಿದಡಾರ ಮೀಹಕ್ಕೆ ಯೋಗ್ಯಂ? ನಾಯ್ಗೆ ಹಾಲುಳ್ಳಡಾವನೂಟಕ್ಕೆ ಯೋಗ್ಯಂ? ಪ್ರೇತವನದೊಳಗೆ ಬೆಳೆದ ಹೂವಾರ ಮುಡಿಹಕ್ಕೆ ಯೋಗ್ಯಂ? ಮಿಕ್ಕ ಹೊಲತಿಯರು ನೀವೆನೆ ನಿಮ್ಮ ಜವ್ವನದ ಸೊಕ್ಕು, ರೂಪಿನ ಗಾಡಿ, ಜಾಣತನದೊಪ್ಪ ವೇತಕ್ಕೆ ಯೋಗ್ಯಂ? ರಮಿಸಿದವರುಂಟೆ? ಶಿವ ಶಿವ ಈ ಮಾತು ತಾ ಹೊಲೆ.

ಗಾನರಾಣಿಯರು— ಹಾಡನೊಲಿದಾಲಿಸಿದ ಕಿವಿಗೆ ಹೊಲೆಯಿಲ್ಲ; ಮಾತಾಡಿ ಹೊಗಳಿದ ಬಾಯ್ಗೆ ಹೊಲೆಯಿಲ್ಲ; ರೂಪ ನೆರೆ ನೋಡಿದ ವಿಲೋ ಚನಕೆ ಹೊಲೆಯಿಲ್ಲ; ಮೆಯ್ಯ್‌ಮುಡಿಗಳಿಂ ಸುಳಿವ ತೆಂಗಾಳಿಯಿಂ ತೀಡುವ ಸುಗಂಧಮಂ ವಾಸಿಸಿದ ನಾಸಿಕಕೆ ನಾಡೆ ಹೊಲೆಯಿಲ್ಲ; ಸೋಂಕಿಂಗೆ ಹೊಲೆಯುಂಟಾಯ್ತೆ? ಕೂಡಿರ್ದ ಪಂಚೇಂದ್ರಿಯಂ ಗಳೊಳು ನಾಲ್ಕಧಮ ಒಂದಧಿಕವೆ?

ರಾಜ—ಕಂಡರಿವವೈಸಲೆ ನಯನೇಂದ್ರಿಯಂ? ಘ್ರಾಣ ಕೊಂಡರಿವವೈಸಲೇ ವಾಸನೆಯ? ಕರ್ಣಂಗಳುಂಡರಿವವೈಸಲೇ ಶಬ್ದಮಂ? ದೂರದಿಂದ ಲ್ಲದೆ, ಆವು ಮುಟ್ಟಲಿಲ್ಲ: ಭಂಡತನವೀ ಮಾತು. ಇದಕ್ಕೆ ಉಪ ಮಾನವೇ ಕೆಂಡವನು ಮುಟ್ಟಿದಡೆ ಬೇವಂತೆ ಕೇಳ್ದಡಂ ಕಂಡು ವಾಸಿ ಸಿದಡಂ ಬೆಂದವೇ? ಕಾಳುಗೆಡೆಯದೆ ಹೋಗಿ ನೀವು.

ಗಾನರಾಣಿಯರು—ಶಾಪದಿಂದೆಮಗಾದ ದುಷ್ಕುಲಂ ಸತ್ಕುಲಜ ಭೂಪ ನಿನ್ನಯ ಸಂಗದಿಂ ಶುದ್ಧವಪ್ಪುದು.

ರಾಜ—ನಿಮಗೋಸುಗ ಎನ್ನ ಕುಲಮಂ ಕೆಡಿಪೆನೆ?

ಗಾನರಾಣಿಯರು—ಪಾಪಮಂ ತೊಳೆವ ಗಂಗಗೆ ಪಾಪಲೇಪವುಂಟಾಯ್ತೆ?

ರಾಜ—ಕುಲಧರ್ಮವೀ ಪಂಥವಲ್ಲ; ಕೊಡವಾಲ ಕೆಡಿಸುವಡಾಮ್ರವೆನಿತಾಗಬೇಕು?

ಗಾನರಾಣಿಯರು—ಮಾತಿಂಗೆ ಮಾತುಗೊಡಲರಿದು. ನಿನ್ನಯ ನುತ ಖ್ಯಾತಿಗೆ, ಆದಟಿಂಗೆ, ರೂಪಿಂಗೆ, ಸುರುಚಿರ ಗುಣವ್ರಾತಕ್ಕೆ, ಹರಯಕ್ಕೆ, ಗರುವಿಕೆಗೆ, ಮನಸಂದು ಮತಿಗೆಟ್ಟು ಮರುಳಾದೆವು; ಓತು ಬಂದವರನುಪಚರಿಸದಿಪ್ಪುದು ನಿನಗೆ ನೀತಿಯಲ್ಲ; ಏಗೆಯ್ದಡಂ ಗಂಡನಾದಲ್ಲದಾತುರಂ ಪೋಗದು; ಇನ್ನೊಲಿದಂತೆ ಮಾಡು; ನಿನ್ನಯ ಬೆನ್ನ ಬಿಡೆವು.

ರಾಜ—ಬಳವಿಡಿದು ಬಂದು ಮಾಡುವುದೇನು? ನಮ್ಮ ಬೆಂಬಳಿಯಲೆನಿತು ಹೊಲೆಯರಿಲ್ಲ?

ಗಾನರಾಣಿಯರು—ಅಹಗೆ ಬಿಡೆವು; ಎಳಸಿ, ಮಚ್ಚಿಸಿ, ಮರುಳ್ಗೊಳಿಸಿ, ಮತ್ತೊಲ್ಲನವನಿಪನೆಂದು ಮೊರೆಯಿಡುತ್ತ ಇಳೆಯೊಳಗೆ ಸಾರುತ್ತ ದೂರುತ್ತ ಬಪ್ಪೆವು.

ಇವರ ಭಂಡತನವನ್ನು ಕಂಡು ರಾಜನಿಗೆ ಕೋಪ ಬಂದಿತು. ಕೈಲಿದ್ದ ಚಾವಟಿಯಿಂದ ಅವರನ್ನು ಬಾಯ್ಕೋಳುವಂತೆ ಹೊಡೆದು ಓಡಿಸಿದ. ಮೇಲಿನ ಸಂಭಾಷಣೆಯು ರಾಘವಾಂಕನೆಂತಹ ದೊಡ್ಡ ನಾಟಕಕಾರನಾಗಬಹುದಿತ್ತೆಂಬುದನ್ನು ದಿಗ್ದರ್ಶಿಸುತ್ತದೆ. ಕಾವ್ಯದ ಆರಂಭದಿಂದ ಕೊನೆಯವರೆಗೂ ನಮಗೆ ಇದೇ ಬಗೆಯಾದ ಸಂಭಾಷಣಾಚಾತುರ್ಯ ಕಾಣಬರುತ್ತದೆ. ಕವಿಯು ತನ್ನ ಕಾವ್ಯಕನ್ನಿಕೆಯನ್ನು ಶಬ್ದವಿಸರದ ನುಡಿಯಿಂದ ಅಳವಡಿಸಿರುವೆನೆಂದು ಹೇಳಿಕೊಂಡಿರುವುದು ಎಷ್ಟು ಉಚಿತವಾಗಿದೆ! ದಿವ್ಯವಾದ ಈ ಸಂಭಾಷಣಾ ಶೈಲಿಯಲ್ಲಿ ಬೆಳೆದುಕೊಂಡು ಹೋಗಿರುವ ಈ ಕಾವ್ಯಕಥೆ ಹೇಗೆ ಜೀವಪೂರ್ಣವಾಗಿದೆ, ಹೇಗೆ ಸ್ಪಷ್ಟವ್ಯಕ್ತಿತ್ವವನ್ನು ಪಡೆದಿದೆ, 'ಕಾವ್ಯಕನ್ನಿಕೆ—ಸಜೀವ ಮೂರ್ತಿ—ಎಂಬುದು ಹೇಗೆ ಸಾರ್ಥಕವಾಗಿದೆ—ಎಂಬುದು ಗಮನಾರ್ಹ.

ರಾಜನಿಂದ ಪೆಟ್ಟುತಿಂದ ಹೊಲತಿಯರು ವಿಶ್ವಾಮಿತ್ರನ ಬಳಿಗೆ ಓಡಿದರು. ಅದೇ ನೆಪಮಾಡಿಕೊಂಡು ವಿಶ್ವಾಮಿತ್ರನು ರಾಜನಿಂದ ರಾಜ್ಯಕೋಶಾದಿಗಳನ್ನು ಕಿತ್ತುಕೊಂಡು, ತನಗೆ ಹಿಂದೆ ಕೊಟ್ಟಿದ್ದ ದಕ್ಷಿಣೆಯ ಅಪಾರಧನವನ್ನು ಒಂದು ತಿಂಗಳ ಅವಧಿಯಲ್ಲಿ ಸಲ್ಲಿಸುವಂತೆ ವಿಧಿಸಿ, ಆತನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿ ಕಳುಹಿಸಿದನು. ಹರಿಶ್ಚಂದ್ರನ ಕಥೆಯೂ ಸತ್ಯಕ್ಕಾಗಿ ಆತನು ಅನುಭವಿಸಿದ ಕ್ಲೇಶಗಳೂ ರಾಘವಾಂಕನ ಸ್ವಕಪೋಲಕಲ್ಪಿತಗಳೇನೂ ಅಲ್ಲ. ವೇದಪುರಾಣ ಸಾಹಿತ್ಯಗಳಲ್ಲಿ ಆ ಕಥೆ ಹುಟ್ಟಿ ಬೆಳೆದು ಜನರಿಗೆ ಬಹು ಪ್ರಾಚೀನಕಾಲದಿಂದಲೂ ಚಿರಪರಿಚಿತವಾಗಿದ್ದುದೇ. ಆ ಹಳೆಯ ಕಥೆ ರಾಘವಾಂಕನ ಪ್ರತಿಭೆಯಲ್ಲಿ ಕರಗಿ, ಆತನ ಕಲ್ಪನಾಶಕ್ತಿಯಲ್ಲಿ ಮತ್ತೊಮ್ಮೆ ನೂತನ ಆಕಾರವನ್ನು ತಾಳಿ ನಮ್ಮ ಮೆಚ್ಚಿಗೆಗೂ ಆದರಕ್ಕೂ ಗೌರವಕ್ಕೂ ಪಾತ್ರವಾಗುತ್ತದೆ. ಕಥೆಯ ಸ್ಥೂಲರೇಖೆ ಹಳೆಯದಾದರೂ ಅದಕ್ಕೆ ವಿವರಗಳ ಬಣ್ಣ ತುಂಬಿ ತನ್ನ ವರ್ಣನಾವೈಖರಿಯಿಂದ ವೀರ ಕರುಣರಸಪರಿಪ್ಲುತವಾಗಿ ಚಿರ ನೂತನವೆಂಬಂತೆ ಕವಿ ರಚಿಸಿದ್ದಾನೆ. ತನ್ನ ಕಾವ್ಯಕನ್ನಿಕೆಗೆ 'ರಸ ಜೀವ' ಎಂದು ಹೇಳಿದ ಕವಿ ಆ ಜೀವ ತುಂಬುಜೀವವಾಗುವಂತೆ ಮಾಡಿದ್ದಾನೆ. ಹರಿಶ್ಚಂದ್ರನು ರಾಜ್ಯಭ್ರಷ್ಟನಾಗಿ ಹೋಗುವುದನ್ನು ಕಂಡ ಪ್ರಜೆಗಳು ಮರ ಮರ ಮರುಗುತ್ತಾರೆ.

ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ
ಪರಿಜನದ ಭಾಗ್ಯವಡವಿಗೆ ನಡೆಯುತಿದೆ ಸಪ್ತ
ಶರಧಿಪರಿವೃತಧರೆಯ ಸಿರಿಯ ಸೊಬಗಜ್ಞಾತವಾಸಕ್ಕೆ ಪೋಗುತಿದೆಕೊ
ಎರೆವ ದೀನಾನಾಥರಾನಂದವಡಗುತಿದೆ
ವರ ಮುನೀಂದ್ರರ ಯಾಗರಕ್ಷೆ ಬಲವಳಿಯುತಿದೆ
ನಿರುತನೆಂದೊಂದಾಗಿ ಬಂದು ಸಂದಿಸಿ ನಿಂದ ಮುಂದಿ ನೆರೆ ಮೊರೆ
ಯಿಟ್ಟುದು

ಊರಿನ ಪುಣ್ಯವು ಪುರುಷರೂಪದಿಂದ ಹೋಗುತ್ತಿದೆ; ಸೇವಕಜನರ ಭಾಗ್ಯ ಅಡವಿಗೆ ಹೋಗುತ್ತಿದೆ. ಆಸಮುದ್ರಾಂತ ಧರಾತಳದ ಐಶ್ವರ್ಯ ಅಜ್ಞಾತವಾಸಕ್ಕೆ ಹೋಗುತ್ತಿದೆ. ಬಿಕ್ಷೆಬೇಡುವ ದೀನಾನಾಥರ ಆನಂದವು

ಅಡಗುತ್ತಿದೆ. ಋಷಿಗಳ ಯಾಗರಕ್ಷೆ ದುರ್ಬಲವಾಗುತ್ತಿದೆ. ಇದು ಸತ್ಯ—
ಎಂದು ಪುರಜನರೆಲ್ಲರೂ ಒಂದಾಗಿ ಬಂದು ಗೋಳಿಟ್ಟರಂತೆ ; ಇಲ್ಲಿನ ರೂಪ
ಕಾಲಂಕಾರದ ಸೊಬಗು ಸ್ತುತ್ಯವಾಗಿದೆ, ಆ ಮೂಲಕ ವ್ಯಕ್ತವಾಗುವ ಕರುಣ
ರಸವೂ ಹೃದಯಸ್ಪರ್ಶಿಯಾಗಿದೆ. ಪುರಜನರು ಓದುಗರ ಪ್ರತಿನಿಧಿ
ಗಳೆಂಬಂತೆ ವಿಶ್ವಾಮಿತ್ರನನ್ನು ಶಪಿಸುವ ರೀತಿಯೂ ಮನೋಹರವಾಗಿದೆ.
ಹೊರಜಗತ್ತಿನಲ್ಲಿ ಅಲ್ಲೋಲಕಲ್ಲೋಲವಾಗುತ್ತಿರುವಂತೆ ಕಂಡರೂ ಧೀರೋ
ದಾತ್ತನಾದ ಹರಿಶ್ಚಂದ್ರ ತನ್ನ ಸಮತೆಯನ್ನು ಸ್ವಲ್ಪವೂ ಕಳೆದುಕೊಳ್ಳದೆ
ವಿಶ್ವಾಮಿತ್ರನನ್ನು ಉಪಚಾರದ ನುಡಿಗಳಿಂದ ಸತ್ಕರಿಸುತ್ತಾನೆ. ಪ್ರಜೆ
ಗಳನ್ನು 'ಮನದೊಳಗೆ ಮರುಗದಿರಿ, ಚಿಂತಿಸದಿರಿ, ಅಳಲದಿರಿ' ಎಂದು
ಸಮಾಧಾನ ಹೇಳಿ 'ಕೌಶಿಕನೊಡೆಯನಾದನಾತನ ಪಾದಪಂಕಜಕ್ಕೆ ಎನಗೆ
ಬೆಸಕೈವಂತೆ ಬೆಸಕೈವುದಂಜುವುದು' ಎಂದು ಬುದ್ಧಿವಾದ ಹೇಳುತ್ತಾನೆ.
ಇಂತಹ ಮಹಾನುಭಾವನಿಂದ ಕಾಲಕ್ಕೆ ಸರಿಯಾಗಿ ಹಣ ವಸೂಲು
ಮಾಡಲು ಹೊರಟ ತೆರಕಾರ ನಕ್ಷತ್ರಿಕ ಪಠಾಣನಿಗಿಂತ ಕಠಿಣಹೃದಯದವ.
ಅವ ತನ್ನ ಸ್ವಾಮಿ ವಿಶ್ವಾಮಿತ್ರನಿಗೆ ಹೇಳುತ್ತಾನೆ—

> ಬಿಸಿಲಾಗಿ, ಬಿರುಗಾಳಿಯಾಗಿ, ಕಲುನೆಲನಾಗಿ,
> ವಿಷಮಾಗ್ನಿಯಾಗಿ, ನಾನಾ ಕ್ರೂರಮೃಗವಾಗಿ,
> ಮಸಗಿ ಘೋರಾರಣ್ಯವಾಗಿ, ಗರ್ಜಿಸಿ ಕವಿವ ಭೂತ ಭೇತಾಳರಾಗಿ
> ಹಸಿವು ನೀರಡಿಕೆ ನಿದ್ರಾಲಸ್ಯವಾಗಿ, ಸಂ
> ದಿಸಿ ಹೋಗಿ, ಹೊಕ್ಕಲ್ಲಿ ಹೊಕ್ಕು, ಧಾವತಿಗೊಳಿಸಿ
> ಹುಸಿಗೆ ಹುಂಕೊಳಿಸುವೆಂ ಭೂಭುಜನನೆನ್ನಿಂದ ಬಲ್ಲಿದರದಾರೆಂದನು.

ಹರಿಶ್ಚಂದ್ರನಂತೆ ನಕ್ಷತ್ರಿಕನೂ ಸತ್ಯವಂತನೇ. ಸಾಲಗಾರನಿಗೆ ಹಿಂಸೆಕೊಡು
ವವರಲ್ಲಿ ಅವನಿಗಿಂತ ಬಲ್ಲಿದರಿಲ್ಲ. ತನ್ನ ಮಾತಿನಂತೆ ನಡೆದು ಆತನು ರಾಜ
ನಿಗೆ ಚಿತ್ರಹಿಂಸೆ ಕೊಟ್ಟನು. ಏನು ಮಾಡಿದರೆ ಏನು ? ಅಪಾರವಾದ ಹೊನ್ನ
ರಾಶಿಯನ್ನು ಕೂಡಿಸುವುದೆಂತು ? ಕವಿ ಕುವೆಂಪು ಹೇಳುವಂತೆ 'ಸಾಲದ
ವಸೂಲಿಗೆ ನಕ್ಷತ್ರಿಕನನ್ನು ಛೂಬಿಟ್ಟ ವಿಶ್ವಾಮಿತ್ರನೆ ಸಾಲ ತೀರಿಸಲು ಆವ
ಶ್ಯಕವಾದ ಹೊನ್ನನ್ನು ಕೊಟ್ಟು ಹರಿಶ್ಚಂದ್ರನನ್ನು ಕೊಂಡುಕೊಂಡು,
ಅವನು ವಚನಭ್ರಷ್ಟನಾಗಿಬಿಡದಂತೆ ನೋಡಿಕೊಳ್ಳುವ ಭಾರವನ್ನು

ವಹಿಸುತ್ತಾನೆ.' [1]ಆತನ ಆದೇಶದಂತೆ ಸಾಕ್ಷಾತ್ ಅಗ್ನಿಯೇ ಬ್ರಾಹ್ಮಣವೇಷದಿಂದ ಬಂದು ಹರಿಶ್ಚಂದ್ರನ ಹೆಂಡತಿಯನ್ನೂ ಮಗನನ್ನೂ ಕೊಂಡುಕೊಳ್ಳುತ್ತಾನೆ. ಯಮನು ವೀರಬಾಹುಕನೆಂಬ ಚಂಡಾಲನ ವೇಷವನ್ನು ಧರಿಸಿ ಹರಿಶ್ಚಂದ್ರನನ್ನ ಕೊಂಡುಕೊಳ್ಳುತ್ತಾನೆ. ಇಲ್ಲಿಗೆ ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ಕೊಡಬೇಕಾದ ಹಣ ಸಂದಂತಾಗಿ ಆತನ ಸತ್ಯ ಉಳಿಯಿತು.

ಹರಿಶ್ಚಂದ್ರನ ಸತ್ಯ ಸ್ಥಾಪನೆಯಾದಂತಾಯಿತಾದರೂ ಆತನ ಸತ್ವಪರೀಕ್ಷೆ ಮುಂದುವರಿಯುತ್ತದೆ. ಕೈಹಿಡಿದ ಮಡದಿ, ಹೊಟ್ಟೆಯಲ್ಲಿ ಹುಟ್ಟಿದ ಮಗ ಬ್ರಾಹ್ಮಣನ ಮನೆಯಲ್ಲಿ ಸತ್ತು ಹುಟ್ಟುತ್ತಿದ್ದಾರೆ. ದೈವ ಇದನ್ನೂ ಸಹಿಸಲಿಲ್ಲ. ಬ್ರಾಹ್ಮಣನ ಮನೆಗೆ ಹುಲ್ಲು ಹುಳ್ಳಿಗಳನ್ನು ತರಲೆಂದು ಹೋದ ರಾಜಪುತ್ರ ಹಾವು ಕಡಿದು ಸತ್ತ. ಇದನ್ನು ಕೇಳಿ ಚಂದ್ರಮತಿ ಹೌಹಾರಿ, ಕಟುಕನಂತಿರುವ ತನ್ನ ಒಡೆಯನನ್ನು ಅಂಗಲಾಚಿಕೊಂಡು, ಅಪ್ಪಣೆಯನ್ನು ಪಡೆದು ಮಗನನ್ನರಸುತ್ತಾ ಅಡವಿಗೆ ಹೊರಟಳು. ಕವಿ ರಾಘವಾಂಕನು ಈ ಭಾಗದಲ್ಲಿ ಕರುಣರಸದ ಹೊಳೆಯನ್ನೇ ಹರಿಸಿದ್ದಾನೆ. ಚಂದ್ರಮತಿ ಸತ್ತ ಮಗನನ್ನು ಅರಸುತ್ತಾ ಅಡವಿಯಲ್ಲಿ ಬರುತ್ತಿದ್ದಾಳೆ—ಮಗನನ್ನು ಕೂಗಿ ಕರೆಯುತ್ತಿದ್ದಾಳೆ—'ಮಗನೇ ಮಗನೇ, ಹರಿಶ್ಚಂದ್ರ ರಾಯನ ಕುಮಾರ, ಪೇಳ್ ಆವ ಠಾವೊಳಕೊಂಡುದಯ್ಯ ? ನೀನೆಲ್ಲಿರ್ದಪೆ? ಓ ಯೆಂಬುದೇನು ಕಂದಾ ? ಬಾಯಬಿಡದಿತ್ತ ಬಾ ಯೆಂಬುದೇನು ತಂದೆ ? ಎನ್ನನೊಲ್ಲದೊಡೆ ಸಾಯೆಂಬುದು. ಏನುಸಿರದಿರಲೇಕೆ ?' ಎಂದು. ಇದು ಸತ್ತು ಬಿದ್ದಿರುವ ಆ ಸುಕುಮಾರನ ಶವ

ವಿಷದ ಹೊಗೆ ಹೊಯ್ದು ಹಸುರಾದ ಮೈ, ಮೀರಿ ನೊರೆ
ಯೊಸರ್ವ ಗಲ್ಲಂ, ಕಂದಿದುಗುರ್ಗಳ್, ಅರೆದೆರೆದಗು
ರ್ವಿಸುವ ಕಣ್, ಹರಿದು ಹುಲುಹಿಡಿದ ಹರಹಿದ ಕೈಗಳ್, ಉಂಬ
ಹೊತ್ತುಣ ಹಡೆಯದೆ
ಹಸಿದು ಬೆಂಗಡರ್ದ ಬಸುರಕಟಕಟ, ಮಡಿದ ಗೋಣ್
ದೆಸೆಗುರುಳಿ ಹುಡಿಹೊಕ್ಕು ಬರತ ಬಾಯ್ ವೆರಸಂದು
ಬಸವಳಿದ ನಿಜಸುತನ ಕಂಡಳು ಹರಿಶ್ಚಂದ್ರನರಸಿ ಹುತ್ತಿನ ಮೊದಲೊಳು.

---

[1] ರಸೋ ವೈ ಸಃ—ಸಾಹಿತ್ಯದಲ್ಲಿ ಪ್ರತಿಮಾ ಪು. ೫೫.

ಹುತ್ತದ ಬುಡದಲ್ಲಿ ಮಗ ಸತ್ತುಬಿದ್ದಿದ್ದಾನೆ. ಹಾವಿನ ವಿಷ ವ್ಯಾಪಿಸಿ ಮೈಯೆಲ್ಲ ಹಸುರುಗಟ್ಟಿದೆ; ಕಟವಾಯಿಯಲ್ಲಿ ನೊರೆ ಉಕ್ಕಿದೆ; ಉಗುರುಗಳು ಬಣ್ಣಗೆಟ್ಟು ಮುರುಟಿವೆ; ಕಣ್ಣು ಅರ್ಧ ತೆರೆದು ಮಗುವಿಗಾದ ಭಯವನ್ನು ಸೂಚಿಸುತ್ತಿದೆ; ಹುಲ್ಲನ್ನು ಹಿಡಿದು ಚಾಚಿ ಬಿದ್ದಿರುವ ಕೈಗಳು, ಹೊತ್ತಿಗೆ ಸರಿಯಾಗಿ ಹೊಟ್ಟೆಗಿಲ್ಲದೆ ಬೆನ್ನಿಗೆ ಅಂಟಿಹೋಗಿರುವ .ಹೊಟ್ಟೆ, ಅಯ್ಯೋ ಅಯ್ಯೋ! ಕುತ್ತಿಗೆ ಜೋತು ಬಿದ್ದಿದೆ, ಕೆಳಕ್ಕೆ ಬಿದ್ದು ಮಣ್ಣು ತುಂಬಿದುದರಿಂದ ಒಣಗಿದ ಬಾಯಿ—ಇವುಗಳಿಂದ ಕೂಡಿದ ಮಗನ ಶವವನ್ನು ಚಂದ್ರಮತಿ ಕಂಡಳು. ಆಕೆ 'ಹರಿಶ್ಚಂದ್ರರಾಯನ ಕುಮಾರ' ಎಂದು ಕೂಗಿಕೊಂಡು ಬಂದದ್ದಕ್ಕೂ ಇಲ್ಲಿ ಹಿಟ್ಟಿಗೆ ಗತಿಯಿಲ್ಲದೆ ಹೊಟ್ಟೆ ಬೆನ್ನಿಗೆ ಹತ್ತಿಹೋಗಿರುವ ಮಗ ಕಣ್ಣಿಗೆ ಬೀಳುವುದಕ್ಕೂ ಎಂತಹ ವಿರೋಧಾಭಾಸ. ಕವಿಯು ಅಂತರಂಗದ ಮರ್ಮವನ್ನು ಹಿಡಿದು ಮಿಡಿಯುವುದರಲ್ಲಿ ಎಂತಹ ಜಾಣನಾಗಿದ್ದಾನೆ! ಪಾಪ! ಚಂದ್ರಮತಿ ಈ ಮಗನ ಮುಖವನ್ನು ನೋಡಿಕೊಂಡು ತನ್ನ ದುಃಖವನ್ನೆಲ್ಲಾ ಸಹಿಸಿಕೊಂಡಿದ್ದಳು. ಈಗ ಸತ್ತು 'ಎನ್ನ ಗೋಣಂ ಕೊಯ್ದೆ' ಎಂದು ಹಲುಬುತ್ತಾಳೆ. ಆಕೆಯ ದುಃಖದ ಹೊನಲನ್ನು ಹರಿಸಲು ಕವಿಗೆ ತನ್ನ ಷಟ್ಪದಿಗಿಂತಲೂ ರಗಳೆಯ ಛಂದಸ್ಸು ಹೆಚ್ಚು ಉಚಿತವೆನಿಸಿತೋ ಏನೊ! ಇದರಿಂದ ಹೆಚ್ಚು ನೈಜತೆ ಬಂದಿದೆ

ಏವೆನೇವೆನೆಲೆ ಮಗನೇ ಮಗನೇ
ಸಾವೇಕಾಯಿತ್ತೆಲೆ ಚೆನ್ನಿಗನೇ
ಇರಿದೆಯಲಾ ಎನ್ನನು ಸುಕುಮಾರಾ
ಕೊರೆದೆಯಲಾ ಕೊರಳನು ಜಿತಮಾರಾ
ಎತ್ತಣ ಬರಸಿಡಿಲೆರಗಿತೊ ನಿನ್ನ
ಹುತ್ತಿನ ಹತ್ತಿರೆ ಒರಗಿದೆ ಚೆನ್ನ
ಹಾವು ಹಿಡಿಯೆ ಹಾ ಎಂದೊರಲಿದೆಯಾ ?
ಸಾವಾಗವ್ವಾ ಎಂದಳಲಿದೆಯಾ?
ರನ್ನದ ಕನ್ನಡಿ ಸಿಡಿದುದೊ ದೇವಾ!

ರಾಘವಾಂಕ ಕವಿಯು ಹರಿಸಿರುವ ಈ ಕರುಣೆಯ ಹೊನಲಿನಿಂದ ಮುಂದಿನ

ಕವಿಗಳನೇಕರು ತಮ್ಮ ಕಾವ್ಯಕ್ಷೇತ್ರವನ್ನು ಹುಲುಸಾಗಿ ಬೆಳೆಸಿಕೊಂಡಿದ್ದಾರೆ. ಹದಿನೇಳನೆಯ ಶತಮಾನದಲ್ಲಿ ಬರುವ ಷಡಕ್ಷರ ಕವಿ ತನ್ನ 'ರಾಜಶೇಖರ ವಿಲಾಸ'ದಲ್ಲಿ ತಂದಿರುವ ತಿರುಕೊಳವಿನಾಚಿಯ ಪ್ರಲಾಪ ಇದಕ್ಕೆ ಒಂದು ಉತ್ತಮ ಉದಾಹರಣೆ. ರಾಘವಾಂಕನು ಚಂದ್ರಮತಿಯ ಬಾಯಲ್ಲಿ ಆಡಿಸುವ ಈ ಮಾತುಗಳು ಎಷ್ಟು ಸ್ವಾಭಾವಿಕವಾಗಿವೆ! ಎಷ್ಟು ಸರಳವಾಗಿದ್ದರೂ ಸಾರವತ್ತಾಗಿವೆ?

ಹೆತ್ತಹೊಟ್ಟೆಯುರಿಯುತ್ತಿದೆ ಮಗನೆ
ಎತ್ತಿದ ತೋಳನು ಕೆತ್ತಿದೆ ಮಗನೆ
ಹಾಡುವ ಬಾಯಲಿ ಮಣ್ಣನು ಹೊಯ್ದೆ
ನೋಡುವ ಕಣ್ಣಲಿ ಸುಣ್ಣವ ಹೊಯ್ದೆ
ಪಾಪಿಯೆನ್ನ ಸೀನೊಮ್ಮೆಗೆ ನೋಡಾ
ಕೋಪವನುಳಿದೊಯ್ಯನೆ ಮಾತಾಡಾ
ನುಡಿದಡೆ ಪಾಪವೆ ಹೆತ್ತವರೊಡನೆ
ಕಡು ಮುಳಿಸೇ ಮಗನೇ ಎನ್ನೊಡನೆ.

ಹೆತ್ತ ಹೊಟ್ಟೆಯ ಈ ಭ್ರಾಂತಿಗೆ ಏನು ಹೇಳಬೇಕು? ಚಂದ್ರಮತಿಯ ಸಂಕಟ ಅತ್ತು ಅತ್ತು ಹೊರಸೋರಿದ ಮೇಲೆ ಕರ್ತವ್ಯಜ್ಞಾನ ಮೂಡಿತು. ಮಗನನ್ನು ಹೊತ್ತು ತಂದು 'ಮಂಗಳಮಯ ಕುಮಾರ'ನ ದೇಹವನ್ನು ಅಗ್ನಿಗೆ ಅರ್ಪಿಸಹೊರಟಳು. ಶವಸಂಸ್ಕಾರಕ್ಕೆ ಅಗತ್ಯವಾದ ಕಟ್ಟಿಗೆಗೆ ಕೂಡ ಅಭಾವ! ಶ್ಮಶಾನದಲ್ಲಿ 'ಬೆಂದುಳಿದಿರ್ದ ಕರಿಗೊಳ್ಳಿಗಳನೆಲ್ಲವಂ ಸಿದುಗಿ ತಂದೊಟ್ಟಿ' ಅದರ ಮೇಲೆ ಮಗನಿಗೆ ಅಗ್ನಿಸಂಸ್ಕಾರ ಮಾಡಹೊರಟಳು. ಬೆಂಕಿ ಹಚ್ಚುವ ಮುನ್ನ 'ಬೆಳೆದಲ್ಲಿ ಬೆಳೆ, ಹುಟ್ಟಿದಲ್ಲಿ ಹುಟ್ಟು' ಎಂದು ಹರಸಿ ಮತ್ತೊಮ್ಮೆ ಗಟ್ಟಿಯಾಗಿ ಅತ್ತಳು. ಆ ಅಳುವು ಶ್ಮಶಾನವನ್ನು ಕಾಯುತ್ತಿದ್ದ ಹರಿಶ್ಚಂದ್ರನಿಗೆ ಕೇಳಿಸಿತು. ಆತನು ಶ್ಮಶಾನಕಾಣಿಕೆಯನ್ನು ಕೊಡದೆಯೇ ಸುಡಹೊರಟಿರುವುದನ್ನು ಗಮನಿಸಿ, ಕೋಪದಿಂದ 'ಸುಟ್ಟಿಯಾದೊಡೆ ನಿನಗೆ ವೀರಬಾಹುಕನಾಣೆ, ಕದ್ದು ಸುಡಬಂದೆ? ನಿನ್ನ ನಿಟ್ಟೆಲುವ ಮುರಿವೆನ್' ಎಂದು ಗರ್ಜಿಸುತ್ತಾ ಬಂದು 'ಹಿಡಿದಿರ್ದ ಕಿಚ್ಚಂ ಕೆದರಿ, ಮುಟ್ಟಿಗೆಯ ಮೇಲಿರ್ದ ಸುತನ ಹಿಂಗಾಲ್ವಿಡಿದು ಸೆಳೆದು ಬಿಸುಟಂ.'

ಚಂದ್ರಮತಿ ಹೌಹಾರಿ 'ಬಿಸುಡದಿರು ಬಿಸುಡದಿರು, ಬೇಡ ಬೇಡಕಟಕಟ, ಹಸುಳೆ ನೊಂದಹನ್' ಎಂದು ಹೇಳಿ, ಬೀಳುವ ಮಗುವನ್ನೆತ್ತಿಕೊಂಡು 'ಇವನೆನ್ನ ಮಗನಲ್ಲ, ನಿನ್ನ ಕಿಸುವಿನೋಪಾದಿ. ಸುಡಲನುಮತಿಯನಿತ್ತು ರಕ್ಷಿಸು ಕರುಣಿ' ಎಂದು ಕೇಳಿಕೊಳ್ಳುತ್ತಾಳೆ. ಎಂತಹ ಕಟು ಸತ್ಯ! ಎಷ್ಟು ಹೃದಯವಿದ್ರಾವಕವಾಗಿದೆ! 'ಹಸುಳೆ ನೊಂದಹನು!' ಎಂಬ ಮಾತಿನಲ್ಲಿ ಮಾತೃಹೃದಯದ ಎಂತಹ ಮಾರ್ಮಿಕ ಚಿತ್ರವಿದೆ! ಕರುಣರಸದ ಹೊನಲು ಹೇಗೆ ಬುಗ್ಗೆಬುಗ್ಗೆಯಾಗಿ ಉಕ್ಕುತ್ತಿದೆ! ಆ ಹೊತ್ತಿನಲ್ಲಿ ಗಂಡಹೆಂಡಿರು ಪರಸ್ಪರ ಗುರುತು ಹಿಡಿಯುತ್ತಾರೆ. ಹರಿಶ್ಚಂದ್ರನೂ ಸತ್ತ ಮಗನನ್ನು ಕಂಡು ಅಸಹ್ಯವೇದನೆಯನ್ನು ಅನುಭವಿಸುತ್ತಾನೆ. ಆದರೇನು? 'ತೆರೆಯಸಿಕ್ಕದೆ ಸುಡಲ್ಬಾರದು.' ಒಂದು ಪಕ್ಷ ತೆರಕ್ಕೆ ಹಣ ದೊರೆಯದೇ ಹೋದರೆ ಮಗನಿಗೆ ಶವಸಂಸ್ಕಾರವೇ ಬೇಡ! ಆತನ ಸತ್ಯನಿಷ್ಠೆ ಅಷ್ಟು ನಿಷ್ಠುರವಾಗಿದೆ. ವಿಧಿ ಆ ಸತ್ಯವಂತನ ಸತ್ವಪರೀಕ್ಷೆಯ ತುತ್ತ ತುದಿಯನ್ನೂ ಮುಟ್ಟಿಸಿತು. ಚಂದ್ರಮತಿಯು ಕೊಲೆಯ ಆರೋಪ ಹೊತ್ತು, ಆದಕ್ಕೆ ಶಿಕ್ಷಾರೂಪವಾಗಿ ಅವಳ ತಲೆಯನ್ನು ಕಡಿಯುವ ಕಾರ್ಯ ಹರಿಶ್ಚಂದ್ರನ ಪಾಲಿಗೆ ಬಂತು. ವಧಾಸ್ಥಾನದಲ್ಲಿ ಮರಣಕ್ಕೆ ಸಿದ್ಧಳಾಗಿ ಕುಳಿತಿರುವ ಚಂದ್ರಮತಿಯ ಚಿತ್ರವಿದು–

ಬಲಿದ ಪದ್ಮಾಸನಂ, ಮುಗಿದಕ್ಷಿ, ಮುಚ್ಚಿದಂ
ಜಲಿವೆರಸಿ, ಗುರುವಶಿಷ್ಠಂಗೆರಗಿ, ಶಿವನ ನಿ
ರ್ಮಲರೂಪ ನೆನೆದು ಮೇಲಂ ತಿರುಗಿ ನೋಡಿ ಭೂ ಚಂದ್ರಾರ್ಕ ತಾ
ರಂಬರಂ

ಕಲಿ ಹರಿಶ್ಚಂದ್ರರಾಯಂ ಸತ್ಯವೆರಸಿ ಬಾ
ಳಲಿ, ಮಗಂ ಮುಕ್ತನಾಗಲಿ, ಮಂತ್ರಿ ನೆನೆದುದಾ
ಗಲಿ, ರಾಜ್ಯದೊಡೆಯ ವಿಶ್ವಾಮಿತ್ರ ನಿತ್ಯನಾಗಲಿ, ಹರಕೆ,
ಹೊಡೆಯೆಂದಳು..

ಹರಿಶ್ಚಂದ್ರನಿಗೆ ತಕ್ಕ ಹೆಂಡತಿ ಚಂದ್ರಮತಿ; ಆಕೆಗೆ ತಕ್ಕ ಗಂಡ ಹರಿಶ್ಚಂದ್ರ. ಆತನು 'ಪತಿಯಾಜ್ಞೆಯುಳಿದಡೆ ಸಾಕು' ಎಂದು ಹೊಡೆಯಲನುವಾದ. ಈ ಘಟ್ಟದಲ್ಲಿ ವಿಶ್ವಾಮಿತ್ರನು ಕಾಣಿಸಿಕೊಂಡು ಆತನನ್ನು ಪ್ರಲೋಭನೆಗೊಳಿಸಲು ಪ್ರಯತ್ನಿಸಿದ. ಆದರೆ ಹರಿಶ್ಚಂದ್ರ ಆತನ ಮಾಯಾಜಾಲಕ್ಕೆ

ಸಿಲುಕದೆ 'ನನ್ನಿಕಾರಂ, ವಧುವನೆಲೆಲೆ ಶಿವ ಶಿವ ಮಹಾದೇವ ಹೊಡೆದಂ ಹೊಡೆದನು.' ಆದರೇನು? 'ಹೊಡೆದ ಕಡುಗದ ಬಾಯ ಕಡೆಯ ಹೊಡೆಗಳನಾಂತು ಮಡದಿಯೆಡೆಗೊರಳ ನಡುವಡಸಿ ಮೂಡಿದನು.........ಕಾಶೀರಮಣ ವಿಶ್ವನಾಥಂ.' ಒಡನೆಯೇ ದೇವಾನುದೇವತೆಗಳೆಲ್ಲರೂ ಅಲ್ಲಿ ಪ್ರತ್ಯಕ್ಷರಾದರು.

ಕುಡಿದೌಷಧಂ ಬಾಯ್ಗೆ ನಿಗ್ರಹಂ ಮಾಡಿ ತಾ
ಳ್ದೊಡಲಿಂಗೆ ಸುಖವನೀವಂತೆ, ಲೋಕದ ಕಣ್ಗೆ
ಕಡು ಮುಳಿದರಂತೆ ತೋರಿಸಿ, ಸತ್ಯಶುದ್ಧವಪ್ಪನ್ನೆಗಂ ಕಾಡಿ ನೋಡಿ
ಕಡೆಯೊಳು ಹರಿಶ್ಚಂದ್ರ ರಾಯಂಗೆ ಗಣವೆರಸಿ
ಮೃಡನನೆಳೆತಂದಿತ್ತು, ಕೀರ್ತಿಯಂ ಮೂಜಗದ
ಕಡೆಗೆ ಹರಹಿದ ಮುನಿವರೇಣ್ಯ ವಿಶ್ವಾಮಿತ್ರ ಬಂದನು ವಸಿಷ್ಠ ಸಹಿತ.

ಎಲ್ಲವೂ ಮಂಗಳಮಯವಾಗಿ ಕೊನೆಗೊಂಡಿತು. ಸತ್ತ ಮಗ ರೋಹಿತಾಶ್ವ ಮೇಲಕ್ಕೆದ್ದ. ಪರಶಿವನು ಹರಿಶ್ಚಂದ್ರನ ತಲೆಮೈಗಳನ್ನು ಸವರುತ್ತಾ 'ಅತಿ ಹುಸಿವ ಯತಿ ಪೊಲೆಯ; ಹುಸಿಯದಿಹ ಹೊಲೆಯನನ್ನುತ ಯತಿವರನು' ಎಂದು ಹರಿಶ್ಚಂದ್ರನ ಸತ್ಯದ ಘನತೆಯನ್ನು ಘೋಷಿಸಿದನು. ವಿಶ್ವಾಮಿತ್ರನು ತನ್ನ ಐವತ್ತು ಕೋಟಿ ವರ್ಷದ ತಪಃಫಲವನ್ನು ಆತನಿಗೆ ಧಾರೆಯೆರೆದು ಕೊಟ್ಟು ಮತ್ತೆ ಆತನ ರಾಜ್ಯದಲ್ಲಿ ಆತನನ್ನು ಪ್ರತಿಷ್ಠಿಸಿದನು. ಹರಿಶ್ಚಂದ್ರನ ಕೀರ್ತಿ ಮೂಜಗದಲ್ಲಿಯೂ ತುಂಬಿಹೋಯಿತು. 'ಹರನೆಂಬುದೇ ಸತ್ಯ, ಸತ್ಯವೆಂಬುದೆ ಹರನು' ಎಂಬ ಶ್ರುತಿವಾಕ್ಯ ಹರಿಶ್ಚಂದ್ರನಿಂದ ಸಂಸ್ಥಾಪಿತವಾದಂತಾಯಿತು.

ಅಪರಾಧದ ಲವಲೇಶವೂ ಇಲ್ಲದೆ ಭಯಂಕರ ಸಂಕಟಕ್ಕೀಡಾದ ಹರಿಶ್ಚಂದ್ರನ ಕಥೆಯಂತಹ ಮತ್ತೊಂದು ಕಥೆ ವಿಶ್ವಸಾಹಿತ್ಯದಲ್ಲಿ ಎಲ್ಲಿಯೂ ಕಂಡು ಬರದೆಂದು ತೋರುತ್ತದೆ. ಕವಿ ಕುವೆಂಪುರವರು ಹೇಳುವ ಈ ಮಾತುಗಳು ಈ ಕಥೆಗೆ ಅನ್ವಯಿಸುವಂತೆ ಕವಿ ರಾಘವಾಂಕನ ಕಾವ್ಯಶಕ್ತಿಗೂ ಸಲ್ಲಿಸಿದ ಪುಷ್ಪಾಂಜಲಿಯಾಗಿದೆ–"ವರಕವಿ ರಾಘವಾಂಕನ 'ಹರಿಶ್ಚಂದ್ರಕಾವ್ಯ' ಸಮಗ್ರವೂ, 'ಅಪೃಥಗ್ ಯತ್ನ ನಿರ್ವರ್ತಿತ'ವಾಗಿಯೇ ಪ್ರತಿಮಾವಿಧಾನಕ್ಕೂ ದರ್ಶನಧ್ವನಿಗೂ ಉತ್ತಮ ನಿದರ್ಶನವಾಗಿದೆ. ಮರ್ತ್ಯ

ಭೂಮಿಕೆಯಲ್ಲಿ ಪರಿಣಾಮಗೊಂಡು ಪರಮಸಿದ್ಧಿಯ ಕಡೆಗೆ ಚಲಿಸುವ ಹರಿಶ್ಚಂದ್ರನ ಸತ್ಯಚೇತನದ ವಿಕಾಸದ ಸಲುವಾಗಿ ಊರ್ಧ್ವಲೋಕದ ಅಮರ್ತ್ಯಶಕ್ತಿಗಳ ಸಂಕಲ್ಪಕ್ಕೂ ವ್ಯೂಹಕ್ಕೂ ಪ್ರತೀಕಸ್ವರೂಪವಾಗಿರುವ ಇಂದ್ರನ ಆಸ್ಥಾನದಲ್ಲಿ ಸಂಭವಿಸುವ ವಸಿಷ್ಠ ವಿಶ್ವಾಮಿತ್ರರ ವಾಗ್ಯುದ್ಧದಿಂದ ಹಿಡಿದು ಸರ್ವಾಹಂಕಾರದ ಸಮೂಲ ವಿನಾಶಕ್ಕೆ ಪ್ರತೀಕದಂತಿರುವ ಶ್ಮಶಾನದಲ್ಲಿ ಸಂಭವಿಸುವ ಈಶ್ವರಸಾಕ್ಷಾತ್ಕಾರದ ಘಟನೆಯವರೆಗೂ ಆ ಕಥಾಪ್ರತಿಮೆ ಹೆಜ್ಜೆ ಹೆಜ್ಜೆಗೂ ವಿವರ ವಿವರದಲ್ಲಿಯೂ ಆಲೋಚಿಸಿ ಕಟ್ಟಿದ ಕೃತಕ ರಚನೆಯೋ ಎನ್ನುವಷ್ಟರಮಟ್ಟಿಗೆ ಆಶ್ಚರ್ಯಕರವಾಗಿ ದರ್ಶನಧ್ವನಿಯನ್ನು ಮಿಡಿಯುತ್ತಾ ಮುಂಬರಿಯುತ್ತದೆ."

ರಾಘವಾಂಕಕವಿ ತನ್ನ ಗುರುವಿನಂತೆಯೇ ನಿಷ್ಠನಾದ ಶಿವಭಕ್ತ. ಆತನ 'ಹರಿಶ್ಚಂದ್ರ ಕಾವ್ಯ' 'ಹರನೆಂಬುದೇ ಸತ್ಯ, ಸತ್ಯವೆಂಬುದೆ ಹರನು' ಎಂಬ ಉದಾತ್ತತತ್ವವನ್ನು ಜಗತ್ತಿಗೆ ಸಾರುತ್ತದೆ. ಈ ತತ್ವವನ್ನು ನಿರುತವಾಗಿ ಮಾಡಿದವನು ಶಿವಭಕ್ತನಾದ ಹರಿಶ್ಚಂದ್ರ. ಆತನನ್ನು ಪೊಗಳ್ದು ಜನ ಬದುಕಬೇಕೆಂಬುದು ಕವಿಯ ಆಶಯ. ಆದರೂ ಕವಿಯ ಗುರುವಾದ ಹರಿಹರ ಕೋಪಗೊಂಡು, ನರಸ್ತುತಿ ಮಾಡಿದನೆಂಬ ತಪ್ಪಿಗಾಗಿ ಅಳಿಯನ ಹಲ್ಲುಗಳನ್ನು ಉದುರಿಸಿದನಂತೆ! ಆಮೇಲೆ ಕವಿಯು ಗುರುವಿನ ಅಪ್ಪಣೆಯಂತೆ ತನ್ನ ಇತರ ಕಾವ್ಯಗಳನ್ನು ಬರೆದು, ಕಳೆದುಕೊಂಡ ಹಲ್ಲುಗಳನ್ನು ಪುನಃ ಪಡೆದನಂತೆ! ಈ ಕಥೆಯನ್ನು ಕುರಿತು ಚರ್ಚಿಸುವುದಕ್ಕಿಂತಲೂ ಇದನ್ನು ಬರಿಯ ದಂತಕಥೆಯೆಂದು ಹೇಳಿ, ಅಲ್ಲಿಗೆ ಬಿಡುವುದು ಒಳ್ಳೆಯದೆಂದು ತೋರುತ್ತದೆ.

ರಾಘವಾಂಕನು ತನ್ನ ಕಾಲದ ದೊಡ್ಡ ಕವಿಯಾಗಿದ್ದುದು ಮಾತ್ರವಲ್ಲದೆ ಶೈವಧರ್ಮಪ್ರತಿಪಾದಕರಲ್ಲಿ ಪ್ರಮುಖನಾಗಿದ್ದು, ಹಲವು ರಾಜಾಸ್ಥಾನಗಳ ಸಂಪರ್ಕವನ್ನೂ ಪಡೆದಿದ್ದನೆಂದು ತೋರುತ್ತದೆ. ಆತನು ದೋರಸಮುದ್ರದ ರಾಜ ನರಸಿಂಹಬಲ್ಲಾಳನ ಮಂತ್ರಿಯಾಗಿದ್ದ ಕೆರೆಯ ಪದ್ಮರಸನ ಬಳಿಯಲ್ಲಿ ಕೆಲ ಕಾಲ ಹೋಗಿ ನಿಂತಂತೆ ಕಾಣಬರುತ್ತದೆ. ಕೆರೆಯ ಪದ್ಮರಸನು ಪ್ರಸಿದ್ಧವಚನಕಾರನಾದ ಸಕಳೇಶ ಮಾದರಸನ ವಂಶದವನು. ತ್ರಿಭುವನ ತಾತನೆಂಬ ವೈಷ್ಣವನೊಡನೆ ವಾದಮಾಡಿ, ಅವನನ್ನು ಸೋಲಿಸಿ

ವೀರಶೈವದೀಕ್ಷೆಯನ್ನು ಕೊಟ್ಟವನು ; ಬೇಲೂರಿನಲ್ಲಿ ದೊಡ್ಡ ಕೆರೆಯೊಂದನ್ನು ಕಟ್ಟಿಸಿ 'ಕೆರೆಯ ಪದ್ಮರಸ'ನೆಂಬ ಕೀರ್ತಿಗೆ ಭಾಜನನಾಗಿದ್ದವನು. ಸಮಾಜದಲ್ಲಿ ಗಣ್ಯನಾಗಿ, ಧರ್ಮಜಗತ್ತಿನಲ್ಲಿ ಪೂಜ್ಯನಾಗಿದ್ದ ಈತನು 'ಶಿವಾದ್ವೈತ ಸಾನಂದ ಚಾರಿತ್ರ' ಎಂಬ ಸಂಸ್ಕೃತ ಗ್ರಂಥವನ್ನೂ 'ದೀಕ್ಷಾಬೋಧೆ' ಎಂಬ ಕನ್ನಡ ರಘಟಗ್ರಂಥವನ್ನೂ ಬರೆದವನು. ಈತನಲ್ಲಿ ಹರಿಹರ ರಾಘವಾಂಕರಿಗೆ ಅಮಿತ ಪೂಜ್ಯಭಾವವಿದ್ದಂತೆ ಭಾಸವಾಗುತ್ತದೆ ಕೆರೆಯ ಪದ್ಮರಸನು ರಾಘವಾಂಕನ ಸಿದ್ಧರಾಮಪುರಾಣವನ್ನು ಬಹಳವಾಗಿ ಮೆಚ್ಚಿಕೊಂಡಂತೆ ಕಾಣಬರುತ್ತದೆ. (ರಾಘವಾಂಕನ ಕಥೆಯನ್ನು ಕ್ರಿ.ಶ. ೧೬೫೦ ರಲ್ಲಿದ್ದ ಚಿಕ್ಕನಂಜಾರ್ಯ ಎಂಬ ಕವಿ 'ರಾಘವಾಂಕ ಕಾವ್ಯಂ' ಎಂಬ ಹೆಸರಿನಿಂದ ವಿಸ್ತಾರವಾಗಿ ಬರೆದಿದ್ದಾನೆ. ಆದರೆ ಇದರಲ್ಲಿ ಇತಿಹಾಸದೃಷ್ಟಿಗಿಂತಲೂ ಪುರಾಣದೃಷ್ಟಿಯೇ ಹೆಚ್ಚು. ರಾಘವಾಂಕನ ಕಥೆ ಇನ್ನೂ ಕೆಲವು ವೀರಶೈವ ಪುರಾಣಗಳಲ್ಲಿ ದೊರೆಯುತ್ತದೆ. ಆದರೆ ಇತಿಹಾಸದೃಷ್ಟಿಯಿಂದ ಅವೂ ನಿರರ್ಥಕವೇ) ಹಾಗೆ ಆತನು ಮೆಚ್ಚಿದುದರಲ್ಲಿ ಸೋಜಿಗವೇನೂ ಇಲ್ಲ. ಈ ಕಾವ್ಯದಲ್ಲಿ ಕಾಣಬರುವ ಕಥನಕಲಾ ನೈಪುಣ್ಯ, ಹಿತಮಿತ ವರ್ಣನೆ, ಸಂವಾದ ಶೈಲಿ, ಶಾಂತರಸಪ್ರಧಾನವಾದ ಈ ಕಾವ್ಯದ ಕಥಾನಾಯಕನ ಉದಾತ್ತ ಜೀವನಾದರ್ಶ—ಇವು ಪ್ರಶಂಸಾರ್ಹವಾದುವು. ಸಿದ್ಧರಾಮಪುರಾಣವು ವೀರಶೈವಪುರಾಣಗಳಿಗೆ ಆದರ್ಶಪ್ರಾಯವಾಗಿದೆ. ಇತರ ವೀರಶೈವಪುರಾಣಗಳಲ್ಲಿ ಮುಖ್ಯ ಕಥೆಗಿಂತಲೂ ಉಪಕಥೆಗಳೇ ಹೆಚ್ಚಾಗಿರುತ್ತವೆ; ಕಥೆಯ ಓಟವನ್ನು ಕುಗ್ಗಿಸುವ ಮತಧರ್ಮ ಪ್ರಚಾರ ಉಪದೇಶಗಳು ಅತಿಯಾಗಿರುತ್ತವೆ. ಸಿದ್ಧರಾಮಪುರಾಣವು ಈ ದೋಷಗಳಿಂದ ದೂರವಾಗಿದೆ.

ಪ್ರಸಿದ್ಧವಚನಕಾರನಾದ ಸಿದ್ಧರಾಮನೇ ' ಸಿದ್ಧರಾಮ ಚರಿತೆ 'ಯ ನಾಯಕ. ಮೊರಡಿಯ ಮುದ್ದ—ಸುಗ್ಗವ್ವೆ ಎಂಬ ಶೈವದಂಪತಿಗಳ ಇಳಿವಯಸ್ಸಿನಲ್ಲಿ ಮಗನಾಗಿ ಹುಟ್ಟಿದ ಸಿದ್ಧರಾಮನು ತಾಯಿಯ ಗರ್ಭದಿಂದ ಐದನೆಯ ತಿಂಗಳಲ್ಲಿಯೇ ಹೊರಗೆ ಬಂದನಂತೆ! ತಾಯಿಗೆ ಪ್ರಸೂತಿಕಾ ವೇದನೆಗೆ ಬದಲಾಗಿ ಸುಖದ ಜೊಮ್ಮು! ಆಗ ಹುಟ್ಟಿದ ಮಗು ಹೊದಿಸಿದ ಬಟ್ಟೆಯನ್ನು ಸರಿಸಿದಾಗ

ಮುಸುಕು ಸರಿಯಲು ಮೋಡವೋಡಿದಿನಬಿಂಬದಂ
ತೆಸೆವ ಮೆಯ್ವೆಳಗೆದ್ದು, ಬೀದಿವರಿದೊಳಗೆ ಧವ
ಳಿಸೆ ಸೊಡರ್ಗಳೆಯ್ದೆ ಮಸುಳಿಸಿ ಮಬ್ಬಳಿಯೆ ದಂತವೆಸೆದ ಪುತ್ತಳಿಯೊ, ಅಲ್ಲ
ಶಶಿಕಾಂತದ ಪ್ರತಿಮೆ, ಜೇಡ, ಬೆಳ್ಳಿಯ ಬೊಂಬೆ,
ಹುಸಿ, ಶಂಖಸಾಲಭಂಜಿಕೆಯಲ್ಲ, ಮೌಕ್ತಿಕದ
ಶಿಶುವೆಂದು ಮುಟ್ಟೆ ಮೃದುವಂ ಕಂಡು ಮನುಜನಹನೆಂದು ಭಾವಿಸಿ ಬಗೆದರು.

ಮೋಡ ಸರಿದ ಸೂರ್ಯನಂತೆ ಪ್ರಕಾಶಿಸುವ ಆ ಮಗುವಿನ ದೇಹಕಾಂತಿಯು ಪ್ರಸ್ಫುಟವಾಗಿ ಹರಡಿ ಹಬ್ಬಿ ಬೆಳಗುತ್ತಿರಲು ಹಚ್ಚಿಟ್ಟ ದೀಪದ ಕಾಂತಿ ಮಂಕಾಯಿತಂತೆ! ಆಗ ಆ ಮಗುವು ದಂತದಿಂದ ಮಾಡಿದ ಬೊಂಬೆಯಂತೆ, ಅಲ್ಲ, ಚಂದ್ರಕಾಂತಿಯಿಂದ ಮಾಡಿದ ಬೊಂಬೆಯೋ, ಉಹು, ಬೆಳ್ಳಿಯ ಬೊಂಬೆಯೊ, ಸುಳ್ಳು., ಶಂಖದಿಂದ ಮಾಡಿದ ಪ್ರತಿಮೆಯೋ, ಅಲ್ಲ, ಮುತ್ತಿನಿಂದ ಮಾಡಿದ ಶಿಶುವೊ ಎಂಬಂತೆ ಕಾಣುತ್ತಿತ್ತು. ಅದರ ದೇಹವನ್ನು ಮುಟ್ಟೆ ಅದು ಮೆತ್ತಗಿರುವುದನ್ನು ಕಂಡಾಗ ಅದು ಮಾನವ ಶಿಶುವೆಂದು ಅರ್ಥ ಮಾಡಿಕೊಂಡರು. ಒಂದು ಕಡೆ ಆ ಮಗುವಿನ ಅಸದೃಶವಾದ ದೇಹಕಾಂತಿ, ಮತ್ತೊಂದು ಕಡೆ ಅದರ ಸುಂದರ ಆಕಾರ, ಇದರ ಜೊತೆಗೆ ಆ ಮಗುವಿನ ಜಡತೆ—ಅಹುದು, ಅವನು ಅಳ ನಗ, ಬಾಲ್ಯದ ಮರೆಯು ಪರಬೊಮ್ಮ—ಇಲ್ಲಿ ಸ್ಪಷ್ಟವಾಗಿ ಅರ್ಥವಾಗುತ್ತದೆ.

ಲೋಕಕ್ಕೆ ಮರುಳನಂತೆ ಕಾಣುತ್ತಿದ್ದ ಸಿದ್ದರಾಮ ತನ್ನ ಭಕ್ತಿಯಿಂದ ಬಾಲ್ಯದಲ್ಲಿಯೇ ಪರಶಿವನನ್ನು ಪ್ರತ್ಯಕ್ಷವಾಗಿ ಕಂಡು, ಆತನ ಅಪ್ಪಣೆಯಂತೆ ಶ್ರೀಶೈಲಕ್ಕೆ ಹೋದ. ಅವನ ನಿಷ್ಠೆಗೆ ಮೆಚ್ಚಿದ ಶಿವನು ಪಾರ್ವತಿಯೊಡನೆ ಪ್ರತ್ಯಕ್ಷನಾಗಿ, ಅವನಿದ್ದಲ್ಲಿಯೆ ತಾನೂ ನೆಲಸುವುದಕ್ಕೆ ಭರವಸೆ ಕೊಟ್ಟು ಅವನನ್ನು ಹಿಂದಕ್ಕೆ ಕಳುಹಿಸಿದನು. ಸಿದ್ಧರಾಮನು ತನ್ನ ಹುಟ್ಟಿದೂರಾದ ಹೊನ್ನಲಿಗೆಯಲ್ಲಿ ನೆಲಸಿ, ಅನೇಕ ಗುಡಿ ಗೋಪುರಗಳನ್ನೂ ಕೆರೆಯನ್ನೂ ಕಟ್ಟಿಸಿ, ಹಲವು ಪವಾಡಗಳನ್ನು ಮೆರೆದು, ಲೋಕೋಪಕಾರಿಯಾಗಿ ಬಾಳಿದನು. ಆತನ ಕೀರ್ತಿ ಎಲ್ಲೆಲ್ಲಿಯೂ ಹರಡಿತು. ಆದರೆ ಸಿದ್ಧರಾಮ 'ಕೀರ್ತಿ

ಶಸಿ' ಯನ್ನು ಹತ್ತಿರಕ್ಕೆ ಸೇರಿಸಲಿಲ್ಲ. ಆದ್ದರಿಂದ ಕೀರ್ತಿ ಆತನನ್ನು ದೂರಿದಳಂತೆ! ಕವಿಯು ಹೇಳುವುದನ್ನು ಕೇಳಿ :

ಹಿರಿದು ಭಕ್ತ್ಯಂಗನೆಯನುರದೊಳಂ, ಜಯಸತಿಯ
ವರ ಭುಜದೊಳು, ರಮಾಸತಿಯ ಮುಖದೊಳತಿ ಶಾಂತಿ
ತರುಣಿಯಂ ಮನದೊಳೆಡೆವಿಡದಪ್ಪಿ ನೆರೆವುದಲ್ಲದೆ ಪರನಾರಿಗೆ
ತೆರವಸಟ್ಟುವಸಿವನ ಬೇಟದೊಳು ಕಣ್ಣಾಗ
ದಿರದೆ ಕೈವಿಡಿದೆನ್ನ ನೂಂಕಿ ಕಳೆದಂ ಮಹಾ
ಪುರುಷರರಿದಿರಿ ಸಿದ್ಧರಾಮನೆಂದಾ ಕೀರ್ತಿವಧು ದೂರಿದಳು ಜಗದೊಳಂ.

ಭಕ್ತಿಯೆಂಬುವಳನ್ನುಎದೆಯಲ್ಲಿಯೂ, ಜಯವೆಂಬವಳನ್ನು ತೋಳಿನಲ್ಲಿಯೂ ರಮೆಯೆಂಬುವಳನ್ನು ಮುಖದಲ್ಲಿಯೂ, ಶಾಂತಿಯೆಂಬುವಳನ್ನು ಮನಸ್ಸಿನಲ್ಲಿಯೂ ಎಡೆ ಬಿಡದೆ ಆಲಂಗಿಸಿಕೊಂಡು ಅವರೊಡನೆ ರತಿಸುಖಮಗ್ನನಾಗಿರುವನಲ್ಲದೆ ಮುಕ್ತಿಯೆಂಬುವಳಿಗೆ ತೆರವನ್ನು ಕೊಟ್ಟು ಕಳುಹಿಸಿರುತ್ತಾನೆ. ಇವನು. ಈ ತನ್ನ ಪ್ರೇಮಕ್ರೀಡೆಯಲ್ಲಿ ಕೈಹಿಡಿದ ನನ್ನನ್ನು ಅತ್ತ ನೂಕಿ ಕಡೆಗಣಿಸಿದ್ದಾನೆ, ಈ ಸಿದ್ಧರಾಮ. ಮಹಾಪುರುಷರಾದವರು ಇದನ್ನು ತಿಳಿದುಕೊಳ್ಳಿ—ಎಂದು ಕೀರ್ತಿಕನ್ಯೆ ಲೋಕದಲ್ಲೆಲ್ಲಾ ದೂರಿದಳಂತೆ! ಶ್ರೇಯಸ್ಸನ್ನು ಬಯಸಿದ ಸಿದ್ಧರಾಮನು ಕೀರ್ತಿಗಾಗಿ ಹಂಬಲಿಸಲಿಲ್ಲವೆಂಬುದನ್ನು ಮನೋಹರವಾಗಿ ಬಣ್ಣಿಸಿರುವ ಕವಿಯ ಜಾಣ್ಮೆ ಮನೋಹರವಾಗಿದೆ.

ಸಿದ್ಧರಾಮನು ಅನೇಕ ಪವಾಡಗಳನ್ನು ಮೆರೆದಿರುವನು. ಅವುಗಳಲ್ಲೆಲ್ಲಾ ಆತನು ಲೋಕಕಾರುಣ್ಯಮೂರ್ತಿಯಂತೆ ಚಿತ್ರಿತನಾಗಿದ್ದಾನೆ. ಶ್ರೀ ಡಿ. ಎಲ್. ನರಸಿಂಹಾಚಾರ್ಯರು ತಮ್ಮ 'ಸಿದ್ಧರಾಮ ಚರಿತೆಯ ಸಂಗ್ರಹ' ದ ಮುನ್ನುಡಿಯಲ್ಲಿ 'ಪ್ರತಿಯೊಬ್ಬ ವ್ಯಕ್ತಿಯೂ ಸಿದ್ಧರಾಮನಂತೆ ತನ್ನ ಹಳ್ಳಿಯನ್ನು ಬೆಳಗಲು ಪ್ರಯತ್ನಿಸಿದರೆ ನಾಡಿಗೆ ನಾಡೇ ಏಳಿಗೆಯ ಶಿಬಿರವನ್ನು ಏರೀತು. ಸಿದ್ಧರಾಮನಂಥ ಜನನಾಯಕನ ಚಿತ್ರವನ್ನು ರಾಘವಾಂಕ ನಮಗೆ ತೋರಿಸಿ, ಅವನಂತೆ ಕಾರ್ಯಮಾಡಿದರೆ ದೇಶದ ಅಭ್ಯುದಯ ಕ್ಷಿಪ್ರದಲ್ಲೇ ಆಗಬಲ್ಲುದೆಂಬ ಸಂದೇಶವನ್ನು ನೀಡಿದ್ದಾನೆ' ಎಂದು ಹೇಳಿರುವ ಮಾತು ಗಮನಾರ್ಹವಾದುದು. ಆಧ್ಯಾತ್ಮ

ಜಗತ್ತಿನಲ್ಲಿ ದೇದೀಪ್ಯಮಾನವಾಗಿರುವ ಸಿದ್ಧರಾಮನು ಲೌಕಿಕ ಜಗತ್ತಿಗೂ ನಿಷ್ಕಾಮಸೇವೆಯ ದೊಡ್ಡ ಉದಾಹರಣೆಯೊಂದನ್ನು ಬಿಟ್ಟು ಹೋಗಿದ್ದಾನೆ.

ರಾಘವಾಂಕನ 'ಸೋಮನಾಥ ಚರಿತೆ' ಆದಯ್ಯನೆಂಬ ವೀರಶೈವ ಶರಣನ ಜೀವನ ವೃತ್ತಾಂತವನ್ನು ಒಳಗೊಂಡಿದೆ. ಕಥಾನಾಯಕನು ಉಗ್ರ ವೀರಶೈವ. ಆತನು ಜೈನ ಪಾರಿಶೆಟ್ಟಿಯ ಮಗಳಾದ ಪದ್ಮಾವತಿಯನ್ನು ಲಗ್ನವಾಗಿ ಅವಳಿಗೆ ಶಿವದೀಕ್ಷೆಯನ್ನು ಕೊಟ್ಟನು. ಕಾರಣಾಂತರದಿಂದ ಆತನಿಗೆ ಮಾವನಲ್ಲಿ ಅಸಮಾಧಾನ ಹುಟ್ಟಿತು. ಇದರ ಫಲವಾಗಿ ಹುಲಿಗೆರೆಯಲ್ಲಿದ್ದ ಜೈನಬಸದಿಯಲ್ಲಿ ಸೋಮೇಶ್ವರನ ಸ್ಥಾಪನೆಯಾಯಿತು. ಆದಯ್ಯ ಒಬ್ಬ ವಚನಕಾರ; ಆತನ ಕಥೆಯನ್ನು ಸೂಕ್ಷ್ಮವಾಗಿ ವಚನಕಾರರ ಸಾಲಿನಲ್ಲೆ ಕೊಟ್ಟಿದೆ. ಮತಾಭಿಮಾನವೊಂದನ್ನು ಬಿಟ್ಟರೆ ಆತನಲ್ಲಿ ಕಾವ್ಯ ನಾಯಕನಾಗುವ ಮತ್ತಾವ ಮಹೋನ್ನತಗುಣವೂ ಕಾಣಬರುವುದಿಲ್ಲ. ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು 'ಹರಿಶ್ಚಂದ್ರ ಕಾವ್ಯಸಂಗ್ರಹ'ದ ಮುನ್ನುಡಿಯಲ್ಲಿ 'ಸೋಮನಾಥ ಚರಿತೆಗಿಂತಲೂ ಸಿದ್ಧರಾಮ ಪುರಾಣದ ವಿಷಯವು ಹೆಚ್ಚು ಗಂಭೀರವಾಗಿದೆ, ಗುರುಭಕ್ತಿ ಗೌರವಗಳಿಂದ ಕೂಡಿವೆ, ಇದರಲ್ಲಿ ಕೀಳು ಭಾವಗಳಿಗಾಗಲಿ, ಸಡಿಲವಾದ ಸಂಗತಿಗಳಿಗಾಗಲಿ, ಮತ ವೈಷಮ್ಯ ಪ್ರದರ್ಶನಕ್ಕಾಗಲಿ ಅವಕಾಶವಿಲ್ಲ. ಅತಿಶಯೋಕ್ತಿ ಹೆಚ್ಚಾಗಿಲ್ಲ. ಇದರ ನಾಯಕನು ಘುಟಿಕೆ, ಮೂಲಿಕೆ, ಅಂಜನ, ವಾದ, ವಶ್ಯ, ಕಾಲ ವಂಚನ, ಮಾರಣ, ಪರಕಾಯ ಪ್ರವೇಶ ಮುಂತಾದುವುಗಳನ್ನು ಬಯಸುವ 'ವಿಕಾರಿ ಸಿದ್ಧ' ನಲ್ಲ. ಈ ಚರಿತ್ರೆಯಲ್ಲಿ ಸಿದ್ಧರು, ಸಾಧುಗಳು, ಅವತಾರ ಪುರುಷರು ಎಂದು ಗಣ್ಯರಾದವರ ಜೀವನಗಳಿಂದ ಸಾಮಾನ್ಯವಾಗಿ ಜನರು ಮೆಚ್ಚಿ ಆರಿಸಿಕೊಂಡು ಪ್ರತಿಪಾದಿಸುವಂಥ ಸಂಗತಿಗಳೇ ಇವೆ..... ........ಆದಯ್ಯನು ಅವತಾರ ಪುರುಷ, ಶಿವಭಕ್ತ ಎಂದು ವರ್ಣಿತನಾಗಿದ್ದರೂ, ಸೋಮಯ್ಯ ಸೋಮಯ್ಯನೆನ್ನುತ್ತ ಸೋಮನಾಥನ ಸ್ತುತಿ ಮಾಡಿದ್ದರೂ ಅವನಲ್ಲಿ ಸಿದ್ಧರಾಮನ ಘನತೆ ಗುರುತ್ವಗಳಿಲ್ಲ. ಸಿದ್ಧರಾಮನ ಸ್ವಾರ್ಥತ್ಯಾಗ, ಪರೋಪಕಾರ ಬುದ್ಧಿ, ಪಾರಲೌಕಿಕ ವಿಚಾರ, ನಿತ್ಯಾನಿತ್ಯ ವಿವೇಕ ಮುಂತಾದ ಮಹಾಪುರುಷಗುಣಗಳು ಕಂಡುಬರುವುದಿಲ್ಲ. ಅವನಲ್ಲಿ ಆ ಪೂಜ್ಯಭಾವವುಂಟಾಗುವುದಿಲ್ಲ' ಎಂದು ಹೇಳಿರುವ ಮಾತುಗಳು ಸರ್ವಸತ್ಯ.

ರಾಘವಾಂಕನ 'ವೀರೇಶ ಚರಿತೆ' ದಕ್ಷಯಜ್ಞವನ್ನು ವೀರಭದ್ರನು ನಾಶಮಾಡಿದ ಕಥೆ. ಇದಕ್ಕೆ 'ಮೀಸಲುಗವಿತೆ' ಎಂಬ ಹೆಸರೂ ಉಂಟು. ಓರಂಗಲ್ಲಿನ ಪ್ರತಾಪರುದ್ರ ಮಹಾರಾಜನ ಸಭೆಯಲ್ಲಿ ಏಕದಂಡಿ, ದ್ವಿದಂಡಿ, ತ್ರಿದಂಡಿಗಳೆಂಬ ಮೂವರು ಕುಕವಿಗಳಿದ್ದರಂತೆ! ಆ ಮೂವರೂ ವೈಷ್ಣವರು. ರಾಜನ ಆಸ್ಥಾನಕ್ಕೆ ಬಂದ ಕವಿಗಳಿಂದ ಅವರ ಕಾವ್ಯಗಳನ್ನು ಮೂರು ಸಲ ಓದಿಸಿ, ತಮ್ಮ ಸ್ಮರಣಶಕ್ತಿಯಿಂದ ಅವುಗಳನ್ನು ಆಮೂಲಾಗ್ರವಾಗಿ ಹೇಳಿ 'ನನ್ನ ಪದ್ಯವ ನೀನೆಲ್ಲಿ ಕಲಿತೆ' ಎಂದು ಹೇಳಿ ಬಂದವರನ್ನು ಮುಖಭಂಗ ಮಾಡಿ ಕಳುಹಿಸುತ್ತಿದ್ದರಂತೆ! ಓರಂಗಲ್ಲಿನಿಂದ ಬಂದ ಚತುರಕವಿಯೆಂಬ ವಿದ್ವಾಂಸನಿಂದ ಇದನ್ನರಿತ ರಾಘವಾಂಕನು, ಹರಿಹರದೇವನಿಂದ ಆಶೀರ್ವಾದವನ್ನು ಪಡೆದು, ಕುಕವಿಗಳನ್ನು ಭಂಗಿಸಲೆಂದು ಓರಂಗಲ್ಲಿಗೆ ಹೊರಟನು. ಅಲ್ಲಿ ಒಂದು ವೀರಭದ್ರದೇವರ ಗುಡಿ, ರಾಘವಾಂಕನು ಆ ಗುಡಿಯ ಹಿಂಭಾಗದಲ್ಲಿ ಕುಳಿತು 'ವೀರೇಶ ಚರಿತೆ'ಯನ್ನು ಬರೆದನು. ದೇವರು ಆತನ ಭಕ್ತಿಗೆ ಮೆಚ್ಚಿ ಹಿಮ್ಮುಖಕ್ಕೆ ತಿರುಗಿಕೊಂಡನಂತೆ! ಇನನ್ನು ಕಂಡು ಏಕದಂಡಿಯೇ ಮೊದಲಾದ ಮೂವರೂ ಕುಕವಿಗಳೂ ಹೆದರಿ ಆತನಿಗೆ ಶರಣಾದರಂತೆ! ರಾಜನು ರಾಘವಾಂಕನನ್ನು ಸನ್ಮಾನಿಸಿ ಆತನ ಕಾವ್ಯವನ್ನು ಆನೆಯ ಮೇಲೆ ಇಟ್ಟು ಮೆರವಣಿಗೆ ಮಾಡಿಸಿದನಂತೆ! ಪುರಾಣೋಕ್ತವಾದ ಈ ಕಥೆಯಲ್ಲಿ ಸ್ವಲ್ಪಮಟ್ಟಿಗೆ ಹುರುಳಿರುವಂತೆ ತೋರುತ್ತದೆ. ಕವಿಯು ಈ ಕಾವ್ಯದ ನಾಯಕ ಓರಂಗಲ್ಲಿನ ವಿಶ್ವೇಶ್ವರನೆಂದೇ ಹೇಳಿಕೊಂಡಿದ್ದಾನೆ— 'ಕೃತಿಪತಿಯೋರುಂಗಲ್ಲಿನ ವಿಶ್ವೇಶ್ವರನು.'

'ವೀರೇಶ ಚರಿತೆ' ನೂರಿಪ್ಪತ್ತೇಳು ಪದ್ಯಗಳನ್ನು ಒಳಗೊಂಡ ಎರಡು ಸಂಧಿಗಳ ಪುಟ್ಟ ಗ್ರಂಥ. ನಾವು ಈಗಾಗಲೇ ಹೇಳಿರುವಂತೆ ಈ ಕಾವ್ಯದ ಛಂದಸ್ಸು ಕುತೂಹಲಕಾರಿಯಾಗಿದೆ. ಉದಾಹರಣೆಗಾಗಿ ಕವಿಯು ತನ್ನ ಗುರುವನ್ನು ವರ್ಣಿಸಿರುವ ಈ ಪದ್ಯವನ್ನು ನೋಡಿ—

ಪರಿಣಾಮದ ಕಣಿ ಶಾಂತಿಯ ಸಿಧಿ ಭಕ್ತಿಯ ಸಾ
ಗರನೇಕೋ ನಿಷ್ಠೆಯ ಹರನತಿ ಸಾಮರ್ಥ್ಯದ
ತರು ನೀತಿಯ ಕಡಲು ದಯಾಗಾರಂ ಪುಣ್ಯದ ಪುಂಜಂ ಸತ್ಯದ ಸದನಂ
ಹರುಷದ ಮಡು ಸರ್ವಜ್ಞತ್ವದ ಶಾಸನ ಸು

ಸ್ಥಿರದಾಷ್ಟಲಯುಕ್ತಂ ಹಂಪೆಯ ಹರಿಹರ ದೇ
ವರ ಕಾರುಣ್ಯದ ಸುಪ್ರಭೆ ಬೆಳಗುಗೆ ಬಿಡದೆಮ್ಮ ಮನೋಮಂದಿರಕೆಂದುಂ

ಮಾತ್ರೆಗಳ ಸಂಖ್ಯೆ ವಾರ್ಧಕ ಷಟ್ಪದಿಯಂತೆಯೇ ಇದೆ. ಗಣಗಳು ಮಾತ್ರ ಐದಕ್ಕೆ ಬದಲಾಗಿ ನಾಲ್ಕು ಮಾತ್ರೆಗಳು. ಇದನ್ನು 'ಉದ್ದಂಡ ಷಟ್ಪದಿ' ಯೆಂದು ಕರೆದಿರುವುದಾಗಿ 'ವೀರೇಶ ಚರಿತೆ'ಯ ಮುನ್ನುಡಿಯಿಂದ ತಿಳಿದುಬರುತ್ತದೆ. ಇದು ಉಳಿದ ಷಟ್ಪದಿಗಳಂತೆ ರಾಗಪ್ರಧಾನವಾದುದಲ್ಲ, ತಾಳಪ್ರಧಾನವಾದುದು ಎಂದು ಹೇಳಲಾಗಿದೆ.

ರಾಘವಾಂಕನ ಶೈಲಿ ಅರಕ್ಕೆ ಹಿಗ್ಗದ ಬರಕ್ಕೆ ತಗ್ಗದ ಸೌವರ್ಣ ಮಧ್ಯಗಾಮಿ. ಈತನು ಹಳಗನ್ನಡದ ಜೊತೆಗೆ ಹೊಸಗನ್ನಡ ನಡುಗನ್ನಡಗಳ ರೂಪವನ್ನು ಬಳಸುತ್ತಾನೆ. ಅಚ್ಚ ಕನ್ನಡವನ್ನು ಬಳಸುವಂತೆ ಸಂಸ್ಕೃತ ವನ್ನೂ ಬಳಸುತ್ತಾನೆ; ಆದರೆ ಆ ಸಂಸ್ಕೃತ ಸುಲಭಗ್ರಾಹ್ಯವಷ್ಟೆ. ಆತನ ದೇಶಿ ಮನೋಹರವಾಗಿದೆ. 'ತೂಕದ ಕೋಲ ತೊಲೆಯಾದಳು'. 'ಸೀಗೆ ಯೊಳಗಣ ಬಾಳೆಯಾದುದು' ಇತ್ಯಾದಿ ಪ್ರಯೋಗಗಳು ಗಾದೆಯ ಮಾತಿನಷ್ಟು ಸಾರವತ್ತಾಗಿವೆ. ಆತನ ಬಂಧ ಚಂಪುವಿನ ಬಿಕ್ಕಟ್ಟನ್ನು ಸ್ವಲ್ಪ ಮಟ್ಟಿಗೆ ಉಳಿಸಿಕೊಂಡಿದೆಯಾದರೂ ಸರಳ, ಸುಲಭ, ಲಲಿತ, ಸುಂದರ.

ಹರಿಹರ ರಾಘವಾಂಕರು ಜನಪ್ರಿಯ ಕವಿಗಳು. ಅಲ್ಲಮ, ಬಸವಣ್ಣ ಸಿದ್ಧರಾಮಾದಿ ವಚನಕಾರರ ಕಾಲದ ಉದಾತ್ತ ವಾತಾವಣದಲ್ಲಿಯೇ ಉಸಿರಾಡುವ ಈ ಕವಿಗಳಿಬ್ಬರೂ ಕನ್ನಡಿಗರ ಸಂಸ್ಕೃತಿಯ ಮಟ್ಟವನ್ನು ಉನ್ನತಿಗೇರಿಸುವ ಮಹಾಕಾರ್ಯದಲ್ಲಿ ಕೈಯಿಟ್ಟು ಕೃತಕೃತ್ಯರಾದವರು. ಸಾಹಿತ್ಯ ದೃಷ್ಟಿಯಿಂದ ನೋಡಿದಾಗ, ಪಂಪಕವಿಯು ಚಂಪೂ ಕಾವ್ಯಕ್ಕೆ ಹೇಗೊ ಹಾಗೆ ಹರಿಹರನು ರಗಳೆಯ ಛಂಧಸ್ಸಿಗೂ ರಾಘವಾಂಕನು ಷಟ್ಪದಿಯ ಛಂದಸ್ಸಿಗೂ ಆದಿಕವಿಗಳು.

ಹರಿಹರ ರಾಘವಾಂಕರ ಗೌರವಕ್ಕೆ ಪಾತ್ರನಾದ **ಕೆರೆಯ ಪದ್ಮರಸನು** ಬರೆದ 'ದೀಕ್ಷಾ ಬೋಧೆ' ತ್ರಿವಿಧ ರಗಳೆಗಳಿಂದ ಕೂಡಿದೆ. ಆದರೆ ಅದು ಧರ್ಮಗ್ರಂಥವೇ ಹೊರತು ಕಾವ್ಯವೇನೂ ಅಲ್ಲ. ಆತನ ಮಗನಾದ **ಕುಮಾರ ಪದ್ಮರಸನು** ತನ್ನ ತಂದೆ ಬರೆದ 'ಸಾನಂದ ಚಾರಿತ್ರ'ವನ್ನು ಷಟ್ಪದಿ ರೂಪದಿಂದ ಕನ್ನಡಕ್ಕೆ ತಂದುಕೊಟ್ಟಿದ್ದಾನೆ. ಇಲ್ಲಿ ಹೆಚ್ಚಾಗಿ ಬಳಕೆ

ಯಾಗಿರುವುದು ಕುಸುಮ, ಭಾಮಿನಿಷಟ್ಪದಿಗಳು. ಸಾನಂದನೆಂಬ ಋಷಿ ಪಂಚಾಕ್ಷರೀ ಮಹಿಮೆಯಿಂದ ನಾರಕಿಗಳನ್ನೆಲ್ಲಾ ಉದ್ಧಾರಮಾಡಿದುದು ಇದರ ಕಥಾ ವಸ್ತು. ಇದರಲ್ಲಿ ಎತ್ತಿ ತೋರುವಂತಹ ಕಾವ್ಯಗುಣಗಳೇನೂ ಇಲ್ಲ. ಷಟ್ಪದಿಯ ಸಂಪ್ರದಾಯವನ್ನು ಅನುಸರಿಸಿದವರಲ್ಲಿ ಬಹಳ ಹಳಬನೆಂಬುದು ಈತನ ಪ್ರಾಶಸ್ತ್ಯ.

ಹರಿಹರರಾಘವಾಂಕರ ಸಮಕಾಲೀನನಾದ **ಪಾಲ್ಕುರಿಕೆ ಸೋಮನಾಥನು** ಸುಪ್ರಸಿದ್ಧನಾದ ಆಂಧ್ರಕವಿ. ಆತನ ತೆಲುಗು ಕಾವ್ಯಗಳಲ್ಲಿ 'ಬಸವ ಪುರಾಣಮು' ಬಹಳ ಮುಖ್ಯವಾದುದು. ಇದೇ ಕನ್ನಡದ ಬಸವಪುರಾಣಕ್ಕೆ ಆಕರ. ಸೋಮನಾಥನು ತೆಲುಗಿನಲ್ಲಿ ಮಾತ್ರವೇ ಅಲ್ಲದೆ ಸಂಸ್ಕೃತ, ಪ್ರಾಕೃತ, ಕನ್ನಡಗಳಲ್ಲಿಯೂ ಪ್ರವೀಣನಾಗಿದ್ದು ಗ್ರಂಥರಚನೆ ಮಾಡಿದ್ದಾನೆ. 'ಬಸವರಾಜೀಯ ', ' ಅನ್ಯವಾದ ಕೋಲಾಹಲ, ' ಬಸವಣ್ಣನ ಪಂಚಗದ್ಯ '—ಇವು ಆತನ ಸಂಸ್ಕೃತ ಗ್ರಂಥಗಳು; ' ಸದ್ಗುರು ರಗಳೆ', ಚನ್ನಬಸವ ರಗಳೆ'. ' ಗಂಗೋತ್ಪತ್ತಿರಗಳೆ', ' ಶೀಲಸಂಪಾದನೆ', ' ಗಣಸಹಸ್ರನಾಮ ', ' ಪಂಚರತ್ನ '— ಇವು ಆತನ ಕನ್ನಡ ಗ್ರಂಥಗಳು. ಸಾಹಿತ್ಯ ದೃಷ್ಟಿಯಿಂದ ಈ ಕಾವ್ಯಗಳಲ್ಲಿ ಮಹೋನ್ನತವಾದುದೇನೂ ಇಲ್ಲ; ಎಲ್ಲವೂ ಪುಟ್ಟ ಪುಟ್ಟ ಕೃಹೋಕ್ತಿಗೆಗಳು, ಸ್ತೋತ್ರರೂಪವಾದುವು. ಶೀಲ ಸಂಪಾದನೆಯಲ್ಲಿ ಅರವತ್ತು ನಾಲ್ಕು ಶೀಲಗಳು ವಚನರೂಪದಲ್ಲಿ ಕಾಣಿಸಿಕೊಂಡಿವೆ. ಗಣಸಹಸ್ರನಾಮದಲ್ಲಿ ಸಹಸ್ರಕ್ಕೂ ಮಿಕ್ಕ ಗಣಗಳ ಪಟ್ಟಿಯಿದೆ, ಗಂಗೋತ್ಪತ್ತಿರಗಳೆಯಲ್ಲಿ ಗಂಗಾನದಿ ಸ್ವರ್ಗದಿಂದ ಭೂಮಿಗಿಳಿದು ಬಂದ ಕಥೆ, ಶಿವನದನ್ನು ಜಟೆಯಲ್ಲಿ ಧರಿಸಿದ ಕಥೆ; ಉಳಿದುವೆರಡೂ ಆಯಾ ಹೆಸರಿನ ಸ್ತೋತ್ರಗಳು. ಈತನಿಗೆ ತತ್ವವಿದ್ಯಾಕಲಾಪ, ಅನ್ಯದೈವಕೋಲಾಹಲ, ಕವಿತಾಸಾರ—ಎಂಬ ಬಿರುದುಗಳಿವೆ. ಮೊದಲೆರಡನ್ನು ನಾವು ಸ್ವಲ್ಪ ಮಟ್ಟಿಗೆ ಸ್ವೀಕರಿಸಬಹುದು; ಉಳಿದೊಂದರ ಸಾರ್ಥಕತೆ ಆತನ ತೆಲುಗು ಕಾವ್ಯಗಳಿಂದ ನಿರ್ಧರವಾಗಬೇಕೆಂದು ತೋರುತ್ತದೆ. ಈತನು ಸುಪ್ರಸಿದ್ಧ ತೆಲುಗು ಕವಿ ವೇಮನನ ಶಿಷ್ಯಪರಂಪರೆಗೆ ಸೇರಿದವನೆಂದೂ, ಭೃಂಗೀಶ್ವರನ ಅವತಾರವೆಂದೂ ವೈಷ್ಣವನಾದ ಚಕ್ರಪಾಣಿ ರಂಗನಾಥನನ್ನು ವಾದದಲ್ಲಿ ಸೋಲಿಸಿ, ವೀರಶೈವ ದೀಕ್ಷೆಯನ್ನು ಕೊಟ್ಟನೆಂದೂ ತೋಂಟದಾರ್ಯನ

' ಪಾಲ್ಕುರಿಕೆ ಸೋಮೇಶ್ವರ ಪುರಾಣ ' ದಿಂದ ತಿಳಿದು ಬರುತ್ತದೆ. ಹರಿಹರ ರಾಘವಾಂಕರು ಕನ್ನಡಕ್ಕೆ ನೀಡಿದ ಕ್ರಾಂತಿಯನ್ನೇ ಈತನು ತೆಲುಗು ಭಾಷೆಗೆ ನೀಡಿದಂತೆ ಕಂಡುಬರುತ್ತದೆ. ಈತನು ಗುಬ್ಬಿಯ ಮಲ್ಲಣಾರ್ಯನೇ ಮೊದಲಾದ ಕನ್ನಡ ಕವಿಗಳ ಆದರಕ್ಕೂ ಪಾತ್ರನಾಗಿದ್ದಾನೆ.

ಹರಿಹರ ರಾಘವಾಂಕರು ಹಾಕಿಕೊಟ್ಟ ಹೊಸಮಾರ್ಗವನ್ನು ಅನುಸರಿಸಲು ಒಡನೆಯೇ ಕವಿಗಳು ಅಷ್ಟು ಉತ್ಸಾಹ ತೋರಲಿಲ್ಲವೆಂದು ತೋರುತ್ತದೆ. ಹನ್ನೆರಡು ಹದಿಮೂರನೆಯ ಶತಮಾನದಲ್ಲಿ ಆರಂಭವಾದ ದೇಶೀಯ ಶೈಲಿ ಹದಿನೈದನೆಯ ಶತಮಾನ ಆರಂಭವಾಗುವವರೆಗೆ ತಟಸ್ಥವಾಗಿದ್ದಂತೆಯೇ ಭಾಸವಾಗುತ್ತದೆ. ಈ ಕಾಲಮಾನದಲ್ಲಿ ದೇಶೀಯ ಛಂದಸ್ಸಿನಲ್ಲಿ ಕಾವ್ಯ ಬರೆದವರೆಂದರೆ ಮೂವರೇ—ಕುಮುದೇಂದು, ಭೀಮಕವಿ, ಪದ್ಮಣಾಂಕ. ಇವರಲ್ಲಿ **ಕುಮುದೇಂದುವಿನ** ಕಾವ್ಯವಸ್ತು ಸಂಪ್ರದಾಯ ಶೀಲವಾದುದು— ಜೈನ ರಾಮಾಯಣ. ಜೈನ ಕವಿಯೊಬ್ಬನು ಷಟ್ಪದಿಯನ್ನು ಕಾವ್ಯಕ್ಕೆ ಬಳಸಿದುದು ಇದೇ ಮೊದಲು. ಇದರ ಕಥೆ ಬಹುಮಟ್ಟಿಗೆ ಪಂಪ ರಾಮಾಯಣದ ಕಥೆಯನ್ನೇ ಅನುಸರಿಸಿದೆ. ಆದರೆ ಇದರ ಷಟ್ಪದಿ ವೈವಿಧ್ಯಮಯವಾಗಿದೆ. ಒಂದೊಂದು ಸಂಧಿಯಲ್ಲಿ ಒಂದೊಂದು ಬಗೆಯ ಷಟ್ಪದಿ ಬಳಕೆಯಾಗಿದೆ. ಇದರ ಬಳಕೆಯಲ್ಲಿಯೂ ಈತನು ರಾಘವಾಂಕನಂತೆ ಪ್ರಯೋಗ ಪರೀಕ್ಷೆ ಮಾಡುತ್ತಿರುವಂತೆ ಭಾಸವಾಗುತ್ತದೆ. ಈತನಿಗೆ ಪರವಾದಿ ಗಿರಿವಜ್ರ, ಸರಸಕವಿ ತಿಲಕ—ಎಂಬ ಬಿರುದಗಳಿವೆ. ಮೊದಲನೆಯ ಬಿರುದಿಗೆ ನಮ್ಮ ಅಡ್ಡಿಯೇನೂ ಇಲ್ಲ. ಎರಡನೆಯ ಬಿರುದಿನಲ್ಲಿ ಸ್ವಲ್ಪ ಅತಿಶಯೋಕ್ತಿ ಇದೆ. ತನ್ನ ಕಾವ್ಯದ ಶ್ರೇಷ್ಠತೆಯನ್ನು ಹೇಳಿ ಕೊಳ್ಳುತ್ತಾ

ಎಳಸದರಾರ್ ಶರದಿಂದುವ ಚಂದ್ರಿಕೆ
ಗೆಳಸದರಾರ್ ಹರಿಚಂದನದಣ್ಪಿಂ
ಗೆಳಸದರಾರ್ ನವವಿಕಸಿತ ವಿಚಕಿಲಲತಿಕಾಮಂಜರಿಗೆ
ಎಳಸದರಾರ್ ನವಯೌವನ ಲಕ್ಷ್ಮಿಗೆ
ಯೆಳಸದರಾರ್ ನವಯುವತೀ ಸಿವಹಕೆ
ಯೆಳಸದರಾರ್ ಕುಮುದೇಂದು ಮುನೀಶ್ವರ ವಿರಚಿತ ಕಾವ್ಯ ಕಥಾರಸಕೆ?

ಶರತ್ಕಾಲದ ಚಂದ್ರಬಿಂಬದ ಬೆಳ್ದಿಂಗಳನ್ನು ಯಾರು ತಾನೆ ಅಪೇಕ್ಷಿಸುವುದಿಲ್ಲ?

ಶ್ರೀಗಂಧದ ಲೇಪನಕ್ಕೆ ಯಾರು ತಾನೆ ಬಯಸುವುದಿಲ್ಲ? ಆಗತಾನೆ ಅರಳಿರುವ ಪುಷ್ಪಗಳ ಗೊಂಚಲಿಗೆ ಯಾರು ತಾನೆ ಆಶಿಸರು? ಷೋಡಶ ಯೌವನದ ಕಾಂತಿಯನ್ನು ಯಾರು ತಾನೆ ಪ್ರೀತಿಸುವುದಿಲ್ಲ? ಯೌವನವತಿಯರಾದ ಹೆಣ್ಣುಗಳನ್ನು ಯಾರು ತಾನೆ ಬಯಸುವುದಿಲ್ಲ? ಹಾಗೆಯೇ ಕುಮುದೇಂದುವಿನ ಕಥಾರಸವನ್ನು ಸವಿಯಲು ಯಾರು ತಾನೆ ಅಪೇಕ್ಷಿಸುವುದಿಲ್ಲ?

ನಿಜ; ಎಲ್ಲರೂ ಎಲ್ಲವನ್ನೂ ಅಪೇಕ್ಷಿಸುತ್ತಾರೆ. ಸಿಕ್ಕುವುದು ಅವರ ಪುಣ್ಯ ಅಷ್ಟೆ. ಕವಿಯ ಬಂಧ ಪ್ರೌಢವಾಗಿದ್ದರೂ ಲಲಿತವಾಗಿದೆ. ಆದರೆ ಕಲ್ಪನಾವಿಲಾಸಕ್ಕಿಂತಲೂ ಕವಿಸಮಯ ಚಮತ್ಕೃತಿಗಳೇ ಇಲ್ಲಿ ಹೆಚ್ಚು. ಈತನ ಕಾಲ ಸುಮಾರು ೧೩೭೦.

## ಭೀಮಕವಿ

ಈತನು ಹದಿನಾಲ್ಕನೆಯ ಶತಮಾನದ ಕಡೆಯ ಭಾಗದಲ್ಲಿದ್ದವನು. ಈತನು ಬಸವಪುರಾಣ, ಭೀಮಕವೀಶ್ವರರಗಳೆ, ಭೃಂಗಿದಂಡಕಗಳೆಂಬ ಗ್ರಂಥಗಳ ಕರ್ತೃವೆಂದು ತಿಳಿದುಬರುತ್ತದೆ. ಇವುಗಳಲ್ಲಿ ಕಡೆಯದು ಉಪಲಬ್ಧವಾಗಿಲ್ಲ. ಉಳಿದೆರಡರಲ್ಲಿ ' ಭೀಮಕವೀಶ್ವರ ರಗಳೆ 'ಯು ಕೇವಲ ನೂರೆಂಟು ಚರಣಗಳನ್ನು ಒಳಗೊಂಡಿರುವ ರಗಳೆಯ ಮಟ್ಟಿನ ಪುಟ್ಟ ಸ್ತೋತ್ರಗ್ರಂಥ. ಕವಿಯ ' ಬಸವಪುರಾಣ 'ವು ೬೧ ಸಂಧಿಗಳನ್ನು ಒಳಗೊಂಡ ಎಂಟು ಆಶ್ವಾಸಗಳ ಬೃಹದ್ಗ್ರಂಥವಾಗಿರುವುದು ಮಾತ್ರವೇ ಅಲ್ಲದೆ ಮುಂದಿನ ವೀರಶೈವ ಪುರಾಣಕರ್ತೃಗಳಿಗೂ ವೀರಶೈವ ಧರ್ಮಾಭಿಮಾನಿಗಳಿಗೂ ಅತ್ಯಂತ ಪ್ರಿಯವಾದ ಗ್ರಂಥ. ಪದ್ಮಣಾಂಕ, ವಿರೂಪಾಕ್ಷಪಂಡಿತ, ಷಡಕ್ಷರಿ ಮೊದಲಾದ ಕವಿಗಳು ಈತನನ್ನು ಭಕ್ತಿಯಿಂದ ಸ್ಮರಿಸಿ ಬಾಯಿತುಂಬ ಹೊಗಳಿದ್ದಾರೆ. ತನ್ನಂತಹ ಬಡಮತಿ ಅವತಾರಪುರುಷ ಬಸವಣ್ಣನ ಪುರಾಣವನ್ನು ಬರೆಯಬಲ್ಲೆನೆ ಎಂದು ಕವಿ ಚಿಂತಿಸುತ್ತಾ ಯೋಗನಿದ್ರೆಯಲ್ಲಿ ಮಲಗಿರುವಾಗ ಅಸಘದೇವಾರ್ಯನೂ ಪಾಲ್ಕುರಿಕೆ ಸೋಮೇಶ್ವರನೂ ಕನಸಿನಲ್ಲಿ ಕಾಣಿಸಿಕೊಂಡು, ತಾವು ಆತನ ಆತ್ಮದಲ್ಲಿದ್ದು ಕಾವ್ಯವನ್ನು ರಚಿಸುವುದಾಗಿಯೂ ಭೀಮಕವಿಯು ಅದನ್ನು ಬರೆದುಕೊಳ್ಳಬೇಕೆಂದೂ ತಿಳಿಸಿದರಂತೆ; ಕವಿಯು ಅದನ್ನು ನಂಬಿ ಕೃತಿರಚನೆಗೆ ಕೈಹಾಕಿದನಂತೆ. ಕುಮಾರವ್ಯಾಸನು ತನ್ನ ಕಾವ್ಯಾರಂಭದಲ್ಲಿ ' ವೀರನಾರಾಯಣನೆ ಕವಿ, ಲಿಪಿ

ಕಾರ ಕುಮಾರವ್ಯಾಸ' ಎಂದು ಹೇಳಿಕೊಂಡು ಕಾವ್ಯಕರ್ಮಕ್ಕೆ ಕೈಹಾಕಿರುವುದು ಜ್ಞಾಪಕಕ್ಕೆ ಬರುತ್ತದೆ, ಭೀಮಕವಿಯ ಈ ಮಾತನ್ನು ಕೇಳಿದಾಗ. ಕಾವ್ಯಪ್ರವಾಹಕ್ಕೆ ದೈವಾನುಗ್ರಹವೇ ಉಗಮಸ್ಥಾನವೆಂಬುದು ಈ ಮಾತುಗಳ ತಾತ್ಪರ್ಯ. ಭೀಮಕವಿಯ ವಿಚಾರದಲ್ಲಿ ಆತನ ಹೇಳಿಕೆಗೆ ಇನ್ನೂ ಸ್ಪಷ್ಟವಾದ, ವಾಚ್ಯಾರ್ಥವೂ ಇದೆಯೆಂದು ಹೇಳಬಹುದು. ಆತನು 'ಕವಿ ಸೋಮನಾಥಂ ರಸಮೊಸರೆ ಮುನ್ನುಸಿರ್ದುದನೆ ಕನ್ನಡಿಸಿ ಪೇಳ್ವೆಂ' ಎಂದು ಹೇಳಿಕೊಂಡಿದ್ದಾನೆ. ಸುಪ್ರಸಿದ್ಧ ತೆಲುಗುಕವಿಯಾದ ಪಾಲ್ಕುರಿಕೆ ಸೋಮನ 'ಬಸವ ಪುರಾಣಮು' ವನ್ನು ಕವಿ ಕನ್ನಡಿಸುತ್ತಿದ್ದಾನೆ. ಆದರೆ ಈತನು ಬರಿಯ ಭಾಷಾಂತರಕಾರನಲ್ಲ, ಕವಿಹೃದಯವುಳ್ಳ ಭಾಷಾಂತರಕಾರ.

ಕವಿಯು ತನ್ನನ್ನು ಉಭಯಕವಿತ್ವ ಸಮರ್ಥನೆಂದು ಹೇಳಿಕೊಂಡಿದ್ದಾನೆ. ಅಲ್ಲದೆ ವೈರಿಪದ, ಅಪಶಬ್ದ, ಅಥವೋಪಮೆ, ಪದಪೂರಕ, ದುಸ್ಸಂಧಿ—ಇತ್ಯಾದಿ ಜೊಳ್ಳುಗಳನ್ನು ತೂರಿ, ಸರಳ ಪದಶಯ್ಯೆ, ದೃಢ ವ್ಯಾಕರಣಯುತ ಲಾಲಿತ್ಯ ನಿಯಮಾಕ್ಷರ ಸಲಕ್ಷಣ ಭಾವಮಾಗಿ ಕೃತಿರಚನೆ ಮಾಡುವುದಾಗಿ ಈತನ ಆಶ್ವಾಸನೆ. ಕಾವ್ಯದ ಆರಂಭದಲ್ಲಿ ಪೂರ್ವಕವಿಗಳಾದ ಹರಿಹರ ರಾಘವಾಂಕರಿಗೆ ಸ್ತುತಿರೂಪದ ಪುಷ್ಪಾಂಜಲಿಯನ್ನು ಅರ್ಪಿಸುತ್ತಾನೆ—

ಸರಸ ಮೃದು ಮಧುರೋಪಮೆಗಳಂ
ಕುರಿಸೆ ವಸ್ತುಕ ವರ್ಣಕಂಗಳ
ನೆರಪಿ ಹರನಂ ಹರಗಣಂಗಳನೈದೆ ಕೀರ್ತಿಸಿದ
ಧರೆಗುಭಯ ಕವಿಶರಭ ಭೇರುಂ
ಡರಸು ಕವಿ ಹರಿಬುಧವರನ ತ
ದ್ವರಸುತನ ರಾಘವನ ಕೃಪೆಯಿಂ ರಚಿಸುವೆಂ ಕೃತಿಯಾ

ಭಾಮಿನೀಷಟ್ಪದಿಯು ಭೀಮಕವಿಗೆ ವಿಧೇಯವಾಗಿದೆಯೇ ಹೊರತು ಒಲಿದು ಬಂದಿಲ್ಲ. ಆದರೆ ಇಡೀ ಗ್ರಂಥವನ್ನು ಭಾಮಿನೀಷಟ್ಪದಿಯಲ್ಲಿ ಬರೆದ ಮೊಟ್ಟಮೊದಲ ಕವಿ ಭೀಮನೆಂಬುದನ್ನು ನಾವು ಮರೆಯುವಂತಿಲ್ಲ. ಕವಿಯ ಕಲ್ಪನಾಶಕ್ತಿ ಗಗನಚುಂಬಿಯೇನೂ ಅಲ್ಲ. ಆತನ ವರ್ಣನೆಗಳು ಕವಿಸಮಯವನ್ನು ಆಶ್ರಯಿಸಿದ್ದರೂ ಹೃದಯಂಗಮವಾಗಿದೆ. ನಾಗಲಾಂಬಿಯ

ವರ್ಣನೆ ಇದು—

ಮದ ಪಿಕಂ ಮುಟ್ಟದ ತಳಿರೊ ಷ
ಟ್ಪದವೆರಗದರಲ್ಲೋ ಶುಕಂ ಮು
ಟ್ಟದ ಫಳವೊ ಗರಿಮುಟ್ಟದಂಗಜನಂಬೊ ಕಳಹಂಸೆ
ಕದುಕದ ಮೃಣಾಳವೊ ಶರಧಿಯು
ಪ್ಪುದಕವೊಂದದ ಮಣಿಯೊ ಫಣಿ ಹಿಡಿ
ಯದ ಸುಧಾಕರ ಬಿಂಬವೋ ಅವಳೆಸೆವ ಕನ್ನಿಕೆಯೋ

ಕರ್ಮಮಾರ್ಗಾವಲಂಬನೆಗಿಂತಲೂ ಭಕ್ತಿಮಾರ್ಗಾವಲಂಬನ ಶ್ರೇಷ್ಠವೆಂದು ಹೇಳುವಲ್ಲಿ

ಹಟ್ಟಿಯೊಳು ಸುರಧೇನು ಬಂದಳ
ವಟ್ಟಿರಲು ಗೊಡ್ಡಂ ಪಿಡಿದು ಮತಿ
ಗೆಟ್ಟು ಕರೆವಪನೆಂಬನವೊಲು ಪಿರಿದು ತವರಾಜ
ಕಟ್ಟದಿರೊಳಾಗಲುಮಿರಲ್ಕದ
ಬಿಟ್ಟು ತವುಡಂ ಮುಕ್ಕುವೊನವೊಲು
ಗಟ್ಟಿ ವಜ್ರವಿರಲ್ಕೆ ಸುರಗಿಯನರ್ಥಿಸಿದನವೊಲು

ಕೊಟ್ಟಿರುವ ಉಪಮೆಗಳು ಮನೋಹರವಾಗಿವೆ. ಪ್ರಭಾವಯುತವಾಗಿವೆ.

ಭೀಮಕವಿ ಪುರಾಣಕರ್ತ. ಆತನಿಗೆ ಕಥೆಯ ಏಕಮುಖತೆಗಿಂತಲೂ ಶಿವಶರಣರ ಕಥೆಗಳಿಗೆ ಆದಷ್ಟು ಹೆಚ್ಚಾಗಿ ಅವಕಾಶಮಾಡಿಕೊಡುವುದರಲ್ಲಿಯೇ ಹೆಚ್ಚು ಆಸಕ್ತಿ, ಅನುರಕ್ತಿ. ಅವುಗಳನ್ನು ಸುಂದರವಾಗಿ ನಿರೂಪಿಸಿದ್ದಾನೆ. ಆದರೆ ಸುತ್ತಲೂ ಬೆಳೆದು ನಿಂತಿರುವ ಈ ಕಥೆಗಳ ಮಧ್ಯೆ ಬಸವಣ್ಣನ ವ್ಯಕ್ತಿಚಿತ್ರ, ಪ್ರಸ್ಫುಟವಾಗುವುದರ ಬದಲು ಮುಚ್ಚಿಹೋಗಿದೆ. ಹರಿಹರಕವಿಯ ‘ ಬಸವರಾಜದೇವರ ರಗಳೆ ’ ಯಲ್ಲಿ ಕಾಣಬರುವ ಕಾವ್ಯಾಂಶಗಳು ಇಲ್ಲಿಲ್ಲವೆಂದು ಹೇಳಬೇಕಾದುದೇ ಇಲ್ಲ. ಹರಿಹರನ ಮುಂದೆ ಈತನು ಸೂರ್ಯನ ಮುಂದಿನ ಸೊಡರು, ಅಷ್ಟೆ.

**ಪದ್ಮಣಾಂಕ**

ಹದಿನೈದನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಪದ್ಮಣಾಂಕನು ಪ್ರಸಿದ್ಧನಾದ ಕೆರೆಯ ಪದ್ಮರಸನ ವಂಶದವನು. ತಾನು ಉಭಯಕವಿ

ಯೆಂದು ಹೇಳಿಕೊಂಡಿರುವುದರ ಜೊತೆಗೆ ತನ್ನ ಕವಿತಾಶಕ್ತಿಯ ವಿಚಾರವಾಗಿಯೂ ಸಾಕಷ್ಟು ಹೊಗಳಿಕೊಂಡಿದ್ದಾನೆ.

ರಸದಾಳಿಯೆಸೆವ ಪಾಲ್ಬೊನಲೊ ಸೊಗಯಿಪ ಪೊಚ್ಚ
ಪೊಸ ಜೇನ ಸೋನೆಯೋ ಹುಣ್ಣಿಮೆಯ ಸಸಿಯ ಬ
ಟ್ಬೊಸರ್ದು ಪರಿತರ್ಪ ದಿವ್ಯಾಮೃತದ ತೊರೆಯೊ ಪಾಲ್ಗಡಲುರ್ವಿ ಮೇರೆದಪ್ಪಿ
ಒಸೆದು ದಾಂಗುಡಿವಿಟ್ಟು ಪಸರಿಸಿತೊ ಈ ಕೃತಿಯ
ರಸವೊ ಪೇಳೆಂದೆಲ್ಲ ರಸಿಕರಾನಂದಿಪಂ
ತೆಸಗುವುದು ತದ್ವಿಧಿಯೊಳೆಸಗದಿರ್ದೊಡೆ ಬಯ್ವರೇ, ಬಡಿವರೇ, ಜಡಿವರೇ

ರಸದಾಳಿಕಬ್ಬಿನ ಹಾಲಿನಿಂದಾದ ಪ್ರವಾಹವೋ, ಹೊಚ್ಚ ಹೊಸ ಜೇನಿನ ಮಳೆಯೋ, ಹುಣ್ಣಿಮೆಯ ಚಂದ್ರನ ಬಿಂಬದಿಂದ ಒಸರಿ ಹರಿದುಬರುತ್ತಿರುವ ಅಮೃತದ ತೊರೆಯೋ, ಹಾಲ್ಗಡಲು ಉಕ್ಕಿ ಮೇರೆ ಮೀರಿ ಹರಿಯುತ್ತಿರುವ ಪ್ರವಾಹವೋ ಅಥವಾ ಪದ್ಮಣಾಂಕನು ಬರೆದ ಕಾವ್ಯದ ರಸಪ್ರವಾಹವೋ–ಎಂದು ರಸಿಕರೆಲ್ಲ ಆನಂದಪಡುವಂತೆ ತನ್ನ ಕಾವ್ಯಸೃಷ್ಟಿಯಾಗಬೇಕೆಂದು ಈತನ ಆದರ್ಶ. ಆದರೆ ಕವಿಯ ಕಾವ್ಯವನ್ನು ಓದಿದಾಗ ಇದು ಕೇವಲ ಆದರ್ಶಮಾತ್ರವೆಂಬುದು ಸ್ಪಷ್ಟವಾಗುತ್ತದೆ.

ಪದ್ಮಣಾಂಕನ ಕಾವ್ಯ 'ಪದ್ಮರಾಜ ಪುರಾಣ'. ವಾರ್ಧಕಷಟ್ಪದಿಯಲ್ಲಿ ಬರೆದಿರುವ ಈ ಗ್ರಂಥ ಹದಿಮೂರು ಸಂಧಿಗಳನ್ನು ಒಳಗೊಂಡಿದೆ. ಕೆರೆಯ ಪದ್ಮರಸನ ಜೀವನಚರಿತ್ರೆ ಈ ಕಾವ್ಯದ ಕಥಾವಸ್ತು. ಕೆರೆಯ ಪದ್ಮರಸನು ಪರಸಮಯಿಗಳನ್ನು ವಾದದಲ್ಲಿ ಖಂಡಿಸುವ ಸನ್ನಿವೇಶಗಳಲ್ಲಿ ಶ್ರುತಿ ಸ್ಮೃತಿಗಳ ವಾಕ್ಯಗಳನ್ನು ಷಟ್ಪದಿಯ ಛಂದಸ್ಸಿಗೆ ತಿರುಗಿಸಿಕೊಂಡು ಪದ್ಯಗಳನ್ನು ಕಟ್ಟುತ್ತಾನೆ. ಈ ತನ್ನ ಕಾವ್ಯವನ್ನು 'ಪಾಪಕ್ಷಯಾರ್ಥಂ ಭಕ್ತಿಯಿಂ ವಿರಚಿಸಿದೆಂ' ಎಂಬ ಹೇಳಿಕೆ ಕವಿಯ ಧರ್ಮದೃಷ್ಟಿಯನ್ನು ದಿಗ್ದರ್ಶಿಸುತ್ತದೆ. ಗ್ರಂಥಾವಲೋಕನ ಮಾಡುವಾಗ ಈ ದೃಷ್ಟಿಯಿಂದ ನೋಡಬೇಕೇ ಹೊರತು ಕಾವ್ಯಾಂಶಗಳನ್ನು ಹೆಚ್ಚಾಗಿ ಬಯಸಿದರೆ ಆಶಾಭಂಗವಾದೀತು. ತನ್ನ ಈ ಕಾವ್ಯದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತಾ ಕವಿಯು

ಸತಿ ಸಪ್ತವಿಧ ಭೇದಮಂ ರಳಕುಳಕ್ಷಳಮ
ನತಿಶಯದ ಗಮಕ ಕ್ರಿಯಾ ಸಮಾಸಂಗಳಂ
ಶ್ರುತಿಸಹ್ಯ ಸಂಧಿಯಂ ತದ್ಧಿತಪದಮನಪಭ್ರಂಶ ದೇಶೀಯಂಗಳಂ
ನುತವಾಗೆ ಯೋಗಿಪ ಸಮಾಸಮಂ ಸುಸಮ ಸಂ
ಸ್ಕೃತಮಂ ವಿರಹಿತಾವ್ಯೋರು ಸಂಸ್ಕೃತ ಲಿಂಗ
ತತಿ ಶಿಥಿಲಪದ ಮುಖಾದ್ಯುಕ್ತ ಲಕ್ಷಣಮರಿವ ಚತುರರೀ ಕೃತಿ
ಗೊಲಿಯರೇ

ಎಂದು ಕೇಳುತ್ತಾನೆ. ಈ ಪದ್ಯವನ್ನು ಓದುತ್ತಿದ್ದಂತೆಯೇ ವೈಯಾಕರಣಿ ಕೇಶಿರಾಜನು ತನ್ನ ಶಬ್ದಮಣಿದರ್ಪಣದ ಕೊನೆಯಲ್ಲಿ ಕೊಟ್ಟಿರುವ 'ಗಮಕ ಸಮಾಸದಿಂ' ಎಂದು ಪ್ರಾರಂಭವಾಗುವ ಪದ್ಯ ಜ್ಞಾಪಕಕ್ಕೆ ಬರುತ್ತದೆ. ಪದ್ಮಣಾಂಕನು ದೊಡ್ಡ ಪಂಡಿತನೆಂಬುದರಲ್ಲಿ ಸಂದೇಹವಿಲ್ಲ. 'ಈ ಕೃತಿ ಯುವತಿ ಕೋವಿದರನೇಂ ಸೋಲಿಸದೆ ಬಿಡುವಳೆ?' ಎಂಬ ಪ್ರಶ್ನೆಗೆ 'ಅಹುದು ಸೋಲಿಸುತ್ತಾಳೆ' ಎಂದು ಒಪ್ಪಿಕೊಳ್ಳಬೇಕು. ತನ್ನ ಕಥಾನಾಯಕನ ವರ್ಣನೆಯನ್ನು ಕೊಡುವ ಈ ಪದ್ಯವನ್ನು ನೋಡಿ

ಸ್ಫುರಿಸಿ ಲಿಂಗತ್ರಯಮನಾ ಕ್ರಿಯಾಕಾರಕೋ
ತ್ಕರನಾಗಿ ತದ್ಧಿತಮನರಿಸಿಯುಂತಸ್ಫೋರು
ತರವಿಧಿಯನೊರೆದು ವಕ್ತವ್ಯಮಿಂತೆಂದು ಬೋಧಿಸಿಯಾಗಮದ
ಹೃದಯಮಂ
ನಿರವಿಸಿ ಲಸತ್ಪ್ರತ್ಯಯಂ ಬೇಳ್ಪು ಮೇಣ್ ಪ್ರಕೃತಿ
ಪುರುಷವೃತ್ತಿಯನೈದೆ ಕಾಣಿಸುವ ಸೂತ್ರದಿಂ
ಚರಿಪವೋಲೆಸಗಿ ಶಾಬ್ದಿಕರ ಗುರುವೆನಿಪ ಕೆರೆಪದ್ಮರಸರೋವು
ಗಿಳೆಯಂ

ಶ್ಲೇಷದಿಂದ ಕೂಡಿದ ಈ ಪದ್ಯವನ್ನು ಓದುತ್ತಿದ್ದಂತೆ ಕವಿಯು ಹಿಡಿದಿರುವ ಹಾದಿ, ತಿರುಗಿರುವ ದಿಕ್ಕು ನಮಗೆ ಅರ್ಥವಾಗುತ್ತದೆ. ಆತನ 'ಕವಿಮುಖ ಕವಾಟ ಪದ್ಯ' (ಗತ ಪ್ರತ್ಯಾಗತ ಪದ್ಯ) ವು ಪಾಂಡಿತ್ಯಕ್ಕೆ ಹಾಕಿದ ಸವಾಲಿನಂತಿದೆ. ಕೆಲವು ಕಡೆಗಳಲ್ಲಿಯಂತೂ ಆತನು ಬಳಸುವ ಸಂಸ್ಕೃತಪದಗಳು ಸಂಸ್ಕೃತ ಪಂಡಿತರನ್ನೂ ಬೆರಗುಗೊಳಿಸುತ್ತವೆ. ದೇಶೀಯ ಛಂದಸ್ಸಿ

ನಲ್ಲಿ ಇಂತಹ ಮಾರ್ಗೀಶೈಲಿ ಎಷ್ಟು ವಿಕೃತವಾಗಬಲ್ಲವೆನ್ನುವುದಕ್ಕೂ ಉದಾಹರಣೆಯನ್ನು ಕೊಡಬಹುದು.

ಏನು ಲೋಪದೋಷಗಳಿದ್ದರೂ ಪದ್ಮಣಾಂಕನು ಸ್ತುತ್ಯ. ಆತನೊಬ್ಬ ಚರಿತ್ರಕಾರ. ಪದ್ಮರಸನ ಚರಿತ್ರೆಯನ್ನು ಕೊಟ್ಟಿದ್ದಾನೆ; ಹರಿಹರನ ಚರಿತ್ರೆಯ ಮೇಲೂ ಬೆಳಕು ಚೆಲ್ಲಿದ್ದಾನೆ.

# ಸ್ವತಂತ್ರಯುಗದ ಚಂಪೂ ಕವಿಗಳು

ಹನ್ನೆರಡನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯದ ಸ್ವತಂತ್ರಯುಗ ಪ್ರಾರಂಭವಾಗಿ ದೇಶೀಯ ಛಂದಸ್ಸು ಬಳಕೆಗೆ ಬಂದಿತು, ನಿಜ. ಆದರೆ ಕಾವ್ಯಕರ್ತೃಗಳೂ ಕಾವ್ಯಪ್ರಿಯರೂ ಪೂರ್ವಪದ್ಧತಿಯಲ್ಲಿಟ್ಟಿದ್ದ ಆದರ, ಆಸಕ್ತಿ, ಅಭಿರುಚಿ, ಗೌರವಗಳು ಅಚ್ಚಳಿಯದೆ ನಿಂತು, ಅದರ ಪ್ರಭುತ್ವ ಹಲವು ಶತಮಾನಗಳಷ್ಟು ಕಾಲ ಅನಿರ್ಭಾಧಿತವಾಗಿ ನಡೆದುಕೊಂಡು ಹೋದಂತೆ ಕಂಡುಬರುತ್ತದೆ. ಹೊಸ ಛಂದಸ್ಸಿನ ವಿಚಾರದಲ್ಲಿ—ಹಾಡು ಗಬ್ಬಗಳ ವಿಚಾರದಲ್ಲಿ—ಜನರಿಗಿದ್ದ ಅನಾದರಕ್ಕೆ ಹರಿಹರನ ಗಿರಿಜಾ ಕಲ್ಯಾಣದ ವಿಚಾರದಲ್ಲಿ ಪ್ರಚಲಿತವಾಗಿರುವ ಕಥೆ ಒಂದು ದಿಕ್ಸೂಚಿ. ಆತನ ರಗಳೆಗಳನ್ನು ಕಂಡು ಜನ 'ರಗಳೆಯ ಕವಿ'ಯೆಂದು ಆತನನ್ನು ಹಾಸ್ಯ ಮಾಡಿದರಂತೆ! ಅದರ ಪರಿಮಾರ್ಜನೆಗಾಗಿ ಆತ ತನ್ನ ಚಂಪೂ ಕಾವ್ಯ ವಾದ 'ಗಿರಿಜಾಕಲ್ಯಾಣ'ವನ್ನು ಬರೆದನಂತೆ! ಇದು ಪೊಳ್ಳು ಕಥೆಯಾಗಿರ ಬಹುದಾದರೂ ಜನರ ಒಲವು ಎತ್ತ ಕಡೆಗಿತ್ತೆಂಬುವಕ್ಕೆ ಇದೊಂದು ಹಿರಿಯ ಸಾಕ್ಷಿ. ಇದರಲ್ಲಿ ಅಸಹಜವಾದುದೇನೂ ಇಲ್ಲ. ಸಂಪ್ರದಾಯದ ಬಿಗಿ ಮುಷ್ಟಿ ಯಿಂದ ಬಿಡುಗಡೆಹೊಂದುವುದು ಅಷ್ಟು ಸುಲಭವಲ್ಲ. ಇತರ ಮತದವರು ಹಾಗಿರಲಿ, ವೀರಶೈವ ಕವಿಗಳಲ್ಲಿ ಕೂಡ ಕೆಲವರು ಪೂರ್ವದ ಮಾರ್ಗೀ ಶೈಲಿಗೇ ಶರಣುಹೋಗಿದ್ದಾರೆ. ಹದಿನೈದನೆಯ ಶತಮಾನದಲ್ಲಿ 'ಕುಮಾರ ವ್ಯಾಸಯುಗ' ಪ್ರಾರಂಭವಾದ ಮೇಲೆ ಹಳೆಯ ಸಂಪ್ರದಾಯದ ಇತಿ ಶ್ರೀಯಾದಂತಾಯಿತು. ಅಲ್ಲಿಂದ ಮುಂದೆ ಕಾವ್ಯರಚನೆಗೆ ಕೈಹಾಕಿದವರೆಲ್ಲರೂ ಸಾಂಗತ್ಯ ಷಟ್ಪದಿಗಳನ್ನೇ ಬಳಸಿಕೊಂಡರು.

ಹನ್ನೆರಡನೆಯ ಶತಮಾನದಿಂದ ಮುಂದಕ್ಕೂ ಚಂಪೂ ಪದ್ಧತಿ ಮುಂದುವರಿಯಿತಾದರೂ ಅದರಲ್ಲಿ ಹಿಂದಿನ ಸತ್ವ ಉಳಿದಿರಲಿಲ್ಲವೆಂಬುದು ಎದ್ದು ಕಾಣುತ್ತದೆ. ಪಂಪಯುಗದ ಕಾವ್ಯಗಳಲ್ಲಿ ಸೊರೆಗಟ್ಟಿ ಹರಿಯುತ್ತಿದ್ದ ವೀರವಾಹಿನಿ ತನ್ನ ಕ್ಷಾತ್ರದ ಕೆಂಪನ್ನೆಲ್ಲಾ ಕಳೆದುಕೊಂಡಿದೆ, ಇಲ್ಲಿ. ಹದಿಮೂರನೆಯ ಶತಮಾನದಿಂದ ಮುಂದೆ ಹುಟ್ಟಿದ ಚಂಪೂ ಕಾವ್ಯಗಳೆಲ್ಲಾ

ಸಾಮಾನ್ಯವಾಗಿ ಶೃಂಗಾರರಸ ಪ್ರಧಾನವಾದವುಗಳೇ. ಪಂಪಯುಗದ 'ವಿಕ್ರಮಾರ್ಜುನ ವಿಜಯ,' 'ಸಾಹಸಭೀಮ ವಿಜಯ' ಮೊದಲಾದವುಗಳಿಗೆ ಬದಲಾಗಿ ಈಗ 'ಲೀಲಾವತಿ,' 'ಸೊಬಗಿನ ಸೋನೆ' ಇವುಗಳ ಪ್ರಾಚುರ್ಯ. ಶೃಂಗಾರರಸನಿರೂಪಣೆಯನ್ನೇ ಹೆಗ್ಗುರಿಯಾಗಿಟ್ಟುಕೊಂಡಿರುವ ಕಾವ್ಯಗಳು ಹಾಗಿರಲಿ, ಧರ್ಮನಿರೂಪಣೆಗೆಂದೇ ಹೊರಟ ಕಾವ್ಯಗಳೂ ಶೃಂಗಾರದ ಸರಸಿಯನ್ನು ನಿರ್ಮಿಸಿಕೊಂಡು ಅದರಲ್ಲಿ ಮುಳುಗುಹಾಕುತ್ತಿವೆ. ಹೀಗೆ ಜನಜೀವನವು ತನ್ನ ಸಾಹಸಗುಣವನ್ನು ಕಳೆದುಕೊಂಡು ಭೋಗಲಾಲಸೆಯಲ್ಲಿ ಮಗ್ನವಾಗಿದ್ದುದರಿಂದಲೆ ಪರಕೀಯರ ದಾಳಿಗೆ ಸಿಕ್ಕಿ ದೇಶವು ನುಗ್ಗುನುರಿಯಾಗಿ ಹೋದುದು.

ಈ ಕಾಲದ ಕವಿಗಳು ಚಂಪೂಮಾರ್ಗವನ್ನು ಬಳಸಿದ್ದರೂ ಸ್ವತಂತ್ರಯುಗದ ವರ್ಚಸ್ಸು ಅವರ ಮೇಲೆ ಬೀಳದೆ ಹೋಗಿಲ್ಲ. ನಯಸೇನನು ಸಂಸ್ಕೃತಪದ ಪ್ರಯೋಗದಲ್ಲಿ ಔಚಿತ್ಯವಿರಬೇಕೆಂದು ಉಪದೇಶಮಾಡಿದ. ಹರಿಹರ ರಳ ಕುಳ ಕ್ಷಳಗಳ ಪ್ರಯೋಗ ಅರ್ಥವಿಲ್ಲವೆಂದು ಹೇಳಿದ. ಜನ್ನ ಕವಿಯು ಅದೇ ಧೋರಣೆಯನ್ನೆ ಮುಂದುವರಿಸಿ, ಅಲಂಕಾರಗಳ ಅತಿ ಪ್ರಯೋಗಕ್ಕೆ ಅಡ್ಡಗಟ್ಟೆ ಹಾಕುವವನಂತೆ 'ಅರುಹನ ಮೂರ್ತಿಯಂತಿರೆ ನಿರಾಭರಣಂ ಮೆರೆಯಲ್ಕೆ' ಕಾವ್ಯಸೃಷ್ಟಿಯಾಗಬೇಕೆಂಬ ಆದರ್ಶವನ್ನು ಎತ್ತಿಹಿಡಿದ. ಇದೇ ಹಾದಿಯಲ್ಲೆ ಮುಂದುವರಿದ ಆಂಡಯ್ಯನು ತನ್ನ ಕಾವ್ಯದಲ್ಲಿ ಸಂಸ್ಕೃತ ಶಬ್ದಗಳನ್ನೇ ಬಳಸದೆ ಜನರಾಡುವ ಅಚ್ಚ ಕನ್ನಡ ನುಡಿಯಲ್ಲಿ ಕಾವ್ಯರಚನೆ ಮಾಡುವೆನೆಂದು ಹೊರಟ. ಹೀಗೆ ಹೊರಟುದರಿಂದ ಕಾವ್ಯಕ್ಕಾಗಿರುವ ಲಾಭನಷ್ಟಗಳ ಪ್ರಶ್ನೆ ಇಲ್ಲಿ ಬೇಡ. ಕವಿಗಳು ಕ್ರಮಕ್ರಮವಾಗಿ ಜನಜೀವನದ ಹತ್ತಿರಕ್ಕೆ ಬರುತ್ತಿರುವ ಪ್ರಯತ್ನವನ್ನು ಇಲ್ಲಿ ಗಮನಿಸಿದರೆ ಸಾಕು.

ಸ್ವತಂತ್ರಯುಗದ ಕ್ರಾಂತಿಯಿಂದ ಕನ್ನಡ ಸಾಹಿತ್ಯದ ಮೇಲಾದ ಮತ್ತೊಂದು ಮುಖ್ಯ ಪರಿಣಾಮವೆಂದರೆ ಬ್ರಾಹ್ಮಣ ಕವಿಗಳು ಕನ್ನಡ ಕಾವ್ಯಕರ್ಮಕ್ಕೆ ಕೈಹಾಕಿದುದು. ಇದಕ್ಕೆ ಹಿಂದೆ ಬ್ರಾಹ್ಮಣರು ಒಂದೆರಡು ಲೌಕಿಕ ಕಾವ್ಯಗಳನ್ನು ಬರೆದಿರಬಹುದಾದರೂ ಧರ್ಮನಿರೂಪಣೆಗೆ ಕನ್ನಡವನ್ನು ಆಶ್ರಯಿಸಿರಲಿಲ್ಲ. ಹಾಗೆ ಆಶ್ರಯಿಸಿದವರಲ್ಲಿ ಹನ್ನೆರಡನೆಯ ಶತಮಾನದ

ಕಡೆಯ ಭಾಗದಲ್ಲಿ ಕೃತಿರಚನೆ ಮಾಡಿದ ರುದ್ರಭಟ್ಟನೇ ಬಹುಶಃ ಮೊದಲನೆಯವನು. ಹದಿನಾಲ್ಕನೆಯ ಶತಮಾನದಿಂದ ಆರಂಭವಾದ ದಾಸ ಸಾಹಿತ್ಯವಂತೂ ಸ್ವತಂತ್ರಯುಗದ ಉದಾತ್ತ ತತ್ವಗಳನ್ನು ನೆತ್ತಿಯಮೇಲೆ ಹೊತ್ತುಕೊಂಡೇ ಕಾರ್ಯರಂಗಕ್ಕಿಳಿದವುಗಳು. ಇವುಗಳನ್ನು ಕುರಿತು ಪ್ರತ್ಯೇಕ ವಾಗಿ ವಿವೇಚನೆ ಮಾಡೋಣ. ಈಗ ಸಧ್ಯಕ್ಕೆ ಹದಿನೈದನೆಯ ಶತಮಾನದ ವರೆಗೆ ಆಗಿಹೋದ ಚಂಪೂ ಕವಿಗಳ ಕೃತಿಗಳನ್ನು ಸ್ಥೂಲವಾಗಿ ಸಮೀಕ್ಷಿಸೋಣ—

**ನೇಮಿಚಂದ್ರ—**

ಹರಿಹರಕವಿಯ ಸಮಕಾಲಿಕನಾದ ನೇಮಿಚಂದ್ರಕವಿ ಪಂಪಯುಗದ ಮಹಾಕವಿಗಳ ಸಂಪ್ರದಾಯವನ್ನು ಮುಂದುವರಿಸಿ 'ಲೀಲಾವತಿ'ಯೆಂಬ ಲೌಕಿಕಕಾವ್ಯವನ್ನೂ 'ನೇಮಿನಾಥ ಪುರಾಣ'ವೆಂಬ ಧಾರ್ಮಿಕಕಾವ್ಯವನ್ನೂ ರಚಿಸಿದ್ದಾನೆ. 'ಲೀಲಾವತಿ'ಯ ಕೊನೆಯಲ್ಲಿ ಸೌಂದತ್ತ ರಟ್ಟವಂಶದ ದೊರೆ ಲಕ್ಷ್ಮಣರಾಜ(ಕ್ರಿ.ಶ. ಸು ೧೧೯೦) ಮತ್ತು ಆತನ ಮಡದಿ ಚಂಚಲದೇವಿಯ ರನ್ನೂ, 'ನೇಮಿನಾಥ ಪುರಾಣ'ದ ಮೊದಲಲ್ಲಿ ವೀರಬಲ್ಲಾಳನ (ಕ್ರಿ.ಶ. ೧೧೯೩-೧೨೨೦) ಪ್ರಧಾನನಾದ ಸಜ್ಜೆವಳ್ಳ ಪದ್ಮನಾಭನನ್ನೂ ಸ್ಮರಿಸಿರುವುದ ರಿಂದ ಕವಿಯು ಈ ಇಬ್ಬರು ರಾಜರ ಆಸ್ಥಾನದಲ್ಲಿಯೂ ಮಾನ್ಯನಾಗಿದ್ದ ನೆಂಬುದು ವ್ಯಕ್ತವಾಗುತ್ತದೆ. ಅಲ್ಲದೆ ಆತನು ಮೊದಲು 'ಲೀಲಾವತಿ' ಯನ್ನೂ ಆಮೇಲೆ 'ನೇಮಿನಾಥ ಪುರಾಣ'ವನ್ನೂ ಬರೆದನೆಂಬುದೂ ಇದ ರಿಂದ ಅರ್ಥವಾಗುತ್ತದೆ. ಆತನ ಕಾವ್ಯಗಳನ್ನು ಪರಿಶೀಲಿಸಿದಾಗ ಆತನ ಧರ್ಮಗ್ರಂಥವು 'ಲೀಲಾವತಿ'ಗಿಂತಲೂ ಎಲ್ಲ ವಿಧದಲ್ಲಿಯೂ ಶ್ರೇಷ್ಠ ವೆಂಬುದೂ ಕಂಡುಬರುತ್ತದೆ.

ನೇಮಿಚಂದ್ರನು ಬಹು ದೊಡ್ಡ ಕವಿಯೆಂಬುದರಲ್ಲಿ ಸಂದೇಹವಿಲ್ಲ. ಹದಿನಾಲ್ಕನೆಯ ಶತಮಾನದ ಕಡೆಯ ಭಾಗದಲ್ಲಿದ್ದ ಮಧುರನೆಂಬ ಕವಿ

ಸರ್ವರ ಸಮ್ಮತಮೆನಗಿದು
ಗರ್ವದ ಮಾತಲ್ಲ ಶಾಸ್ತ್ರಲೌಕಿಕ ಕಲೆಯೊಳ್
ಬೇರ್ವರಿದ ನೇಮಿ ಜನ್ನನು
ರಿರ್ವರೆ ಕರ್ಣಾಟಕೃತಿಗೆ ಸೀಮಾಪುರುಷರ್

ನಾನು ಹೇಳುವ ಮಾತು ಅಹಂಕಾರದ ಮಾತಲ್ಲ; ಇದು ಸರ್ವಸಮ್ಮತವಾದ ಭಾವನೆ ಲೌಕಿಕ ಮತ್ತು ಧಾರ್ಮಿಕ ಗ್ರಂಥಗಳ ರಚನೆಯಲ್ಲಿ ಕರ್ಣಾಟಕಕೃತಿಗೆ ಸೀಮಾಪುರುಷರಂತಿರುವ ಕವಿಗಳು ಇಬ್ಬರೇ, ನೇಮಿ ಮತ್ತು ಜನ್ನ-ಎಂದು ಹೇಳುತ್ತಾನೆ. ನೇಮಿಯನ್ನು 'ಸೀಮಾಪುರುಷ'ನೆಂದು ಕರೆಯುವುದು ಸ್ವಲ್ಪ ಅಭಿಮಾನವೆಂದು ತೋರಿದರೂ ಆತನು ದೊಡ್ಡ ಕವಿಯೆಂದು ಹೇಳುವುದರಲ್ಲಿ ಏನೂ ತಪ್ಪಿಲ್ಲ. ಈ ಕವಿಗೆ ಕವಿಧವಳ, ಕವಿರಾಜಮಲ್ಲ, ವಿದ್ಯಾವಧೂವಲ್ಲಭ, ಕಲಾಕಾಂತ, ಶೃಂಗಾರಕಾರಾಗೃಹ, ಚತುರ್ಭಾಷಾಕವಿಚಕ್ರವರ್ತಿ ಇತ್ಯಾದಿ ಇತ್ಯಾದಿಯಾದ ಹಲವಾರು ಬಿರುದುಗಳು ಆರೋಪಿತವಾಗಿವೆ. ಕವಿಯ ಆತ್ಮಪ್ರತ್ಯಯವೂ ಮಿಗಿಲಾದುದೇ. ಆತನು ತನ್ನ ಕವಿತಾಶಕ್ತಿಯನ್ನು ಹೊಗಳಿಕೊಳ್ಳುತ್ತಾ

ಯುವತಿ ಸರಸತಿ ಪುರಾತನ
ಕವಿವಿರಹಮನಱಿದಳಿಲ್ಲ ನಿರ್ಮಲದಶನ
ಚ್ಛವಿಕುಸುಮಿತರಸನಾ ಪ
ಲ್ಲವ ತಳ್ಪದೊಳಿರ್ದು ಸುಕರಕವಿಶೇಖರನಾ.

ಸರಸ್ವತಿಯು ಪುರಾತನ ಕವಿಗಳ ಅಗಲಿಕೆಯಿಂದುಂಟಾದ ತನ್ನ ವಿರಹವೇದನೆಯನ್ನು, ನೇಮಿಚಂದ್ರನ ದಂತಕಾಂತಿಯಿಂದ ಕುಸುಮಿತವಾದಂತಿರುವ ನಾಲಗೆಯ ಚಿಗುರು ಹಾಸಿಗೆಯಲ್ಲಿ ಇರುವಾಗ, ಮರೆತುಬಿಟ್ಟಳು—ಎನ್ನುತ್ತಾನೆ. ಆತನು ಕವಿಗಳ ಸಾಮರ್ಥ್ಯವನ್ನೂ ಶ್ರೇಷ್ಠತೆಯನ್ನೂ ಕುರಿತು ಹೇಳಿರುವ ಮಾತುಗಳು ಸುಪ್ರಸಿದ್ಧವಾಗಿವೆ,

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ, ವಾಮನಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ, ಹರನಂ ನರನೊತ್ತಿ ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ, ಕವಿಗಳ್ ಕೃತಿಬಂಧದೊಳಲ್ತೆ ಕಟ್ಟದರ್
ಮುಟ್ಟದರೊತ್ತಿ ಮೆಟ್ಟದರದೇನಳವಗ್ಗಳವೋ ಕವೀಂದ್ರರಾ.

ಕೋತಿಗಳು ಸೇರಿಕೊಂಡು ಸಮುದ್ರಕ್ಕೆ ಸೇತುವೆಯನ್ನು ಕಟ್ಟದವೊ ಬಿಟ್ಟವೊ, ವಾಮನನ ಪಾದ ಮುಗಿಲನ್ನು ಮುಟ್ಟಿತೋ ಬಿಟ್ಟಿತೊ, ಹರನ ಗಂಟಲನ್ನು ಅರ್ಜುನನು ಮೆಟ್ಟಿದನೊ ಬಿಟ್ಟನೊ, ಕವಿಗಳಂತೂ ತಮ್ಮ ಕಾವ್ಯಪ್ರಬಂಧದಲ್ಲಿ ಈ ಕಾರ್ಯಗಳನ್ನು ನಡೆಸಿ, ಜನಗಳು ಅವನ್ನು ಸ್ವೀಕರಿಸು

ವಂತೆ ಮಾಡಿದರು. ಕವಿಗಳ ಹಿರಿತನ ಎಷ್ಟು ದೊಡ್ಡದೊ!' ಇನ್ನೂ ಕೇಳಿ, ಮಹಾಕವಿಯೊಬ್ಬನು ಉದಿಸುವುದು ಜಗತ್ತಿನ ಪುಣ್ಯದಿಂದಲಂತೆ!

ಬೆಲೆಯಿಂದಕ್ಕುಮೆ ಕೃತಿ ಗಾ
ವಿಲ ಭುವನದ ಭಾಗ್ಯದಿಂದ ಮಕ್ಕು ನೋಳ್ಪಂ
ಬೆಲೆಗೊಟ್ಟುತಾರ ಮಧುವಂ
ಮಲಯಾನಿಲನಂ ಮನೋಜನಂ ಕೌಮುದಿಯಂ

'ಕಾಸುಕೊಟ್ಟರೆ ಕಾವ್ಯ ಬರುತ್ತದೆಯೇನಯ್ಯ? ಅಯ್ಯಾ ದಡ್ಡ, ಜಗತ್ತಿನ ಪುಣ್ಯದಿಂದ ಕಾವ್ಯ ಉದಿಸುತ್ತದೆ. ಎಲ್ಲಿ ನೋಡೋಣ, ನೀನು ಹಣಕೊಟ್ಟು ಸ್ವಲ್ಪ ವಸಂತಮಾಸವನ್ನ, ಮಂದಮಾರುತವನ್ನ, ಮನ್ಮಥ ನನ್ನ, ಬೆಳುದಿಂಗಳನ್ನ ಕೊಂಡು ತರುತ್ತೀಯ?'— ಎಂದು ಕವಿ ಕೇಳು ತ್ತಾನೆ. ರಾಜಸಭೆಯಲ್ಲಿದ್ದ ನೇಮಿಯನ್ನು ಯಾವ ಅವಿವೇಕಿ ಕೆಣಕಿದ್ದನೋ ಏನೊ! ಮುಟ್ಟನೋಡಿಕೊಳ್ಳುವಂತೆ ಉತ್ತರಕೊಟ್ಟದ್ದಾನೆ.

ಕವಿಯ 'ಲೀಲಾವತಿ' ಒಂದು ಶೃಂಗಾರ ಕಾವ್ಯ. 'ಶೃಂಗಾರಮಂ ಕಾವ್ಯಬಂಧನದೊಳ್ ತಾಂ ಸೆಱೆಗೆಯ್ವ ವ್ಯೈಮೆ' ನೇಮಿಯದು. ಆದ್ದ ರಿಂದಲೇ ಆತನಿಗೆ 'ಶೃಂಗಾರಕಾರಾಗೃಹ' ಎಂಬ ಬಿರುದು. ನಿಜ, 'ಲೀಲಾವತಿ'ಯ ಕಥೆಯಲ್ಲಿ ಶೃಂಗಾರರಸ ಸೆರೆಸಿಕ್ಕಿ ಸಂಕಟಪಡುತ್ತಿದೆ. ಬನವಾಸಿಯ ಯುವರಾಜ ಕಂದರ್ಪದೇವನು ತನ್ನ ಕನಸಿನಲ್ಲಿ ಕಂಡ ದಿವ್ಯ ಸುಂದರಿಯನ್ನು ಅರಸುತ್ತಾ ತನ್ನ ಗೆಳೆಯನಾದ ಮಂತ್ರಿಕುಮಾರ ಮಕರಂದ ನೊಡನೆ ದೇಶಾಂತರಕ್ಕೆ ಹೊರಡುತ್ತಾನೆ. ಇವನು ಕನಸಿನಲ್ಲಿ ಕಂಡ ಹೆಣ್ಣೇ ಲೀಲಾವತಿ, ಕುಸುಮಪುರದ ದೊರೆ ಶೃಂಗಾರಶೇಖರನ ಮಗಳು. ಕಂದರ್ಪ ದೇವನಂತೆ ಲೀಲಾವತಿಯೂ ಕನಸುಕಂಡು, ಆ ಕನಸಿನ ಕಂದರ್ಪನನ್ನು ಅರಸುವುದಕ್ಕಾಗಿ ಆಳುಗಳನ್ನು ಅಟ್ಟುತ್ತಾಳೆ. ಹಲವಾರು ಅಡ್ಡಿ ಆತಂಕಗಳು ಕಷ್ಟ ಕಾರ್ಪಣ್ಯಗಳು ತಲೆದೋರಿ ಕಡೆಗೆ ನಾಯಕ ನಾಯಕಿಯರ ಸಮಾ ಗಮವಾಗುತ್ತದೆ. ಇಂತಹ ಕಥೆಯಲ್ಲಿ ಶೃಂಗಾರ ನಿರೂಪಣೆಗೆ ಅಭಾವವೇಕೆ? ಸಾಕಾದಷ್ಟು ದಡ ತುಂಬಿ ಹರಿಯುತ್ತಿದೆ. ಆದರೆ ಅನೇಕ ಕಡೆ ಪ್ರವಾಹ ಬಗ್ಗಡವಾಗಿದೆ. ಕವಿಯ ಭಾವಾವೇಶ ರಸಸ್ಥಾನವನ್ನು ಮುಟ್ಟುವುದು ಅಪ ರೂಪ. ಕವಿಯು ಈ ಕಥೆಯನ್ನು ಸುಬಂಧುವಿನ 'ವಾಸವದತ್ತೆ'ಯಿಂದ

ಎತ್ತಿಕೊಂಡಿರುವನೆಂದು ಪಂಡಿತರು ಹೇಳುತ್ತಾರೆ; ಅಲ್ಲಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿರುವನೆಂದೂ ಹೇಳುತ್ತಾರೆ. ಆ ವಿಷಯ ಹೇಗಾದರೂ ಇರಲಿ; ಕಥೆ ರುಚಿಕಟ್ಟಾಗಿದೆ. ಇದು ಕನ್ನಡದಲ್ಲಿ ದೊರೆವ ಮೊಟ್ಟಮೊದಲನೆಯ ಶೃಂಗಾರಕಥೆ. ಇದನ್ನು ಬರೆದ ನೇಮಿ 'ಚತುರ್ಭಾಷಾ ಚಕ್ರವರ್ತಿ', ಅಪಾರವಾದ ಪಾಂಡಿತ್ಯವುಳ್ಳವನು. ಈ ಪಾಂಡಿತ್ಯದ ಫಲವಾದ ಶಬ್ದ ಭಂಡಾರ, ಮಾತಿನ ಧೋರಣೆ, ವರ್ಣನಾ ವೈಖರಿ, ಚಮತ್ಕಾರಗಳು ಕಥೆಯ ಓಟವನ್ನು ಸ್ವಲ್ಪ ಕುಂಠಿತಗೊಳಿಸುತ್ತವೆ. ಆದರೂ ಕವಿಪ್ರತಿಭೆ ಅಲ್ಲಲ್ಲಿ ಮನೋಹರವಾಗಿ ಮಿಂಚುತ್ತದೆ. ಕಂದರ್ಪದೇವನು ಗೆಳೆಯನಿಂದ ಅಗಲಿ, ಎಲ್ಲೆಲ್ಲೊ ಅಲೆದು, ಕೊನೆಗೊಂದು ಮರದ ಕೆಳಗೆ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾನೆ. ಆ ಮರದ ಮೇಲಿದ್ದ ಸಾರಿಕೆಯೊಂದು ತನ್ನ ವಲ್ಲಭನು ಹೊತ್ತಿಗೆ ಸರಿಯಾಗಿ ಹಿಂದಿರುಗಿ ಬರದಿರಲು ಚಡಪಡಿಸುತ್ತಿದೆ—

ಗೂಡಿನ ಸುತ್ತಲುಂ ಸುಳಿಗುಮಾಲಿಸುಗುಂ ಸಲೆ ಬರ್ಪ ಬಟ್ಟೆಯಂ
ನೋಡುಗುಮಳ್ಗುಮೇಳ್ಗುಮೊಳಗಂ ಪುಗುಗುಂ ತಳಿರೊಳ್ ಪೊರಳ್ಗುಮಿ
ರ್ಪೋಡಿರೆ ಬಿಟ್ಟ ಚಂಚು ಬಿಸುಸುಯ್ದೆಳಮಾವಿನ ಪಲ್ಲವಂಗಳಂ
ಬಾಡಿಸುಗುಂ ಮನಂ ಮಱುಗಿ ಸಾರಿಕೆ ಬಾರದೊಡಾತ್ಮವಲ್ಲಭಂ

ತನ್ನ ಗಂಡನನ್ನು ನಿರೀಕ್ಷಿಸುತ್ತಾ ಆ ಸಾರಿಗೆ ಗೂಡಿನ ಸುತ್ತಲೂ ಸುಳಿದಾಡುತ್ತದೆ, ಬರುವ ಸದ್ದು ಕೇಳುವುದೇನೋ ಎಂದು ಕಿವಿಗೊಟ್ಟು ಆಲಿಸುತ್ತದೆ, ಅದು ಬರುವ ಹಾದಿಯನ್ನು ಕಣ್ಣಿಟ್ಟು ನೋಡುತ್ತದೆ, ಅಳುತ್ತದೆ, ಮತ್ತೆ ಮೇಲೆದ್ದು ಗೂಡಿನ ಒಳಗೆ ಹೋಗತ್ತದೆ, ಚಿಗುರಿನಲ್ಲಿ ಹೊರಳಾಡುತ್ತದೆ, ಬಾಯೊಣಗಿ ಕೊಕ್ಕಿನಿಂದ ಬಿಡುತ್ತಿರುವ ಬಿಸಿಯುಸಿರು ಹಾಸಿಕೊಂಡಿರುವ ಮಾವಿನ ಚಿಗುರನ್ನು ಬಾಡಿಸುತ್ತಿದೆ. ಇದು ಆತ್ಮವಲ್ಲಭನ ಅಗಲಿಕೆಯಿಂದ ವಿರಹವೇದನೆಯನ್ನು ಅನುಭವಿಸುತ್ತಿರುವ ಸಾರಿಕೆಯ ಚಿತ್ರ. ಗಂಡು ಹಿಂದಿರುಗಿದಾಗ ಈ ಹೆಣ್ಣು ಮಾಡುವ ಪ್ರಣಯ ಕಲಹವೂ, ಅದನ್ನು ಸಮಾಧಾನಪಡಿಸುವ ವ್ಯಾಜದಲ್ಲಿ ಕಂದರ್ಪದೇವನಿಗೆ ಲೀಲಾವತಿಯ ವೃತ್ತಾಂತ ತಿಳಿದುಬರುವುದೂ ಚಮತ್ಕಾರವಾಗಿರುವಷ್ಟೇ ರಸವತ್ತಾಗಿಯೂ ಇದೆ. ಈ ಕಾವ್ಯವು ಬಹುಕಾಲದವರೆಗೆ ಅತ್ಯಂತ ಜನಪ್ರಿಯವಾಗಿದ್ದಿರಬೇಕು. ಆದ್ದರಿಂದಲೇ, ಕಾದಂಬರೀ ಕಾವ್ಯವನ್ನು ಸುಡಿಸಿ ಈ

ಲೀಲಾವತಿಗೆ ಆದರ ಬೊಟ್ಟನ್ನು ಇಡಿಸಿದರೆಂಬ ಒಂದು ದಂತಕಥೆ ಬಹುಕಾಲ ಚಲಾವಣೆಯಲ್ಲಿ ಇದ್ದಿರಬೇಕು.' ಬಾಹುಬಲಿ (ಕ್ರಿ.ಶ.ಸು. ೧೫೦೦) ಎಂಬ. ಕವಿ ತನ್ನ 'ನಾಗಕುಮಾರ ಚರಿತೆ'ಯಲ್ಲಿಯೂ, ದೊಡ್ಡಯ್ಯ (ಕ್ರಿ. ಶ. ೧೫೫೦) ತನ್ನ 'ಚಂದ್ರಪ್ರಭಚರಿತ'ದಲ್ಲಿಯೂ, ದೇವಚಂದ್ರನು (ಕ್ರಿ. ಶ. ೧೮೩೮) ತನ್ನ 'ರಾಜಾವಳೀ ಕಥೆ' ಯಲ್ಲಿಯೂ ಇದನ್ನು ಪ್ರಸ್ತಾಪಿಸಿದ್ದಾರೆ. 'ಲೀಲಾವತೀ' ಕಾವ್ಯದ ಹಿರಿಮೆಯನ್ನು ಎತ್ತಿ ಹಿಡಿಯುವ ಕಥೆಯಷ್ಟೆ ಇದು. ಕವಿಯು ಈ ಕಾವ್ಯವನ್ನು 'ಒಂದೆ ಗಡ ಬರಿಸಕ್ಕೆ ಬರೆದಂ' ಒಂದೇ ವರ್ಷದಲ್ಲಿಯೇ ಬರೆದುಬಿಟ್ಟಿದ್ದೇನೆ—ಆದ್ದರಿಂದ 'ಏಂ ನಿಶಿತ ಮತಿಯೊ ಕೃತಿಕುಲದೀಪಂ'—ಕೃತಿಕುಲದೀಪನಾದ ತಾನು ಇನ್ನು ಎಂತಹ ನಿಶಿತಮತಿಯೋ—ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಕವಿಯ ಮತಿಯೇನೋ ಬಹು ನಿಶಿತವೇ, ಪ್ರತಿಭೆ ಎರಡನೆ ಮೆಟ್ಟಲಿನ ಮೇಲಿದೆ.

ನೇಮೀಚಂದ್ರನ 'ನೇಮಿನಾಥಪುರಾಣ' ಕಾವ್ಯಧರ್ಮ ಧರ್ಮಗಳೆರಡನ್ನೂ ಒಳಗೊಂಡಿರುವ ಶ್ರೇಷ್ಠವಾದ ಕಾವ್ಯ. ಇಪ್ಪತ್ತೆರಡನೆಯ ತೀರ್ಥಂಕರ ನೇಮಿನಾಥನ ಕಥೆಯನ್ನು ಒಳಗೊಂಡಿರುವ ಈ ಕಾವ್ಯದಲ್ಲಿ 'ಸಂಧಿಸಿ ವಸುದೇವಾಚ್ಯುತ । ಕಂದರ್ಪರ ಕಥೆಗಳನಿತುಮಂ ವಿರಚಿಸುವೆಂ'—ವಸುದೇವ, ಅಚ್ಯುತ, ಕಂದರ್ಪರ ಕಥೆಗಳನ್ನು ಸೇರಿಸಿ ಬರೆಯುವುದಾಗಿ ಹೇಳಿ ಹೊರಟವನು ಕಂಸವಧೆಯನ್ನು ಹೇಳಿ ನಿಲ್ಲಿಸಿದ್ದಾನೆ. ಬಹುಶಃ ಗ್ರಂಥವು ಪೂರ್ತಿಯಾಗುವ ಮುನ್ನವೇ ಕವಿಯು ಗತಿಸಿಹೋದನೋ ಏನೋ! ಹೀಗೆ ಕಾವ್ಯ ಅರ್ಧದಲ್ಲಿ ನಿಂತಿರುವುದರಿಂದಲೇ ಈ ಕಾವ್ಯಕ್ಕೆ 'ಅರ್ಧನೇಮಿ' ಎಂಬ ಅನ್ವರ್ಥನಾಮ ಬಂತೆಂದು ತೋರುತ್ತದೆ. ಕವಿಯು ತನ್ನ ಈ ಧಾರ್ಮಿಕ ಕಾವ್ಯದ ಹಿರಿಮೆಯನ್ನು ಹೊಗಳುತ್ತಾ—

ರಸಮೋ ರಸಾಯನಮೋ ಕೃತಿ
ವಸಂತಮೋ ಕಿವಿಗಳಮೃತಮೋ ನೇಮಿಯ ವಾ
ಕ್ಪ್ರಸರಮುದಱಿಸಕದಿಂ ನಿ
ಪ್ಪೊಸತಾದುದು ಜಗಕೆ ನೇಮಿನಾಥ ಪುರಾಣಂ

ನೇಮಿಚಂದ್ರನ ಮಾತುಗಳು ರಸವೋ, ರಸಾಯನವೊ, ಕಾವ್ಯರೂಪದ ವಸಂತಮಾಸವೊ, ಕಿವಿಗಳ ಅಮೃತವೋ ಎನ್ನುವಷ್ಟು ಮನೋಹರ. ಇದರ

ಪ್ರಭಾವದಿಂದ ಆತನ ನೇಮಿನಾಥಪುರಾಣವು ಜಗತ್ತಿಗೆ ಹೊಚ್ಚ ಹೊಸ ದೆಂಬಂತೆ ಕಾಣಿಸಿತು. ನಿಜ, ಕವಿಯು ಶ್ರೀಕೃಷ್ಣನ ಕಥಾಪ್ರಸಂಗದಲ್ಲಿ ಕಾವ್ಯರಸಾಯನವನ್ನೇ ನೀಡಿದ್ದಾನೆ. ಅದರಲ್ಲಿಯೂ ವಾಮನನು ತ್ರಿವಿಕ್ರಮ ನಾಗಿ ಬಲಿಯನ್ನು ಪಾತಾಳಕ್ಕೆ ತುಳಿಯುವ ಸನ್ನಿವೇಶ ಭವ್ಯವಾಗಿದೆ; ಕವಿಗೆ ಕೀರ್ತಿಯನ್ನು ತಂದಿದೆ. ವಾಮನನು ತ್ರಿವಿಕ್ರಮನಾಗಿ ಬೆಳೆಯು ತ್ತಿರುವ ಚಿತ್ರವಿದು—

ಅದೆ ಪೊಸ ಪೊನ್ನ ಸತ್ತಿಗೆಯದಲ್ಲದು ರತ್ನ ಹಟತ್ಕಿರೀಟಮ
ಲ್ಲದು ವರವಜ್ರಕುಂಡಲಮದಲ್ಲದು ಕೌಸ್ತುಭರತ್ನಮಂತದ
ಲ್ಲದು ಕರಚಕ್ರಮಲ್ಲದದು ನಾಭಿಸರೋಜಮೆನಲ್ ದಿನೇಶ ಬಿಂ
ಬದ ನೆಲೆ ತಳ್ಗಿ ತರ್ಪಿನಮನುಕ್ರಮದಿಂ ಬೆಳೆದಂ ತ್ರಿವಿಕ್ರಮಂ

ಅಗೋ ಸೂರ್ಯಬಿಂಬ ಆತನ ತಲೆಯಮೇಲಿನ ಬಂಗಾರದ ಛತ್ರಿ; (ಎಂದು ಹೇಳುವಷ್ಟರಲ್ಲಿ ಅಲ್ಲಿ ಕಿರೀಟ ಕಾಣಿಸುತ್ತಿದೆ) ಅಲ್ಲ, ಅದು ರತ್ನಖಚಿತ ಕಿರೀಟ (ಅಷ್ಟರಲ್ಲಿ ಛತ್ರಿಯಿದ್ದ ಎತ್ತರಕ್ಕೆ ಕರ್ಣಕುಂಡಲ ಬಂದಿವೆ); ಅಲ್ಲ, ಅದು ಕರ್ಣಕುಂಡಲ; ಅದು ಕೌಸ್ತುಭ ಚಕ್ರ; ಅಲ್ಲ, ಅದು ಆತನ ಕೈಲಿರುವ ಚಕ್ರ; ಅಲ್ಲ, ಅದು ಆತನ ನಾಭೀಕಮಲ; ಎಂದು ಹೇಳುವಂತೆ ಆತನು ಸೂರ್ಯ ಬಿಂಬವನ್ನು ಕೆಳಕೆಳಗೆ ಮಾಡಿಕೊಂಡು ಮೇಲಕ್ಕೆ ಬೆಳೆದು ಹೋದ. ಆತನು ಪಾದವನ್ನು ಮೇಲಕ್ಕೆತ್ತಿದ ಚಿತ್ರವೂ ಹಾಗೆಯೇ ಭವ್ಯ ವಾಗಿದೆ—

ಮರನಂ ಮುಟ್ಟಿದಸಿಲ್ಲ, ಮೇಘಘಟೆಯೊಳ್ ಕಾಲ್ಗೋದನಿಲ್ಲಿಲ್ಲ, ಭೂ
ಧರಮಂ ದಾಂಟಿದಸಿಲ್ಲ, ಬಾಂದೊಱೆಯೊಳಿಟ್ಟಂ ಕಾಲಸಿಲ್ಲಿಲ್ಲ, ಭಾ
ಸ್ಕರನಂ ಮಾಯದ ಮಾಣಿ ಸೆಂಡೊದೆದ ಸಿಲ್ಲಿಲ್ಲೆಂಬಿನಂ ನೀಡಿದಂ
ತರದಿಂ ಪಾದಮನುರ್ಪಿ ಕೊರ್ವಿ ಬಲಿಯಂ ಗೆಲ್ವಾಮನಂ ವಾಮನಂ

ತ್ರಿವಿಕ್ರಮನ ಪಾದ ಮರದ ನೆತ್ತಿಯೆತ್ತರಕ್ಕೆ ಹೋಯಿತೆನ್ನುವಷ್ಟರಲ್ಲಿ ಮುಗಿಲು ಮುಟ್ಟಿ, ಮುಗಿಲು ಮುಟ್ಟಿತೆಂಬಷ್ಟರಲ್ಲಿ ಬೆಟ್ಟಕ್ಕೂ ಮೇಲಕ್ಕೆ ಹೋಗಿ, ನೋಡುತ್ತಿರವಂತೆಯೇ ಆಕಾಶಗಂಗೆಯಲ್ಲಿ ಕಾಲಿಟ್ಟು, ಅಲ್ಲಿಂದಲೂ ಮೇಲಕ್ಕೆ ಹೋಗಿ, ಈ ಮಾಯದ ಮಾಣಿಯ ಪಾದ ಸೂರ್ಯನನ್ನು ಚೆಂಡಿ ನಂತೆ ಹೊಡೆದು ಇನ್ನೂ ಮೇಲಕ್ಕೆ ಹೋಯಿತು. ಅದ್ಭುತ ರಮ್ಯವಾಗಿರುವ

ಈ ಭವ್ಯಚಿತ್ರ ಕವಿಯ ಕಲ್ಪನಾಸಾಮರ್ಥ್ಯಕ್ಕೂ ಅಲೌಕಿಕದೃಷ್ಟಿಗೂ ಹಿಡಿದ ಸೊಡರಿನಂತಿದೆ. ಶ್ರೀಕೃಷ್ಣನ ಗೋವರ್ಧನೋದ್ಧರಣ ಚಿತ್ರವೂ ಚಾಣೂರನೊಡನೆ ಮಾಡುವ ಮಲ್ಲಯುದ್ಧವೂ ಹೃದ್ಯವಾಗಿವೆ. ಕವಿಯು 'ಲೀಲಾವತಿ' ಯನ್ನು ಬರೆದ ಕಾಲದಿಂದ 'ನೇಮಿನಾಥ ಪುರಾಣ'ವನ್ನು ಬರೆದ ಕಾಲಕ್ಕೆ ಮುಟ್ಟುವಷ್ಟರಲ್ಲಿ ಆತನ ಕೈ ಪಳಗಿದೆ; ಕಾವ್ಯಪಕ್ಷಿಯ ಪ್ರತಿಭೆ ಕಲ್ಪನೆಗಳ ರೆಕ್ಕೆ ಬಲಿತಿವೆ; ದೃಷ್ಟಿ ಉದಾತ್ತವಾಗಿದೆ.

**ರುದ್ರ ಭಟ್ಟ**

ವೈದಿಕ ಪುರಾಣವೊಂದನ್ನು ಕನ್ನಡ ಕಾವ್ಯರೂಪವಾಗಿ ಕೊಟ್ಟವರಲ್ಲಿ ರುದ್ರಭಟ್ಟ ಮೊತ್ತಮೊಲಿಗ. ಈತನ 'ಜಗನ್ನಾಥ ವಿಜಯ'ವು ವಿಷ್ಣು ಪುರಾಣದ ಐದು ಮತ್ತು ಆರನೆಯ ಅಂಶಗಳಲ್ಲಿ ಕಾಣಬರುವ ಶ್ರೀಕೃಷ್ಣ ಚರಿತೆಯನ್ನು ಒಳಗೊಂಡಿದೆ. ಈತನು 'ರಸಕಲಿಕೆ' ಎಂಬ ಒಂದು ಲಕ್ಷಣ ಗ್ರಂಥವನ್ನೂ ಬರೆದಿರುವುದಾಗಿ ಸಾಳ್ವನು ತನ್ನ 'ರಸರತ್ನಾಕರ'ದಲ್ಲಿ ಹೇಳಿದ್ದಾನೆ. ಆದರೆ ಈವರೆಗೆ ಆ ಗ್ರಂಥ ಉಪಲಬ್ಧವಾಗಿಲ್ಲ.

ರುದ್ರಭಟ್ಟನು ಷಡಕ್ಷರಿ ಕವಿಯ ಮೇಲಿನ ಸ್ಪರ್ಧೆಯಿಂದ ತನ್ನ ಕಾವ್ಯವನ್ನು ಬರೆದು, ಪರಿಭವಕ್ಕೆ ಗುರಿಯಾಗಿ, ತನ್ನ ಬಿರುದುಗಳನ್ನೆಲ್ಲಾ ತನ್ನ ಸ್ಪರ್ಧಿಗೆ ಒಪ್ಪಿಸಿದಂತೆಯೂ, ಇದನ್ನು ಕಂಡು ಲಕ್ಷ್ಮೀಶನು ಬ್ರಾಹ್ಮಣ ಕವಿಗಾದ ಅಪಮಾನವನ್ನು ಹೋಗಲಾಡಿಸಬೇಕೆಂದು ತನ್ನ ಜೈಮಿನಿ ಭಾರತವನ್ನು ಬರೆದು, ಕೃತಕೃತ್ಯನಾದಂತೆಯೂ ಒಂದು ಕಥೆ ಪ್ರಚಲಿತವಾಗಿದ್ದಂತೆ ಕಾಣಬರುತ್ತದೆ.[1] ಇದೊಂದು ಅರ್ಥಹೀನವಾದ ಪೊಳ್ಳುಕಥೆ. ರುದ್ರಭಟ್ಟನ ಕಾಲ ಹನ್ನೆರಡನೆಯ ಶತಮಾನದ ಕೊನೆ; ಷಡಕ್ಷರಿ ಹದಿನೇಳನೆಯ ಶತಮಾನದವನು, ಲಕ್ಷ್ಮೀಶ ಬಹುಶಃ ಷಡಕ್ಷರಿಯಿಂದ ಐವತ್ತು ವರ್ಷಗಳು ಈಚಿನವನು. ಈ ಮೂವರಲ್ಲಿ ಸ್ಪರ್ಧೆಯನ್ನು ಏರ್ಪಡಿಸಿರುವವರ ರುಚಿಶುದ್ಧಿ ಸ್ತೋತ್ರಾರ್ಹವಾದುದೇನೂ ಅಲ್ಲ. ಇಂತಹ ಕಥೆಗಳು ರಕ್ತಬೀಜಾಸುರನ ವಂಶಕ್ಕೆ ಸೇರಿದುವು; ಕೊಲ್ಲಲು ಹೊರಟರೆ ಬೆಳವಣಿಗೆ ಹೆಚ್ಚು. ಸಂಪೂರ್ಣ ಉದಾಸೀನವೇ ಇವುಗಳ ಸಾವಿಗೆ ಮದ್ದು.

---

1 ಇ. ಪಿ. ರೈಸ್: ಭಾಷಾಭೂಷಣದ ಪೀಠಿಕೆ. ಪು. 32.

ರುದ್ರಭಟ್ಟನು ನೇಮಿಚಂದ್ರನ ಸಮಕಾಲೀನ. ಇಬ್ಬರೂ ವೀರ ಬಲ್ಲಾಳನ ಕಾಲದವರೇ. ನೇಮಿಚಂದ್ರನು ವೀರಬಲ್ಲಾಳನ ಮಂತ್ರಿ ಪದ್ಮನಾಭನನ್ನು ಆಶ್ರಯಿಸಿದ್ದರೆ, ಆ ದೊರೆಯ ಮತ್ತೊಬ್ಬ ಮಂತ್ರಿ ಚಂದ್ರಮೌಳಿಯು ರುದ್ರಭಟ್ಟನ ಆಶ್ರಯದಾತ. ಆತ ತನ್ನ ಸ್ವಾಮಿಯ ಸಂತೋಷಕ್ಕಾಗಿ 'ನೇಮಿನಾಥ ಪುರಾಣ' ಬರೆದ; ಈತ ತನ್ನ 'ಜಗನ್ನಾಥ ವಿಜಯ'ದಿಂದ ತನ್ನ ಪೋಷಕನನ್ನು ಸಂತೋಷ ಪಡಿಸಿದ. ಅವರಿರ್ವರೂ ತಮ್ಮ ಮತ ವ್ಯತ್ಯಾಸವನ್ನು ಮರೆತು, ಸಾಹಿತ್ಯ ಜಗತ್ತಿನ ಚಕ್ರವಕ್ಕಿಗಳಂತೆ ಬಾಳಿದ್ದಿರಬಹುದೆಂದು ಚಿತ್ರಿಸಿಕೊಳ್ಳುವುದು ಎಷ್ಟು ಸುಂದರ! ನೇಮಿಚಂದ್ರ ತನ್ನ ಪುರಾಣದಲ್ಲಿ ಕೃಷ್ಣನ ಕಥೆಯನ್ನು ಹೇಳುತ್ತಿದ್ದ; ರುದ್ರಭಟ್ಟನ ಇಡೀ ಕಾವ್ಯವೇ ಕೃಷ್ಣನ ಕಥೆ. ಇಬ್ಬರ ದೃಷ್ಟಿಯೂ ಬೇರೆಬೇರೆಯಾದರೂ ತಮ್ಮ ಕಾವ್ಯಭಾಗಗಳನ್ನು ಪರಸ್ಪರ ಓದಿ, ಮೆಚ್ಚಿ, ಸಂತೋಷಗೊಂಡು, ಸಂತೋಷಪಡಿಸುತ್ತಿದ್ದರೆಂದು ಊಹಿಸಿಕೊಂಡರೆ ಮನಸ್ಸು ನಲಿಯುತ್ತದೆ. ರುದ್ರಭಟ್ಟನಲ್ಲಿ ಸಾಕಷ್ಟು ಔದಾರ್ಯವನ್ನು ನಾವು ಕಾಣುತ್ತೇವೆ. ಆತನು ಬ್ರಾಹ್ಮಣನಾದರೂ ಶಂಖವರ್ಮ, ಶಾಂತಿವರ್ಮ, ಗುಣವರ್ಮ, ಕಣ್ಣಪ, ಪಂಪ, ಚಂದ್ರಭಟ್ಟ, ಪೊನ್ನಪ, ಗಜಾಂಕುಶ (ಇವರಲ್ಲಿ ಕೆಲವರ ಮತ ಗೊತ್ತಿಲ್ಲ) ಮೊದಲಾದ ಜೈನಕವಿಗಳನ್ನೂ ಸ್ಮರಿಸಿ, ಅವರ ವಿಶಿಷ್ಟ ಕಾವ್ಯಗುಣ ತನ್ನ ಗ್ರಂಥದಲ್ಲಿರಲೆಂದು ಆಶಿಸಿದ್ದಾನೆ. (ರುದ್ರಭಟ್ಟ ಹರಿಹರ ರಾಘವಾಂಕರ ಸಮಕಾಲೀನನೋ, ಅವರಿಗಿಂತಲೂ ಸ್ವಲ್ಪ ಹಿಂಚಿನವನೋ ಆಗಿರಬೇಕೆಂಬುದನ್ನು ಇಲ್ಲಿ ಗಮನಿಸಬೇಕು.)

ರುದ್ರಭಟ್ಟನಿಗೆ ಕವಿರಾಜ, ಕೃತಿಶಾರದಾಭ್ರಚಂದ್ರಾತಪ–ಎಂಬ ಬಿರುದುಗಳಿದ್ದುವೆಂದು ಕವಿಯು ಹೇಳಿಕೊಂಡಿದ್ದಾನೆ. ತನ್ನ ಕಾವ್ಯವು

> ಇನಿಯಳ ಸೋಂಕಿನಂತೆ, ಪೊಸ ಮಾವಿನ ಪೂವಿನ ಜೊಂಪದಂತೆ, ಚಂ
> ದನರಸದಣ್ಪಿನಂತೆ, ನನೆಯೇರಿದ ಮಲ್ಲಿಗೆಯಂತೆ, ಪೂರ್ಣ ಚಂ
> ದ್ರನ ಸಿರಿಯಂತೆ, ಬಂದೆಸಪ ತೆಂಕಣ ತಂಬೆಲರಂತೆ, ರುದ್ರ ಭ
> ಟ್ಟನ ಕವಿತಾರಸಂ ಮನಮನಿರ್ಕುಳಿಗೊಳ್ವುದು ಸಜ್ಜನರ್ಕಳಾ.

ಸುಂದರಿಯ ಸೋಂಕಿನಂತೆ, ಹೊಸ ಮಾವಿನ ಹೂ ಗೊಂಚಲಂತೆ, ಶ್ರೀಗಂಧದ ರಸದಂತೆ, ಮಗ್ಗು ಸುರಿದ ಮಲ್ಲಿಗೆಯಂತೆ, ಪೂರ್ಣ ಚಂದ್ರನ

ಕಾಂತಿಯಂತೆ, ಸುಖವಾಗಿ ಬೀಸುವ ಮಂದಮಾರುತನಂತೆ ರುದ್ರಭಟ್ಟನ ಕವಿತಾ ರಸವು ಸಜ್ಜನರ ಮನಸ್ಸನ್ನು ಸಂತೋಷಗೊಳಿಸುತ್ತದೆ. ಕವಿಯ ಮಾತು ಅಖಂಡ ಸತ್ಯವಲ್ಲ; ಅರ್ಧ ಸತ್ಯ. ಕವಿಯ ಕಾವ್ಯದಲ್ಲಿ ಆನಂದಕ್ಕೆ ವಸ್ತುವಿದೆ, ಅದನ್ನು ಕಷ್ಟಪಟ್ಟು ಪಡೆಯಬೇಕು. ರುದ್ರಭಟ್ಟನದು ದ್ರಾಕ್ಷಾಪಾಕವಲ್ಲ, ನಾರಿಕೇಳಪಾಕ. ಆತನ ಸಂಸ್ಕೃತಪಾಂಡಿತ್ಯದ ಸಿಪ್ಪೆ ಚಿಪ್ಪುಗಳನ್ನು ಭೇದಿಸಿದ ಮೇಲೆ ತಿರುಳು ಸಿಕ್ಕಬೇಕು. ಸಂಸ್ಕೃತ ಭೂಯಿಷ್ಠಮಯವಾದ, ಆತನ ಕಾವ್ಯದ ಮೊದಲ ಐದು ಪದ್ಯಗಳನ್ನು 'ಪಂಚ ಪಾಷಾಣ'ಗಳೆಂದು ಕರೆದು, ಅವುಗಳಿಗೆ ಸಂಸ್ಕೃತದಲ್ಲಿ ವ್ಯಾಖ್ಯಾನವನ್ನು ಬರೆದಿದ್ದಾರೆ. ಇದನ್ನು ನೋಡಿದರೆ ಕವಿಯ ಪ್ರಚಂಡ ಪಾಂಡಿತ್ಯ ಅರ್ಥವಾಗುತ್ತದೆ.

'ಜಗನ್ನಾಥ ವಿಜಯ'ದ ಕಥೆ ಶ್ರೀಕೃಷ್ಣ ಜನನದಿಂದ ಬಾಣಾಸುರ ವಧೆಯವರೆಗೆ, ಗ್ರಂಥಾಂತ್ಯದಲ್ಲಿ ಕೊಟ್ಟಿರುವ 'ಏಕೋತ್ತರಶತಕೃತ್ಯ'ಗಳ ಹಂದರದಮೇಲೆ ಹಬ್ಬಿ ಹರಡಿದೆ. ಇದರ ಮೂಲ ವಿಷ್ಣುಪುರಾಣವಾದರೂ ಕವಿಯು ಬರಿಯ ಭಾಷಾಂತರಕಾರನೇನೂ ಅಲ್ಲ. ಕಥೆಯ ವಿವರಗಳಲ್ಲಿ ವರ್ಣನೆಗಳಲ್ಲಿ ಕವಿಯ ವ್ಯಕ್ತಿತ್ವ ಒಡಮೂಡಿದೆ. ಕವಿಯು ಹೆಜ್ಜೆ ಹೆಜ್ಜೆಗೂ ತಾನು ಕೃಷ್ಣಭಕ್ತನೆಂಬುದನ್ನು ಸ್ಪಷ್ಟವಾಗಿ ಪ್ರದರ್ಶಿಸುತ್ತಾನೆ. ಒಮ್ಮೊಮ್ಮೆ ಆತನ ಈ ಭಕ್ತಿ ರಸಾವೇಶವನ್ನು ಪಡೆಯುವುದೂ ಉಂಟು. ಗೋಪಿಯರು ಶ್ರೀಕೃಷ್ಣನ ಕೊಳಲಗಾನಕ್ಕೆ ಮನಸೋತು ಓಡಿಬರುವ ಪ್ರಸಂಗ ರಮ್ಯವಾಗಿದೆ 'ನಾರಿ ಕೇಳರಸಧಾರಾವೃಷ್ಟಿ, ಜೇನೆಯ್ಯ ಸೋನೆ, ಸುಧಾಸಾರ ವಿದೆತ್ತಣಿಂ ಪಸರಿಸಿತ್ತೆಂಬಂತು'—ಎಳೆನೀರಿನ ಧಾರಾಕಾರವಾದ ಮಳೆ, ಜೇನಿನ ಜಡಿಮಳೆ, ಅಮೃತದ ಮಳೆ ಹರಡಿತ್ತು ಎಂಬಂತೆ—ಶ್ರೀಕೃಷ್ಣ ಕೊಳಲು ಬಾರಿಸಿದ. ಅದನ್ನು ಕೇಳಿ ದೇವೇಂದ್ರ–ಶ್ರೀಕೃಷ್ಣನ ಮೂರ್ತಿಯನ್ನು ನೋಡುತ್ತಿರುವುದರಿಂದ ನನಗೆ ಸಾವಿರ ಕಣ್ಣುಗಳಿರುವುದೇನೋ ಸಾರ್ಥಕವಾಯಿತು. ಆದರೆ 'ವೇಣುನಾದವನೆಸೆದಾಲಿಸಲ್ ಕಿವಿಗಳೇಕೆಯೊ ಸಾಸಿರವಾದುವಿಲ್ಲ' ಎಂದು ಮಿಡುಕಿಕೊಂಡನಂತೆ! ವೇಣುಗಾನವನ್ನು ಕೇಳಿದ ಗೋಪಿಯರು ಕೃಷ್ಣನ ಸುತ್ತಲೂ ರಾಸಮಂಡಲವನ್ನು ನಿರ್ಮಿಸಿಕೊಂಡರಂತೆ. ಅವರ ಮಧ್ಯದಲ್ಲಿದ್ದ ಕೃಷ್ಣ 'ಪರಿವೇಷಂ

ಗೊಂಡ ಚಂದ್ರನಂತೆಸೆದಿರ್ದರ್.' ಗೋಪಿಯರು 'ಚೈತ್ರಾನಿಳಂ ಸೋಕೆ ಸೆ ವನಲತೆಗಳ್ ನರ್ತಿಪೊಂದಂದದಿಂದಂ'—ಚೈತ್ರಮಾಸದ ಮಂದಾನಿಲನು ಚಲಿಸಲಾಗಿ ವನಲತೆಗಳು ನರ್ತಿಸುವಂತೆ—ನರ್ತಿಸಿದರು.

ನಗೆ ಮೊಗದಿಂ ಮುಗುಳ್ನಗೆ ತುಳುಂಕೆ, ಬಳಲ್ಮುಡಿಯಿಂದರಲ್ಗಳ
ಲ್ಲುಗೆ, ನಿಡುಗಣ್ಗಳಿಂ ಪೊಳಪು ಸಾಲಿಡೆ, ನೀಳ ಚಳಾಳಕಾಳಿಯಿಂ
ಮೃಗಮದರೇಣು ಸೂಸೆ, ಲತೆ ತಂಬೆಲರ್ಗೊಯ್ಯನೆ ನರ್ತಿಪಂದದಿಂ
ಸೊಗಯಿಸೆ, ಗೋಪಿ, ಢಕ್ಕೆಯ ಲಯಕ್ಕೆ ಪೆಱಳ್ ಜತಿ ಮೆಟ್ಟುತಾಡಿದಳ್

ನಗುಮುಖದಿಂದ ಮುಗುಳ್ನಗೆ ತುಳುಕುತ್ತಿದೆ ; ಸಡಿಲವಾದ ಹೆರಳಿನಿಂದ ಹೂಗಳು ಅಲ್ಲಾಡುತ್ತಿವೆ ; ವಿಸ್ತಾರವಾದ ಕಣ್ಣುಗಳಿಂದ ಕಾಂತಿ ಸಾಲಿಡುತ್ತಿದೆ ; ಕಪ್ಪಗೆ ಚಂಚಲವಾಗಿರುವ ಮುಂಗುರುಳಿನಿಂದ ಕಸ್ತೂರಿ ಚೆಲ್ಲುತ್ತಿದೆ. ಇಂತಹ ಸುಂದರಿ ಗೋಪಿ ಸುಳಿಗಾಳಿಗೆ ನರ್ತಿಸುವ ಬಳ್ಳಿಯಂತೆ ಢಕ್ಕೆಯ ಲಯಕ್ಕೆ ಸರಿಯಾಗಿ ನರ್ತಿಸುತ್ತಿರಲು ಮತ್ತೊಬ್ಬ ಗೋಪಿ ಯತಿಗೆ ತಕ್ಕಂತೆ ಹೆಜ್ಜೆಯನ್ನು ಹಾಕುತ್ತಾ ನರ್ತಿಸಿದಳು. 'ಸುರತ ಪ್ರವೀಣೆಯೊಬ್ಬಳು ವೀಣೆಯನ್ನು ಬಾರಿಸಿದಳು. ಸುಲಲಿತೆಯೊಬ್ಬಳು 'ಸೆಂಡನಾಡಿ ಮುಳುಗಾಡಿಸಿದಳ್ ಹರಿಯುಂ ಸುಖಾಬ್ಧಿಯೊಳ್'. ಅಷ್ಟರಲ್ಲಿ ಶ್ರೀ ಕೃಷ್ಣ ಅನ್ಯಪ್ರದೇಶಕ್ಕೆ ಹೋದನಂತೆ. ಆಗ ಗೋಪಿಯೊಬ್ಬಳು ತಾನೇ ಶ್ರೀ ಕೃಷ್ಣನೆಂದು ಆತನ ನಡಗೆಯನ್ನು ಅನುಸರಿಸುವಳು ; 'ಮತ್ತಿಯ ಮರವನ್ನು ಮುರಿದ ದಾಮೋದರನು ನಾನೇ' ಎಂದು ಮತ್ತೊಬ್ಬಳು ಗಿಡವವೊಂದನ್ನು ಸೊಂಟದ ಪಟ್ಟಿಗೆ ಸಿಕ್ಕಿಸಿಕೊಂಡು ಮುಗ್ಧಸ್ಮಿತವನ್ನು ಬೀರಿದಳು; ಕಾಳೀಯ ಮಡುವನ್ನು ಧುಮುಕುವೆನೆಂದು ಮಗುದೊಬ್ಬಳು ತನ್ನ ತೋಳುಗಳೆರಡನ್ನೂ ಆಸ್ಫೋಟಿಸಿ, ಕೆನ್ನೈದಿಲೆಯ ತೊಟ್ಟನ್ನು ಹಿಡಿದುಕೊಂಡು ಕುಣಿದಾಡಿದಳು; ಇನ್ನೊಬ್ಬಳು

ಪಿಂಗುಗೆ ವೃಷ್ಟಿಭಯಂ ನಿಮ
ಗಾಂ ಗೋವರ್ಧನಮನೆತ್ತಿದೆಂ ಕೃಷ್ಣನೆನೆಂ
ದಂಗತ್ರಿಭಂಗಿ ಸೊಗಯಿಸ
ಲಂಗನೆ ಕಂತುಕಮನೆತ್ತಿ ನಿಂದಳದೊರ್ವಳ್

ಇನ್ನು ಮಳೆಯ ಭಯ ನಿಲ್ಲಲಿ, ಇಗೋ ನಿಮಗಾಗಿ ಗೋವರ್ಧನವನ್ನು ಎತ್ತಿದ್ದೇನೆ; ನಾನೇ ಶ್ರೀ ಕೃಷ್ಣ- ಎಂದು ಹೇಳಿ ತ್ರಿಭಂಗಿಯಲ್ಲಿ ನಿಂತು ಒಂದು ಚೆಂಡನ್ನು ಎತ್ತಿ ಹಿಡಿದುಕೊಂಡಳು. ಇಂತಹ ಚಿತ್ರಗಳು ಹೃದಯಂಗಮವಾಗಿವೆ.

ರುದ್ರಭಟ್ಟನು ನೇಮಿಚಂದ್ರನಂತೆಯೇ ಕವಿಗಿಂತಲೂ ಹೆಚ್ಚಾಗಿ ಪಂಡಿತ. ನೇಮಿಚಂದ್ರನು 'ಸ್ತ್ರೀರೂಪಮೆ ರೂಪಂ, ಶೃಂಗಾರಮೆ ರಸಂ' ಎಂದು ಆದರ್ಶವನ್ನು ಎತ್ತಿ ಹಿಡಿದರೆ, ರುದ್ರಭಟ್ಟ 'ವೈಷ್ಣವ ಕಾವ್ಯ ರಸಾರ್ಣವಂ ತುಳುಂಕಾಡುಗೆ' ಎಂದು ಹೊರಟವನು. ಅವರ ಆದರ್ಶ ಬೇರೆ ಬೇರೆಯಾದರೂ ಕಾವ್ಯರಸಾಸ್ವಾದನಕ್ಕೆಂದು ಹೊರಟವರಿಗೆ ಆಗುವ ಫಲ ಒಂದೇ- ಪಾಂಡಿತ್ಯಪ್ರಚುರವಾದ ನಾರಿಕೇಳಪಾಕ. ಭಾಷೆಯ ಭಾರವನ್ನು ಹೊರುವಷ್ಟು ಭಾವಪುಷ್ಟಿಯಿಲ್ಲ, ಇವರ ಕವಿತೆಗಳಿಗೆ. ವರ್ಣನೆಯಲ್ಲಿ ಇಬ್ಬರೂ ಕವಿಸಮಯಗಳನ್ನು ಬಳಸುತ್ತಾರೆ. ಆದರೆ ಅವರ ವರ್ಣನೆಗಳಲ್ಲಿ ನೂತನತೆ ಇಲ್ಲದೆ ಹೋಗುವುದಿಲ್ಲ. ಇಬ್ಬರ ಬಂಧವೂ ಬಿಗಿ, ಓಜಸ್ಸುಗಳಿಂದ ತುಂಬಿದ್ದರೂ ಪ್ರಸಾದ ಗುಣ ಕಮ್ಮಿ. ಅಲ್ಲಲ್ಲಿ ಶಿಥಿಲಯಾಗುವುದೂ ಉಂಟು. ರುದ್ರಭಟ್ಟನ ಗ್ರೀಷ್ಮಋತು ವರ್ಣನೆ ಇದು—

ಉರಿವರಿವ ಬಿಸಿಲ ಬೆಂಕೆಯ
ಭರದೆ ಮಳಲ್ದಿಂಟೆ ಕಾಯ್ದು ಸಿಡಿಯುತ್ತಿರೆ ಪಂ
ಕರುಹ ಭವಾಂಡದ ಹಂಚಿನ
ಹುರಿಗಡಲೆವೊಲೊಡೆದು ಪಾಱಿದವು ಬೆಟ್ಟಂಗಳ್

ಉರಿಯುತ್ತಿರುವ ಬಿಸಿಲಿನ ಬೆಂಕಿಯ ಜೋರಿನಿಂದ ಮರಳಿನ ಕಣಗಳು ಸಿಡಿಯುತ್ತಿರಲಾಗಿ, ಬ್ರಹ್ಮಾಂಡದ ಹೆಂಚಿನಲ್ಲಿರುವ ಹುರಿಗಡಲೆಯ ಹಾಗೆ ಬೆಟ್ಟಗಳು ಒಡೆದು ಹಾರಿದವು—ವರ್ಣನೆ ಸುಂದರವಾಗಿರುವಷ್ಟೇ ಸರಳವಾಗಿಯೂ ಇದೆ. ಆದರೆ ಇಂತಹ ವರ್ಣನೆಗಳು ಅಪೂರ್ವ. ಜರಾಸಂಧನು ಶ್ರೀ ಕೃಷ್ಣನನ್ನು ನಿಂದಿಸುವ ಭಾಗ ರಸವತ್ತಾಗಿದೆ. ಇದು ಶ್ರೀ ಕೃಷ್ಣನನ್ನು ಕುರಿತ ನಿಂದಾಸ್ತುತಿಯಾಗಿರುವುದು ಇದಕ್ಕೆ ಮೊದಲ ಕಾರಣ. ಎರಡನೆಯದಾಗಿ ಈ ಭಾಗವು ಆದಿಕವಿ ಪಂಪನ 'ವಿಕ್ರಮಾರ್ಜುನ ವಿಜಯ'ದಿಂದ ಉಪಕೃತವಾಗಿದೆ. ಆತನು ಭಟ್ಟಿಯಿಳಿಸಿ ತಯಾರು ಮಾಡಿಟ್ಟಿರುವ

ಸಾರವಸ್ತುವಿಗೆ ರುದ್ರಭಟ್ಟನು ನೀರನ್ನು ಸೇರಿಸಿ ಪಾನೀಯವನ್ನು ತಯಾರು ಮಾಡಿದ್ದಾನೆ.

ಕಾವ್ಯ ರಸಾಸ್ವಾದನೆಗೆ, ಅದಕ್ಕೂ ಹೆಚ್ಚಾಗಿ ಪಾಂಡಿತ್ಯಾರ್ಜನೆಗೆ ನೇಮಿ ರುದ್ರರಿಬ್ಬರ ಕಾವ್ಯಗಳೂ ಅಭ್ಯಾಸಯೋಗ್ಯವಾಗಿವೆ.

**ಬೊಪ್ಪಣ ಪಂಡಿತ :**

ನೇಮಿಚಂದ್ರ ಮತ್ತು ರುದ್ರಭಟ್ಟರ ಸಮಕಾಲೀನನಾದ ಬೊಪ್ಪಣ ಪಂಡಿತನೆಂಬ ಕವಿ 'ನಿರ್ವಾಣ ಲಕ್ಷ್ಮೀಪತಿ ನಕ್ಷತ್ರಮಾಲಿಕೆ' ಎಂಬ ಪುಟ್ಟ ಗ್ರಂಥವನ್ನು ಬರೆದಿರುವುದಲ್ಲದೆ ಶ್ರವಣಬೆಳುಗೊಳದ ಗೊಮ್ಮಟೇಶ್ವರನನ್ನು ಕುರಿತ ಇಪ್ಪತ್ತೇಳು ವೃತ್ತಗಳನ್ನು ಬರೆದಿದ್ದಾನೆ. ತನಗೆ 'ಸುಜನೋತ್ತಂಸ' ನೆಂಬ ಬಿರುದಿದ್ದಂತೆ ತಿಳಿಸುತ್ತಾ ಕವಿಯು 'ಸುಜನರ್ ಭವ್ಯರೆ ತನಗವರಜಸ್ರಮುತ್ತಂಸಮಪ್ಪ ಪುರುಳಿಂ ಬೊಪ್ಪಂ ಸುಜನೋತ್ತಂಸನೆನಿಪ್ಪಂ' – ಸಜ್ಜನರಾದ ಭವ್ಯರು ಸದಾ ತನಗಿಂತ ಶ್ರೇಷ್ಠರಾಗಿರುವುದರ ಕಾರಣದಿಂದ ತಾನು ಸುಜನೋತ್ತಂಸನೆನಿಸಿಕೊಂಡೆ; ನಾನು ಅವರಿಗಿಂತಲೂ ಶ್ರೆಷ್ಟನೆಂಬ ಕಾರಣದಿಂದ ಅಲ್ಲ – ಎಂಬ ನಮ್ರತೆಯನ್ನು ಪ್ರದರ್ಶಿಸಿದ್ದಾನೆ. 'ತುಂಬಿದ ಕೊಡ ತುಳುಕುವುದಿಲ್ಲ.' ಆತನ ನಮ್ರತೆ ಆತನ ದೊಡ್ಡತನವನ್ನು ತೋರಿಸುತ್ತದೆ. ಆತನ 'ಗೊಮ್ಮಟ ಸ್ತುತಿ'ಯು ಮನೋಹರವಾದ ಒಂದು ಭಾವಗೀತೆ. ಕವಿಯು ಬಾಹುಬಲಿಯನ್ನು ಭಕ್ತಿಯಿಂದ ಮೈದುಂಬಿ ಬರೆಯುತ್ತಾನೆ, ಓದುಗರನ್ನು ಮೈಮರೆಸುತ್ತಾನೆ. ಇದು ಗೊಮ್ಮಟಮೂರ್ತಿಯ ಚಿತ್ರ.

ಅತಿ ತುಂಗಾಕೃತಿಯಾದೊಡಾಗದದಱೊಳ್ ಸೌಂದರ್ಯಮೌನ್ನತ್ಯಮುಂ
ನುತ ಸೌಂದರ್ಯಮುಮಾಗೆ ಮತ್ತತಿಶಯಂ ತಾನಾಗದೌನ್ನತ್ಯಮುಂ
ನುತ ಸೌದರ್ಯಮುಮೂರ್ಜಿತಾತಿಶಯಮುಂ ತನ್ನಲ್ಲಿ ನಿಂದಿರ್ದುವೇಂ
ಕ್ಷಿತಿ ಸಂಪೂಜ್ಯಮೊ ಗೊಮ್ಮಟೇಶ್ವರ ಜಿನಶ್ರೀರೂಪಮಾತ್ಮೋಪಮಂ

ಮೂರ್ತಿ ದೊಡ್ಡದಾದರೆ ಅದರಲ್ಲಿ ಸೌಂದರ್ಯವಿರುವುದಿಲ್ಲ; ಔನ್ನತ್ಯ ಸೌಂದರ್ಯ ಎರಡೂ ಇದ್ದವೆಂದರೆ ಅದರಲ್ಲಿ ಅತಿಶಯವಾಗುವುದಿಲ್ಲ. ಗೊಮ್ಮಟನಲ್ಲಿ ಎತ್ತರ, ಸೌಂದರ್ಯ, ಅತಿಶಯ—ಈ ಮೂರು ಗುಣಗಳೂ ಮನೆಮಾಡಿಕೊಂಡಿವೆ. ಗೊಮ್ಮಟೇಶ್ವರನ ಶ್ರೀ ರೂಪವು ಆತ್ಮೋಪಮ

ವಾದುದು. ಈ ರೂಪವು ಜಗತ್ತಿನಲ್ಲಿ ಎಷ್ಟು ಸಂಪೂಜ್ಯವಾದುದೊ!

ಬೊಪ್ಪಣನ 'ನಿರ್ವಾಣ ಲಕ್ಷ್ಮೀಪತಿ ನಕ್ಷತ್ರಮಾಲಿಕೆ'ಯೂ ಇಪ್ಪತ್ತೇಳು ವೃತ್ತಗಳ ಪುಟ್ಟ ಗ್ರಂಥ. ಇದರ ಪ್ರತಿ ಪದ್ಯವೂ 'ನಿರ್ವಾಣ ಲಕ್ಷ್ಮೀಪತೀ' ಎಂದು ಮುಗಿಯುವುದರಿಂದಲೂ ಇಪ್ಪತ್ತೇಳು ನಕ್ಷತ್ರಗಳ ಸಂಖ್ಯೆಯಲ್ಲಿ ಕಾವ್ಯರಚನೆಯಾಗಿರುವುದರಿಂದಲೂ ಇದಕ್ಕೆ ಈ ಹೆಸರು. ನಿರ್ವಾಣ ಲಕ್ಷ್ಮಿಗೆ ಪತಿಯಾದವನು ಜಿನ. ಆ ಜೈನಮತ ಮತ್ತು ಜೈನಋಷಿಗಳ ಮಹತ್ವವನ್ನು ಹೊಗಳುವುದು ಈ ಪುಟ್ಟ ಕಾವ್ಯದ ಹುರುಳು. ಭವ ವಿಧ್ವಂಸನವಾಗುವಂತಹ ಸ್ತೋತ್ರವೊಂದನ್ನು ನೀನು ಹೇಳೆಂದು ಭವ್ಯರು ಕೇಳಿದುದರಿಂದ ಈ 'ಭ್ರಾಜಿತ ಭವ್ಯಕಂಠ ಕಲಿತಂ ನಕ್ಷತ್ರಮಾಲೋಪಮಂ'– ಹೊಳೆಯುತ್ತಿರುವ ಭವ್ಯಕಂಠದಲ್ಲಿ ನಕ್ಷತ್ರಮಾಲೆಯಂತೆ ಸೇರಿರುವುದನ್ನು ರಚಿಸಿದ್ದೇನೆ—ಎಂದು ಕವಿಯ ಹೇಳಿಕೆ. ಅಷ್ಟುಟ ಧರ್ಮಗ್ರಂಥವಾದರೂ ಕಾವ್ಯಮಯವಾಗಿದೆ.

'ಸುಜನೋತ್ತಂಸ' ನೆಂಬ ಅಂಕಿತವಿರುವ ಅನೇಕ ಕಂದ ಪದ್ಯಗಳು ಬಳಕೆಯಲ್ಲಿವೆ. ಬೊಪ್ಪಣನೇ ಅವುಗಳ ಕರ್ತೃವಾಗಿದ್ದರೂ ಇರಬಹುದು. ಹಲವು ಕವಿಗಳು ಈತನನ್ನು ಅತಿಶಯವಾಗಿ ಹೊಗಳುವುದರಿಂದಲೂ, ಕೇಶಿರಾಜನು ತನ್ನ 'ಶಬ್ದಮಣಿದರ್ಪಣ' ದಲ್ಲಿ ಸುಜನೋತ್ತಂಸನ ಸುಮಾರ್ಗಮಿವಱೊಳೆ ಲಕ್ಷ್ಯಂ' ಎಂದು ಹೇಳಿರುವುದರಿಂದಲೂ, ಈತನ ಉಪಲಬ್ಧ ಕೃತಿಗಳಲ್ಲಿ ಆತನ ಕವಿತಾ ಶಕ್ತಿ ಅಸಾಧಾರಣವಾಗಿ ಕಂಡು ಬರುವುದರಿಂದಲೂ ಈತನು ದೊಡ್ಡ ಕಾವ್ಯಗಳನ್ನು ಬರೆದಿದ್ದರೂ ಬರೆದಿರಬಹುದು.

**ಅಗ್ಗಳ :**

ಇಂಗಳೇಶ್ವರವೆಂಬ ಊರಿನ ಶಾಂತೀಶ–ಪೋಚಾಂಬಿಕೆ ಎಂಬ ಜೈನ ದಂಪತಿಗಳ ಮಗ ಅಗ್ಗಳ. 'ಭಾರತೀಭಾಳನೇತ್ರ'. 'ಕಾವ್ಯನೌಕರ್ಣಧಾರ', ಸಾಹಿತ್ಯವಿದ್ಯಾವಿನೋದ—ಇತ್ಯಾದಿ ಹಲವು ಬಿರುದುಗಳನ್ನು ಹೊತ್ತು, 'ಚಂದ್ರಪ್ರಭಪುರಾಣ'ವೆಂಬ ಎಂಟನೆಯ ತೀರ್ಥಂಕರನ ಕಥೆಯನ್ನು ಹದಿನಾರು ಆಶ್ವಾಸಗಳಲ್ಲಿ ಬರೆದಿರುವ ಈ ಕವಿ 'ಕಳೆಗಳೆನಿತನಿತಱೊಳಮಗ್ಗಳಗಣ್ಣಂ ತೋರ್ಪನಗ್ಗಳಂ ನೃಪಸಭೆಯೊಳ್'—ಎಷ್ಟು ಕಲೆ

ಗಳಿವೆಯೊ ಅಷ್ಟರಲ್ಲಿಯೂ ಶ್ರೇಷ್ಠನಾಗಿರುವವನಿಗೂ ಹಿರಿಯನಾಗಿದ್ದಾನೆ, ಅಗ್ಗಳ—ಎಂದು ಹೇಳಿಕೊಂಡು, ತಾನು ರಾಜಸಬೆಯಲ್ಲಿಯೂ ಗಣ್ಯ ನಾಗಿದ್ದೆನೆಂದು ಆತ ತನ್ನ ಕಾವ್ಯದಲ್ಲಿ ಹೇಳಿಕೊಂಡಿದ್ದಾನೆ.

ಅಸಹಾಯತೆಯಿಂ ಸಂಸಾ
ರ ಸಮುದ್ರಮನೀಸಿದಂ ಶಶಿಪ್ರಭನೆಂತಂ
ತಸಹಾಯತೆಯಿಂ ತಚ್ಚರಿ
ತ ಸಮುದ್ರಮನೀಸಿ ಜಸಮನಗ್ಗಳನಾಂತಂ

ಚಂದ್ರಪ್ರಭತೀರ್ಥಂಕರನು ಹೇಗೆ ಅಸಾಹಾಯಶೂರನಾಗಿ ಸಂಸಾರಸಾಗರ ವನ್ನು ಈಜಿದನೋ ಹಾಗೆಯೇ ಅಗ್ಗಳನು ಆ ತೀರ್ಥಂಕರನ ಕಥಾಸಮುದ್ರ ವನ್ನು ಅಸಾಹಾಯನಾಗಿ ಈಜಿ ಕೀರ್ತಿಶಾಲಿಯಾದ. ಈಗ ಉಪಲಬ್ಧವಾಗಿ ರುವ ಚಂದ್ರಪ್ರಭಜಿನನ ಕಥೆಗಳಲ್ಲಿ ಇದೇ ಮೊದಲನೆಯದು. ಪಂಪ, ಪೊನ್ನ, ರನ್ನರ ಮೂರು ಧರ್ಮಕಾವ್ಯಗಳಿಗೆ ಮೂರು ಲೋಕಗಳ ಬೆಲೆಯಾಗುತ್ತದೆ ಯಂತೆ. ಇವರಾದ ಮೇಲೆ ಬಂದ ಈ ಕವಿಯ ' ಚಂದ್ರಪ್ರಭಪುರಾಣ ' ಅಮೂಲ್ಯವಾದುದಂತೆ ! ಹನ್ನೆರಡನೆಯ ಶತಮಾನದ ಇತರ ಚಂಪೂಗ್ರಂಥ ಗಳಂತೆ ಇದಾದರೂ ಸಂಸ್ಕೃತಭೂಯಿಷ್ಠವಾಗಿ, ಬಿಗಿಯಾದ ಬಂಧದಿಂದ ಕೂಡಿ ಪ್ರೌಢವಾಗಿದೆ. ಅಗ್ಗಳನಿಗೆ ಕವಿಹೃದಯವಿದೆ. ಆತನ ವರ್ಣನೆಗಳಲ್ಲಿ ಕಲ್ಪನಾವಿಲಾಸವಿದೆ. ಇದರ ಜೊತೆಗೆ ತನ್ನ ಕಾಲದ ವೀರಜೀವನದ ಮೇಲೆ ಆತ ಸ್ವಲ್ಪಮಟ್ಟಿಗೆ ಬೆಳಕನ್ನೂ ಬೀರುತ್ತಾನೆ. ಆತನ ಪುರಾಣದಲ್ಲಿ ಭವಾವಳಿ ಗಳ ಗೊಂದಲವಿಲ್ಲ. ಚಂದ್ರಪ್ರಭಜಿನನ ಹಿಂದಿನ ಒಂದು ಜನ್ಮದ ಕಥೆಯನ್ನು ಮಾತ್ರ ಹೇಳಿ ಮುಖ್ಯಕಥೆಯನ್ನು ಮುಂದುವರಿಸುತ್ತಾನೆ. ಆದರೆ ಶೈಲಿ ಮಾತ್ರ ಬೀಸೋಕಲ್ಲು ಕಟ್ಟಿಕೊಂಡು ಓಟದ ಪಂದ್ಯಕ್ಕೆ ಹೊರಟಂತಾಗು ತ್ತದೆ. ಈತನೂ ಹನ್ನೆರಡನೆಯ ಶತಮಾನದ ಕಡೆಯ ಭಾಗದಲ್ಲಿದ್ದವನೇ.

**ಆಚಣ್ಣ :**

ಪುಲಿಗೆರೆಯ ಕೇಶವರಾಜ—ಮಲ್ಲಾಂಬಿಕೆಯರೆಂಬ ಜೈನದಂಪತಿಗಳ ಮಗ ಆಚಣ್ಣ. ಈತನು ' ವಸುಧೈಕ ಬಾಂಧವ ' ಎಂಬ ಬಿರುದುಳ್ಳ ರೇಚಣ ಚಮೂಪನ ಅಪೇಕ್ಷೆಯಂತೆ ' ವರ್ಧಮಾನ ಪುರಾಣ ' ವನ್ನು ಬರೆದನು. ಆಚಣ್ಣನ ತಂದೆ ತನ್ನ ಗೆಳೆಯನಾದ ತಿಕ್ಕಣಚಾವಣನ ಜೊತೆಸೇರಿ ' ವರ್ಧ

ಮಾನ ಪುರಾಣ' ವನ್ನು ಬರೆಯಹೊರಟು ಅರ್ಧದಲ್ಲಿಯೇ ಸತ್ತುಹೋಗಿದ್ದನು. ಮಗನು ಅದನ್ನು ವಿಸ್ತರಿಸಿ ಹದಿನಾರು ಆಶ್ವಾಸಗಳಲ್ಲಿ ಬರೆದು ಪೂರೈಸಿದ. ಇದು ವರ್ಧಮಾನಜಿನನನ್ನು ಕುರಿತು ಕನ್ನಡದಲ್ಲಿ ಬರೆದ ಮೊದಲ ಕಾವ್ಯ. ಇದೇ ಇದರ ಪ್ರಶಸ್ತಿ. ಹನ್ನೆರಡನೇ ಶತಮಾನದ ಚಂಪೂ ಅಚ್ಚಿನಲ್ಲಿಯೇ ಇಳಿದು ಬಂದ ಈ ಕಾವ್ಯದಲ್ಲಿ ಉಳಿದ ಕಾವ್ಯಗಳಿಗಿಂತ ಹೆಚ್ಚು ಶಬ್ದಾಲಂಕಾರಗಳು ತುಂಬಿವೆ. ಆಚಣ್ಣ 'ಶ್ರೀ ಪದಾಶೀತಿ' ಎಂಬ ಮತ್ತೊಂದು ಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ಪಂಚ ಪರಮೇಷ್ಟಿಗಳ, ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು—ನಾಮದ ಮಹಿಮೆಯನ್ನು ಒಳಗೊಂಡ ೯೪ ಕಂದ ಪದ್ಯಗಳಿವೆ.

**ಕವಿ ಕಾಮ :**

ಹದಿಮೂರನೆಯ ಶತಮಾನದ ಆರಂಭಕಾಲದಲ್ಲಿದ್ದ ಕವಿ ಕಾಮನು ಬರಿಯ ಕವಿಮಾತ್ರವೇ ಅಲ್ಲ, ಬಹು ಮುಖಾವಧಾನಿ. ನಾಲ್ಕು ದಿಕ್ಕಿನಲ್ಲಿಯೂ ನಾಲ್ವರು ಬರೆದುಕೊಳ್ಳುವಂತೆ ಕಾವ್ಯಗಳನ್ನು ಸೃಷ್ಟಿಸಿ ಹೇಳಬಲ್ಲ; ಅತ್ತ ಪಗಡೆಯಾಟವಾಡಬಲ್ಲ, ಇತ್ತ ಬರೆದುದನ್ನು ಓದುತ್ತಿರುವಾಗ ತಪ್ಪನ್ನು ತಿದ್ದಬಲ್ಲ; ಸಂಗೀತವನ್ನು ಕೇಳಿ ಸುಖಿಸಬಲ್ಲ; ಹಾಸ್ಯವನ್ನುಮಾಡಿ ನಗಿಸಬಲ್ಲ—ಇಂತಹ ಮತಿಪ್ರಕಾಶವುಳ್ಳವನಂತೆ! ಹಾಗೆಂದು ಹೇಳಿಕೊಂಡಿದ್ದಾನೆ. ಈತನು 'ಶೃಂಗಾರ ರತ್ನಾಕರ' ವೆಂಬ ಶಾಸ್ತ್ರಗ್ರಂಥವೊಂದನ್ನು ಬರೆದಿದ್ದಾನೆ. 'ಸ್ತನಶತಕ' ವೆಂಬ ಮತ್ತೊಂದು ಗ್ರಂಥವನ್ನೂ ಬರದಿರುವುದಾಗಿ ಪಾರ್ಶ್ವಕವಿ ಹೇಳುತ್ತಾನೆ. 'ಕವಿಮುಖಮುಕುರ'ನಾದ ತಾನು 'ಸಾಮಂತರ, ಮಾಂಡಳಿಕರ, ಚಕ್ರೇಶರ ಸಭೆಯೊಳ್' ಪ್ರಸಿದ್ಧನಾಗಿದ್ದೆನೆಂದು ಹೇಳಿಕೊಂಡಿದ್ದಾನೆ. 'ಕವಿಮುಖಮುಕುರ', 'ಶೃಂಗಾರ ರತ್ನಾಕರ' ಇತ್ಯಾದಿ ಬಿರುದಾಂಕಿತನಾದ ಈತನು 'ಜಗದೊಳ್ ಸನ್ನಿದವಾದ ನಾಳ್ನುಡಿಗಳಂ ಛಂದಕ್ಕೆ ಬರ್ಪಂತು ಸೆಟ್ಟಗೆ ಮಾತಾಡುವಬಲ್ಮೆ, ಚಿತ್ತದೊಳೊಂದಿರ್ದ್ದರ್ಥಮುಂ ಕೂಡೆ ನಾಲಗೆಯಿಂ ರಂಜಿಸುವೊಂದು ಬಿನ್ನಣಂ'—ಉಳ್ಳ ಪುಣ್ಯೈಕಭಾಗಿಯೆಂದು ತನ್ನನ್ನು ಕರೆದುಕೊಂಡಿರುವುದು ಸಾರ್ಥಕವಾಗಿದೆ. ಮಾತುಗಳನ್ನು ಪದ್ಯವಾಗಿ ಕಟ್ಟಬಲ್ಲ, ಅರ್ಥವನ್ನು ಸುಂದರವಾಗಿ ಅಭಿವ್ಯಕ್ತಗೊಳಿಸಬಲ್ಲ ಶಕ್ತಿ ಆತನಲ್ಲಿ ಇದೆ

ಯೆಂಬುದು ನಿಜ. ಆತನ 'ಶೃಂಗಾರರತ್ನಾಕರ'ಕ್ಕೆ 'ರಸ ವಿವೇಕ'ವೆಂಬ ಮತ್ತೊಂದು ಹೆಸರೂ ಉಂಟು. ಅಲಂಕಾರಶಾಸ್ತ್ರದ ರಸ ಪ್ರಕ್ರಿಯೆಯನ್ನು ಪ್ರತಿಪಾದಿಸುವ ಈ ಗ್ರಂಥದಲ್ಲಿ ,ನವರಸವ್ಯಾವರ್ಣನ, ಭಾವಭೇದ ನಿರ್ಣಯ, ನಾಯಕ ನಾಯಿಕಾ ವಿಕಲ್ಪ ವಿಸ್ತರ, ಸಖ ಸಖೀ ಸಂಭೋಗ ವಿಪ್ರಲಂಭ ಪ್ರಮಾವಸ್ಥಾತಿ ವಿಸ್ತರ—ಎಂಬ ನಾಲ್ಕು ಪರಿಚ್ಛೇದಗಳಿವೆ. ಕವಿಯು ತನಗಿಂತಲೂ ಹಿಂದೆ ಸಂಸ್ಕೃತದಲ್ಲಿ ಹೇಳಿದ್ದ ಶೃಂಗಾರವನ್ನು ತಾನು ಕನ್ನಡದಲ್ಲಿ ಹೇಳುತ್ತಿದ್ದಾನೆ. ಕನ್ನಡದಲ್ಲಿ ರಸಪ್ರಕರಣವನ್ನು ವಿಸ್ತಾರವಾಗಿ ಪ್ರತಿಪಾದಿಸುವ ಗ್ರಂಥಗಳಲ್ಲಿ 'ರಸರತ್ನಾಕರ'ವೇ ಮೊದಲನೆಯದು. ಈತನೊಬ್ಬ ಶೈವಬ್ರಾಹ್ಮಣನಿರಬಹುದು. ಈತನ 'ಸ್ತನಶತಕ' ಉಪಲಬ್ಧವಾಗಿಲ್ಲ.

**ಬಂಧುವರ್ಮ :**

ಹದಿನಾಲ್ಕನೆಯ ಶತಮಾನದಲ್ಲಿದ್ದ ನಾಗರಾಜನೆಂಬ ಕವಿ ತನ್ನ 'ಪುಣ್ಯಾಸ್ರವ' ವೆಂಬ ಗ್ರಂಥದಲ್ಲಿ ಬಂಧುವರ್ಮನನ್ನು ಕುರಿತು

ಕವಿಗಳೊಳೆ ಬಂಧುವರ್ಮಂ
ಕವಿಯಾತನ ಮುಂದೆ ಕವಿಗಳೆಂಬವರೆಲ್ಲಂ
ಛವಿಗೆಟ್ಟಪರ್ ತೊಳಗುವ
ರವಿಯಂ ಬಳಸಿರ್ದ ಬಹಳ ಭಗಣಂಗಳವೊಲ್

ಕವಿಗಳಲ್ಲಿ ಬಂಧುವರ್ಮನೇ ಕವಿ. ಆತನ ಮುಂದೆ ಉಳಿದ ಕವಿಗಳೆಲ್ಲ, ಸೂರ್ಯನ ಸುತ್ತಲಿರುವ ನಕ್ಷತ್ರಗಳಂತೆ ಕಾಂತಿಹೀನರಾಗಿದ್ದಾರೆ—ಎಂದು ವರ್ಣಿಸಿದ್ದಾನೆ. ಹನ್ನೆರಡನೆಯ ಶತಮಾನದ ಚಂಪೂಕಾರರನ್ನು (ಹರಿಹರನನ್ನು ಬಿಟ್ಟು) ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ ಈ ಮಾತು ಬಹುಮಟ್ಟಿಗೆ ಸತ್ಯವೆನ್ನಿಸುತ್ತದೆ. ಈ ಕಾಲದ ಚಂಪೂಕಾರರ ಶೈಲಿಯೆಲ್ಲವೂ ಬಹುಶಃ ಒಂದೇ ಅಚ್ಚಿನಿಂದ ಹೊರಬಂದವು. ಇದಕ್ಕೆ ಬಂಧುವರ್ಮನ ಕಾವ್ಯಗಳು ಹೊರತು ಎಂದು ಹೇಳಬಹುದು. ಸಂಸ್ಕೃತಭೂಯಿಷ್ಠವಾದ ಆ ಬಂಧದ ಬಿಗಿಯಿಂದ, ಬಿಂಕಿನಿಂದ ಉಸಿರುಕಟ್ಟಿದಂತಾಗಿದ್ದ ವಾಗ್ದೇವಿ ಬಂಧುವರ್ಮನ ಕೃತಿಗಳಲ್ಲಿ ಸಲೀಸಾಗಿ ಉಸಿರಾಡಿಸಲು ಪ್ರಾರಂಭಿಸಿದ್ದಾಳೆ. ಆತನು

ತನ್ನ 'ಹರಿವಂಶಾಭ್ಯುದಯ' ದಲ್ಲಿ ಬರುವ ಅಹಿಂಸಾ ವರ್ಣನೆ ನೋಡಿ—

ಕಾವವರಾರುಮಿಲ್ಲ ದನಮೆಂಬುದು ಸೀರನಿತಿಲ್ಲ ದೋಷಮೆಂ
ಬಾವುದುಮಿಲ್ಲ ಬೆರ್ಚುವುದು ಮೆಯ್ಗ್ವಮುಳಿಸಿಲ್ಲದ ಮೂಗುಜಾತಿಗಳ್
ಮೇವುದು ಪುಲ್ ಜಲಂ ಕುಡಿವುದಿರ್ಪೆಡೆಯುಂ ಪಳುವಂತುಮಿಪ್ಪ ಸಂ
ಸೇವನೆಯಲ್ಲಿ ಮೆಯ್ಯಜೀಯದಿರ್ದುವನೇಂ ಗಳ ಕೊಲ್ವುದೊಳ್ಳಿತೇ

'ಪಾಪ, ರಕ್ಷಕರು ಯಾರೂ ಇಲ್ಲ; ಅಣುಮಾತ್ರವೂ ದೋಷವಿಲ್ಲ, ಹೆದರಿ ನಡೆದುಕೊಳ್ಳುತ್ತವೆ, ಸ್ವಲ್ಪವೂ ಅಹಂಕಾರ ಕೋಪಗಳಿಲ್ಲದ ಮೂಗುಪ್ರಾಣಿಗಳು, ಅವು ತಿನ್ನುವುದು ಹುಲ್ಲು, ಕುಡಿಯುವುದು ನೀರು, ವಾಸ ಎಲ್ಲೊ ಅಡವಿಯಲ್ಲಿ, ಪರಸೇವೆಯಲ್ಲಿಯೇ ಮೈಮರೆತಿರುವ ಪಶುಗಳನ್ನು ಕೊಲ್ಲಬಹುದೆ?'—ಕವಿಯ ವರ್ಣನಾಭಾಗಗಳಲ್ಲೆಲ್ಲಾ ಬಹುಮಟ್ಟಿಗೆ ಇದೇ ಬಗೆಯಾದ ಸರಳತೆ, ಸುಲಭವಾದ ಕನ್ನಡ ಶಬ್ದಗಳ ಬಳಕೆ, ಪ್ರಸಾದಗುಣ. ಹರಿವಂಶದ ಕಥೆಯೇನೋ ಇತರರು ಈಗಾಗಲೇ ಹೇಳಿರುವ ಕಥೆಯೇ, ಚರ್ವಿತ ಚರ್ವಣ. ಬಂಧವು ಮಾತ್ರ ಲಲಿತವಾಗಿದೆ. ರುಕ್ಮಿಣಿಯ ಕುರುಳ ವರ್ಣನೆ, ಇದು.

ಕರಿಯದೆಸಿಸಿರ್ದು ಪೊಳೆವುವು
ಸುರುಳ್ದು ಕುಸಿದಿರ್ದುಮರಳುತಿರ್ಪುವು ಬೇಜಾ
ಗಿರುತುಂ ಬಂಬಲ್ಗೆಳ್ವುವು
ಕುರುಳಂದಮಿದೇಂ ವಿರುದ್ಧಮೋ ಕಾಮಿನಿಯಾ.

'ಆಕೆಯ ಮುಂಗುರುಳುಗಳು ಅಚ್ಚಕಪ್ಪಾಗಿದ್ದರೂ ಮಿಂಚುತ್ತಿವೆ, ಸುತ್ತಿಕೆಳಗುರುಳುತ್ತಿದ್ದರೂ ಅರಳುತ್ತಿವೆ. ಇತರ ಕೂದಲಿನೊಡನೆ ಸೇರದೆ ಪ್ರತ್ಯೇಕವಾಗಿದ್ದರೂ ಗಂಟಿಗೆ ಹತ್ತಿರ ಬರುತ್ತವೆ. ಆ ಸುಂದರಿಯ ಕುರುಳು ಇದೇನು ವಿರುದ್ಧಗುಣಗಳಿಂದ ಕೂಡಿದೆಯೋ!' ಕವಿಯ ಕಲ್ಪನಾವಿಲಾಸವೂ ಸುಂದರವಾಗಿದೆ. ಬಂಧುವರ್ಮನ ಮತ್ತೊಂದು ಗ್ರಂಥ ಜೀವಸಂಬೋಧನೆಯೂ ಅಷ್ಟೆ. ಹನ್ನೆರಡು ಅಧಿಕಾರಗಳಿರುವ ಈ ಗ್ರಂಥ ನೀತಿ ವೈರಾಗ್ಯ ಬೋಧಕವಾದುದಾದರೂ ಲಲಿತ ಸುಂದರವಾಗಿದೆ.

ಕುಡಲಾರ್ಪೊಡೊಡೆಯನಪ್ಪುದು
ಕುಡಲಾಱದೆ ಬೇಡಿದವರ್ಗಳಂ ಮಱುಗಿಸುತಿ

ಪೊಡವಿಯೊಳನ್ಯರ್ಗಂ ಮಱುಕಮ
ನೊಡರಿಸದಿರ್ಪೊಂದು ಬಡತನಂ ಲೇಸಲ್ತೆ

ದಾನಮಾಡುವುದಕ್ಕೆ ಶಕ್ತಿಯಿದ್ದರೆ ಶ್ರೀಮಂತನಾಗಬೇಕು. ಬೇಡುವವರಿಗೆ ನೀಡಲಾರದೆ ಅವರನ್ನು ಮರುಗಿಸುವ ಐಶ್ವರ್ಯಕ್ಕಿಂತ ಯಾರನ್ನೂ ಮರುಗಿಸ ದಂತಹ ಬಡತನವೇ ಲೇಸು—ಬರಹದಲ್ಲಿ ಬಿಗಿಯಿದ್ದರೂ ಲಾಲಿತ್ಯಕ್ಕೆ ಲೋಪಬರದ ಇಂತಹ ಶೈಲಿಯೇ ಕವಿಯನ್ನು ನಮ್ಮ ಮೆಚ್ಚಿಗೆಗೂ ಗೌರವಕ್ಕೂ ತಕ್ಕವನನ್ನಾಗಿ ಮಾಡಿದೆ. ಕವಿಯು ಜೀವನನ್ನು ಸಂಬೋಧಿಸಿ ಹೇಳುತ್ತಿರುವುದು ಜೈನತತ್ವಗಳನ್ನಾದರೂ ಅವುಗಳಲ್ಲಿ ಬಹುಭಾಗ ಮಾನವ ಧರ್ಮವೇ. ಆದುದರಿಂದ ಸರ್ವಜನಾದರಣೀಯವಾಗಿವೆ.

**ದೇವಕವಿ :**

'ಕುಸುಮಾವಳಿ' ಎಂಬ ಕಾಲ್ಪನಿಕ ಕಥೆಯೊಂದನ್ನು ಚಂಪುವಿನಲ್ಲಿ ಬರೆದ ಈ ಕವಿ ತನ್ನ ಕಾವ್ಯದಲ್ಲಿ ತನ್ನ ಹೆಸರನ್ನು ಸ್ಪಷ್ಟವಾಗಿ ಹೇಳಿಕೊಂಡಿಲ್ಲ. ಆ ಹೆಸರಿನ ಸೂಚನೆಯನ್ನು ಮಾತ್ರ ಕೊಟ್ಟಿದ್ದಾನೆ. ತನ್ನ ಗ್ರಂಥಕ್ಕೆ ನಾಯಕ ಚಿಕ್ಕರಾಜಚಮೂಪನೆಂದು ಹೇಳಿ ಅವನ ಇತಿಹಾಸವನ್ನು ಕೊಟ್ಟಿ ರುವನಾದರೂ ಆ ಚಮೂಪ ಯಾರೆಂಬುದಾಗಲಿ ಯಾವ ರಾಜನ ಚಮೂಪ ನಾಗಿದ್ದನೆಂಬುದಾಗಲಿ ಗೊತ್ತಾಗುವುದಿಲ್ಲ. 'ಕವಿ ಕಮಳಜ ಸೂಕ್ತಿ ಸುಧಾ ರ್ಣವ ಸೋಮಂ' ಎಂದು ತನ್ನನ್ನು ಕರೆದುಕೊಂಡಿರುವುದರಿಂದ ಈತನು ಕಮಲಭವಕವಿಯ 'ಶಾಂತೀಶ್ವರ ಪುರಾಣ'ದ ರಚನೆಯಲ್ಲಿ ಸಹಾಯ ಕನೊ, ಪೋಷಕನೊ ಆಗಿದ್ದಿರಬಹುದೆಂದು ಊಹಿಸಬಹುದು. ಈ ಊಹೆ ಯನ್ನು ಸ್ಥಿರಪಡಿಸುವಂತೆ 'ಕುಸುಮಾವಳಿ' ಯಲ್ಲಿರುವ ಕೆಲವು ವರ್ಣನಾ ಪದ್ಯಗಳು 'ಶಾಂತೀಶ್ವರಪುರಾಣ' ದಲ್ಲಿಯೂ ಕಂಡುಬರುತ್ತವೆ. ಈತನಿಗೆ ಕೃತಿರತಿರಮಣ, ಭಾರತೀಭೂಷಣ ಮೊದಲಾದ ಬಿರುದುಗಳಿವೆ. ಕವಿಯು ತನ್ನನ್ನು 'ಸುಕೃತಿಶ್ರೀಭಾಮಿನೀ ಮಂಗಳಮಣಿಮುಕುರಂ' ಎಂದೂ 'ಬುಧಸ್ತುತ್ಯ ಸಾಹಿತ್ಯಕಳಾಸಂದೋಹಸೀಮಂ' ಎಂದೂ ಹೊಗಳಿ ಕೊಂಡಿದ್ದಾನೆ.

'ಕುಸುಮಾವಳಿ'ಯು ನೇಮಿಚಂದ್ರನ ಲೀಲಾವತಿಯಂತೆ ಶೃಂಗಾರ ಪೂರ್ಣವಾದ ಕಲ್ಪನಾಕಥೆ. ನೇಮಿಚಂದ್ರನಂತೆ ದೇವಕವಿಯೂ ವರ್ಣನಾ

ಪ್ರಿಯ. ಆತನ ವಿಸ್ತೃತ ಪ್ರೌಢಿಮೆ ದೇವಕವಿಯಲ್ಲಿ ಇಲ್ಲವಾದರೂ ಕಾವ್ಯ ಹಿಡಿದಿರುವ ಹಾದಿ ಇಬ್ಬರಲ್ಲಿಯೂ ಒಂದೆ. ಕಥೆಯ ಓಟವನ್ನು ಕವಿಯ ವರ್ಣನಾಪ್ರೀತಿಯೂ ಪಾಂಡಿತ್ಯಾಭಿರುಚಿಯೂ ಕುಂಠಿತಗೊಳಿಸುತ್ತವೆ. 'ಈತನ ಬಂಧ ಪ್ರೌಢ, ನಿರರ್ಗಳ, ಗಂಭೀರ' ಎಂಬ ಕವಿಚರಿತ್ರಕಾರರ ಮಾತು ನಿಜವಾದರೂ ಮನರಂಜನೆಯ ಆದರ್ಶದಿಂದ ಹೊರಟ ಕಥೆ ಪ್ರೌಢಿಮೆಯ ಉಡುಪನ್ನು ತೊಡದೆ ಸರಳವಾಗಿ ಸುಲಭವಾಗಿದ್ದಿದ್ದರೆ ಚೆನ್ನಾಗಿತ್ತು. ಈತ ಬ್ರಾಹ್ಮಣಕವಿ, ಸ್ವತಂತ್ರ ಕಥನ ಕಾವ್ಯದ ಸೃಷ್ಟಿಕರ್ತ ಎಂಬುದು ಈತನ ವೈಶಿಷ್ಟ್ಯ.

## ಪಾರ್ಶ್ವ ಪಂಡಿತ

ಈತನೂ ಹದಿಮೂರನೆಯ ಶತಮಾನದ ಆರಂಭದಲ್ಲಿದ್ದವನೇ. 'ಕವಿಕುಲತಿಲಕ', 'ವಿಬುಧಜನ ಮನಃಪದ್ಮಿನೀ ಪದ್ಮಮಿತ್ರಂ' ಇತ್ಯಾದಿ ಬಿರುದುಗಳುಳ್ಳ ಈ ಕವಿ ಹದಿನಾರು ಆಶ್ವಾಸಗಳ 'ಪಾರ್ಶ್ವನಾಥಪುರಾಣ'ದ ಕರ್ತೃ. 'ಒಗಟುವೇಳ್ದ ಕವಿಯುಂ ಕವಿಯೇ'—ಒಗಟಿನಂತೆ (ಸ್ಪಷ್ಟವಲ್ಲದ) ಹೇಳುವ ಕವಿ ಕವಿಯಾದಾನೇ—ಎಂದು ಹೇಳಿ, ಲಲಿತವಾಗಿ, ತಿಳಿಯಾಗಿ ಬರೆಯುವ ಆದರ್ಶವನ್ನಿಟ್ಟುಕೊಂಡು ಹೊರಟಿರುವ ಈ ಕವಿ ಸ್ವಲ್ಪಮಟ್ಟಿಗೆ ತನ್ನ ಆದರ್ಶವನ್ನು ಸಾಧಿಸಿರುವನೆಂದು ಹೇಳಬಹುದು. ಈತನ ಕಾವ್ಯ ಇಪ್ಪತ್ತಮೂರನೆಯ ತೀರ್ಥಂಕರನ ಚರಿತೆಯನ್ನು ಒಳಗೊಂಡಿದೆ. ಕವಿಯು ತನ್ನ ಈ ಕಾವ್ಯದ ಶ್ರೇಷ್ಠತೆಯನ್ನು ಸಂಸ್ಥಾಪಿಸುತ್ತಾ

ಸತ್ಕೀರ್ತಿಸ್ತ್ರೀಮುದಾವಶೀಕರಣಮಂತ್ರಂ, ಕಾಂತಿಯುಕ್ತಂ, ಮನಃ
ಶುಕ್ತೀಲಿಪ್ರಭವಂ ಪ್ರಸಿದ್ಧಮತಿನಿರ್ದುಷ್ಟಂ, ಪರೀಕ್ಷಾಕ್ಷಮಂ
ಮುಕ್ತಾನ್ಯಂ ಗುಣರತ್ನಶೋಭಿ ಸರಸಂ ಸಾರಂ ಸುವರ್ಣಪ್ರಿಯಂ
ಹೃತ್ಕರ್ಣಾಭರಣಂ, ಸಮಸ್ತಬುಧಬೃಂದಕ್ಕಪ್ಪುದೇನೊಪ್ಪದೇ ?

ಈ ನನ್ನ ಕಾವ್ಯವು ಸತ್ಕೀರ್ತಿಯೆಂಬ ರಮಣಿಯನ್ನು ಒಲಿಸಬಲ್ಲ ವಶೀಕರಣ ಮಂತ್ರ; ಕಾಂತಿಯುಕ್ತವಾದ ಪ್ರಸಿದ್ಧವಾದ ನಿರ್ದುಷ್ಟವಾದ ಪರೀಕ್ಷೆಗೆ ನಿಲ್ಲಬಲ್ಲ ಮನೋರತ್ನ; ಗುಣರತ್ನಗಳಿಂದ ಶೋಭಿತವಾದುದು; ಸರಸಯುಕ್ತವಾಗಿ, ಸಾರವತ್ತಾಗಿ, ಒಳ್ಳೆಯ ವರ್ಣನೆಯುಳ್ಳದ್ದಾಗಿ, ಪ್ರಿಯವಾದದ್ದಾಗಿ ಕಿವಿಗೂ ಹೃದಯಕ್ಕೂ ಆಭರಣಪ್ರಾಯವಾದುದು; ಇಂತಹ

ಕಾವ್ಯ ಸಮಸ್ತ ವಿದ್ವಜ್ಜನಕ್ಕೂ ಒಪ್ಪಿಗೆಯಾಗದೆ ಇರುತ್ತದೆಯೆ?—ಎಂದು ಕೇಳುತ್ತಾನೆ. ನಿಜ, ಆತ ಹೇಳುವುದನ್ನೆಲ್ಲಾ ಬಹುಮಟ್ಟಿಗೆ ಒಪ್ಪಬಹುದು. ಸರಸವಾದ ಕಥೆ, ಒಳ್ಳೆಯ ವರ್ಣನೆ, ಕಿವಿಗೂ ಮನಸ್ಸಿಗೂ ಹಿತವಾಗಬಲ್ಲ ಶೈಲಿ—ಇವುಗಳಿಂದ ಕೂಡಿದ ಈತನ ಕಾವ್ಯ ವಿದ್ವಜ್ಜನರಿಗೆ ಮೆಚ್ಚಿಗೆಯಾಗಬಲ್ಲದು. ಇದು ಮಾವಿನಮರದ ವರ್ಣನೆ—

ಚಿಗುರ್ಗಳನೊಮ್ಮೆ ಕರ್ಚಿ ತಳಿರ್ಗೊಂಚಲನೊಮ್ಮೆ ಕರ್ಮುಂಕಿ ಕೋಕಿಲಂ
ಮುಗುಳ್ಗಳನೊಮ್ಮೆ ಜಕ್ಕುಲಿಸಿ ಪೂಗಳನೊಮ್ಮೊರ್ದಲೆಂಟಿ ಷಟ್ಪದಂ
ಬಗೆಗೊಳೆ ಬಂದ ಮಾವುಗಳ ಕಾಯ್ಗಳನೊಮ್ಮೆ ತುಡುಂಕಿ ತುಂಡದಿಂ
ಸೊಗಯಿಪ ಪಣ್ಣನೊಮ್ಮೆ ಸವಿದೇಂ ಸುಕಮುಂ ಸುಕನೊಲ್ದು ತಾಳ್ದಿತೊ.

ಕೋಗಿಲೆಯು ಒಮ್ಮೆ ಚಿಗುರನ್ನು ಕಚ್ಚಿ, ಮತ್ತೊಮ್ಮೆ ಚಿಗುರಿನ ಗೊಂಚಲನ್ನು ಕೊಕ್ಕಿನಿಂದ ಕುಟುಕಿಯೂ; ದುಂಬಿಯು ಒಮ್ಮೆ ಮೊಗ್ಗುಗಳಲ್ಲಿ ಝೇಂಕರಿಸಿ, ಮತ್ತೊಮ್ಮೆ ಹೂಗಳಲ್ಲಿ ಬಂಡನ್ನು ಹೀರಿಯೂ; ಗಿಳಿಯು ಮನೋಹರವಾಗಿ ಫಲಭರಿತವಾಗಿರುವ ಕಾಯ್ಗಳ ಮೇಲೆ ಒಮ್ಮೆ ಎರಗಿ, ಮತ್ತೊಮ್ಮೆ ತನ್ನ ಕೊಕ್ಕಿನಿಂದ ಹಣ್ಣುಗಳನ್ನು ಸವಿದೂ—ಏನು ಸಂತೋಷವನ್ನು ತಾಳದವೋ! ವರ್ಣನೆಯಲ್ಲಿ ಮಹೋನ್ನತವಾದ ಕಲ್ಪನೆಯಿಲ್ಲದಿದ್ದರೂ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ, ನಿರಾಭರಣ ಸುಂದರವಾಗಿದೆ.

ಒಂದು ಅಗುಳನ್ನು ಹಿಚುಕಿ ಅನ್ನದ ಹದವನ್ನು ಕಾಣುವಂತೆ ಈ ಒಂದು ಪದ್ಯದಿಂದ ಕವಿಯ ವರ್ಣನಾ ವಿಧಾನವನ್ನು ಅರಿತುಕೊಳ್ಳಬಹುದು. ಪಾರ್ಶ್ವನಾಥ ಚರಿತೆಯನ್ನು ಕನ್ನಡದಲ್ಲಿ ಬರೆದ ಕವಿಗಳಲ್ಲಿ ಈತನೇ ಮೊದಲನೆಯವನು. ಈತನ ಕಾವ್ಯದಲ್ಲಿ ಬರುವ ಕಮಠನ ಕಥೆಯನ್ನು ಓದಿದಾಗ, 'ಸುಕವಿಜನಮನೋಹರ್ಷ ಸಸ್ಯಪ್ರವರ್ಷಂ' ಎಂದು ಕವಿ ತನ್ನನ್ನು ಕರೆದುಕೊಂಡಿರುವುದು ಅಷ್ಟೇನೂ ಅಪರಾಧವಲ್ಲವೆನಿಸುತ್ತದೆ.

**ಜನ್ನ :**

ಹನ್ನೆರಡನೆಯ ಶತಮಾನದಲ್ಲಿ ಕಾವ್ಯಕರ್ಮಕ್ಕೆ ಕೈಯಿಟ್ಟ ಚಂಪುಕಾರರಲ್ಲಿ ಬಹುಮಂದಿ ತಮ್ಮ ಪಾಂಡಿತ್ಯದಿಂದ ನಮ್ಮನ್ನು ಬೆರಗುಗೊಳಿಸುವವರೇ ಹೊರತು ಕಾವ್ಯಸೌಂದರ್ಯದಿಂದ ಆನಂದಗೊಳಿಸುವವರಲ್ಲ. ಪಂಪರನ್ನಾದಿಗಳಲ್ಲಿ ಕಂಡುಬಂದ ಲೋಕೋತ್ತರ ಪ್ರತಿಭೆ ಕಲ್ಪನಾ ಶಕ್ತಿಗಳು

ಸುಮಾರು ಎರಡು ಶತಮಾನಗಳಷ್ಟು ಕಾಲ ಸುಪ್ತಸ್ಥಿತಿಯಲ್ಲಿದ್ದು ಹದಿಮೂರನೆಯ ಶತಮಾನದಲ್ಲಿ ಮತ್ತೆ ಕಾಲಗರ್ಭದಿಂದ ಹೊರಚಿಮ್ಮಿ ಬಂದಂತೆ ಭಾಸವಾಗುತ್ತದೆ. ಅದಕ್ಕೆ ಆಶ್ರಯನಾದವನೇ ಜನ್ನ. ಈತ ಬಹು ಸುಕೃತಶಾಲಿ. ಬಂಗಾರದ ಸೌಟನ್ನು ಬಾಯಲ್ಲಿಟ್ಟುಕೊಂಡೇ ಹುಟ್ಟಿದ. ಅವನ ತಂದೆ ಹೊಯ್ಸಳ ನಾರಸಿಂಹನಲ್ಲಿ ಕಟಕೋಪಾಧ್ಯಾಯನಾಗಿದ್ದ ಶಂಕರ. ಬಹುಶಃ ಆತನು ದೊಡ್ಡ ಕವಿಯೆಂದೂ ಪ್ರಸಿದ್ಧನಾಗಿ, 'ಸುಮನೋಬಾಣ' ನೆಂಬ ಬಿರುದನ್ನು ಪಡೆದಿದ್ದನೆಂದು ತೋರುತ್ತದೆ. ಆತ ಮಗನಿಗೆ ಯೋಗ್ಯ ವಿದ್ಯಾಭ್ಯಾಸವನ್ನು ಒದಗಿಸಿರಬೇಕು. ಜಗದೇಕಮಲ್ಲನಲ್ಲಿ ಕಟಕೋಪಾಧ್ಯಾಯನಾಗಿ 'ಅಭಿನವಶರ್ವವರ್ಮ'ನೆಂಬ ಬಿರುದನ್ನು ಪಡೆದಿದ್ದ ಎರಡನೆಯ ನಾಗವರ್ಮಕವಿ ಜನ್ನನ ಉಪಾಧ್ಯಾಯನಾದ. ತಂದೆಯಿಂದ ಇಳಿದು ಬಂದಿದ್ದ ಕವಿತಾಶಕ್ತಿ ಜನ್ನನಲ್ಲಿ ಕುಡಿಯಿಟ್ಟಿತು. ಆತನ ಕೀರ್ತಿ ಹಬ್ಬಿತು; ಹಲವು ಕಡೆಗಳಿಂದ ಶಾಸನಪದ್ಯಗಳನ್ನು ಬರೆಯಲು ಕರೆ ಬಂದಿತು. ಅವುಗಳನ್ನು ಬರೆದು ಆತನ ಕವಿತಾಶಕ್ತಿ ಬೆಳೆಯುತ್ತಾ ಹೋಯಿತೆಂದು ತೋರುತ್ತದೆ. ಜನ್ನನು ತನ್ನನ್ನು 'ಸೊಬಗಿನ ಅಭಿನವ ಮದನನ್'ಎಂದು ಕರೆದುಕೊಂಡಿರುವುದರಿಂದ ಆತನು ಚೆಲುವ ಚನ್ನಿಗನಾಗಿರಬೇಕು; ದೊಡ್ಡವಂಶಕ್ಕೆ ಸೇರಿ, ವಿದ್ಯಾವಂತನಾಗಿ, ಸ್ಫುರದ್ರೂಪಿಯಾಗಿದ್ದ ಈ ತರುಣನಿಗೆ ದೊಡ್ಡ ವಂಶದ ಹೆಣ್ಣು ಹೆಂಡತಿಯಾಗಿ ದೊರೆತಳು. ಇವನ ಸೋದರಿಯನ್ನು 'ಸೂಕ್ತಿಸುಧಾರ್ಣವ'ದ ಕರ್ತೃವಾದ ಮಲ್ಲಿಕಾರ್ಜುನನಿಗೆ ಕೊಟ್ಟಿತ್ತು. ಈ ಮಲ್ಲಿಕಾರ್ಜುನನ ಮಗನೇ ಪ್ರಸಿದ್ಧ ವೈಯಾಕರಣಿಯಾದ ಕೇಶಿರಾಜ. ಇಂತಹ ಸಾರಸ್ವತವಾತಾವರಣದಲ್ಲಿ ಜನ್ನನ ಕವಿತಾಶಕ್ತಿ ಸಂಪೂರ್ಣ ಅರಳಿತೆಂದು ತೋರುತ್ತದೆ. ತನ್ನ ವಂಶೌನ್ನತ್ಯದ ಜೊತೆಗೆ ಬಂಧುಗಳೂ ಉನ್ನತವಂಶದವರೇ ಆದುದರಿಂದ ಕವಿಯ ಹೆಸರು ರಾಜಾಸ್ಥಾನವನ್ನು ಮುಟ್ಟಿತು; ಆತನು ಆಸ್ಥಾನಕವಿಯಾದ. ಸರಸ್ವತಿಯ ಕೃಪೆಯೊಡನೆ ಲಕ್ಷ್ಮೀಕಟಾಕ್ಷವೂ ಆಯಿತು. ಕವಿಯು

ನರಸಿಂಹನ ಚೋಳಕುಲೋ
ದ್ಧರಣನ ಸರ್ವಜ್ಞಭೂಪನೋಲಗದೊಳ್ ನಿಂ

ದಿರೆ ದಂಡಾಧೀಶಂ, ಕು
ಳ್ಳಿರೆ ಮಂತ್ರಿ, ತೊಡಂಕೆ ಕವಿ, ಜನಾರ್ದನದೇವಂ

ಜನಾರ್ದನದೇವ ಅಥವಾ ಜನ್ನನು ಚೋಳಕುಲೋದ್ಧಾರಕನಾದ ನರಸಿಂಹ ಬಲ್ಲಾಳನ ಆಸ್ಥಾನದಲ್ಲಿ ನಿಂತರೆ ಸೇನಾಪತಿ, ಕೂತರೆ ಮಂತ್ರಿ, ಕಾರ್ಯಾಸಕ್ತನಾದರೆ ಕವಿ—ಜನ್ನಕವಿ ಕವಿಚಕ್ರವರ್ತಿಯಾದ. ಆತ ತನ್ನ ಹಿಂದಿನ ಕವಿಚಕ್ರಿಗಳನ್ನು ನೆನೆದು ಹಿಗ್ಗಿ ಹಾಡಿದ. ಕನ್ನಡದ ಕವಿಚಕ್ರವರ್ತಿತ್ರಯರಲ್ಲಿ ತಾನೊಬ್ಬ.

ಕನ್ನರನಾದರದಿಂ ಕುಡೆ
ಹೊನ್ನಂ, ಮನವೊಸೆದು ತೈಲಪಂ ಕುಡೆ ರನ್ನಂ
ಮನ್ನಿಸಿ ಬಲ್ಲಾಳಂ ಕುಡೆ
ಜನ್ನಂ ಕವಿಚಕ್ರವರ್ತಿವೆಸರಂ ತಳೆದಂ

ಚಕ್ರವರ್ತಿಯಾದ ಕನ್ನರ ಅಥವ ಕೃಷ್ಣನು ಆದರದಿಂದ ಕೊಡಲಾಗಿ ಪೊನ್ನ ಕವಿಚಕ್ರವರ್ತಿಯಾದ; ತೈಲಪ ಚಕ್ರವರ್ತಿ ಕೊಡಲಾಗಿ ರನ್ನನು ಕವಿಚಕ್ರವರ್ತಿಯಾದ; ತಾನು ಬಲ್ಲಾಳಚಕ್ರವರ್ತಿಯು ಕೊಡಲಾಗಿ ಕವಿಚಕ್ರವರ್ತಿಯಾದ. ಯೋಗ್ಯತೆಯಲ್ಲಿ ಅವರಿಬ್ಬರಿಗಿಂತ ತಾನೇನೂ ಕಡಮೆಯಲ್ಲ

ರನ್ನಂ ವೈಯಾಕರಣಂ
ಜನ್ನಂ ಮೇಣ್ ಕವಿಗಳೊಳಗೆ ವೈಯಾಕರಣಂ
ಪೊನ್ನನಸಹಾಯ ಕವಿ ಮೇಣ್
ಜನ್ನಿಗನಸಹಾಯ ಸುಕವಿ ಕವಿಚಕ್ರಿಗಳೊಳ್.

ರನ್ನನು ದೊಡ್ಡ ವ್ಯಾಕರಣ ಪಂಡಿತ, ಜನ್ನನಾದರೊ ಕವಿಗಳಲ್ಲೆಲ್ಲಾ ದೊಡ್ಡ ವ್ಯಾಕರಣಪಂಡಿತ; ಪೊನ್ನನು ಅಸಹಾಯಕವಿ, ಜನ್ನನು ಅಸಹಾಯ ಕವಿಮಾತ್ರವೇ ಅಲ್ಲ, ಅಸಹಾಯ ಸುಕವಿ. ಉಳಿದಿಬ್ಬರು ಕವಿಚಕ್ರಿಗಳಿಗಿಂತ ತಾನು ಒಂದು ಗುಂಜುತೂಕ ಹೆಚ್ಚು—ಎನ್ನುತ್ತಾನೆ, ಜನ್ನ.

ತನ್ನ ಕವಿತಾಶಕ್ತಿ ಅಸಾಧಾರಣವಾದುದೆಂಬ ಆತ್ಮಪ್ರತ್ಯಯವಿದೆ, ಕವಿಗೆ. ರಾಜಸಭೆಯಲ್ಲಿನ ಅಖಿಳಕಳಾನಿಪುಣರ ಮಧ್ಯೆ ಜೇಳಿತ್ತಿ ಗೆಲುವ ಶಕ್ತನೆಂದರೆ ಚತುರ್ವಿಧಪಂಡಿತನಾದ ತಾನೊಬ್ಬನೇ ಎನ್ನುತ್ತಾನೆ, ಆತ.

ಪದ ವಾಕ್ಯ ಅರ್ಥಗಳಲ್ಲಿ ಹುಟ್ಟಬಹುದಾದ ಕಳಂಕಗಳಾಗಲಿ, ಅಲಂಕಾರ ರಸ ಭಾವ ರೀತಿಗಳ ಆಭಾಸಗಳಾಗಲಿ ಉಭಯ ಕವಿ ಚಕ್ರವರ್ತಿಯಾದ ತನ್ನ ಸಭೆಯನ್ನು ಹೊಗುವಂತೆಯೇ ಇಲ್ಲವಂತೆ! ಸ್ಫಟಿಕದಂತೆ, ಕರ್ಪೂರ ದಂತೆ, ಶ್ರೀಗಂಧದಂತೆ, ಕ್ಷೀರಸಾಗರದಂತೆ, ಮುತ್ತಿನಂತೆ, ಬೆಳುದಿಂಗಳಂತೆ ಇವೆಯಂತೆ ಆತನ ಮಾತುಗಳು; ಶ್ರೀಗಂಧದಲ್ಲಿರುವ ಸುವಾಸನೆಯಂತೆ ತನ್ನ ಕಾವ್ಯಬಂಧದಲ್ಲಿರುವ ಮಾತುಗಳು ರಸಸ್ಯಂದಿಯಾಗಿವೆಯಂತೆ! ತನ್ನ ಮುಂದೆ 'ಬಳ್ಳಿಸಂಕಲೆಯೊಳಕ್ಕರಮಂ ಸೆಱೆಗೆಯ್ವ ಕಕ್ಕಸರ್'— ಬಳ್ಳಿಯ ಸಂಕೋಲೆಯಲ್ಲಿ ಅಕ್ಷರಗಳನ್ನು ಸಂಕೋಲೆ ಹಾಕುವ ಕಠಿಣಾತ್ಮರು— ಗಣ್ಯರೆ? ಎಂದು ಕೇಳುತ್ತಾನಾತ. ಎಲ್ಲವೂ ಚಚ್ಚೌಕವಾಗಿದ್ದು, ತುಂಬು ಜೀವನವನ್ನು ಬಾಳುವ ಜನ ಹೀಗೆ ಹೆಮ್ಮೆಯನ್ನು ಕೊಟ್ಟುಕೊಂಡರೂ ಅದು ಅಸ್ವಾಭಾವಿಕವೇನೂ ಅಲ್ಲವಲ್ಲ? ಇದು ಕವಿಯ ಲೌಕಿಕ ಜೀವನದ ಚಿತ್ರ. ಆ ಜೀವನದ ಮತ್ತೊಂದು ಮುಖವೂ ಇದೆ. ಅದು ಕವಿಯ ಹುಟ್ಟಿನಿಂದಲೇ ಆರಂಭವಾಗಿದೆ. ಕವಿಯು ಹುಟ್ಟಿದುದು ಆಷಾಢಕೃಷ್ಣ ತ್ರಯೋದಶಿಯ ರೇವತೀನಕ್ಷತ್ರ ಶಿವಯೋಗದಲ್ಲಿ. ಆತನ ಆರಾಧ್ಯದೈವ ವಾದ ಅನಂತನಾಥ ತೀರ್ಥಂಕರನು ಹುಟ್ಟಿದುದೂ ಆ ಮಂಗಳ ಮುಹೂರ್ತ ದಲ್ಲಿಯೇ. ತಾಯಿ ತಂದೆಗಳು—ಶಂಕರ ಗಂಗಾದೇವಿಯರು—ಮಗುವನ್ನು ಬಹು ಅಕ್ಕರೆಯಿಂದ, ತಾಯಿತಂದೆಗಳಿಗೆ ಸ್ವಾಭಾವಿಕವಾದ ಮುದ್ದಿನಿಂದ, ಅನಂತನಾಥಜಿನನ ಹೆಸರಿನೊಡನೆ ತನ್ನ ಹೆಸರನ್ನು ಸೇರಿಸಿ ಹೇಳಿದಾಗ ಮಗುವಿನಲ್ಲಿ ಉದಿಸಿದ ಸಾತ್ವಿಕಭಾವ, ಮಗುವಿನ ವಯಸ್ಸಿನೊಡನೆ ಬೆಳೆದು ಕೊಂಡು ಹೋಗಿರಬೇಕು. ಇದು ಆತನ ಧರ್ಮಗುರುಗಳಾದ 'ಕಾಣೂರ್ ಗಣದ ಚಿಂತಾಮಣಿ' ಶ್ರೀರಾಮಚಂದ್ರದೇವ ಮುನೀಂದ್ರರ ಬೋಧನೆ ಯಿಂದ ಪರಿಣತಿಗೊಂಡಿರಬೇಕು. ಆತನು ಗಂಡರಾದಿತ್ಯನ ಪೊಳಲಲ್ಲಿ ಅನಂತನಾಥನ ಬಸದಿಯನ್ನೂ ದ್ವಾರಸಮುದ್ರದಲ್ಲಿ ಪಾರ್ಶ್ವಜಿನೇಶ್ವರನ ಬಸದಿಯ ದ್ವಾರವನ್ನೂ ಕಟ್ಟಿಸಿದುದರಲ್ಲಿ ಈತನ ಧರ್ಮಾನುರಾಗ ವ್ಯಕ್ತ ವಾಗುತ್ತದೆ. ಜನ್ನನು ಲೌಕಿಕ ಪಾರಲೌಕಿಕ ಅನುಭವಗಳಲ್ಲಿ ಸಮಾನ ವಾದ ಆಸಕ್ತಿಯನ್ನು ವಹಿಸಿ, ಇಹಪರಗಳೆರಡನ್ನೂ ಸಾಧಿಸಿದ ಸುಕೃತ ಶಾಲಿ.

ಜನ್ನಕವಿಯು ತನ್ನ ಹಿಂದಿನ ಕವಿಚಕ್ರಿಗಳಿಗಿಂತಲೂ ಮೇಲೆಂದು ಹೇಳಿಕೊಂಡಿರುವ ಮಾತು ಬರಿಯ ಅಹಂಕಾರವೇನೂ ಅಲ್ಲ. ಆತನು ಹೇಳುವ ಕಾವ್ಯೋದ್ದೇಶವನ್ನು ಕೇಳಿದರೆ, ಆತನು ಬರೆದ ಕಾವ್ಯಗಳನ್ನು ನೋಡಿದರೆ ಇದು ಸ್ಪಷ್ಟವಾಗುತ್ತದೆ. ಉಳಿದವರು ಪಂಪಕವಿಯನ್ನು ಅನುಸರಿಸಿ 'ಬೆಳಗುವೆನಿಲ್ಲಿ ಲೌಕಿಕಮುಮ್. ಅಲ್ಲಿ ಜಿನಾಗಮಮುಮಂ' ಎಂದು ಒಂದು ಲೌಕಿಕ ಕಾವ್ಯವನ್ನೂ ಒಂದು ಧಾರ್ಮಿಕಕಾವ್ಯವನ್ನೂ ಬರೆದವರು; ಲೌಕಿಕಕಾವ್ಯದಲ್ಲಿ ತಮ್ಮ ಪೋಷಕನನ್ನೇ ಕಾವ್ಯದ ನಾಯಕನನ್ನಾಗಿ ಸಮೀಕರಿಸಿ ಬರೆದವರು. ಜನ್ನ ಇದರಿಂದ ಭಿನ್ನ. ಆತನು ತನ್ನ ಕಾವ್ಯವು 'ಜಾರಚೋರ ವೀರರ ಕಥೆಯಂತೆ ಬಾಸ್ಸುವಿಯ ಮಾತುಗಳಂ ಬಜ್ಜೆಕೆಯ್ದು ಚರ್ಚೆ'ಯಲ್ಲ; 'ಬಾಳ ಬಟ್ಟೆಯ ಪರಮಾಗಮ.' ಎಂದು ಹೇಳಿಕೊಂಡಿದ್ದಾನೆ. ಕಾವ್ಯದ ಉದ್ದೇಶವನ್ನು ಕುರಿತು

ಕವಿತಾಶಕ್ತಿ ಸುರೇಂದ್ರಧೇನುವದು ಪುಣ್ಯಾಯತ್ತಮಾ ಕಾಮಧೇ
ನುವೆ ಕೈಸಾರ್ದೊಡಮಾ ವಚಸ್ಸುಧೆಯನನ್ಯರ್ಗಿತ್ತು ಕಾಳ್ಬೆಕ್ಕಿಗೂ
ಡುವವೊಲ್ಬುದ್ಧ್ಯಹಿಸೇಂದ್ರ ವಂದಿತನನರ್ಹದ್ದೇವನಂ ಭಕ್ತಿ ಮಾ
ಡುವುದಾತಂ ಕರೆದಾತನಲ್ತೆ ತಳಿಯೊಲ್ಪಾಲಂ ಭವದ್ವಂದ್ವದಾ

ಕವಿತಾಶಕ್ತಿಯೆಂಬುದು ಒಂದು ಕಾಮಧೇನು; ಅದು ಪೂರ್ವಪುಣ್ಯದಿಂದ ಲಭ್ಯವಾಗತಕ್ಕದು; ಆ ಕಾಮಧೇನು ಕೈಸಾರಿರುವಾಗ ಅದರ ವಚಸ್ಸುಧೆಯನ್ನು, ಕಾಡುಬೆಕ್ಕಿಗೆ ಪಾಯಸ ಕುಡಿಸಿದಂತೆ, ಅನ್ಯರಿಗೆ ಕೊಡದೆ ಇಂದ್ರವಂದಿತನಾದ ಅರ್ಹಂತ ದೇವನಿಗೆ ಅರ್ಪಿಸಬೇಕು. ಆತನು ಭವದ್ವಂದ್ವವೆಂಬ ಕಾಡಿನ ಮೇಲೆ ಅಮೃತವರ್ಷವನ್ನು ಕರೆದವನು–ಎಂದು ಹೇಳುತ್ತಾನೆ. ಮಾನವರನ್ನು ಹೊಗಳಿದರೆ ಧನಕನಕಾದಿಗಳೂ ಬಿರುದು ಬಾವಲಿಗಳೂ ಬರುವುದಿಲ್ಲವೆ? ನಿಜ. ಆದರೆ 'ದೇವಾಧೀಶನನೊರ್ಮೆ ವರ್ಣಿಸೆ ಮನೋವಾಕ್ಕಾಯ ಸಂಶುದ್ಧಿಯಿಂ, ದೇವೇಂದ್ರತ್ವಮೆ ಸಾರ್ವುದು'-ಆದ್ದರಿಂದ ಕಾವ್ಯಶಕ್ತಿಯನ್ನು ಪರಮೇಶ್ವರನ ಪೂಜೆಗಾಗಿ ಮಾತ್ರವೇ ಉಪಯೋಗಿಸಬೇಕೆಂಬುದು ಆತನ ಧ್ಯೇಯ. ನೇರವಾಗಿ ಅಲ್ಲದಿದ್ದರೂ ಪ್ರಕಾರಾಂತರವಾಗಿ ಆತನು ಪಂಪರನ್ನಾದಿಗಳ ಕಾರ್ಯಕ್ಕೆ ಅಸಮ್ಮತಿ ಸೂಚಿಸಿರುವನೇನೊ! ತಾನೂ ಅವರಂತೆಯೇ 'ಕಾವ್ಯಕಲಾಪರಿಣತಿ,' 'ಖಡ್ಗಕಲಾ ಪರಿಣತಿ'

ಗಳೆರಡನ್ನೂ ಪಡೆದವನು. ತಾನೂ 'ಕವಿಭಾಳಲೋಚನ,' 'ಸಾಹಿತ್ಯ ರತ್ನಾಕರ.' ಅಷ್ಟೇ ಅಲ್ಲ.

ಚತುರಂ ನೀಜನುದಾರನುಜ್ಜ್ವಲಯಶಂ ಸೌಭಾಗ್ಯಸಂಪನ್ನನೂ
ರ್ಜಿತ ಪುಣ್ಯೋದಯನೀ ಜನಾರ್ದನನ ವಕ್ತ್ರಾಂಭೋಜಮಂ ಸಾರ್ದು ಸು
ಸ್ಥಿತೆಯಾಗಿರ್ದುದರಿಂದೆ ತಾಂ ಸೊಬಗೆಯಾದಳ್ ಜಾಣೆಯಾದಳ್ ಸರ
ಸ್ವತಿ ಸನ್ಮೋಹಿತಳಾದಳಗ್ಗಳಮೆಯಾದಳ್ ವಿಶ್ವ ಭೂಚಕ್ರದೊಳ್

ಚತುರನೂ ಸುಂದರನೂ ಉದಾರನೂ ಉಜ್ವಲ ಕೀರ್ತಿಯುತನೂ ಸೌಭಾಗ್ಯ ಸಂಪನ್ನನೂ ಪುಣ್ಯಶಾಲಿಯೂ ಆದ ಜನ್ನಕವಿಯ ಮುಖಕಮಲದಲ್ಲಿ ಬಂದು ಸ್ಥಿರಳಾಗಿ ನೆಲೆಸಿದುದರಿಂದ ಸರಸ್ವತಿ ಭೂಮಂಡಲದಲ್ಲೆಲ್ಲಾ ಅತ್ಯಂತ ಸುಂದರಿಯಾದಳು, ಜಾಣಳಾದಳು, ಮನೋಹರಿಯಾದಳು, ಪೂಜ್ಯಳಾದಳು. ಕವಿಯ ಈ ಮಾತುಗಳು ಅಹಂಕಾರಮೂಲವೆಂದು ಕಾಣಬರಬಹುದಾದರೂ ಅದು ಅರುಹಂತ ಚರಿತೆಯ ನಿರೂಪಣೆಗೆ ಅರ್ಪಿಸಿದ ಗೌರವವೆಂಬುದನ್ನು ಅರ್ಥಮಾಡಿಕೊಂಡಾಗ ಅದಕ್ಕೆ ಸಮಾಧಾನ ದೊರೆಯುತ್ತದೆ.

ಕವಿಯು ಬರೆದಿರುವ ಗ್ರಂಥಗಳು ಮುಖ್ಯವಾಗಿ ಎರಡು–'ಯಶೋಧರ ಚರಿತೆ' (ಕ್ರಿ. ಶ. ೧೨೦೯). 'ಅನಂತನಾಥ ಪುರಾಣ' (೧೨೩೦). 'ಸ್ಮರತಂತ್ರ' ವೆಂಬ ಗ್ರಂಥವನ್ನೂ ಬರೆದಿರುವನಂತೆ, ಆದರೆ ಅದು ಉಪಲಬ್ಧವಾಗಿಲ್ಲ. ಉಪಲಬ್ಧವಾದ ಗ್ರಂಥಗಳೆರಡೂ ಜೈನಧರ್ಮವನ್ನು ಒಳಗೊಂಡವುಗಳೇ. 'ಅನಂತನಾಥಪುರಾಣ' ವಂತೂ ತೀರ್ಥಂಕರನೊಬ್ಬನ ಜೀವನಚರಿತ್ರೆಯೇ ಆಗಿದೆ. 'ಯಶೋಧರ ಚರಿತ್ರೆ' ಜೀವದಯಾಷ್ಟಮಿ ಯಂದು–ದುರ್ಗಿಗೆ ಪ್ರಾಣಿಬಲಿಯನ್ನು ಕೊಡುವ ದುರ್ಗಾಷ್ಟಮಿ, ಜೈನರಿಗೆ ಪ್ರಾಣಿದಯಾಷ್ಟಮಿ–ಜೈನಶ್ರಾವಕರು ಉಪವಾಸ ವ್ರತವನ್ನು ಆಚರಿಸಿದ ಮೇಲೆ ಮರುದಿನ ಪಾರಣೆಯನ್ನು ಮಾಡುವ ಮುನ್ನ ಈ ಕಥೆಯನ್ನು ಕೇಳಬೇಕು. ಇದು 'ಪಾರಣೆ ಕಿವಿಗಳ್ಗೆ'. ಇದರ ಕಥೆ ಜೈನರಿಗೆ ಅತ್ಯಂತ ಪ್ರಿಯವಾದುದು. ಆದ್ದರಿಂದಲೇ ಸಂಸ್ಕೃತ ಪ್ರಾಕೃತ ಕನ್ನಡಗಳಲ್ಲಿ ಇನ್ನೂ ಇತರ ದೇಶಭಾಷೆಗಳಲ್ಲಿ ಇದರ ಕಥೆ ರಚಿತವಾಗಿದೆ. ಜನ್ನ ಕವಿ ತನ್ನ ಈ ಕಾವ್ಯವನ್ನು, ವಾದಿರಾಜನೆಂಬ ಕವಿ ಸಂಸ್ಕೃತದಲ್ಲಿ ಬರೆದಿರುವ ಯಶೋ

ಧರ ಚರಿತೆಯ ಆಧಾರದಿಂದಲೇ, ಕನ್ನಡದಲ್ಲಿ ಬರೆಯುತ್ತಿದ್ದಾನೆ.

ಯಶೋಧರಚರಿತ್ರೆ ನಾಲ್ಕು ಅವತಾರಗಳ ಸಣ್ಣ ಕಾವ್ಯ. ಆಶ್ವಾಸಗಳ ಕೊನೆಯಲ್ಲಿ ಬರುವ ೮–೧೦ ವೃತ್ತಗಳನ್ನು ಬಿಟ್ಟರೆ ಇಡೀ ಕಾವ್ಯದಲ್ಲಿ ಸುಮಾರು ಮುನ್ನೂರು ಕಂದಪದ್ಯಗಳಿವೆ. 'ಅಭಯರುಚಿಕುಮಾರಂ ಮಾರಿದತ್ತಂಗೆ ಹಿಂಸಾರಭಸಮತಿಗೆ ಸಯ್ಪಂ ಪೇಳ್ದು ಧರ್ಮಕ್ಕೆ ತಂದು'ದು–ಅಭಯರುಚಿಯೆಂಬ ರಾಜಕುಮಾರನು ಭಯಂಕರ ಪ್ರಾಣಿಹಿಂಸೆಯಲ್ಲಿ ತೊಡಗಿದ್ದ ಮಾರಿದತ್ತನಿಗೆ ಧರ್ಮೋಪದೇಶಮಾಡಿ ಅವನನ್ನು ಸನ್ಮಾರ್ಗಕ್ಕೆ ತಂದುದು—ಈ ಕಥೆಯ ತಿರುಳು. 'ಹಿಂಸಾರಭಸಮತಿ'ಯಾದ ಮಾರಿದತ್ತನ ಕಥೆ ಮುಂದೆ ಬರುವ ಅಹಿಂಸಾಬೋಧನೆಯ ಕಥೆಗೆ ಎಂತಹ ಹಿನ್ನೆಲೆಯನ್ನು ಒದಗಿಸಿದೆ! ರಾಜಪುರದ ದೊರೆ ಮಾರಿದತ್ತನು ಮಾರಿಯ ಭಕ್ತ. ಚೈತ್ರ ಮಾಸದಲ್ಲಿ ಮಾರಿಯ ಜಾತ್ರೆ ನಡೆಯುವಾಗ ಅಸಂಖ್ಯಾತ ಪ್ರಾಣಿಗಳ ಬಲಿಯಾಗಬೇಕು; ಹಾಗಾಗದಿದ್ದರೆ ಮಾರಿ ಕೋಪಿಸಿ ಪ್ರಳಯವನ್ನೇ ಉಂಟುಮಾಡುತ್ತಾಳೆ. ಈ ಕವಿಯು ಮಾರಿದತ್ತನ ಕಥೆಯನ್ನು ಚೈತ್ರಮಾಸದ ವರ್ಣನೆಯೊಡನೆ ಪ್ರಾರಂಭಿಸುತ್ತಾನೆ. ಸಮಸ್ತ ಸುಖಸಂತೋಷಗಳಿಗೆ ತೌರುಮನೆಯೆನಿಸಿಕೊಂಡ ವಸಂತಋತು ಮಾರಿದತ್ತನ ರಾಜ್ಯದಲ್ಲಿ ಕಾಣಿಸಿಕೊಂಡ ಬಗೆಯೇ ಬೇರೆ–ಆಕಾಶದಲ್ಲಿ ಮೂಡಿದ ಅರ್ಧಚಂದ್ರನು ಪ್ರಾಣಿಗಳ ನೆತ್ತಿಯಲ್ಲಿ ಚುಚ್ಚಿದ ಗಾಳದಂತಿದ್ದಾನೆ, ಚಿಗುರಿದ ಅಶೋಕವೃಕ್ಷ ಉರಿಯ ಉಯ್ಯಾಲೆಯಂತಿದೆ, ಕೋಗಿಲೆಯ ಧ್ವನಿ ಪ್ರಾಣಿಗಳನ್ನು ಕೊಲ್ಲುವಾಗಿನ ಮೂದಲೆಯಂತಿದೆ; ಮುತ್ತುಗದ ಮರದ ಕೆಳಗೆ ಉದುರಿದ್ದ ಮುತ್ತುಗದ ಮೊಗ್ಗುಗಳನ್ನು ನೋಡಿದರೆ ವಸಂತನು ಸಿಸಿರವನ್ನು ಹಿಡಿದು, ಮಾರಿಯ ಹರಕೆಗಾಗಿ ಮಾವಿನ ಮರದ ಅಡಿಯಲ್ಲಿ ಸಣ್ಣಗೆ ಕೊಚ್ಚಿ ಹಾಕಿರುವ ಮಾಂಸದ ತುಂಡಿನಂತೆ ಕಾಣಿಸುತ್ತದೆ; ಗಿಳಿಗಳ ಧ್ವನಿ 'ಮಾರಿಯಾದ ಮಲಯಮಾರುತನು ಕಮಲವನವೆಂಬ ಅಗ್ನಿಕುಂಡದಲ್ಲಿ ದಂಡನಮಸ್ಕಾರ ಹಾಕುತ್ತಾ ಬರುತ್ತಿದ್ದಾನೆ. ಇತ್ತ ದೃಷ್ಟಿ ಇರಲಿ'ಎಂಬಂತೆ ಭಾಸವಾಗುತ್ತದೆ. ಈ ಪ್ರಕೃತಿವ್ಯಾಪಾರ ನಿಜಜೀವನದ ಪ್ರತಿಮೆ ಮಾತ್ರ. ಅದರ ಪ್ರತಿಕೃತಿ–ನಿಜ ಜೀವನದ ಚಿತ್ರ–ಎದೆ ನಡುಗುವಂತಿದೆ. ಮಾರಿಯ ಗುಡಿ 'ಪಸಿದ ಕೃತಾಂತನ' ಅಡಿಗೆಯ ಮನೆಯಂತಿದೆ! ಅಲ್ಲಿ

ತಳಮನುಡಿದಿಡುವ ಕಣ್ಣಂ
ಕಳಿಪೇಱುವ ಕರುಳ ತೋರಣಂಗಟ್ಟುವ ಕಾ
ಲ್ಗಳನುರಿಪಿ ನೆತ್ತರಾ ಕೂ
ಳ್ಗಳನಡುತಿಪ ವೀರರೆತ್ತನೋಳ್ಪಡಮದಱೊಳ್

ಪ್ರಾಣಿಗಳ ಕಾಲುಗಳನ್ನು ಕತ್ತರಿಸುತ್ತಿರುವ, ಕಣ್ಣು ಕಿತ್ತು ಸಂಪ್ರೋಕ್ಷಿಸುತ್ತಿರುವ, ಕರುಳನ್ನು ಕಿತ್ತು ತೋರಣವನ್ನು ಕಟ್ಟುತ್ತಿರುವ, ಕಾಲುಗಳನ್ನು ಕಟ್ಟಿಗೆಯಂತೆ ಉರಿಹಚ್ಚಿ ರಕ್ತದ ಅನ್ನವನ್ನು ಬೇಯಿಸುತ್ತಿರುವ ವೀರರೇ ಎಲ್ಲೆಲ್ಲಿಯೂ ಕಾಣಬರುತ್ತಿದ್ದಾರೆ. ಇದು ಇನ್ನೊಂದು ಭಯಂಕರ ದೃಶ್ಯ.

ತಾಳುಗೆಯುಮುರ್ಚಿ ನೆತ್ತಿಯ
ಗಾಳಂ ಗಗನದೊಳೆಳಲ್ವ ಸಾಲಿಯ ಬೀರರ್
ಪಾಳಿಯೊಳೆಸೆದರ್ " ಪಾಪದ
ಜೋಳದ ಬೆಳಸಿಂಗೆ ಬೆರ್ಚುಗಟ್ಟಿದ ತೆಱದಿಂ

ಗಂಟಲಿನಲ್ಲಿ ಚುಚ್ಚಿ ನೆತ್ತಿಯಲ್ಲಿ ಹೊರಟಿರುವ ಗಾಳವನ್ನು ತೂಗಾಡಿಸುತ್ತಾ ಸಾಲಾಗಿ ನಿಂತಿರುವ ಹಲವಾರು ಭಕ್ತರು ಪಾಪವೆಂಬ ಬೆಳೆಗೆ (ಹಕ್ಕಿಗಳನ್ನು ಓಡಿಸಲು ಕಟ್ಟಿರುವ) ಬೆದರು ಬೊಂಬೆಯಂತೆ ಕಾಣುತ್ತಿದ್ದರು. ಆಡು ಕುರಿ ಕೋಣಗಳನ್ನು ಲೆಕ್ಕವಿಲ್ಲದೆ ಕೊಲ್ಲುತ್ತಿರುವಾಗ ಅವುಗಳ ರೋದನದ ಪ್ರತಿಧ್ವನಿ ಅಡವಿಯೇ ಅಳುತ್ತಿರುವಂತೆ ಕಾಣುತ್ತಿತ್ತಂತೆ! ಅವುಗಳ ದುಃಖವನ್ನು ಕಂಡು ಭೂದೇವಿಯ ಎದೆ ಬಿರಿಯಿತಂತೆ! ಗುಡಿಯ ಪೌಳಿಯ ಮೇಲೆ ಕೆತ್ತಿದ್ದ ನರಶಿರಗಳು, ಚಂಡಿಯೇ ಮಾಂಸದಾಶೆಯಿಂದ ಹೊರಗಿನ ಪ್ರಪಂಚವನ್ನೆಲ್ಲಾ ಹಲವು ಮುಖಗಳಿಂದ ನೋಡುತ್ತಿರುವಂತೆ ಭಾಸವಾಗುತ್ತಿತ್ತು. ಇಂತಹ ಭಯಂಕರ ಸನ್ನಿವೇಶದಲ್ಲಿ ಭೈರವ, ಯಮ, ಮಾರಿ–ಇವರ ವಾಹನದಂತೆ ಭಯಂಕರನಾಗಿ, ಹಿರಿದ ಕತ್ತಿಯೊಡನೆ ನಿಂತ ಮಾರಿದತ್ತರಾಜನು ತಾನು ಬಲಿಕೊಡುವುದಕ್ಕಾಗಿ ಎಳೆವರೆಯದ ಮರ್ತ್ಯಯುಗಳವನ್ನು ಹಿಡಿತರುವಂತೆ ಚಂಡಕರ್ಮನೆಂಬ ತನ್ನ ತಳಾರನನ್ನು ನೇಮಿಸಿದನು. ಆ ಸಮಯದಲ್ಲಿ ಊರ ಹೊರಗಿನ ಉದ್ಯಾನವನದಲ್ಲಿ ಬಂದು ಇಳಿದುಕೊಂಡಿದ್ದ ಸುದತ್ತಾಚಾರ್ಯರೆಂಬ ಋಷಿಗಳು ತಮ್ಮ ಬಳಿಯಲ್ಲಿದ್ದ ಅಭಯರುಚಿ ಅಭಯಮತಿಯರೆಂಬ ಅಣ್ಣ ತಂಗಿಯರನ್ನು ಚರಿಗೆಗೆಂದು ಅಟ್ಟಿ

ದರು. ಅವರು ಆ ಕಾರ್ಯಕ್ಕಾಗಿ ಊರತ್ತ ಬರುತ್ತಿರಲು ಜಿಂಕೆಯ ಜೋಡಿಯ ಮೇಲೆ ಬೀಳುವ ಹುಲಿಯಂತೆ ಚಂಡಕರ್ಮನು ಅವರ ಮೇಲೆ ಎರಗಿ ಮಾರಿಯಗುಡಿಯ ಬಳಿಗೆ ಎಳೆದುಕೊಂಡು ಹೋದ. ಆ ಎಳೆಯ ಮಕ್ಕಳು ಅದಕ್ಕೆ ಸ್ವಲ್ಪವೂ ಹೆದರಲಿಲ್ಲ. ಅಣ್ಣ ತಂಗಿಯನ್ನು, ತಂಗಿ ಅಣ್ಣನನ್ನು ಪರಸ್ಪರ ಸಮಾಧಾನ ಪಡಿಸಿದರು. ಅಪಾಯ ಕೋಟಿಗಳಿಗೆ ಈ ದೇಹವೇ ಗೇಹ; ಆದ್ದರಿಂದ ಇದರಲ್ಲಿ ಸುಖ ಹುಡುಕುವುದೆಂದರೆ ಕಲ್ಲು ಮೊರಡಿಯಲ್ಲಿ ಮಾದಳ ಫಲವನ್ನು ಅರಸಿದಂತೆ ಎಂದುಕೊಂಡರು, ಇವರು. ಜನನ ಮರಣವೆಂಬುದು ಅವರಿಗೆ 'ಮಾಡಿದ ಹೊಲನ್, ಉಂಡಮರ್ದು, ಕಂಡ ವಿಚಾರಂ.' ಆದ್ದರಿಂದಲೇ ರಾಜನ ಸುತ್ತುಮುತ್ತಿದ್ದವರು ಅವರನ್ನು 'ಪರಸಿರೆ ಪರಸಿರೆ ನೃಪೇಂದ್ರನಂ' ಎಂದು ಹೇಳಲು ಅಭಯರುಚಿಯು ಸ್ವಲ್ಪವೂ ಅಳುಕದೆ 'ನೃಪವರ, ನಿರ್ಮಲ ಧರ್ಮದಿಂದೆ ಪಾಲಿಸು ಧರೆಯಂ' ಎಂದು ಹರಸಿದ. ರಾಜನಿಗೆ ಆಶ್ಚರ್ಯದ ಗರ ಬಡಿಯಿತು. ಆ ದೇವಾಲಯವನ್ನು ಕಾಣುತ್ತಲೇ ಎಂತಹರ ಎದೆಯಾದರೂ ಒಡೆದು ಹೋಗಬೇಕು. ಅಂತಹದರಲ್ಲಿ ಈ ಎಳೆಯ ಮಕ್ಕಳು—

ಕಿತ್ತ ಕರವಾಳ್ಗಮೆನಗಂ
ಮೃತ್ಯುವಿನಂತಿರ್ದ ಮಾರಿಗಂ ಬೆದಱದೆ ನಿಂ
ದರ್ತಿಯನೆ ನುಡಿದರಿವರ ನೆ
ಗಳ್ತೆ ಕರಂ ಪಿರಿದು ಧೀರರಕಟ ಕುಮಾರರ್

ಒರೆಯಿಂದ ಕಿತ್ತ ಕತ್ತಿಯನ್ನು ಹಿಡಿದಿರುವ ತನಗೂ, ಮೃತ್ಯುವಿನಂತಿರುವ ಮಾರಿಗೂ, ಹೆದರದೆ ನನಗೆ ಮಂಗಳವನ್ನು ಕೋರುತ್ತಿರುವ ಈ ಮಕ್ಕಳ ಚರ್ಯೆ ಬಹು ಹಿರಿದಾದುದು; ಈ ಕುಮಾರರು ನಿಜವಾಗಿಯೂ ಧೀರರು —ಎಂದುಕೊಂಡ. ಆದ್ದರಿಂದ ಅವರನ್ನು ಬಲಿಕೊಡುವ ಮುನ್ನ ಅವರ ಕುಲಗೋತ್ರಗಳನ್ನು ವಿಚಾರಿಸಿದ. ಮಕ್ಕಳು ಮೊದಲು ಅದನ್ನು ಹೇಳಲಿಲ್ಲ. 'ಅಯ್ಯ, ನಿನಗೂ ಧರ್ಮಕ್ಕೂ ನರ್ಮದೆಗಿಂತ ದೂರ. ನಿನಗೆ ಯಾವುದು ಪಥ್ಯವೋ ಅದನ್ನು ಮಾಡು.

ಗುಣಿಗಳ ಗುಣರತ್ನ ವಿಭೂ
ಷಣ ಮೆಸೆವುದೆ ವಿಕಳ ಹೃದಯರಾದವರ್ಗೆ ನೃಪಾ

ಗ್ರಣಿ ಪೇಳ್ ತುಪ್ಪೇಜಿಡಿದ ದ
ರ್ಪಣದೊಳ್ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ

ಅಯ್ಯಾ ರಾಜ, ಸದ್ಗುಣವಂತರಾದವರ ಗುಣವೆಂಬ ರತ್ನದ ಒಡವೆ ಪಾಪಿಗಳಿಗೆ ಒಪ್ಪುತ್ತದೆಯೆ? ಜಿಡ್ಡುಹತ್ತಿದ ಕನ್ನಡಿಯಲ್ಲಿ ಪ್ರತಿಬಿಂಬ ಪ್ರಕಾಶಿಸುತ್ತದೆಯೆ? ಹೇಳು–ಎಂದು ಅಭಯರುಚಿ ಕುಮಾರನು ಹೇಳುತ್ತಲೆ ಆತನ ದಂತಕಾಂತಿಯೆಂಬ ಬೆಳುದಿಂಗಳಲ್ಲಿ ಮಾರಿದತ್ತನ ಪಾಪಸಮೂಹವೆಂಬ ದುಂಬಿಗಳು ದೂರವಾದವು; ಆತನ ಕರಕಮಲಗಳು ಮುಗಿದುವು. ರಾಜನ ಪರಿವಾರದವರೂ ಆ ಬಾಲಕನ ಮುಂದೆ ತಲೆ ಬಾಗಿದರು. ಇದನ್ನು ಕಂಡು ಕುಮಾರನು ಮೆಚ್ಚಿ 'ಭಲಾ ರಾಜೇಂದ್ರ.'

ಎಂತು ಬೆಸಗೊಂಡೆ ಬೆಸಗೊಂ
ಡಂತಿರೆ ದತ್ತಾವಧಾನನಾಗು ಜಯಶ್ರೀ
ಕಾಂತೆಯುಮಂ, ಪರಮಶ್ರೀ
ಕಾಂತೆಯುಮಂ ನಿನಗೆ ಕುಡುಗುಮೀ ಸತ್ಕಥನಂ

ಹೇಗೆ ಪ್ರಶ್ನೆಮಾಡಿದೆಯೋ ಹಾಗೆಯೇ ಕೇಳುವುದಕ್ಕೂ ಸಿದ್ಧನಾಗು, ನಾನು ಈಗ ಹೇಳುವ ಕಥೆ ನಿನಗೆ ಜಯಲಕ್ಷ್ಮಿಯನ್ನೂ ಮೋಕ್ಷಲಕ್ಷ್ಮಿಯನ್ನೂ ಒಟ್ಟಿಗೇ ಕೊಡುತ್ತದೆ—ಎಂದು ಹೇಳಿ ತನ್ನ ಕಥೆಯನ್ನು ಪ್ರಾರಂಭಿಸಿದನು. ಮುಂದೆ ಬರುವ 'ಅಹಿಂಸೆ'ಯ ಕಥೆಗೆ ಮಾರಿದತ್ತನ ಕಥೆ ಎದ್ದು ಕಾಣುವ ಹಿನ್ನೆಲೆಯನ್ನು ಒದಗಿಸಿದೆ. ಆ ಅಹಿಂಸೆಯ ಕಥೆಯೆಂದರೆ ಅಭಯರುಚಿ, ಅಭಯಮತಿಯರ ಜನ್ಮಾಂತರಗಳ ವೃತ್ತಾಂತವೇ.

ಉಜ್ಜಯನಿಯ ಯಶೌಘರಾಜ–ಚಂದ್ರಮತಿರಾಣಿಯರ ಹೊಟ್ಟೆಯಲ್ಲಿ ಕಬ್ಬಿನ ಬಿಲ್ಲಿಗೂ ಮೊಗ್ಗಿನ ಹೆದೆಗೂ ಹುಟ್ಟಿದ ಜನಮೋಹನ ಬಾಣದಂತೆ ಮಗನೊಬ್ಬ ಹುಟ್ಟಿದ. ಆತ

ನೋಡುವ ಕಣ್ಗಳ ಸಿರಿ, ಮಾ
ತಾಡುವ ಬಾಯ್ಗಳ ರಸಾಯನಂ, ಸಂತಸದಿಂ
ಕೂಡುವ ತೋಳ್ಗಳ ಪುಣ್ಯಂ
ನಾಡಾಡಿಯೆ ರೂಪು ಕುವರ ವಿದ್ಯಾಧರನಾ

ಎಂಬಷ್ಟು ಸುಂದರನಾಗಿ, ಜನಮನೋಹರನಾಗಿ ಬೆಳೆದು, ಅಮೃತಮತಿ

ಯೆಂಬ ದಿವ್ಯ ಸುಂದರಿಯನ್ನು ವಿವಾಹವಾದ. ಮುಪ್ಪಿನ ತಂದೆ ತಪೋವನಕ್ಕೆ ಹೋಗಲು ರಾಜಕುಮಾರ ಯಶೋಧರ ಸಿಂಹಾಸನವೇರಿದ.

ಅಳವಡೆ ಭುಜದೊಳ್ ಮೃಗಮುದ
ತಿಳಕದ ಪೊಲ್ ಸಕಲ ಧರಣಿ ಯೌವನ ಭೂಷಾ
ವಳಿಯೆನೆ ತಿರ್ದುವನಾ ನೃಪ
ಕುಲ ಶೇಖರನಮೃತಮತಿಯ ಮುಖದರ್ಪಣದೊಳ್

ರಾಜ್ಯಭಾರವು ಆತನ ತೋಳುಗಳ ಮೇಲಿನ ಕಸ್ತೂರಿ ತಿಲಕದಂತಾಯಿತು. ಆತನು ಅಮೃತಮತಿಯ ಮುಖವೆಂಬ ಕನ್ನಡಿಯಲ್ಲಿ ತನ್ನ ಯೌವನವೆಂಬ ಆಭರಣವನ್ನು ಸರಿಪಡಿಸಿಕೊಳ್ಳುತ್ತಿದ್ದನಂತೆ! ಕವಿಯು ಅವರಿಬ್ಬರ ದಾಂಪತ್ಯ ಜೀವನವನ್ನು ಎಷ್ಟು ಸಾರವತ್ತಾಗಿ, ಸಂಗ್ರಹವಾಗಿ, ಮನೋಹರವಾಗಿ ವರ್ಣಿಸಿದ್ದಾನೆ! ಇಂತಹ ಸುಂದರ ದಾಂಪತ್ಯಕ್ಕೆ ಎಂತಹ ದುರಂತ ಕಾದಿದೆ! ಒಂದುದಿನ ಹೃದಯಪ್ರಿಯರಾದ ರಾಜ ರಾಣಿಯರು ಪರಸ್ಪರರ ತೋಳ್ತೆಕ್ಕೆಯಲ್ಲಿ ಮರೆದೊರಗಿರುವಾಗ ಮಗ್ಗುಲ ಗಜಶಾಲೆಯಿಂದ ಸಂಗೀತವೊಂದು ಕೇಳಿಬರುತ್ತದೆ. ಆ 'ನುಣ್ಪಿನ ನಿದ್ರೆಗೆ ಕತಕ ಬೀಜಮಾಯ್ತೆನೆ'—ಆ ಗಾನ ನಿದ್ರೆ ತಿಳಿಯಾಗುವಂತಹ ಚಿಲ್ಲದ ಬೀಜವಾಯ್ತಂತೆ! -ರಾಣಿ ಎಚ್ಚೆತ್ತಳು. ಅದನ್ನು ಕೇಳುತ್ತಲೆ ಆಕೆ 'ಮುಟ್ಟಿದ ಮನಮಂ ತೊಟ್ಟನೆ ಪಸಾಯದಾನಂಗೊಟ್ಟಳ್'-ಸಂಗೀತಕ್ಕೆ ಸೋತ ಮನಸ್ಸನ್ನು ಸಂಗೀತಗಾರನಿಗೆ ಅರ್ಪಿಸಿದಳು—ಆ ಸಂಗೀತಗಾರನನ್ನು ನೋಡುವ ಕೂಡುವ ಚಿಂತೆ ಬೆಳೆಯಿತು. ಬೆಳಗಾಗುತ್ತಲೆ ತನ್ನ ದೂತಿಯನ್ನು ಆ ಸಂಗೀತಗಾರನ ಬಳಿಗೆ ದೂಪಟ್ಟಿದಳು, ಆಕೆ ಅವನನ್ನು ನೋಡಿಬಂದು ಅವನ ವರ್ಣನೆ ಮಾಡುವುದು ಎಂತಹ ಕಾಮುಕಳನ್ನೂ ಜಿಹಾಸೆಗೊಳಿಸಬಹುದಿತ್ತು. 'ಪಱಿಂದಲೆ, ಕುಳಿನೊಸಲ್, ಅಳಿಗಣ್, ನೊಜಿವಾಯ್, ಹಪ್ಪಳಿಕೆ ಮೂಗು, ಮುರುಟಿದ ಕಿವಿ, ಬಿಬ್ಬಿಱುವಲ್, ಕುಸಿಗೊರಲ್, ಇಳಿದೆರ್ದೆ, ಪೊರಂಟಬೆನ್, ಬಾತ ಬಸಿರ್, ಅಡಂಗಿದ ಜಘನ, ಅವನದು. ಕರಿತೊಗಲನ್ನು ಮುಚ್ಚಿದ ಹಳೆಯ ಗುಳಿಯನ್ನು ತೆರೆದಾಗ ಬರುವ ದುರ್ನಾತ ಅವನ ದೇಹದ್ದು. ಮುದಿಕರಡಿಯ ಮುದಿ ತೊಗಲಿನಂತೆ ಕಪ್ಪಾದ ದೇಹ, ತಾಳೆ ಹಣ್ಣಿನ ಮೂಟೆಯಂತೆ ಗಂಟು ಗಂಟಾದ ಮೈ, ಬೇರೊಣಗಿದ ಡೊಂಕು

ಮುದನಂತೆ ಕೊಂಕಾದವನು. ಅವನ ಗೂನು ಬೆನ್ನು. ಡೊಂಕುಮುರಿದ ಕತ್ತೆಯ ಕಾಲುಗಳಂತಿರುವ ಆ ಕಾಲು- ಇಂತಹವನನ್ನು ದಿವ್ಯಸುಂದರಿಯಾದ ರಾಣಿ, ಮನ್ಮಥನಂತಹ ಗಂಡನಿರುವಾಗ, ಮೋಹಿಸುವುದುಂಟೆ? ಆದರೆ ರಾಣಿಯ ವಿಚಾರಸರಣಿ ಅಪಾಮಾರ್ಗವನ್ನು ಹಿಡಿಯಿತು. 'ಕಸ್ತೂರಿ ಕಪ್ಪಾದರೇನು, ಶ್ರೀಗಂಧ ಗಂಟಾದರೇನು, ಮನ್ಮಥನ ಬಾಣ ಡೊಂಕಾದರೇನು? 'ಮರುಳೆ, ಪೊಲ್ಲಮೆಯ ಲೇಸು ನಲ್ಲರ ಮೆಯ್ಯೊಳ್'—ಒಲಿದವರು ಕುರೂಪಿಗಳಾಗಿದ್ದರೇ ಒಳ್ಳೆಯವರು—ಅಲ್ಲದೆ

ಒಲವಾದೊಡೆ ರೂಪಿನ ಕೋ
ಟಲೆಯೇವುದೊ, ಕಾರ್ಯಮಾಗೆ ಕಾರಣದಿಂದಂ
ಫಲಮೇನಿಂದೆನಗಾತನೆ
ಕುಲದೈವಂ ಕಾಮದೇವನಿಂದ್ರಂ ಚಂದ್ರಂ

ಪ್ರೇಮ ಹುಟ್ಟಿದಮೇಲೆ ರೂಪಿನ ಗೋಳೇಕೆ? ಕಾರ್ಯವಾಗುತ್ತಿರುವಾಗ ಕಾರಣವನ್ನು ಕಟ್ಟಿಕೊಂಡೇನು? ಈಗ ಆ ಅಷ್ಟವಂಕನೆ ನನಗೆ ಇಷ್ಟ ದೈವ, ಕಾಮದೇವ, ಇಂದ್ರ, ಚಂದ್ರ—ಎಂದಳು. ದಾಸಿಗೆ ಲಂಚಕೊಟ್ಟು, ಅಷ್ಟವಂಕನಲ್ಲಿಯೇ ಹಗಲು ರಾತ್ರಿ ಆಕೆ ಮುಳುಮಗ್ನಳಾದಳು. ಬೇವನ್ನು ಮೆಚ್ಚಿದ ಕಾಗೆಗೆ ಮಾವು ಅರುಚಿಯಾಯಿತು. ರಾಜನಲ್ಲಿ ಉದಾಸೀನ ಹುಟ್ಟಿತು. ಇದನ್ನು ಗಮನಿಸಿದ ರಾಜ ಒಂದು ರಾತ್ರಿ ನಿದ್ರೆ ಬಂದವನಂತೆ ನಟಿಸಿ, ಅವಳು ಜಾರವೃತ್ತಿಗೆ ಹೊರಟೊಡನೆಯೇ ಅವಳನ್ನು ಹಿಂಬಾಲಿಸಿದ. ಅವನು ಕಂಡುದೇನು? ಅರಸಿ ತಡವಾಗಿಬಂದಳೆಂದು ಕುಪಿತನಾದ ಅಷ್ಟವಂಕ ಅವಳು ತಂದ ಪುಷ್ಪ ಗಂಧ ತಾಂಬೂಲಗಳನ್ನು ಕಿತ್ತೆಸೆದು, ಒಕ್ಕಲಿಗನು ನಾರನ್ನು ಬಡಿಯುವಂತೆ ಅವಳನ್ನು ಬಡಿದ, ಮೈಯೆಲ್ಲಾ ಬಾಸುಳು ಮೂಡುವಂತೆ ಮಾಡಿದ. ಪೆಟ್ಟಿನಿಂದ ಕೇರೆ ಹಾವು ಹೊರಳುವಂತೆ ಅವಳು ಅವನ ಕಾಲಮೇಲೆ ಹೊರಳಾಡುತ್ತಾ, ತನ್ನನ್ನು ಕ್ಷಮಿಸುವಂತೆ ಬೇಡಿಕೊಂಡಳು. ತಡಕ್ಕೆ ಕಾರಣನಾದ ತನ್ನ ಗಂಡನನ್ನು ಬಯ್ದಳು.

ಕಿವಿ ಸವಿ ದನಿ. ಕಣ್ ಸವಿ ರೂ
ಪವಧರಿಸಲೆ ಗಜವೆಡಂಗ ನೀನುಳ್ಳೊಡೆ ನಾ
ವವಳೆನಗೆ ಮಿಕ್ಕ ಗಂಡರ್
ಸವ ಸೋದರರೆಂದು ಕಲಿಸಿದಳ್ ನಂಬುಗೆಯಂ

ರಾಣಿ ಅಮೃತಮತಿ ಅದಕ್ಕೆ ಅವಕಾಶಕೊಡದೆ, ತಾಯಿ ಮಗನನ್ನು ಊಟಕ್ಕೆ ಆಹ್ವಾನಿಸಿ, ಅವರಿಬ್ಬರಿಗೂ ವಿಷವಿಟ್ಟು ಕೊಂದು ಹಾಕಿದಳು. ಸತ್ತವರಿಬ್ಬರೂ ಏಳು ಜನ್ಮಗಳನ್ನು ಎತ್ತಿ, ಬಹಳ ಸಂಕಟಗಳನ್ನು ಅನುಭವಿಸಿ, ಕಡೆಗೆ ಅಭಯರುಚಿ ಅಭಯಮತಿಗಳಾಗಿ ಹುಟ್ಟಿದರು. ಕೇವಲ ಹಿಟ್ಟಿನಕೋಳಿಯ ಕೊಲೆಯಿಂದಾದ ಅನರ್ಥಪರಂಪರೆಗಳ ಈ ಕಥೆಯನ್ನು ಕೇಳಿದ ಮಾರಿದತ್ತನು ತನ್ನ ರಾಜ್ಯದಲ್ಲಿ ಪ್ರಾಣಿಹಿಂಸೆಯನ್ನು ನಿಲ್ಲಿಸಿ, ತಾನೂ ಧರ್ಮಪರನಾದ.

ಈ ಕಥೆಯ ಮೂಲಕ ಕವಿಯು ದಿವ್ಯಸಂದೇಶವೊಂದನ್ನು ಮಾನವ ಜನಾಂಗಕ್ಕೆ ನೀಡಿದ್ದಾನೆ- 'ಮನಸಿಜನ ಮಾಯೆ ವಿಧಿವಿಳಸಿತದ ನೆರಂ ಬಡೆಯೆ ಕೊಂದು ಕೂಗದೆ ನರರಂ'-'ಮನ್ಮಥನ ಮಾಯೆಗೆ ಅದೃಷ್ಟದ ನೆರವೂ ಸಿಕ್ಕಾಗ, ಅದು ಮನುಷ್ಯರನ್ನು ಕೊಂದು ಅಬ್ಬರಿಸುತ್ತದೆ'-ಎಂದು. ಕಾಮದ ಕೇಡನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವ ಈ ಕಥೆಯನ್ನು ಕವಿಯು ವಾದಿರಾಜನ ಸಂಸ್ಕೃತ ಗ್ರಂಥದಿಂದ ಎತ್ತಿಕೊಂಡಿರುವನಾದರೂ ಇದು ಅದರ ಭಾಷಾಂತರವಲ್ಲ. ಜನ್ನಕವಿಯ ಪದ್ಯಗಳು ಭಾವಪರಿಪುಷ್ಟಿಯಿಂದ ತುಂಬಿ ತುಳುಕುತ್ತಿವೆ. ಆತನ ಶೈಲಿಯಲ್ಲಿ ಸರಳತೆಯಿದೆ, ಸೌಲಭ್ಯವಿದೆ, ಲಾಲಿತ್ಯವಿದೆ. ಪಾತ್ರಗಳು ಜೀವಪೂರ್ಣವಾಗಿವೆ. ಅದರಲ್ಲಿಯೂ ಅಮೃತಮತಿಯ ಪಾತ್ರಸೃಷ್ಟಿಯಲ್ಲಿ ಆತನು ಕುಶಲ ಕಲೆಗಾರನಾಗಿದ್ದಾನೆ. ದುರಂತ ಪ್ರಣಯದ ದಿವ್ಯಸುಂದರ ಪ್ರತಿಮೆಯೊಂದನ್ನು ದಿಗ್ದರ್ಶಿಸಿದ್ದಾನೆ. ಅವಳು ಅದೃಷ್ಟದ ಕೈಗೊಂಬೆ. ಅವಳ ಕಾಮ ದುರದೃಷ್ಟದ ಹುಚ್ಚು ಹೊಳೆಗೆ ಸಿಕ್ಕಿ, ಸುಳಿಗೆ ಸಿಕ್ಕ ಹುಲ್ಲು ಕಡ್ಡಿಯಂತೆ ಅಸಹಾಯಕವಾಗಿ ಹೋಗಿದೆ. ಅವಳನ್ನು ಕಂಡು ನಾವು ಮರುಗುತ್ತೇವೆ. ನಿಡುಸುಯ್ಯುತ್ತೇವೆ. ಅದೃಷ್ಟದ ದುರ್ಭರ ಶಕ್ತಿಯನ್ನು ಕಂಡು ನಡುಗುತ್ತೇವೆ. ಹಾಗೆಯೇ ಯಶೋಧರನ ಧೃತಿಯನ್ನೂ ಮನೋನಿಗ್ರಹವನ್ನೂ ಕಂಡು ನಾವು ಅಚ್ಚರಿಪಡುತ್ತೇವೆ. ಸನ್ನಿವೇಶರಚನಾ ಸಾಮರ್ಥ್ಯದಲ್ಲಿ ಸುಂದರವಾದ ವರ್ಣನೆಗಳಲ್ಲಿ ಜನ್ನ ಕವಿಯ ಪ್ರತಿಭೆ ಬಹು ಉನ್ನತವಾದುದು. ಪ್ರಕೃತಿವರ್ಣನೆಯಲ್ಲಿ ಆತನ ಕೌಶಲವನ್ನು ಮೇಲೆಯೇ ಕಂಡಿದ್ದೇವೆ. ಯಶೋಧರನು ಸತ್ತು ನವಿಲಾಗಿ ಹುಟ್ಟಿದಾಗಿನ ಈ ವರ್ಣನೆಯನ್ನು ನೋಡಿ

ನವರತ್ನದ ಪಂಜರದೊಳ್
ದಿವಿಜಶರಾಸನದ ಮಯೂರಿಯಿರ್ದವೋಲ್
ತೆತ್ತುವ ಸೋಗೆಯ ಸುತ್ತಿನೊಳ್
ದನ ಕೇಕಿಯ ಭಂಗಿ ಲೋಕಮಂ ಸೋಲಿಸುಗುಂ

ನವರತ್ನದ ಪಂಜರದಲ್ಲಿ ಕಾಮನಬಿಲ್ಲಿನ ನವಿಲು ಇರುವಂತೆ, ತನ್ನ ಪುಕ್ಕಗಳನ್ನು ಎತ್ತಿ, ಸುತ್ತಲೂ ನರ್ತಿಸುವ ನವಿಲ ಭಂಗಿ ಲೋಕವನ್ನೇ ಸೋಲಿಸುತ್ತದೆ. ಮನಸ್ಸನ್ನು ಸೂರೆಗೊಳ್ಳುತ್ತದೆ. ಇಂತಹ ಸುಂದರ ವರ್ಣನೆ ಕನ್ನಡ ಸಾಹಿತ್ಯದಲ್ಲಿ ಎಷ್ಟು ದೊರೆತಾವು ?

ಕವಿಯ ಎರಡನೆಯ ಕಾವ್ಯ ‘ ಅನಂತನಾಥ ಪುರಾಣ ’ ವನ್ನು ಬರೆಯುದು ‘ ಯಶೋಧರ ಚರಿತ್ರೆ ’ ಯನ್ನು ಬರೆದ ಇಪ್ಪತ್ತು ವರ್ಷಗಳ ಮೇಲೆ. ಈ ವೇಳೆಗೆ ಕವಿಯ ವಯಸ್ಸಿನೊಡನೆ ಆತನ ಬುದ್ಧಿಯೂ ಪರಿಣತವಾಗಿದೆ, ಮನಸ್ಸೂ ಪರಿಪಕ್ವವಾಗಿದೆ, ಧರ್ಮಾನುರಕ್ತಿಯೂ ಸ್ಥಿರಗೊಂಡಿದೆ. ಆತ್ಮೋದ್ಧಾರಕ್ಕೆ ಸಹಾಯಕವಾದ ಜಿನಚರಿತೆಯನ್ನು ಬರೆದು ಧನ್ಯನಾಗಲು ಆತನು ಹೊರಟಿದ್ದಾನೆ. ಇತರ ಜಿನಚರಿತಕಾರರಂತೆ ಜನ್ನನಿಗೂ ಗುಣಭದ್ರನ ಉತ್ತರ ಪುರಾಣವೇ ತನ್ನ ಕಾವ್ಯಕಥೆಗೆ ಮೂಲ. ಚಾವುಂಡರಾಯನ ‘ ತ್ರಿಷಷ್ಟಿಶಲಾಕಾಪುರುಷ ಚರಿತೆ ’ ಯನ್ನೂ ಆತ ಓದಿರಬಹುದು. ಹದಿನಾಲ್ಕನೆಯ ತೀರ್ಥಂಕರನಾದ ಅನಂತನಾಥ ತೀರ್ಥಂಕರನ ಜೀವನ ಚರಿತ್ರೆಯನ್ನು ಒಳಗೊಂಡ ಧರ್ಮಗ್ರಂಥವಾದುದರಿಂದ ಕವಿಯು ತನ್ನ ಈ ಕಾವ್ಯದ ಕಥಾಕಟ್ಟಡದಲ್ಲಿ ಸರ್ವತಂತ್ರ ಸ್ವತಂತ್ರನಾಗಿ ವ್ಯವಹರಿಸುವಂತಿಲ್ಲ. ನಿರ್ದಿಷ್ಟವಾದ ಒಂದು ಚೌಕಟ್ಟಿನಲ್ಲಿಯೇ ಅದನ್ನು ಅಳವಡಿಸಬೇಕಾಗಿದೆ. ಇತರತೀರ್ಥಂಕರರ ಜೀವನದಂತೆ ಅನಂತನಾಥಜಿನನ ಜೀವನದಲ್ಲಿಯೂ ಗರ್ಭಾವತರಣ, ಜನ್ಮಾಭಿಷವಣ, ಪರಿನಿಷ್ಕ್ರಮಣ, ಕೇವಲ ಜ್ಞಾನ, ಪರಿನಿರ್ವಾಣ ಎಂಬ ಪಂಚಕಲ್ಯಾಣಗಳ ಹಂದರದ ಮೇಲೆಯೇ ಕಥೆಯ ಬಳ್ಳಿ ಹರಡಿಕೊಳ್ಳಬೇಕು. ಜೈನತತ್ತ್ವ ನಿರೂಪಣೆ, ನಿರ್ವಾಣಸಾಧಕಗಳಾದ ವ್ರತ ತಪಸ್ಸುಗಳೂ ಇಲ್ಲಿ ಅನಿವಾರ್ಯವಾದ ಅಂಗಗಳಾಗಿಯೇ ಇವೆ. ಬರಿಯ ಇಷ್ಟೇ ಆಗಿದ್ದರೆ ಅನಂತನಾಥಪುರಾಣ ಕೇವಲ ಒಂದು ಜೈನಧರ್ಮಗ್ರಂಥವಾಗಬಹುದಿತ್ತು. ಆದರೆ ಆದಿಕವಿ ಪಂಪನು ಧರ್ಮದೊಡನೆ ಕಾವ್ಯಧರ್ಮ

ವನ್ನೊತರುವ ಒಂದು ಮಾದರಿಯನ್ನು ತನ್ನ 'ಆದಿಪುರಾಣ' ದಲ್ಲಿ ನಿರ್ಮಿಸಿದ್ದುದರಿಂದ, ಜನ್ನನು ಅದನ್ನು ಅನುಸರಿಸಿ ತನ್ನ ಕಾವ್ಯ ಸರ್ವಜನಾದರಣೀಯವಾಗುವಂತೆ ಮಾಡಿದ್ದಾನೆ. ಇದರಲ್ಲಿನ ಜೈನ ತತ್ವ ಜಿನಮತಾನುಯಾಯಿಗಳ ಆಕರ್ಷಣೆಯಾಗಿದ್ದರೆ, ಅನಂತಜಿನನ ಬಾಲಲೀಲೆ, ಯೌವನ ವಿಲಾಸ ಮದುವೆ, ವೈರಾಗ್ಯ, ತಪಸ್ಸು–ಇತ್ಯಾದಿಗಳು ಮಾನವೀಯ ಮೌಲ್ಯಗಳಾಗಿ ಎಲ್ಲರ ಮನಸ್ಸನ್ನೂ ತಣಿಸಬಲ್ಲವಾಗಿವೆ. ಪೂರ್ವಕಾವ್ಯಗಳ ಆಧಾರ ಮೇಲ್ಪಂಗ್ತಿಗಳನ್ನು ಬಳಸಿಕೊಂಡಿದ್ದರೂ, ಅದ್ಭುತ ಪ್ರತಿಭಾಶಾಲಿಯಾದ ಜನ್ನನು ಅನೇಕ ನೂತನ ಸನ್ನಿವೇಶಗಳನ್ನು ಕಲ್ಪಿಸಿ, ತನ್ನ ಕಾವ್ಯಕ್ಕೆ ಮನ್ನಣೆಯನ್ನು ಗಳಿಸಿಕೊಟ್ಟಿದ್ದಾನೆ.

'ಅನಂತನಾಥ ಪುರಾಣ' ಸುಮಾರು ೧೪೦೦ ಪದ್ಯಗಳನ್ನು ಒಳಗೊಂಡ ಹದಿನಾಲ್ಕು ಆಶ್ವಾಸಗಳ ದೊಡ್ಡ ಚಂಪೂಗ್ರಂಥ. ಈ ಮಹಾಕಾವ್ಯಕ್ಕೆ ಶಕ ೧೧೫೨ರ ವಿಕೃತಿ ಸಂವತ್ಸರದ ಚೈತ್ರ ಶುದ್ಧ ದಶಮಿಯಂದು ದೋರಸಮುದ್ರದ ಪಾರ್ಶ್ವಜಿನೇಶ್ವರನ ದ್ವಾರದ ಮುಂದೆ 'ಸುಪ್ರತಿಷ್ಠೆ' ಯನ್ನು ಮಾಡಿದಂತೆ ಕವಿಯು ಹೇಳಿಕೊಂಡಿದ್ದಾನೆ. ಈ ಜಾತಿಯ ಇತರ ಜೈನಪುರಾಣಗಳಂತೆ ಇಲ್ಲಿಯಾದರೂ ಅನಂತ ತೀರ್ಥಂಕರನ ಭವಾವಳಿಗಳೂ ಪಂಚಕಲ್ಯಾಣಗಳೂ ಸಂಪ್ರದಾಯರೀತಿಯಲ್ಲಿ ವರ್ಣಿತವಾಗಿವೆ. ಇದರ ಶೈಲಿಯೂ ಸಂಸ್ಕೃತಭೂಯಿಷ್ಠವಾಗಿ ಪ್ರೌಢವಾಗಿದೆ. 'ಯಶೋಧರ ಚರಿತ್ರೆ' ಯನ್ನು ಅಷ್ಟು ತಿಳಿಯಾಗಿ, ಲಲಿತವಾಗಿ ಬರೆದ ಕವಿಯೇ ಇದನ್ನೂ ಬರೆದನೆಂದು ಹೇಳಿದರೆ ನಂಬುವುದಕ್ಕೂ ಆಗದಷ್ಟು ಪ್ರೌಢವಾಗಿದೆ, 'ಅನಂತನಾಥ ಪುರಾಣ'. ಜನ್ನ ಕವಿಯು ಮನಸ್ಸು ಮಾಡಿದರೆ ಸರಳವಾಗಿ ಮನೋಹರವಾಗಿ ಬರೆಯಬಲ್ಲ. 'ಅನಂತನಾಥಪುರಾಣ'ದ ಹಲವು ವರ್ಣನಾಭಾಗಗಳಲ್ಲಿ ಇದು ಕಂಡುಬರುತ್ತದೆ. ಬಹುಶಃ ಕವಿಯು ತನ್ನ ಈ ಕಾವ್ಯಕ್ಕೆ 'ಮಹಾಕಾವ್ಯ' ದ ಪಟ್ಟವನ್ನು ಕಟ್ಟ ಹೊರಟು, ತನ್ನ ಪಾಂಡಿತ್ಯವನ್ನೆಲ್ಲಾ ಇದಕ್ಕೆ ಧಾರೆಯೆರೆದನೆಂದು ತೋರುತ್ತದೆ. ಇದರ ಫಲವಾಗಿ ಕಾವ್ಯ ಬಿರುಸಾದುದು ಮಾತ್ರವೇ ಅಲ್ಲ, ಅಷ್ಟಾದಶವರ್ಣನೆಗಳ ಹಾವಳಿ ಹೆಚ್ಚಿ, ಔಚಿತ್ಯಕ್ಕೆ ಅಪೋಹತಂದಿವೆ. ಪಾಪ, ತೀರ್ಥಂಕರನಾಗುವವನು ವೇಶ್ಯಾವಾಟಿಯಲ್ಲಿ ಚಂದ್ರಿಕಾವಿಹಾರಕ್ಕೆ ಹೊರಡಬೇಕಾಗಿದೆ. ಇದೆಂ

ತಹ ರಸಾಭಾಸ! ಸಂಪ್ರದಾಯಕ್ಕೆ ಶರಣಾದಾಗ ಎಂತಹ ದೊಡ್ಡ ಕವಿಯಾದರೂ ಹೇಗೆ ಮುಗ್ಗರಿಸುವನೆಂಬುದಕ್ಕೆ ಇದೊಂದು ಒಳ್ಳೆಯ ಉದಾಹರಣೆ.

ಜನ್ನ ಕವಿಯು 'ಬಾಳಬಟ್ಟೆ ಪರಮಾಗಮ' ವೆಂದು ಹೇಳಿಕೊಂಡು ಆರಂಭಿಸಿರುವ 'ಅನಂತನಾಥ ಪುರಾಣ'ದಲ್ಲಿ ಶೃಂಗಾರದ ನಿರೂಪಣೆ ಒಂದು ಇತಿಮಿತಿಯಲ್ಲಿದ್ದರೆ ಚನ್ನಾಗಿತ್ತು. ಆದರೆ ಕವಿಗೆ ಶೃಂಗಾರದಲ್ಲಿ ಒಲವು ಹೆಚ್ಚು. ಆತ ತನ್ನನ್ನು 'ಸೊಬಗಿನಭಿನವ ಮದನಂ ಎಂದು' ಹೆಮ್ಮೆಯಿಂದ ಹೇಳಿಕೊಂಡು ಅದರ ಸ್ವರೂಪವನ್ನು ದಿಗ್ದರ್ಶಿಸುತ್ತಾನೆ—

ಉಡೆ ಬಾಳಕಿಯರ ಪರಿಕ್ಕೆ
ಮಡುಕಿಂದಂ ಪಱಿದ, ಮುಂಜಿ, ಚಾಕುಳಿಯರ ಬಾ
ಯ್ಕುಡಿವಡೆದ, ಸೆಳೆದು ಬದ್ದೆಯ
ರುಡಿಸಿದೊಡುಡ ಕಲ್ತ ಕೊವರನಭಿನವಮದನಂ

ಬಾಲಕಿಯರ ಹರಿದಾಡುವ ಕೈಗಳಿಂದ ಹರಿದ ಉಡುಗೆ, ವ್ಯಾಕುಲವತಿಯರ ಕಚ್ಚುವಿಕೆಗೆ ಒಳಗಾದ ಮೌಂಜಿ, ಭದ್ರೆಯರು ಎಳೆದುಕೊಂಡು ಉಡಿಸಲಾಗಿ ಉಡುವುದನ್ನು ಕಲಿತ ಕುಮಾರ, ಈ ಅಭಿನವಮದನ. ಅಷ್ಟೆ ಅಲ್ಲ,

ನುಂಗಿಯುಗುಳ್ವಬಲೆಯರ ದಶ
ನಂಗಳ ನಲಿಗೆರೆಗಳಲ್ಲದೆಳ್ಳಿಕ್ಕಲ್ಕಿ
ಲ್ಲಂಗಮೆನೆ ಸಂದ ಸೊಬಗಿನ
ಜಂಗಮಶಾಸನವೆನಿಪ್ಪ ಸುರತವಿಳಾಸಂ

ಮತ್ತೆ ಮತ್ತೆ ಕಚ್ಚುತ್ತಿರುವ ಅಬಲೆಯರ ಹಲ್ಲುಗಳಿಂದಾದ ಕೋಮಲವಾದ ಗೆರೆಗಳು ಎಳ್ಳುಕಾಳಷ್ಟು ಎಡೆಯಿಲ್ಲದಂತೆ ಆತನ ದೇಹವನ್ನೆಲ್ಲ ತುಂಬಿವೆಯಂತೆ! ಆತನು ಸೌಂದರ್ಯದ ಜಂಗಮಶಾಸನ (ಮೈಮೇಲಿನ ಗೆರೆಗಳೇ ಅಕ್ಷರಗಳು)ವೆಂದು ಪ್ರಸಿದ್ಧನಾಗುವಷ್ಟು ಆತನು ಸುರತವಿಲಾಸಿ. – ಇಂತಹ ರಸಕವಿ ಕಾವ್ಯಕರ್ಮಕ್ಕೆ ಕೈಯಿಟ್ಟಾಗ ಶೃಂಗಾರ ನಿರೂಪಣೆಗಾಗಿ ತನ್ನ ಪ್ರತಿಭೆಯನ್ನು ವಿನಿಯೋಗಿಸುವುದು ಸಹಜವಾಗಿಯೇ ಇದೆ. ಪಾಪ! ಕವಿ ತಾನೆ ಏನು ಮಾಡುತ್ತಾನೆ? ಕನ್ನಡ ಸಾಹಿತ್ಯದ ವೀರಯುಗ ಕಳೆದು ಹೋಗಿತ್ತು. 'ಸ್ತ್ರೀರೂಪಮೆ ರೂಪಂ, ಶೃಂಗಾರಮೆ ರಸಂ ಎಂಬ ನೇಮಿಚಂದ್ರನ ಸೂತ್ರ ಜನಾಭಿರುಚಿಯ ಪ್ರತಿಬಿಂಬ ಮಾತ್ರ. ಕವಿ ಜನ್ನನೂ

ಜನಾಭಿರುಚಿಯ ನಾಡಿಯನ್ನು ನೋಡಿಯೇ ಕಾರ್ಯರಂಗಕ್ಕೆ ಇಳಿದಿದ್ದಾನೆ. 'ಕಟ್ಟೆಯುಮೇನೋ ಮಾಲೆಗಾಱನ ಪೊಸ ಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೆ? -ಮಾಲೆಗಾರನು ಹೊಸ ಹೂವಿನ ಮಾಲೆಯನ್ನು ಕಟ್ಟಿ ಏನು ಪ್ರಯೋಜನ? ಅದನ್ನು ಮುಡಿಯುವ ರಸಿಕರಿಲ್ಲದಿದ್ದರೆ ಇದು ಬಾಡಿಹೋಗುವುದಿಲ್ಲವೇ? —ಎಂದು ತನ್ನ ಮಿಡುಕನ್ನು ಹೊರದೋರಿದ್ದಾನೆ. ಜನ ಮೆಚ್ಚುವಂತೆ ಕಾವ್ಯವನ್ನು ಬರೆಯಬೇಕು: ಶೃಂಗಾರವು ಜನರಿಗೆ ಮೆಚ್ಚುಗೆ; ಆದ್ದರಿಂದ ಯಥೇಚ್ಛವಾಗಿ ಶೃಂಗಾರ ನಿರೂಪಣೆ ಕಾವ್ಯದಲ್ಲಿ ಬರಬೇಕು; ಬಂದಿದೆ. ತಾನು ಭಕ್ತಿಯಿಂದ ಕಾವ್ಯವನ್ನು ಹೇಳುತ್ತೇನೆನ್ನುವಾಗಲೂ ಆತನು 'ಭಕ್ತಿನಿತಂಬಿನೀ ಪ್ರಣಯದಿಂದಂ' ಹೇಳಲಿಚ್ಛಿಸಿದೆ ಎನ್ನುತ್ತಾನೆ. ಆತನ ಸೌಂದರ್ಯವರ್ಣನೆ ಮನೋಜ್ಞವಾಗಿದೆ. ಕೋಸಲ ರಾಜನ ಪಟ್ಟದ ರಾಣಿ ಜಯಶ್ಯಾಮೆ ದಿವ್ಯ ಸುಂದರಿ. ಕೈಯಿಂದ ಮುಟ್ಟಿ ಮಾಡಿದರೆ ಸೌಂದರ್ಯಕ್ಕೆ ಕೊರತೆಯಾದೀತೆಂದು ಮನ್ಮಥನು ಅನಂಗನಾಗಿ ತನ್ನ ಮನಸ್ಸಿನಿಂದಲೇ ಆಕೆಯನ್ನು ನಿರ್ಮಿಸಿದನಂತೆ! ಆಕೆ

ಅಲರೆಂಬ ಶಶಿಬಿಂಬದೊಳ್ ಮಸೆದವೊಲ್ ಕೂರ್ಪಿಂಗಡರ್ಪಾದ ಕ
ಣ್ಮಲರ್ಗಳ್ ದರ್ಪಣರತ್ನಮಂ ತಿರುಳಮಿಂಚಿಂದೊಪ್ಪವಿಟ್ಟಂತಿರು
ಜ್ವಲಿಪಾಸ್ಯಂ ಪೊಸಮುತ್ತನಾಯ್ದಮರ್ದಿನೊಳ್ ತೊಯ್ದಂತೆ ನೇರ್ಪಟ್ಟ ನಿ
ರ್ಮಲದಂತಚ್ಛವಿ ಬೇಡಿದರ್ಗೆ ವರವೀವಂತಿರ್ಪುವಾ ಕಾಂತೆಯಾ

ಪುಷ್ಪಬಾಣವನ್ನು ಚಂದ್ರಬಿಂಬದಮೇಲೆ ಮಸೆದಂತೆ ಹೊಳೆವ ಕಮಲ ನೇತ್ರಗಳು, ರನ್ನಕನ್ನಡಿಯನ್ನು ಮಿಂಚಿನ ತಿರುಳಿನಲ್ಲಿ ಒಪ್ಪವಿಟ್ಟಂತಿರುವ ಕಾಂತಿಯುಕ್ತವಾದ ಮುಖ. ಹೊಸ ಮುತ್ತುಗಳನ್ನು ಆಯ್ದುಕೊಂಡು ಅಮೃತದಲ್ಲಿ ನೆನೆಸಿ ಸಾಲಿಗೆ ಇಟ್ಟಂತಿರುವ ಹೊಳೆವ ಹಲ್ಲುಗಳು-ಇವು ಬೇಡಿದವರಿಗೆ ಬೇಡಿದ ವರವನ್ನು ನೀಡುವಂತಿದ್ದುವು.—ಇತರ ಕವಿಗಳಲ್ಲಿ ಅಪೂರ್ವವಾದಂತಹ ಇಂತಹ ವರ್ಣನೆಗಳು ಜನ್ನಕವಿಯಲ್ಲಿ ಬೇಡಿದವರಿಗೆ ಬೇಡಿದಷ್ಟು ದೊರೆಯುತ್ತವೆ. ಪಾಮರಿಯರು, ಪ್ರಪಾಪ್ರಮದೆಯರು, ಮಾಲೆಗಾತಿಯರು, ಗಣಿಕೆಯರು, ಅಪ್ಸರಿಯರು ಜನ್ನ ಕವಿಯ ಕಾವ್ಯ ಸಾಮ್ರಾಜ್ಯದಲ್ಲಿ ಅರ್ಧದಷ್ಟನ್ನೇ ಆಕ್ರಮಿಸಿಬಿಟ್ಟಿದಾರೆ. ಜನ್ನನಿಂದ ಮುಂದೆ

ಬರುವ ಕವಿಗಳಲ್ಲಿ ಬಹುಜನರಿಗೆ ಇದೊಂದು ಅರಕೆಯಾಗದ ಬೊಕ್ಕಸ.

ತೀರ್ಥಂಕರನ ಚರಿತ್ರೆಯನ್ನು ಬರೆಯುವವರೆಲ್ಲರೂ ಸಾಮಾನ್ಯವಾಗಿ ಆಯಾ ತೀರ್ಥಂಕರನ ಕಾಲದ ಬಲದೇವ ವಾಸುದೇವರ ಕಥೆಯನ್ನೂ ಹೇಳುವ ವಾಡಿಕೆ. ಈ ಸಂಪ್ರದಾಯವನ್ನು ಅನುಸರಿಸಿ ಜನ್ನನೂ ಅನಂತ ನಾಥನ ಕಾಲದ ನಾಲ್ಕನೆಯ ಬಲದೇವ ವಾಸುದೇವರ ಕಥೆಯನ್ನು 'ಅನಂತನಾಥ ಪುರಾಣ'ದ ಅಂತ್ಯದಲ್ಲಿ ಕೊಟ್ಟಿದ್ದಾನೆ. ಈ ಕಥೆಯಲ್ಲಿ ಬರುವ ವಾಸುದೇವನ ಪೂರ್ವಜನ್ಮವೃತ್ತಾಂತವು ಕಾವ್ಯವೃಷ್ಟಿಯಿಂದ, ಮುಖ್ಯ ಕಥೆಗಿಂತಲೂ ಹೆಚ್ಚು ರಮ್ಯವಾಗಿದೆ. 'ಮನಸಿಜನ ಮಾಯೆ ವಿಧಿ ವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ' ಎಂಬ ಸೂಕ್ತಿ ಯಶೋ ಧರ ಚರಿತ್ರೆಯಷ್ಟೇ ಇಲ್ಲಿನ ಕಥೆಗೂ ಅನ್ವಯಿಸುತ್ತದೆ. ಅಲ್ಲಿ ಹೆಣ್ಣು ಹಾದಿ ತಪ್ಪಿ ದೊಡ್ಡ ದುರಂತಕ್ಕೆ ಕಾರಣಳಾದಳು. ಇಲ್ಲಿ ಗಂಡು ಪರಸ್ತ್ರೀಯನ್ನು ಕಾಮಿಸಿ ಭಯಂಕರವಾದ ದುರಂತಕ್ಕೆ ಕಾರಣನಾದ. ವಾಸುದೇವನು ಹಿಂದಿನ ಜನ್ಮದಲ್ಲಿ ಸುಷೇಣನೆಂಬ ಹೆಸರಿನಿಂದ ಪೌದನಪುರದ ರಾಜನಾಗಿದ್ದನು. ಸುನಂದೆಯೆಂಬ ಸುರಸುಂದರಿ ಆತನ ಪಟ್ಟದ ರಾಣಿ. ರಾಜನ ಪ್ರಾಣಮಿತ್ರ ನಾದ ಚಂಡಶಾಸನನು ಗೆಳೆಯನನ್ನು ಕಾಣಲೆಂದು ಬಂದು, ಆತನ ಪತ್ನಿ ಯನ್ನು ಕಾಮಿಸಿ, ಅಪಹರಿಸಿಕೊಂಡು ಹೋಗುತ್ತಾನೆ. ಇದರ ಫಲವಾಗಿ ಸುಷೇಣ ಚಂಡಶಾಸನರಲ್ಲಿ ಘೋರಯುದ್ಧ ನಡೆಯುತ್ತದೆ. ಆ ಯುದ್ಧದ ಮಧ್ಯದಲ್ಲಿ ಚಂಡಶಾಸನನು ಸುನಂದೆಯನ್ನು ವಶಪಡಿಸಿಕೊಳ್ಳುವುದಕ್ಕಾಗಿ ವಸುಷೇಣನು ಯುದ್ಧದಲ್ಲಿ ಸತ್ತನೆಂದು ಸುಳ್ಳುಹೇಳಿ, ಅವನ ನೆತ್ತರು ತುಂಬಿದ ಮಾಯಾಶಿರವನ್ನು ಅವಳ ಮುಂದೆ ಇಡುತ್ತಾನೆ. ಇದನ್ನು ನಂಬಿದ ಸುನಂದೆ ಸತ್ತು ಹೋಗುತ್ತಾಳೆ. ಅವಳನ್ನು ಅಗಲಲಾರದೆ ಚಂಡಶಾಸನನು ಅವಳ ಕಳೇಬರದೊಡನೆ ಸಹಗಮನ ಮಾಡುತ್ತಾನೆ. ಇದನ್ನು ಕೇಳಿದ ವಸುಷೇಣನು ವೈರಾಗ್ಯಪರನಾಗಿ ತಪಸ್ಸಿಗೆ ಹೊರಟುಹೋಗುತ್ತಾನೆ. ಆತನೇ ಜನ್ಮಾಂತರದಲ್ಲಿ ನಾಲ್ಕನೆಯ ವಾಸುದೇವನಾಗಿ ಹುಟ್ಟಿ ಮಧುಕೈಟ ಭನೆಂಬ ರಾಕ್ಷಸನಾಗಿ ಹುಟ್ಟಿದ ಚಂಡಶಾಸನನನ್ನು ಕೊಂದನು. ಇದರಲ್ಲಿ ವಸುಷೇಣನ ಸ್ನೇಹವೂ ಚಂಡಶಾಸನನ ಮಿತ್ರದ್ರೋಹವೂ ಸುನಂದೆಯ ಪಾತಿವ್ರತ್ಯವೂ ಹೃದಯಂಗಮವಾಗಿ ವರ್ಣಿತವಾಗಿವೆ.

ಸುಷೇಣಮಹಾರಾಜನ ರಾಣಿವಾಸದಲ್ಲಿ ಊರ್ವಶಿ, ರಂಭೆ, ಮೇನಕೆ ತಿಲೋತ್ತಮೆ ಮೊದಲಾದ ಅಪ್ಸರಸ್ತ್ರೀಯರನ್ನು ಮೀರಿಸುವ ಸುಂದರಿಯರು ಐನೂರ್ವರಿದ್ದರು. ಅವರಲ್ಲಿ ಹಿರಿಯಳು, ಪರಮ ಸುಂದರಿಯಾದ ಸುನಂದೆ. ಆಕೆಯ ಮುಗುಳ್ನಗೆಯ ಬೆಳದಿಂಗಳಲ್ಲಿ, ಆಕೆಯ ಲಾವಣ್ಯ ಸರೋವರದಲ್ಲಿ, ಆಕೆಯ ಯೌವನದ ಪುಷ್ಪಮಂಜರಿಯಲ್ಲಿ, ರಾಜನ ಕಣ್ಣುಗಳು ದುಂಬಿಯಾಗಿ ಮೀನಾಗಿ ಚಕ್ರವಾಕ ಪಕ್ಷಿಯಾಗಿ ನಲಿಯುತ್ತಿವೆ. ಆತನ ರಾಜ್ಯವೈಭವಕ್ಕೆ ತಲೆಮಣಿಯಂತಿದ್ದಾಳೆ ಆಕೆ.

ಜಯವಧು ಬಾಹುಪ್ರಾಂತದನೋಲೆ ಮಲಂಗಿದ ತೋಳ್ಗಳಂ, ಮನಃ
ಪ್ರಿಯದರಹಾಸದೊಳ್ನಲಿವ ವಕ್ತ್ರಮನೂರ್ಜಿತಲಕ್ಷ್ಮಿ ಹಾರಯ
ಷ್ಟಿಯೊಳೊಲೆಯುಯ್ಯಲಾಡೆ ಪಿರಿದಾದುರಮಂ, ನಡೆನೋಡುವಂ ಸುನಂ
ದೆಯ ಮುಖಬಿಂಬವೆಂಬ ಮಣಿದರ್ಪಣದೊಳ್ ವಸುಷೇಣ ಭೂಭುಜಂ

ವಸುಷೇಣ ಮಹಾರಾಜನು ತನ್ನ ತುಂಬು ತೋಳತಲ್ಪದಲ್ಲಿ ಜಯಲಕ್ಷ್ಮಿ ಮಲಗಿರುವ ತನ್ನ ತೋಳುಗಳನ್ನೂ, ಮನಃಪ್ರಿಯವಾದ ಮುಗುಳ್ನಗೆಯಿಂದ ನಲಿಯುತ್ತಿರುವ ಅವಳ ಮುಖವನ್ನೂ, ಭಾಗ್ಯಲಕ್ಷ್ಮಿ ಮುತ್ತಿನ ಹಾರದಲ್ಲಿ ಉಯ್ಯಾಲೆಯಾಡುತ್ತಿರುವ ತನ್ನ ವಿಸ್ತಾರವಾದ ಎದೆಯನ್ನೂ ಸುನಂದೆಯ ಚಂದ್ರಮುಖವೆಂಬ ರನ್ನಗನ್ನಡಿಯಲ್ಲಿ ಸುದೀರ್ಘವಾಗಿ ನೋಡಿಕೊಳ್ಳುತ್ತಾನಂತೆ! ಆತನ ವಿಜಯಪರಂಪರೆಯೂ ಮಹದ್ಭಾಗ್ಯವೂ ಆಕೆಯ ಮುಖ ಸೌಂದರ್ಯದಲ್ಲಿ ಕೃತಕೃತ್ಯತೆಯನ್ನು ಪಡೆದಿವೆ.

ಒಂದು ದಿನ ರಾಜನ ಬಾಲಮಿತ್ರನಾದ ಮಕರಗ್ರಾಹಪುರವರಾಧೀಶ್ವರನಾದ ಚಂಡಶಾಸನನು ಪೌದನಪುರಕ್ಕೆ ಗೆಳೆಯನನ್ನು ನೋಡಲೆಂದು ಬಂದನು. ಆತನನ್ನು ಕಂಡು ವಸುಷೇಣನ ಸಂತೋಷಕ್ಕೆ ಪಾರವೇ ಇಲ್ಲ. ಬಗೆಬಗೆಯಾದ ವಿನೋದಗಳಿಂದ ಆತನನ್ನು ಸಂತೋಷಪಡಿಸುತ್ತಾ ಹಲವು ದಿನಗಳು ತನ್ನ ಮನೆಯಲ್ಲಿಯೇ ಇಟ್ಟುಕೊಂಡ. ಕಾಮದೇವನ ಕರವಾಳಂತೆ ಇದ್ದ ಸುನಂದೆಯನ್ನು ಕಂಡು ಚಂಡಶಾಸನನ ಮನಸ್ಸು ಉದ್ವೇಗಗೊಂಡಿತು. ಆತನು ಸುದರ್ಶನನೆಂಬ ಗೆಳೆಯನೊಡನೆ ತನ್ನ ಅವಸ್ಥೆಯನ್ನು ಹೇಳಿಕೊಂಡ—

ನುಡಿಯಲ್ಬಾರದು ತೀರದು
ನುಡಿಯದೊಡೆಲೆ ಕೆಳೆಯ ನಿನಗಿಂದ ಮನಂ ಸಂ
ಡಿಡಿಯೆನ್ನದೆ ಪೇಳ್ದಪೆನೀ
ಕದು ನಂಟಿನ ಸತಿಯ ರೂಪು ಸೋಲಿಸಿತೆನ್ನಂ

ಅಯ್ಯಾ ಗೆಳೆಯನೆ, ಬಾಯಿಂದ ಈ ಮಾತನ್ನು ಆಡಲಾರದು, ಆದರೆ ತೀರು ವಂತಿಲ್ಲ. ನನ್ನ ಈ ಹಾಳು ಮನಸ್ಸು ಹೋದ ಸ್ಥಳವನ್ನು ಮುಚ್ಚಿಟ್ಟು ಕೊಳ್ಳದೆ ಹೇಳುತ್ತೇನೆ. ಈ ಕದುನಂಟ ಸುಶೀಲನ ಪತ್ನಿಯ ಸೌಂದರ್ಯ ನನ್ನನ್ನು ಸೋಲಿಸಿತು–ಎಂದು. ಈ ಸ್ವತ್‌ಶಲ್ಯಕ್ಕೆ ಮದ್ದೆಂದರೆ 'ದಮುದೀ ಲೋಚನ ಚುಂಬನ'—ಆ ಸುಂದರಿಯ ಕೃಪಾಕಟಾಕ್ಷವೆಂಬ ಸೊಡಗಿಲ್ಲ—

ಅಗಲಮಾಂ ತಳೋದರಿಗೆ ಮೋಹರಿಯಾಗಿ ನಿತಂಬದೊಳ್, ಕುಚಾ
ಭೋಗದ ಮಧ್ಯಗೆ ಹಾರಲತೆಯಾಗಿ, ರಮ್ಯದಂಗಳೊಳ್
ರಾಗವಿಳಾಸದಾಗಿ, ಪೊಳೆಪೊಳೆವ್ವೆಡೆಯೊಳ್ ನಿರಿಯಾಗಿ ಬಂದು ಸಂ
ಭೋಗದ ಪುಣ್ಯಮಿಲ್ಲ ನಗಮಾದೊಡೆ ಸಲ್ಲದೆ ಗಂಡನಿದೋರದೇಂ

ಆಕೆಯು ಗಂಡನೊಂದಿಗಿರುವವಳು. ಅವಳನ್ನು ತಾನು ಇರುವಂತೆಯೇ ಪಡೆಯುವುದು ಕಷ್ಟ. ಆದರೆ ಆ ಸುಂದರಿಯ ಒಡ್ಯಾಣವಾಗಿ ನಿತಂಬ ಪ್ರದೇಶವನ್ನೂ, ಹಾರವಾಗಿ ಕುಚಪ್ರದೇಶವನ್ನೂ, ಸೀರೆಯ ನಿರಿಯಾಗಿ ಅವಳ ಸುಂದರವಾದ ತೊಡೆಗಳನ್ನೂ ಸಂಭೋಗಿಸುವ ಪುಣ್ಯ ನನಗೆ ದೊರೆಯುವುದಾದರೆ!—ಎಂದು ತನ್ನ ಹೃದಯಕವಾಟವನ್ನು ತೆರೆದು ತೋರಿಸಿದ. ಆ ಗೆಳೆಯ 'ಪರಿವ ಮನಕ್ಕೆ ಪಗ್ಗವಿಲ್ಲಂ; ನೋಡುವ ಕಣ್ಗಳ್ಗೆಡೆಗಟ್ಟಿಲ್ಲಂ' ಎಂದು ಸಮಾಧಾನಮಾಡಿ. ಸಲ್ಲದ ಸುಳ್ಳು ಕಥೆಯೊಂದನ್ನು ಹೇಳಿ ಸುನಂದೆಗೆ ಆತನಲ್ಲಿ ಪ್ರೇಮ ಅಂಕುರಿಸಿದೆಯೆಂದು ನಂಬಿಸಿದ. 'ಮನದ ಪಿಶಾಚಕ್ಕೆ ವಚನರಚನಾ ಧೂಪ'ವನ್ನು ತೋರಿಸಿದ. ಇದರ ಫಲವಾಗಿ ಚಂಡಶಾಸನನು ತನಗೂ ವಸುಷೇಣನಿಗೂ ಬೇನವನ್ನು ತೆಗೆಸಿಕೊಂಡು ಬೇಟೆಯ ಭೂಮಿಗೆ ಬರುತ್ತಿದ್ದ ಸುನಂದೆಯನ್ನು ಅಪಹರಿಸಿ ಕೊಂಡು ತನ್ನ ಊರಿನತ್ತ ಹೊರಟನು. 'ಕದುಕ ಕತ್ತರಿ, ನಂಟರ ಮಾರಿ. ಯಾದ ಚಂಡಶಾಸನ' ತುತ್ತು ಮಿಂಚಿದೊಡನುಂಡು ತೊಡೆ ಮಿಂಚಿದೊಡಾ ಖಳನಿಂತು ಮಾಡಿದಂ.' ಇದ್ದಕ್ಕಿದ್ದಂತೆಯೇ ನಡೆದು ಹೋದ ಈ

ಘಾತುಕಕಾರ್ಯವನ್ನು ಕಂಡು ಸುನಂದೆ ಹೌಹಾರಿದಳು. ಅಳುತ್ತ, ಬೇಡಿಕೊಂಡಳು. ಕಠೋರವಾಗಿ ತೆಗಳಿದಳು. 'ಪಾಳ್ಮನೆಯೊಳ್, ನಾಯ್, ಘೃತಭಾಂಡಮಂ ತೆಗೆವವೊಲ್ ಕಳ್ದೊಯ್ವುದಾಳ್ವೆಳೆಯೆ'—ಹಾಳು ಮನೆಯಲ್ಲಿದ್ದ ತುಪ್ಪದ ಕೊಡವನ್ನು ನಾಯಿ ಹೊತ್ತುಕೊಂಡು ಹೋಗುವಂತೆ ಪರಸ್ತ್ರೀಯನ್ನು ಕಳ್ಳತನದಿಂದ ಎತ್ತಿಕೊಂಡು ಹೋಗುವುದು ಶೂರರ ಧರ್ಮವೆ?-ಎಂದು ಛೀಗುಟ್ಟಿದಳು. ಆಕೆಯ ಅಳುವನ್ನು ಕೇಳಿ ಸಹಾಯಕ್ಕೆಂದು ಬಂದ ವಸುಷೇಣನ ಸಾಮಂತ, ಸಿಂಹಚೂಡನು, ಚಂಡಶಾಸನನ ರೋಷಕ್ಕೆ ಆಹುತಿಯಾದನು. ಅನಂತರ 'ಗಾಳಿಗೆ ಗಱಿಮೂಡಿದಂತೆ' ವೇಗದಿಂದ ರಥವನ್ನು ನಡೆಸಿ, ಆ ಚಂಡಶಾಸನನು, ಸುನಂದೆಯೊಡನೆ ತನ್ನ ಊರನ್ನು ಸೇರಿದನು.

ಸುನಂದೆಯ ಅಪಹರಣವನ್ನು ಕೇಳಿ ವಸುಷೇಣನು, ಊರಿಗೆ ಹಿಂದಿರುಗದೆ, ಊಟವನ್ನು ಸಹ ಮಾಡದೆ

ಪ್ರಾಣಪ್ರಿಯಳಿಲ್ಲದೆ ನಿಃ
ಪ್ರಾಣಮಿದೆಂತುಣ್ಬುದೀಗಳೀಯೊಡಲಹಿತ
ಪ್ರಾಣಾನಿಲನಿಂದೆನ್ನ ಕೃ
ಪಾಣಾಹಿಯನೂಡಿ ಬಳಿಕಮಾನುಂಡಪ್ಪೆಂ

ಪ್ರಾಣಪ್ರಿಯಳಿಲ್ಲದೆ ನಿರ್ಜೀವವಾಗಿರುವ ಈ ದೇಹ ಹೇಗೆ ಊಟಮಾಡೀತು? ಶತ್ರುವಿನ ಪ್ರಾಣವಾಯುವನ್ನು ನನ್ನ ಈ ಕತ್ತಿಯೆಂಬ ಸರ್ಪಕ್ಕೆ ಊಟ ಮಾಡಿಸಿ, ಆಮೇಲೆ ನಾನು ಊಟಮಾಡುತ್ತೇನೆ-ಎಂದು ಹೇಳಿ ಹಾಗಿಂದ ಹಾಗೆಯೇ ಮಕರಗ್ರಾಹಪುರಕ್ಕೆ ಸೈನ್ಯಸಮೇತನಾಗಿ ಹೊರಟು ಅದಕ್ಕೆ ಮುತ್ತಿಗೆ ಹಾಕಿದನು. ಇಬ್ಬಣಗಳಿಗೂ ಘೋರಯುದ್ಧ ಪ್ರಾರಂಭವಾಯಿತು. ಆ ಸಮಯದಲ್ಲಿ ಚಂಡಶಾಸನನ ಸೆರೆಯಲ್ಲಿದ್ದ ಸುನಂದೆ

ಬಿದಿಯೆಂಬ ಮದಗಜಂ ನೃಪ
ಸದನ ಸರೋವರಮೊಳಿಳಿದು ಸೆಳೆತಂದು ವನಾಂ
ತದೊಳಿಕ್ಕಿದ ಬಾಳಮೃಣಾ
ಳದವೊಲ್ ಸತಿ ಕೊರಗಿ ಕಣ್ಗೆ ಕರಮೆಸೆದಿರ್ದಳ್.

ವಿಧಿಯೆಂಬ ಮದ್ದಾನೆ ವಸುಷೇಣರಾಜನ ಅರಮನೆಯೆಂಬ ಸರೋವರ

ದಕ್ಕಿದ್ದ ಬಾಳಮ್ಯಗಾಳವನ್ನು ಕಿತ್ತುತಂದು ಅರಣ್ಯದಲ್ಲಿ ಬಿಸುಟಿರುವಂತೆ ಕಾಣಿಸುತ್ತಿದ್ದಳಂತೆ! ಚಂಡಶಾಸನನು ಆಕೆಯ ಬಳಿಗೆ ಬಂದು ಅತ್ಯಂತ ವಿನಯದಿಂದ

ನಯದಿಂ ನಿನ್ನೊಳ್ ಕೂಡಂಬಡಂ ಪಡೆಯದಿಂದೌತ್ಸುಕ್ಯದಿಂ ತಂದ ಸ
ಲ್ಗೆಯ ನೀಂ ಮನ್ನಿಸು ಕಾಮಿ ಕಣ್ಣ ಜೀವನಲಾತ್ತಂ ಗಂಡುದೊತ್ತಿನ್ನ ರಾ
ಣಿಯ ವಾಸಂ ಪರಿಚಾರಕಾದಿ ನಿನಗೀ ಸಾಮ್ರಾಜ್ಯಲಕ್ಷ್ಮೀಸುಖೋ
ದಯದೊಳ್ ವಲ್ಲಭೆಯಾಗಿ ನೀನಿರು ವಲಂ ನೀಲಾಬ್ಜಲೋಲೇಕ್ಷಣೇ

ಣೇ ಕುಮುದನಯನೇ, ನಯದಿಂದ ನಿನ್ನ ಒಪ್ಪಿಗೆಯನ್ನು ಪಡೆಯದೆಯೇ ಉತ್ಸುಕನಾಗಿ ನಿನ್ನನ್ನು ಕರೆತಂದ ನನ್ನ ಸಲಿಗೆಯನ್ನು ಕ್ಷಮಿಸು ; ಕಾಮಿಗೆ ಕಣ್ಣಿಲ್ಲ : ನಾನು ನಿನ್ನ ಗಂಡು ತೊತ್ತು ; ನನ್ನ ರಾಣಿಯವಾಸ, ಪರಿಚಾರಕಾದಿ ಸಮಸ್ತ ಸಾಮ್ರಾಜ್ಯಕ್ಕೂ ಒಡತಿಯಾಗಿ ನೀನಿರು—ಎಂದು ಹೇಳಿದನು. ಅದನ್ನು ಕೇಳಿ ಸುನಂದೆ ಕನಲಿ ಕೆಂಗೆಂಡವಾಗಿ

ಸೆಱೆಸಿಕ್ಕಿಂ ಪಿಡಿತಂದ ದೇಸಿಗತಿಯಂ, ಭೋಗೋಪಭೋಗಂಗಳಂ
ಮಱೆದುಂ ಕಾಣದನಾಥೆಯಂ ನುಡಿವವೊಲ್ ನಿನ್ನೊಂದು ಸಂಪತ್ತಿಯಂ
ಜಱಚುತ್ತಿರ್ದಪೆ ಪಾಣ್ಬ, ನಿನ್ನ ತಲೆಯುಂ ಕಾರಾಗೃಹದ್ವಾರದೊಳ್
ಮೆಱೆವಾಗಳ್ ನುಡಿ, ನಾಳೆ ನೀನೆನಗೆ ಮಾಡಲ್ಕಿರ್ಪ ಸತ್ಕಾರಮಂ

ಸೆರೆಹಿಡಿದು ತಂದ ದಿಕ್ಕಿಲ್ಲದವಳನ್ನೇ. ಭೋಗಭಾಗ್ಯಗಳನ್ನು ಮರೆತು ಕೂಡ ಕಾಣದ ಅನಾಥೆಯನ್ನೇ ಕುರಿತು ಹೇಳುವಂತೆ ನಿನ್ನ ಸಂಪತ್ತನ್ನು ವರ್ಣಿಸಿ ಬೊಗಳುತ್ತಿರುವ ಎಲವೊ ಜಾರ, ನಿನ್ನ ತಲೆ ನಾಳೆ ಬೆಳಗ್ಗೆ ಕಾರಾಗೃಹದ ಬಾಗಿಲಲ್ಲಿ ಪ್ರದರ್ಶಿತವಾದಾಗ ನೀನು ನನಗೆ ಮಾಡಬೇಕೆಂದಿರುವ ಸತ್ಕಾರವನ್ನೆಲ್ಲಾ ಮಾಡುವೆಯಂತೆ—ಎಂದಳು. 'ಕಮಳಿನಿ ದಿನಪತಿಗಲ್ಲದೆ ಸಮುನಿಸಿ ದೋಷಾಕರಂಗೆ ಮೊಗವಿತ್ತಪಳೆ ?'—ಕಮಲಿನಿ ಸೂರ್ಯನನ್ನಲ್ಲದೆ ದೋಷಾಕರನಾದ ಚಂದ್ರನಕಡೆ ತಿರುಗುತ್ತಾಳೆಯೆ?-ಎಂಬ ಆಕೆಯ ನಿಶ್ಚಯವನ್ನು ಕೇಳಿ ಚಂಡಶಾಸನನು ಸ್ವಲ್ಪವೂ ಕೋಪಗೊಳ್ಳದೆ 'ಸತ್ತು ಸಕ್ಕಳಮಂ ತೋಱುವ ಬಾಳೆಯಾಗದಿರು' ಎಂದು ಕೇಳಿಕೊಂಡ. ಸುನಂದೆ ಅಷ್ಟೇ ಸಾರವತ್ತಾಗಿ ಉತ್ತರಕೊಡುತ್ತಾ ' ಮಾವಿನ ಕೊಂಬಿನೊಳ್ ನಲಿದು

ನರ್ತಿಪ ಕೋಗಿಲೆ. ಪತ್ತಿದಂಟಸಿಂ ಬೇವಿನ ಕೊಂಬಿನೊಳ್ ನಲಿವುದೆ?' ಎಂದು ಕೇಳಿ, 'ವೀರನ ತೋಳ ಬಾಳುಮಂ, ನಾವಿದ ಬಾಳುಮಂ ಸಮನೆ ಪತ್ತಿಪ ಸಾಣೆಯೊ ಮದ್ಭುಜಸ್ತಂಭಂ'–ವೀರನ ತೋಳಿನಲ್ಲಿರುವ ಕತ್ತಿಯನ್ನೂ ಕ್ಷೌರಿಕನ ಕತ್ತಿಯನ್ನೂ ಸಮನಾಗಿಯೇ ಪುರಸ್ಕರಿಸುವ ಸಾಣೆಯೆಂದು ತಿಳಿದೆಯಾ ನನ್ನ ಭುಜಗಳನ್ನು?'–ಎಂದು ಅವನನ್ನು ಕಟುವಾಗಿ ಟೀಕಿಸಿದಳು. ಆ ಮಾತಿನಿಂದ ನೊಂದ ಚಂಡಶಾಸನನು

> ಬಿಡೆ ನಾಂ, ನೀಂ ಸಯೆ ಸಾವೆನಲ್ಲದುಳಿಯಂ. ನೀನೊಲ್ದೊಡೇನೊಲ್ಲದಿ
> ರ್ದೊಡಮೇನಾನೆರಡಿಲ್ಲದೊಲ್ದೆನದಱಿಂ ಪೇೞ್ವಾರ ಬೇೞ್ಪಕ್ಕೆ ಬಾಯ್
> ಬಿಡಲಾಱೆಂ ನೆಱೆಯಿಂದಮೆನ್ನ ಮನೆಯೊಳ್ ನೀನಿರ್ದೆಯೆಂಬಾಸೆಯು
> ಳ್ಳೊಡೆ ಸಾಲ್ಗುಂ. ಬಳಿಕಪ್ಪುದಕ್ಕೆ ರಣದಿಂದಂಭೋಜಪತ್ರೇಕ್ಷಣೆ

ಹೇ ಕಮಲನೇತ್ರೆ, ನಾನು ನಿನ್ನನ್ನು ಬಿಡಲಾರೆ; ನೀನು ಸತ್ತರೆ ನಾನೂ ಸಾಯುತ್ತೇನೆಯೇ ಹೊರತು ನಿನ್ನನ್ನು ಅಗಲಿ ಇರುವುದಿಲ್ಲ. ನೀನು ನನಗೆ ಒಲಿದರೆಷ್ಟು ಬಿಟ್ಟರೆಷ್ಟು. ನಾನಂತೂ ನಿನ್ನನ್ನು ಎರಡಿಲ್ಲದೆ ಒಲಿದಿದ್ದೇನೆ. ಆದ್ದರಿಂದ ಹೇಳುವವರ ರತಿಸುಖಕ್ಕೆ ಬಾಯ್ಬಿಡಲಾರೆ. ಸೆರೆಯಾಗಿಯಾದರೂ ನೀನು ನನ್ನ ಮನೆಯಲ್ಲಿರುವೆಯಲ್ಲಾ ಎಂಬ ಆಸೆಯೇ ನನಗೆ ಸಾಕು. ಇನ್ನು ಯುದ್ಧದಲ್ಲಿ ಆದುದಾಗಲಿ—ಎಂದು ಹೇಳಿ ಹೊರಟುಹೋದ. ಆದರೆ ಸುನಂದೆಯು ತನ್ನವಳಾಗದ ಹೊರತು ಅವನ ಜೀವಕ್ಕೆ ಶಾಂತಿ ಇಲ್ಲ. ಅವಳ ಗಂಡನಿರುವವರೆಗೂ ಅವಳು ಪರಪುರುಷನನ್ನು ಕಣ್ಣೆತ್ತಿ ನೋಡಳು. ಗಂಡ ಇಲ್ಲವೆಂದಾದರೆ ಅವಳು ತನ್ನ ವಶವಾಗಬಹುದೆಂದು ಅವನ ಭ್ರಾಂತಿ. ಆದ್ದರಿಂದ ಮಾಯಾಶಿರವೊಂದನ್ನು ತರಿಸಿ, ಅದರೊಡನೆ ಸುನಂದೆಯ ಬಳಿಗೆ ಬಂದು

> ವಸುಷೇಣನೆ ಪತಿಯೆನಗೆಂ
> ದು ಸುನಂದೆ ಪಿಡಿಲ್ಕೆ, ಮೂಳ್ಪ ಸೋಪಡಿಕೆಯನೀ
> ಬಸಿದ ತಲೆಗೆನುತುಮೀಡಾ
> ಡಿಸಿದಂ ಮಾಯಾವಿ ಪತಿಯ ಮಾಯಾಶಿರಮಂ

ನನಗೆ ವಸುಷೇಣನೇ ಪತಿಯೆಂದು ಹಿಡಿದು ಬೀಳುತ್ತಿ; ನೀನು ಮಾಡುವ ಆ ಮಿಥ್ಯೋಪಚಾರಗಳನ್ನೆಲ್ಲಾ ನೆತ್ತರು ಬಸಿಯುತ್ತಿರುವ ಈ ತಲೆಗೆ ಮಾಡು —ಎಂದು ಹೇಳಿ ವಸುಷೇಣನ ಮಾಯಾಶಿರವನ್ನು ಸುನಂದೆಯ ಮುಂದೆ

ಚೆಲ್ಲಿಸಿದ. ತಕ್ಷಣವೇ, ಸದಾ ತನ್ನ ಹೃದಯಸ್ಥನಾಗಿದ್ದ ವಲ್ಲಭನನ್ನು ನೋಡುವಂತೆ ಆಕೆಯ ಕಣ್ಣುಗಳು ಮುಚ್ಚಿದುವಂತೆ, ಎದೆಯಲ್ಲಿರುವವನನ್ನು ಮುಟ್ಟಿ ನೋಡುವಂತೆ ಕೈಗಳು ಎದೆಯಮೇಲಕ್ಕೆ ಹೋಗಿ ನಿಂತವಂತೆ, ಗಂಡನ ಧ್ವನಿಯನ್ನು ಕೇಳುತ್ತಿರುವಂತೆ ಮುಖ ಮಲಗಿತಂತೆ, ಎದೆ ಶೂನ್ಯವಾಗಿದ್ದುದನ್ನು ಹುಡುಕುವಂತೆ ಪ್ರಾಣ ಹೋರಟುಹೋಯಿತಂತೆ !

ಇನಿಯನಿರೆ ನೋಡ ಮತ್ತೊ
ರ್ಬನ ಕಣ್ಗಂ ಬಗೆಗಮೊಪ್ಪಿದಪ್ಪುದು ಸುಡಲೀ
ತನುವನಿದನೆಂದು ಜೀವಂ
ಮುನಿವಂತಿರೆ ಬಿಟ್ಟು ಪೋಯಿತಸು ಶಶಿಮುಖಿಯಾ

ತನ್ನ ಪ್ರಾಣಪ್ರಿಯನು ಇರುವಾಗಲೆ ಈ ಹಾಳು ದೇಹ ಪರಪುರುಷನ ಕಣ್ಣಿಗೂ ಮನಸ್ಸಿಗೂ ಒಪ್ಪಿಗೆಯಾಗುತ್ತಿದೆಯಲ್ಲ! ಸುಡಲಿ ಈ ದೇಹವನ್ನು —ಎಂದು ಜೀವವು ಕೋಪಿಸಿಕೊಂಡು ಹೋದಂತೆ ಆ ಚಂದ್ರಮುಖಿಯ ಪ್ರಾಣ ಹಾರಿಹೋಯಿತು

ಇದನ್ನು ಕಂಡು ಚಂಡಶಾಸನನು ಅತ್ಯಂತ ಸಂಕಟದಿಂದ ಮೂರ್ಛೆ ಹೋಗಿ ಎಚ್ಚತ್ತಮೇಲೆ " ಬೆಚ್ಚನೆ ಸುಯ್ದು ಬೆದೆ ಬೆದೆ ಬೆಂದು ನೊಂದು ನಿಂದಿಸಿಕೊಂಡು "

ನೋಡಿ ಕನಲ್ದು ಬಾಯ್ದೆರೆಸಿದು ಮೋನದಿನೇಕಿರೆ ದೇವಿ ನೀನೆನಂ
ನೋಡುವೆ ಸಾವಿನಿಂ ಸರಸವಾಡುವರೀ ಮಱುಮೆಯ್ಯೊಳಾದೊಡಂ
ಕೂಡದೆ ಮಾಣೆನಬ್ಜದಳಲೋಚನೆ ನಿನ್ನೊಡನಿಂದು ಮೆಯ್ಗೆ ಮೆ
ಯ್ಗೂಡುವೆ ಧೂಮಸೌಧಗೃಹದೊಳ್ ಶಿಖಿ ಪಲ್ಲವರಾಗತಲ್ಪದೊಳ್.

ಸತ್ತು ಬಿದ್ದಿದ್ದ ಸುನಂದೆಯನ್ನು ನೋಡಿ 'ದೇವಿ, ನನ್ನ ಮೇಲೆ ಕೋಪಿಸಿಕೊಂಡು ಮೌನದಿಂದಿರುತ್ತಾ ನನ್ನ ಮನಸ್ಸನ್ನು ಏಕೆ ಪರೀಕ್ಷಿಸುತ್ತಿದ್ದಿ ? ಸಾವಿನೊಡನೆ ಸರಸವಾಡುತ್ತಾರೆಯೆ ? ಹೇ ಕಮಲಲೋಚನೆ, ಮುಂದಿನ ಜನ್ಮದಲ್ಲಿಯಾದರೂ ನಿನ್ನೊಡನೆ ಕೂಡದೆ ಬಿಡುವುಲ್ಲ. ಇಂದು ನಿನ್ನೊಡನೆ ಮಯ್ಗೆ ಮಯ್ಯನ್ನು ಕೂಡಿಸಿ, ಹೊಗೆಯ ಅರಮನೆಯಲ್ಲಿ ಬೆಂಕಿಯ ಚಿಗುರಿನ ಹಾಸಿಗೆಯಲ್ಲಿ ಮಲಗುತ್ತೇನೆ' ಎಂದು ಹೇಳಿಕೊಂಡು ಹೇಳಿದಂತೆಯೇ ನಡಸಿದನು. ಪತಿವ್ರತೆಯಾದ ಹೆಣ್ಣು ಗಂಡನೊಡನೆ ಸಹಗಮನ ಮಾಡು

ವುದು ಒಂದಾನೊಂದು ಕಾಲದಲ್ಲಿ ನಮ್ಮಲ್ಲಿದ್ದ ಲೋಕರೂಢಿ. ಗಂಡಸು ಹೆಣ್ಣಿನೊಡನೆ ಸಹಗಮನ ಮಾಡುವಂತೆ ನಿಯೋಜಿಸಿರುವುದು ಜನ್ನನ ಕೃತಿ ಜಗತ್ತಿನಲ್ಲಿ ಮಾತ್ರವೇ.

ಜನ್ನಕವಿಯ ಕಾವ್ಯಗಳಲ್ಲಿ ಬರುವ ನಾಯಕಿಯರನ್ನು ಮಾತ್ರವೇ ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ ಅವರಿಬ್ಬರಲ್ಲಿಯೂ ಅಜಗಜಾಂತರ ವ್ಯತ್ಯಾಸವಿದೆ. ಅಮೃತಮತಿ ಒಮ್ಮೆ ಸಂಗೀತವನ್ನು ಕೇಳುತ್ತಲೆ ತನ್ನ ಮನಸ್ಸನ್ನು ಅಷ್ಟವಂಕನಿಗೆ 'ಪಸಾಯ ದಾನಂಗೊಟ್ಟಳ್." ಸಂಗೀತಕ್ಕೆ ವಶ್ಯಶಕ್ತಿಯಿದೆಯೆಂಬುದು ನಿಜ; ಆದರೆ ಅಷ್ಟವಂಕನಂತಹ ಭಯಂಕರ ಕುರೂಪಿಯ ವರ್ಣನೆಯನ್ನು ಕೇಳಿಯೇ ಅವಳ ಮನಸ್ಸು ಜಿಹಾಸೆಗೊಳ್ಳಬೇಕಾಗಿತ್ತು. ಅದಕ್ಕೆ ಬದಲಾಗಿ 'ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್' ಎಂಬ ವಿತರ್ಕವನ್ನು ಹೂಡಿ ಅವನ ಸ್ನೇಹವನ್ನು ಪಡೆಯಹೊರಟಳು. ಮನ್ಮಥನಂತಹ ಗಂಡನಿರುವಾಗ ಆ ಹೊಲಸು ದುರ್ನಾತದ ಬದಗನನ್ನು ಕಣ್ಣಾರೆ ಕಂಡೂ ಅವಳು ಅವನಲ್ಲಿ ಅನುರಕ್ತಳಾದುದೂ; ಅರಸಿಕನಾದ ಅವನು ಅವಳನ್ನು ಸಾಯಬಡಿದರೂ ಅವನಲ್ಲಿಯೇ ಅನುರಕ್ತಳಾಗಿ ಹೊಲಸಿನಲ್ಲಿ ಹೊರಳಾಡುವ ಹುಳದಂತೆ ವರ್ತಿಸಿದುದೂ ಅಸ್ವಾಭಾವಿಕವಾಗಿದೆ. ಅವಳು ಅಧರ್ಮದಲ್ಲಿ ಕಾಲಿಟ್ಟು ತಾನು ಹಾಳಾದುದಲ್ಲದೆ ಅಮೃತದಂತಹ ಗಂಡ, ಬಂಗಾರದಂತಹ ಅತ್ತೆ ಇವರನ್ನೂ ಹಾಳುಮಾಡಿದಳು. ಅಷ್ಟವಂಕನ ಸಹವಾಸದಿಂದ ರೋಗಗ್ರಸ್ತಳಾಗಿ ಮೈ ಹುಳಿತು ಕೀವು ಸೋರುವಂತಹ ದುಃಸ್ಥಿತಿಗಿಳಿದಾಗಲೂ ಅವಳ ಮನಸ್ಸು ತಿಳಿಯಾಗಲಿಲ್ಲ. ಇಂತಹ ನರಕ ದುಃಖವನ್ನು ಅನುಭವಿಸಿ, ಸತ್ತಮೇಲೆ ನಾಯಕನರಕಕ್ಕಿಳಿದು ಹೋದಳು. ಸುನಂದೆಯ ಬಾಳ ಕಥೆ ಇವರಿಂದ ಸಂಪೂರ್ಣ ಭಿನ್ನವಾದುದು. ಆಕೆ ಪರ ಪುರುಷನನ್ನು ಕಣ್ಣೆತ್ತಿಯೂ ಕಂಡವಳಲ್ಲ. ತನ್ನನ್ನು ಕದ್ದೊಯ್ದವನನ್ನು ಪ್ರತಿಭಟಿಸಿ ನಿಂತು, ನಿರ್ದಾಕ್ಷಿಣ್ಯವಾಗಿ ಖಂಡಿಸಿ, ಕೋಪದಿಂದ ಬಯ್ದು ಕೊನೆಗೂ ಅವನಿಗೆ ವಶಳಾಗದೆಯೇ ಮೃತ್ಯುವನ್ನು ಅಪ್ಪಿ ಪಾತಿವ್ರತ್ಯದ ಪತಾಕೆಯನ್ನು ಗಗನಕ್ಕೆ ಹಾರಿಸಿದವಳು.

ನಾಯಕಿಯರ ಪಾತ್ರಗಳ ವಿಚಾರದಲ್ಲಿ ಈ ವಿಸದೃಶತೆ ಕಂಡು

ಬಂದರೂ ಎರಡು ಕಾವ್ಯಗಳಲ್ಲಿರುವ ಮೂಲ ತತ್ವ ಒಂದೆ. ಒಂದೇ ನಾಣ್ಯದ ಎರಡು ಮುಖಗಳಂತಿರುವ ಈ ದುಷ್ಟ ಪ್ರಣಯದ ಎರಡು ಚಿತ್ರಗಳಲ್ಲಿಯೂ ಕಟ್ಟು ಹರಿದ ಪಂಜಿನಂತಿರುವ ಕಾಮಜೀವನದ ದಿಗ್ದರ್ಶನವಾಗಿದೆ. ಆದರೆ ಅಮೃತಮತಿಯ ಪ್ರಣಯಜೀವನಕ್ಕಿಂತಲೂ ಚಂಡಶಾಸನನ ಪ್ರಣಯ ಜೀವನ ಹೆಚ್ಚು ಸ್ವಾಭಾವಿಕವಾಗಿದೆ. ಅವನು ತನ್ನ ಜೀವದ ಗೆಳೆಯನ ಹೆಂಡತಿಯನ್ನು ಮೋಹಿಸಿ ಮಿತ್ರದ್ರೋಹವನ್ನು ಮಾಡಿದುದು ನಿಜ. ಆದರೆ ತಾನು ಮಾಡುತ್ತಿರುವುದು ಅನ್ಯಾಯವೆಂಬ ಭಾವನೆ ಸಂಪೂರ್ಣವಾಗಿ ಇಲ್ಲದೆ ಹೋಗಿಲ್ಲ. ಗೆಳೆಯ ಸುದರ್ಶನನಲ್ಲಿ ಅದನ್ನು ತಾನು ಹೇಳಲಾರದೆ ಹೇಳಿಕೊಳ್ಳುತ್ತಾನೆ. 'ಈ ಕಡುನೆಂಟನ ಸತಿಯ ರೂಪು ಸೋಲಿಸಿತೆನ್ನಂ' ಎಂದು ಮಿಡುಕುತ್ತಾನೆ. ಪಾಪಿ ಸುದರ್ಶನನ ಪ್ರೋತ್ಸಾಹವಿಲ್ಲದಿದ್ದರೆ ಅವನ ಕಾಮ ಅಷ್ಟು ಉಲ್ಬಣಿಸುತ್ತಿತ್ತೊ ಇಲ್ಲವೋ! ಅವನ ಪ್ರೇಮ ಕಳಂಕಪೂರಿತ ವಾದುದಾದರೂ ನಿಶ್ಚಲವಾದುದು. ಸುನಂದೆಯೊಡನೆ ಅವನು ಸಹಗಮನ ಮಾಡುವಷ್ಟು ಅವನ ಪ್ರೇಮ ನಿಶ್ಚಲವಾಗಿದೆ. ಅವನು ತಪ್ಪಿತಸ್ಥನಾದರೂ ಅವನ ದುರಂತವನ್ನು ಕಂಡು ಅವನಲ್ಲಿ ನಮಗೆ ಕನಿಕರ ಹುಟ್ಟುತ್ತದೆ. ಅವನು ಕ್ಷಮಾರ್ಹನಾಗುತ್ತಾನೆ.

ಗಂಡು ಹೆಣ್ಣಿನ ಈ ಸಮಸ್ಯೆ ಅನಾದಿ. ಅನಂತ. ಮೋಹಕ್ಕೆ ತುತ್ತಾದ ಮನುಷ್ಯ ಪಾತ್ರಾಪಾತ್ರಗಳನ್ನಾಗಲಿ, ಮಾನ ಮರ್ಯಾದೆಯನ್ನಾಗಲಿ, ಪಾಪಪುಣ್ಯಗಳನ್ನಾಗಲಿ ಲೆಕ್ಕಿಸುವುದಿಲ್ಲ. ಅದು ಮದ್ದಿಲ್ಲದ ದೌರ್ಬಲ್ಯ. ಇದನ್ನು ಕುರಿತು ಕವಿ ಜಗತ್ತಿಗೆ ನೀಡುವ ಸಂದೇಶವಿಷ್ಟೆ–'ಮನಸಿಜನ ಮಾಯೆ ವಿಧಿವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ.'

ಜನ್ನ ಕವಿಗೆ ಪ್ರಣಯ ನಿರೂಪಣೆಯಲ್ಲಿ ಅಮಿತವಾದ ಆಸಕ್ತಿ. ಆದ್ದರಿಂದಲೇ ಆತನು 'ಮಹಾಪುರಾಣ'ದ ನಾಲ್ಕೈದು ಪದ್ಯಗಳಲ್ಲಿ ಅಡಕವಾಗಿರುವ ಚಂಡಶಾಸನೋಪಾಖ್ಯಾನವನ್ನು ಇಲ್ಲಿ ವಿಸ್ತರಿಸಿದ್ದಾನೆ. ಮೂಲದ ಶುಷ್ಕ ಸೂಚನೆಗೆ ಇಲ್ಲಿ ಜೀವವನ್ನು ತುಂಬಿದ್ದಾನೆ.

**ಸೋಮರಾಜ :**

ಕವಿಯು ತನ್ನ ಕಾಲವನ್ನು ನಿರ್ದಿಷ್ಟವಾಗಿ ಹೇಳಿಕೊಂಡಿದ್ದರೂ ಕೈ ಪ್ರತಿಯಲ್ಲಿನ ಒಂದು ಅಕ್ಷರ ಹಾರಿಹೋಗಿ ಸೋಮರಾಜನ ಕಾಲ ಸಾಕಷ್ಟು

ಚರ್ಚೆಗೆ ಅವಕಾಶಮಾಡಿಕೊಟ್ಟಿದೆ. ಕವಿಚರಿತೆಕಾರರು ಆತನ ಕಾಲವನ್ನು ಹದಿನೂರನೆಯ ಶತಮಾನದ ಪೂರ್ವಾರ್ಧ (ಕ್ರಿ. ಶ. ೧೨೨೨)ಎಂದು ಹೇಳಿದ್ದಾರೆ. ಬಹುಶಃ ಪಶ್ಚಿಮ ತೀರದ ಸಣ್ಣ ರಾಜ್ಯಕ್ಕೆ ಆತನು ದೊರೆಯಾಗಿದ್ದಿರಬಹುದೆಂದು ಊಹಿಸುತ್ತಾರೆ. ಈತನ ತಂದೆ ಚಂದ್ರವಂಶಕ್ಕೆ ಸೇರಿದ ಇಂದುಶೇಖರರಾಜ.

ಸೋಮರಾಜನು ವೀರಶೈವ ಶರಣರಲ್ಲಿ ಒಬ್ಬನಾದ ಉದ್ಭಟದೇವನ ಕಥೆಯನ್ನು ಹನ್ನೆರಡು ಆಶ್ವಾಸಗಳ ಚಂಪೂರೂಪದಲ್ಲಿ ಬರೆದಿದ್ದಾನೆ. ತನ್ನ ಕಾವ್ಯದ ಇಂಪು ಚಂದ್ರಮರೀಚಿಯಂತೆ, ತನಿಮಾವಿನ ಪಣ್ಗಳ ತಂದಲಂತೆ (ಗೊಂಚಲಿನ ಹಾಗೆ), ಮಲಯಾನಿಲನಂತೆ, ವಸಂತನಂತೆ, ಸುಧಾಬ್ಧಿಯಂತೆ, ನವಚಂಪಕಮಂಜರಿಯಂತೆ ಬುಧರನ್ನು ಬಗೆಗೊಳ್ಳುವುದಂತೆ! ಇಷ್ಟೇ ಅಲ್ಲ.

ನಲ್ಲಳ ಬೇಟವಾತೊ, ಶುಕಚಾರು ನಿನಾದಮೊ, ವಾಗ್ವಧೂಟಿಕಾ
ವಲ್ಲಕಿಯೊಪ್ಪುವಿಂಚರಮೊ ಚೈತ್ರಪಿಕಧ್ವನಿಯೋ ಸಮಂತು ಪೂ
ವಿಲ್ಲನ ಚಾಪಸಂಜನಿತ ಮೋಹನನಾದಮೊ, ಸೋಮರಾಜ ಭೂ
ವಲ್ಲಭನಿಂಪುವೆತ್ತ ವಚನಾಮೃತಮೋ ವಿಬುಧಾನುರಾಗಮೋ.

ನಲ್ಲಳ ರತಿಕ್ರೀಡೆಯ ಮಾತೋ, ಗಿಳಿಯ ಮನೋಹರ ಧ್ವನಿಯೋ, ಸರಸ್ವತಿಯ ವೀಣೆಯ ಇಂಚರವೋ, ಚೈತ್ರಮಾಸದ ಕೋಗಿಲೆಯ ಧ್ವನಿಯೋ ಮನ್ಮಥನ ಬಿಲ್ಲಿನಿಂದ ಬಂದ ಮೋಹನನಿನಾದವೋ, ಸೋಮರಾಜನ ಮನೋಹರವಾದ ವಚನಾಮೃತವೋ, ವಿದ್ವಾಂಸರ ಅನುರಾಗವೋ-ಎಂಬಂತಿದೆಯಂತೆ! ಕಥೆಯ ತಿರುಳು ಶಿವಭಕ್ತಿಯಾದರೂ ಅದು ಹರಡಿಕೊಂಡಿರುವುದು ಪ್ರಣಯ ಪ್ರಪಂಚವನ್ನು ಅವಲಂಬಿಸಿಯೇ. ಕಥಾನಾಯಕನಾದ ಉದ್ಭಟ ದೇವನು ಗುಜರಾತು ದೇಶದ ಭಲ್ಲಕೀಪುರದ ದೊರೆ. ಈತನು ಹಂಪೆಯಲ್ಲಿದ್ದ ದೇವಲ ಋಷಿಯ ಆಹ್ವಾನದಂತೆ, ಸೈನ್ಯಸಮೇತನಾಗಿ ಹಂಪೆಗೆ ಬಂದು, ಋಷಿಯ ಯಜ್ಞಕ್ಕೆ ವಿಘ್ನಕಾರಿಯಾಗಿದ್ದ ನಿಘರ್ಜಾಸುರನನ್ನು ಸಂಹರಿಸಿ ಹಿಂದಿರುಗಿದನು. ಒಂದು ದಿನ ಆತನು ಬೇಡನ ಕೈಲಿ ಸಿಕ್ಕಿ ಸಾಯುವಸ್ಥಿತಿಯಲ್ಲಿದ್ದ ಗಿಳಿಯೊಂದನ್ನು ಬಂಧಮುಕ್ತವನ್ನಾಗಿ ಮಾಡಿ ಅದನ್ನು ಉಪಚರಿಸಲು, ಅದು ತನ್ನ ಪೂರ್ವಜನ್ಮ ವೃತ್ತಾಂತವನ್ನು ತಿಳಿಸಿ,

ತಾನು ಚೋಳರಾಜಕುಮಾರಿಯ ಬಳಿಯಲ್ಲಿದ್ದುದಾಗಿಯೂ, ಯೌವನವತಿಯಾದ ಆಕೆಗೆ ತಕ್ಕ ಪತಿಯನ್ನು ಅರಸುತ್ತಾ ಉದ್ಭಟದೇವನ ಬಳಿಗೇ ಹೊರಟಿದ್ದುದಾಗಿಯೂ ತಿಳಿಸಿತು. ರಾಜನು ಆ ಗಿಳಿಯ ಅಪೇಕ್ಷೆಯಂತೆ ಚೋಳದೇಶಕ್ಕೆ ಹೋಗಿ, ರಾಜಕುಮಾರಿ 'ಸೌಂದರ್ಯವತಿ'ಯನ್ನು ಮದುವೆಯಾಗಿ ಆಕೆಯೊಡನೆ ರಾಜಧಾನಿಯನ್ನು ಸೇರುತ್ತಾನೆ. ಒಮ್ಮೆ ಆತನು ಸೌಂದರ್ಯವತಿಯೊಡನೆ ಪಗಡೆಯಾಡುತ್ತಿರುವಾಗ ಫಕ್ಕನೆ ನಗುತ್ತಾನೆ. ಹೆಂಡತಿಯು ಅದಕ್ಕೆ ಕಾರಣವನ್ನು ತಿಳಿಸುವಂತೆ ಹಟಮಾಡಲು, ಓಹಿಲನೆಂಬ ಶಿವಭಕ್ತನು ಏಕಾಕಿಯಾಗಿ ವಿಮಾನದಲ್ಲಿ ಕೈಲಾಸಕ್ಕೆ ಹೋದುದನ್ನು ಕಂಡು ನಕ್ಕುದಾಗಿ ತಿಳಿಸುತ್ತಾನೆ. ಗಂಡಹೆಂಡಿರಲ್ಲಿ ಆ ವಿಚಾರವಾಗಿ ವಾಗ್ವಾದ ನಡೆದು, ಉದ್ಭಟನು ತನ್ನ ಊರವರನ್ನೆಲ್ಲಾ ಕೈಲಾಸಕ್ಕೆ ಕರೆದೊಯ್ಯುವುದಾಗಿ ಪಂಥ ಕಟ್ಟಿ, ಅದರಂತೆ ಊರವರನ್ನೆಲ್ಲಾ ಕರೆದೊಯ್ದನು.

ಕವಿಯ ಕಥಾನಕದ ಉಗಮಸ್ಥಾನ ಹರಿಹರಕವಿಯ 'ಉದ್ಭಟರಗಳೆ.' ಸೋಮರಾಜನು ತನ್ನ ಕಾವ್ಯಕ್ಕೆ ಮಹಾಕಾವ್ಯದ ಪಟ್ಟವನ್ನು ಕಟ್ಟಹೊರಟು ಕಥೆಯನ್ನು ಹಿಗ್ಗಲಿಸಿ, ಅಷ್ಟಾದಶವರ್ಣನೆಗಳನ್ನು ತರಹೊರಟು ಔಚಿತ್ಯಕ್ಕೆ ಅಪೋಹವನ್ನು ತಂದುಕೊಂಡಿದ್ದಾನೆ. ಶೃಂಗಾರರಸ ನಿರೂಪಣೆಗಾಗಿ ವೇಶ್ಯಾಗೃಹವರ್ಣನೆ ಯಥಾವತ್ತಾಗಿ ನಡೆದಿದೆ. ಶೃಂಗಾರವೇ ಕಾವ್ಯದ ಸಾರವೆನ್ನುವ ಮನೋಭಾವ ಕವಿಯದು. ಅದ್ದರಿಂದಲೇ ಆತನು ತನ್ನ ಕಾವ್ಯವನ್ನು 'ಶೃಂಗಾರಸಾರ'ವೆಂಬ ಹೆಸರಿನಿಂದ ಕರೆದು ತೃಪ್ತನಾಗಿದ್ದಾನೆ. ಆದರೆ ಶೃಂಗಾರವು ಅಷ್ಟು ತೀವ್ರವಾಗಿದೆಯೆಂದು ಹೇಳುವಂತೆಯೇನೂ ಇಲ್ಲ. ಸೋಮರಾಜನ ಶೈಲಿ ಲಲಿತವಾಗಿದೆ. ಆತನ ವರ್ಣನೆಗಳಲ್ಲಿ ಅನೇಕ ಕಡೆ ನಾವೀನ್ಯತೆ ಕಂಡುಬರುತ್ತದೆ. ಆತನ ವರ್ಷಾಕಾಲದ ಈ ವರ್ಣನೆಯನ್ನು ನೋಡಿ—

ಗಗನಾಂಗನೆ ಕುಡುಮಿಂಚಿಂ
ಬುಗುರ್ಗೊನೆಯಿಂ ಮುಗಿಲೆನಿಪ್ಪ ಮುಡಿಯಂ ಪಿಕ್ಕಲ್
ಮಿಗೆ ಮುಂತುಜುಂಬಿದೊಳ್ಳೆಲ
ರುಗುವ ಪೊಲುದಿರ್ದತ್ತು ಕರಕನಿಕರಮದಿಳೆಯೊಳ್

ಗಗನಾಂಗನೆ ಕುಡುಮಿಂಚೆಂಬ ತನ್ನ ಉಗುರುಗಳ ಕೊನೆಯಿಂದ ಮೋಡ

ವೆಂಬ ತನ್ನ ಮುಡಿಯನ್ನು ಬಾಚಿಕೊಳ್ಳಲು, ತಾನು ಆ ಮೊದಲೆ ತನ್ನ ತಲೆಯಲ್ಲಿ ಮುಡಿದಿದ್ದ ಹೂಗಳು ಕೆಳಗುದುರಿದಂತೆ ಆಲಿಕಲ್ಲುಗಳು ನೆಲದಮೇಲೆ ಬಿದ್ದುವು. ಕವಿಯ ಕಲ್ಪನೆ ಮನೋಹರವಾಗಿದೆ.

ಕವಿಯು ತನ್ನ ಕಾವ್ಯಕ್ಕೆ ಪಂಪಾನಗರೀಶ್ವರನು ನಾಯಕನೆಂದು ಹೇಳಿರುವನಲ್ಲದೆ ಗುರು ಅಲ್ಲಮಾಂಕನ ದಯೆಯಿಂದ ತನ್ನ ಕೃತಿಯನ್ನು ಬರೆದಿರುವಂತೆಯೂ, ಒಂದಲ್ಲ ಒಂದು ವಿಧದಲ್ಲಿ ಆತನ ನಾಮಸ್ಮರಣೆಯನ್ನು ಮಾಡುವುದಾಗಿಯೂ ಹೇಳಿಕೊಂಡಿದ್ದಾನೆ. ಅಲ್ಲದೆ ಪ್ರತಿಯೊಂದು ಆಶ್ವಾಸದ ಕೊನೆಯಲ್ಲಿಯೂ ಶಿವನನ್ನು ಸ್ತುತಿಸುವಾಗ ಆತನನ್ನು 'ಅಲ್ಲಮಪ್ರಿಯ'ನೆಂದು ಕರೆದಿದ್ದಾನೆ. ಹೀಗೆ ಅಲ್ಲಮನನ್ನು ಆದರ್ಶವಾಗಿಟ್ಟುಕೊಂಡಿರುವ ಈತನ ಸರ್ವಧರ್ಮಸಮನ್ವಯದೃಷ್ಟಿ ಸ್ತೋತ್ರಾರ್ಥನವಾದುದು–

ಶಿವನೆಂದುತ್ತಮ ಶೈವರಂಬುರುಹಗೆತ್ತು ತಾಂ ವೈಷ್ಣವರ್
ಹವಿರನ್ನಪ್ರಿಯನೆಂದು ಭೂಮಿದಿವಿಜರ್ ಜೈನರ್ಜಿನಂಗೆತ್ತು ತ
ನ್ನುವನೆಂದರ್ಚಿಸಲೊಲ್ದು ಸರ್ವಮುಖದಿಂದಂ ಪೂಜೆಗೊಂಡಾವಗಂ
ಸುವಿಲಾಸಂಬಡೆದೊಪ್ಪುವಲ್ಲಮನೆ ಬೆಟ್ಟಿಕ್ಕೆನ್ನ ಚಿತ್ತಾಬ್ಜದೊಳ್

ಉತ್ತಮರಾದ ಶೈವರು ಶಿವನೆಂದು, ವಿಷ್ಣುವೆಂದು ವೈಷ್ಣವರು, ಯಜ್ಞೇಶ್ವರನೆಂದು ಬ್ರಾಹ್ಮಣರು, ಜಿನನೆಂದು ಜೈನರು ಪೂಜಿಸಲಾಗಿ ಈ ಎಲ್ಲ ಮುಖಗಳಿಂದಲೂ ಪೂಜೆಯನ್ನು ಸ್ವೀಕರಿಸಿ ಸಂತೋಷಗೊಳ್ಳುವ ಅಲ್ಲಮನು ನನ್ನ ಹೃದಯಕಮಲದಲ್ಲಿ ಬೆಸಿಗೆ ಹಾಕಿದಂತೆ ಸ್ಥಿರವಾಗಿ ನಿಂತಿರಲಿ–ಇಂತಹ ಉದಾರ ಮನೋಭಾವ, ಸಮನ್ವಯಬುದ್ಧಿ ನಮ್ಮ ಕವಿಗಳಲ್ಲೆಲ್ಲಾ ನೆಲಸಿದ್ದರೆ ನಮ್ಮ ಜನರ ಬದುಕು ಎಷ್ಟು ಹಿತಕರವಾಗುತ್ತಿತ್ತು !

**ಎರಡನೆಯ ಗುಣವರ್ಮ :**

ಈತನಿಗೂ ಪೂರ್ವದಲ್ಲಿ 'ಹರಿವಂಶ' 'ಶೂದ್ರಕ'—ಎಂಬ ಕಾವ್ಯಗಳನ್ನು ಬರೆದ ಒಬ್ಬ ಗುಣವರ್ಮನಿದ್ದುದರಿಂದ ಈತನು ಎರಡನೆಯ ಗುಣವರ್ಮ. ಕವಿತಿಲಕ, ಸರಸ್ವತೀ ಕರ್ಣಪೂರ, ಮಾನಮೇರು—ಇತ್ಯಾದಿ ಹಲವು ಬಿರುದುಗಳುಳ್ಳ ಈ ಕವಿ ಹದಿಮೂರನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ವಜ್ರದೇವನರನಾಥನ ಆಸ್ಥಾನದ ಕೋವಿದರು ತನ್ನ ಕವಿತ್ವದ ಮಾಧುರ್ಯವನ್ನು ಅನುಭವಿಸಬೇಕೆಂದು ಕೋರಿದುದರಿಂದ, ಅವರ ಪರ

ವಾಗಿ ಶಾಂತಿವರ್ಮ ದಂಡನಾಥನು ಪ್ರಾರ್ಥಿಸಲಾಗಿ ಒಂಬತ್ತನೆಯ ತೀರ್ಥಂಕರನಾದ ಪುಷ್ಪದಂತನ ಚರಿತೆಯನ್ನು ಚಂಪೂರೂಪದಲ್ಲಿ ರಚಿಸಿದನಂತೆ! ವಿಷ್ಣು ತನ್ನನ್ನೇ ಸಮುದ್ರರಾಜನಿಗೆ ಒಪ್ಪಿಸಿ ಲಕ್ಷ್ಮಿಯನ್ನೂ ಕೌಸ್ತುಭಮಣಿಯನ್ನೂ ಪಡೆದಂತೆ ಶಾಂತಿವರ್ಮನು ತನ್ನನ್ನೇ ಕವಿಗೆ ಸಮರ್ಪಿಸಿ ಕೀರ್ತಿಯನ್ನೂ 'ಪುಷ್ಪದಂತ ಪುರಾಣ'ವನ್ನೂ ಪಡೆದನಂತೆ! ಈ ಕೃತಿ ಕವಿಯ ಮಗಳು; ಅದನ್ನು ವರಿಸಿದ ಶಾಂತಿವರ್ಮ ತನ್ನ ಅಳಿಯನಂತೆ! ತನ್ನ ಕವಿತಾಚಾತುರ್ಯವನ್ನು ಹೇಳಿಕೊಳ್ಳುತ್ತಾ

ಪ್ರಕಟಂ ಸುಕವಿಮಧುವ್ರತ
ನಿಕರಮನೆಱಗಿಸುವ ಚೂತಮಂಜರಿ, ಕುಕವಿ
ಪ್ರಕರ ಮಧುಕರಕೆ ಕೃತಿ ಚಂ
ಪಕ ಮಂಜರಿಯೆನಿಸೆ ಪೇಳ್ದನಂ ಗುಣವರ್ಮಂ

ಪ್ರಸಿದ್ಧರಾದ ಸುಕವಿಗಳೆಂಬ ಮಧುವ್ರತ ನಿಕರ (ದುಂಬಿಗಳ ಸಮೂಹ, ಅಮೃತವ್ರತರ ಸಮೂಹ)ವನ್ನು ಎಱಗಿಸುವ (ಬಂದು ಮುತ್ತಿಕೊಳ್ಳುವ, ನಮಸ್ಕರಿಸುವ) ಮಾವಿನ ಹೂಗೊಂಚಲು; ಕುಕವಿಗಳೆಂಬ ಮಧುಕರಕ್ಕೆ (ದುಂಬಿಗೆ, ತಿರುಕನಿಗೆ) ಸಂಪಿಗೆಯ ಹೂವಿನ ಗೊಂಚಲು—ಎನ್ನುವಂತೆ ಕವಿಗುಣವರ್ಮ ಕಾವ್ಯವನ್ನು ಹೇಳುತ್ತಾನಂತೆ! ಸುಕವಿಗಳು ಈತನ ಕಾವ್ಯದಲ್ಲಿ ಮಧುವನ್ನು ಆಸ್ವಾದಿಸುತ್ತಾ ಆನಂದಿಸುತ್ತಾರೆ, ಕುಕವಿಗಳು ಇದರ ಮಹತ್ತಿನ ಮುಂದೆ ನಿಲ್ಲಲಾರದೆ ಓಡಿ ಹೋಗುತ್ತಾರೆ. ಕವಿಯ ಒಲವು ಎತ್ತ ಹರಿಯುತ್ತಿದೆಯೆಂಬುದಕ್ಕೆ ತೋರ್ಬೆರಳಿನಂತಿದೆ ಈ ಪದ್ಯ. ಇಲ್ಲಿ ಕಥೆಯೇ ಇಲ್ಲವೆನ್ನುವಷ್ಟು ಅತ್ಯಲ್ಪವಾದ ಕಥೆ. ಇದನ್ನು ಹದಿನಾಲ್ಕು ಆಶ್ವಾಸಗಳಷ್ಟು ಹಿಗ್ಗಲಿಸಬೇಕಾಗಿದೆ. ಆದ್ದರಿಂದ ಬೇಕಾದಷ್ಟು ವರ್ಣನೆ ಕಾವ್ಯವನ್ನು ತುಂಬಿದೆ. ವೃತ್ತ್ಯನುಪ್ರಾಸ ಯಮಕಾದಿ ಶಬ್ದಾಲಂಕಾರಗಳೂ ಇಲ್ಲಿ ಹೇರಳವಾಗಿವೆ. 'ಮಹಾಕಾವ್ಯ'ವೆಂಬ ತಲೆಚೀಟಿ ಇಟ್ಟುಕೊಂಡು ಹೊರಟಿರುವ ಈ ಕಾವ್ಯದಲ್ಲಿ ಇತರ ಜೈನಪುರಾಣಗಳಿಂದ ವಿಶಿಷ್ಟವಾದ ಲಕ್ಷಣಗಳೇನೂ ಕಂಡುಬರುವುದಿಲ್ಲ; ಅದೇ ಪಂಚಕಲ್ಯಾಣಗಳೇ. ಕವಿಯು ಶಾಂತರಸವೇ ಇಲ್ಲಿ ಪ್ರಧಾನವೆಂದು ಹೇಳಿಕೊಂಡಿದ್ದಾನೆ. ಮೋಕ್ಷಸುಖದಲ್ಲಿ

ಮಂದಾದರದವರಿಗಾಗಿ—ಮಕ್ಕಳಿಗೆ ಸಕ್ಕರೆ ಸೇರಿಸಿ ಔಷಧ ಕೊಡುವಂತೆ ಶೃಂಗಾರವನ್ನು ಇಲ್ಲಿ ತಂದಿದ್ದಾನಂತೆ! ನಿಜ, ಶೃಂಗಾರ ನಿರೂಪಣೆಯಲ್ಲಿ ರಸವೂ ಇಲ್ಲ, ರಸಾಭಾಸವೂ ಇಲ್ಲ. ಕವಿಯ ಈ ಹೇಳಿಕೆ ಆದರಣೀಯ ವಾದುದು—'ಕತೆ ಕಿಱಿದಾದೊಡಂ ಕತೆಯ ನಾಯಕನುನ್ನತ ವಂಶವೀರ್ಯ ವಿಶ್ರುತ ಮಹಿಮಾಪ್ರಪಂಚಂ'. ಆದ್ದರಿಂದ ಕಾವ್ಯವು ಗೌರವಾನ್ವಿತ ವಾದುದು.

ಈತನ 'ಚಂದ್ರನಾಥಾಷ್ಟಕ' ದಲ್ಲಿ ಒಂಬತ್ತು ಪದ್ಯಗಳಿವೆ. ಆ ಒಂಬತ್ತೂ ಮಹಾ ಸ್ರಗ್ಧರಾವೃತ್ತದಲ್ಲಿವೆ. ಕವಿಯು ಗಂಭೀರವಾದ ಶೈಲಿ ಯಲ್ಲಿ ಜಿನಭಕ್ತಿಯನ್ನು ಹಾಡಿ ಹರಿಸಿದ್ದಾನೆ, ಇವರಲ್ಲಿ.

**ಕಮಲಭವ**: ಸುಮಾರು ಹದಿಮೂರನೆಯ ಶತಮಾನದ ಮಧ್ಯಭಾಗ ದಲ್ಲಿದ್ದ ಈ ಕವಿ 'ಶಾಂತೀಶ್ವರ ಪುರಾಣ' ಎಂಬ ಹದಿನಾರನೆಯ ತೀರ್ಥಂ ಕರ ಚರಿತ್ರೆಯನ್ನು ಹದಿನಾರು ಆಶ್ವಾಸಗಳಲ್ಲಿ ಹಬ್ಬಿಸಿ ಬರೆದಿದ್ದಾನೆ. ಇತರ ಕವಿಗಳಂತೆ ಈತನೂ ತನ್ನ ಕಾವ್ಯದ ಹಿರಿಮೆಯನ್ನು ಉಗ್ಘಡಿಸುತ್ತಾ

ಕಮಳಭವನ ಕವಿತಾರಸ
ಮಮರ್ದಿನ ತನಿವೊನಲನಂಗ ಮೋಹನ ಬಾಣಂ
ರಮಣೀಯ ಮಧುರರುತಿ ಬಾ
ಳಮರಾಳದ ನಲ್ಮೆಯಾಟಮಿನಿಯಳ ಕೂಟಂ

ಕಮಲಭವನ ಕವಿತಾರಸವು ಅಮೃತಸಾರದ ಹೊಳೆ, ಮನ್ಮಥ ಮೋಹ ನಾಸ್ತ್ರ, ರಮಣೀಯವಾದ ಗಾನ, ಬಾಲಹಂಸೆಯ ಪ್ರೇಮದಾಟ, ಪ್ರೇಯ ಸಿಯ ಕೂಟ—ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಈ ಮಾತು ಅತಿಶಯೋಕ್ತಿಯಾದರೂ, ಇದೇ ವಸ್ತುವನ್ನೆ ಬಳಸಿಕೊಂಡು ಬರೆದಿರುವ ಕವಿಚಕ್ರವರ್ತಿ ಪೊನ್ನನಿಗಿಂತ ಈತನ ಕಾವ್ಯಶಕ್ತಿ ಮೇಲ್ಮಟ್ಟದ್ದು. ಈತನ ಶೈಲಿ ಸರಳವಾಗಿದೆ, ಲಲಿತವಾಗಿದೆ. ಆದರೆ ಕಥೆ ಚರ್ವಿತಚರ್ವಣ; ಅದೇ ಪಂಚಕಲ್ಯಾಣಗಳು, ಅದೇ ಆಷ್ಟಾದಶವರ್ಣನೆ. ಈ ಪುರಾಣದಲ್ಲಿ ಬರುವ ಅಶ್ವಗ್ರೀವನ ಕಥೆ ಇದ್ದುದರಲ್ಲಿ ಚನ್ನಾಗಿದೆ.

ದೇವಕವಿಯ 'ಕುಸುಮಾವಳಿ' ಯಲ್ಲಿ ಬರುವ ಕೆಲವು ಪದ್ಯಗಳು ಕಮಲ ಭವನ 'ಶಾಂತೀಶ್ವರ ಪುರಾಣ' ದಲ್ಲಿಯೂ ಬರುತ್ತವೆಯೆಂದು ಈ

ಹಿಂದೆಯೇ ಹೇಳಿದುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

**ಆಂಡಯ್ಯ :**

ಪಂಡಿತಕವಿಗಳ ಪುರಾಣಕಾವ್ಯಗಳನ್ನೂ ಅವುಗಳ ಚರ್ವಿತ ಚರ್ವಣವನ್ನೂ ಓದಿ ಬೇಸತ್ತ ಮನಸ್ಸಿಗೆ ಹೊಸ ಉತ್ಸಾಹವನ್ನು ನೀಡುತ್ತಾನೆ ಆಂಡಯ್ಯ. ಈತನು ತನ್ನ ಅಜ್ಜ ಗತಿಸಿದ ಹೊಸದರಲ್ಲೆ ಹುಟ್ಟಿದನೋ ಏನೊ ! ಆತನ ಹೆಸರನ್ನೇ ಈತನಿಗೂ ಇಟ್ಟರೆಂದು ತೋರುತ್ತದೆ. ಅಜ್ಜ ಆಂಡಯ್ಯ ' ಲೆಕ್ಕಿಗರ ಪಿರಿಯ ' ನೆಂದು ಕೀರ್ತಿವೆತ್ತಿದ್ದರೆ ಈತನು ' ಲೆಕ್ಕಿಗರರಸ ' ನೆಂದು ಖ್ಯಾತನಾಗಿದ್ದಾನೆ. ಅಜ್ಜ ಆಂಡಯ್ಯನಿಗೆ ಮೂವರು ಮಕ್ಕಳಿದ್ದರಂತೆ. ಅವರಲ್ಲಿ ಹಿರಿಯ ಸಾಂತ. ಈ ಸಾಂತ—ಬಲ್ಲವ್ವೆಯರ ಪುಣ್ಯಗರ್ಭದಲ್ಲಿ ಜನಿಸಿದ ಆಂಡಯ್ಯನು ಅಸದೃಶವಾದ ಕನ್ನಡ ಭಾಷಾಭಿಮಾನದಿಂದ ತುಂಬಿ ತುಳುಕುವವನಾಗಿ ಬೆಳೆದನೆಂದು ತೋರುತ್ತದೆ. ಸಂಸ್ಕೃತವನ್ನು ಸ್ವಲ್ಪವೂ ಬೆರಸದೆ ಅಚ್ಚಗನ್ನಡದಲ್ಲಿಯೇ ಕಾವ್ಯಸೃಷ್ಟಿಯನ್ನು ಮಾಡುವುದಕ್ಕೆ ಹೊರಟ ಭೂಪ, ಇವನು.

ಸೊಗಯಿಪ ಸಕ್ಕದಂ ಬೆರೆಸಿದಲ್ಲದೆ ಕನ್ನಡದಲ್ಲಿ ಕಬ್ಬಮುಂ
ಬಗೆಗೊಳೆ ಪೇಳಲಾಱರಿನಿತುಂ ಸಲೆ ಮುನ್ನಿನ ಪೆಂಪನಾಳ್ದ ಕ
ಬ್ಬಿಗರದು ಮಾತನಾಡಿದವೊಲಂದವನಾಳ್ದಿರೆ ಬಲ್ಪು ನೆ
ಟ್ಟಗೆ ದೊರೆಕೊಂಡುದಿಂತಿವನೊಳಲ್ಲದೆ ಕೇಳ್ ದೊರೆಕೊಳ್ಳದಾರೊಳಂ
ಎಂದು ತಮ ತಮಗೆ ಬಲ್ಲವ
ರಂದೊಡೆ ನಾನವರ ಬಯಕೆಯಂ ಸಲಿಸುವೆ ನಿ
ನ್ನೆಂದಚ್ಚ ಕನ್ನಡಂ ಬಿಗಿ
ವೊಂದಿರೆ ಕಬ್ಬಿಗರ ಕಾವನೊಲವಿಂದೊರೆದೆಂ

ಪೂರ್ವದ ಮಹಾಮಹಾಕವಿಗಳೆಲ್ಲರೂ ಸೊಗಸಾದ ಸಂಸ್ಕೃತವನ್ನು ಬೆರಸದ ಹೊರತು ಮನೋಹರವಾದ ಕಾವ್ಯವನ್ನು ಸೃಷ್ಟಿಸಲು ಶಕ್ತರಾಗಲಿಲ್ಲ; ಮಾತನಾಡಿದಷ್ಟು ಸ್ಪಷ್ಟವಾಗಿಯೂ ಹೃದಯಂಗಮವಾಗಿಯೂ ಬರೆಯಬಲ್ಲ ಕವಿತಾಸಾಮರ್ಥ್ಯವು ಇವನಲ್ಲಿ ಅಲ್ಲದೆ ಇನ್ನಾರಲ್ಲಿಯೂ ದೊರಕೊಳ್ಳದೆಂದು ತನ್ನನ್ನು ಬಲ್ಲವರು ಹೇಳಲಾಗಿ, ನಾನು ಅವರ ಬಯಕೆಯನ್ನು ಈಡೇರಿಸಬೇಕೆಂದು ಅಚ್ಚಕನ್ನಡದಲ್ಲಿ ಬಿಗಿಯಾದ ಬಂಧದಿಂದ ' ಕಬ್ಬಿಗರ

ಕಾವ' ವನ್ನು ಸಂತೋಷದಿಂದ ಹೇಳಹೊರಟಿದ್ದೇನೆ—ಎಂದು ಕವಿ ಹೇಳಿಕೊಂಡಿದ್ದಾನೆ. ತನ್ನ ಹೇಳಿಕೆಯಂತೆಯೇ ಆತನು ತನ್ನ ಕಾವ್ಯದಲ್ಲಿ ಸಂಸ್ಕೃತಪದಗಳನ್ನು ತರದೆ, ಕೇವಲ ದೇಶ್ಯ ಮತ್ತು ತದ್ಭವ ಪದಗಳ ಬಳಕೆಯಿಂದಲೇ ನಿರ್ವಹಿಸಿದ್ದಾನೆ. ಬಹುಶಃ ಸಂಸ್ಕೃತ ಪದಪ್ರಯೋಗಕ್ಕಾಗಿ ಕವಿಗಳಮೇಲೆ ಬಂದಿದ್ದ ಅಪವಾದವು ತನ್ನ ಕಾವ್ಯದಿಂದ ನಿವಾರಣೆಯಾದುದಕ್ಕಾಗಿ ಇದಕ್ಕೆ 'ಕಬ್ಬಿಗರಕಾವ—ಕವಿಗಳ ರಕ್ಷಕ—ಎಂದು ಕವಿಯು ನಾಮಕರಣ ಮಾಡಿದನೇನೊ! ಇದು ರಮ್ಯವಾಗಿರುವುದರಿಂದ ಇದಕ್ಕೆ 'ಸೊಬಗಿನ ಸುಗ್ಗಿ' ಎಂಬ ಹೆಸರೂ ಬಂದಿದೆ.

'ಕಬ್ಬಿಗರ ಕಾವ' ದ ಕಥೆ ಕವಿಯ ಸ್ವಕಪೋಲ ಕಲ್ಪಿತವಾದ ಕಥೆ—ಕರ್ವುರವಿಲ್ಲನು ತನ್ನ ಮಡದಿಯಾದ ಇಚ್ಚೆಗಾರ್ತಿಯೊಡನೆ ಕಂಪಿನ ಪೊಳಲಲ್ಲಿ ರಾಜ್ಯಭಾರ ಮಾಡುತ್ತಿರಲು, ಶಿವನು ಚಂದ್ರನನ್ನು ಸೆರೆಹಿಡಿದನೆಂಬ ಸುದ್ದಿ ಬರುತ್ತದೆ. ಕುಪಿತನಾದ ರಾಜನು ತಂಗಾಳಿಯೆಂಬ ತನ್ನ ದೂತನನ್ನು ಕರೆಸಿ, ಚಂದ್ರನನ್ನು ಬಿಡಿಸಿಕೊಂಡು ಬರುವಂತೆ ಶಿವನಲ್ಲಿಗೆ ದೂಪಟ್ಟಿದನು. ಆದರೆ ಆವನ ದೂತಕಾರ್ಯ ವ್ಯರ್ಥವಾಯಿತು. ಕರ್ವುರವಿಲ್ಲನು ತನ್ನ ಸೈನ್ಯದೊಡನೆ ಶಿವನಮೇಲೆ ದಂಡೆತ್ತಿ ಹೊರಟನು. ದಾರಿಯಲ್ಲಿ ತಪಸ್ಸು ಮಾಡುತ್ತಿದ್ದ ಸವಣನೊಬ್ಬನು ಆತನಿಗೆ ಕಾಣಿಸಿದನು. ತನಗೆ ಇದಿರಾಗಿ ನಿಲ್ಲುವ ಆ ತಪಸ್ವಿಯನ್ನು ಧ್ವಂಸ ಮಾಡುವೆನೆಂದು ಹೊರಟ ರಾಜನನ್ನು ವಸಂತನು ತಡೆದು ಹಿತೋಪದೇಶಮಾಡಿದನು. ಆ ಹಿತೋಪದೇಶದಿಂದ ವಿವೇಕವನ್ನು ತಂದುಕೊಂಡ ರಾಜನು, ತನ್ನ ಅಪರಾಧಕ್ಕಾಗಿ ಗಡಗಡ ನಡುಗಿ, ಆ ಸವಣನಿಗೆ ವಂದಿಸಿ ಮುಂದೆ ಹೊರಡುತ್ತಾನೆ. ಮಂಜು ಬೆಟ್ಟದ ಬಳಿಯಲ್ಲಿ ಕರ್ವುರವಿಲ್ಲನಿಗೂ ಶಿವನಿಗೂ ಯುದ್ಧ ನಡೆದು, ಕರ್ವುರವಿಲ್ಲನ ಅಲರ್ಗಣೆಗಳು ಶಿವನನ್ನು ತಾಗಿ ಅವನನ್ನು ಅರೆವೆಣ್ಣಾಗಿ ಮಾಡುತ್ತವೆ. ವಿಜಯಿಯಾದ ಕರ್ವುರವಿಲ್ಲನ ಮೇಲೆ ದೇವತೆಗಳು ಹೂ ಮಳೆಗರೆಯುತ್ತಾರೆ. ಕೋಪಗೊಂಡ ಶಿವನು ಅವನನ್ನು ಶಪಿಸುತ್ತಾನೆ. ಇದರ ಫಲವಾಗಿ ಕರ್ವುರವಿಲ್ಲನು ಹೆಂಡತಿಯಿಂದ ಅಗಲಿ, ಸ್ವಸ್ವರೂಪಜ್ಞಾನವಿಲ್ಲದೆ, ಕನ್ನಡನಾಡಿನ 'ಪೂವಿನ ಪೊಳಲಿ' ನಲ್ಲಿ ನನೆಯಂಬನೆಂಬ ಹೆಸರಿನಿಂದ ರಾಜ್ಯವಾಳುತ್ತಿರುತ್ತಾನೆ. ಆತನು ಒಂದುದಿನ ಉದ್ಯಾನವನದಲ್ಲಿ ಒಬ್ಬ

ಅಪ್ಸರ ಸ್ತ್ರೀಯನ್ನು ಕಂಡು, ಅವಳಿಂದ ತನ್ನ ವೃತ್ತಾಂತವನ್ನೆಲ್ಲಾ ಕೇಳುತ್ತಲೆ ಶಾಪದಿಂದ ಬಿಡುಗಡೆ ಪಡೆದು, ಮತ್ತೆ ತನ್ನ ಪತ್ನಿಯೊಡನೆ ಸುಖವಾಗಿ ರಾಜ್ಯಭಾರಮಾಡುತ್ತಾ ಇರುತ್ತಾನೆ. ಇದು 'ಕಬ್ಬಿಗರ ಕಾವ'ದ ಕಥೆ. ಕರ್ವುವಿಲ್ಲ ಅಥವಾ ಮನ್ಮಥನು ಶಿವನನ್ನು ಗೆದ್ದುದೇ ಇಲ್ಲಿನ ಕಥಾವಸ್ತುವಾದುದರಿಂದ ಈ ಕಾವ್ಯಕ್ಕೆ 'ಕಾವನ ಗೆಲ್ಲ' ವೆಂಬ ಹೆಸರೂ ಇದೆ. ಸಂಸ್ಕೃತವನ್ನು ತಿಳಿದವರು ಇದನ್ನು 'ಮದನ ವಿಜಯ' ವೆಂದು ಕರೆದರೆಂದು ಕವಿ ಹೇಳುತ್ತಾನೆ. ಇದಕ್ಕೆ 'ಸಂಸ್ಕೃತ ಸಹೋದರಿ' ಎಂಬ ಹೆಸರೂ ಇದೆ. ಈ ಕಥೆಯಲ್ಲಿ ಕವಿಯು ಜೈನಧರ್ಮದ ಹಿರಿಮೆಯನ್ನು ಮುಗಿಲಿಗೆತ್ತಿ ಹೊರಟಿರುವುದು ಮೇಲೆಯೇ ಎದ್ದು ಕಾಣುತ್ತದೆ. ಶಿವನನ್ನು ಒಂದೇ ಒಂದು ಬಾಣದಿಂದ ಅರೆವೆಣ್ಣಾಗಿ ಮಾಡಿದ ಮಹಾಪರಾಕ್ರಮಿ, ಮನ್ಮಥ. ಅಂತಹವನು ಸಾಮಾನ್ಯ ಸವಣನೊಬ್ಬನ ಮಹಿಮೆಯನ್ನು ಕೇಳಿ ಗಡಗಡ ನಡುಗಿ ಭಕ್ತಿಯುಕ್ತನಾಗಬೇಕಾದರೆ ಆ ಸವಣನ ತಪೋಮಹಿಮೆ ಎಂತಹುದಿರಬೇಕು? ಇನ್ನು ಸ್ವತಃ ತೀರ್ಥಂಕರನ ಮಹಿಮೆ ಎಂತಹುದಿರಬೇಕು? ಶಿವನಿಗೂ ಜಿನನಿಗೂ ಅಜಗಜಾಂತರ ಅಷ್ಟೆ! ಪರಮತದ ಅವಹೇಳನವನ್ನು ವಾಚ್ಯವಾಗಿ ಸ್ವಲ್ಪವೂ ಮಾಡದೆ, ಜೈನ ಮತದ ಮಹಿಮೆಯನ್ನು ಎತ್ತಿ ಹಿಡಿದಿರುವ ಆಂಡಯ್ಯನ ಜಾಣ್ಮೆ ಮೆಚ್ಚತಕ್ಕುದೇ ಸರಿ.

'ಕಬ್ಬಿಗರ ಕಾವ'ದ ಕಥೆ ಪ್ರಾರಂಭವಾಗುವುದು ಮನ್ಮಥನು ಶಿವನ ಶಾಪಕ್ಕೊಳಗಾಗಿ 'ನನೆಯಂಬ' ರಾಜನಾಗಿದ್ದ ಸಂದರ್ಭದಿಂದ. ಆಗ ಅವನಿದ್ದುದು ಕನ್ನಡನಾಡಿನಲ್ಲಿ ಎಂದು ಕಲ್ಪಿಸಿರುವ ಕವಿ ಕನ್ನಡ ನಾಡನ್ನು ಎದೆತುಂಬಿದ ಪ್ರೇಮದಿಂದ ಬಾಯ್ತುಂಬ ಹೊಗಳಿದ್ದಾನೆ. ಇಷ್ಟು ಸುಂದರವಾಗಿ ತನ್ನ ತಾಯ್ನಾಡನ್ನು ಹೊಗಳಿರುವವರಲ್ಲಿ ಪಂಪನನ್ನು ಬಿಟ್ಟರೆ ಈತನೇ ಎರಡನೆಯವನು.

ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱನಾ
ನೆಲನಂ ಮತ್ತಿನ ಮಾನಿಸರ್ ಪೊಗಳಲೇನಂ ಬಲ್ಲರೆಂಬೊಂದು ಬ
ಲ್ಲುಲಿಯಂ ನೆಟ್ಟನೆ ತಾಳ್ದು ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು ಮೆ
ಲ್ಲೆಲರಿಂ ಪೂತ ಕೊಳಂಗಳಿಂ ಕೆಱೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ

ಸಾವಿರ ನಾಲಗೆಗಳುಳ್ಳ ಆದಿಶೇಷನು ಕೂಡ ಆ ನಾಡನ್ನು ವರ್ಣನೆ

ಮಾಡಲು ಶಕ್ತನಾಗುವುದಿಲ್ಲ; ಎಂದಮೇಲೆ ಉಳಿದ ಮಾನವರು ಅದನ್ನು ವರ್ಣಿಸಲು ಶಕ್ತರಾಗುತ್ತಾರೆಯೆ? ಎಂಬ ಘೋಷಣೆಯನ್ನು ಒಳಕೊಂಡು ಕನ್ನಡವೆನಿಸಿಕೊಂಡ ಆ ನಾಡು ತಂಗಾಳಿಯಿಂದಲೂ, ಹೂಗಳಿಂದ ತುಂಬಿದ ಕೆರೆ ಕೊಳಗಳಿಂದಲೂ ಹಳ್ಳಿಗಳಿಂದಲೂ ಬತ್ತದ ಗದ್ದೆಗಳಿಂದಲೂ ಕೂಡಿ ರಮಣೀಯವಾಗಿತ್ತು. ಆ ನಾಡಿನಲ್ಲಿ ಮರಗಳೆಂದರೆ 'ಮಲ್ಲಿಗೆಯಲ್ಲದೆ, ಸಂಪಗೆಯಲ್ಲದೆ, ದಾಳಿಂಬಮಲ್ಲದೆ, ಚೆಂದೆಂಗಲ್ಲದೆ, ಮಾವಲ್ಲದೆ, ಕಾಂಗಲ್ಲದೆ' ಬೇರೆ ಗಿಡಮರಗಳೇ ಇಲ್ಲವಂತೆ! ಕೋತಿಗಳು ತೆಂಗಿನ ಮರವನ್ನು ಹತ್ತಿ ಕೆಳಕ್ಕೆ ಬೀಳಿಸಿದ ತೆಂಗಿನಕಾಯಿಗಳ ಎಳನೀರು ಮಡುಗಟ್ಟಿ ಹರಿದು, ಅಲ್ಲಿನ ವನವನ್ನೆಲ್ಲಾ ಬೆಳೆಸುತ್ತದೆಯಂತೆ! ಎಳನೀರಿನಿಂದಲೇ ಅಡವಿಯೆಲ್ಲಾ ಬೆಳೆಯಬೇಕಾದರೆ ಆ ತೆಂಗು ಎಷ್ಟು ಹುಲುಸಾಗಿರಬೇಕು? ಭತ್ತದ ಗದ್ದೆಗಳಂತೂ ತೆನೆಗಳ ಭಾರದಿಂದ ನೆಲಕ್ಕೆ ಬಾಗಿವೆ. ಕವಿ ಹೇಳುತ್ತಾನೆ:- 'ಉಱೆ ಕಾಯ್ವ ಬಿಸಿಲೊಳೆಮ್ಮಂ, ಮಱೆದುಂ ಕೊರಗಿಸದೆ ಪೊರೆದು ದೆಂದೊಲವಿಂ ಬಂದೆಱಗುವವೊಲ್—ಕೆಂಡದಂತಹ ಬಿಸಿಲಿನಲ್ಲಿ ನಮ್ಮನ್ನು ಮೈಮರೆತು ಒಮ್ಮೆಯಾದರೂ ಉಪೇಕ್ಷಿಸದೆ ರಕ್ಷಿಸಿದ ಭೂದೇವಿಗೆ ಕೃತಜ್ಞತೆಯಿಂದ ನಮಸ್ಕರಿಸುತ್ತಿವೆಯಂತೆ? ಈ ಕನ್ನಡನಾಡಿನ ಸಸ್ಯಗಳಲ್ಲಿ ಕೂಡ ಅಂತಹ ಕೃತಜ್ಞತಾಭಾವವಿರುವುದಾದರೆ ಅಲ್ಲಿನ ಜನ ಇನ್ನೆಂತಹರಾಗಿರಬೇಕು! ಅಲ್ಲಿನ ನೀರುಹಕ್ಕಿಗಳು ಪರಸ್ಪರ ಕಾದಾಡಿ ನೀರೆರಚಿದುದರಿಂದ ಗಾಳಿ ಅದರಲ್ಲಿ ನೆನೆದು ಮೆತ್ತಗೆ ಬೀಸುತ್ತದೆಯಂತೆ! ಅವುಗಳ ಜಗಳದಿಂದ ಆಗುವ ಫಲವನ್ನೂ, ತೊಂದರೆಗೆ ಸಿಕ್ಕ ಗಾಳಿಯ ಸ್ವಭಾವವನ್ನೂ ಧ್ವನಿಸುವಂತಿದೆಯಲ್ಲವೆ? ಅಲ್ಲಿನ ಜೀವನ ಎಷ್ಟು ಹೊಂದಿಕೆಯಾಗಿದೆ, ಮಧುರವಾಗಿದೆ, ಮನೋಹರವಾಗಿದೆಯೆಂಬುದನ್ನು ಕವಿ ಸುಂದರವಾಗಿ ಬಣ್ಣಿಸಿ, ನಾಡು ತುಷ್ಟಿ ಪುಷ್ಟಿಗಳಿಂದ ತುಂಬಿ, ಜನರು ತುಂಬು ಜೀವನವನ್ನು ಬಾಳುತ್ತಿದ್ದರೆಂಬುದನ್ನು ಸೂಚಿಸಿದ್ದಾನೆ. ಅಲ್ಲಿ

ಪುದಿದೆಳವಳ್ಳಿಯಿಲ್ಲದ ಮರಂ, ಕೊಳನಿಲ್ಲದ ತೋಂಟವಾವಲಿ
ಲ್ಲದ ಕೆಱೆ, ಗಂಡುಗೋಗಿಲೆಗಳಿಲ್ಲದ ಬಂದೆಳಮಾವು, ಕಾಲ್ಗಳಿ
ಲ್ಲದ ತೊಱೆ, ತುಂಬಿಯಿಲ್ಲದಲರಂಚೆಗಳಿಲ್ಲದ ಬೆಂಚೆ, ಬೇಟವಿ
ಲ್ಲದ ಬೆಲೆವೆಣ್ಗಳಿಲ್ಲ ಪೆಸರಿಲ್ಲದ ಮಾನಿಸರಿಲ್ಲದೆಲ್ಲಿಯುಂ

ಅಲ್ಲಿ ದಟ್ಟವಾಗಿ ಹಬ್ಬಿರುವ ಎಲೆ ಬಳ್ಳಿಗಳಿಲ್ಲದ ಮರವೇ ಇಲ್ಲ—ಮರ ಮರಕ್ಕೂ ಎಳೆಯ ಎಲೆ ಬಳ್ಳಿಗಳು ಹಬ್ಬಿಕೊಂಡಿವೆ—ಕೊಳಗಳಿಲ್ಲದ ತೋಟಗಳೇ ಇಲ್ಲ, ಕೆನ್ನೈದಿಲೆಗಳಿಲ್ಲದ ತೋಟಗಳೇ ಇಲ್ಲ, ಗಂಡು ಕೋಗಿಲೆಗಳಿಲ್ಲದ ಫಲಭರಿತ ಮಾಮರಗಳೇ ಇಲ್ಲ, ಕಾಲುವೆಗಳಿಲ್ಲದ ತೊರೆಗಳಿಲ್ಲ, ದುಂಬಿಯಿಲ್ಲದ ಪುಷ್ಪವಿಲ್ಲ, ಹಂಸಪಕ್ಷಿಗಳಿಲ್ಲದ ಕೊಳಗಳಿಲ್ಲ, ರತಿಸುಖವಿಲ್ಲದ ವೇಶ್ಯೆಯರಿಲ್ಲ, ಪ್ರಸಿದ್ಧರಾಗಿ, ಕೀರ್ತಿಶಾಲಿಗಳಾಗದಿರುವ ಮಾನವರೇ ಇಲ್ಲ. ಇನ್ನು ಈ ರಾಜಧಾನಿಯ ಹೆಸರೇ ಸಾಕು—'ಪೂವಿನ ಪೊಳಲ್'. ಅದು ಅನ್ವರ್ಥನಾಮವೂ ಆಗಿದೆ. ಕವಿಗಿರುವ ನಾಡು ನುಡಿಗಳ ಪ್ರೇಮ ಸ್ತೋತ್ರಾರ್ಹವಾದುದು.

ಕವಿಯ ಕಥಾಕಟ್ಟಡ, ಸನ್ನಿವೇಶರಚನೆಗಳಲ್ಲಿ ಮಹೋನ್ನತವಾದುದೇನೂ ಇಲ್ಲ. ಆದರೆ ಕವಿಯ ಕಾವ್ಯದಲ್ಲಿರುವ ಲಾಲಿತ್ಯ ಮಾಧುರ್ಯಗಳು ಮನೋಜ್ಞವಾಗಿವೆ. ಮನ್ಮಥನು ಶಿವನ ಮೇಲೆ ಬಾಣಪ್ರಯೋಗ ಮಾಡಿದ ನಂತರ. ಅಗ ತೊರೆ, ಜೆಟ್ಟಿ, ಹೊಲ, ಬಾನು, ದೆಸೆ—ಇವೆಲ್ಲವೂ 'ಜಲಕ್ಕನೆ ಅಲರಿಂದ ಸಮೆದವೋಲ್' ಆಯಿತು! ಇವು ಮನ್ಮಥನ ಬಾಣಗಳಲ್ಲವೆ?

ಇವು ಮುನ್ನಾರಾರ ಬಲ್ಪಂ ನೆಲೆಗೆಡಿಸವಿವಾರಾರ ತಕ್ಕಂ ನೆಲಕ್ಕಿ
ಕ್ಕವಿವಾರಾರುಕ್ಕೆಸೊತ್ತಂಬರಿದು ಕಿಡಿಸವಾರಾರ ಕಾಯ್ಪಿಲ್ಲಿಮಂ ನೂಂ
ಕವಿವಾರಾರೇಳ್ಗೆಯುಂ ಕುಂದಿಸಿ ಕಳೆಯವಿವಾರಾರ ಕಲ್ತ್ರಿಯ್ಗ್ಯೆಳ್ನಾಂ
ಟವೆನುತ್ತಂತಿಲ್ಲರುಂ ಬಾಯ್ಬಿಡೆ ಗಡಣದೆ ಪೂಗೋಲ್ಗಳ್ಗೆತಂದುವಾಗಳ್

ಮನ್ಮಥನ ಬಾಣಗಳ ಶಕ್ತಿ ಜಗತ್‌ಪ್ರಸಿದ್ಧವಾದದ್ದು. ಹಿಂದೆ ಆ ಬಾಣಗಳ ಮುಂದೆ ಎಂತೆಂತಹರ ಶಕ್ತಿ ಅಲ್ಲಾಡಿಹೋಗಿಲ್ಲ, ಎಂತೆಂತಹರ ಧೈರ್ಯ ಮಣ್ಣುಮುಕ್ಕಿಲ್ಲ, ಎತೆಂತಹರ ಸ್ಥೈರ್ಯವನ್ನು ಆಕ್ರಮಿಸಿ ಕೆಡಿಸಿಲ್ಲ, ಎಂತೆಂತಹರ ಕೋಪವನ್ನು ನಿರ್ಲಕ್ಷ್ಯದಿಂದ ಪಕ್ಕಕ್ಕೆ ಸರಿಸಿಲ್ಲ, ಎಂತೆಂತಹವರ ಏಳಿಗೆಯನ್ನು ಕುಂದಿಸಿ ಹಾಳುಮಾಡಿಲ್ಲ, ಎಂತೆಂತಹರ ಕಠಿಣದೇಹದಲ್ಲಿ ತಾನೆ ನಾಟಿಲ್ಲ—ಎಂದು ಜಗತ್ತೆಲ್ಲವೂ ಬಾಯಿ ಬಾಯಿ ಬಿಡುವಂತೆ ಹೂ ಬಾಣಗಳು ಹಾರಿಬಂದವಂತೆ! ಹಾಗೆ ಹಾರಿಬರುವಾಗ ಅವು ಮುಗಿಲೆಡೆಯಲ್ಲಿ ಬಂದು ಸುಳಿದಾಡುವ ಸುಂದರಿಯರ ಕಣ್ಣ ಬೆಳಕೊ, ನಕ್ಷತ್ರಗಳಿಂದ ಬಂದ ಬೆಳಕೊ, ಮಿಂಚಿನ ಗೊಂಚಲೊ, ಹಾದಿಗೆಟ್ಟು ಬರುತ್ತಿರುವ ಚಂದ್ರ

ಕಿರಣಗಳೊ—ಎಂಬಂತೆ ಕಾಣಿಸುತ್ತಿದ್ದವಂತೆ! ಇಂತಹ ಬಾಣಗಳು—ಪಂಚಬಾಣಗಳು—ಶಿವನ ಹಣೆ, ಕೆನ್ನೆ, ಅಂಗೈ, ತೊಡೆ, ತೋಳುಗಳಲ್ಲಿ ಬಂದು ಬಿದ್ದವಂತೆ. ಇದರಿಂದ 'ತೊಟ್ಟನೆ ಮಾದೇವಿಯುಮನರೆವೆಣ್ಣಾದಂ.' ಆಗದೆಯೇನು? ಶಿವನು ಅರ್ಧನಾರೀಶ್ವರನಾದುದು, ಆಂಡಯ್ಯನ ಕಲ್ಪನೆಯಲ್ಲಿ, ಈ ರೂಪವನ್ನು ತಳೆದಿದೆ.

ಶಿವನು ಮನ್ಮಥನಿಗೆ ಶಾಪಕೊಟ್ಟ. ಅದನ್ನು ಅರಿಯದ ರತಿದೇವಿ, ಗಂಡನ ಅಗಲಿಕೆಯನ್ನು ಸಹಿಸಲಾರದೆ

ಕೆಂದಳಿರ ಪಳಿವ ಪಾಸಿನೊ
ಳಂದಂಬಡೆದಿಕ್ಕೆಗಾರ್ತಿ ನನೆವಿಲ್ಲಂ ತಾ
ನೆಂದಿಂಗೆ ಬಂದು ಕೂಡುವ
ನೆಂದಂತಡಿಗಡಿಗೆ ಗಿಳಿಗಳಂ ಬೆಸಗೊಳ್ವಳ್.

ಕೆಂಪು ಚಿಗುರನ್ನು ಹೀಯಾಳಿಸುವ ಹಾಸಿಗೆಯಲ್ಲಿ ಸುಂದರವಾಗಿ ಪವಡಿಸಿರುವ ಇಕ್ಕೆಗಾರ್ತಿ ನನೆವಿಲ್ಲ ಎಂದಿಗೆ ಹಿಂದಿರುಗಿ ಬಂದು ತನ್ನನ್ನು ಕೂಡುವನೆಂದು ಸಾಕಿಯರಾದ ಗಿಳಿಗಳನ್ನು ಮೇಲಿಂದ ಮೇಲೆ ಕೇಳುತ್ತಿದ್ದಾಳೆ. ವಿರಹವನ್ನು ಸಹಿಸಲಾರದೆ 'ಎಲೆ ಗಿಳಿ, ನಿನಗೆ ತನಿವಣ್ಣನ್ನು ಲಂಚಕೊಡುತ್ತೇನೆ; ಎಲೆ ದುಂಬಿ ನಿನಗೆ ಹೂಗೊಂಚಲನ್ನು ಕೊಡುತ್ತೇನೆ; ಎಲೆ ಹಂಸ ನಿನಗೆ ಹೊಳೆವ ಕೆಂದಾವರೆ ಮೊಗ್ಗನ್ನು ಕೊಡುತ್ತೇನೆ: ಎಲೆ ತಂಗಾಳಿ ನಿನಗೆ ಸುವಾಸನೆಯನ್ನು ಕೊಡುತ್ತೇನೆ; ನನ್ನ ಪ್ರಾಣಪ್ರಿಯನನ್ನು ತಂದುಕೊಡಿ' ಎಂದು ಅಂಗಲಾಚುತ್ತಾಳೆ.

ಮನ್ಮಥನಿಗೆ ಶಾಪವಿಮೋಚನೆಯಾಗುತ್ತಲೆ ಗಿಳಿಯೊಂದು ಓಡಿಹೋಗಿ ಆ ಸಂತಸದ ಸುದ್ದಿಯನ್ನು ವಸಂತನಿಗೆ ತಿಳಿಸುತ್ತದೆ. ಆತ ಇಕ್ಕೆಗಾರ್ತಿಗೆ ತಿಳಿಸಿ, ಮುಕ್ಕಣ್ಣನನ್ನು ಗೆದ್ದು ಬಂದ ತನ್ನ ಒಡೆಯನನ್ನು ಒಡತಿಯೊಡನೆ ಇದಿರುಗೊಳ್ಳುತ್ತಾನೆ. ರತಿ ಮನ್ಮಥರು ಪರಸ್ಪರ ಸೇರುತ್ತಾರೆ. ಆಗ ರತಿಯ ದೃಷ್ಟಿ ಮನ್ಮಥನ

ಅಡಿಯಂ ಬಲ್ಪಿಡಿದುವ್ವು ನು
ಣ್ದೊಡೆಯಂ ಪಿಡಿಕಿಸಿದುವಡರ್ದು ಕಾವನ ತೋಳಂ
ಬಿಡದಪ್ಪಿದುವಂದಾಕೆಯ
ಕೊಡಕೆವರಂ ನಿಮಿರ್ದು ಪೊಳೆವ ತುರುಗೆಮೊಗಣ್ಗಳ್.

ಬಿರಿದೊಳ್ದಾವರೆಗಂಪಂ
ಕೊರಲುದ್ದಂ ಪೀರ್ವ ತುಂಬಿಯೆನೆ ಪೀಜನ ಜೆ
ಲ್ವಿರ್ದಿದ ಸವಿದುಟಿಯನೊಲವಿಂ
ಒರೆ ಪೀರ್ದುವು ನೋಡುವಿಕ್ಷುಗಾರ್ತಿಯ ಕಣ್ಗಳ್.

ಪಾದಗಳನ್ನು ಬಲವಾಗಿ ಹಿಡಿದುಕೊಂಡವು, ಆತನ ನುಣುಪಾದ ತೊಡೆಯನ್ನು ಹಿಡಿಕೆಯಲ್ಲಿ ಹಿಡಿದವು, ಮೇಲಕ್ಕೆ ಹತ್ತಿ ಕಾಮನ ತೋಳುಗಳನ್ನು ಅಪ್ಪಿಕೊಂಡವು. ಯಾರು? ಗಂಡನನ್ನು ನೋಡಲೆಂದು ಆಗ ಕಿವಿಯವರೆಗೂ ಹರಡಿಕೊಂಡಿರುವ ದಟ್ಟವಾದ ಎವೆಗಳುಳ್ಳ ಅವಳ ಕಣ್ಣುಗಳು. ಬಿರಿದ ತಾವರೆಯ ಸುವಾಸನೆಯನ್ನು ಗಂಟಲುಮಟ್ಟ ಹೀರುವ ದುಂಬಿಯಂತೆ ಆ ಕಣ್ಣುಗಳು ಗಂಡನ ಸವಿದುಟಿಗಳನ್ನು ಹೀರಿದವು.

ಆಂಡಯ್ಯನು 'ಕನ್ನಡದೊಳ್ಪಿನ ನುಡಿಯಂ ಪನ್ನಿದಜಿಂಗೊಳೆ ನೋಡಿ ತಿಳಿದುಕೊಳ್ವುದು ಬುಧರಂ' ಎಂದು ಹೇಳಿರುವ ಮಾತು ಆತನ ಕಾವ್ಯವನ್ನು ಓದಿದಮೇಲೆ ಸಾರ್ಥಕವೆನಿಸುತ್ತದೆ. ಈ ಕಾವ್ಯವು ಐತಿಹಾಸಿಕ ಘಟನೆಯೊಂದರ ನಿರೂಪಣವೆಂದು ದಿವಂಗತ ಶ್ರೀಮಾನ್ ಮುಳಿಯ ತಿಮ್ಮಪ್ಪಯ್ಯನವರು ಹೇಳುತ್ತಾರೆ. 'ಕನ್ನಡವೆಸಿಪ್ಪಾ ನಾಡು ಚೆಲ್ವಾಯ್ತು' ಎಂಬಲ್ಲಿ 'ಕನ್ನಡ' ಎಂಬ ಹೆಸರಿನ ನಾಡೊಂದು ಇದ್ದಿರಬೇಕೆಂದೂ ಕದಂಬರಾಜನಾದ ಕಾಮದೇವನು ಪೊಯ್ಸಳರೊಡನೆ ಹೋರಾಡಿ ಗೆದ್ದುದು 'ಕಾವನ ಗೆಲ್ಲ'ದ ಕಥೆಯೆಂದೂ ಅವರು ಊಹಿಸಿದ್ದಾರೆ. ಇದು ಇನ್ನೂ ವಿಚಾರಾರ್ಹವಾದ ವಿಷಯ. ಕವಿವರ್ಯರಾದ ಶ್ರೀಮಾನ್ ಬೇಂದ್ರೆಯವರು 'ಈ ಕಾವ್ಯದಲ್ಲಿ ಕಾಮನ ಗೆಲವು ಕಾವ್ಯ ತತ್ವ, ಶಿವನ ಗೆಲವು ಸೃಷ್ಟಿತತ್ವ, ಶ್ರವಣನ ವಿರಕ್ತಿ ಮುಕ್ತಿತತ್ವ' ಎಂದು 'ಆಂಡಯ್ಯ'ದ ಮುನ್ನುಡಿಯಲ್ಲಿ ಹೇಳಿ, ಇದರಲ್ಲಿ ಒಂದು ತಾತ್ವಿಕ ಧ್ವನಿಯನ್ನು ಗುರುತಿಸಿದ್ದಾರೆ.

ಇದರಲ್ಲಿ ಯಾವುದಿರಲಿ, ಯಾವುದು ಇಲ್ಲದಿರಲಿ: ವಸ್ತು, ಶೈಲಿ, ಭಾಷೆಗಳಲ್ಲಿ ನವೀನತೆಯಿದೆ. ನಿಂತ ನೀರಾಗಿದ್ದ ಚಂಪುವಿಗೆ ಹೊಸದೊಂದು ಕಾಲುವೆಯನ್ನು ತೋಡಿ, ಅದನ್ನು ಸಂತೋಷದಿಂದ ಬಳಸಿಕೊಳ್ಳಲು ಅನುವುಮಾಡಿಕೊಟ್ಟ ಆಂಡಯ್ಯ ಅಭಿನಂದನೀಯ. ಸುಗ್ಗಿಯ ಕಾಲದಲ್ಲಿ ಧನಧಾನ್ಯಸಮೃದ್ಧಿಯನ್ನು ಕಾಣುವಂತೆ ಆಂಡಯ್ಯನ ಈ 'ಸೊಬಗಿನ

ಸುಗ್ಗಿ' ಯಲ್ಲಿ ಕಾವ್ಯಸೌಂದರ್ಯ ಸಾಕಷ್ಟು ಸಮೃದ್ಧಿಯಾಗಿದೆ.

**ಮಲ್ಲಿಕಾರ್ಜುನ, ಕೇಶಿರಾಜ**

ಹದಿಮೂರನೆಯ ಶತಮಾನದ ಮಧ್ಯಭಾಗದಲ್ಲಿದ್ದ ಈ ತಂದೆ ಮಕ್ಕಳಿಬ್ಬರೂ ಕನ್ನಡಸಾಹಿತ್ಯದ ಇತಿಹಾಸದಲ್ಲಿ ತಮ್ಮದೇ ಆದ ವಿಶಿಷ್ಟಸ್ಥಾನವನ್ನು ಗಳಿಸಿಕೊಂಡು ಕೀರ್ತಿಶಾಲಿಗಳಾದವರು. ಇಬ್ಬರೂ ಕವಿಗಳೇ, ಆದರೆ ಈ ಇಬ್ಬರೂ ಬರೆದ ಕಾವ್ಯಗಳಾವುವೂ ಇದುವರೆಗೆ ಉಪಲಬ್ಧವಾಗಿಲ್ಲ. ಮಲ್ಲಿಕಾರ್ಜುನನು–ಈತನನ್ನು ಮಲ್ಲ, ಮಲ್ಲಪ್ಪ ಎಂಬ ಹೆಸರುಗಳಿಂದ ಮಾತ್ರವಲ್ಲದೆ ಚಿದಾನಂದನೆಂಬ ಹೆಸರಿನಿಂದಲೋ ಬಿರುದಿನಿಂದಲೋ ಕರೆಯಲಾಗಿದೆ—ತನ್ನ ಕಾಲದವರೆಗೆ ಬೆಳೆದು ಬಂದಿದ್ದ ಕನ್ನಡ ಸಾಹಿತ್ಯದಿಂದ ಆಯ್ದು ಪದ್ಯಸಂಕಲನವೊಂದನ್ನು ಸೂಕ್ತಿ ಸುಧಾರ್ಣವ ಎಂಬ ಹೆಸರಿನಿಂದ ರಚಿಸಿದ್ದಾನೆ. ಹತ್ತೊಂಬತ್ತು ಆಶ್ವಾಸಗಳಿರುವ ಆ ಗ್ರಂಥದಲ್ಲಿ ಮೊದಲನೆಯ ಪೀಠಿಕಾಶ್ವಾಸದಲ್ಲಿ ಆತನ ಸ್ವಂತ ಕೃಷ್ಟಿಯ ಹಲವು ಪದ್ಯಗಳು ದೊರೆಯುತ್ತವೆ. ಆ ಪೀಠಿಕೆಯಲ್ಲಿ ತನ್ನ ವಿಚಾರವನ್ನು ಹೇಳಿಕೊಳ್ಳುತ್ತಾ ಆತನು

ಸರಸ ಕವೀಶ್ವರಸಭೆಯೊಳ್
ಸರಸ ಕವೀಶಂ ವಿಶಿಷ್ಟಮುನಿಗಳ ಸಭೆಯೊಳ್
ಪರಮಮುನಿ ಬುಧರ ಸಭೆಯೊಳ್
ಪರಮ ಬುಧನೆನಿಪ್ಪನೀ ಚಿದಾನಂದ ಬುಧಂ

ರಸಜ್ಞರಾದ ಕವಿಗಳ ಸಭೆಯಲ್ಲಿ ತಾನು ಕವಿ, ಮುನಿಗಳ ಸಭೆಯಲ್ಲಿ ಪರಮಮುನಿ, ವಿದ್ವಾಂಸರ ಸಭೆಯಲ್ಲಿ ಶ್ರೇಷ್ಠನಾದ ವಿದ್ವಾಂಸ ಎನ್ನಿಸಿಕೊಂಡಿದ್ದಾನೆ ಚಿದಾನಂದ ಪಂಡಿತ—ಎಂದು ಹೇಳಿಕೊಂಡಿದ್ದಾನೆ. ಆ ಹೇಳಿಕೆ ಸುಳ್ಳಲ್ಲವೆನ್ನುವಂತೆ ಆತನು ರಚಿಸಿರುವ ಹಲವು ಶಾಸನಪದ್ಯಗಳೂ ಈ ಪೀಠಿಕಾಭಾಗದಲ್ಲಿ ಕಂಡು ಬರುತ್ತವೆ. ಆದರೆ ಆತನು ಬರೆದ ಕಾವ್ಯಗಳಾವುವೆಂಬುದನ್ನು ಆತನು ಹೇಳಿಕೊಂಡಿಲ್ಲ, ಯಾವ ಕಾವ್ಯವೂ ಉಪಲಬ್ಧವಾಗಿಲ್ಲ. 'ಯೋಗಿಪ್ರವರ ಚಿದಾನಂದ ಮಲ್ಲಿಕಾರ್ಜುನ ಸುತನೆಂ' ಎಂದು ಹೇಳಿಕೊಂಡಿರುವ ಕೇಶಿರಾಜನು 'ಚೋಳಪಾಲಚರಿತ' 'ಸುಭದ್ರಾಹರಣ' 'ಪ್ರಬೋಧಚಂದ್ರ', 'ಕಿರಾತ'—ಎಂಬ ಗ್ರಂಥಗಳನ್ನು ಬರೆದಿರುವುದಾಗಿ ತನ್ನ 'ಶಬ್ದಮಣಿದರ್ಪಣ' ದಲ್ಲಿ ಹೇಳಿಕೊಂಡಿದ್ದಾನೆ. ಆದರೆ ಇವುಗಳಲ್ಲಿ

ಯಾವುದೊಂದೂ ಈವರೆಗೆ ಉಪಲಬ್ಧವಾಗಿಲ್ಲ. ಈ ಗ್ರಂಥಗಳಲ್ಲಿ ಪ್ರಬೋಧ ಚಂದ್ರವೆಂಬುದು ನಾಟಕವಾಗಿದ್ದಿರಬಹುದೆಂದು ಊಹಿಸುತ್ತಾರೆ. ನಾಟಕ ವೆಂಬುದು ಮೊಲದ ಕೋಡಾಗಿರುವ ಹಳಗನ್ನಡ ಸಾಹಿತ್ಯದಲ್ಲಿ ಈ ನಾಟಕ ಆದು ನಾಟಕವಾಗಿರುವ ಪಕ್ಷಕ್ಕೆ—ಅಮೂಲ್ಯವಾದ ಸ್ಥಾನಕ್ಕೆ ಅರ್ಹವಾ ಗುತ್ತಿತ್ತು. 'ಸೂಕ್ತಿ ಸುಧಾರ್ಣವ' ದಲ್ಲಿರುವ ಕೆಲವು ಪದ್ಯಗಳು 'ಚೋಳಪಾಲ ಚರಿತ' ದಿಂದ ತೆಗೆದುಕೊಂಡುವಿರಬಹುದೆಂದು ಆ ಗ್ರಂಥ ವನ್ನು ಸಂಪಾದಿಸಿರುವ ಶ್ರೀಮಾನ್ ಎಸ್. ಅನಂತರಂಗಾಚಾರ್ಯರು ಗುರುತಿಸುತ್ತಾರೆ. ಆದರೆ 'ಇದಮಿತ್ಥಂ' ಎಂದು ಈ ವಿಚಾರದಲ್ಲಿ ಹೇಳು ವಂತಿಲ್ಲ. 'ಸೂಕ್ತಿ ಸುಧಾರ್ಣವ' ದಲ್ಲಿ ಈವರೆಗೆ ಸಿಕ್ಕದಿರುವ ಎಷ್ಟೋ ಕವಿಕಾವ್ಯಗಳಿಂದ ಉದ್ಧರಿಸಿರುವ ಪದ್ಯಗಳಿವೆ. ಇವುಗಳಲ್ಲಿ ಮಲ್ಲಿಕಾರ್ಜುನ ಕೇಶಿರಾಜರ ಪದ್ಯಗಳೂ ಇರಬಹುದು. ಅವರ ಕಾವ್ಯಗಳು ಮಹೋನ್ನತ ಕಾವ್ಯಗುಣಗಳೇನೂ ಇಲ್ಲದ ಲೌಕಿಕಕಾವ್ಯಗಳಾಗಿದ್ದು, ಜನಾದರಣೆಯನ್ನು ಪಡೆಯದೆ ಸತ್ತುಹೋಗಿದ್ದರೂ ಇರಬಹುದು.

ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿರುವ ಪೀಠಿಕಾಶ್ವಾಸವನ್ನು ಬಿಟ್ಟರೆ ಉಳಿದ ಹದಿನೆಂಟು ಆಶ್ವಾಸಗಳಲ್ಲಿ ಹದಿನೆಂಟು ಬಗೆಯಾದ ವರ್ಣನೆಗಳು ಕಂಡು ಬರುತ್ತವೆ. ಆಯಾ ವರ್ಣನೆಗಳಲ್ಲಿ ಅತ್ಯಂತ ರಸವತ್ತಾ ದವುಗಳನ್ನು ಆಯ್ದು ತನಗೆ ಸಿಕ್ಕಷ್ಟನ್ನು ಇಲ್ಲಿ ಸೇರಿಸಿಕೊಂಡಿದ್ದಾನೆ. ಸಂಸ್ಕೃತದಲ್ಲಿ ಇಂತಹ ಸಂಕಲನ ಗ್ರಂಥಗಳು ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತವೆಯಾದರೂ ಕನ್ನಡದಲ್ಲಿ ಇದೇ ಮೊತ್ತಮೊದಲನೆಯ ಗ್ರಂಥ.

ಈ ಸಂಕಲನದಲ್ಲಿ ವೃತ್ತ ಕಂದಗಳಿಗೆ ಮಾತ್ರ ಮನ್ನಣೆ ದೊರೆತಿದೆ. ಆ ವೇಳೆಗೆ ದೇಶೀ ಗ್ರಂಥಗಳು ಸಾಕಷ್ಟು ಪ್ರಮಾಣದಲ್ಲಿ ಹುಟ್ಟಿಕೊಂಡಿದ್ದ ವಾದರೂ ಅವು ಪಂಡಿತರ ಮನ್ನಣೆಗೆ ಪಾತ್ರವಾಗಿರಲಿಲ್ಲವೆಂಬುದು ಇದರಿಂದ ಸ್ವಯಂ ಸಿದ್ಧವಾಗುತ್ತದೆ. ಹರಿಹರನ ಗಿರಿಜಾಕಲ್ಯಾಣದಿಂದ ಪದ್ಯಗಳನ್ನು ಉದ್ಧರಿಸಿದ್ದಾನೆ, ಸಂಗ್ರಹಕಾರ. ಆದರೆ ಆ ಕವಿಯ ರಗಳೆಗಳಾಗಲಿ ರಾಘ ವಾಂಕನ ಕಾವ್ಯಭಾಗಗಳಾಗಲಿ ಇಲ್ಲಿ ಇಲ್ಲ.

ಸೂಕ್ತಿ ಸುಧಾರ್ಣವವು ಕನ್ನಡ ಸಾಹಿತ್ಯ ಚರಿತ್ರೆಯ ನಿರ್ಮಾಣಕ್ಕೆ ಅಮೂಲ್ಯವಾದ ಸಹಾಯವನ್ನು ಒದಗಿಸಿದೆ. ಇನ್ನೂ ಅಜ್ಞಾತವಾಸ

ಮಾಡುತ್ತಿರಬಹುದಾದ ಅಥವಾ ಸತ್ತೇ ಹೋಗಿರುವ ಅನೇಕ ಕವಿಕಾವ್ಯಗಳ ಭಾಗಗಳು ಮಾದರಿಗಾಗಿಯಾದರೂ ಈ ಸಂಕಲನ ಗ್ರಂಥದಲ್ಲಿ ಸಿಕ್ಕುತ್ತವೆ. ಇದಕ್ಕೂ ಮುಖ್ಯವಾಗಿ ಕವಿಕಾಲನಿರ್ಣಯಕ್ಕೆ ಇದೊಂದು ಮುಖ್ಯ ಆಧಾರ ವನ್ನು ಒದಗಿಸುತ್ತದೆ. ಈ ಗ್ರಂಥದಲ್ಲಿ ಉದಾಹೃತವಾಗಿರುವ ಪದ್ಯಕಾವ್ಯಗಳ ಕರ್ತೃಗಳು ಕ್ರಿ. ಶ. ೧೨೫೦ಕ್ಕಿಂತಲೂ ಹಿಂದಿನವರೆಂದು, ಇದರಲ್ಲಿ ಉದಾ ಹೃತರಾಗದ ಕವಿಗಳು ಅಲ್ಲಿಂದ ಈಚಿನವರೆಂದು ನಿರ್ಧರಿಸಲು ಸಾಧ್ಯವಾಗು ವಂತಹ ಒಂದು ಗಡಿಕಲ್ಲು, ಈ ಸಂಕಲನ ಗ್ರಂಥ. ಇದರ ಸಂಗ್ರಹಕಾರನು ತನ್ನ ಕಾರ್ಯದಲ್ಲಿ ಅಸಾಧಾರಣವಾದ ವಿವೇಕ, ರುಚಿ ಶುದ್ಧಿಗಳನ್ನು ಬಳಸಿರುವ ನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

'ಸೂಕ್ತಿ ಸುಧಾರ್ಣವ'ದ ಸಂಗ್ರಹಕಾರ್ಯದಲ್ಲಿ ತನ್ನ ತಂದೆಯೊಡನೆ ಕೇಶಿರಾಜನೂ ದುಡಿದಿರಬೇಕು. ಪೂರ್ವ ಕವಿ ಕಾವ್ಯಗಳೆಲ್ಲವನ್ನೂ ಆ ಮೂಲಾಗ್ರವಾಗಿ ಓದುವ ಪ್ರಸಂಗ ಬಿದ್ದಾಗ, ಪಂಡಿತನಾದ ಅವನ ತಂದೆ ಆಯಾ ಕಾವ್ಯಗಳಲ್ಲಿ ಕಾಣಬರುತ್ತಿದ್ದ ವ್ಯಾಕರಣ ವಿಶೇಷಗಳ ಕಡೆ ಅವನ ಗಮನವನ್ನು ಸೆಳೆದು ವ್ಯಾಕರಣದ ಪ್ರಾಯೋಗಿಕ ಶಿಕ್ಷಣವನ್ನು ಕೊಡು ತ್ತಿದ್ದನೊ ಏನೊ! ಇದರ ಜೊತೆಗೆ ವ್ಯಾಕರಣ ನಿಯಮಗಳಿಗೆಲ್ಲಾ ಸೊಗ ಸಾದ ಪ್ರಮಾಣಗಳನ್ನು ಆರಿಸಿಕೊಳ್ಳಲು ಅವನಿಗೆ ಅನುವೂ ದೊರೆತಿರ ಬೇಕು. ಹೀಗಾಗಿ, ಆತನು ಸೊಗಸಾದ 'ಶಬ್ದಮಣಿದರ್ಪಣ'ವೆಂಬ ವ್ಯಾಕರಣ ವನ್ನು ರಚಿಸಿರಬಹುದು. ಇಲ್ಲಿನ ಸೂತ್ರಗಳೆಲ್ಲವೂ ಕೇಶಿರಾಜ ವಿರಚಿತ ಕಂದ ಪದ್ಯಗಳು. ಅವುಗಳ ವೃತ್ತಿಯನ್ನೂ ತಾನೇ ಗದ್ಯದಲ್ಲಿ ಬರೆದು ಅವುಗಳಿಗೆ ಉದಾಹರಣೆಗಳನ್ನು ಪೂರ್ವ ಕವಿ ಪ್ರಯೋಗಗಳಿಂದ ಎತ್ತಿಕೊಡುತ್ತಾನೆ. ಇಲ್ಲಿನ ಕಂದ ಪದ್ಯಗಳು ವ್ಯಾಕರಣ ನಿಯಮಗಳನ್ನು ಬೋಧಿಸಹೊರಟಿ ದ್ದರೂ ಲಲಿತವಾಗಿ ಸರಳವಾಗಿ ನಿರರ್ಗಳವಾಗಿ ಹರಿದುಕೊಂಡು ಹೋಗು ತ್ತವೆ. ಅದಕ್ಕೂ ಹೆಚ್ಚಾಗಿ ಆತನ ಉದಾಹರಣೆಗಳು ಅತ್ಯಂತ ಸುಂದರ ವಾಗಿದ್ದು, ವ್ಯಾಕರಣಕ್ಕೆ ಕಾವ್ಯದ ಮೆರುಗನ್ನು ಕೊಟ್ಟಿವೆ. ಅವನ ಪ್ರಾಮಾಣಿಕತನವೂ ಸ್ತೋತ್ರಾರ್ಹವಾದುದು. ಪ್ರಮಾಣವಿಲ್ಲದೆ ಈತನು ಮಾತನಾಡುವವನಲ್ಲ. ಹಳಗನ್ನಡದ ಬಳಕೆಯಲ್ಲಿ ಆಗುತ್ತಿದ್ದ ತಪ್ಪುಗಳನ್ನು ನಿವಾರಿಸಿ ಪಾರಿಶುದ್ಧತೆಯನ್ನು ಕಾಪಾಡಬೇಕೆಂಬ ಆತನ ಉತ್ಕಟೇಚ್ಛೆ,

ಕನ್ನಡ ಭಾಷಾಶುದ್ಧತೆಯಲ್ಲಿರುವ ಕಳಕಳಿ ಸ್ತೋತ್ರಾರ್ಹವಾದುವು. ಕನ್ನಡಕ್ಕೆ ಧಾತುಪಾಠವನ್ನು ಸೃಷ್ಟಿಮಾಡಿಕೊಟ್ಟ ಕೀರ್ತಿಯೂ ಈತನಿಗೆ ಮೀಸಲಾಗಿದೆ.

ಕೇಶಿರಾಜನ ತಂದೆ ಕವಿ, ದೊಡ್ಡ ವಿದ್ವಾಂಸ; ತಾಯಿ ಕವಿ ಸುಮನೋಬಾಣನ ಮಗಳು; ಜನ್ನ ಸೋದರಮಾವ. ಮಗುವಾಗಿದ್ದಾಗಿನಿಂದಲೂ ಸಾರಸ್ವತವಾತಾವರಣದಲ್ಲಿ ಬೆಳೆದು ಆತನ ವ್ಯಕ್ತಿತ್ವ ರೂಪಿತವಾಗಿರಬೇಕು. ತನ್ನ ನಿಷ್ಕೃಷ್ಟ ಜ್ಞಾನದಲ್ಲಿ ಆತನಿಗೆ ಆತ್ಮಪ್ರತ್ಯಯ ತುಂಬಿದೆ. ತಾನು 'ನಡೆದುದೆ ಮಾರ್ಗಂ, ಪದವಿಡಲೊಡರಿಸಿದುದೆ ಭಂಗಿ, ಕೇಶವಂಗಿದಿರುಂಟೆ?' ಎಂಬ ಆತನ ಹೇಳಿಕೆ ಅಹಂಕಾರ ಮೂಲವಾದುದಲ್ಲ; ಸರ್ವಸತ್ಯ. ಕವಿಮಲ್ಲ (ಕ್ರಿ.ಶ. ೧೪೮೦)ನು ತನ್ನ 'ಮನ್ಮಥ ವಿಜಯ'ದಲ್ಲಿ 'ನಿರುತಂ ಕರ್ಣಾಟಕದೊಳ್ ಪರಿಕಿಸೆ ಶಬ್ದಜ್ಞನಾವನೊರ್ವನೆ ಲೋಕಕ್ಕರಿದಲ್ತೆ ಭಾಪು ಕವಿಕುಂಜರ ಕೇಶವರಾಜ' ಎಂದು ಈತನನ್ನು ಹೊಗಳಿರುವುದು ಸಾರ್ಥಕವಾಗಿದೆ. ಕೇಶಿರಾಜನು ವ್ಯಾಕರಣದಿಂದ ಪದ, ಅರ್ಥ, ತತ್ವಾಲೋಕಗಳ ಮೆಟ್ಟಿಲನ್ನು ಹತ್ತಿ ಮೋಕ್ಷಕ್ಕೇರಬಹುದೆಂದು ಹೇಳುತ್ತಾನೆ. ಆತನಿಂದ ಮೋಕ್ಷಕ್ಕೆ ಏರಲು ಸಹಾಯವಾಗಲಿ, ಬಿಡಲಿ; ಪಾಂಡಿತ್ಯ-ನಿರ್ದುಷ್ಟ ಪಾಂಡಿತ್ಯ-ಕ್ಕೇರಲು ಸಹಾಯವಾಗುವುದರಲ್ಲಿ ಸಂಶಯವಿಲ್ಲ.

**ಮಹಾಬಲ :**

ಹದಿಮೂರನೆಯ ಶತಮಾನದ ಮಧ್ಯಭಾಗದಲ್ಲಿ (ಕ್ರಿ.ಶ.ಸು ೧೨೫೪) ಇದ್ದ ಈ ಕವಿ ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿನಾಥನನ್ನು ಕುರಿತು ಹದಿನಾರು ಆಶ್ವಾಸಗಳ 'ನೇಮಿನಾಥ ಪುರಾಣ'ವನ್ನು ಬರೆದಿದ್ದಾನೆ. ರಾಯಿದೇವ-ರಾಜಿಯಕ್ಕ ಎಂಬ ಜೈನದಂಪತಿಗಳ ಮಗನಾದ ಈತನಿಗೆ ಮೇಘಚಂದ್ರನು ಧರ್ಮಗುರು, ಮಾಧವಚಂದ್ರನು ವಿದ್ಯಾಗುರು. 'ಕ್ಷೇಮಂಕರ' ಎಂಬ ಬಿರುದುಳ್ಳ ಕೇತಯ ನಾಯಕನೆಂಬುವನ ಅಪೇಕ್ಷೆಯಂತೆ ಕವಿಯು ಗ್ರಂಥರಚನೆ ಮಾಡಿರುವುದಾಗಿ ಹೇಳಿಕೊಂಡಿದ್ದಾನೆ. 'ಸಹಜಕವಿಮನೋಗೇಹ ಮಾಣಿಕ್ಯ ದೀಪ,' ವಿಶ್ವವಿದ್ಯಾ ವಿರಿಂಚಿ' ಎಂಬ ಬಿರುದುಗಳಿವೆ, ಈತನಿಗೆ. ತನ್ನ ಕಾವ್ಯ

ಎಳವೆಂಗಳಪಾಂಗಪ್ರಭೆ
ಮಳಯ ಸಮೀರಣನ ಸೋಂಕು ಪೊಸಸುಗ್ಗಿಯ ತಿಂ
ಗಳ ಪೊಳೆಪು ಮಹಾಬಳ ಕೃತಿ
ಯೊಳಗಾಗಿಸದಿರವು ಜಗದ ಜಾಣರ ಮನವಂ

ಮಹಾಬಲ ಕವಿಯ ಕಾವ್ಯದಿಂದ ಜಗತ್ತಿನ ಜಾಣರ ಮನಸ್ಸು ಎಳೆಯ ಪ್ರಾಯದ ಹೆಣ್ಣಿನ ಕಡೆಗಣ್ಣೋಟ, ಮಲಯ ಮಾರುತನ ಸೋಂಕು, ಹೊಸ ಸುಗ್ಗಿಯ ಬೆಳುದಿಂಗಳ ಕಾಂತಿ–ಇವುಗಳಲ್ಲಿ ಲೀನವಾದಂತೆ ಮಾಡದೆ ಇರುವುದಿಲ್ಲ.–ಎಂದು ಹೇಳುತ್ತಾನೆ. ಈ ಮಾತು ಅತಿಶಯೋಕ್ತಿ. ಕವಿಯ ಕಾವ್ಯವೆಲ್ಲವೂ ಚರ್ವಿತಚರ್ವಣ. ಕಥೆ ಹಳೆಯದು, ವರ್ಣನೆ ಕವಿಸಮಯ ಚೋದಿತ. ಪ್ರೌಢಬಂಧದ ಇತರ 'ಮಹಾಕಾವ್ಯ'ಗಳಂತೆ ಮಹಾಬಲನ ಕಾವ್ಯವೂ ಔಚಿತ್ಯಕ್ಕೆ ಅಪೋಹನನ್ನು ತಂದಿದೆ.

**ನರಹರಿತೀರ್ಥ :**

ಹದಿಮೂರನೆಯ ಶತಮಾನದ ಉತ್ತರಾರ್ಧದಲ್ಲಿದ್ದ (ಕ್ರಿ.ಶ. ೧೨೮೧) ಈತನು ಹರಿದಾಸರಲ್ಲಿ ಬಹು ಪ್ರಾಚೀನನಾದವನು. ಮೊದಲನೆಯವನು ಒಂಬತ್ತನೆಯ ಶತಮಾನದ ಸುಮಾರಿನಲ್ಲಿದ್ದ ಅಚಲಾನಂದ ದಾಸ; ನರಹರಿ ತೀರ್ಥನು ಆ ಸೀಳಿಗೆಯಲ್ಲಿ ಎರಡನೆಯವನು–ಎಂದು ಹೇಳುತ್ತಾರೆ. 'ದಾಸಪಂಥ'ವೆಂಬ ಹೆಸರಿನಿಂದ ಮುಂದೆ ಹರಿದಾಸರ ವಿಷಯವನ್ನು ಕುರಿತು ವಿವೇಚಿಸುವುದರಿಂದ ಈತನ ಕೃತಿಗಳನ್ನು ಕುರಿತು ಇಲ್ಲಿ ಪ್ರಸ್ತಾಪಿಸುವ ಅಗತ್ಯವಿಲ್ಲ.

**ಚೌಂಡರಸ :**

ಸಂಸ್ಕೃತದಲ್ಲಿ ಉದ್ದಾಮ ಕವಿಯೆಂದು ಸುಪ್ರಸಿದ್ಧನಾಗಿರುವ ದಂಡಿಯ 'ದಶಕುಮಾರ ಚರಿತ'ವನ್ನು ಕನ್ನಡಕ್ಕೆ ತಂದುಕೊಟ್ಟ ಚೌಂಡರಸನು ಬಹುಶಃ ಪಂಡರಾಪುರದ ಪ್ರಾಂತದವನಿರಬೇಕೆಂದು ತೋರುತ್ತದೆ. ಈತನು ತನ್ನ ಕಾವ್ಯದ ಪ್ರಾರಂಭದಲ್ಲಿ ವಿಟ್ಠಲನನ್ನು ಸ್ತೋತ್ರಮಾಡಿರುವುದಲ್ಲದೆ, ತನ್ನ ಕಾವ್ಯದ ನಾಯಕನನ್ನು ಪಂಡರಾಪುರಕ್ಕೆ ಕರೆತಂದು, ವಿಟ್ಠಲನ ಗುಡಿಯನ್ನು ವಿಸ್ತಾರವಾಗಿ ವರ್ಣಿಸಿ, ನಾಯಕನಿಂದ ದೇವರನ್ನು ಸ್ತೋತ್ರ ಮಾಡಿಸಿದ್ದಾನೆ. ಈತನು 'ನಳಚರಿತ್ರೆ'ಯೆಂಬ ಮತ್ತೊಂದು ಪ್ರೌಢಗ್ರಂಥ

ವನ್ನೂ ರಚಿಸಿದ್ದಾನೆ. ಈತನ ತಂದೆ ಮಧುಸೂದನ, ತಾಯಿ ಮಲ್ಲಮ್ಮೆ, ಮಡದಿ ಲಕ್ಷ್ಮೆ, ಅಣ್ಣ 'ಸರಸಕವೀಶ್ವರ.' ಈ 'ಸರಸಕವೀಶ್ವರ'ನ ನಿಜವಾದ ಹೆಸರೇನೋ, ಈತನು ಬರೆದ ಕಾವ್ಯಗಳಾವುವೋ ಗೊತ್ತಿಲ್ಲ. ಈತನ ಕಾಲವೂ ನಿರ್ದಿಷ್ಟವಾಗಿ ಗೊತ್ತಿಲ್ಲ. ಸುಮಾರು ೧೩೦೦ ಎಂದು ಕವಿಚರಿತಕಾರರು ಊಹಿಸಿದ್ದಾರೆ.

ದಂಡಿಯ 'ದಶಕುಮಾರ ಚರಿತ'ವು ಒಂದು ಚಿತ್ರಕಥಾ ಜಾತಿಗೆ ಸೇರಿದೆ. ಕಥೆಯೇ ಪ್ರಧಾನವಾದ, ಸರಗಥೆಯನ್ನು ಒಳಗೊಂಡ ಪದ್ಯಕಾವ್ಯ. ಹತ್ತು ಜನ ರಾಜಕುಮಾರರ ಸಾಹಸಗಳನ್ನು, ಸಾಹಸಪ್ರೇಮವನ್ನು ಒಳಗೊಂಡ, ಈ ಕಥೆ ಬಹುಮಟ್ಟಿಗೆ ಕಾಮರಾಜ್ಯದಲ್ಲಿ ವಿಹರಿಸುತ್ತದೆ. ಸ್ತ್ರೀಪುರುಷರ ಭೋಗದೃಷ್ಟಿ, ಸಂಭೋಗದೃಷ್ಟಿ ಇಲ್ಲಿ ಎದ್ದು ಕಾಣುತ್ತದೆ. ಈ ಕಾವ್ಯದ ಹಿರಿತನವೇನಿದ್ದರೂ ದಂಡಿಯ ಪಾಂಡಿತ್ಯ ಪ್ರದರ್ಶನ. ಆತನ ಭಾಷಾ ಪ್ರೌಢಿಮೆ. ಬಾಣಭಟ್ಟನನ್ನು ಪಡೆದ ಸಂಸ್ಕೃತಭಾಷೆ ದಂಡಿಯನ್ನೂ ಪಡೆದು ಕೊಳ್ಳಬಲ್ಲುದು. ಆದರೆ ಕನ್ನಡದಲ್ಲಿ? ಕಥನ ಕುತೂಹಲ ಮಾತ್ರವೇ ಪ್ರಯೋಜನವಾಗಿರುವ ಕಾವ್ಯವೊಂದರಲ್ಲಿ ಬಿರುಸಾದ ಭಾಷಾ ಶೈಲಿಗಳೂ ಬಂದರೆ ಕಡಲೆಯನ್ನು ಮುಕ್ಕಹೊರಟವನು ಕಲ್ಲನ್ನು ಅಗಿದಂತಾಗುತ್ತದೆ. ಮೂಲದಲ್ಲಿ ಸಂಕ್ಷೇಪವಾಗಿ, ಸಾರವತ್ತಾಗಿರುವ ಕಥೆಯನ್ನು ಚೌಂಡರಸ ಒಂದಕ್ಕೆ ನಾಲ್ಕರಷ್ಟು ಹಿಗ್ಗಲಿಸಿದ್ದಾನೆ; ಅಲ್ಲಿ ಸ್ವಲ್ಪವಾಗಿ, ಗುಂಭವಾಗಿ ಹೇಳಿರುವುದನ್ನು ಇಲ್ಲಿ ವಿವರವಾಗಿ ವಿಸ್ತರಿಸುತ್ತಾನೆ, ನಮ್ಮ ಕವಿ. ಹೆಣ್ಣಿನ ವರ್ಣನೆ ಬಂದಿತೆಂದರೆ ಚೌಂಡರಸ ಮೈಮರೆಯುತ್ತಾನೆ; ಆಪಾದಮಸ್ತಕ ವರ್ಣನೆಯನ್ನು ಸಂಕೋಚವಿಲ್ಲದೆ—ಐವತ್ತು ಪದ್ಯಗಳಷ್ಟು ದೀರ್ಘವಾಗಿ—ವಿವರ ವಿವರವಾಗಿ ವರ್ಣಿಸುತ್ತ ಹೋಗಿ ನಮ್ಮ ಅಭಿರುಚಿಯನ್ನೆಲ್ಲಾ ಆಹುತಿ ತೆಗೆದುಕೊಳ್ಳುತ್ತಾನೆ. ಔಚಿತ್ಯವಿಲ್ಲದ ವರ್ಣನೆ, ಭಾವಕ್ಕೆ ತಕ್ಕುದಲ್ಲದ ಭಾಷೆ, ರುಚಿಶುದ್ಧಿಯಿಲ್ಲದ ಅಭಿರುಚಿ—ಇವು ಈ ಕಾವ್ಯದ ಸ್ವರೂಪ. ಕವಿ ಈ ಆಕ್ಷೇಪಣೆಗಳನ್ನು ಗುಡಿಸಿಹಾಕುವುದು ಈ ಪ್ರೇರಕೆಯಿಂದ :—

ಸಕಲಾಂತರ್ಯಾಮಿ, ಜೀವಪ್ರಕರ ವಿವಿಧ ಚೈತನ್ಯರೂಪಂ ಜಗದ್ವ್ಯಾ
ಪಕ ಭಾವಂ ವಿಷ್ಣುವೆಂದಾಗಮತತಿ ಸತತಂ ಸಾರ್ವ ಸಂಬಂಧದಿಂ ಕೌ
ತುಕದಿಂದಾನಾವುದಂ ಬಣ್ಣಿಸಿದೊಡದು ಹರಿಸ್ತೋತ್ರಮೆಂದೀಗಳೀ ಚಿ
ತ್ರಕಥಾ ವಿಸ್ತಾರಮಂ ಬಣ್ಣಿಸಲೊಡರಿಸಿದೆಂ ಸತ್ಕವಿಶ್ರೇಣಿ ಮೆಚ್ಚಲ್.

ವಿಷ್ಣುವು ಸಕಲರ ಅಂತರಂಗದಲ್ಲಿಯೂ ಇದ್ದಾನೆ. ಬೇರೆಬೇರೆ ಜೀವಿಗಳ ಚೈತನ್ಯರೂಪನಾದವನು. ಜಗತ್ತನ್ನೆಲ್ಲಾ ವ್ಯಾಪಿಸಿದವನು—ಎಂದು ವೇದಗಳು ಸದಾ ಸಾರುತ್ತಿರುವುದರಿಂದ ನಾನು ಯಾವುದನ್ನು ಕುತೂಹಲದಿಂದ ಬಣ್ಣಿಸಿದರೂ ಅದು ಹರಿಯ ಸ್ತೋತ್ರವಾಗುವುದೆಂದು ಈಗ ಈ ಚಿತ್ರಕಥೆಯನ್ನು ಸತ್ವವಿಗಳ ಸಮೂಹವೆಲ್ಲಾ ಮೆಚ್ಚುವಂತೆ ವರ್ಣಿಸತೊಡಗಿದ್ದೇನೆ. ಕವಿಯ ಈ ನಿಲವು, ಅತ್ತ ವೇದಕ್ಕೂ ಇತ್ತ ಸತ್ವವಿಗಳಿಗೂ ಮಂಗಳಾರತಿಯೆತ್ತಿದಂತಾಗಿದೆ.

ಕವಿಯನ್ನು ಹೀಗೆ ಸಹಾನುಭೂತಿದೋರದೆ ಕಟುವಾಗಿ ಟೀಕಿಸುವುದು ಬಹು ಅಪ್ರಿಯ ಕಾರ್ಯವಾದರೂ ಸಾಹಿತ್ಯಾಭ್ಯಾಸಿಗಳಿಗೆ ಇದರ ಸ್ವರೂಪವನ್ನು ದಿಗ್ದರ್ಶನ ಮಾಡಿಸುವುದು ಅಗತ್ಯವಾಗಿದೆ. ಕವಿಗೆ ಕಥನ ಶಕ್ತಿಯೇ ಇಲ್ಲವೆಂದಲ್ಲ, ಕಥೆಗಳನ್ನು ಬಿಡಿಬಿಡಿಯಾಗಿ ತೆಗೆದುಕೊಂಡಾಗ, ಕಥನೈಕ ದೃಷ್ಟಿಯಿಂದ ಮಾತ್ರವೇ ನೋಡಿದಾಗ, ವಿಚಿತ್ರವಾಗಿ ರಮ್ಯವಾಗಿರುವ ಕಥೆಗಳು ಕೆಲವು ಇಲ್ಲಿ ಸಿಕ್ಕುತ್ತವೆ. ಧೂಮಿನಿಯ ಕಥೆ, ಮರೀಚಿ ಋಷಿಯ ಕಥೆ—ಇತ್ಯಾದಿಗಳು ಕವಿಯ ದೃಷ್ಟಿ ಸೂಕ್ಷ್ಮವಾಗಿದ್ದರೆ ಅದ್ಭುತವಾದ ರುದ್ರ ಕಾವ್ಯಗಳಾಗಬಹುದಾಗಿತ್ತು. ಅದಕ್ಕೆ ಬದಲಾಗಿ ಹಿರಿಯ ಚೇತನವೊಂದು ಅಧಃಪತನವಾದಾಗ ಚಪ್ಪಾಳೆ ತಟ್ಟುತ್ತಾ ನಗುವ ಲಘು ಬುದ್ಧಿಯನ್ನು ಕವಿ ಪ್ರದರ್ಶಿಸಿದ್ದಾನೆ. ಒಂದೆರಡು ಕಡೆ ಕವಿಯ ವರ್ಣನೆಗಳೂ ಮನೋಹರವಾಗಿವೆ. ಕಗ್ಗತ್ತಲೆ 'ಬಗಿದು ಪುಗಲರಿದು, ನೋಡಲ್ ಬಗೆಯಲ್ ಕಣ್ ಸಲ್ಲದು' ಅಂತೆ! ಹಾಗೆಯೆ

> ಸೋಂಕಿ ಸ್ಥಾವರಮಂ, ಮಾ
> ತಂ ಕೇಳ್ವುದರಿಂದೆ ಜಂಗಮಂಗಳನಱಿವರ್
> ತಾಂ ಕಾಣ್ಕೆಗರಿದೆನಲ್ ಬಗೆ
> ಗೇಂ ಕಡು ಮಂದೈಸಿ ನಿಂದುದೋ ಘನತಿಮಿರಂ

ದಟ್ಟವಾಗಿ ಕತ್ತಲು ಕವಿದಿದೆ. ಆಗ ಸ್ಥಾವರಗಳನ್ನು ಮುಟ್ಟಿದರೆ ಮಾತ್ರ ತಿಳಿಯಬಹುದು: ಜಂಗಮಗಳನ್ನು ಅವುಗಳ ಮಾತನ್ನು ಅಥವಾ ಧ್ವನಿಯನ್ನು ಕೇಳಿದರೆ ಮಾತ್ರ ತಿಳಿಯಬಹುದು. ಕಣ್ಣಿಂದ ನೋಡುವುದಕ್ಕೆ ಮಾತ್ರ ಸಾಧ್ಯವೇ ಇಲ್ಲ. ಇದೊಂದು ಸಂಜೆಯ ವರ್ಣನೆ—

ಕಿಸುಸಂಜೆ ಪಿಡಿದ ಜವನಿಕೆ
ಮಿಸುಗುವ ತಾರಾಳಿ ಪರೆದ ಪುಷ್ಪಾಂಜಲಿಯಾ
ಗಸವೆಸೆವ ರಂಗಮಾಗಲ್
ಶಶಿಪ್ರಭಾ ನಾಟ್ಯಮೇಂ ಮನಂಗೊಳಿಸಿದುದೋ

ಸಂಜೆಗೆಂಪು ಹಿಡಿದ ತೆರೆ, ಹೊಳೆವ ನಕ್ಷತ್ರಗಳು ಚೆಲ್ಲಿದ ಪುಷ್ಪಾಂಜಲಿ, ಆಕಾಶವೇ ರಂಗಸ್ಥಳ, ಚಂದ್ರಕಾಂತಿಯ ನಾಟ್ಯವು ಏನು ಮನೋಹರವಾಗಿತ್ತು! ಕವಿಯ ವರ್ಣನೆಯು ಮನೋಹರವಾಗಿದೆ. ಚಂದ್ರನವರ್ಣನೆ, ಪ್ರಾತಃಕಾಲದ ವರ್ಣನೆ—ಒಂದೊಂದು ಪದ್ಯ—ಸುಂದರವಾಗಿದೆ. ಸಹಸ್ರ ಪದ್ಯಗಳ ಕಾವ್ಯದಲ್ಲಿ ಎತ್ತೆತ್ತಲೂ ಹಬ್ಬಿರುವ ಕಗ್ಗತ್ತಲೆಯ ಮಧ್ಯದಲ್ಲಿರುವ ಈ ಮಿಂಚು ಹುಳುಗಳು ಕಾವ್ಯವನ್ನೆಲ್ಲಾ ಬೆಳಗುವಷ್ಟು ಶಕ್ತವಾಗಿಲ್ಲ.

ಚೌಂಡರಸನ 'ನಳಚರಿತ್ರೆ' ಆಶ್ವಾಸಗಳ ವಿಭಾಗವೇನೂ ಇಲ್ಲದೆ ಸುಮಾರು ಎಂಟುನೂರು ಪದ್ಯಗಳಲ್ಲಿ ಹರಡಿರುವ ಚಂಪೂಕಾವ್ಯ. 'ಅಭಿನವ ದಶಕುಮಾರ ಚರಿತ್ರೆ' ಗಿಂತಲೂ ಕಥಾವಸ್ತುವಿನ ದೃಷ್ಟಿಯಿಂದ ಇದು ಶ್ರೇಷ್ಠವಾದುದು. ಆದರೆ ಕಥಾನಿರೂಪಣೆಗೆ ಇಲ್ಲಿಯೂ ವರ್ಣನೆಗಳ ಹಾವಳಿಯಿಂದ ಭಂಗ ಬಂದಿದೆ. ಪಾತ್ರನಿರೂಪಣೆಯಲ್ಲಿಯೂ ಹೇಳಿಕೊಳ್ಳುವಂತಹ ಕೌಶಲವೇನೂ ಇಲ್ಲ.

**ನಾಗರಾಜ**

ಹದಿನಾಲ್ಕನೆಯ ಶತಮಾನದ ಪೂರ್ವಾರ್ಧದಲ್ಲಿ (ಕ್ರಿ. ಶ. ಸು. ೧೩೩೧)ದ್ದ ನಾಗರಾಜ ಕವಿ ವಿವೇಕ ವಿಟ್ಠಲದೇವ—ಭಾಗೀರಥಿಯರ ಮಗ. ಆತನ ಸೋದರ ತಿಪ್ಪರಸ, ಗುರು ಅನಂತವೀರ ಕೇವಲಿ. ಭಾರತೀ ಭಾಳನೇತ್ರ, ಸರಸ್ವತೀ ಮುಖತಿಲಕ—ಇತ್ಯಾದಿ ಬಿರುದುಗಳನ್ನು ತನಗೆ ಆರೋಪಿಸಿಕೊಂಡಿರುವ ಈ ಕವಿ 'ಪುಣ್ಯಾಸ್ರವ'ವೆಂಬ ಕಾವ್ಯದ ಕರ್ತೃ. ತನ್ನ ಗುರುವಿನ ಅಪ್ಪಣೆಯಂತೆ ಸಗರದ ನಗರದವರಿಗಾಗಿ ಕಾವ್ಯಸೃಷ್ಟಿ ಮಾಡಿದನಂತೆ! ತನ್ನ ಕವಿತೆಯಲ್ಲಿನ ಮಾತುಗಳ ಜೆಡಗು ಕಲ್ಲುಸಕ್ಕರೆಯ ಸವಿಯನ್ನು ವಿದ್ವಾಂಸ ಸಮೂಹದ ಕಿವಿಗೆ ಎರೆಯಬಲ್ಲುದಂತೆ! ಈ ಮಾತು ಸ್ವಲ್ಪ ಮಟ್ಟಿಗೆ ನಿಜ. ಇದರಲ್ಲಿ ಪೂಜೆ, ಗುರೂಪಾಸ್ತಿ, ಸ್ವಾಧ್ಯಾಯ, ಸಂಯಮ, ದಾನ, ತಪಸ್ಸು—ಎಂಬ ಗೃಹಸ್ಥ ಧರ್ಮವನ್ನು ವಿವರಿಸಿ, ಅವುಗಳನ್ನು

ಆಚರಿಸಿ ಸ್ವರ್ಗಾಪವರ್ಗವನ್ನು ಪಡೆದ ಪುರಾಣಪುರುಷರ ಕಥೆಗಳನ್ನು ನಿರೂಪಿಸಿದ್ದಾನೆ. ನಯಸೇನ, ವೃತ್ತವಿಲಾಸರಂತೆ ನೇರವಾಗಿ ಪರಮತ ವಿಡಂಬನೆಗೆ ಈತನು ಕೈಹಾಕಿಲ್ಲವಾದರೂ ಅವರಂತೆ ಈತನೂ ಜೈನಧರ್ಮದ ಶ್ರೇಷ್ಠತೆಯನ್ನು ಕಥೆಗಳ ಮೂಲಕ ನಿರೂಪಿಸಹೊರಟಿದ್ದಾನೆ. ವಡ್ಡಾರಾಧನೆಯಲ್ಲಿನ ಕೆಲವು ಕಥೆಗಳು ಈತನ ಕಾವ್ಯದಲ್ಲಿ ಕಂಡುಬರುತ್ತವೆ. ಈತನ ಕಥಾನಿರೂಪಣೆಯುಲ್ಲಿ ಕೌಶಲವಿದೆ, ದೇಶೀಯ ಶೈಲಿಯಲ್ಲಿ ಸರಳತೆ ಲಾಲಿತ್ಯಗಳಿವೆ, ವರ್ಣನೆಗಳಲ್ಲಿ ಸ್ವೈಜತೆಯಿದೆ.

ಹದಿನಾಲ್ಕನೆಯ ಶತಮಾನದ ಮತ್ತಿಬ್ಬರು ಜೈನ ಪುರಾಣಕರ್ತರೆಂದರೆ **ಬಾಹುಬಲಿಪಂಡಿತ** (ಕ್ರಿ.ಶ.ಸು ೧೩೫೨) ಮತ್ತು **ಮಧುರಕವಿ** (ಕ್ರಿ.ಶ. ೧೩೮೫). ಇಬ್ಬರ ಕಾವ್ಯಗಳ ವಸ್ತುವೂ ಒಂದೆ-ಹದಿನೈದನೆಯ ತೀರ್ಥಂಕರನ ಜೀವನ ಚರಿತ್ರೆಯನ್ನು ಒಳಗೊಂಡ 'ಧರ್ಮನಾಥ ಪುರಾಣ' 'ಉಭಯ ಭಾಷಾ ಚಕ್ರವರ್ತಿ' ಎಂದು ತನ್ನನ್ನು ಹೊಗಳಿಕೊಂಡಿರುವ ಬಾಹುಬಲಿಯದು. ಹದಿನಾರು ಆಶ್ವಾಸಗಳ ಪ್ರೌಢಗ್ರಂಥ. ಮಧುರನ ಕಾವ್ಯದಲ್ಲಿ ನಾಲ್ಕು ಆಶ್ವಾಸಗಳು ಮಾತ್ರ ಈಗ ಉಪಲಬ್ಧವಾಗಿವೆ. ಈತನು ತನ್ನನ್ನು ಅತಿಶಯವಾಗಿ ಹೊಗಳಿಕೊಂಡಿದ್ದಾನೆ. 'ತನ್ನಾಣೆ ಗೋಸಣೆ ಸಲ್ಗುಂ ಸುಕವೀಂದ್ರ ಸಭೆಯೊಳ್, ತಾನೆಂದೊಡಮ್ಮಮ್ಮ, ಧಾರಿಣಿಯೊಳ್ ಕೇಳ್ದರಿಯಾ, ಜಡ, ಮಧುರನಂ, ನಿರ್ಣೀತ ಕರ್ಣಾಟಲಕ್ಷಣ ಭಾಷಾ ಕವಿರಾಜನಂ ಪ್ರವಿಲಸದ್ವಾಣೀ ಮುಖಾಂಭೋಜನಂ'-ಕವೀಂದ್ರರ ಸಭೆಯಲ್ಲಿ ತನ್ನ ಅಪ್ಪಣೆ ಘೋಷಣೆಯಾಗಿ ಸಲ್ಲುತ್ತದೆ; ಅಬ್ಬಬ್ಬ, ನಾನೆಂದರೆ ಯಾರೆಂದು ತಿಳಿದಿದ್ದೀಯಾ? ಅಯ್ಯೋ ಮಂದಬುದ್ಧಿಯವನೇ, ಮಧುರನ ಹೆಸರನ್ನು ಕೇಳಿಲ್ಲವೇ! ನಿಶ್ಚಿತವಾದ ಲಕ್ಷಣಗಳುಳ್ಳ ಕರ್ಣಾಟಕ ಭಾಷಾ ಕವಿರಾಜನಾಗಿ, ಸರಸ್ವತಿಯ ಮುಖಕಮಲನಾಗಿರುವ ಆ ಮಧುರನೇ ನಾನು—ಮಧುರನ ಈ ಅಬ್ಬರಕ್ಕೆ ಕಾರಣ ಬಹುಶಃ ಆತನು ಆಸ್ಥಾನ ಕವಿಯಾಗಿದ್ದುದು. ವಿಜಯನಗರದ ಹರಿಹರರಾಜನ ಆಸ್ಥಾನದಲ್ಲಿ ಆತನು ಕವಿಯಾಗಿದ್ದನೆಂದು ತೋರುತ್ತದೆ; ಆಸ್ಥಾನದ ಪೋಷಾಕನ್ನು ಧರಿಸಿದಾಗ ಮೈಯಲ್ಲಿ ಶಕ್ತಿ ಸಂಚಾರವಾಗಿ, ಬಾಯಿಂದ ಅತಿಶಯೋಕ್ತಿಯೂ ಹರಿದು ಬಂದಿದೆ. ಈತನ ವರ್ಣನೆಗಳಲ್ಲಿ ಸ್ವಲ್ಪಮಟ್ಟಿಗೆ ಸಹಜತೆಯಿದೆ; ಈತನ

ಕಾವ್ಯದಿಂದ ಅಭಿನವ ವಾದಿವಿದ್ಯಾನಂದನೂ ಭಟ್ಟಾಕಳಂಕನೂ ಪದ್ಯಗಳನ್ನು ಬಳಸಿಕೊಂಡಿದ್ದಾರೆ. ಆದರೆ ಈತನ ಕಥಾ ನಿರೂಪಣೆಯಲ್ಲಿ ನವೀನತೆಯೇನೂ ಇಲ್ಲ. ಈತನು ಗೊಮ್ಮಟನನ್ನು ಸ್ತುತಿಸುವ ಒಂದು ಅಷ್ಟಕವನ್ನೂ ಬರೆದಿದ್ದಾನೆ. ಬಾಹುಬಲಿ, ಮಧುರ—ಇಬ್ಬರು ಹಿಡಿದಿರುವ ಹಾದಿಯೂ ಸಂಪ್ರದಾಯಶೀಲವಾದುದೇ—ಜೈನ ಪುರಾಣಗಳ ಅದೇ ಪಡಿಯಚ್ಚು, ಅದೇ ಪ್ರೌಢಿಮೆ, ಅದೇ ವರ್ಣನಾವೈಖರಿ. ಜೈನ ಚಂಪೂ ಪುರಾಣಕರ್ತರಲ್ಲಿ ಮಧುರನೇ ಕಡೆಯವನು.

ಹದಿನಾಲ್ಕನೆಯ ಶತಮಾನದ ಚಂಪು ಕರ್ತರಲ್ಲಿ 'ಖಗೇಂದ್ರ ಮಣಿದರ್ಪಣ'ವೆಂಬ ವಿಷವೈದ್ಯ ಗ್ರಂಥವನ್ನು ಬರೆದ **ಮಂಗರಾಜ** (ಕ್ರಿ.ಶ. ೧೩೬೦)ನು ಉಲ್ಲೇಖಾರ್ಹನು. ಈತನು ಹೊಯ್ಸಳ ದೇಶದ ದೇವಳಿಗೆಯ ನಾಡಿನ ಮುಗುಳಿಪುರದ ಅಧಿಪನೆಂದೂ, ಪೂಜ್ಯಪಾದನ ಶಿಷ್ಯನೆಂದೂ, ಆತನಿಗೆ ಕಾಮಲತೆಯೆಂಬ ಹೆಂಡತಿ ಮತ್ತು ಮೂವರು ಮಕ್ಕಳಿದ್ದರೆಂದೂ ಆತನ ಗ್ರಂಥದಿಂದ ತಿಳಿದುಬರುತ್ತದೆ. ಈತನು ವಿಜಯನಗರದ ಹರಿಹರ ರಾಜನನ್ನು ಹೊಗಳಿರುವುದರಿಂದ ಆತನ ಸಮಕಾಲಿಕನಾಗಿರಬೇಕು. ಈತನಿಗೆ 'ಸುಲಲಿತ ಕವಿಪಿಕವಸಂತ,' 'ವಿಭುವಂಶಲಲಾಮ' ಇತ್ಯಾದಿ ಹಲವು ಬಿರುದುಗಳಿವೆ. ಈತನು ಒಮ್ಮೆ ವಿದ್ವಾಂಸರ ಗೋಷ್ಠಿಯಲ್ಲಿರುವಾಗ ಅವರು 'ಕನ್ನಡದಿಂ ಸಮಸ್ತ ಜನ ಗೋಚರಮಪ್ಪವೊಲಣ್ಣ ಪೇಳ್ವುದು ನೀಂ ನಮಗೆಂದು' ಕೇಳಿಕೊಂಡುದರಿಂದ ಈ ಗ್ರಂಥವನ್ನು ಬರೆವನಂತೆ. ಇತರ ಕವಿಗಳಂತೆ ಮರ, ಗಾಳಿ, ಧೂಳಿ, ರಾತ್ರಿ, ನೀರಾಟ, ಕಾಮ ಕೇಳಿ, ಹೆಂಡ, ಸೂಳೆಯರು, ವಿಟರು, ಆಟವಿಕರು—ಇತ್ಯಾದಿಗಳನ್ನು ಕೊಂಡಾಡಿ ಬೆಂಡಾಗದೆ, ಸರ್ವಜನೋಪಕಾರಿಯಾದ ಮಂತ್ರೌಷಧಿಗಳನ್ನು ಹೇಳುವವನೆ ದೇವ ಸಮಾನನೆಂದು ಭಾವಿಸಿ ಈ ಗ್ರಂಥವನ್ನು ಹೇಳಲು ಪ್ರಾರಂಭಿಸಿದನಂತೆ! ವೈದ್ಯವು ಮೋಕ್ಷಸಾಧನವಂತೆ! ಆತನ ವಿಚಾರಸರಣಿಯನ್ನು ನೋಡಿ!

ನರರ್ಗರುಜತೆ ಭೇಷಜದಿಂ
ದರುಜತೆಯಿಂ ದೇಹ, ದೇಹದಿಂದಂ ಜ್ಞಾನಂ
ಪರಮಜ್ಞಾನದೆ ಮೋಕ್ಷಂ
ದೊರೆಕೊಳ್ಗುಮದೆಂದು ಪೇಳ್ದಪೆಂ ಭೇಷಜಮಂ

ಮಾನವರಿಗೆ ಔಷಧದಿಂದ ಆರೋಗ, ಆರೋಗದಿಂದ ದೇಹ, ದೇಹದಿಂದ ಜ್ಞಾನ, ಜ್ಞಾನದಿಂದ ಮೋಕ್ಷ—ದೊರೆಯುತ್ತವೆ. ಆದ್ದರಿಂದ ನಾನು ಔಷಧಶಾಸ್ತ್ರವನ್ನು ಹೇಳುತ್ತೇನೆ–ಎನ್ನುತ್ತಾನೆ, ಈ ಭೂಪ. ಸ್ಥಾವರ, ಜಂಗಮ—ಎಂಬ ಎರಡು ಬಗೆಯಾದ ವಿಷಕ್ಕೂ ಈತನು ಔಷಧವನ್ನು ಸೂಚಿಸಿದ್ದಾನೆ. 'ಖಗೇಂದ್ರ ಮಣಿದರ್ಪಣ'ವು ಶಾಸ್ತ್ರಗ್ರಂಥವಾದರೂ ಕಾವ್ಯಗುಣಗಳನ್ನು ಒಳಕೊಂಡಿದೆ. ಮಂಗರಾಜನ ರಚನೆ ಲಲಿತವಾಗಿ ನಿರರ್ಗಳವಾಗಿ ಹರಿಯುತ್ತದೆ.

'ಮಂಗರಾಜ'ನೆಂಬ ಹೆಸರಿನ ನಾಲ್ಕು ಜನ ಕವಿಗಳಿದ್ದಾರೆ. ಆದ್ದರಿಂದ ಅವರಲ್ಲಿ ಮೊದಲನೆಯವನಾದ ಖಗೇಂದ್ರಮಣಿದರ್ಪಣಕಾರ ಮಂಗರಸ I. ಎರಡನೆಯವನಾದ ಅಭಿನವ ಮಂಗರಾಜ (ಕ್ರಿ.ಶ. ೧೩೯೮)ನು 'ಅಭಿನವ ನಿಘಂಟು' ಅಥವಾ 'ಕವಿ ಮಂಗಾಭಿಧಾನ' ಎಂಬ ನಿಘಂಟು ಗ್ರಂಥವನ್ನು ಬರೆದವನು. ಈತನಿಗೆ 'ಬಾಲಶಾರದೆ,' 'ಅಭಿನವ ಸರಸ್ವತಿ' ಎಂಬ ಬಿರುದುಗಳಿರುವಂತೆಯೂ 'ಚಿಂತಾಮಣಿ ಪ್ರತಿಪದ'ವೆಂಬ ಮತ್ತೊಂದು ಗ್ರಂಥವನ್ನು ಬರೆದಿರುವಂತೆಯೂ ಕವಿಚರಿತೆಕಾರರು ಹೇಳುತ್ತಾರೆ. ಮೂರನೆಯ ಮಂಗರಾಜ (        ) ಸಮ್ಯಕ್ತ್ವ ಕೌಮುದಿ, ಜಯನೃಪಕಾವ್ಯ, ನೇಮಿಜಿನೇಶಸಂಗತಿ ಇತ್ಯಾದಿ ಕಾವ್ಯಗಳನ್ನು ಬರೆದವನು. ನಾಲ್ಕನೆಯ ಮಂಗರಾಜನು ಹದಿನೆಂಟನೆಯ ಶತಮಾನದವನೆಂದೂ 'ನಾಗಕುಮಾರನ ಕಥೆ' ಎಂಬ ಷಟ್ಪದಿ ಗ್ರಂಥವನ್ನು ಬರೆದಿರುವನೆಂದೂ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ಪರಿಷತ್ ಪತ್ರಿಕೆಯ ಲೇಖನವೊಂದರಲ್ಲಿ ತಿಳಿಸುತ್ತಾರೆ.

# ಕುಮಾರವ್ಯಾಸಯುಗ ಅಥವಾ ಷಟ್ಪದೀ ಯುಗ

ಹನ್ನೆರಡನೆಯ ಶತಮಾನದಲ್ಲಿ ಹರಿಹರ ರಾಘವಾಂಕರು ದೇಶೀಯ ಛಂದಸ್ಸನ್ನು ಬಳಕೆಗೆ ತಂದು ಕನ್ನಡ ಸಾಹಿತ್ಯದಲ್ಲಿ 'ಸ್ವತಂತ್ರಯುಗ'ದ ಸ್ಥಾಪನೆಗೆ ಕಾರಣರಾದರು. ಆದರೆ ಅವರು ನಾಟದ ಬೆಳೆ ಹುಲುಸಾಗಿ ಬೆಳೆದು ಫಲಭರಿತವಾದುದು ಹದಿನೈದನೆಯ ಶತಮಾನದಲ್ಲಿ. ಅಲ್ಲಿಯವರೆಗೆ ಕಾವ್ಯಕ್ಷೇತ್ರದ ಕೃಷಿಯಲ್ಲಿ ತೊಡಗಿದ್ದವರೆಲ್ಲಾ ಬಹುಮಟ್ಟಿಗೆ ಸಂಪ್ರದಾಯ ಶೀಲರಾಗಿದ್ದು, ದೇಶಿ ಛಂದಸ್ಸಿಗೆ ಸಾಹಿತ್ಯದ ಸ್ಥಾನಮಾನಗಳನ್ನು ಕೊಡ ಲಿಲ್ಲವೆಂದು ತೋರುತ್ತದೆ. ಅವರ ದೃಷ್ಟಿಯಲ್ಲಿ ಅದು ಬೆಳೆಯಲ್ಲ, ಕೆಲಸಕ್ಕೆ ಬಾರದ ಕಳೆ. ಆದ್ದರಿಂದಲೇ ಹದಿಮೂರನೆಯ ಶತಮಾನದಲ್ಲಿ ಹುಟ್ಟಿದ 'ಸೂಕ್ತಿ ಸುಧಾರ್ಣವ'ದಲ್ಲಿ ಹರಿಹರನ 'ಗಿರಿಜಾ ಕಲ್ಯಾಣಕ್ಕೆ' ಸಿಕ್ಕಿದ ಪುರಸ್ಕಾರ, ಕಾವ್ಯದೃಷ್ಟಿಯಲ್ಲಿ ಅದಕ್ಕಿಂತಲೂ ಮಿಗಿಲಾದ ಆತನ ರಗಳೆಗಳಿ ಗಾಗಲಿ, ರಾಘವಾಂಕನ ಷಟ್ಪದಿ ಕಾವ್ಯಗಳಿಗಾಗಲಿ ದೊರೆಯಲಿಲ್ಲ. ಇದನ್ನು ನೋಡಿದರೆ ಸಂಪ್ರದಾಯ ಎಷ್ಟು ಪ್ರಭಾವಯುತವಾದುದು, ಅದರ ಉಲ್ಲಂ ಘನೆ ಎಷ್ಟು ಕಷ್ಟಸಾಧ್ಯವೆಂಬುದು ಅರ್ಥವಾಗುತ್ತದೆ. ಕನ್ನಡ ಸಾಹಿತ್ಯ ಆರಂಭದೆಸೆಯಲ್ಲಿ ಹುಟ್ಟಿ ಬೆಳೆದುದು ರಾಜರ ಪ್ರೋತ್ಸಾಹದಿಂದ, ರಾಜಾ ಸ್ಥಾನದ ಪಂಡಿತರಿಂದ. ಸಂಸ್ಕೃತಸಾಹಿತ್ಯದ ಚಿರ ಪರಿಚಯವಿದ್ದ ಆ ಪಂಡಿತರು ಭಾವ ಭಾಷೆ ಶೈಲಿಗಳಲ್ಲಿ ಸಂಸ್ಕೃತವನ್ನು ಅನುಕರಿಸಿ ಬರೆಯ ಹೊರಟುದು ಸ್ವಾಭಾವಿಕವಾಗಿತ್ತು. ಆದ್ದರಿಂದ ಅವರು ಆರಂಭಿಸಿದ ಪಾಂಡಿತ್ಯಪೂರ್ಣವಾದ ಚಂಪೂಶೈಲಿ, ಆಳವಾಗಿ ಬೇರುಬಿಟ್ಟುಕೊಂಡು ಹೆಮ್ಮರವಾಗಿ ಬೆಳೆದು ನಿಂತಿತ್ತು. ಅದಕ್ಕೆ ಬದಲಾಗಿ ಜನಸಾಮಾನ್ಯರಲ್ಲಿ ಬಳಕೆಯಲ್ಲಿದ್ದು 'ದುಂಡುಚಿ, ಬೀದಿವರೆ, ಬೀರನಕಥೆ' ಎಂದು ಅವಹೇಳ ನಕ್ಕೆ ಒಳಗಾಗಿದ್ದ ಮಟ್ಟುಗಳನ್ನೆಲ್ಲಾ ಸಾಹಿತ್ಯದ ಮಟ್ಟಕ್ಕೇರಿಸುವುದೂ ಗ್ರಾಮ್ಯವೆಂದು ಪರಿಗಣಿಸಬಹುದಾದಂತಹ ಜನಸಾಮಾನ್ಯರ ಭಾಷೆಯನ್ನು ಕಾವ್ಯದ ಭಾಷೆಯಾಗಿ ಸ್ವೀಕರಿಸುವುದೂ ಸಂಪ್ರದಾಯಶೀಲರಿಗೆ 'ಅಬ್ರಹ್ಮ ಣ್ಯಂ' ಎನ್ನಿಸಿರಬೇಕು. ಕುಮಾರವ್ಯಾಸನಂತಹ ಅದ್ವಿತೀಯ ಮಹಾಕವಿ

ಹುಟ್ಟಿ, ಜನರ ಈ ವಶೌಥ್ಯವನ್ನು ಪರಿಹರಿಸಬೇಕಾಯಿತು.

ಹರಿಹರ ರಾಘವಾಂಕರ ಸಾಹಿತ್ಯಸೃಷ್ಟಿಗೆ ಹಿನ್ನೆಲೆಯಾಗಿದ್ದುದು ವಚನವಾಙ್ಮಯ. ಅದು ವೀರಶೈವಧರ್ಮದ ಆಧಾರಗ್ರಂಥ. ವೀರಶೈವ ಧರ್ಮವೆಂಬುದು ವೈದಿಕ ಪಂಥಕ್ಕೆ ಒಂದು ಸವಾಲಿನಂತೆ ನಿಂತಿತ್ತು. ಆ ಕಾಲದ ಜೈನರ ವಾದ ಸಾಹಿತ್ಯವನ್ನು ನೋಡಿದರೆ, ಅವರಲ್ಲಿಯೂ ಈ ಹೊಸಮತದ ವಿಚಾರವಾಗಿ ಸಾಕಷ್ಟು ಸಹನೆ ಇರಲಿಲ್ಲವೆಂದೇ ಊಹಿಸ ಬೇಕಾಗುತ್ತದೆ. ಎಂದಮೇಲೆ ಧರ್ಮಜಗತ್ತಿನ ಕ್ರಾಂತಿಗೆ ಕಹಳೆಯಂತಿದ್ದ ಈ ಹೊಸ ಸಾಹಿತ್ಯಕ್ಕೆ ವೀರಶೈವೇತರರಿಂದ ಸಾಕಷ್ಟು ಪ್ರೋತ್ಸಾಹ ದೊರೆ ಯದೇ ಹೋಗಿದ್ದರೂ ಆಶ್ಚರ್ಯವೇನಲ್ಲ. ಕಲ್ಯಾಣದ ಕ್ರಾಂತಿಯಿಂದ ವೀರ ಶೈವ ಧರ್ಮಕ್ಕೆ ಸಾಕಷ್ಟು ಧಕ್ಕೆ ತಗಲಿತು; ತಲೆ ತಲೆಯಾಗಿದ್ದವರು ದಿಕ್ಕುಪಾಲಾದರು. ಇದರಿಂದ ಅವರ ಸಾಹಿತ್ಯದ ಬೆಳವಣಿಗೆಯೂ ಕುಂಠಿತ ಗೊಂಡಿರಬೇಕು. ದೇಶೀಯ ಛಂದಸ್ಸಿಗೆ ವೀರಶೈವರ 'ಧಾರ್ಮಿಕ ಸಾಹಿತ್ಯ' ವೆಂದು ಮುದ್ರೆಹಾಕಿ, ಅದನ್ನು ಮೂಲೆ ಗುಂಪು ಮಾಡಿರಲಿಕ್ಕೂ ಸಾಕು. 'ಇದಮಿತ್ಥಂ' ಎಂದು ಇದನ್ನು ಸ್ಥಾಪಿಸುವುದಕ್ಕೆ ನಮಗೆ ಆಧಾರಗಳೇನೂ ಇಲ್ಲ. ಹೀಗೆ ಹೇಳುತ್ತಿರುವುದು ಕೇವಲ ಊಹೆಯಿಂದ ಮಾತ್ರ. ಹರಿಹರ ರಾಘವಾಂಕರ ಸಾಹಿತ್ಯಕ್ರಾಂತಿ ಸಾಕಷ್ಟು ಪ್ರಚಾರವಾಗುವ ಮುನ್ನವೇ ಮಹಮ್ಮದೀಯರ ದಾಳಿ ತಲೆಯಿಟ್ಟು ದೇಶವನ್ನು ಅಲ್ಲೋಲ ಕಲ್ಲೋಲ ಮಾಡಿತು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಿ ದೇಶದಲ್ಲಿ ಶಾಂತಿ ನೆಲಸಿದ ಮೇಲೆಯೇ ಕಲೆ ಸಾಹಿತ್ಯಗಳಿಗೆ ಹೊಸ ಜೀವ ಬಂದುದು. ಅಲ್ಲಿಯ ವರೆಗೆ ಎಂದಿನಂತೆ ಕನ್ನಡ ಸಾಹಿತ್ಯ ಚಿಕ್ಕಪುಟ್ಟ ರಾಜರ ಆಸ್ಥಾನಗಳಲ್ಲಿ ಹಳೆಯ ಸಂಪ್ರದಾಯವನ್ನೇ ಮುಂದುವರಿಸಿಕೊಂಡು ಹೋಯಿತು. ದೇಶೀ ಛಂಧಸ್ಸಿನಲ್ಲಿ ಹೊರದೋರಿದ್ದ ಸ್ವತಂತ್ರ ಭಾವನೆ—ರಾಜರ ಆಶ್ರಯವಿಲ್ಲದೆ ಅವರನ್ನು ಹೊಗಳದೆ ಸಾಹಿತ್ಯರಚನೆಮಾಡುವ ಧೋರಣೆ—ತಾತ್ಕಾಲಿಕ ವಾಗಿ ನಿಂತುಹೋಗಿರಬೇಕು. ಆದ್ದರಿಂದಲೇ ವೀರಶೈವಧರ್ಮದ ಪ್ರತಿನಿಧಿ ಯಾಗಿದ್ದರೂ 'ಉದ್ಭಟಕಾವ್ಯ' ಚಂಪೂ ಪೋಷಾಕನ್ನೇ ಧರಿಸಿನಿಂತಿದೆ.

ಹನ್ನೆರಡನೆಯ ಶತಮಾನದಲ್ಲಿ ವಚನವಾಙ್ಮಯ ಉದಿಸಿ, ಜನರನ್ನು ತಂಡೋಪತಂಡವಾಗಿ ಆಕರ್ಷಿಸಿದುದನ್ನು ಕಂಡು, ಅಂತಹುದೇ ಮತ್ತೊಂದು

ವಿಧಾನದಿಂದ ಜನಸಾಮಾನ್ಯರನ್ನು ವೈದಿಕ ಮತದ ಕಡೆಗೆ ಆಕರ್ಷಿಸುವುದಕ್ಕಾಗಿ ಹುಟ್ಟಿದುದೇ ದಾಸವಾಙ್ಮಯ. ಇದು ಉದಿಸಿದುದು ಹದಿಮೂರನೆಯ ಶತಮಾನದಲ್ಲಿ. ವೈದಿಕ ಪಂಥದವರು ಕನ್ನಡವನ್ನು ಧಾರ್ಮಿಕ ಸಾಹಿತ್ಯದೃಷ್ಟಿಗಾಗಿ ಬಳಸಿಕೊಂಡುದು ಒಂದು ದೃಷ್ಟಿಯಿಂದ ಅದ್ಭುತವಾದ ಕ್ರಾಂತಿ. ಅನಾದಿಕಾಲದಿಂದಲೂ ಅವರ ಧಾರ್ಮಿಕಸಾಹಿತ್ಯವೆಲ್ಲವೂ ಸಂಸ್ಕೃತದಲ್ಲಿತ್ತು, ಅದು ತಮಗೆ ಮಾತ್ರವೇ ಮೀಸಲೆಂಬ ಅಥವಾ ಜನರ ನುಡಿಯಲ್ಲಿ ಅದನ್ನು ತಂದಾಗ ಅದರ ಪ್ರಾಶಸ್ತ್ಯ ತಗ್ಗಬಹುದೆಂಬ ಇಲ್ಲವೆ ಹಾಗೆ ತರುವುದು ಆ ಧಾರ್ಮಿಕ ಸಾಹಿತ್ಯಕ್ಕೆ ಅಪಚಾರವೆಂಬ ಅಂಧಶ್ರದ್ಧೆಯಿಂದಲೋ, ಅಂತೂ ಧಾರ್ಮಿಕ ಸಾಹಿತ್ಯವನ್ನು ಅವರು ಅವರಿಗೆ ಕನ್ನಡಕ್ಕೆ ತಂದಿರಲಿಲ್ಲ. ವೀರಶೈವದ ಪ್ರಭಾವದಿಂದ ತಮ್ಮ ಅಳಿವು ಉಳಿವುಗಳ ಪ್ರಶ್ನೆ ಮೇಲೆದ್ದಾಗ, ಅವರು ಕನ್ನಡವನ್ನು ಆಶ್ರಯಿಸುವುದು ಅನಿವಾರ್ಯವಾಯಿತೆಂದು ತೋರುತ್ತದೆ. ಇದರ ಫಲವೇ ದಾಸವಾಙ್ಮಯ. ಒಮ್ಮೆ ಸಮಸ್ಯೆ ಬಗೆಹರಿಯಿತೆಂದರೆ ಮುಂದೆ ನಿರಾಳ. ಇನ್ನು ಮುಂದೆ ವೈದಿಕಸಾಹಿತ್ಯ ಕನ್ನಡದಲ್ಲಿ ಕಾಣಿಸಿಕೊಳ್ಳಲು ಇದ್ದ ಅಡ್ಡಿ ನಿವಾರಣೆಯಾಯಿತು. ಮುಹಮ್ಮದೀಯರ ದಾಳಿಯಿಂದ ದೇಶೀ ಛಂದಸ್ಸಿನಲ್ಲಿ ಕಾವ್ಯಸೃಷ್ಟಿಯಾಗದಿದ್ದರೂ ಚಂಪೂವಿನಲ್ಲಿ ರುದ್ರಭಟ್ಟನ 'ಜಗನ್ನಾಥವಿಜಯ' ಕಾಣಿಸಿಕೊಂಡಿತು. ವಿಜಯನಗರರಾಜ್ಯ ಸ್ಥಾಪಿತವಾಗಿ, ಶಾಂತಿ ನೆಲಸಿದೊಡನೆಯೇ ದೇಶೀ ಛಂದಸ್ಸಿನಲ್ಲಿಯೂ ವೈದಿಕ ಕಾವ್ಯಗಳು ಕಾಣಿಸಿಕೊಂಡವು. ವಚನ ವಾಙ್ಮಯ ಹರಿಹರನಿಗೆ ಪ್ರೇರಕಶಕ್ತಿಯಾಗಿದ್ದರೆ, ದಾಸವಾಙ್ಮಯ ಕುಮಾರವ್ಯಾಸನಿಗೆ ಸ್ಫೂರ್ತಿಯನ್ನು ಕೊಟ್ಟಿರಬಹುದು.

ಹದಿನೈದನೆಯ ಶಮಾನದಲ್ಲಿ ಉದಿಸಿದ ಕುಮಾರವ್ಯಾಸನು 'ನ ಭೂತೋ ನ ಭವಿಷ್ಯತಿ' ಜಾತಿಗೆ ಸೇರಿದ ಕವಿ. ಹದಿನೈದನೆಯ ಶತಮಾನದಿಂದ ಮುಂದಿನ ಕನ್ನಡ ಸಾಹಿತ್ಯದಲ್ಲಿ, ಸುಮಾರು ಐನೂರು ವರ್ಷಗಳ ವರೆಗೆ ಆತನ ಪ್ರಭಾವ ಅವ್ಯಾಹತವಾಗಿ ನಡೆದುಕೊಂಡು ಬಂದಿದೆ. ಆತನಿಂದ ಮುಂದೆ ಬಂದ ಕವಿಗಳು, ಆತನನ್ನು ನೆನೆದಿರಲಿ ಬಿಟ್ಟಿರಲಿ, ಬಹುಮಟ್ಟಿಗೆ ಆತನ ಕಾವ್ಯವನ್ನು ಓದಿದ್ದಾರೆ, ಭಾವ ಭಾಷೆಗಳನ್ನು ಆತನಿಂದ ಎರವಲಾಗಿ ತಂದುಕೊಂಡಿದ್ದಾರೆ, ಪ್ರಭಾವಿತರಾಗಿದ್ದಾರೆ. ಹದಿನೈದನೆಯ

ಶತಮಾನದಿಂದ ಹತ್ತೊಂಬತ್ತನೆಯ ಶತಮಾನದ ವರೆಗೆ ಕಾವ್ಯಕರ್ಮಕ್ಕೆ ಕೈಯಿಟ್ಟಿರುವ ನೂರಾರು, ಸಹಸ್ರಾರು ಚಿಕ್ಕ ದೊಡ್ಡ ಕವಿಗಳಲ್ಲಿ ಆತನೊಡನೆ ಹೆಗಲಾನಿಸಿ ನಿಲ್ಲಬಲ್ಲ ಒಬ್ಬ ಕವಿಯೂ ಇಲ್ಲ. ಆತನು ಈ ದೀರ್ಘಕಾಲದ ಏಕಮೇವಾದ್ವಿತೀಯನಾದ ಮಹಾಕವಿ. ಕನ್ನಡಕ್ಕೆ ಕಿರೀಟವನ್ನಿಟ್ಟ ಈ ಕಾಲವನ್ನು 'ಕುಮಾರವ್ಯಾಸ ಯುಗ' ವೆಂದು ಕರೆದಿರುವುದು ಉಚಿತವಾಗಿ ಸಾರ್ಥಕವಾಗಿದೆ. ಇಂತಹ ಮಹಾಕವಿಯೊಬ್ಬನು ಕಾವ್ಯಸೃಷ್ಟಿಗೆ ಕೈಹಾಕಿ ದುದರಿಂದಲೋ ಏನೊ, ಇತರ ಧರ್ಮದವರಿಗಿಂತಲೂ ಹೆಚ್ಚಾಗಿ ಅಲ್ಲ ದಿದ್ದರೂ, ಇತರ ಧರ್ಮದವರಷ್ಟೇ ವಿಪುಲವಾಗಿ, ಉತ್ಸಾಹದಿಂದ ವೈದಿಕ ಸಾಹಿತ್ಯವೂ ದೇಶೀಛಂದಸ್ಸಿನಲ್ಲಿ ಕಾಣಿಸಿಕೊಂಡಿದೆ. ಕೆಲವು ವೇಳೆ ವೈದಿಕ ವೀರಶೈವ ಪಂಥದವರಲ್ಲಿ ಕಾವ್ಯಸೃಷ್ಟಿಯ ಸ್ಪರ್ಧೆಯೂ ನಡೆದಿದೆ.

ಕುಮಾರವ್ಯಾಸಯುಗವು ಒಂದು ಸಂಕೀರ್ಣಯುಗ. ಎಲ್ಲ ಧರ್ಮದ ಕವಿಗಳೂ ಇಲ್ಲಿ ಕಾಣಿಸಿಕೊಂಡಿದ್ದಾರೆ; ಎಲ್ಲ ಛಂದಸ್ಸಿನ ಕಾವ್ಯಗಳೂ ಕಾಣಿಸಿಕೊಂಡಿವೆ. ಕುಮಾರವ್ಯಾಸನನ್ನು ಅನುಸರಿಸಿ, ಅನುಕರಿಸಿ ನೂರಾರು ವೈದಿಕಪಂಥದ ಕವಿಗಳು ಕಾವ್ಯರಚನೆಯಲ್ಲಿ ತೊಡಗಿದುದು ಮಾತ್ರವೇ ಅಲ್ಲ, ದಾಸವಾಙ್ಮಯವು ಪದ ಸುಳಾದಿ ಉಗಾಭೋಗಗಳ ರೂಪದಲ್ಲಿ ಯಥೇಚ್ಛವಾಗಿ ಬೆಳೆದು, ವಚನ ವಾಙ್ಮಯದಂತೆ ಇದೂ ಸಾಹಿತ್ಯರೂಪ ದಿಂದ ಶಾಸ್ತ್ರವನ್ನು—ದ್ವೈತ ಧರ್ಮವನ್ನು—ಪ್ರತಿಪಾದಿಸಿತು. ಮೈಸೂರಿನ ಒಡೆಯರ ಕಾಲದಲ್ಲಿ ಮತ್ತು ಅಲ್ಲಿಂದ ಮುಂದೆ ಶ್ರೀ ವೈಷ್ಣವರ ಧರ್ಮ ಗ್ರಂಥಗಳೂ ಸಾಕಷ್ಟು ಕಾಣಿಸಿಕೊಂಡವು. ವೈದಿಕ ಸಾಹಿತ್ಯದಂತೆ ವೀರಶೈವ ಮತ್ತು ಜೈನ ಧಾರ್ಮಿಕಗ್ರಂಥಗಳೂ ಈ ಯುಗದಲ್ಲಿ ಬೇಕಾದಷ್ಟು ಬೆಳೆದವು. ಜೈನರು ತಮ್ಮ ಚಂಪೂ ಮೋಹವನ್ನು ತೊರೆದು ದೇಶೀ ಛಂದಸ್ಸಿಗೆ ಒಲಿ ದರು. ಅವರಿಗಿಂತಲೂ ವೀರಶೈವ ಸಾಹಿತ್ಯ ಈ ಯುಗದಲ್ಲಿ ಸಮೃದ್ಧವಾಗಿ ಬೆಳೆಯಿತು. ವೀರಶೈವ ಪುರಾಣಗಳು ಬೃಹತ್ತು ಮಹತ್ತುಗಳಲ್ಲಿ ಶಿಖರ ಪ್ರಾಯವಾಗಿ ಬೆಳೆದಿವೆ. ವಚನ ವಾಙ್ಮಯವೂ ಸಾಕಷ್ಟು ಬೆಳೆದಿದ್ದರೂ ಅವುಗಳಲ್ಲಿ ನೂತನ ಕಲ್ಪನೆ ಅಷ್ಟಾಗಿ ಇಲ್ಲ. ಹೊಸ ವಚನಗಳಿಗಿಂತಲೂ, ಹಿಂದಿನ ವಚನಗಳ ಸಂಕಲನ, ಟೀಕೆ ಇತ್ಯಾದಿಗಳೇ ಹೆಚ್ಚು. ಹಲವು ಶತಕ ಗಳೂ ಹುಟ್ಟಿಕೊಂಡಿವೆ. ಈ ಯುಗದ ಕೊನೆ ಕೊನೆಗೆ ಐತಿಹಾಸಿಕ ಕಾವ್ಯ

ಗಳೂ ಗದ್ಯಗ್ರಂಥಗಳೂ ಕಾಣಿಸಿಕೊಳ್ಳುತ್ತವೆ. ಅಲ್ಲಲ್ಲಿ ಚಂಪೂಗ್ರಂಥಗಳೂ ಕೆಲವು ಕೆಲವು ಕಾಣಿಸಿಕೊಳ್ಳುವುವಾದರೂ, ಈ ಯುಗದಲ್ಲಿ ದೇಶಿಛಂದಸ್ಸೇ ಹೆಚ್ಚು ಪ್ರಚುರವಾಗಿದೆ. ಸಾಂಗತ್ಯ ಷಟ್ಪದಿಗಳು ಇವುಗಳಲ್ಲಿ ಮುಖ್ಯ. ಅದರಲ್ಲಿಯೂ ಷಟ್ಪದಿಗೆ :ಅಗ್ರಸ್ಥಾನ. ಈ ಯುಗದ ಪ್ರಮುಖ ಕಾವ್ಯಗಳಾದ ಕುಮಾರವ್ಯಾಸ ಭಾರತ, ತೊರವೆ ರಾಮಾಯಣ, ಪ್ರಭುಲಿಂಗಲೀಲೆ, ಜೈಮಿನಿ ಭಾರತ, ಚನ್ನಬಸವಪುರಾಣ, ಅನುಭವಾಮೃತ, ಹರಿಕಥಾಮೃತ ಸಾರ ಇತ್ಯಾದಿಗಳು ಭಾಮಿನಿ ವಾರ್ಧಕ ಷಟ್ಪದಿಗಳಲ್ಲಿ ರಚಿತವಾಗಿವೆ. ಇತರ ಷಟ್ಪದಿಗಳಲ್ಲಿ ಬರೆದ ಗ್ರಂಥಗಳೂ ಉಂಟು. ಸಂಖ್ಯೆಯ ದೃಷ್ಟಿಯಿಂದ ಮಾತ್ರವಲ್ಲದೆ ಯೋಗ್ಯತೆಯ ದೃಷ್ಟಿಯಿಂದಲೂ ಹಿರಿದಾಗಿರುವ ಈ ಕಾವ್ಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಯುಗವನ್ನು ಷಟ್ಪದಿಗಳ ಯುಗವೆಂದೂ ಕರೆಯಲಾಗಿದೆ. ವೈವಿಧ್ಯಮಯವಾದ 'ಕುಮಾರವ್ಯಾಸಯುಗ' ವನ್ನು ಅಭ್ಯಾಸದ ಅನುಕೂಲ್ಯಕ್ಕಾಗಿ ಬೇರೆ ಬೇರೆ ಭಾಗಗಳಾಗಿ ವಿಂಗಡಿಸುವುದು ಅನಿವಾರ್ಯವಾಗಿದೆ. ಈಗ ಸಧ್ಯಕ್ಕೆ ಇದನ್ನು ವೈದಿಕ, ವೀರಶೈವ ಮತ್ತು ಜೈನ—ಎಂಬ ಮೂರು ವಿಭಾಗಗಳಾಗಿ ವಿಂಗಡಿಸಿಕೊಂಡಿದ್ದೇವೆ.

# ಕುಮಾರವ್ಯಾಸ ಯುಗ : ವೈದಿಕಕವಿಗಳು

## ಕುಮಾರವ್ಯಾಸ

ಕನ್ನಡನಾಡಿನಲ್ಲಿ ಕುಮಾರವ್ಯಾಸನ ಭಾರತವನ್ನು ಹಾಡದ ಹಳ್ಳಿಯಿಲ್ಲ; ಅದನ್ನು ಕೇಳಿ ನಲಿಯದ ಕನ್ನಡಿಗನಿಲ್ಲ. ಅರಮನೆಯಿಂದ ಅಂಗಡಿಯವರೆಗೆ ಅದರ ಕೀರ್ತಿ ವ್ಯಾಪಿಸಿದೆ. ಆದರೆ ಇದನ್ನು ಬರೆದವನ ಕುಲಗೋತ್ರಗಳಾಗಲಿ ಕಾಲದೇಶಗಳಾಗಲಿ ನಿರ್ದಿಷ್ಟವಾಗಿ ಗೊತ್ತಿಲ್ಲ. ಈ ವಿಚಾರದಲ್ಲಿ ಕವಿ ಮೌನಿಯಾಗಿದ್ದಾನೆ. ಆತನು ವ್ಯಾಸಭಾರತದ ಮೊದಲ ಹತ್ತು ಪರ್ವಗಳನ್ನು ಮಾತ್ರ ಕನ್ನಡಿಸಿದ್ದಾನೆ; ಪ್ರತಿ ಪರ್ವದ ಕೊನೆಯಲ್ಲಿ ಕಾಣಬರುವ ಗದ್ಯಭಾಗದಿಂದ ಕವಿಯು ಗದುಗಿನ ವೀರನಾರಾಯಣಸ್ವಾಮಿಯ ಪರಮಭಕ್ತನೆಂದೂ, ಆತನ ಹೆಸರು ಕುಮಾರವ್ಯಾಸನೆಂದೂ, ಗ್ರಂಥದ ಹೆಸರು 'ಕರ್ಣಾಟ ಭಾರತ ಕಥಾಮಂಜರಿ'ಯೆಂದೂ ಗೊತ್ತಾಗುತ್ತದೆ. ತನ್ನನ್ನು 'ಕುಮಾರವ್ಯಾಸಯೋಗೀಂದ್ರ,' 'ಕುಮಾರವ್ಯಾಸ ಮುನಿ,' 'ಶುಕರೂಪ' ಎಂದು ಕವಿ ಕರೆದುಕೊಂಡಿರುವುದರಿಂದ, ಆತನು ಸನ್ಯಾಸಿಯಾಗಿದ್ದಿರಬಹುದೆಂದು ಊಹಿಸುವುದಕ್ಕೆ ಅವಕಾಶವಿದೆ. ಕುಮಾರವ್ಯಾಸನೆಂಬ ಆತನ ಹೆಸರು ಕೂಡ ತಂದೆತಾಯಿಗಳಿಟ್ಟ ಹೆಸರಾಗಿರದೆ ಆತನ ಸನ್ಯಾಸಾಶ್ರಮದ ಹೆಸರೋ ಕಾವ್ಯನಾಮವೋ ಇರಬೇಕೆನ್ನಿಸುತ್ತದೆ. ಜನಜನಿತವಾಗಿರುವ ಆತನ ಹೆಸರು ನಾರಣಪ್ಪ ಎಂದು. ಆತನ ಭಾರತವನ್ನು 'ಗದುಗಿನ ಭಾರತ,' 'ನಾರಣಪ್ಪನ ಭಾರತ' ಎಂದು ಕರೆಯುವ ಲೋಕರೂಢಿಯನ್ನು ನೋಡಿದರೆ ಆತನ ಹೆಸರು ನಾರಣಪ್ಪನೆಂದೇ ಇರಬೇಕೆನ್ನಿಸುತ್ತದೆ. ಗದಗು ಪ್ರಾಂತದ ಜನರ ಹೇಳಿಕೆಯಂತೆ ನಾರಣಪ್ಪನು ಗದುಗಿನ ಸಮೀಪದಲ್ಲಿರುವ ಕೋಳಿವಾಡದವನು. ಆ ಹಳ್ಳಿ ಕವಿಯ ವಂಶದವರಿಗೆ ವಿಜಯನಗರದ ರಾಜರು ಉಂಬಳಿಯಾಗಿ ಕೊಟ್ಟುದು. ಆ ವಂಶದ ಮೂಲಪುರುಷ ಚಿನ್ನದ ಕೈಯ ಮಾಧವರಸ; ಆತನ ಮಗ ತಿರುಮಲಯ್ಯ; ಆತನ ಮಗ ಲಕ್ಷ್ಮಣದೇವ (ಲಕ್ಕರಸ); ಆತನ ಮಗ ವೀರನಾರಾಯಣ; ಲಕ್ಕರಸನು ವಿಜಯನಗರದ ದೊರೆ ಒಂದನೆಯ ದೇವರಾಯ (೧೪೦೬-೧೪೨೨)ನಲ್ಲಿ ಮಂತ್ರಿ

ಯಾಗಿದ್ದ ; ಆತನ ಐವರು ಗಂಡುಮಕ್ಕಳಲ್ಲಿ ವೀರನಾರಾಯಣ ಹಿರಿಯ ; ಈ ವೀರನಾರಾಯಣನು ಗದುಗಿನ ವೀರನಾರಾಯಣಸ್ವಾಮಿಯ ಪ್ರಾಸಾದಿಕ ಪುತ್ರ ; ಈತನೇ ಭಾರತಕರ್ತೃವಾದ ಕುಮಾರವ್ಯಾಸ–ಎಂಬ ಅಭಿಪ್ರಾಯ ವಿದೆ.[1]

ಕುಮಾರವ್ಯಾಸನ ಕಾಲ ಹನ್ನೆರಡು ಮತ್ತು ಹದಿನಾರನೆಯ ಶತಮಾನದ ಮಧ್ಯದಲ್ಲಿ ತೂಗುಯ್ಯಾಲೆಯಾಡುತ್ತಿದೆ. ಆತನು ರಾಘವಾಂಕ ಕವಿಯ 'ಹರಿಹರಮಹತ್ವ'ವನ್ನು ಕೇಳಿದನೆಂಬ ದಂತಕಥೆಯನ್ನು ನಂಬುವುದಾದರೆ ಆತನು ಹನ್ನೆರಡನೆಯ ಶತಮಾನದವನಷ್ಟು ಪುರಾತನನಾಗಬೇಕಾಗುತ್ತದೆ ; ಆತನ ಕಾವ್ಯದ ಭಾಷೆಯನ್ನು ನೋಡಿದರೆ ಇದು ಅಸಂಭಾವ್ಯವೆನಿಸುತ್ತದೆ. ಆತನು ವ್ಯಾಸರಾಯ ಪುರಂದರದಾಸರನ್ನು ಸಂಧಿಸಿದ್ದನೆಂಬ ಹೇಳಿಕೆ ನಿಜವಾಗುವುದಾದರೆ ಆತನು ಹದಿನಾರನೆಯ ಶತಮಾನದ ಮಧ್ಯಭಾಗದಲ್ಲಿದ್ದನೆನ್ನಬೇಕಾಗುತ್ತದೆ. ಆದರೆ ಕ್ರಿ.ಶ.ಸು ೧೫೦೦ರಲ್ಲಿದ್ದ ಕುಮಾರವಾಲ್ಮೀಕಿಯೂ ಕ್ರಿ.ಶ. ೧೫೧೦ರಲ್ಲಿದ್ದ ತಿಮ್ಮಣ್ಣ ಕವಿಯೂ ಕುಮಾರವ್ಯಾಸನನ್ನು ಹೊಗಳಿರುವುದರಿಂದ ಕವಿಯು ಕ್ರಿ. ಶ. ೧೫೦೦ಕ್ಕಿಂತಲೂ ಹಿಂದಿನವನೆಂಬುದು ನಿರ್ವಿವಾದ. 'ಗುರುಬಸವ ಚಾರಿತ್ರ,' 'ಚೋರ ಬಸವ ಚರಿತ್ರೆ' ಮೊದಲಾದ ವೀರಶೈವ ಪುರಾಣ ಗ್ರಂಥಗಳಲ್ಲಿ ಕುಮಾರವ್ಯಾಸನು ಚಾಮರಸ ಕವಿಯ ತಂಗಿಯ ಗಂಡನೆಂದು ಹೇಳಿರುವುದನ್ನು ಆಧಾರವಾಗಿಟ್ಟುಕೊಂಡು, ಆತನ ಕಾಲ ಕ್ರಿ.ಶ. ೧೪೩೦ ಎಂದು ಕವಿಚರಿತೆಕಾರರು ನಿರ್ಧರಿಸಿದ್ದಾರೆ. ಆದರೆ ಸು. ೧೪೨೪ರಲ್ಲಿದ್ದ ಭಾಸ್ಕರ ಕವಿಯ 'ಜೀವಂಧರಚರಿತೆ'ಯಲ್ಲಿ ಕುಮಾರವ್ಯಾಸ ಭಾರತದ ಅನುಕರಣ ಸ್ಪಷ್ಟವಾಗಿ ಕಂಡುಬರುವುದರಿಂದ ಕವಿಯ ಕಾಲ ಸು. ೧೪೦೦ ಎಂದು ಇಟ್ಟುಕೊಳ್ಳಬಹುದೆಂದು ತೋರುತ್ತದೆ.

ಕುಮಾರವ್ಯಾಸನ ಮತದ ವಿಚಾರದಲ್ಲಿಯೂ ಸಾಕಷ್ಟು ವಾದ ವಿವಾದಗಳು ನಡೆದಿವೆ. ಆತನನ್ನು ವೀರಶೈವನೆಂದು, ಬ್ರಾಹ್ಮಣನೆಂದು— ಬ್ರಾಹ್ಮಣರಲ್ಲಿ ಸ್ಮಾರ್ತನೆಂದು, ವೈಷ್ಣವನೆಂದು, ಭಾಗವತ ಪಂಥದವನೆಂದು–ಪ್ರತಿಪಾದಿಸಲಾಗಿದೆ. ವೇದ, ಉಪನಿಷತ್ತು, ಭಗವದ್ಗೀತೆ–ಇತ್ಯಾದಿ

---

1 ಕುಮಾರವ್ಯಾಸ ಪ್ರಶಸ್ತಿ : ಕಾಲವಿಚಾರ—ಅನುಬಂಧ (ಪುಟ ೨೨–೨೩).

ಮಹಾ ಗ್ರಂಥಗಳಿಗೆ ಆಯಾ ಪಂಥದವರು ಭಾಷ್ಯಗಳನ್ನು ಬರೆದು ತಮ್ಮ ದೆಂದು ಹೇಳಿಕೊಳ್ಳುವಂತೆ, ಕುಮಾರವ್ಯಾಸನ ಭಾರತಕ್ಕೂ ಆಯಾ ಮತ ತತ್ವಗಳನ್ನು ಅನ್ವಯಿಸಿ ಹೇಳಬಹುದು. ಉದಾರ ಚೇತನರಿಗೆ 'ಕುಮಾರ ವ್ಯಾಸ ಭಾರತ'ದಲ್ಲಿ ಸರ್ವಧರ್ಮಗಳ ಸಮನ್ವಯನವೇ ಕಂಡುಬರುತ್ತದೆ. ಆತನು ವಿಷ್ಣುವನ್ನು ಅನನ್ಯಭಕ್ತಿಯಿಂದ ಸ್ತೋತ್ರಮಾಡುತ್ತಾನೆ.ಹಾಗೆಯೇ ಶಿವನನ್ನೂ ಸ್ತುತಿಸುತ್ತಾನೆ. ಆತನ ಕಾವ್ಯದಲ್ಲಿ ದ್ವೈತವಿದೆ, ಅದ್ವೈತವಿದೆ, ವಿಶಿಷ್ಟಾದ್ವೈತವಿದೆ; ಭಕ್ತಿಮಾರ್ಗವಿದೆ, ಕರ್ಮಮಾರ್ಗವಿದೆ, ಜ್ಞಾನ ಮಾರ್ಗವಿದೆ. ವೀರನಾರಾಯಣನ ಅಂಕಿತದಲ್ಲಿ ತನ್ನ ಕಾವ್ಯವನ್ನು ರಚಿಸು ತ್ತಿರುವುದರಿಂದ ಆತನು ಬ್ರಾಹ್ಮಣನಿರಬಹುದು. ಆದರೆ ಇಂತಹ ಪಂಥಕ್ಕೇ ಸೇರಿದವನೆಂದು ವಾದಭೂಮಿಗೆ ಇಳಿವ ಅವಶ್ಯಕತೆಯಿಲ್ಲ. ಎಲ್ಲೆಡೆಯಿಂದಲೂ ಆಹಾರವನ್ನು ಹೀರಿ ಗಗನಚುಂಬಿಯಾಗಿ ನಿಂತಿರುವ ಮಹಾವೃಕ್ಷದಂತೆ ಆತನು ಎಲ್ಲ ಮತಗಳ ಎಲ್ಲ ಧರ್ಮಗಳ ಸಾರವನ್ನೂ ಹೀರಿ, ತನ್ನ ಸಾರಸ್ವತ ಸಂಪತ್ತಿನಿಂದ ತೊಳಗಿ ಬೆಳಗುತ್ತಿದ್ದಾನೆ. ಸಕಲ ಶಾಸ್ತ್ರಾಗಮ ಪುರಾಣಗಳನ್ನೂ ಕರತಲಾಮಲಕವಾಗಿ ಮಾಡಿಕೊಂಡ ಮಹಾನುಭಾವ, ಆತ. ಆತನನ್ನು ಇಂತಹ ಮತದವನೆಂದು ನಿರ್ದೇಶಿಸುವ ಅಗತ್ಯವಿಲ್ಲ. ತನ್ನ ಮಹಾಕಾವ್ಯದಿಂದ ಕನ್ನಡಿಗರ ಕೀರ್ತಿಧ್ವಜವನ್ನು ಮುಗಿಲಿಗೆತ್ತುವ ಆ ಕವಿ ಕನ್ನಡ ಕುಲಕ್ಕೆ ಸೇರಿದವನು. ಆತನೂ ಆತನ ಕಾವ್ಯವೂ ಕನ್ನಡಿಗರ ಹಿರಿಯ ಆಸ್ತಿ, ಹೆಮ್ಮೆ.

ಕುಮಾರವ್ಯಾಸನ ಅಸಾಧಾರಣವಾದ ಕವಿತಾಶಕ್ತಿಗೆ ಅಲೌಕಿಕ ಮೂಲವನ್ನು ನಿರ್ದೇಶಿಸುವ ದಂತ ಕಥೆಯೊಂದು ಪ್ರಚಲಿತವಾಗಿದೆ. ಕೋಳಿ ವಾಡದ ಹತ್ತಿರದ ಹಳ್ಳಿಯೊಂದರಲ್ಲಿ ಬ್ರಾಹ್ಮಣಸಂತರ್ಪಣೆಯೊಂದು ನಡೆ ಯುತ್ತಿದೆ. ಊಟಕ್ಕೆ ಕುಳಿತಿದ್ದ ಹುಡುಗನೊಬ್ಬ ತನಗೆ ದೊನ್ನೆ ಬೇಕೆಂದು ಹಟಹಿಡಿದ. ಪಕ್ಕದಲ್ಲಿದ್ದವನು ಬೇಸರದಿಂದ 'ಇವನದು ದುರ್ಯೋ ಧನನ ಹಟ' ಎಂದು ಗದರಿಸಿದ. ಊಟಕ್ಕೆ ಕುಳಿತಿದ್ದ ಮತ್ತೊಬ್ಬ ಆ ಮಾತನ್ನು ಕೇಳಿ, ಕಣ್ಣೀರು ಸುರಿಸುತ್ತಾ ಅಲ್ಲಿಂದ ಎದ್ದು ಹೋದ. ಅವನ್ನು ಕಂಡ ನಾರಣಪ್ಪ ಆತನನ್ನು ಹಿಂಬಾಲಿಸಿದ. ಆ ಬ್ರಾಹ್ಮಣ ಚಿರಂಜೀವಿಯಾದ ಅಶ್ವತ್ಥಾಮ. ಗೆಳೆಯನಾದ ದುರ್ಯೋಧನನನ್ನು ತೆಗಳಿ

ದುದರಿಂದ ಕಣ್ಣೀರು ಹಾಕಿದ. ಆಗ ನಾರಣಪ್ಪನಿಗೆ ಭಾರತವನ್ನು ಉಪದೇಶಿಸಿ, ನನ್ನನ್ನು ಕಂಡುದನ್ನು ಇತರರಿಗೆ ತಿಳಿಸಿದೊಡನೆಯೇ ನಿನ್ನ ತಲೆ ಸಹಸ್ರಹೋಳು ಎಂದು ಹೇಳಿ ಅದೃಶ್ಯನಾದ. ಅಂದಿನಿಂದ ನಾರಣಪ್ಪ ಬೆಳಗ್ಗೆ ಸ್ನಾನಮಾಡಿ, ತನ್ನ ಒದ್ದೆಯ ಬಟ್ಟೆ ಆರುವವರೆಗೆ, ತಾನೇ ತಾನಾಗಿ ಬಾಯಿಂದ ಉಕ್ಕಿಬರುತ್ತಿದ್ದ ಭಾರತಕಥೆಯನ್ನು ಬರೆಯುತ್ತಾ ಹೋದ. ಬಟ್ಟೆ ಒಣಗಿದೊಡನೆ ಆತನ ಕವಿತಾವೇಶ ಕೊನೆಗೊಳ್ಳುತ್ತಿದ್ದಿತಂತೆ. ಗದುಗಿನ ವೀರನಾರಾಯಣಸ್ವಾಮಿಯ ಗುಡಿಯಲ್ಲಿ ಇಂದಿಗೂ 'ಮಹಾಭಾರತದ ಕಂಭ' 'ವೀರನಾರಾಯಣನ ಕಂಭ' ಎಂದು ನಾರಣಪ್ಪನು ಕುಳಿತು ಬರೆಯುತ್ತಿದ್ದ ಸ್ಥಳವನ್ನು ಜನ ತೋರಿಸುತ್ತಾರೆ. ಈ ಕಥೆ ಅಕ್ಷರಶಃ ನಿಜವಲ್ಲದಿರಬಹುದು. ಕವಿಯು ದೇವರ ಸಾನ್ನಿಧ್ಯದಲ್ಲಿ ಕುಳಿತು, ತನ್ನ ಭಕ್ತಿಯ ಪ್ರಭಾವದಿಂದ ಪ್ರೇರಣೆ ಪ್ರಚೋದನೆಗಳನ್ನು ಪಡೆದು ಮೈದುಂಬಿ ಆವೇಶದಿಂದ ತನ್ನ ಕಾವ್ಯರಚನೆಯನ್ನು ಮಾಡಿರುವನೆಂಬುದರಲ್ಲಿ ಸಂಶಯವಿಲ್ಲ. ಕವಿಯು ಕಾವ್ಯಾರಂಭದಲ್ಲಿ 'ವೀರನಾರಾಯಣನೆ ಕವಿ, ಲಿಪಿಕಾರ ಕುಮಾರವ್ಯಾಸ' ಎಂದು ಹೇಳಿಕೊಂಡಿರುವುದರಲ್ಲಿ ಆತನ ನಮ್ರತೆ ಮಾತ್ರವೇ ಅಲ್ಲ, ತನ್ನಂತೆ ತನ್ನ ವಾಣಿಯೂ ವೀರನಾರಾಯಣನ ಪ್ರಸಾದಿಕವಾದುದೇ, ಇದು ಭಗವದ್ವಾಣಿಯಷ್ಟು ಪವಿತ್ರ, ಭವ್ಯ, ದಿವ್ಯ ಎಂಬ ಭಾವವೂ ಧ್ವನಿತವಾಗುತ್ತದೆ. ಈ ಹಿನ್ನೆಲೆಯಲ್ಲಿ ಆತನ ಪೀಠಿಕಾಸಂಧಿಯಲ್ಲಿ ಬರುವ

ಹಲಗೆ ಬಳಪವ ಹಿಡಿಯದೊಂದ
ಗ್ಗಳಿಕೆ ಪದವಿಟ್ಟಳುಪದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ
ಬಳಸಿ ಬರೆಯಲು ಕಂಠಪತ್ರದ
ಉಲುಹುಗೆಡದಗ್ಗಳಿಕೆಯೆಂಬೀ
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ

ಎಂಬ ಪದ್ಯದಲ್ಲಿ ಆತನು ಅಹಂಕಾರಿಯೆಂಬ ಭಾವನೆ ಬರಲು ಅವಕಾಶವಿಲ್ಲ. ಆತನ ಕವಿತಾಶಕ್ತಿಯ ಮೂಲ ಬರಿಯ ಪಾಂಡಿತ್ಯವಲ್ಲ, ಪ್ರತಿಭೆಯಲ್ಲ, ಕಲ್ಪನಾ ವಿಲಾಸವಲ್ಲ, ಲೋಕಾನುಭವವಲ್ಲ; ಇವೆಲ್ಲವನ್ನೂ ಒಳಗೊಂಡ ದೈವಾನುಗ್ರಹ.

ಕುಮಾರವ್ಯಾಸನು ಭಾರತರಚನೆಯನ್ನು ಕೈಕೊಂಡುದಕ್ಕೆ ತನ್ನದೆ ಆದ ವಿಶಿಷ್ಟರೀತಿಯಲ್ಲಿ ಕಾರಣವನ್ನು ಕೊಟ್ಟಿದ್ದಾನೆ.

ತಿಣಿಕಿದನು ಫಣಿರಾಯ ರಾಮಾ
ಯಣದ ಕವಿಗಳ ಭಾರದಲಿ ತಿಂ
ಥಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಹಿಲ್ಲ.

ಆದ್ದರಿಂದ ಕವಿ ಭಾರತಕ್ಕೆ ಕೈಹಾಕಿದನಂತೆ! ಅಷ್ಟೇ ಕಾರಣವಿರಲಾರದು. ಕವಿಯು ಹೇಳುತ್ತಾನೆ–

ಹರಿಯು ಬಸುರೊಳಗಖಿಳ ಲೋಕದ
ವಿರಡವಡಗಿಹವೋಲು ಭಾರತ
ಶರಧಿಯೊಳಗಡಗಿಹವನೇಕ ಪುರಾಣಶಾಸ್ತ್ರಗಳು
ಪರಮಭಕ್ತಿಯಲೀ ಕೃತಿಯನವ
ಧರಿಸಿ ಕೇಳ್ದಾ ನರರ ದುರಿತಾಂ
ಕುರದ ಬೇರಿನ ಬೇಗೆಯೆಂದರುಹಿದನು ಮುನಿನಾಥ

ವ್ಯಾಸ ಮಹರ್ಷಿಯ ಮಹಾಭಾರತ 'ಜಗತ್ತಿನಲ್ಲಿ ಇರುವುದೆಲ್ಲವೂ ಇಲ್ಲಿದೆ, ಇಲ್ಲಿ ಇಲ್ಲದುದು ಜಗತ್ತಿನಲ್ಲಿ ಇಲ್ಲ' ಎಂಬ ಸಂಸ್ಕೃತ ಸೂಕ್ತಿಯಿಂದ ಸಂಭಾವಿತವಾಗುವಷ್ಟು ಹಿರಿಮೆ ಗರಿಮೆಗಳನ್ನುಳ್ಳುದು. ಧರ್ಮವಿಷಯಕ ವಾದ ಅನೇಕ ಕ್ಲಿಷ್ಟಸಮಸ್ಯೆಗಳಿಗೆ ಇದರಲ್ಲಿ ಸಮುತ್ತರ ದೊರೆಯುತ್ತದೆ. ಧರ್ಮಕ್ಕೆ ಆಧಾರಗ್ರಂಥವಾದ ಇದು 'ಪಂಚಮವೇದ.' ಇದು ಧರ್ಮಗ್ರಂಥ ವಾಗಿರುವಷ್ಟೇ ಇತಿಹಾಸವೂ ನಿಜ. ಇದು ಭರತಖಂಡದ ಒಂದು ಕಾಲದ ಸಂಸ್ಕೃತಿ ನಾಗರಿಕತೆಗಳನ್ನು ಒಳಗೊಂಡ ಸಮಗ್ರ ಜನಜೀವನದ ಇತಿಹಾಸ ವನ್ನು ಅದ್ಭುತ ರೀತಿಯಲ್ಲಿ ವಿವರಿಸುತ್ತದೆ. ಇದರ ಕರ್ತೃವಾದ ವ್ಯಾಸ ಮಹರ್ಷಿ ಕುರುವಂಶ ಅಳಿದುಹೋಗುತ್ತಿದ್ದಾಗ ಅದನ್ನು ಉಳಿಸಿದವನು. ಒಂದು ದೃಷ್ಟಿಯಿಂದ ಆ ವಂಶದ ಮೂಲ ಪುರುಷನಾಗಿದ್ದುಕೊಂಡು, ಅದರ ಮೂರು ತಲೆಮಾರುಗಳ ಆಗು ಹೋಗುಗಳನ್ನು ಕಣ್ಣಾರೆ ಕಂಡವನು. ಉತ್ತಮ ಇತಿಹಾಸಕಾರನಂತೆ ಸತ್ಯವನ್ನು ಸದಾ ದೃಷ್ಟಿಯಲ್ಲಿ ಇಟ್ಟು ಕೊಂಡು, ಯಾವುದೊಂದು ಪಕ್ಷಪಾತಕ್ಕೂ ಎಡೆಗೊಡದೆ, ಅನುಭವೈಕ ವೇದ್ಯವಾದುದನ್ನು ಒಡನುಡಿದು ಕೃತಕೃತ್ಯನಾದವನು. ಈತನ ಮಹಾ

ಭಾರತಕ್ಕೆ ಪುರಾಣದ ಮುದ್ರೆಯೊತ್ತಿ, ವಾಲ್ಮೀಕಿ ರಾಮಾಯಣಕ್ಕೆ ಆದಿ ಕಾವ್ಯದ ಪಟ್ಟವನ್ನು ಕಟ್ಟಿದರೆಂದು ತೋರುತ್ತದೆ. ಅಪೌರುಷೇಯವೆಂದು ಪ್ರಖ್ಯಾತವಾಗಿರುವ ವೇದಗಳಲ್ಲಿ ಜೇರಿಟ್ಟು, ವೇದಗಳಂತೆಯೇ ಬಾಯಿಂದ ಬಾಯಿಗೆ ಹರಿದುಬಂದು, ಹಾಗೆ ಬರುತ್ತಾ ಹತ್ತಾರು ನೂರಾರು ಧರ್ಮ ಜಿಜ್ಞಾಸೆ ಉಪಾಖ್ಯಾನಗಳ ಉಪನದಿಗಳನ್ನು ಒಳಗೊಂಡು, ಒಂದು ಲಕ್ಷ ಶ್ಲೋಕಗಳ ಮಹಾಸಾಗರವಾಗಿ ನಿಂತಿದೆ, ಈ ಗ್ರಂಥ. ಬೃಹತ್ತು ಮಹತ್ತು ಗಳಲ್ಲಿ ಇದನ್ನು ಮೀರಿಸಿದ ಗ್ರಂಥ ಇನ್ನೂ ಉದಯವಾಗಿಲ್ಲ. ಇದು ಭಾರತೀಯರ ಅಚ್ಚುಮೆಚ್ಚಿನ ಪೂಜ್ಯಗ್ರಂಥ. ಜನಾನುರಾಗದಲ್ಲಿ ಇದರೊಡನೆ ಸ್ಪರ್ಧಿಸಬಲ್ಲ ಭರತಖಂಡದ ಮತ್ತೊಂದು ಮಹಾಗ್ರಂಥವೆಂದರೆ ರಾಮಾಯಣ. ರಾಮಾಯಣವು ತ್ರೇತಾಯುಗಕ್ಕೆ ಸಂಬಂಧಿಸಿದುದು, ಧರ್ಮಧೇನು ಮೂರು ಕಾಲುಗಳನ್ನೂರಿ ನಿಂತಿದ್ದ ಕಾಲದ್ದು ; ಅದರ ಪಾತ್ರಗಳು ಇಂದು ನಮಗೆ ಅನುಸರಣಸಾಧ್ಯರಲ್ಲದಷ್ಟು ಆದರ್ಶವ್ಯಕ್ತಿಗಳು. 'ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ.' ಭಾರತದ ವಿಚಾರ ಹಾಗಲ್ಲ. ಇಲ್ಲಿನವರು ನಮ್ಮ ಸಮೀಪ ಬಂಧುಗಳು, ಅನುಸರಣಸಾಧ್ಯರು. ಕುಮಾರವ್ಯಾಸನು ಭಾರತ ರಚನೆಗೆ ಕೈಹಾಕಿದುದು ಈ ಕಾರಣದಿಂದಲೂ ಇರಬಹುದು.

ಕುಮಾರವ್ಯಾಸನು ವ್ಯಾಸಭಾರತವನ್ನು ಆಮೂಲಾಗ್ರವಾಗಿ ಮೇಲಿಂದ ಮೇಲೆ ಓದಿ, ರಸಾಸ್ವಾದನೆ ಮಾಡಿರುವುದಲ್ಲದೆ, ಅದನ್ನು ವಾಚೋವಿಧೇಯವಾಗಿ ಮಾಡಿಕೊಂಡಿರುವನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಆತನು ಮೂಲವನ್ನು ಕನ್ನಡದಲ್ಲಿ ಸಂಗ್ರಹಿಸಹೊರಟು ಹೆಜ್ಜೆಹೆಜ್ಜೆಗೂ ಅದನ್ನು ಅನುಸರಿಸುತ್ತಿರುವುದಲ್ಲದೆ, ಅನೇಕ ಕಡೆ ಮೂಲದ ಶ್ಲೋಕಗಳನ್ನು ಭಾಷಾಂತರ ಕೂಡ ಮಾಡಿದ್ದಾನೆ; ಅದರ ಸಾರವನ್ನು ಭಟ್ಟಿಯಿಳಿಸಿ ಹೇಳಿರುವುದೂ ಉಂಟು. ಈ ಬಗೆಯಾದ ಅನುಸರಣೆ ಯುದ್ಧ ಪಂಚಕಕ್ಕಿಂತಲೂ ಆದಿ ಪಂಚಕದಲ್ಲಿ ಹೆಚ್ಚು. ಆದರೂ ಆತನನ್ನು ಬರಿಯ ಭಾಷಾಂತರಕಾರನೆಂದಾಗಲಿ, ಸಂಗ್ರಹಕಾರನೆಂದಾಗಲಿ ಕರೆಯುವಂತಿಲ್ಲ. ಆತನು ವಿಶಿಷ್ಟ ಶಕ್ತಿಯ ಸ್ವತಂತ್ರ ಕವಿ. ತನಗೆ ಸೂಕ್ತ ತೋರಿದಂತೆ ಮೂಲ ಕಥೆಯ ಹಲವು ಅಂಶಗಳನ್ನು ಕೈ ಬಿಟ್ಟಿದ್ದಾನೆ; ಕೆಲವು ಕಡೆ ವ್ಯತ್ಯಾಸ ಮಾಡಿದ್ದಾನೆ; ಮೂಲದಲ್ಲಿಲ್ಲದ ಕೆಲವು ಅಂಶಗಳನ್ನು ಹೊಸದಾಗಿ ಸೇರಿಸಿ

ದ್ದಾನೆ. ಮೂಲದಲ್ಲಿರುವ 'ಅಂಬೋಪಾಖ್ಯಾನ, ವಿದುಲೋಪಾಖ್ಯಾನ ಹರಿಶ್ಚಂದ್ರಯಾಗ, ಸಾಂದೀಪಿನಿಯ ಕಥೆ, ನರಕಾಸುರವಧೆ ಇತ್ಯಾದಿ ಮುಖ್ಯ ಕಥೆಗೆ ಸಂಬಂಧಿಸದ ಆಖ್ಯಾನಗಳನ್ನು ಅನಾಮತ್ತಾಗಿ ಆತ ಕೈಬಿಡುವುದುಂಟು. ಒಂದು ವೇಳೆ ಕಥೆಯ ದೃಷ್ಟಿಯಿಂದ ಒಂದು ಉಪಾಖ್ಯಾನ ಅನಿವಾರ್ಯವಾದುದೆಂದು ತೋರಿದರೆ ಅದನ್ನು ಒಂದೋ ಅರ್ಧವೋ ಪದ್ಯದಲ್ಲಿ ಸಂಗ್ರಹಿಸಿಕೊಟ್ಟು ಕೈ ತೊಳೆದುಕೊಳ್ಳುತ್ತಾನೆ. ದುರ್ಯೋಧನನ ಪಕ್ಷವನ್ನು ಅನಿವಾರ್ಯವಾಗಿ ಸೇರಿದ ಶಲ್ಯ ತಂಗಿಯ ಮಕ್ಕಳನ್ನು ನೋಡಲೆಂದು ಪಾಂಡವರ ಬಳಿ ಬಂದಾಗ ಅವರನ್ನು ಸಮಾಧಾನಗೊಳಿಸಲೆಂದು ನಹುಷನ ಕಥೆಯನ್ನು ಹತ್ತು ಪರ್ವಗಳಷ್ಟು ವಿಸ್ತರಿಸಿ ಹೇಳುತ್ತಾನೆ, ವ್ಯಾಸ ಭಾರತ ದಲ್ಲಿ. ಕುಮಾರವ್ಯಾಸ 'ಆದಿ ವೃತ್ರಾಸುರನ ಮುರಿದವನಾದದಲಿ ಹಿರಿ ಹೋಗಿ ದುಃಖಿತನಾದನಿಂದ್ರನು, ಮತ್ತೆ ಬದುಕಿದ ಶಚಿಯ ದೆಸೆಯಿಂದ' ಎಂಬ ಪದ್ಯಭಾಗದಷ್ಟರಲ್ಲಿಯೇ ಹೇಳಿ ಮುಗಿಸುತ್ತಾನೆ. ಕೆಲವು ವೇಳೆ ಮೂಲದ ಸನ್ನಿವೇಶಗಳನ್ನು ಕನ್ನಡದಲ್ಲಿ ಸ್ಥಳಪಲ್ಲಟಮಾಡಿರುವುದೂ ಉಂಟು. ಯಾನಸಂಧಿಪರ್ವದಲ್ಲಿ ಬರುವ ಕರ್ಣನ ಶಸ್ತ್ರಸನ್ಯಾಸ ಮತ್ತು ಉಲೂಕದೂತಾಗಮನದಲ್ಲಿ ಬರುವ ಉಲೂಕ ದೌತ್ಯ—ಈ ಎರಡನ್ನೂ ಕವಿ ಭೀಷ್ಮಪರ್ವದ ಮೊದಲಸಂಧಿಯಲ್ಲಿ ಕೊಡುತ್ತಾನೆ. ಹೀಗೆ ಕಥೆಯಲ್ಲಿ ಆತನು ವಹಿಸಿರುವ ಸ್ವಾತಂತ್ರ್ಯಕ್ಕಿಂತಲೂ ಆತನು ಕಥಾನಿರೂಪಣಾ ರೀತಿಯಲ್ಲಿ ವಹಿಸಿರುವ ಸ್ವಾತಂತ್ರ್ಯ ಆತನ ಕಾವ್ಯಕ್ಕೆ ಚಿರನೂತನತೆಯನ್ನು ಒದಗಿಸಿದೆ.

ವ್ಯಾಸಭಾರತವನ್ನು ಕನ್ನಡಕ್ಕೆ ಮೊಟ್ಟಮೊದಲು ತಂದುಕೊಟ್ಟವನು ಆದಿಕವಿ ಪಂಪನಷ್ಟೆ? ಹಿಂದಿನ ಕಬ್ಬಿಗರನ್ನೆಲ್ಲ ಇಕ್ಕಿಮೆಟ್ಟಿದ ಆ ಮಹಾ ಕವಿ ಬರೆದ ಕಾವ್ಯವನ್ನೇ ಮತ್ತೊಮ್ಮೆ ಕನ್ನಡದಲ್ಲಿ ಬರೆಯುವೆನೆಂದು ಹೊರ ಡುವವನಿಗೆ ಎಂಟೆರ್ದೆಯೆ ಬೇಕು. ಕುಮಾರವ್ಯಾಸನು 'ಎಂಟೆರ್ದೆ ಅಲ್ಲ, ಎಂಟು 'ಎಂಟೆರ್ದೆ' ಗಳುಳ್ಳವನು. ಏಕಾಗಬಾರದು? ಹಿಮಾಲಯದಲ್ಲಿ ಗೌರೀಶಂಕರವಿದ್ದ ಮಾತ್ರಕ್ಕೆ ಧವಳಗಿರಿ ಇರಬಾರದೇನು? ಕುಮಾರ ವ್ಯಾಸನು ಪಂಪನ ಜೊಯ್‌ಕಯ್ ಆಗುವಂತೆ ಕಾವ್ಯರಚನೆ ಮಾಡಿ 'ಸೈ' ಎನಿಸಿಕೊಂಡಿದ್ದಾನೆ. ಇಬ್ಬರೂ ಮಹಾಕವಿಗಳು. ವರಕವಿಗಳು, ಇಬ್ಬರೂ ವ್ಯಾಸಮಹರ್ಷಿಗೆ ಸ್ತುತಿರೂಪದ ಪುಷ್ಪಾಂಜಲಿಯನ್ನು ಅರ್ಪಿಸಿ ಕಾವ್ಯ

ಕರ್ಮಕ್ಕೆ ಕೈಹಾಕಿದ್ದಾರೆ; ಇಬ್ಬರೂ ಅದ್ಭುತರೀತಿಯಲ್ಲಿ ಅದನ್ನು ನಿರ್ವಹಿಸಿ ಸ್ತುತ್ಯರಾಗಿದ್ದಾರೆ. ಆದರೆ ಇವರಿಬ್ಬರ ನಿಲವು ಬೇರೆ, ದೃಷ್ಟಿ ಬೇರೆ, ಕಾವ್ಯನಿರೂಪಣೆಯ ರೀತಿ ಬೇರೆ. ಪಂಪನು ಅರಿಕೇಸರಿಯ ಆಸ್ಥಾನಕವಿಯಾಗಿ, ದಂಡನಾಯಕನಾಗಿ, ಗೆಳೆಯನಾಗಿ ಬಾಳಿದವನು. ಆತನು ಕಾವ್ಯರಚನೆ ಮಾಡಿದುದು ಭರತಖಂಡದ ವೀರಯುಗದಲ್ಲಿ. ಆತನ ಕಾವ್ಯದಲ್ಲಿ ಕಾವ್ಯಶಕ್ತಿಯೊಡನೆ ಕಲಿತನವೂ ಬೆರೆತು, ಅದರಲ್ಲಿ ವೀರರಸ ನೊರೆಗಟ್ಟಿ ಹರಿಯುವಂತಾಗಿದೆ. ಕುಮಾರವ್ಯಾಸನ ಸ್ವಭಾವ ಸನ್ನಿವೇಶಗಳು ಬೇರೆ ಬಗೆಯವು. ಆತನ ಕಾಲ ಭಕ್ತಿಯುಗ; ಶಿವಶರಣರ ಹರಿದಾಸರ ಭಕ್ತಿಪ್ರವಾಹ ಉಕ್ಕಿ ನಾಡಿನ ಮೂಲೆ ಮೂಲೆಯಲ್ಲಿಯೂ ಪ್ರವಹಿಸಹೊರಟ ಕಾಲವದು. ಕುಮಾರವ್ಯಾಸ ರಾಜರನ್ನು ಆಶ್ರಯಿಸಿದವನಲ್ಲ, ರಾಜರನ್ನು ಕಂಡವನಲ್ಲ. ಆತನ ಕಾವ್ಯರಚನೆಗೆ ಪ್ರೇರಕ ಶಕ್ತಿ ಗದುಗಿನ ವೀರನಾರಾಯಣಸ್ವಾಮಿ. ಆದ್ದರಿಂದ ಆತನ ಕಾವ್ಯದಲ್ಲಿ ಭಕ್ತಿರಸ ಹೆಪ್ಪುಗಟ್ಟಿ ಕುಳಿತಿದೆ.

ಪಂಪಕವಿಯ ಶ್ರೋತೃಗಳು ರಾಜಸಭಾಸದರು; ಆದ್ದರಿಂದ ಆತನ ಕಾವ್ಯದಲ್ಲಿ ಪ್ರೌಢಿಮೆ, ಪಾಂಡಿತ್ಯ, ರಾಜಗಾಂಭೀರ್ಯಗಳ ಮೆರವಣಿಗೆ ಕಾಣುಬರುತ್ತದೆ. 'ಬಾಯಿಬಿಟ್ಟರೆ ಮುತ್ತು ಸುರಿದೀತು' ಎಂಬಂತಹ ಶ್ರೀಮದ್ಗಾಂಭೀರ್ಯದಿಂದ ಕೂಡಿದ ಪಂಪಕವಿ 'ಹತ್ತು ಕಟ್ಟುವ ಕಡೆ ಒಂದು ಮುತ್ತು ಕಟ್ಟು' ಎಂಬ ಪ್ರವೃತ್ತಿಯವನು. ಮಾತುಗಳೆಲ್ಲಾ ಸೂತ್ರದಂತೆ ಸಂಗ್ರಹ, ಸಾರ. ಕವಿ ಕುವೆಂಪುರವರ ಮಾತಿನಲ್ಲಿ ಹೇಳುವುದಾದರೆ ಆತ 'ಕಲಿತವರ ಕಲ್ಪವೃಕ್ಷ'. ಕುಮಾರವ್ಯಾಸನ ರೀತಿ ಬೇರೆ. ಆತನು 'ಕಲಿಯದವರಿಗೂ ಕಾಮಧೇನು.' ಆತನ ಶ್ರೋತೃವರ್ಗ 'ಜಂಗಮ ಜನಾರ್ದನರು.' ಈ ಜನತಾಜನಾರ್ದನರಿಗೆ ಅರ್ಥವಾಗುವಂತಹ ಭಾಷೆ, ಭಂಗಿ, ಛಂದಸ್ಸು ಆತನದು. ಜನರಿಗೆ ಅರ್ಥವಾಗುವಂತೆ ಹಿಗ್ಗಲಿಸಿ, ಬಿಡಿಸಿ, ಜನರಿಗೆ ಸುಸ್ಪಷ್ಟವಾಯಿತೆಂಬ ನಂಬಿಕೆಯಿಂದ ನೆಮ್ಮದಿಗೊಳ್ಳುವ ಚೇತನ, ಆತನದು. ಕುಮಾರವ್ಯಾಸಭಾರತ ಪ್ರಮಾಣದಲ್ಲಿ ಪಂಪಭಾರತಕ್ಕೆ ನಾಲ್ಕರಷ್ಟಿದೆ ಎಂಬುದು ಗಮನಾರ್ಹ. ಪಂಪನು ಒಂದು ಪದ್ಯದಲ್ಲಿ ಹೇಳಿ ಮುಗಿಸಿರುವ ಜರಾಸಂಧವಧೆ ನಾರಣಪ್ಪನಲ್ಲಿ ೧೯ ಪದ್ಯಗಳಾಗಿವೆ. ೧೩ ಪದ್ಯಗಳಲ್ಲಿ ಪಂಪಕವಿ ಅಡಕಮಾಡಿರುವ ಶಿಶುಪಾಲ

ವಧಾಪ್ರಕರಣ ನಾರಣಪ್ಪನಲ್ಲಿ ನಾಲ್ಕು ಸಂಧಿಗಳಷ್ಟು ಹರಡಿಕೊಂಡಿದೆ.

ಪಂಪ ಕುಮಾರವ್ಯಾಸರಲ್ಲಿ ಕಾಣುಬರುವ ಮತ್ತೊಂದು ದೊಡ್ಡ ವ್ಯತ್ಯಾಸವೆಂದರೆ ಅವರ ಕಾವ್ಯದೃಷ್ಟಿಯಲ್ಲಿ ಕಾಣಬರುವ ಭಿನ್ನತೆ. ಪಂಪಕವಿಯ ಕವಿತಾಪ್ರವಾಹದ ಒಂದು ಕವಲು ಆತನ ಭಾರತ ; ಅದು ‘ ಬೆಳಗುವೆನಿಲ್ಲಿ ಲೌಕಿಕಮಂ ’ ಎಂಬ ಅಡ್ಡಗಟ್ಟೆಯನ್ನು ಹಾಕಿಕೊಂಡೇ ಹರಿಯ ಹೊರಟಿದೆ, ಆತನ ‘ ಕಾವ್ಯಧರ್ಮಮುಂ ಧರ್ಮಮುಮಂ ’ ಒಳಗೊಂಡ ಪೂರ್ಣ ಪ್ರವಾಹ ಹರಿದಿರುವುದು ‘ ಆದಿಪುರಾಣ ’ ದ ಪಾತ್ರದಲ್ಲಿ. ಜೈನನಾದ ಆತನಿಗೆ ಭಾರತದಲ್ಲಿ ಬರುವ ಹಲವು ಪ್ರಸಂಗಗಳು ನುಂಗಲಾರದ ತುತ್ತುಗಳಾಗಿವೆ. ಆತನು ಬರೆಯುತ್ತಿರುವುದು ವ್ಯಾಸಭಾರತದ ಕಥೆಯಾದರೂ ಅದರ ಅಂತಸ್ಸ್ವರೂಪ ‘ ಸಮಸ್ತ ಭಾರತ. ’ ‘ ವಿಕ್ರಮಾರ್ಜುನ ವಿಜಯ.’ ಪಂಚವಲ್ಲಭೆಯಾದ ಪಾಂಚಾಲಿ ಇಲ್ಲಿ ಅರ್ಜುನನ ಧರ್ಮಪತ್ನಿಯಾಗಹೊರಟಿದ್ದಾಳೆ; ಆದರೆ ಕೃತಕೃತ್ಯಳಾಗದೆ ಕಥೆಯ ಸೆಳವಿಗೆ ಸಿಕ್ಕಿ ಐವರನ್ನೂ ಆಶ್ರಯಿಸಿದ್ದಾಳೆ. ದೇವಸಿಂಹಾಸನದಲ್ಲಿ ಮಂಡಿಸಿದ್ದ ಶ್ರೀ ಕೃಷ್ಣ ಅಜ್ಞಾತನಲ್ಲದಿದ್ದರೂ ಅಲ್ಪಜ್ಞಾತನಾಗಿ, ತನ್ನ ಗರಿಮೆ ಹಿರಿಮೆಗಳಿಗೆ ಆದ ಕತ್ತರಿ ಪ್ರಯೋಗವನ್ನು ಸಹಿಸಿಕೊಂಡಿದ್ದಾನೆ. ಕವಿಯು ಶ್ರೀಕೃಷ್ಣನ ಪಾತ್ರವನ್ನು ಅನಿವಾರ್ಯವಾದ ಕಡೆ, ಆ ಪಾತ್ರಕ್ಕೆ ಅಪಚಾರವಾಗದಂತೆ, ಕ್ವಚಿತ್ತಾಗಿ ಹೇಳಿ, ತೇಲಿಸಿಕೊಂಡು ಹೋಗಿದ್ದಾನೆ. ಈ ಕಾರಣದಿಂದ ಪಂಪಭಾರತವು ಕವಿಯ ಧರ್ಮದೃಷ್ಟಿಯಿಂದ, ದರ್ಶನದಿಂದ ವಂಚಿತವಾಗಿದೆ. ನಾರಣಪ್ಪನ ದೃಷ್ಟಿ ಇದರಿಂದ ಭಿನ್ನವಾದ್ದು. ಕಾವ್ಯಶಕ್ತಿಯೊಡನೆ ಧರ್ಮದೃಷ್ಟಿಯೂ ಸೇರಿರುವ ಪೂರ್ಣ ಪ್ರವಾಹ ಆತನ ಕಾವ್ಯ. ಇದರಿಂದ ಆತನ ಕಾವ್ಯ ಅಲೌಕಿಕವಾದ ಒಂದು ಪ್ರಭಾವಳಯವನ್ನು ಪಡೆದಿದೆ. ಆತನಿಗೆ ಭಾರತವು ಕುರುಪಾಂಡವರ ಚರಿತೆಯಾಗುವುದಕ್ಕಿಂತಲೂ ಹೆಚ್ಚಾಗಿ ‘ ಕೃಷ್ಣ ಚರಿತೆ ’ ಯಾಗಿದೆ. ಭಕ್ತಕವಿಯಾದ ಕುಮಾರವ್ಯಾಸ ರಸಾವೇಶದಿಂದ ಮೈಮರೆತು ಮುಗಿಲುಮುಟ್ಟುವಂತೆ ಬರೆದಿರುವ ಭಾಗಗಳಿಗೆ ಹೋಲಿಸಬಹುದಾದಂತಹ ಕಾವ್ಯಭಾಗಗಳು ಕನ್ನಡದಲ್ಲಿಲ್ಲ.

ಪಂಪ–ಕುಮಾರವ್ಯಾಸರು ಭಿನ್ನ ಸ್ವರೂಪದವರಾದರೂ, ಕುಮಾರವ್ಯಾಸನು ತನಗಿಂತಲೂ ಪ್ರಾಚೀನನಾದ ಪಂಪಕವಿಯನ್ನು ಅನುಸರಿಸಿಲ್ಲ

ನಾದರೂ ಆತನ ಕಾವ್ಯವನ್ನು ಸಾಕಷ್ಟು ಪರಿಚಯ ಮಾಡಿಕೊಂಡಿದ್ದನೆಂದು ತೋರುತ್ತದೆ. ವ್ಯಾಸ ಭಾರತದಲ್ಲಿ ಕಾಣಬರದ ಒಂದೆರಡು ಸುಂದರ ಸನ್ನಿವೇಶಗಳು ಪಂಪಭಾರತದಲ್ಲಿ ಕಾಣಬರುತ್ತವೆ; ಅವು ಕುಮಾರವ್ಯಾಸ ಭಾರತದಲ್ಲಿಯೂ ಕಾಣಬರುತ್ತವೆ. ಶ್ರೀ ಕೃಷ್ಣನು ಸಂಧಿಗೆಂದು ಹಸ್ತಿನಾವತಿಗೆ ಹೋದಾಗ, ದುರ್ಯೋಧನನ ರಾಜಾತಿಥ್ಯವನ್ನು ಒಲ್ಲದೆ, ಕಡುಬಡವನಾದ ವಿದುರನ ಮನೆಗೆ ಹೋಗುತ್ತಾನೆ. ಇದರಿಂದ ಕುಪಿತನಾದ ದುರ್ಯೋಧನ ಸಂಧಿ ಪ್ರಸ್ತಾಪ ಬಂದಾಗ ಅವನ ಮಾತನ್ನು ತಳ್ಳಿಹಾಕುತ್ತಾ 'ವಿದುರನೆಂಬೀ ತೊಳ್ಪುಟ್ಟಿಯ ಮನೆಯ ಕೂಳೆ ನುಡಿಯಿಸೆ ನುಡಿದ್ಪೆ'—ಈ ದಾಸೀಪುತ್ರನಾದ ವಿದುರನ ಮನೆಯ ಕೂಳು ಹೀಗೆ ನಿನ್ನಿಂದ ನುಡಿಯಿಸುತ್ತಿದೆ–ಎಂದು ತೆಗಳುತ್ತಾನೆ. ಇದನ್ನು ಕೇಳಿ ಕುಪಿತನಾದ ವಿದುರ

ಕಡು ಮುಳಿದು ನಿನ್ನ ತೊಡೆಗಳ
ನುಡಿವೆಡೆಯೊಳ್ ಭೀಮಸೇನನಾ ಪದದೊಳ್
ಪಿಡಿಯಲ್ಕೆಂದಿರ್ದೆನಿದಂ
ಪಿಡಿಯೆಂ ಪೋಗೆಂದು ಸಭೆಯೊಳುಡಿದಂ ಬಿಲ್ಲಂ (ಪಂ.ಭಾ. ೯–೫೯)

ಕೋಪಗೊಂಡ ಭೀಮಸೇನ ನಿನ್ನ ತೊಡೆಗಳನ್ನು ಮುರಿಯುವಂತಹ ವಿಷಮ ಸನ್ನಿವೇಶದಲ್ಲಿ ನಿನ್ನನ್ನು ಕಾಪಾಡಲೆಂದು ಈ ಬಿಲ್ಲನ್ನು ಇಟ್ಟುಕೊಂಡಿದ್ದೆ. ಇದನ್ನು ಇನ್ನು ಹಿಡಿಯುವುದಿಲ್ಲ–ಎಂದು ಹೇಳಿ, ತುಂಬಿದ ಸಭೆಯಲ್ಲಿ ಅದನ್ನು ಮುರಿದು ಹಾಕಿದ. ಪಂಪನ ಈ ಭಾಗವನ್ನು ನಾರಣಪ್ಪ ಸರಳಾನುವಾದ ಮಾಡಿದಂತೆ ತೋರುತ್ತದೆ. ಕೌರವನು ಕೃಷ್ಣನ ಮಾತನ್ನು ಅಲ್ಲಗಳೆಯುತ್ತಾ

ಈ ಕೃಪನ ಈ ದ್ರೋಣನೀ ಗಂ
ಗಾ ಕುಮಾರನ ಮನೆಯ ಹೊಗದವಿ
ವೇಕಿ ತೊತ್ತಿನ ಮಗನ ಮನೆಯಲಿ ಹಸಿವ ನೂಕಿದಿರಿ

'ನಿಮಗೇಕೆ ರಾಯರ ಠೀವಿ?' ಎಂದ.

ಕುರುಪತಿಯ ಬಿರುನುಡಿಯ ಕೇಳಿದು
ಕರಣದಲಿ ಕೋಪಾಗ್ನಿಯುಕ್ಕಲು
ಕೆರಳಿ ನಿರ್ಭೀತಿಯಲಿ ನುಡಿದನು ವಿದುರನರಸಂಗೆ

* * * *

ಕಡು ಮುಳಿದು ಕಲಿಭೀಮ ನಿನ್ನಯ
ತೊಡೆಗಳನು ಮುರಿವಾ ಸಮಯದಲಿ
ಬಿಡದೆ ನಿನ್ನನು ಕಾಯಬೇಕೆಂದುಳುಹಿದೆನು ಶರವ
ಕೆಡೆನುಡಿಸಿಕೊಂಡಿನ್ನು ಕಾವೆನೆ
ಪೊಡವಿಪತಿ ಕೇಳೆಂದು ವಿದುರನು
ಹಿಡಿದ ಬಿಲ್ಲನು ಮುರಿದನಾ ಕುರುಸೇನೆ ಕಳವಳಿಸೆ

ಪಂಪನ ಒಂದು ಪುಟ್ಟ ಕಂದಪದ್ಯಕ್ಕೆ ಬದಲಾಗಿ ನಾರಣಪ್ಪನ ಭಾಮಿನೀಷಟ್ಪದಿಯ ಒಂದೂವರೆ ಪದ್ಯಗಳು ಇಲ್ಲಿ ಬಂದಿವೆ. ಹಾಗೆಯೇ ಸಂಧಿ ವಿಸಂಧಿಯಾದಮೇಲೆ ಶ್ರೀ ಕೃಷ್ಣನು ಕರ್ಣನನ್ನು ಸಂಧಿಸಿ, ಅವನ ಜನ್ಮ ವೃತ್ತಾಂತವನ್ನು ಅರುಹಿದ ಮೇಲೆ, ಅವನು ತನ್ನ ತಾಯಿಯಾದ ಕುಂತಿಯನ್ನು ಗಂಗಾತೀರದಲ್ಲಿ ಕಾಣುತ್ತಾನೆ. ಆಗ ಗಂಗಾದೇವಿ ಪ್ರತ್ಯಕ್ಷಳಾಗಿ ಮಗನನ್ನು ತಾಯಿಗೆ ಒಪ್ಪಿಸುತ್ತಾಳೆ. ತಂದೆಯಾದ ಸೂರ್ಯದೇವನೂ ಪ್ರತ್ಯಕ್ಷನಾಗಿ, ತಾಯಿಯಾದ ಕುಂತಿ ಕೃಷ್ಣನ ಬುದ್ಧಿವಾದದಂತೆ ನಿನ್ನಲ್ಲಿ ವರಳು ಬೇಡಲು ಬರುತ್ತಾಳೆ. ನೀನು ಅವಳ ಮಾತಿಗೆ ಮರುಳಾಗಬೇಡ— ಎಂದು ಬುದ್ಧಿ ಹೇಳುತ್ತಾನೆ. ವ್ಯಾಸಭಾರತದಲ್ಲಿ ಕಾಣಬರದ ಈ ಸನ್ನಿವೇಶ ಪಂಪಭಾರತದಲ್ಲಿದೆ; ಕುಮಾರವ್ಯಾಸ ಭಾರತದಲ್ಲಿದೆ. ಇದನ್ನು ನೋಡಿದರೆ ಕುಮಾರವ್ಯಾಸನು ಪಂಪಭಾರತವನ್ನು ಓದಿರಬಹುದೆಂಬ ಊಹೆಗೆ ಬೆಂಬಲ ದೊರೆಯುತ್ತದೆ. ಆತನ ಭಾಷಾ ಶ್ರೀಮಂತಿಕೆಯನ್ನು ಕಂಡರಂತೂ ಆತನ ಕಾವ್ಯಾಭ್ಯಾಸ ಅತ್ಯಂತ ವಿಸ್ತಾರವಾದುದೆನ್ನಿಸುತ್ತದೆ. ಸಂಸ್ಕೃತ ಕನ್ನಡ ಭಾರತಗಳಲ್ಲಿ ಮತ್ತೆಲ್ಲಿಯೂ ಕಾಣಬರದ ಕೆಲವು ಸನ್ನಿವೇಶಗಳೂ ನಾರಣಪ್ಪನಲ್ಲಿ ಕಂಡುಬರುತ್ತವೆ. ಸಂಧಿಗೆಂದು ಬಂದ ಶ್ರೀ ಕೃಷ್ಣನು ಕೌರವ ಸಭೆಯನ್ನು ಪ್ರವೇಶಿಸಿದಾಗ 'ಕುಮತಿ ಕೌರವ' ಆತನನ್ನು ಸಂಭಾವಿಸದೆ ಸಿಂಹಾಸನದಲ್ಲಿ ಕುಳಿತಿದ್ದ. ಆಗ

ಸೆಣಸು ಸೇರದ ದೇವನಿದಿರಲಿ
ಮಣಿಯದಾತನ ಕಾಣುತವೆ ಧಾ
ರಿಣಿಯನೊತ್ತಿದನುಂಗುಟದ ತುದಿಯಿಂದ ನಸುನಗುತ

ಇದರಿಂದ ಕೌರವನ ಸಿಂಹಾಸನದ ಗೋಣಸು ಮುರಿದು, ಅವನು ಕೃಷ್ಣನ

ಪಾದಗಳಮೇಲೆ ಉರುಳಿಬಿದ್ದ. ಶ್ರೀ ಕೃಷ್ಣನ ಈ ಮಹಿಮಾ ಪ್ರಸಂಗಕ್ಕೆ ಭಾಸಕವಿಯ 'ದೂತವಾಕ್ಯ'ವು ಪ್ರಚೋದನೆ ನೀಡಿದ್ದರೂ ನೀಡಿರಬಹುದು. ಆತನ ಕಾವ್ಯವೆಷ್ಟು ವಿಸ್ತಾರವಾದುದೋ ಆತನ ಪ್ರಜ್ಞಾವಲಯದಲ್ಲಿನ ವಸ್ತುಸಂಗ್ರಹಣವೂ ಅಷ್ಟೇ ವಿಸ್ತಾರವ್ಯಾಪ್ತಿಯುಳ್ಳದು.

ಆಧುನಿಕ ಕನ್ನಡದ ಮಹಾಕವಿ ಕುವೆಂಪು ಕುಮಾರವ್ಯಾಸನನ್ನು ಕುರಿತು 'ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು! ಭಾರತ ಕಣ್ಣಲಿ ಕುಣಿವುದು; ಮೈಯಲಿ ಮಿಂಚಿನ ಹೊಳೆ ತುಳುಕಾಡುವುದು' ಎಂದು ಹಾಡಿದ್ದಾರೆ. ಕುಮಾರವ್ಯಾಸನನ್ನು ಓದದವರಿಗೆ ಇದು ಅಭಿಮಾನದ ಅತ್ಯುಕ್ತಿಯೆನಿಸಬಹುದಾದರೂ, ಕಾವ್ಯವನ್ನು ಆ ಮೂಲಾಗ್ರವಾಗಿ ಓದಿದಮೇಲೆ ಕವಿವಾಣಿ ಸತ್ಯದರ್ಶಿಯೆನ್ನಿಸುತ್ತದೆ. ಕುಮಾರವ್ಯಾಸನು ತನ್ನ ಅದ್ಭುತ ಕವಿತಾಶಕ್ತಿಯ ಗಾರುಡ ಮಂತ್ರದಿಂದ ನಮ್ಮನ್ನು ಮೈಮರೆಸಿ, ದ್ವಾಪರಯುಗದ ವಾತಾವರಣಕ್ಕೆ ಕೊಂಡೊಯ್ದು ನಿಲ್ಲಿಸುತ್ತಾನೆ; ಮಹಾಭಾರತದ ಆ ಮಹಾ ಪಾತ್ರಗಳೆಲ್ಲವೂ ನಮ್ಮ ಒಳಗಣ್ಣಿನ ಇದಿರಿನಲ್ಲಿ ಸಜೀವವಾಗಿ ವ್ಯವಹರಿಸುತ್ತವೆ. ಆ ದಿವ್ಯ ದರ್ಶನದಿಂದ ನಾವು ಪುಳಕಿತರಾಗುತ್ತೇವೆ. ಕನ್ನಡಕವಿಗಳ ಮುಕುಟಮಣಿಯಾದ ಕುಮಾರವ್ಯಾಸನು ತನ್ನ ಕವಿತಾಶಕ್ತಿಯ ಪ್ರಭಾವದಿಂದ ರಸಭಾವಗಳ ಅಮೃತಪ್ರವಾಹವನ್ನು ಹರಿಸಿ, ದ್ವಾಪರ ಯುಗದ ಜೀವ ಜಗತ್ತಿಗೆ ನೂತನ ಚೇತನವನ್ನು ಒದಗಿಸುತ್ತಾನೆ. ಪರಕಾಯ ಪ್ರವೇಶಮಾಡಿದವನಂತೆ ಆ ಜೀವಿಗಳೆಲ್ಲರ ಸ್ವಭಾವ ಸೂಕ್ಷ್ಮತೆ, ಭಾವಾವೇಗ, ಆಲೋಚನಾಲಹರಿಗಳ ಪದರ ಪದರವನ್ನೂ ಪ್ರತ್ಯಕ್ಷಗೊಳಿಸುತ್ತಾನೆ. ಅವರಾಡುವ ಮೌನವಾಣಿಗೆ ಸಂಗೀತವನ್ನು ತೊಡಿಸಿ, ಕಿವಿಗೆ ಇಂಪೂ ಹೃದಯಕ್ಕೆ ತಂಪೂ ಆಗುವಂತೆ ಹಾಡಿಸುತ್ತಾನೆ.

ಕುಮಾರವ್ಯಾಸನ ಭಾರತವೆಂದರೆ ಭಿನ್ನ ಭಿನ್ನ ಸ್ವಭಾವದ ಮಾನವರ ಭಾವಪ್ರದರ್ಶನಾಲಯ. ಈ ಮಹಾಕಾವ್ಯದಲ್ಲಿ ಬಾರದಿರುವಂತಹ ವ್ಯಕ್ತಿಗಳೇ ಇಲ್ಲ. ದೇವತೆಗಳು, ಗಂಧರ್ವರು, ದಾನವರು, ಮಾನವರು— ಇವರಲ್ಲಿ ಚಕ್ರವರ್ತಿಗಳಿಂದ ಹಿಡಿದು ಸೇವಕರವರೆಗೆ ಎಲ್ಲ ಮಟ್ಟದವರು, ಎಲ್ಲ ಗುಣದವರು, ಗಂಡಸರು ಹೆಂಗಸರು ಮಕ್ಕಳೂ ಕೂಡ—ಎಲ್ಲರೂ

ಚಿತ್ರಿತರಾಗಿದ್ದಾರೆ. ಭೀಷ್ಮದ್ರೋಣರಂತಹ ಉನ್ನತ ಚಾರಿತ್ರದ ಮಹಾಮಹಿಮರೂ, ಕರ್ಣನಂತಹ ತ್ಯಾಗಶೀಲರಾದ ದುರ್ಧೈವಿಗಳೂ, ಶಲ್ಯ ಭೀಮರಂತಹ ಗಂಡುಗಲಿಗಳೂ, ಅರ್ಜುನ ಅಭಿಮನ್ಯು ಅಶ್ವತ್ಥಾಮರಂತಹ ವೀರಪುರುಷರೂ, ಧರ್ಮರಾಯನಂತಹ ನಿರ್ಮಲ ಚಿತ್ತರೂ, ವಿದುರನಂತಹ ಸುಜ್ಞಾನಿಗಳೂ, ದುರ್ಯೋಧನನಂತಹ ಅಭಿಮಾನಧನರಾದ ಛಲದಂಕ ಮಲ್ಲರೂ, ಕೀಚಕನಂತಹ ನೀಚರೂ, ಶಕುನಿಯಂತಹ ಕುತಂತ್ರಿಗಳೂ, ಉತ್ತರ ಕುಮಾರನಂತಹ ಮಾತಿನಮಲ್ಲರೂ ಕುಂತಿ, ದ್ರೌಪದಿ, ಗಾಂಧಾರಿಯರಂತಹ ಚಾರಿತ್ರಶೀಲರಾದ ಕ್ಷತ್ರಿಯ ರಮಣಿಯರೂ ಇಲ್ಲಿ ಕಾಣಬರುತ್ತಾರೆ. ಈ ಎಲ್ಲ ಪಾತ್ರಗಳ ಸೂತ್ರಧಾರಿ ಶ್ರೀಕೃಷ್ಣ. ಕವಿಯು ತನ್ನ ಈ ಆರಾಧ್ಯ ದೈವವನ್ನು ಕೇಂದ್ರದಲ್ಲಿ ನಿಲ್ಲಿಸಿ, ಆತನ ಸುತ್ತಲೂ ಭಾರತದ ಪಾತ್ರಧಾರಿಗಳೆಲ್ಲರ ರುದ್ರರಮಣೀಯವಾದ ಲಾಸ್ಯಲೀಲೆಯನ್ನು ನೆರೆವೇರ್ಪಡಿಸಿದ್ದಾನೆ. ಭಕ್ತಿಯ ಆವೇಶದಲ್ಲಿ ವ್ಯೆಮರೆತ ಕವಿಗೆ ತಾನು ಬರೆಯುತ್ತಿರುವುದು ಕುರುವಂಶದ ಕಥೆಯೆಂಬುದೇ ಮರೆತುಹೋಯಿತು. 'ತಿಳಿಯ ಹೇಳುವೆ ಕೃಷ್ಣ ಕಥೆಯನು' ಎಂದು ಹೇಳಿಕೊಂಡು ಕಾವ್ಯಾರಂಭ ಮಾಡುತ್ತಾನೆ. ಆತನ ದೃಷ್ಟಿಯಲ್ಲಿ ತನ್ನ ಕಾವ್ಯಕ್ಕೆ ಶ್ರೀ ಕೃಷ್ಣನೇ ಕಥಾನಾಯಕ, ಆತನೇ ಇಡೀ ಭಾರತದ ಪ್ರೇರಕ, ಪ್ರಚೋದಕ ಶಕ್ತಿಯಾಗಿರುವಂತೆ ಕಾರಕ ಶಕ್ತಿಯೂ ಆಗಿದ್ದಾನೆ. 'ನರನಾಟಕವ ನಾನೇ ನಟಿಸಿ ತೋರಿ'ಸುವ ಸೂತ್ರಧಾರಿ, ಆತ. ಶ್ರೀಮಾನ್ ಎಸ್. ವಿ. ರಂಗಣ್ಣನವರು ಹೇಳುವಂತೆ 'ಅವನೇ ಕನ್ನಡ ಭಾರತದ ನಾಯಕ ವಸ್ತು ಜೀವ ಸೊಬಗು ಸ್ವಾಮಿ ಸ್ವಾರಸ್ಯ.

ಕುಮಾರವ್ಯಾಸಭಾರತದಲ್ಲಿ ಶ್ರೀಕೃಷ್ಣ ಮೊಟ್ಟಮೊದಲು ನಮ್ಮ ಕಣ್ಣಿಗೆ ಬೀಳುವುದು ದ್ರೌಪದೀ ಸ್ವಯಂವರ ಕಾಲದಲ್ಲಿ. ದೃಷ್ಟದ್ಯುಮ್ನನು ಸ್ವಯಂವರಕ್ಕೆ ಬಂದಿದ್ದ ರಾಜರನ್ನೆಲ್ಲಾ ತಂಗಿಗೆ ಪರಿಚಯಮಾಡಿಕೊಡುತ್ತ ಶ್ರೀಕೃಷ್ಣನನ್ನು ತೋರಿಸುವಾಗ, ಈತನು ' ಅಮರಾರಿಕದಳೀ ಮತ್ತದಂತಿ ' 'ನಿಖಿಳ ನಿಗಮಾವಳಿ ಶಿರೋಮಣಿ' ಎಂದು ವರ್ಣಿಸುತ್ತಾನೆ. ಆತನು ಇತರರಂತೆ ಸಾಮಾನ್ಯ ರಾಜನಲ್ಲ. ರಾಕ್ಷಸರೆಂಬ ಕದಳೀವನಕ್ಕೆ ಮದ್ದಾನೆಯಂತಿರುವವನು, ವೇದ ಸಮುದಾಯದ ಶಿರೋಮಣಿ, ಅರ್ಥಾತ್ ಭಗ

ವತ್ ಸ್ವರೂಪಿ ; ಆತನಲ್ಲಿ ದ್ರೌಪದಿಗೆ ಪ್ರಣಯಭಾವ ಹುಟ್ಟಲಿಲ್ಲ ; 'ಬಕುತಿಯ ಭಾವರಸದಲಿ ನೆನೆದು ಹೊಂಪುಳಿಯಾಗಿ, ರೋಮಾಂಚನದ ಮೈಯುಬ್ಬಿನಲಿ, ತನುಪುಳಕಾಂಬುಪೂರದಲಿ ಮನದೊಳಗೆ ವಂದಿಸಿದಳು.' ಅಂದು ದ್ರೌಪದಿ ಪಂಚಪಾಂಡವರ ಧರ್ಮಪತ್ನಿಯಾದಳು. ಅಂದಿನ ರಾತ್ರಿ ಶ್ರೀಕೃಷ್ಣ ಪಾಂಡವರನ್ನು ಕಂಡು, ತನ್ನ ಅವರ ಸಂಬಂಧವನ್ನು ತಿಳಿಯಪಡಿಸಿದ. ಕುಂತಿ ಅಂದು ತನ್ನ ಮಕ್ಕಳನ್ನು 'ಕೈನೆಗಹಿ ಕಮಲೋದರನ ಕೈಯಲಿ ಕೊಟ್ಟಳು'. ಶ್ರೀಕೃಷ್ಣ 'ಅಂತರ್ಜೀವನ ಪ್ರಾಣಾದಿ ವಾಯುಗಳಾವು ನಿಮ್ಮೈವರಿಗೆ' ಎಂದು ಅಭಯಪ್ರದಾನಮಾಡಿದ. ಅಂದಿನಿಂದ ಮುಂದೆ ಪಾಂಡವರು ಆತನ ಶಿಷ್ಟರಕ್ಷಣ ದುಷ್ಟಶಿಕ್ಷಣ ಕಾರ್ಯಕ್ಕೆ ಕಯ್ದುಗಳಾದರು.

ಪಾಂಡವರ ಪರಿಚಯವಾದ ಮೇಲೆ ಶ್ರೀಕೃಷ್ಣನು ಅವರ ಕಷ್ಟಸುಖಗಳಲ್ಲಿ ಸದಾ ಸಂಗಾತಿ. ಇಂದ್ರಪ್ರಸ್ಥದಲ್ಲಿ ಧರ್ಮರಾಯನು ಸಿಂಹಾಸನವೇರುವಾಗ ಆತ ಹಾಜರು. ಅರ್ಜುನ ದೇಶಾಟನೆಗೆ ಹೊರಟಾಗ ಸುಭದ್ರೆಯನ್ನು ಮೋಹಿಸಿ ಮದುವೆಯಾಗುವಲ್ಲಿ ಆತನ ಕೈವಾಡ. ಖಾಂಡವವನ ದಹನದಲ್ಲಿ ಅರ್ಜುನನಿಗೆ ಆತ ಬೆಂಬಲ. ಮಯನಿಂದ ಸಭಾಭವನದ ನಿರ್ಮಾಣ ಆತನ ಸಲಹೆ. ನಾರದನು ಧರ್ಮರಾಯನ ಬಳಿಗೆ ಬಂದು ರಾಜಸೂಯಕ್ಕೆ ಪ್ರೇರೇಪಿಸಲು 'ಮುನಿಯ ಮಾತಿನ ಬಲೆಗೆ ಸಿಲುಕಿತು ಜನಪತಿಯ ಚೈತನ್ಯಮೃಗ'; ಆ ಬಲೆಯಿಂದ ಆತನನ್ನು ಉದ್ಧರಿಸುವ ಹೊಣೆ ಶ್ರೀಕೃಷ್ಣನದೇ. ಭೀಮಾರ್ಜುನರು ಆ ಕಾರ್ಯಕ್ಕೆ ಕಂಕಣ ಕಟ್ಟಿಕೊಂಡು ನಿಂತಿರುವರಾದರೂ 'ಗೋವಿಂದ ಮತದಲಿ ತೂಗಿ ನೋಡುವೆವಿದರ ತೂಕವನು' ಎಂದು ಶ್ರೀಕೃಷ್ಣನಿಗೆ ಹೇಳಿಕಳುಹಿಸಿದ. ಈ ಕರೆಯನ್ನು ಸ್ವೀಕರಿಸುವ ಮುನ್ನ ಶ್ರೀಕೃಷ್ಣನ ಆಲೋಚನೆ 'ಶಿಶುಪಾಲ, ಕಂಸನಮಾವನಿಂತವರ ಕೊಲುವಡಿದು ಹದ ನಮ್ಮ ಭಾವನ ನಿಳಯದುತ್ಸವ' ಎಂಬುದು. ಅದರೂ 'ನರನಾಟಕಸೂತ್ರಧಾರಿ'ಯಾದ ಆತ ಭೀಮಾರ್ಜುನರ ಕ್ಷಾತ್ರವನ್ನು ಕೆರಳಿಸುವುದಕ್ಕಾಗಿ

ನಕ್ಕನಸುರವಿರೋಧಿ ಮುನಿ ಹಾ
ಯಿಕ್ಕಿದನಲಾ ಬಲೆಯನಕಟಾ

ಸಿಕ್ಕಿದಿರಲಾ, ಸ್ವಾಮಿದ್ರೋಹರು ಸದರವೇ ನೃಪರು।
ಅಕ್ಕಜದ ಮಖವಿದರ ಜೋಡಿಗೆ
ಚುಕ್ಕೆಯಾಯ್ತು ಮಹಾಮಹೀಂದ್ರರು
ಮಕ್ಕಳಾಟಿಕೆಯಾಯ್ತೆನುತ ತೂಗಿದನು ಸಿರಿಮುಡಿಯ

ಆತನ ಎಣಿಕೆ ತಪ್ಪಿದ ಸಂದರ್ಭವೇ ಭಾರತದಲ್ಲಿಲ್ಲ. ಆತನು ಯೋಚಿಸಿದ್ದಂತೆ ಕಂಸನ ಮಾವನಾದ ಜರಾಸಂಧನ ಸಂಹಾರಕ್ಕೆ ರಂಗ ಸಿದ್ಧವಾಯಿತು. ಕೆರಳಿದ ಭೀಮ 'ಮಾಗಧನು ನಿನಗಹಿತನೇ? ತಾ ವೀಳೆಯವ; ಸುರ ಮಹಿಳೆಯರ ತೋಳಿನಲಿ ತೋರುವೆನೆಂದ.' ಅರ್ಜುನನೂ ಗರ್ಜಿಸಿದ— 'ಚಾವಟಿಯರನು ಚಿಮ್ಮುರಿಯ ಬಿಗಿಸುವೆನಮರಿಯರ ಕಡೆಗಣ್ಣ ಕಣ್ಣಿಯಲಿ' ಎಂದು. ಶ್ರೀ ಕೃಷ್ಣನೂ ತೃಪ್ತನಾದವನಂತೆ ಧರ್ಮರಾಯನೊಡನೆ 'ಚಿಂತಾ ಮಹಿಳೆಗವಸರವಿಲ್ಲ, ಮನಮಾಡು' ಎಂದು ಹೇಳಿದ. ಅನಂತರ ಭೀಮಾರ್ಜುನರನ್ನು ಜರಾಸಂಧನ ಬಳಿಗೆ ಕರೆದೊಯ್ದು. ಭೀಮಜರಾ ಸಂಧರ ಮಧ್ಯೆ ಮಲ್ಲಕಾಳಗ ನಡೆಯುತ್ತಿರುವಾಗ 'ನಿಜಕರವೆರಡ ಪಲ್ಲಟ ವಾಗಿ ಸಂಧಿಸಿ' ಅವನನ್ನು ಕೊಲ್ಲುವ ಉಪಾಯವನ್ನು ಸೂಚಿಸಿದ; ಅವ ನನ್ನು ಕೊಲ್ಲಿಸಿ, ತನ್ನ ಬರವಿನ ಉದ್ದೇಶದ ಅರ್ಧವನ್ನು ಸಾಧಿಸಿದ.

'ಏನಸಾಧ್ಯವು ಕೃಷ್ಣನೊಲಿದರಿಗೆ?'. ಪಾಂಡವರು ಇಡೀ ಭೂ ಮಂಡಲವನ್ನೇ ಜಯಿಸಿ, ರಾಜಸೂಯ ಯಾಗವನ್ನು ವೈಭವದಿಂದ ನೆರವೇರಿಸಿದರು. ಯಜ್ಞಾಂತ್ಯದಲ್ಲಿ ಅಗ್ರಪೂಜೆಯನ್ನು ಶ್ರೀ ಕೃಷ್ಣನಿಗೆ ಸಲ್ಲಿಸುವ ಸಂದರ್ಭದಲ್ಲಿ ಶ್ರೀ ಕೃಷ್ಣನ ಉದ್ದೇಶದ ಮತ್ತರ್ಧವೂ ನೆರವೇರುವ ಸನ್ನಿವೇಶ ಒದಗಿಬಂತು. ಖಳಶಿರೋಮಣಿಯಾದ ಶಿಶುಪಾಲ ಶ್ರೀ ಕೃಷ್ಣನ ಅಗ್ರಪೂಜೆಯನ್ನು ಪ್ರತಿಭಟಿಸಿದ. 'ಕೆತ್ತುದರವಿನ ಕದ, ಕಟಾಕ್ಷದಿ ಮೃತ್ಯು ವೊಲಿದಳು. ರೋಷಮಿಗೆ ಹೊಗರೆತ್ತಿದುದು ಶಿಶುಪಾಲ ವೀರನ ವಚನಮಯ ಖಡುಗ.' ಅವನ ಕಠೋರವಾಕ್ಯಗಳಿಂದ ನೆರೆದ ಸಭೆಯಲ್ಲಿ ಕಳಕಳವೆದ್ದಿತು. ಆಗ ವಯೋವೃದ್ಧರೂ ಜ್ಞಾನವೃದ್ಧರೂ ಆದ ಭೀಷ್ಮರು ಎದ್ದುನಿಂತು, ಶ್ರೀ ಕೃಷ್ಣನ ಮಹಿಮೆಯನ್ನು ನೆರೆದವರಿಗೆಲ್ಲಾ ಸಾರಿದರು—

ಭ್ರಾಮಕದೊಳೀ ವಿಷಯ ಸೌಖ್ಯದ
ರಾಮಣೀಯಕದೊಳಗೆ ಮುಳುಗಿ ನಿ

ರಾಮಯನು ಪರತತ್ವಮಯನಚ್ಯುತನು ತಾನಾದ
ಈ ಮುಕುಂದನ ಮರೆನು ಕರ್ಮವಿ
ರಾಮದಲಿ ಕುದಿವವರು ಮಾಯಾ
ಕಾಮಿನಿಯ ಕೈಮುಸಕದಲಿ ಮರುಳಾಗದಿರರೆಂದ
ನಿರವಯುವ ತತ್ತ್ವೈಕ ಪದವಿದೆ
ನರಮನೋಹರ ರೂಪಿನಲಿ ವ್ಯವ
ಹರಣ ಸಂಜ್ಞಾರಹಿತವಿದೆ ಕೃಷ್ಣಾಭಿಧಾನದಲಿ
ಭರಿತ ಬಹಳ ಬ್ರಹ್ಮವಿಲ್ಲಿಯೆ
ಧರಣಿಯಲಿ ಸಂಚರಿಸುತಿದೆ ಮುರ
ಹರನ ತತ್ವರಹಸ್ಯಮುದ್ರೆಯನರಿವರಾರೆಂದ

ಆದರೆ ಶಿಶುಪಾಲ ಹಾದಿಗೆ ಬರಲಿಲ್ಲ. 'ಪರಿಣತರ ನುಡಿಗಳನು ಕಿವಿಯೋಕರಿಸಿದವು, ದುರುದುಂಬಿಗಳ ಬಾಹಿರರ ನುಡಿಗಳನಡಿಗಡಿಗೆ ಕುಡಿಕುಡಿದು ತೇಗಿದವು.' ಶಿಶುಪಾಲನೂ ಅವನ ಅನುಯಾಯಿಗಳೂ ಯಜ್ಞವಿಘಾತಕ್ಕೆ ಸಿದ್ಧರಾದುದನ್ನು ಕಂಡು ಧರ್ಮರಾಯ ನಡುಗಿದ. ಭೀಷ್ಮನೇ ಮತ್ತೆ ಆತನನ್ನು ಸಮಾಧಾನಪಡಿಸಿದ—'ಬಗುಳುವಿವದಿರು ಹರಿಯ ಬಡಿಹೋರಿಗಳಲಾ.....ಈ ಶಿಶುಪಾಲನಾಯುವ ತೆಗೆದು ಕಟ್ಟುವನಸುರರಿಪು' ಎಂದು. ಕೊನೆಯ ಗಳಿಗೆಯವರೆಗೂ ಶಾಂತಗಂಭೀರನಾಗಿ ಕುಳಿತಿದ್ದ ಶ್ರೀಕೃಷ್ಣನು ನೆರೆದವರಿಗೆಲ್ಲಾ ಅಭಯಮುದ್ರೆಯನ್ನು ನೀಡಿ 'ಮೊನೆನಗೆಯ, ಸಿರಿಮೊಗದ, ನೆಗಹಿದ ಜನದಭಯ ಹಸ್ತಾಂಬುಜದ ಹರಿ' ಸಿಂಹಾಸನ ವನ್ನಿಳಿದ. 'ಬೆಸಸಿದನು ಚಕ್ರವನು.' ಅದು ಸುನೀತ ಕಂಠದ ಬೆಸುಗೆ ಬಿಡಲೆರಗಿದುದು ; ಹಾಯ್ದುದು ತಲೆ ನಭಸ್ಥಳಕೆ.' ಇಲ್ಲಿಗೆ ಆತನು ಬಂದ ಉದ್ದೇಶ ಸಫಲವಾಯಿತು.

ಕುಮಾರವ್ಯಾಸನು ಕಾವ್ಯಾರಂಭದಲ್ಲಿಯೇ ತನ್ನ ಭಾರತ 'ಕಾವ್ಯಕೆ ಗುರು'ವೆಂದು ಹೇಳಿಕೊಂಡಿದ್ದಾನೆ.

ಅರಸುಗಳಿಗಿದು ವೀರ ದ್ವಿಜರಿಗೆ
ಪರಮವೇದದ ಸಾರ, ಯೋಗೀ
ಶ್ವರರ ತತ್ವವಿಚಾರ ಮಂತ್ರೀಜನಕೆ ಬುದ್ಧಿಗುಣ

ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ

ಎಂಬ ಆತನ ಹೇಳಿಕೆ ಸರ್ವಸತ್ಯವಾಗಿದೆ. ಕಾವ್ಯವು ನವರಸಭರಿತವಾಗಿ ಓದುಗರಿಗೆ ರಸದೌತಣವನ್ನು ಒದಗಿಸುತ್ತದೆ. ಆದರೆ ಒಂದೊಂದು ರಸಭರಿತ ವಾದ ಸನ್ನಿವೇಶವೂ ಕೃಷ್ಣ ಮಹಿಮೆಯನ್ನು ಮೇಲೆತ್ತಿ ಹಿಡಿಯುವ ಒಂದು ಹಿನ್ನೆಲೆಯಾಗಿ ಮಾಡಿದ್ದಾನೆ ಕವಿ. ಉದಾಹರಣೆಗಾಗಿ ದ್ರೌಪದಿಯ ಸೆರೆಸೀಳೆಯ ಸನ್ನಿವೇಶವನ್ನು ನೋಡಿ. ಧರ್ಮರಾಯನು ಜೂಜಿನಲ್ಲಿ ಸೋತು ತನು ಧನಗಳನ್ನು ಮಾತ್ರವೇ ಅಲ್ಲದೆ 'ಮನುಮಥನ ಖಾಡಾ ಖಾಡಿಕಾತಿ'ಯಾದ ದ್ರೌಪದಿಯನ್ನೂ ಹಗೆಗೆ ಸೋತ. ದುರ್ಯೋಧನ ದ್ರೌಪದಿಯನ್ನು ತುಂಬುಸಭೆಗೆ ಕರೆತರುವಂತೆ ವಿದುರನಿಗೆ ಆಜ್ಞಾಪಿಸಿದ. ಆತ ನೊಂದು

ಸಿಡಿಲ ಪೊಟ್ಟಣಗಟ್ಟಿ ಸೇಕವ
ಕೊಡುವರೇ ಹರನೇತ್ರವಹ್ನಿಯೊ
ಳಡಬಳವ ಸುಡಬಗೆದೆಲಾ ಮರುಳೇ ಮಹೀಪತಿಯೆ
ಹೆಡತಲೆಯ ತುರಿಸುವರೆ ಹಾವಿನ
ಹೆಡೆಯಲಕಟಾ ಪಾಂಡುಪುತ್ರರ
ಮಡದಿ ತೊತ್ತಹಳೇ ಶಿವಾಯೆಂದಳಲಿದನು
ಕಾಳಕೂಟದ ತೊರೆಗಳಲಿ ಜಲ
ಕೇಳಿಯೇ ಕಾಲಾಂತಕನ ದಂ
ಷ್ಟ್ರಾಳಿಯಲಿ ನವಿಲುಯ್ಯಲೆಯ ನೀವಾಡಲಾಪಿರಲ
ಕಾಳರುದ್ರನ ಲಳಿಯ ನಾಟ್ಯದ
ಕೇಳಿಕೆಗೆ ನೀವರ್ತಿಕಾರರೆ
ಹೋಲದೈ ಶಿವಯೆನುತ ಕಂಬನಿದುಂಬಿದನು

ಅವನ ಮಾತುಗಳನ್ನು ಕೇಳಿ ಕೌರವ 'ಇವನಿವರ ಬಹಿರಂಗ ಜೀವ ವ್ಯವಹರಣೆಯಾತ' ಆದ್ದರಿಂದ ಇವನು ಬೇಡವೆಂದು ಪ್ರಾತಿಕಾಮಿಕನನ್ನು ಕಳುಹಿದ. ಅವನು ದ್ರೌಪದಿಯನ್ನು ಕರೆತರಲಿಲ್ಲ, ಆಕೆಯಿಂದ ಧರ್ಮ

ಸೂಕ್ಷ್ಮದ ಸಂದೇಶ ತಂದ. ಕೆರಳಿದ ಕೌರವ ದುಶ್ಯಾಸನನನ್ನು ಆ ಕೆಲಸಕ್ಕೆ ನೇಮಿಸಿದ. 'ಗಾಳಿಯಳ್ಳಿಯನಿರಿಯಲಗ್ನಿ ಜ್ವಾಲೆಯಲಿ ತಟ್ಟೆಯುವೆ? ಕಾಳ ಕೂಟದ ನದಿಗೆ ನಂಜಿನ ಹೊನಲು ಬೆರಸಿದರೆ ವಾಳೆಯುವೆ?' ದುರ್ಮಾರ್ಗ ನಾದ ಅವನಿಗೆ ರಾಜಾಜ್ಞೆ ದೊರೆತಮೇಲೆ ಕೇಳುವುದೇನು? ಬಿರುಗಾಳಿ ಯಂತೆ ಬಿಡುದಲೆಯಲ್ಲಿ ಬೀದಿಯುದ್ದಕ್ಕೂ ಓಡಿ ಬಂದು 'ಮಂಚದಿಂದಿಳಿ' ಎಂದು ದ್ರೌಪದಿಯನ್ನು ಕೆಣಕಿದ. 'ಅನುಜ ಕೇಳ್ಳೆ ಪುಷ್ಪವತಿಯಾನೆನಗೆ ರಾಜ ಸಭಾ ಪ್ರವೇಶವದನುಚಿತವಲೇ' ಎಂದು ಹೇಳಿದರೆ 'ಎಲ್ಲಿಯದು ದುಷ್ಪ್ರಶ್ನೆ, ಮರುಮಾತೆಲ್ಲಿಯದು, ನೀ ಪುಷ್ಪವತಿಯಾಗಿಲ್ಲಿ, ಫಲವತಿಯಾಗು ನಡೆ ಕುರು ರಾಜ ಭವನದಲಿ' ಎಂದು ಕೆಡೆನುಡಿದು ಅವಳ ಸಿರಿಮುಡಿಯನ್ನು ಹಿಡಿದು ರಾಜಸಭೆಗೆ ಎಳೆತಂದ. ಅವಳ ದುಸ್ಥಿತಿಯನ್ನು ಕಂಡ ಭೀಮಾರ್ಜುನರು 'ಮನದೊಳಗೆ ಕೌರವನ ಕರುಳನು, ತನಿರಕುತದಲಿ ಕುದಿಸಿದರು.' ಧರ್ಮ ರಾಯನ ದಾಕ್ಷಿಣ್ಯಕ್ಕೆ ಅವರಿಬ್ಬರೂ ಸುಮ್ಮನಾಗಬೇಕಾಯಿತು. ಆದರೆ ಕೌರವನ ಕಡೆಯವರು ದ್ರೌಪದಿಯನ್ನು ಮೇಲಿಂದ ಮೇಲೆ ಕೆಡುನುಡಿ ಗಳಿಂದ ಘಾತಿಸುತ್ತಿರುವುದೂ, ದ್ರೌಪದಿಯು ಸಹಾಯವನ್ನು ಕೋರಿ ಕರುಳು ಕರಗುವಂತೆ ಮಾಡುತ್ತಿದ್ದ ವ್ಯರ್ಥ ಪ್ರಾರ್ಥನೆಯೂ ಭೀಮನನ್ನು ಅಸಹ್ಯವೇದನೆಗೆ ಒಳಗುಮಾಡಿತು. ಆತನು ಸಹದೇವನನ್ನು ಕರೆದು 'ಅಗ್ನಿಯ ತಾ ಯುಧಿಷ್ಠಿರ ನೃಪನ ತೋಳುಗಳ ಮಂದಿ ನೋಡಲು ಸುಡುವೆ' ಎಂದು ಹಲ್ಲುಕಡಿದ. ಅರ್ಜುನನು ಅದನ್ನು ನಿವಾರಿಸಲು 'ಲಲಿತಾಂಗಿಗೀ ವಿಧಿಯೇಕೆ?....ಸುಡುವೆನಾಡದೆ ನನ್ನ ತೋಳುಗಳ' ಎಂದು ಗುಡುಗಿದ. ಆದರೇನು, ಅವನ ರೋಷ ಬಂಜೆಯಾಗುತ್ತಿದೆ. ಕೌರವರು ದ್ರೌಪದಿಯನ್ನು ಪರಿಪರಿಯಾಗಿ ನಿಂದಿಸಿ, ಕಡೆಗೆ ಆಕೆಯ ಸೀರೆಯನ್ನೂ ಸುಲಿಯಲು ಸಿದ್ಧರಾದರು. ತುಂಬು ಸಭೆಯಲ್ಲಿ, ಪತಿಗಳೆದುರಿನಲ್ಲಿ ನಡೆಯುವ ಈ ಅನ್ಯಾಯವನ್ನು ಕಂಡು ಆಕೆ ಕಣ್ಣೀರುಗರೆದಳು; ಕರುಳು ಕರಗುವಂತೆ ಅಲ್ಲಿದ್ದವರೊಬ್ಬೊಬ್ಬರನ್ನೂ ಬೇಡಿಕೊಂಡಳು. ಯಾರೂ ಅವಳ ಸಹಾಯಕ್ಕೆ ಬರುವಂತಿಲ್ಲ. 'ಪತಿಗಳೆನ್ನನು ಮಾರಿ, ಧರ್ಮಸ್ಥಿತಿಯ ಕೊಂಡರು.' ಮುಂದೆ ಗತಿ? ಅನಾಥೆಯಾದ ತನಗೆ ಅನಾಥರಕ್ಷಕನಾದ ಶ್ರೀ ಕೃಷ್ಣನೇ ಗತಿ. 'ಜೈದು ಫಲವೇನಿನ್ನು? ನಿನ್ನಯ ಮೈದುನರ ಮರುಳಾಟಕೆನ್ನನು,

ಮದಾಂಧನಾದ ಕೌರವ ಕೇವಲ ಕೀಳ್ತನಕ್ಕೆ ಇಳಿದು ಆಕೆಗೆ ತನ್ನ ತೊಡೆಗಳನ್ನು ತೋರಿಸಿ, ಕೀಳು ಕೃತ್ಯವನ್ನು ನಡೆಸಿದ.

ಶ್ರೀಕೃಷ್ಣನ ಕೃಪಾರಕ್ಷಣೆಯ ವಜ್ರಪಂಜರದಲ್ಲಿ ಪಾಂಡವರೆಲ್ಲರೂ ಸುರಕ್ಷಿತರು, ಹಾಗೆಂದು ಅವರ ಕ್ಷಾತ್ರಕ್ಕೇನೂ ಕುಂದಿಲ್ಲ. • ಕೌರವನ ಕೀಳ್ಗೆಯ್ಮೆಯಿಂದ ಕೆರಳಿದ ದ್ರೌಪದಿ ‘ನಿನ್ನಳಿವು ತೊಡೆಯಲಿ ಮುಗಿವುದು’ ಎಂದು ಶಾಪಕೊಟ್ಟಳು. ಭೀಮನಂತೂ

ಕಡಲ ತೆರೆಗಳ ತರುಬಿ ತುರುಕುವ
ವಡಬನಂತಿರೆ ಮೇಘಪಟಲವ
ನೊಡೆದು ನೂಕುವ ಸಿಡಿಲಿನಂತಿರೆ ಸಭೆಯೊಳಡಹಾಯ್ದು
ಕುಡಿ ಕುಠಾರದ ರಕುತವನು ತಡೆ
ಗಡಿ ಸುಯೋಧನನೂರುಗಳ ನಿ
ಮ್ಮಡಿಸಿ ಮುನಿಯಲಿ ಧರ್ಮಸುತನೆಂದಿದ್ದನಾ ಭೀಮ

ಇದನ್ನು ಕಂಡು ‘ಒಡೆಯನೈತರಲಿಕ್ಷ್ಮಾಪಾಟಿಯ, ಒಡನೆರಗಳೋಡುವ ಪೆಂಟಿ’ ದುಶ್ಶಾಸನ ಕೌರವನ ಹತ್ತಿರಕ್ಕೆ ಹೋಗಿ ಅಡಗಿಕೊಂಡ. ಭೀಮ ಗುಡುಗಿದ ‘ನಾಡಿ ತರುಣಿ ತನ್ನಾಣೆ……ರಾಯನಾಜ್ಞೆಯ ತಡಿಕೆವಲಿ ನುಗ್ಗಾಯ್ತು’ ಎಂದು ಹೇಳಿ ಘೋರಪ್ರತಿಜ್ಞೆಯನ್ನು ಕೈಕೊಂಡ. ‘ಕೌರವರ ನೂರ್ವರ ಗೋಣಬನ ಕಾಳಗದೊಳಿನ್ನಯ ಕೇಣ ತನ್ನಯ ಗದೆಗೆ ದುರ್ಯೋಧನನ ತೊಡೆಗಳಿಗೆ ಪಾಲಿಸುವ ದುಶ್ಶಾಸನನ ತನಿ ಕೋಳಿತವ ನಾ ಕುಡಿಯದಿರೆ ನಿನ್ನಾಣೆ’ ಎಂದು ದ್ರೌಪದಿಗೆ ಮಾತುಕೊಟ್ಟ. ಅರ್ಜುನನೂ ಪ್ರತಿಜ್ಞೆ ಮಾಡಿದ—‘ಕರ್ಣನ ಕೊರಳಿಗೆನ್ನಯ ಬಾಣಕುಂಗುರ ವೃಡಿಕೆ ಇಂದಿನಲಿ’ ಎಂದು. ಅವರ ಪ್ರತಿಜ್ಞೆಯನ್ನು ಕೇಳಿ ಪ್ರಕೃತಿಯೇ ಪ್ರಕ್ಷುಬ್ಧವಾಯಿತು. ಈ ಪ್ರತಿಜ್ಞೆಗಳನ್ನು ಪೂರೈಸಿಕೊಡುವ ಹೊಣೆಯೂ ಶ್ರೀಕೃಷ್ಣನದೇ.

ಭೀಮಾರ್ಜುನರು ಶ್ರೀಕೃಷ್ಣನ ದೈವಶಕ್ತಿಯ ಎರಡು ಬಾಹುಗಳು. ಇಬ್ಬರೂ ತಮ್ಮ ಅಪ್ರತಿಮವಾದ ಪರಾಕ್ರಮದಿಂದ ಭೂಭಾರಹರಣದಲ್ಲಿ ಸಹಾಯಕರಾದರು. ಆದರೂ ಅರ್ಜುನನು ಭೀಮನಿಗಿಂತ ಭಗವಂತನಲ್ಲಿ ಹೆಚ್ಚು ಭಕ್ತಿಯುಳ್ಳವನು. ಭೀಮನಿಗೆ ಭಗವಂತನಿಗಿಂತಲೂ ತನ್ನ ಭುಜ

ಬಲದಲ್ಲಿಯೇ ಹೆಚ್ಚು ನಂಬಿಕೆ, ಆಸಕ್ತಿ. ಆತನ ನುಡಿ ನಡೆಗಳೂ ಸ್ವಲ್ಪ ಒರಟು. ದ್ರೌಪದಿಯ ವಸ್ತ್ರಾಪಹರಣಕಾಲದಲ್ಲಿ ಅಣ್ಣನ ಕೈಗಳಿಗೆ ಬೆಂಕಿ ಹಚ್ಚುವೆನೆಂದು ಕೆರಳಿ ನಿಂತಿದ್ದವನು. 'ಯಮಸೂನು ಶಿವಶಿವ ಗುರು ವಲಾ.........ನಮಗೀತನೇ ಗತಿ' ಎಂದು ಅರ್ಜುನ ಸಮಾಧಾನ ಮಾಡ ದಿದ್ದರೆ ಏನು ಅನರ್ಥವಾಗುತ್ತಿತ್ತೊ! ಅರ್ಜುನನು ಭೀಮನಷ್ಟು ದೇಹ ಬಲದವನಲ್ಲದಿದ್ದರೂ ಅದ್ವಿತೀಯವಾದ ಬಿಲ್ವಿದ್ಯೆಯಿಂದ ಭಾರತದ ಏಕೈಕ ವೀರನೆಂದು ವಿಖ್ಯಾತನಾಗಿದ್ದುದಲ್ಲದೆ, ತನ್ನ ಸತ್ವಗುಣದಿಂದ, ಭಕ್ತಿಯಿಂದ ಶ್ರೀಕೃಷ್ಣನಿಗೆ ಅತ್ಯಂತ ಪ್ರಿಯನಾಗಿದ್ದವನು. ಆತನು ಉಳಿದೆಲ್ಲರಿಗಿಂತಲೂ ಶ್ರೀಕೃಷ್ಣನ ಕೃಪೆಗೆ ಪಾತ್ರನಾಗಿದ್ದ ಸಖ್ಯಭಕ್ತ. ಭೀಮನಿಗಿಂತಲೂ ಆತನಲ್ಲಿ ಸಂಯಮ ಹೆಚ್ಚು. ಈ ಸಂಯಮದ ಪರಾಕಾಷ್ಠೆಯನ್ನು ನಾವು ಕಾಣು ತ್ತೇವೆ, ಮಹಾಭಾರತದ ಅರಣ್ಯಪರ್ವದಲ್ಲಿನ ಊರ್ವಶೀ ಪ್ರಸಂಗದಲ್ಲಿ.

ಶಿವನಿಂದ ಪಾಶುಪತಾಸ್ತ್ರವನ್ನು ಪಡೆಯಲೆಂದು ಹೊರಟ ಅರ್ಜುನನು ಇಂದ್ರಕೀಲಪರ್ವತದಲ್ಲಿ ನೆಲಸಿ ತಪೋನಿರತನಾದನು. 'ನೆನಹು ನಿಮ್ಮಿತು ಶಿವನನಿತರದ ನನೆಕೊನೆಯ ತಿಂಳಿಕೆಯ ತೊಡಚೆಯ ಮನದ ಸಂಚಲ ವೀಚುವೋದುದು ಕಲಿ ಧನಂಜಯನ.' ಆತನ ನಿಷ್ಠೆಯನ್ನು ನೋಡಲೆಂದು ಬಂದ ದೇವೇಂದ್ರ ಸಂತೋಷಪಟ್ಟು 'ಹರನಿಲ್ಲಿಗೆ ಬರಲಿ, ಕರುಣಿಸಲಿ ನಿನ್ನ ಮನೋಭಿವಾಂಛಿತವ' ಎಂದು ಬಾಯ್ತುಂಬ ಹರಸಿ ಹಿಂತಿರುಗಿದ. ಅರ್ಜುನ ಉಗ್ರ ತಪಸ್ಸಿನಿಂದ ಸುತ್ತುಮುತ್ತಿನ ಋಷಿಗಳ 'ಮೌನವ್ರತ ಹೀನಮು, ಜಪಾನುಷ್ಠಾನ ಬಿಡೆ ಬೆನರಿತು. ಸಮಾಧಿಧ್ಯಾನ ಹೀಕರಿಯಾಯ್ತು ಸಾರ ವಿಚಾರ ಕಮಸಹಿತ.' ಅವರೆಲ್ಲರೂ ಓಡಿ 'ಹರಗಿರಿಯ ಹತ್ತಿದರು, ಕಂಡರು ರಾಜಮೌಳಿಯ. ಅವರಿಂದ ಅರ್ಜುನನ ತಪೋಗ್ರತೆಯನ್ನೂ ಕೇಳಿದ ಪರ ಶಿವನು ಅವರನ್ನು ಸಂತೈಸಿ, ತಾನೇ ಕಿರಾತವೇಷದಿಂದ ಅರ್ಜುನನ ಬಳಿಗೆ ಬಂದನು. ಹಂದಿಯಾದ ಮೂಕದಾನವನ ವ್ಯಾಜದಿಂದ ಹರ-ನರರಿಗೆ ಖಾಡಾಖಾಡಿ ಯುದ್ಧ ನಡೆಯಿತು. ಆದರೇನು?

ಮಂಜು ಮುಸುಕಿದಡೇನು ಪರ್ವತ
ಅಂಜುವುದೆ? ಹಾಲಾಹಲದ ನೊಣ
ನೆಂಜಲಿಸುವುದೆ? ವಡಬಶಿಖಿ ನೆನೆವುದೆ ತುಷಾರದಲಿ?

ಕಂಜನಾಳದಿ ಕಟ್ಟುವಡೆವುದೆ
ಕುಂಜರನು? ನರಶರದ ಜೋಡಿನ
ಜುಂಜುಮಳೆಯಲಿ ಜಾಹ್ನವೀಧರ ಜಾರುವನೆ?

ಕಿರಾತವೇಷದ ಶಿವನಿಂದ ಸೋತ ಅರ್ಜುನ ಒಂದು ಮಳಲಲಿಂಗವನ್ನು ಮಾಡಿ, ಶಿವನನ್ನು ಪೂಜಿಸಿ 'ಶಬರ ನಿನ್ನೀ ಪ್ರಾಣವೆನ್ನಾಧೀನವರಿಯೋ, ಸ್ಥಾಣುವಿನ ಬಲುಹುಂಟು, ಹಿಂಡುವೆನಿನ್ನು ನಿನ್ನಸುವ, ಎಂದು ಅವನ ಮೇಲೆ ಏರಿಹೋದ. ಆದರೆ ಇದೇನಿದು? ಮಳಲಿಂಗವನ್ನು ಪೂಜಿಸಿದ ಹೂವು ಕಿರಾತನ ಮುಂಡೆಯಮೇಲೆ! ಬೆರಗಾದ ಪಾರ್ಥ ಮತ್ತೆ ಮತ್ತೆ ಶಿವನನ್ನು ಪೂಜಿಸಿದ ಕುಸುಮ ಮಂಜರಿಯೆಲ್ಲಾ ಕಿರಾತನ ತಲೆಯಮೇಲಿದೆ! ಕಿರಾತನೇ ಶಿವನೆಂದು ಗೊತ್ತಾಗುತ್ತಲೇ ಅವನು

ಸ್ವೇದಜಲದಲಿ ಮಿಂದು ಪುನರಪಿ
ಖೇದಪಂಕದೊಳದ್ದು ಬಹಳ ವಿ
ಷಾದರಜದಲಿ ಹೊರಳಿ ಭಯರಸನದಿಯನೀಸಾಡಿ
ಮೈದೆಗೆದು ಮರನಾಗಿ ದೆಸೆಯಲಿ
ಬೀದಿವರಿವುತ ವಿವಿಧ ಭಾವದ
ಭೇದದಲಿ ಮನಮುಂದುಗೆಡುತಿರ್ದುದು ಧನಂಜಯನ

ಆತನು ಪಶ್ಚಾತ್ತಾಪದಿಂದ ನೊಂದು ಶಿವನನ್ನು ಪರಿಪರಿಯಾಗಿ ಸ್ತೋತ್ರ ಮಾಡಿದನು. ಮೆಚ್ಚಿದ ಪರಶಿವನು 'ನಿಜೋನ್ನತ ರೂಪರಸದಲಿ ನರನ ಚಿತ್ತದ ತಾಪವಡಗಲು ತಂಪನೆಸೆದನು ತರುಣ ಶಶಿಮೌಳಿ' ಈ ಭಾಗದಲ್ಲಿ ಅರ್ಜುನನಿಗೆ ಆದ ಸಂತೋಷವನ್ನೂ ಆತನು ಪರಶಿವನನ್ನು ಸ್ತೋತ್ರ ಮಾಡುವುದನ್ನೂ ಕವಿ ವರ್ಣಿಸಿರುವ ಭಾಗ ಒಂದು ರಸಘಟ್ಟ.

ಹರನನ್ನು ತನ್ನ ಚರ್ಮಾಕ್ಷಿಯಿಂದ ಕಂಡು, ತನ್ನ ಇಷ್ಟಾರ್ಥಸಿದ್ಧಿಯನ್ನು ಪಡೆದ ಪಾರ್ಥನಿಗೆ ಸ್ವರ್ಗದಿಂದ ಆಹ್ವಾನ ಬಂತು. ಅಲ್ಲಿ ಸಾಕ್ಷಾತ್ ದೇವೇಂದ್ರನ ಅರ್ಧಾಸನದಲ್ಲಿ ಮಂಡಿಸಿ, 'ಶಕ್ರನ ನೂರುಮಡಿ ತೇಜದಲಿ ತೊಳತೊಳಗಿದನು ಕಲಿಪಾರ್ಥ.' ಅವನ ಗೌರವಕ್ಕಾಗಿ ಗಾನ ನರ್ತನಗಳಿಗೆಂದು ಸ್ವರ್ಗದ ವಾರನಾರಿಯರು ಆಸ್ಥಾನಕ್ಕೆ ಬಂದರು. ಅವರು ಬರುತ್ತಿದ್ದಂತೆಯೇ

ಉಗಿದರೋ ಕತ್ತುರಿಯ ತವಲಾ
ಯಿಂಗಳ ಮುಚ್ಚುಳನೆನೆ ಕವಾಟವ
ತೆಗೆಯೆ ಕವಿದುದು ದಿವ್ಯಪರಿಮಳ ಪೂರ ಪೂರವಿಸೆ
ಹೊಗರಲಗು ಹೊಳಹುಗಳ ಕಡೆಗ
ಣ್ಣುಗಳ ಬಲು ಗರುವಾಯ ಮುಸುಕಿನ
ಬಿಗುಹುಗಳ ಬಿರುದಂಕಕಾತಿಯರಿಂದ್ರನೋಲಗದ

ಅರ್ಜುನನು ಅವರ ದಿವ್ಯವಾದ 'ನೃತ್ಯವಾದ್ಯ ಸುಗೇಯರಸದಲಿ ಮುಳುಗಿ ಕರಣದಲಾಯ ತೊಡಕದೆ' 'ಧೈರ್ಯಶಿಖರಿ'ಯಲ್ಲಿದ್ದ. ನೃತ್ಯಕಾತಿಯರಲ್ಲಿ ಒರ್ವಳು ಆತನ ಕಣ್ಮನಗಳನ್ನು ಸೆಳೆದಳು. 'ಈ ಯುವತಿ ತಾನಾವಳೋ, ಕುಸುಮಾಯುಧನ ಖಂಡೆಯವಲಾ!' ಎಂದುಕೊಂಡ. ಆತನ ದಿಟ್ಟಿಯನ್ನು ಗಮನಿಸಿದ ದೇವೇಂದ್ರ, ನರ್ತನಾಂತ್ಯದಲ್ಲಿ ಆ ಯುವತಿಯನ್ನು—ಊರ್ವಶಿಯನ್ನು—ಅರ್ಜುನನು ಇಳಿದಿದ್ದ ಅರಮನೆಗೆ ಹೋಗುವಂತೆ ಹೇಳಿಕಳುಹಿಸಿದ. ಆಳು ಊರ್ವಶಿಯಲ್ಲಿಗೆ ಬಂದು ದೇವೇಂದ್ರನ ಸಂದೇಶವನ್ನು, ಆತನ ಮಾತುಗಳಲ್ಲೆ ಹೇಳಿದ.

ಎಮಗೆ ಮಗನರ್ಜುನನು ನೀನಿಂ
ದೆಮಗೆ ಸೊಸೆಯಹುದಾತನಂತ
ಸ್ತ್ರಿಮಿರವನು ತೊಳೆ ನಿನ್ನ ಕುಚಯುಗ ಕಾಂತಿ ಲಹರಿಯಲಿ
ಕಮಲಮುಖಿ ನೀ ಕಮಲ ವಾತನು
ಭ್ರಮರ ನೀ ಸುರವನದ ಸಿರಿ ಮಧು
ಸಮಯವರ್ಜುನನೆಂದು ಬೆಸಸಿದನಮರಪತಿ

ಈ ಸಂದೇಶವನ್ನು ಕೇಳಿದ ಆ ಅಪ್ಸರೆಗೆ 'ಪರಿತೋಷ ಪೂರಣದೇಳು ಮುಳುಗಾಯ್ತು; ಉತ್ತರಕೆ ಸನು ಬಾಗಿದಳು ಶಿರವ.' ಅವಳು ಶಿರ ಬಾಗಿದುದು ಲಜ್ಜೆಯಿಂದಲ್ಲ; ದೇವೇಂದ್ರನ ಅಪ್ಪಣೆಯನ್ನು ತಲೆಯಮೇಲೆ ಹೊತ್ತುದರಿಂದ, ಸಕಲಾಲಂಕಾರ ಭೂಷಿತೆಯಾದ ಆಕೆ.

ಜನಮನದ ಸಂಕಲೆವನೆಯೊ ಲೋ
ಚನ ಮೃಗದ ತಡೆವೇಂಟಕಾತಿಯೊ
ಮನುಮಥನ ಸಂಜೀವನೌಷಧವೋ ಮಹಾದೇವ

ಮನಸಿಜನ ಮಾರಾಂಕ ಕಾಮುಕ
ಜನದ ಜೀವಾರ್ಥಕ್ಕೆ ವಿಭುವೆಂ
ದೆನಿಸಿ ಪೂರ್ವಶಿ ಬಂದಳರ್ಜುನದೇವನಿದ್ದೆಡೆಗೆ ||
ಬಂದಳೂರ್ವಶಿ ಬಳ್ಳಿಮಿಂಚಿನ
ಮಂದೆಯಲಿ ಮುರಿದಿಳಿವ ಮರಿಮುಗಿ
ಲಿಂದುವೊಲು ದಂಡಿಗೆಯನಿಳಿದಳು ರಾಜಭವನದಲಿ
ಮುಂದೆ ಪಾಯವಧಾರು ಸತಿಯರ
ಸಂದಣಿಯ ಶಿಂಜಾರವದ ಸೊಗ
ಸಿಂದ ಶಬ್ದಬ್ರಹ್ಮ ಸೋತುದು ಸೊರಹಲೇನೆಂದ

ಆಕೆ ಬಂದಾಗ ಅರ್ಜುನ ನಿದ್ದೆ ಹೋಗಿದ್ದ. ಆದರೆ 'ಎಳೆಯ ಬೆಳುದಿಂಗಳ ವೊಲೀಕೆಯ ಥಳಥಳಿಪ ಮುಖಚಂದ್ರಮನ ತಂಬೆಲರು ಸುಳಿದುದು, ಸಾರ ತರ ಪರಿಮಳದ ಪೂರದಲಿ'; ಅದರಿಂದ ಆತನ ನಿದ್ರೆ ತಿಳಿಯಿತು. ಕಣ್ಣು ಬಿಟ್ಟು ನೋಡುತ್ತಾನೆ. 'ಕಿರಣಲಹರಿಯ ದಿವ್ಯರತ್ನಾಭರಣ ರುಚಿರತರ ಪ್ರಭಾಪಂಜರದೊಳಗೆ ಹೊಳೆಹೊಳೆವ ಮದನಾಲಸೆ' ಯಾದ ಊರ್ವಶಿ !' ಒಡನೆ ಆತನ ತಲೆಯಲ್ಲಿ ಸುಳಿದ ಭಾವನೆ 'ಈ ಮಹಿಳೆಯಭಿನಂದನೀಯೆ, ನಿರಾಮಯದ ಶಶಿವಂಶಜನನಿ' ಎಂದು. ದಿಗ್ಗನೆ ಮಂಚದಿಂದಿಳಿದು 'ಏನು ಬಿಜಯಂಗೈದಿರಿತ್ತಲು ?...............ನಿಮಗಾನು ಮಗನುಪಚಾರವೇಕೆ ? ಮನೋನುರಾಗದಲರುಹಿ' ಎಂದು ನಮ್ರನಾಗಿ ನುಡಿದ. ಆಕೆ 'ಪಾರ್ಥನ ನಡವಳಿಗೆ ಮೆಚ್ಚಿದಳು' ಆದರೆ 'ಬೆಚ್ಚಿದಳಂಗಜಾಸ್ತ್ರದಲಿ'; ಇದ್ದ ವಿಚಾರ ವನ್ನು ಇದ್ದಂತೆ ಆಕೆ ಅರ್ಜುನನಿಗೆ ತಿಳಿಸಿದಳು. ಕೇಳಿ ಅರ್ಜುನ ಬೆಚ್ಚಿಬಿದ್ದ; ನಮ್ಮ ವಂಶದ ಮೂಲಪುರುಷನಾದ ಪುರೂರವನ ಹೆಂಡತಿ ನೀನು. 'ಜನ್ಮೋದ್ಭವಕೆ ಜನನಿಯೆಲಾ!' ಎಂದು ಹೇಳಿ ಆಕೆಯ ಮನಸ್ಸನ್ನು ತಿದ್ದಹೊರಟ. ಆದರೆ ಉರ್ವಶಿ ಅವನ ವಾದವನ್ನು ಒಪ್ಪಲಿಲ್ಲ. 'ಬಣಗು ಭಾರತವರುಷರವದಿರ ಭಣಿತ ನಮ್ಮೀ ದೇವಲೋಕಕೆ ಸಣಬಿನಾರವೆ ಚೈತ್ರ ರಥದೊಳಗೆ' ನಿಮ್ಮ ಲೋಕದ ಧರ್ಮ ನಮ್ಮ ಸ್ವರ್ಗಕ್ಕೆ ಅನ್ವಯಿಸುವುದಿಲ್ಲ.

ಅಯ್ಯನಯ್ಯನು ನಿಮ್ಮವರ ಮು
ತ್ತಯ್ಯನಾತನ ಭಾವನೈದುನ
ನಯ್ಯನಗ್ರಜರನುಜರೆಂಬೀ ಜ್ಞಾತಿ ಬಾಂಧವರ

ಕಯ್ಯ್ಯಲರಿಗಳ ಹೊಯಿದು ಶಿರನರ
ದುಯ್ಯ್ಯಲಾಡುವವರ್ಗೆ ಮೇಣ್ಮ್ರುಖ
ದಯ್ಯ್ಯಗಳಿಗಾನೊಬ್ಬಳೆಂದಳು ನಗುತ ತರಳಾಕ್ಷಿ.

'ಮಾನಿನಿಯರಿಚ್ಛೆಯನರಿಯದವನು ಸುರೇಂದ್ರನಾಗಲಿ ಚಂದ್ರನಾಗಿರಲಿ, ಕುರಿ ಕಣಾ' ಎಂದು ವಿಟಧರ್ಮವನ್ನೂ ಭೋಧಿಸಿದಳು. ಏನು ಹೇಳಿದರೂ ಅರ್ಜುನನ ಸ್ಥೈರ್ಯ ಕದಲಲಿಲ್ಲ. 'ಮನಕೆ ಧೈರ್ಯದ ಜೋಡ ತೊಟ್ಟದಿರಾಗಿ ಸಿಲೆ ನನೆಯಂಬು ತಾಗುವವೆ?' ಇವನ ಸ್ಥೈರ್ಯವನ್ನು ಕಂಡು ಊರ್ವಶಿಯ ಕೋಪ ಕೆರಳಿತು. 'ಕಂಗಳು ಕೇಸರಿಯ ಮುಕ್ಕುಳಿಸಿದವು,' 'ಕೋಪಾಯುಧವ ಮಸೆದಳು ಧಾರೆಗಂಗಳಲಿ.' ಆಕೆಯ ರೂಪು 'ಸುಮನೋಹರ ಭಯಂಕರ'ವಾಗಿತ್ತಂತೆ! ಕವಿಯ ವರ್ಣನೆ ಇದು

ರಾಹು ತುಡುಕಿದ ಶಶಿಯೊ, ಮೇಣ್ ರಾ
ದ್ರಾಹಿಮಸ್ತಕ ಮಾಣಿಕವೊ, ಕಡು
ಗಾಹಿನಮೃತವೊ, ಕುಪಿತ ಸಿಂಹದ ಗುಹೆಯೊ, ಮೃಗಮದವೊ,
ಲೊಹಧಾರೆಯ ಮಧುವೊ ಕಲಿತ ಹ
ಲಾಹಲದ ಕಜ್ಜಾಯವೆನಿಸಿತು
ರೂಹು ಸುಮನೋಹರ ಭಯಂಕರವಾಯ್ತು ಸುರಸತಿಯ

ಊರ್ವಶಿಯ ಕೋಪದ ಫಲ 'ಭಾರತವರುಷಭೂಮಿಯೊಳೊಂದು ವರುಷಾಂತರ ನಪುಂಸಕನಾಗಿ ಚರಿಸು' ಎಂದು ಅರ್ಜುನನಿಗೆ ಕೊಟ್ಟ ಶಾಪ. ಶಿವನ ತಪಸ್ಸಿನಿಂದ ಬಂದ ಪಾಶುಪತಾಸ್ತ್ರ 'ರಿಪು ಕೌರವರ ರಕುತದ ರಾಟಳವನೆತ್ತು'ವುದಕ್ಕೆ ಸಹಾಯಕವಾಯಿತು; ದ್ರೌಪದಿಗೆ ಇನ್ನು ಮುಡಿಗಟ್ಟು ಎಂದು ಹೇಳಬಹುದು. ಆದರೆ 'ಧರ್ಮವೇ ತಪವಲಾಯೆಂದರಿದು ನಡೆದರೆ ಷಂಡತನ'ವಾಗಬೇಕೆ! ದ್ರೌಪದಿಗೆ 'ಈ ನುಡಿ ಒಸಗೆಯೆ?' ಎಂದು ಮರಮರ ಮರುಗಿದ. ಆದರೆ ದೇವೇಂದ್ರನು ಊರ್ವಶಿಯ ಶಾಪವೇ ಅಜ್ಞಾತ ವಾಸಕಾಲದಲ್ಲಿ ಒಂದು ವರವಾಗುವುದೆಂದು ಹೇಳಿ ಸಮಾಧಾನ ಪಡಿಸುತ್ತಾನೆ.

ಕಿರಾತಾರ್ಜುನೀಯದಲ್ಲಿಯೂ ಊರ್ವಶೀ ಪ್ರಸಂಗದಲ್ಲಿಯೂ ನಾವು

ಅರ್ಜುನನ ಪಾತ್ರದ ಸ್ವರೂಪವನ್ನು ಅರಿತುಕೊಳ್ಳುತ್ತೇವೆ. ಆತನ ಪೌರುಷ ದೈವಭಕ್ತಿಗಳು ಕಿರಾತಾರ್ಜುನೀಯದಲ್ಲಿ ವ್ಯಕ್ತವಾಗಿವೆ; ಈ ಶಕ್ತಿ ಭಕ್ತಿ ಗಳನ್ನು ಮೀರಿದ ಜಿತೇಂದ್ರಿಯರಕ್ತಿ ಮಹೋನ್ನತವಾಗಿ ಪ್ರದರ್ಶಿತವಾಗಿದೆ, ಊರ್ವಶೀ ಪ್ರಸಂಗದಲ್ಲಿ. ವಿಶ್ವಮೋಹಕವಾದ ಶೃಂಗಾರರಸವನ್ನು ಕುಮಾರ ವ್ಯಾಸನು ಎಷ್ಟು ಮನೋಹರವಾಗಿ ನಿರೂಪಿಸಿರುವನೆಂಬುದೂ ಇಲ್ಲಿ ದಿಗ್ದರ್ಶಿತವಾಗಿದೆ. ಪ್ರಣಯ ಪ್ರಸಂಗದ ಮತ್ತೊಂದು ಮುಖದಂತಿರುವ ಕೀಚಕೋಪಾಖ್ಯಾನದಲ್ಲಿ ಭೀಮಸೇನನ ಪಾತ್ರ ಸಜೀವವಾಗಿ ನಮ್ಮ ಕಣ್ಣೆದುರು ನಿಲ್ಲುತ್ತದೆ. ವನವಾಸಾನಂತರ ಪಾಂಡವರು ಅಜ್ಞಾತವಾಸಕ್ಕಾಗಿ ವಿರಾಟನಗರಿಯನ್ನು ಆಶ್ರಯಿಸಿದಾರೆ. ಅಲ್ಲಿ ದ್ರೌಪದಿಯ ಸತ್ವಪರೀಕ್ಷೆಯ ಪ್ರಸಂಗ ಬಂದಿತು. ಸೈರಂಧ್ರಿವೇಷದಿಂದ ಸುದೇಷ್ಣೆಯ ಬಳಿಯಿದ್ದ ದ್ರೌಪದಿ ಕೀಚಕನ ಕಣ್ಣಿಗೆ ಬಿದ್ದಳು. ಅವನು ಸುದೇಷ್ಣೆಯ ತಮ್ಮನಾಗಿದ್ದುದು ಮಾತ್ರವೇ ಅಲ್ಲ,ವಿರಾಟನಗರಿಯ ಸರ್ವಾಧಿಕಾರಿಯೂ ಆಗಿದ್ದನು. ದ್ರೌಪದಿ ಮೊದಲೇ ದಿವ್ಯಸುಂದರಿ; ಹನ್ನೆರಡು ವರ್ಷಗಳ ವನವಾಸದಿಂದ ಆಕೆಯ ಸೌಂದರ್ಯಕ್ಕೆ ಸಾಣೆಹಿಡಿದಂತಾಗಿತ್ತು. ಅಕ್ಕನ ರಾಣೀವಾಸದಲ್ಲಿ ಅವಳನ್ನು ಕಾಣುತ್ತಲೆ ಕೀಚಕನ ಕಣ್ಣುಗಳು 'ಅಲ್ಲಿಯೇ ಗಾಢದಲಿ ನಟ್ಟವು, ಕೀಳಲರಿ ದಾಯ್ತು.' ಅದರ ಹಿಂದೆಯೇ 'ಮದನ ಮಸೆದೋರಿದನು, ಹೂಗಣೆ ಹೃದಯವನು ತಾಗಿದುದು.' ಅವನು ತನ್ನ ಮನಸ್ಸಿನಲ್ಲಿ 'ಜಗವ ಕೆಡಹಲು ಜಲಜಸಂಭವ ಬಿಗಿದ ಬಲೆ ಇವಳಲ್ಲಲೇ, ಮೂಜಗದ ಯತಿಗಳನೆಸಲು ಮಸೆದಲಗಲ್ಲಲೇ' ಎಂದುಕೊಂಡ. ಅವನ ಲಜ್ಜೆ ಬತ್ತಿತು, ಸ್ಥಾನಗೌರವ ಕುಂಟಿತು. ಅವಳನ್ನು 'ಆಲಿಯೊಳು ನುಂಗಿದನು, ಮನದಲಿ ಸತಿಯ ಸೆರೆ ಗೈದು.' ಸರಿ, ಅವಳಿಗೆ 'ಸೋತು, ಕೀಚಕ, ಪಾತಕವ ನೆನೆದ.' ಸೈರಂಧ್ರಿಗೆ ಗಂಧರ್ವರ ಕಾಪು ಇದೆಯೆಂದು ಅಕ್ಕ ಅವನಿಗೆ ಎಚ್ಚರಿಕೆಕೊಟ್ಟಳು. ಆದರೆ ಅವನಿಗೆ ಅದರ ಲಕ್ಷ್ಯವಿಲ್ಲ. ಅರಮನೆಯ ಬಾಗಿಲಿನಲ್ಲಿ ದ್ರೌಪದಿಯನ್ನು ಸಂಧಿಸಿ

ನಿಲ್ಲೆಲೆಗೆ ಸೈರಂಧ್ರಿ, ಕಾಮನ
ಬಲ್ಲೆಹದ ಬಲುಗಾಯ ತಾಗಿತು
ಬಲ್ಲೆ ನೀನವುಷಧಿಯ ಬದುಕಿಸಿಕೊಳ್ಳು ತನ್ನೊಡಲ

ಮೆಲ್ಲನಡಿಯಿಡು ಮಾತ ಮನ್ನಿಸಿ
ಚೆಲ್ಲೆಗಂಗಳನೆನ್ನ ಮುಖದಲಿ
ಚೆಲ್ಲಿ ಸಪ್ರಾಣಿಸಲು ಬೇಹುದು ವಿಗತ ಜೀವನವ

ಎಂದು ಹೇಳಿಕೊಂಡ. ದ್ರೌಪದಿ ಅವನಿಗೆ ಬುದ್ಧಿ ಹೇಳಿದಳು–'ನಿನ್ನಯ ಕುಲದ ಬೇರನು ಕೊಯ್ವರೆ?' ಎಂದು. ಕೀಚಕ ಅವಳ ಮಾತನ್ನು ಲಕ್ಷಿಸಲಿಲ್ಲ. ಅಯ್ಯೋ 'ನಿನ್ನ ಕಣ್ಣೆಂಬಲಗಿನಲಿ ಎನ್ನೆದೆಯ ನೋಯಿಸಿ ತೊಲಗಬಹುದೆ?....ಕಾಮನೂಳಿಗ ಬಲುಹು, ವೈರಿಯ ಭಯವ ತಗ್ಗಿಸಿ, ತಲೆಯ ಕಾಯಲು ಬೇಹುದು' ಎಂದು ಬೇಡಿಕೊಂಡ. ನನ್ನ ಗಂಡಂದಿರು ಬಲ್ಲಿದರು ಎಂದು ದ್ರೌಪದಿ ಹೇಳಿದರೆ 'ಬಡವನ ಕೋಪವೌಡಿಗೆ ಮೃತ್ಯು; ನಿನ್ನವರೇನ ಮಾಡುವರು?' ಎಂದು ತೆಳ್ಳಿಹಾಕಿದ; 'ಸಾವು ತಪ್ಪದು ತನಗೆ ಕಾಮನ ಡಾವರವು ಘನ' ಆದ್ದರಿಂದ 'ನಿನ್ನ ನೆರೆದೇ ಸಾವೆನಲ್ಲದೆ ಮದನನಂಬಿಗೆ ಒಡಲನೊಪ್ಪಿಸೆನು' ಎಂದು ತನ್ನ ತೀರ್ಮಾನವನ್ನು ತಿಳಿಸಿದ. ಏನಾದರೂ ದ್ರೌಪದಿ ಒಪ್ಪಲಿಲ್ಲ. ಆದ್ದರಿಂದ ಅವನೆ ತನ್ನ ಅಕ್ಕನ ಬಳಿಗೆ ಹೋಗಿ, ತನ್ನ ಅಪೇಕ್ಷೆಯನ್ನು ಹೇಳಿಕೊಂಡು 'ಹರಿದ ಕರುಳಿನ ಮೃಗದ ಮರಿಯನು ಕಾಯಬೇಕೆಂದೆರಗಿದನು ಪದಕೆ.' ಅವನ ಕಣ್ಣೀರಿಗೆ ಕರಗಿದ ಸುದೇಷ್ಣೆ ಮರುದಿನ ದ್ರೌಪದಿಯನ್ನು ಕರೆದು, ತಮ್ಮನ ಮನೆಯಿಂದ ಮಧುವನ್ನು ತರುವಂತೆ ಅಪ್ಪಣೆ ಮಾಡಿದಳು. ಅನಿವಾರ್ಯವಾಗಿ ದ್ರೌಪದಿ ಹೊರಟಳು—

ಮನುಮಥನ ಮದದಾನೆ, ಕಂದ
ರ್ಪನ ಮಹಾಮಂತ್ರಾಧಿದೇವತೆ,
ಜನರು ಮರುಳಹ ಮದ್ದು, ಸಂಸೃತಿ ಸುಖದ ಸಾಕಾರೆ
ಮನಸಿಜನ ಮಸೆದಲಗು, ಜನಮೋ
ಹನತಿಲಕ, ಲಾವಣ್ಯಸಾಗರ
ಜನಿತ ಲಕ್ಷ್ಮಿ, ಲತಾಂಗಿ ಬಂದಳು ಕೀಚಕನ ಮನೆಗೆ

ಕೀಚಕನು ತನ್ನ ಬಳಿಗೆ ಬರುತ್ತಿರುವ 'ಕುಡಿತೆಗಂಗಳ ಚಪಳೆ, ಉಂಗುರ ವಿಡಿಯ ನಡುವಿನ ನೀರೆ, ಹಂಸೆಯ ನಡೆಯ ನಲವಿನ ಮೌಳಿಕಾತಿ, ಪಯೋಜಪರಿಮಳದ ಕಡುಗರುವೆ'ಯನ್ನು ಕಂಡು ಪುಲಕಿತನಾದ. ಆಕೆಯನ್ನು ಕುರಿತು 'ಕಾಮನ ದುರುಳತನಕಾನಂಜುವೆನೆ ನೀನೆನಗೆ ಬಲವಾಗೆ'

ಎಂದು ಹೇಳಿ, ಅವಳು ನಿವಾರಿಸುತ್ತಿದ್ದರೂ ಬಿಡದೆ 'ತುಡುಕಿದನು ಸತಿಯ.' ಕೂಡಲೆ ಆಕೆ ಕೈ ಕೊಸರಿಕೊಂಡು ರಾಜಸಭೆಗೆ ಓಡಿಬಂದಳು. ಆದರೆ ಕೀಚಕ ಅವಳನ್ನು ಹಿಂಬತ್ತಿ ಬಂದು ಅವಳ ತುರುಬನ್ನು ಹಿಡಿದು ಎಳೆದು, ನೆಲಕ್ಕೆ ಕೆಡವಿದ. ಇದಿರಿನಲ್ಲಿ ಐವರು ಪತಿಗಳೂ ನೋಡುತ್ತಿದ್ದಾರೆ. ಏನೂ ಮಾಡುವಂತಿಲ್ಲ. ಭೀಮನೇನೊ ಅರಮನೆಯ ಮುಂದಿನ ಮಹಾವೃಕ್ಷವೊಂದನ್ನು ಅರ್ಥವತ್ತಾಗಿ ನೋಡಿದ. ಆದರೆ ಧರ್ಮರಾಯ 'ಈ ತರುವ ಮುರಿಯದಿರು, ಸುಜನವ್ರಾತಕಾಯತ್ತಾಶ್ರಯ' ಎಂದು ಧ್ವನಿಪೂರ್ಣವಾಗಿ ಉತ್ತರಿಸಿದ.

ಕೌರವನ ಸಭೆಯಂತೆ ವಿರಾಟನ ಸಭೆಯಲ್ಲಿಯೂ ದ್ರೌಪದಿಯು ತನ್ನ ಗಂಡಂದಿರ ಇದಿರಿನಲ್ಲಿಯೇ ಅನಾಥಳಾದಳು. ಆದರೆ ಈಗ ಆಕೆ ಶ್ರೀಕೃಷ್ಣನ ಮರೆ ಹೋಗಲಿಲ್ಲ; ಭೀಮನ ಮರೆ ಹೊಕ್ಕಳು. 'ಎಲ್ಲರೊಳು ಕಲಿ ಭೀಮನೆ ಮಿಡುಕುಳ್ಳ ಗಂಡನು; ಹಾನಿ ಹರಿಬಕೆ ನಿಲ್ಲದಂಗೈಸುವನು; ಕಡು ಹೀಹಾಳಿಯುಳ್ಳವನು.' ಎಂದುಕೊಂಡು ಭೀಮನಿದ್ದ ಬಾಣಸಿನ ಮನೆಗೆ ಬಂದಳು. ಭೀಮ ನಿದ್ರೆಯಲ್ಲಿದ್ದ. ಅಂತಹ ಸಂಕಟದಲ್ಲಿಯೂ ಆಕೆಗೆ ನಗು ಬಂತು, 'ಅರಲಿರಿದನೊ ಭೀಮನೀ ಸೂವಾರವಿದ್ಯೆಯ?' ಎಂದುಕೊಂಡು. ಮೆಲ್ಲಗೆ ಅವನ ಗಲ್ಲವನ್ನು ಹಿಡಿದು ಅಲುಗಿಸಿ ಅವನನ್ನು ಎಬ್ಬಿಸಿದಳು. ಆಕೆಯ ಕರುಣದ ಕಥೆಯನ್ನು ಕೇಳಿ ಅವನಿಗೆ ಸಂಕಟವಾಯಿತು. ಆದರೂ 'ರಾಯನಾಜ್ಞೆಯ ಕಣ್ಣೆಯಲಿ ಬಿಗಿವಡೆದು' ಬದ್ಧನಿರುವುದರಿಂದ 'ಎನ್ನೊಡನೆ ಫಲಸಿದ್ಧಿಯಿಲ್ಲ' ಎಂದ. ಇದನ್ನು ಕೇಳಿ ದ್ರೌಪದಿಯ ಕಣ್ಣಿಂದ ಕಂಬನಿ ಸುರಿಯಿತು. 'ಕೊಲು ಮರುಮನೆಗೊಂಡವೊಲು, ಸುಳಿವಾಳೆ ಝಳತಾಗಿದ ವೊಲು, ಉದರಜ್ವಾಲೆ ನೆತ್ತಿಗೆ ನಿಲುಕೆ ಮಿಡುಕಿದಳಬಲೆ.' ಪಾಂಚಾಲ ರಾಜನ ಮಗಳಾದ ತನಗೆ ಬಂದ ದುಃಸ್ಥಿತಿಯನ್ನು ಕರುಳು ಕರಗುವಂತೆ ಹೇಳಿಕೊಂಡಳು. ಗಂಡಂದಿರನ್ನು ಹೀಯಾಳಿಸಿದಳು. ಕಡೆಗೆ 'ಭೀಮ ಕೊಟ್ಟೈ ತನಗೆ ಸಾವಿನ ನೇಮವನು?' ಚಿಂತೆಯಿಲ್ಲ. 'ಸಾಮಿನಿಯ ಕೇಳಿಯಲಿ ನೆನೆವುದು' ಎಂದು ಅವನ ಕಾಲಿಗೆರಗಿದಳು. ಆಕೆಯ ಮಾತಿನಿಂದ ಭೀಮನಿಗೆ ಅಸಹ್ಯ ವೇದನೆಯಾಯಿತು. 'ಕಂಬನಿದುಂಬಿದನು, ಕಡು ನೆನೆದುದಂತಃಕರಣ.' ಅವನ ವ್ಯಥೆ ರೋಷಕ್ಕೆ ತಿರುಗಿತು. 'ಹಿಂಡಿದನು

ಹಗೆಗಳನು ಮನದೊಳಗೆ.' ಹೆಂಡತಿಯ ಕಣ್ಣೀರನ್ನೊರಸಿ, ಕುರುಳನ್ನು ನೇವರಿಸಿ ಗರ್ಜಿಸಿವನು—

ಅಸುರ ಬಗೆವೆನು ಕೀಚಕನ ನಸು
ಮಿಸುಕಿದರೆ ವೈರಾಟ ವಂಶದ
ಹೆಸರ ತೊಡೆವೆನು ; ನಮ್ಮನರಿವಡೆ ಕೌರವವ್ರಜವ
ಕುಸುರಿದರಿವೆನು ; ಭೀಮ ಕಪ್ಪವ
ನೆಸಗಿವನು ಹಾ ಎಂದರಾದಡೆ
ಮುಸುಡನಮರಾದ್ರಿಯಲಿ ತೀವೆನು ದೇವಸಂತತಿಯ.

ಅಣ್ಣ ತಮ್ಮಂದಿರು ಕೋಪಿಸಿದರೆ ಅವರ ಬಾಂಧವ್ಯವನ್ನೇ ತ್ಯಜಿಸುತ್ತೇನೆ. 'ಕೃಷ್ಣ ನಡಹಾಯ್ದನೆ, ಮುರಾರಿಯ ಮೀರಿವೆನು'—ಎನ್ನುವಷ್ಟು ದೂರ ಹೋಗುತ್ತದೆ, ಅವನ ರೋಷ. ನಾಟ್ಯಮಂದಿರವನ್ನು ಸಂಕೇತಸ್ಥಾನವಾಗಿ ಮಾಡಿ, ಕೀಚಕನನ್ನು ಆ ರಾತ್ರಿ ಅಲ್ಲಿಗೆ ಬರುವಂತೆ ಮಾಡೆಂದು ದ್ರೌಪದಿಗೆ ಹೇಳಿ, ಅಲ್ಲಿ 'ಖುಲ್ಲನುದರವ ಬಗಿದು ರಕುತವ ಚೆಲ್ಲುವೆನು ಶಾಕಿನಿಯರಿಗೆ' ಎಂದು ಆಕೆಗೆ ಆಶ್ವಾಸನವಿತ್ತನು. ಆತನ ಅಪ್ಪಣೆಯಂತೆ ಕೀಚಕನನ್ನು ಸಂಕೇತಸ್ಥಾನಕ್ಕೆ ಆಹ್ವಾನಿಸಿದ ದ್ರೌಪದಿ ಆ ರಾತ್ರಿ ಭೀಮನಿಗೆ ಹೆಣ್ಣು ವೇಷವನ್ನು ಹಾಕಿದಳು. ಅವನು ಸೆರಗಿನೊಯ್ಯಾರದಿಂದ ನಾಟ್ಯಶಾಲೆಗೆ ಬಂದ. ಕೀಚಕನೂ 'ಕೃತಾಂತನ ಬಾಯ ಹೊಗುವಂತೆ' ಸಂಕೇತಸ್ಥಾನಕ್ಕೆ ಬಂದ. ಕತ್ತಲಿನಲ್ಲಿಯೇ ಸ್ತ್ರೀವೇಷದ ಭೀಮನನ್ನು ಮೈತಡವಿ 'ಎಲಗೆ ಕಲುಮೆಯ್ಯಾದೆ.ಕಡುಗೋಮಲತೆಯೆತ್ತಲು ಕರ್ಕಶಾಂಗವ ಬಲುಹಿದೆತ್ತಲು' ಎಂದ. ಭೀಮನು 'ಪರಸತಿಗಳುಪಿದಾತಂಗಮೃತ ವಿಷ. ಕೋಮಲತೆ ಕರ್ಕಶ' ಎಂದು ಹೇಳಿ, ಅವನ ಮುಂದಲೆಯನ್ನು ಹಿಡಿದೆಳೆದ. 'ತಿವಿದನು ಕೀಚಕನ ಹೇರುರವನು. ಎದೆ ಜರ್ಝರಿತವಾಯಿತು. ಕಾರಿದನು ಕರುಳ.' ಸತ್ತುಬಿದ್ದ ಆ ಪಾಪಿಯ 'ತಲೆಯನೆದೆಯೊಳಗಿಕ್ಕಿ ಕೈಕಾಲ್ಗಳನು ಬಸುರೊಳಗಿಕ್ಕಿ' ಹೆಂಡತಿಗೆ ತೋರಿಸಿದ. 'ಖಳನು ಕಾಲನ ಕೋಣ ತುಳಿದಂತಿಳೆಯೊಳೊರಗಿರೆ, ಕಂಡು ಕಾಮಿನಿ ಕಳಕಳಿಸಿ ನಗುತಾಗ ತಕ್ಕೈಸಿದಳು ವಲ್ಲಭನ.'

ಇದು ಭೀಮನ ಭೀಮಪಾತ್ರ. ಈ ವಾಯುಪುತ್ರನಿಗೆ ತಕ್ಕ ಹೆಂಡತಿ ಆ ಅಗ್ನಿ ಪುತ್ರಿಯಾದ ದ್ರೌಪದಿ. ಇವರಿಬ್ಬರು ಸೇರಿಯೇ ಶತ್ರುದಹನ.

ಅವಳು ಪ್ರೇರಕಶಕ್ತಿ, ಇವನು ಕಾರಕಶಕ್ತಿ. ಕೌರವ ಪಾಂಡವರ ಹದಿನೆಂಟು ಅಕ್ಷೋಹಿಣಿ ಸೈನ್ಯದಲ್ಲಿ ಗಂಡಿನಲ್ಲಿ ಗಂಡೆಂದರೆ ಭೀಮನೊಬ್ಬನೇ. ಅವನು ಅಸಹಾಯ ಶೂರ. ಅವನದು ನಿಷ್ಕಪಟವಾದ ಹೃದಯ,ಸ್ಪಷ್ಟವಾದ ಮಾತು, ಸ್ವಲ್ಪಮಟ್ಟಿಗೆ ಒರಟಾದ ನಡವಳಿಕೆ. ಒಮ್ಮೊಮ್ಮೆ ಅವನಲ್ಲಿ ಹಾಸ್ಯಮನೋಭಾವವೂ ಕಾಣಿಸಿಕೊಳ್ಳುವುದುಂಟು, ಶಾಂತಿಸಮಯಗಳಲ್ಲಿ ಗುರು ಹಿರಿಯರಿಗೆ ವಿಧೇಯನಾಗಿಯೂ ಇರುತ್ತಾನೆ. ಆದರೆ ಅವನ ಹೆಸರು ಕೇಳುತ್ತಲೆ ನಮ್ಮ ಕಣ್ಣೆದುರಿಗೆ ನಿಲ್ಲುವುದು ಅದಮ್ಯವಾದ ಧೈರ್ಯ, ಸಾಹಸ, ಪರಾಕ್ರಮ —ಗಂಡುತನ. ಈ ಗಂಡಿಗೆ ತಕ್ಕ ಹೆಣ್ಣು ದ್ರೌಪದಿ. ಅವಳು ಪಂಚವಲ್ಲಭೆಯಾದರೂ 'ಮಿಡುಕುಳ್ಳ ಗಂಡ ಭೀಮ'ನೇ ಸರಿ. ಆ ಹೆಣ್ಣನ್ನು ಕಂಡು ಮರುಗಿ ಸಹಾಯಮಾಡುವವರು ಮುಖ್ಯವಾಗಿ ಇಬ್ಬರು—ದೈವಸ್ವರೂಪಿಯಾದ ಕೃಷ್ಣ, ಗಂಡಿನಲ್ಲಿ ಗಂಡಾದ ಭೀಮ. ಅವಳ ರೂಪದಂತೆ ಶೀಲಶುದ್ಧಿಯೂ ಅನುಪಮವಾದುದು. ಆದರೆ ಅವಳು ಕ್ಷತ್ರಿಯ ರಮಣಿ. ಅವಳ ಆತ್ಮಗೌರವಕ್ಕೆ ಲೋಪಬಂದಾಗ ಅವಳ ಕ್ಷಾತ್ರ ಹೆಡೆಬಿಚ್ಚುತ್ತದೆ. ಕೀಚಕನಿಂದ ರಕ್ಷಣೆ ನೀಡದ ಭೀಮನೊಡನೆ 'ಗಂಡರೈವರು ಮೂರು ಲೋಕದ ಗಂಡರೊಬ್ಬಳನಾಳಲಾರಿರಿ ; ಗಂಡರೊ ನೀವ್ ಭಂಡರೊ' ಎಂದು ಕೇಳುತ್ತಾಳೆ. ಶ್ರೀಕೃಷ್ಣನು ರಾಯಭಾರಕ್ಕೆ ಹೊರಟಾಗ ಸಂಧಿಯ ಪ್ರಸ್ತಾಪವನ್ನೆತ್ತಿದ ಗಂಡಂದಿರನ್ನು ಕುರಿತು 'ಖಳರು ತಮ್ಮನ್ನತಿಯ ಕೀಲನು ಕಳಚಿ ಕಳೆದರು, ಮರಳಿ ಹೂಡುವೊಡಳುಕಿದರು, ನನ್ನವರು ಪತಿಗಳೆ ಪರಮವೈರಿಗಳು' ಎನ್ನುತ್ತಾಳೆ. ಇಷ್ಟೇ ಅಲ್ಲ

ತನಯರೈವರು ವೀರ ಸಹದೇ
ವನು ಘಟೋತ್ಕಚನೀ ಸುಭದ್ರಾ
ತನಯ ನಮ್ಮಯ ತಂದೆ ಮೂರಕ್ಷೋಹಿಣೀಸೇನೆ
ಇನಿಬರೇ ಕಾದುವರು ದುಶ್ಶಾ
ಸನನ ರಕುತವ ಕುಡಿದು ಕುರುಕುಲ
ವನವ ಸುಡುವರು ನಿಮ್ಮ ಹಂಗೇಕೆ ?

ಎಂದು ಕೆರಳುವಳು. ಇಂತಹ ಸಂದರ್ಭಗಳಲ್ಲೆಲ್ಲಾ ಭೀಮನ ಸಹಾಯ ಬೆಂಬಲಗಳು ಆಕೆಗೆ ಸಿದ್ಧವಾಗುತ್ತವೆ. ಭೀಮನ ಕೈ ಮೀರಿದಾಗ ಶ್ರೀಕೃಷ್ಣ.

ಪತಿಗಳಲ್ಲಿ, ಗುರುಹಿರಿಯರಲ್ಲಿ ಆಕೆಗೆ ಭಕ್ತಿಯಿದೆ. ಆದರೆ ಭೀಮನಂತೆಯೇ ಈಕೆಯೂ ಕೆರಳಿದಾಗ, ದುಃಖ ಅಸಹನೀಯವಾದಾಗ, ಗುರುಗೌರವವನ್ನು ಮೀರುವುದಕ್ಕೂ ಹಿಂಜರಿಯುವುದಿಲ್ಲ.

ನಾರಾಣಪ್ಪ ಪಾತ್ರಗಳನ್ನು ಸಜೀವವಾಗಿ ಕಳಕಳಿಸುವಂತೆ ಚಿತ್ರಿಸಿದ್ದಾನೆ. ಆತನ ಕಾವ್ಯದ ಯಾವ ಭಾಗವನ್ನು ತೆಗೆದುಕೊಂಡರೂ ಇದು ಸ್ಪಷ್ಟವಾಗುತ್ತದೆ. ಶ್ರೀಕೃಷ್ಣನ ಪಾತ್ರದಲ್ಲಿ ಆಗಾಗ ಅಲೌಕಿಕತೆ ತಲೆಯಿಕ್ಕುವುದಾದರೂ ಆತನೂ ಲೌಕಿಕಮರ್ಯಾದೆಗೆ ಹೆಚ್ಚು ಲೋಪವಾಗದಂತೆ ತನ್ನ ನರನಾಟಕಲೀಲೆಯನ್ನು ಪ್ರದರ್ಶಿಸಿದ್ದಾನೆ. ಅರ್ಜುನನು ನಾರಾಯಣಸೇನೆಯನ್ನು ಬಿಟ್ಟು ತನ್ನನ್ನೇ ಆರಿಸಿಕೊಂಡಾಗ 'ದೇವರೆಂದೇ ನೀವು ಬಗೆವಿರಿ, ದೇವತನವೆಮಗಿಲ್ಲ' ಎನ್ನುತ್ತಾನೆ. ಆದರೆ ಅರ್ಜುನನು ನೀವು 'ದೇವರ ದೇವ' ಎಂದು ಹೇಳುತ್ತಾನೆ. ಈ ಎರಡು ಭಾವಗಳೂ ಕಾವ್ಯದಲ್ಲಿ ಹಾಸು ಹೊಕ್ಕಾಗಿವೆ. ಭಾರ ಹೆಚ್ಚಿದೊಡೊರಲಿ ಧರಣೀ ನಾರಿ ಬಿನ್ನಹ' ಮಾಡಲು ಶ್ರೀಕೃಷ್ಣನ ಅವತಾರನಾಯಿತು. 'ಒಲಿದವರನುಜ್ಜೀವಿಸುವ ಬಗೆಬಲುಹು ಮುರಮಥನಂಗೆ, ಮುನಿದರೆ ತಲೆಯ ಬರಹವ ತೊಡೆವನಲ್ಲದೆ ಬರಿದೆ ಮಾಣಸನು.' ಆತನು ಕೌರವನಿಗೆ ಹೇಳಿಕಳುಹಿಸುವ ಸಂದೇಶ 'ಬಂಟರಾವ್ ಭಕ್ತರಿಗೆ, ನೆನೆವರು ನಂಟರು.... ಮೆಚ್ಚೆವು ತರ್ಕಸಾಧಕರ.' ಸಂಧಿಗೆಂದು ಕೌರವನ ಬಳಿಗೆ ಹೊರಟಾಗ 'ಕಾಳಗವನೇ ಬಲಿದು ಬಹೆನು' ಎಂದು ಹೇಳಿದರೂ ಕೌರವನೊಡನೆ ವ್ಯವಹರಿಸುವಾಗ ಸಂಧಿಗಾಗಿ ಸಾಮದಾನಗಳನ್ನು ಬಳಸುತ್ತಾನೆ. ಆತನನ್ನು ಕೌರವ ಬಂಧಿಸಹೊರಟಾಗ ವಿಶ್ವರೂಪವನ್ನು ಧರಿಸಿ ಅಂಧನೃಪನಿಗೂ ಕಣ್ಣುಗಳನ್ನು ಕರುಣಿಸುತ್ತಾನೆ. ಸಂಧಿ ವಿಸಂಧಿಯಾದಾಗ ಆತನು ಕರ್ಣನೊಡನೆ ನಡೆಸುವ ಸಂಭಾಷಣೆಯಂತೂ, ಅತ್ಯಂತ ಕುಶಲಿಯಾದ ರಾಜಕಾರಣಿಯನ್ನು ಆತನಲ್ಲಿ ನಮಗೆ ತೋರಿಸುತ್ತದೆ. ಆತನು ದೇವರದೇವನೂ ನಿಜ, ಅತ್ಯಂತ ಜಾಣನಾದ ಲೋಕವ್ಯವಹಾರ ಜ್ಞಾನಿಯೂ ನಿಜ. ಯುದ್ಧಪಂಚಕದಲ್ಲಿ ಬರುವ ಭಗವದ್ಗೀತಾಪ್ರಸಂಗ, ಸೈಂಧವವಧಾಪ್ರಸಂಗ, ಕರ್ಣವಧಾಪ್ರಸಂಗ ಇತ್ಯಾದಿ ಕಡೆಗಳಲ್ಲಿ ಆತನು ತನ್ನ ದೈವತ್ವವನ್ನು ಸ್ಪಷ್ಟವಾಗಿಯೇ ಪ್ರದರ್ಶಿಸಿದ್ದಾನೆ. ಭಾರತಯುದ್ಧ ಮುಗಿದಮೇಲೆ ಅರ್ಜುನನನ್ನು ರಥದಿಂದ ಇಳಿಸಿ, ಅನಂತರ ಆತ ಇಳಿಯುತ್ತಾನೆ. ಒಡನೆಯೇ

ರಥ ಹೊತ್ತಿಕೊಂಡು ಉರಿದುಹೋಯಿತು. ಆಗ ಅರ್ಜುನ 'ನೀವೆ ಬಲ್ಲಿರಿ ದೇವ, ನೀ ಮಾಯಾವಿ ; ಮಾಯಾಪಾಶಬದ್ಧರು ನಾವು ಬಲ್ಲೆವೆ ನಿಮ್ಮ ನೆಂದೆರಗಿದನು ಚರಣದಲಿ.' ಪಾಂಡವರು ಕೌರವರನ್ನು ಗೆದ್ದರೂ ಅವರ ಶತ್ರುಶೇಷ ಇದ್ದೇ ಇತ್ತು. ಧೃತರಾಷ್ಟ್ರನಿಗೆ ಭೀಮನಲ್ಲಿ ಗಾಂಧಾರಿಗೆ ಧರ್ಮ ರಾಯನಲ್ಲಿ ಅಚ್ಚಳಿಯದ ದ್ವೇಷ ಉಳಿದಿತ್ತು. ಸರ್ವಜ್ಞನಾದ ಶ್ರೀಕೃಷ್ಣ ಇದನ್ನು ಬಲ್ಲ. ಆದ್ದರಿಂದಲೇ ಧೃತರಾಷ್ಟ್ರನು ಅಪ್ಪಿಕೊಳ್ಳುವುದಕ್ಕೆ ಉಕ್ಕಿನ ಭೀಮವಿಗ್ರಹವನ್ನು ಒದಗಿಸಿದ. ಮುದುಕನ ಆಲಿಂಗನದಿಂದ ಅದು ಪುಡಿ ಪುಡಿಯಾಯಿತು. ಭೀಮ ಬದುಕಿದ. ಗಾಂಧಾರಿಯ ದೃಷ್ಟಿಗೆ ಸಿಕ್ಕ ಧರ್ಮ ರಾಯನ ಉಗುರುಗಳಲ್ಲಿ ಉರಿ ಕಾಣಿಸಿಕೊಂಡಿತು. ಶ್ರೀಕೃಷ್ಣನ ಕೃಪೆಯಿಂದ ಆತ ಉಳಿದ. ಹೀಗೆ ಶ್ರೀಕೃಷ್ಣನು ಪ್ರತ್ಯಕ್ಷ ಪರಮೇಶ್ವರನಾಗಿಯೇ ವ್ಯವಹರಿ ಸಿದ್ದರೂ, ಆತನ ಅತಿಮಾನವತ್ವ ಮಾನವತ್ವಕ್ಕೆ ಭಂಗವನ್ನು ತಂದಿಲ್ಲ.

ಕುಮಾರವ್ಯಾಸಭಾರತವು 'ಕೃಷ್ಣಚರಿತೆ'ಯಾದರೂ ಅದು ಪುರಾಣ ವಲ್ಲ ; ದಿವ್ಯ ಸುಂದರ ಕಾವ್ಯ ಎಂಬುದು ಆ ಕಾವ್ಯದಲ್ಲಿ ಕಾಣಬರುವ ಸನ್ನಿ ವೇಶರಚನೆ, ಪಾತ್ರಸೃಷ್ಟಿ, ರಸನಿರೂಪಣೆಗಳಿಂದ ನಮಗೆ ಸುಸ್ಪಷ್ಟವಾಗು ತ್ತದೆ. ಹದಿನೆಂಟು ಅಕ್ಷೋಹಿಣಿ ಸೈನ್ಯವು ಹದಿನೆಂಟು ದಿನಗಳ ಯುದ್ಧದಲ್ಲಿ ನಿರ್ನಾಮವಾಗಿ ಹೋದ ಮಹಾಭಾರತದ ಯುದ್ಧವನ್ನು ಒಳಗೊಂಡ ಈ ಕಾವ್ಯ ವೀರರಸಪ್ರಧಾನವಾಗಿರುವುದು ಸಹಜವಾಗಿಯೇ ಇದೆ. ಆದರೆ ಉಳಿದ ರಸಗಳೂ ಇಲ್ಲಿ ಇಲ್ಲದೆ ಹೋಗಿಲ್ಲ. ಕುಮಾರವ್ಯಾಸನ ಕಾವ್ಯ ನವ ರಸಭರಿತವಾದುದು. ಆದರೆ ಇತರ ಕೀಳು ಕವಿಗಳಂತೆ ಅಷ್ಟಾದಶವರ್ಣನೆಗಾಗಿ ಪದ್ಯ ಹೊಸೆಯುವ ಗೋಜಿಗೆ ಹೊರಟಿಲ್ಲ, ಈ ಮಹಾಕವಿ. ಆತನ ಕಾವ್ಯ ಸೌಂದರ್ಯವೆಲ್ಲವೂ ಕಥೆಗೆ ಅಂಗವಾಗಿ ಬಂದುದೇ ಹೊರತು, ಕಾವ್ಯಸೌಂದರ್ಯ ಕ್ಕೆಂದು ಕಥೆಯನ್ನು ವಿಸ್ತರಿಸುವ ಮನೋಭಾವದವನಲ್ಲ, ಆತ. ವೀರರಸ ಪ್ರಧಾನವಾದ ಈ ಕಾವ್ಯದಲ್ಲಿ ಶೃಂಗಾರ, ಹಾಸ್ಯ ಇತ್ಯಾದಿಗಳು ಅಮುಖ್ಯ ವಾದ ರಸಗಳು. ಅವು ಅಮುಖ್ಯವಾದರೂ ನಿರೂಪಣೆಯಲ್ಲಿ ಲೋಕೋತ್ತರ ವಾದ ಸೊಬಗನ್ನು ಪಡೆದಿವೆ. ಪ್ರತಿಪರ್ವ ರಸೋದಯವಾದ ಭಾರತದಲ್ಲಿ ಕುಮಾರವ್ಯಾಸಕವಿ ಹಾಸ್ಯರಸವನ್ನೂ ಮನೋಜ್ಞವಾಗಿಯೇ ತಂದಿದ್ದಾನೆ.' 'ಅರಸುಗಳಿಗಿದು ವೀರ' ವಾದ ಭಾರತದಲ್ಲಿ ಆ ಮಾತಿಗೊಂದು ಸವಾಲಿ

ನಂತೆ ಷಡ್ಡುಹೊಡೆದು ನಿಂತಿದ್ದಾನೆ ಉತ್ತರಕುಮಾರ. ರಣಹೇಡಿಯಾದ ಇವನ ವೀರವಾಣಿ ನಮ್ಮಲ್ಲಿ ಹಾಸ್ಯವನ್ನು ಉಕ್ಕಿಸಿ, ನಗುವಿನ ಹುಚ್ಚುಹೊಳೆಯನ್ನೇ ಹರಿಸುತ್ತದೆ. ಮೂಗಿನ ತುದಿಗೆ ಸುಣ್ಣ ಬಳಿದುಕೊಂಡು ಬಂದ ತುರುಗಾಹಿಗಳಿಂದ ಕೌರವಸೈನ್ಯ ಬಂದು ಮುತ್ತಿರುವುದನ್ನು ಕೇಳುತ್ತಲೆ ಆ ಮಾತಿನ ವೀರ ಮೀಸೆಯನ್ನು ಹುರಿಮಾಡುವುದೇನು, ಹೆಣ್ಣುಗಳ ಕಡೆ ನೋಡುತ್ತಾ ತನ್ನ ಬಿರುದುಗಳನ್ನು ಕೆದರುವುದೇನು, 'ನಾನುದ್ರೇಕಿಸಲು ಸಮರದಲಿ ನಿಲುವರೆ? ನಾಕದವರಿಂಗೆ ನೂಕದು' ಎಂಬ ಅಬ್ಬರವೇನು! 'ಜವನ ಮೀಸೆಯ ಮುರಿದನೊ, ಭೈರವನ ದಾಡೆಯನಲುಗಿದನೊ, ಮೃತ್ಯುವಿನ ಮೇಲುದ ಸೆಳೆದನೋ, ಕೇಸರಿಯ ಕೆಣಕಿದನೊ' ಎಂದು ತನ್ನೊಡನೆ ಯುದ್ಧಕ್ಕೆ ನಿಂತ ಕೌರವನನ್ನು ಜರೆದನು. ಪಾಪ, ಕೌರವ ಸೇನೆಯಲ್ಲಿ ಅವನು ಯಾರೊಡನೆ ಯುದ್ಧಮಾಡಬೇಕು? 'ಕೆಲವರು ಹಾರುವರು, ಕೆಲರಂತಕನ ನೆರೆಯೂರವರು, ಕೆಲರಧಮಕುಲದಲಿ ಸಂದು ಬಂದವರು' ದ್ರೋಣ, ಭೀಷ್ಮ, ಕರ್ಣರನ್ನು ಕುರಿತು ಅವನಾಡುವ ಮಾತುಗಳು ಇವು. ಹೆಣ್ಣುಗಳ ಮಧ್ಯದಲ್ಲಿ ಕುಳಿತು ಅವನು 'ಖಳರ ಮುರಿವೆನು, ಹಸ್ತಿನಾಪುರದೊಳಗೆ ಠಾಣಾಂತರವನಿಕ್ಕುವೆ' ಎಂದು ಅಬ್ಬರಿಸುತ್ತಾನೆ. ತನ್ನನ್ನು ಬಡ ಯುಧಿಷ್ಠಿರನೆಂದು ಬಗೆದೆನೊ, ಆ ಕೌರವ? ಎಂದು 'ಕೋಮಲೆಯರಿದಿರಲಿ ಬಾಯ್ಗೆ ಬಂದುದ ಗಳಹುತಿರ್ದನು; ಬೇಕು ಬೇಡೆಂಬವರ ನಾ ಕಾಣೆ.' ತನಗೆ ತಕ್ಕ ಸಾರಥಿಯಿಲ್ಲವೆಂದು ಅವನ ವ್ಯಥೆ. ಬೃಹಂದಳೆ ಸಾರಥಿಯಾಗಿ ಒದಗಿ ಬಂದಾಗ 'ಸಾರಥಿಯ ಕೊಟ್ಟೆನ್ನನುಳುಹಿದೆ'—ನನ್ನ ಮರ್ಯಾದೆ ಉಳಿಯಿತು—ಎಂದು ತಂಗಿಗೆ ಹೇಳಿ ನೆಮ್ಮದಿಯ ನಿಟ್ಟುಸಿರನ್ನು ಬಿಡುತ್ತಾನೆ. ಆ ಮಾತಿನ ಮಲ್ಲನಿಗೆ ಮುಖಕ್ಕೆ ಮಂಗಳಾರತಿಯೆತ್ತಿ ಯುದ್ದಕ್ಕೆ ಕಳುಹಿಸುತ್ತಾರೆ, ರಾಣಿವಾಸದವರು. ಅಟ್ಟಹಾಸದಿಂದ ರಥವೇರಿ ಯುದ್ಧಭೂಮಿಗೆ ಹೊರಟ ಉತ್ತರಕುಮಾರನಿಗೆ ದೂರದಿಂದ ಕುರುಸೇನೆಯನ್ನು ನೋಡಿದುದರಿಂದಲೆ ಜಂಘಾಬಲ ಉಡಗಿಹೋಯಿತು, 'ಇಡಿದ ಧೂಳಿಯ ಧೂಮರಾಶಿಯ ಪಡೆ ವಿರಾಟನ ಸುತನ ಕಂಗಳಿಗೊಡನೊಡನೆ ದಾವಾಗ್ನಿಯಂತಿರೆ ತೋರಿತಿದಿರಿನಲಿ.' 'ಇದು ಜಗಂಗಳನಳಿವ ಜಲಧಿಯೋ ಸೇನೆಯೊ' ಎನ್ನಿಸಿತು ಆತನಿಗೆ. 'ಇದರೊಡನೆ ಕಾದುವನಾವನಾತನೆ ಮೃಡನು....ಬಲಕೆ

ನವೊ' ಎಂದ. ಸಾರಥಿಯನ್ನು ಕುರಿತು 'ಹಸಿದ ಮಾರಿಯ ಮುಂದೆಯಲಿ ಕುರಿ ನುಸುಳಿದಂತಾದೆನು, ಬೃಹಂದಳೆ ಎಸಗದಿರು ತೇಜಿಗಳ, ತಡೆ, ಚಮ್ಮಟಿಗೆಯನು ಬಿಸುಡು' ಎಂದು ಅಪ್ಪಣೆಮಾಡಿದ. ಸಾರಥಿ ಅವನ ಮಾತು ಕೇಳಲಿಲ್ಲ. ಉತ್ತರಕುಮಾರ ಕೆರಳಿ ಹೇಳಿದ 'ಏಕೆ ಸಾರಥಿ ರಥವ ಮುಂದಕೆ ನೂಕಿ ಗಂಟಲ ಕೊಯ್ವೆ?........ವಾಘೆಯ ಮರಳಿ ಸೆಳೆ, ತೇಜಿಗಳ ತಿರುಹು' ಎಂದು. ಅವನ ಅಪ್ಪಣೆ ವ್ಯರ್ಥವಾದುದನ್ನು ಕಂಡು ಅವನು ರಥ ದಿಂದ ಧುಮುಕಿ 'ಬದುಕಿದೆನೆಂದು ನಿಟ್ಟೋಟದಲಿ ಹಾಯ್ದನು ಬಿಟ್ಟ ಮಂಡೆಯಲಿ' ಆದರೆ ಸಾರಥಿ ಅವನ ಪಲಾಯನಕ್ಕೆ ಅವಕಾಶಕೊಡಲಿಲ್ಲ. ಅವನನ್ನು ಹಿಡಿತಂದು ರಥದಲ್ಲಿ ಕೆಡವಿದ. ಉತ್ತರಕುಮಾರ ದಿಕ್ಕೆಟ್ಟವನಂತೆ 'ಹಲುಗಿರಿದು ಬಾಯೊಳಗೆ ಬೆರಳಿಟ್ಟಳುಕಿ, ತಲೆವಾಗಿದನು. ಸಾರಥಿ ಕಳುಹಿ ಕಳೆಯೈ ನಿನ್ನ ಬಸಿರಲಿ ಮರಳಿ ಬಂದವನು' ಎಂದು ಅಂಗಲಾಚಿದ. ಸಾರಥಿ ಆತನನ್ನು ಸಂತೈಸುತ್ತಾ, ಅಯ್ಯಾ ಯುದ್ಧದಲ್ಲಿ ಹಿಂದಕ್ಕೆ ಓಡಿದರೆ ಪಾತಕ, ಮುಂದೆ ನುಗ್ಗಿದರೆ ಅಶ್ವಮೇಧ ಫಲ, ಸತ್ತರೆ ವೀರಸ್ವರ್ಗ—ಎಂದ. ಅದಕ್ಕೆ ಉತ್ತರಕುಮಾರ 'ಧುರದೊಳೋಡಿದ ಪಾತಕವ ಭೂಸುರರು ಕಳೆದ ಪರು ; ಅಶ್ವಮೇಧವ ಧರಣಿಯೊಳು ಪ್ರತ್ಯಕ್ಷವಾಗಿಯೆ ಮಾಡಬಹುದು ; ಸುರರ ಸತಿಯರನೊಲ್ಲೆವೆಮಗೆಮ್ಮರಮನೆಯ ನಾರಿಯರೆ ಸಾಕು' ಎಂದ. ಕುಮಾರ ವ್ಯಾಸಕವಿ ಕಡೆದು ನಿಲ್ಲಿಸಿರುವ ಈ ಉತ್ತರನ ಪಾತ್ರ ಕನ್ನಡ ಸಾಹಿತ್ಯದಲ್ಲಿಯೇ ಅಪೂರ್ವ, ಅದ್ವಿತೀಯ.

ಕುಮಾರವ್ಯಾಸನ ಭಾಷಾಶೈಲಿಗಳು ಅದ್ವಿತೀಯ, ಅನನುಕರಣೀಯ. ಆತನದು 'ಪದವಿಟ್ಟಳುಪದೊಂದಗ್ಗಳಿಕೆ'ಯಲ್ಲವೆ ? ಆತನು ಇಟ್ಟ ಪದ— ಅದು ಸಂಸ್ಕೃತವಾಗಿರಲಿ, ಕನ್ನಡವಾಗಿರಲಿ, ಮರಾಠಿಯದೇ ಆಗಿರಲಿ—ಸತ್ತ ಮಗುವಿನ ಜನನದಂತಲ್ಲ, ಜೀವಪೂರ್ಣವಾದ ಪುತ್ರಜನನವಂತೆ ಸಾರ್ಥಕ ವಾಗಿರುತ್ತದೆ. 'ವಾಚಮರ್ಥೋಽನುಧಾವತಿ'-ಆತನ ಮಾತುಗಳ ಹಿಂದೆ ಅರ್ಥ ಓಡಿಕೊಂಡು ಅನುಸರಿಸುತ್ತದೆ. ವಾಗರ್ಥಗಳ ಉಮಾಮಹೇಶ್ವರರ ಮೆರವಣಿಗೆಯನ್ನು ಕಾಣುತ್ತೇವೆ, ಆತನ ಬರವಣಿಗೆಯಲ್ಲಿ. ಮಾತುಗಳ ಜೀವನಾಡಿಯನ್ನು ಹಿಡಿದು ಮಿಡಿಸಬಲ್ಲ ರಸಜ್ಞ ಆತ. 'ಕಡ್ಡಿ ತಡೆವುದೆ ಕಡಲ?' 'ಕುರುಬರೂರಲಿ ಗಾಜು ಮಾಣಿಕ,' 'ಎಳಲತೆಯ ಕುಡಿ

ಮಾಳಿಗೆಗೆ ತೊಲೆಯೆ ?' 'ಬಂಜೆ ನುಡಿಗಳ ಬೈದಡಧಿಕನೆ ?'-ಗಾದೆಯಂತಹ ಇಂತಹ ನೂರಾರು ವಾಕ್ಯಗಳು ಕನ್ನಡ ಭಾಷೆಯ ಶ್ರೀಮಂತಿಕೆಯನ್ನು ಹೆಚ್ಚಿಸಿವೆ. ಸ್ವತಂತ್ರ ಮನೋವೃತ್ತಿಯ ನಾರಣಪ್ಪ ಭಾಷೆಯ ಬೆಳವಣಿಗೆಯಲ್ಲಿ ಎಂತಹ ಪಾತ್ರವನ್ನು ವಹಿಸಿದ್ದಾನೆ! ಆತನ ವಾಕ್ಪ್ರವಾಹದಲ್ಲಿ ವ್ಯಾಕರಣ ಕೊಚ್ಚಿ ಹೋಗುತ್ತದೆ. ಕಮಲಗಣ್ಣು, ಕೃಪಣತನ, ಕಡುಲೋಲುಪತೆ, ಮರಿಮೇಘ, ನಾರಯಣ, ನಾರಣ—ಇಂತಹ ಪ್ರಯೋಗಗಳ ಸಾಧುತ್ವವನ್ನು ರಸಪ್ರವಾಹದಲ್ಲಿ ಮೈಮರೆಯಬಲ್ಲ ಯಾವ ಓದುಗ ತಾನೆ, ಪ್ರಶ್ನಿಸುತ್ತಾನೆ? ಅವನ ಭಾಷೆಗೆ ಅವನೇ ಪಾಣಿನಿ. ಕವಿ ಕುವೆಂಪು ಹೇಳಿರುವಂತೆ 'ಕಾವ್ಯಕೆ ಪ್ರಮಾಣಂ ಕರ್ಣಂ, ವ್ಯಾಕರಣಮಲ್ತು; ವ್ಯಾಕರಣಮೇಕೆಂಬೆಯೇಂ? ಮರೆವುದಕೆ ಕಲ್ತು' ಕುಮಾರವ್ಯಾಸನ ಕಾವ್ಯದಲ್ಲಿ ಬೇಕಾದಷ್ಟು ಅನುಪ್ರಾಸಗಳನ್ನು ನಾವು ಕಾಣುತ್ತೇವೆ. ಆದರೆ ಎಲ್ಲಿಯೂ ಅವು ಕೃತಕವಾಗಿಲ್ಲ. ಅಪ್ರಯತ್ನವಾಗಿ ಬಂದು ಸೇರಿಕೊಳ್ಳುವ ಆ ಮಾತುಗಳ ಜೋಡಣೆ ಎಲೆಮರೆಯ ಹೂವಿನಂತೆ ಆಹ್ಲಾದಕರವಾಗಿರುತ್ತವೆ.

ಕುಮಾರವ್ಯಾಸನು 'ರೂಪಕ ಸಾಮ್ರಾಜ್ಯ ಚಕ್ರವರ್ತಿ' ಎಂದು ಪ್ರಸಿದ್ಧನಾಗಿದ್ದಾನೆ. ಆತನು ಮಾತನಾಡುವುದೇ ರೂಪಕದಲ್ಲಿ. ಈ ದಿವ್ಯ ಕಲಾವಿದ ಎಳೆವ ಗೆರೆಯೆಲ್ಲವೂ ಚಿತ್ರ, ಕೂಗಿದುದೆಲ್ಲವೂ ರಾಗ. 'ಆಕೀರ್ತಿ ಕಾಮಿನಿ ಕುಣಿವಳೈ ತ್ರೈಜಗದ ಜಿಹ್ವಾರಂಗಮಧ್ಯದಲಿ, 'ಕಾರಿರುಳ ಪಟ್ಟಣಕೆ ಚಂದ್ರನ ತೋರಣವ ಬಿಗಿದಂತೆ.' 'ಅರಿವಿನ ಸೆರಗು ಹಾರಿತು' 'ಬಂಧುದರುಶನ ಫಲವಲಾ ಸಂಸಾರ ತರುವಿಂಗೆ,' 'ತತ್ತ ಕೋಪಾಯುಧವ ಮಸೆದಳು ಧಾರೆಗಂಗಳಲಿ' 'ಎನ್ನ ಪುಣ್ಯವು ಗಾಳಿಗೊಡ್ಡಿದ ಸೊಡರಲಾ' 'ಉರಿಯ ರಾಜ್ಯವ ಸೂರೆಗೊಳಲೆಂದರಗು ಹರಿದವೊಲಾಯ್ತು,' 'ಸಿಡಿಲ ಶಿಕ್ಷಾಗುರುವೆನಲು ಮೊಳಗಿದನು ಕಲಿಭೀಮ,' 'ಧರಣೀ ನಾರಿಯನಿಬರಿಗೊಕ್ಕತನಪಿದ್ದಾರ ಸಂಗಡ ಉರಿಯ ಹಾಯಿದಳು,' 'ಕಂಗಳನು ಕಾರಿರುಳರಕ್ಕಸಿ ನುಂಗಿದಳು,' 'ಬೀಳುಕೊಂಡನು ಲಜ್ಜೆ, ಮಹಿಮೆಯ ಕೀಲು ಕಳಚಿತು'-ಇಂತಹ ರೂಪಕಗಳಿಗೆ ಕೊನೆಮೊದಲೆಲ್ಲಿ? ನಾರಣಪ್ಪನ ಉಕ್ತಿವೈಚಿತ್ರ್ಯ, ಮಾತಿನ ಗಾರುಡಿ, ಹಿತಮಿತವರ್ಣನೆಗಳ ಸೊಗಸು—

ಇವುಗಳನ್ನು ವರ್ಣಿಸಲು ಮಾತುಗಳಿಗೆ ಶಕ್ತಿ ಸಾಲದು.

ಕುಮಾರವ್ಯಾಸನು, ದಿವಂಗತ ಬಿ. ಎಂ. ಶ್ರೀಯವರು ಕುಮಾರವ್ಯಾಸಪ್ರಶಸ್ತಿಯ ಮುನ್ನುಡಿಯಲ್ಲಿ ಹೇಳಿರುವಂತೆ, 'ನಮ್ಮ ಕವಿಗಳಲ್ಲಿ ಹಿರಿಯ ತಲೆ, ಹಿರಿಯರಲ್ಲಿ ಹಿರಿಯ—ನಮ್ಮ ಸಾಹಿತ್ಯದ ಉತ್ತಮರತ್ನಗಳಲ್ಲಿ ನಾಯಕರತ್ನ.'

ಕುಮಾರವ್ಯಾಸನ ತರುವಾಯ ಹಲವು ಕನ್ನಡ ಕವಿಗಳು ಭಾರತ ರಚನೆಗೆ ಕೈಹಾಕಿದ್ದಾರೆ. ಕುಮಾರವ್ಯಾಸನು ಬರೆಯದೆ ಬಿಟ್ಟ ಭಾರತದ ಶಾಂತಿಪರ್ವದಿಂದ ಮುಂದಿನ ಏಳು ಪರ್ವಗಳನ್ನು ತಿಮ್ಮಣ್ಣಕವಿ (ಕ್ರಿ.ಶ. ೧೫೧೫) ಬರೆದಿದ್ದಾನೆ. ಚಾಟು ವಿಠಲನಾಥ (ಕ್ರಿ. ಶ. ೧೫೩೦)ನು ಒಂದು ಭಾರತವನ್ನು ಬರೆದನೆಂಬ ಪ್ರತೀತಿ ಇದೆ; ಆದರಲ್ಲಿ ಪೌಲೋಮ, ಆಸ್ತಿಕ ಪರ್ವಗಳು ಮಾತ್ರ ಈಗ ಉಪಲಬ್ಧವಾಗಿವೆ. ಸುಕುಮಾರ ಭಾರತಿ (ಕ್ರಿ. ಶ. ೧೫೫೦)ಯು 'ಚಾಯಣ ಭಾರತ' ವನ್ನು ಬರೆದಿದ್ದಾನೆ. ಶ್ರೀನಿವಾಸಕವಿ (ಕ್ರಿ. ಶ. ೧೭೦೦) ಭಾರತದ ಸ್ತ್ರೀಪರ್ವವನ್ನೂ, ಲಕ್ಷ್ಮಕವಿ (ಕ್ರಿ. ಶ. ೧೭೨೩) ಭಾರತದ ಮೊದಲ ಎಂಟು ಪರ್ವಗಳನ್ನೂ ಪರಮದೇವ (ಕ್ರಿ. ಶ. ೧೭೭೭) 'ತುರಂಗ ಭಾರತ'ವನ್ನೂ ರಚಿಸಿದ್ದಾರೆ. 'ಚಿತ್ರ ಭಾರತ'ವೆಂಬ ಒಂದು ಭಾರತವೂ ಕಳಲೆ ನಂಜರಾಜನು (ಕ್ರಿ. ಶ. ೧೭೪೦) ಬರೆದನೆಂದು ಪ್ರತೀತಿ ಇರುವ ಒಂದು ಭಾರತವೂ ಬಳಕೆಯಲ್ಲಿವೆ. ಆದರೆ ಇವೆಲ್ಲವೂ ಕುಮಾರವ್ಯಾಸ ಭಾರತದ ಇದಿರಿನಲ್ಲಿ ಸೂರ್ಯನ ಮುಂದೆ ಇಟ್ಟ ಸೊಡರುಗಳು.

### ಕುಮಾರ ವಾಲ್ಮೀಕಿ

ಕುಮಾರವ್ಯಾಸನು ಮಹಾಭಾರತವನ್ನು ಸಂಗ್ರಹಿಸಿ ಬರೆದಂತೆ ಕುಮಾರವಾಲ್ಮೀಕಿ ರಾಮಾಯಣ ಮಹಾಕಾವ್ಯವನ್ನು ಸಂಗ್ರಹಿಸಿ ಕನ್ನಡಿಸಿದ್ದಾನೆ. ಗದುಗಿನ ವೀರನಾರಾಯಣನು ಕುಮಾರವ್ಯಾಸನ ಇಷ್ಟದೇವತೆಯಾಗಿರುವಂತೆ ತೊರವೆಯ ನರಸಿಂಹನು ಕುಮಾರವಾಲ್ಮೀಕಿಯ ಇಷ್ಟದೈವ. ಅದು ಗದುಗಿನ ಭಾರತ, ಇದು ತೊರವೆಯ ರಾಮಾಯಣ. ಕುಮಾರವ್ಯಾಸ, ಕುಮಾರವಾಲ್ಮೀಕಿ—ಇಬ್ಬರು ಆಯ್ದುಕೊಂಡುದೂ ಭರತಖಂಡದ ಜನ ಪರಮಪವಿತ್ರವೆಂದು ಪರಿಗಣಿಸಿರುವ ಎರಡು ಮಹಾಕಾವ್ಯ

ಗಳನ್ನು. ಇಬ್ಬರೂ ಮೂಲದ ಮಹಾಕಾವ್ಯಗಳನ್ನು ಸಂಗ್ರಹಿಸಿ, ಭಾಮಿನಿ ಷಟ್ಪದಿಯಲ್ಲಿ ಬರೆದಿದ್ದಾರೆ. ಇಬ್ಬರ ಕಾವ್ಯಸೃಷ್ಟಿಯಲ್ಲಿಯೂ ಭಾಗವತದೃಷ್ಟಿ ಬಳಕೆಯಾಗಿದೆ; ಇಬ್ಬರೂ ತಮ್ಮ ಕಾವ್ಯಗಳ ನಾಯಕರನ್ನು ಭಗವಂತನೆಂದು ಭಾವಿಸಿ, ಭಕ್ತಿಯಿಂದ ಮೈದುಂಬಿ ಬರೆದಿದ್ದಾರೆ. ಈ ಇಬ್ಬರಿಗೂ ಇರುವ ಹೋಲಿಕೆ ಇಷ್ಟೆ. ಆದರೆ ಕುಮಾರವಾಲ್ಮೀಕಿ ಈ ಹೋಲಿಕೆಯನ್ನು ಮುಂದುವರಿಸಿ

ಸರಸ ವರ್ಣಕ ಕವಿಗಳಲಿ ಭಾ
ಸುರ ಕುಮಾರವ್ಯಾಸನೊಬ್ಬನು
ಎರಡನಯಲಾನೊಬ್ಬ

ಎನ್ನುತ್ತಾನೆ. ಮತ್ತೆ ಎಣಿಸಿದರೂ ಅದೇ ಮಾತಂತೆ. ಆದ್ದರಿಂದ ಕುಮಾರವ್ಯಾಸನು ಹೇಳಿಕೊಂಡಂತೆ ಈತನೂ 'ಮಿಕ್ಕಿನ ಬರಡು ಕವಿಗಳ ಲೆಕ್ಕಿಸುವನೇ ಕುವರವಾಲ್ಮೀಕಿ' ಎಂದು ಘೋಷಣೆಯನ್ನು ಮಾಡಿದ್ದಾನೆ. ಇವು ಒಂದಕ್ಕೊಂದು ಸಮಾನವಂತೆ! 'ಪೇಳದಿರೆರಡು ಕಾವ್ಯಕೆ ಮಿಕ್ಕ ಶಬ್ದಾಕ್ಷರ ದರಿದ್ರರ ಬಂಧಬಂಧುರ ರಸವಿವರ್ಜಿತರ'—ಎಂದು ಕೆಚ್ಚಿನಿಂದ ಇತರ ಕವಿಗಳನ್ನು ತೆಗಳುತ್ತಾನೆ. ಆತನ ಈ ನುಡಿಗಳಲ್ಲಿ ಕುಮಾರವ್ಯಾಸನನ್ನು ಕುರಿತು ಹೇಳುವುದಾದರೆ ಹದಿನಾರಾಣೆ ನಿಜ. ಆದರೆ ಕುಮಾರವಾಲ್ಮೀಕಿಗೆ ಅನ್ವಯಿಸಿದಾಗ ಅದೊಂದು ಉತ್ಪ್ರೇಕ್ಷೆಗೆ ಉದಾಹರಣೆಯಾಗುತ್ತದೆ, ಅಷ್ಟೆ. ದೊಡ್ಡವರ ಜೊತೆಯಲ್ಲಿ ತನ್ನ ಹೆಸರನ್ನೂ ಹೇಳಿಕೊಂಡು ವಿಜೃಂಭಿಸುವ ಸಾಮಾನ್ಯನಂತೆ ವ್ಯವಹರಿಸಿದ್ದಾನೆ, ಈತ.

ತೊರವೆಯ ರಾಮಾಯಣವು ಐದುಸಹಸ್ರಕ್ಕೂ ಹೆಚ್ಚು ಪದ್ಯಗಳನ್ನು ಒಳಗೊಂಡಿರುವ ಬೃಹತ್ಕಾವ್ಯ. ರಾಮಾಯಣದ ಆರು ಕಾಂಡಗಳಲ್ಲಿ ಐದು ಕಾಂಡಗಳ ಕಥೆ ಕಾವ್ಯದ ಪೂರ್ವಾರ್ಧದಲ್ಲಿ ನಿರೂಪಿತವಾಗಿದೆ. ಉಳಿದ ಅರ್ಧದಷ್ಟನ್ನೂ ಯುದ್ಧಕಾಂಡವೊಂದೇ ಆಕ್ರಮಿಸಿದೆ. ಈತನ ಭಾಷೆ ಸರಳ, ನಿರೂಪಣೆಯಲ್ಲಿ ನಿರರ್ಗಳವಾದ ಓಟವಿದೆ, ಶೈಲಿಯಲ್ಲಿ ಪ್ರಸಾದ ಗುಣವಿದೆ. ಕವಿಯು ಕುಮಾರವ್ಯಾಸನ ಉಗ್ರಾಣಕ್ಕೆ ಕನ್ನಹಾಕಿದ್ದಾನೆ, ಆದರಿಂದ ತುಷ್ಟಿ ಪುಷ್ಟಿಗಳನ್ನು ಪಡೆದಿದ್ದಾನೆ. ಆದರೆ ಅಲ್ಲಿನ ದರ್ಶನ ಧ್ವನಿಗಳು ಇಲ್ಲಿ ಇಲ್ಲ. ಈತನ ಕಾವ್ಯವಾಹಿನಿ ಸಮತಳ ಪ್ರದೇಶದಲ್ಲಿ ಜುಳುಜುಳು ನಿನಾದ

ದಿಂದ ಹರಿವ ಕಿರುದೊರೆಯೇ ಹೊರತು ಮಹಾನದಿಯಲ್ಲ. ಒಡವೆಯು ದಿವ್ಯಕಲೆಯನ್ನು ಪಡೆದಿಲ್ಲದಿದ್ದರೂ ಅದನ್ನು ಮಾಡಿದುದು ಬಂಗಾರದಲ್ಲಿ ಆದಾಗ, ಬಂಗಾರದ ಬೆಲೆಗೇನೂ ಲೋಪವಿಲ್ಲವಲ್ಲ? ಕವಿಯು ಮಹಾಕವಿ ಯಲ್ಲದಿದ್ದರೂ ಭಕ್ತಕವಿ. ವಾಲ್ಮೀಕಿಯು ಅದ್ವಿತೀಯನಾದ ಮಾನವ ಶ್ರೇಷ್ಠನನ್ನು ಶ್ರೀರಾಮನಲ್ಲಿ ಕಂಡಿದ್ದರೆ ಕುಮಾರವಾಲ್ಮೀಕಿಯು ಆತನಲ್ಲಿ ದೇವತ್ವದ ಆವಾಹನೆಯನ್ನು ಮಾಡಿದ್ದಾನೆ. ಈ ಕಥೆಯನ್ನು ಶಿವನು ಪಾರ್ವತಿಗೆ 'ಪರಮ ಮಂಗಳನಾಮ, ನಿರುಪಮ ನಿಗಮ ವಿಶ್ರಾಮ' ಎಂದುಹೇಳಿ ನಿರೂಪಿಸುತ್ತಾನೆ. ಆಕೆ 'ಪುಳುಕಿತರೋಮಹರುಷಿತೆಯಾಗಿ' ಕೇಳುತ್ತಾಳೆ. ಕುಮಾರವ್ಯಾಸನಂತೆ ಕುಮಾರವಾಲ್ಮೀಕಿಯೂ ತನ್ನ ಕಾವ್ಯ ದಲ್ಲಿ 'ಪರಮಭಕ್ತಿಯೊಳಾವನೊಂದಕ್ಷರವ ಕೇಳ್ದ ನರಂಗೆ ಪಾತಕ ಹರಿ ವುದು' 'ಕೊಡುವುದಚ್ಯುತಪದವ ಪರದಲಿ' ಎಂದು ಹೇಳಿದ್ದಾನೆ. ಆದ್ದ ರಿಂದ ಜನಸಾಮಾನ್ಯರು ಈತನ ಕಾವ್ಯ ಪಠಣದಿಂದ ಮೇಲ್ಮೆಯನ್ನು ಸಾಧಿ ಸುವುದರಲ್ಲಿ ಸಂದೇಹವಿಲ್ಲ. ಕುಮಾರವ್ಯಾಸನು ಶ್ರೀಕೃಷ್ಣನ ಹೆಸರನ್ನು ಎತ್ತಿ ಕೊಳ್ಳುತ್ತಲೆ ಮೈಮರೆಯುವಂತೆ ಕುಮಾರವಾಲ್ಮೀಕಿಯು ರಾಮನ ಅಥವಾ ಸೀತೆಯ ಹೆಸರಿನೊಡನೆ ಭಕ್ತಿಪರವಶನಾಗಿ ಹಾಡುತ್ತಾನೆ.

ಹನುಮಂತನು ಅಶೋಕವನದಲ್ಲಿದ್ದ ಸೀತೆಯನ್ನು ಕಂಡ. ಕವಿ ಹೇಳು ತ್ತಾನೆ—

ಮಂದಗಮನೆಯನಮಲತರ ಪೂ
ರ್ಣೇಂದುವದನೆಯ ಪೂರ್ವ ಹರಿಯರ
ವಿಂದಸದನೆಯ ಸಕಲ ಸುರಕುಲಶಕ್ತಿದೇವತೆಯ
ಇಂದು ಭಾಸ್ಕರ ಕಮಲಭವ ಸಂ
ಕ್ರಂದನಾದಿ ಸಮಸ್ತ ಸುರಮುನಿ
ವಂದಿತೆಯ ವರವಿಶ್ವಮಾತೆಯ ಕಂಡನಾ ಹನುಮ

* * * *

ಬಿಸಜಸಂಭವ ಜನಿತ ಜನನಿಯ
ಕುಸುಮ ಶರನಂಬಿಕೆಯ ಭುವನ
ಪ್ರಸರಭರಿತೆಯ ಪುಣ್ಯಚರಿತೆಯನಧಿಕ ಸುವ್ರತೆಯ

ಪಶುಪತಿ ಬ್ರಹ್ಮಾಮರೇಂದ್ರರ
ಶಶಿವದನೆಯರ ಭಾಗ್ಯಲಕ್ಷ್ಮಿಯ
ನಸದಳದ ಮಾಯಾವಿನೋದೆಯ ಕಂಡನಾ ಹನುಮ

ಕವಿಯು ಸೀತೆಯನ್ನು ರಾಜಕುಮಾರಿಯೆಂದು ಭಾವಿಸಿಲ್ಲ. ಆಕೆ ಸಾಕ್ಷಾತ್ ಲಕ್ಷ್ಮಿ; 'ಲೋಕದ ಮಹಾಮಾಯಾವಿನೋದೆ,' 'ವಿಶ್ವಮಾತೆ.' ಇನ್ನು ರಾಮನಂತೂ ಸರಿಯೆ ಸರಿ. 'ಜಾತಹಿತನು ಜನಿಸಿದನು ಖದ್ಯೋತ ಕುಲದಲಿ.' ಆತನು ಗರ್ಭದಲ್ಲಿರುವಾಗ 'ನಿಖಿಳ ದಿವಿಜ ಕದಂಬ ಬಂದೋಲೈಸುತಿರ್ದುದು ದಿವಸ ದಿವಸದಲಿ' ಹೀಗೆ ಅಲೌಕಿಕದ ಪ್ರಭಾವಳಯದಲ್ಲಿಯೇ ಮುಂದುವರಿಯುತ್ತದೆ, ಶ್ರೀರಾಮನ ಪಾತ್ರ. ಇಂತಹ ಅಪ್ರಾಕೃತ ಪಾತ್ರಗಳ ಪುಣ್ಯಚರಿತ್ರೆಯಾದುದರಿಂದ ಇದು ಜನ ಸಾಮಾನ್ಯರ ಹೃದಯಕ್ಕೆ ಇಂಪನ್ನು ತಂಪನ್ನೂ ಕೊಡಬಲ್ಲದು.

ಕುಮಾರವಾಲ್ಮೀಕಿ ಕುಮಾರವ್ಯಾಸ (ಕ್ರಿ. ಶ. ೧೪೩೦)ನನ್ನು ಹೊಗಳಿದ್ದಾನೆ. ಕುಮಾರವಾಲ್ಮೀಕಿಯನ್ನು ಬೊಬ್ಬೂರು ರಂಗಕವಿ (ಕ್ರಿ. ಶ. ೧೭೩೦) ಹೊಗಳಿದ್ದಾನೆ. ಆದ್ದರಿಂದ ಕವಿಯ ಕಾಲ ಆ ಎಲ್ಲೆಗಳ ಮಧ್ಯದ್ದು. ಕುಮಾರವ್ಯಾಸನ ನಿಜವಾದ ಹೆಸರು ನಾರಣಪ್ಪ ಎಂದು ಹೇಳುವಂತೆ, ಈ ಕವಿಯ ಹೆಸರನ್ನು ನರಹರಿ ಎಂದು ನಿರ್ದೇಶಿಸುತ್ತಾರೆ. ಈತನಿಗೆ 'ಕವಿರಾಜಹಂಸ'ನೆಂಬ ಬಿರುದಿದ್ದಿತೆಂದು ತಿಳಿದುಬರುತ್ತದೆ. ಈ ಕವಿಯು 'ಮೈರಾವಣ ಕಾಳಗ'ವನ್ನೂ ಬರೆದಿರುವುದಾಗಿ ಕವಿಚರಿತೆಕಾರರು ಹೇಳುತ್ತಾರೆ. ಇದನ್ನು ಒಪ್ಪದಿರುವ ಪಂಡಿತರೂ ಇದ್ದಾರೆ. 'ಇದಮಿತ್ಥಂ' ಎಂದು ಸ್ಥಾಪಿಸಲು ತಕ್ಕಷ್ಟು ಸಾಧನಗಳಿಲ್ಲ.

### ತಿಮ್ಮಣ್ಣ ಕವಿ

ಪದವಾಕ್ಯಪ್ರಮಾಣಜ್ಞನಾದ ಭಾಸ್ಕರ ಕವಿಯ ಮಗ ತಿಮ್ಮಣ್ಣ ಕವಿಯು ಕವಿ ಕುಮಾರವ್ಯಾಸನು ಬರೆಯದೆ ಬಿಟ್ಟ ಮಹಾಭಾರತದ ಉತ್ತರಭಾಗವನ್ನು—ಶಾಂತಿಪರ್ವವನ್ನು ಒಳಗೊಂಡ ಮುಂದಿನ ಏಳು ಪರ್ವಗಳನ್ನು—ಭಾಮಿನಿ ಷಟ್ಪದಿಯಲ್ಲಿ ಕನ್ನಡಿಸಿದ್ದಾನೆ. ಈತನು ವಿಜಯನಗರದ ಕೃಷ್ಣದೇವರಾಯ (೧೫೦೯-೧೫೨೯)ನ ಆಸ್ಥಾನಕವಿ. ರಾಜನು ಈತನನ್ನು ಕುರಿತು ಕುಮಾರವ್ಯಾಸನು ಬರೆಯದೆ ಬಿಟ್ಟ ಪರ್ವಗಳನ್ನು

ರಚಿಸುವಂತೆ ತಿಳಿಸಿ,

ಸುರನದಿಯು ಯಮುನಾತರಂಗಿಣಿ
ಬೆರಸಿ ಹರಿವಂದದಲಿ ಕವಿಕುಂ
ಜರ ಕುಮಾರವ್ಯಾಸನುರುವಾಕ್ಯಲಹರಿಯೊಡನೀಗ
ಸರಿಯೆನಿಸಿ ನೀ ಕೂಡಿಸೈ ಸುರು
ಚಿರ ಭವತ್ಕವಿತಾಪ್ರವಾಹವ

ಎಂದು ಹೇಳಿದನಂತೆ. ತಿಮ್ಮಣ್ಣಕವಿ 'ಹಸಾದ'ವೆಂದು ಹೇಳಿ ಗ್ರಂಥರಚನೆ ಮಾಡಿದನಂತೆ. ಗ್ರಂಥವೇನೊ ದೊಡ್ಡದೇ; ೩೭೩೬ ಪದ್ಯಗಳಿವೆ. ಪರ್ವಾಂತ್ಯದ ಗದ್ಯದಿಂದ ಈ ಗ್ರಂಥಕ್ಕೆ 'ಕೃಷ್ಣರಾಯ ಭಾರತ ಕಥಾ ಮಂಜರಿ' ಎಂಬ ಹೆಸರಿರುವಂತೆ ತಿಳಿದು ಬರುತ್ತದೆ. ಕವಿಗೆ 'ಕರ್ಣಾಟಕ ಕವಿಕುಲ ಸಾರ್ವಭೌಮ' ಎಂಬ ಬಿರುದೂ ಇರುವಂತೆ ತೋರುತ್ತದೆ. ಆದರೆ ಆ ಬಿರುದು ಆತನ ಕಾವ್ಯಸಾಮರ್ಥ್ಯಕ್ಕಿರಲಿಕ್ಕಿಲ್ಲ, ರಾಜರ ಕೃಪಾಕಟಾಕ್ಷದ ಪ್ರಭಾವವಿರಬೇಕು. ತಿಮ್ಮಣ್ಣಕವಿಗೆ ಕವಿಹೃದಯವಿದೆ: ಆದರೆ ಕುಮಾರವ್ಯಾಸನೊಡನೆ ಹೋಲಿಕೆಗೆ ನಿಲ್ಲುವಂತಹ ಮಹಾಕವಿಯಲ್ಲ ಆತ. ಕುಮಾರವ್ಯಾಸನ ಪ್ರತಿಭೆ ಕಲ್ಪನಾಶಕ್ತಿಗಳಾಗಲಿ ಪ್ರಾಸಾದಿಕವಾಣಿಯಾಗಲಿ ತಿಮ್ಮಣ್ಣಕವಿಯಲ್ಲಿ ಹುಡುಕುವುದು ಅವಿವೇಕ. ಆ ಸೂರ್ಯನ ಇದಿರಿನಲ್ಲಿ ಇದೊಂದು ಸೊಡರು, ಅಷ್ಟೆ. ಇದಲ್ಲದೆ ತಿಮ್ಮಣ್ಣಕವಿಯು ಆಯ್ದುಕೊಂಡಿರುವ ಕಥಾವಸ್ತು ರಸಭರಿತವಾದುದಲ್ಲ. ಅಲ್ಲಿ ಬರುವ ರಾಜರ ಅಥವಾ ಋಷಿಗಳ ಉಪಾಖ್ಯಾನಗಳಲ್ಲಿ ಲೌಕಿಕ ಅಥವಾ ಪಾರಲೌಕಿಕವಾದ ಧರ್ಮಜಿಜ್ಞಾಸೆ, ರಾಜನೀತಿ, ವೇದಾಂತ ವಿಚಾರ–ಇವೇ ಹೆಚ್ಚು. ಹೃದಯದ ರಸಸ್ಥಾನಗಳನ್ನು ಮಿಡಿಯುವ ಸನ್ನಿವೇಶಗಳು ಅಲ್ಲಿ ಅಪೂರ್ವ. ಇಂತಹ ನೀರಸಭಾಗವನ್ನು ಆಯ್ದುಕೊಂಡುದೇ ಅನ್ಯಾಯವೆಂದರೆ ಆ ಭಾಗವನ್ನು ಸಂಸ್ಕೃತದಿಂದ ನೇರವಾಗಿ ತೆಗೆದುಕೊಳ್ಳುವುದಕ್ಕೆ ಬದಲಾಗಿ ಕವಿಯು ತೆಲುಗು ಕವಿಗಳನ್ನು ಆಶ್ರಯಿಸಿದ್ದಾನೆ. ತೆಲುಗು ಚಂಪೂಭಾರತ ನನ್ನಯ್ಯ ಕವಿಯಿಂದ ಆರಂಭವಾಗಿ ತಿಕ್ಕಣ ಕವಿಯಿಂದ ಕೊನೆಯಾಗಿದೆ. ಅದು ಅತ್ಯಂತ ರಸಭರಿತವಾದುದೆಂಬುದರಲ್ಲಿ ಏನೂ ಸಂದೇಹವಿಲ್ಲ. ಆದರೆ ತಿಮ್ಮಣ್ಣ ಕವಿ ಸಂಸ್ಕೃತ ಆಕರವನ್ನು ಬಳಸಿಕೊಳ್ಳದೆ ಇದನ್ನು ಬಳಸಿ

ಕೊಂಡುದು ಆತನ ವ್ಯಕ್ತಿತ್ವವಿಕಸನದ ಅಭಾವಕ್ಕೆ ನಿದರ್ಶನವಾಗಿದೆ. ಆತನ ರಾಜ ಹೇಳಿದ್ದು ಸರಿ. ಕುಮಾರವ್ಯಾಸನ ಕಾವ್ಯ ದೇವಗಂಗೆ. ತಿಮ್ಮಣ್ಣಕವಿಯ ಕವಿತಾ ಪ್ರವಾಹ ಆದರೊಡನೆ ಸಂಗಮವಾದರೂ, ಪ್ರಯಾಗದ ಸಂಗಮದಂತೆ, ಪ್ರತ್ಯೇಕವಾಗಿಯೇ ಕಾಣಿಸುತ್ತದೆ; ಅದು ಧವಳ, ಇದು ಕಪ್ಪು.

# ಕುಮಾರವ್ಯಾಸಯುಗದ ವೈದಿಕ ಕವಿಗಳು

## ಚಾಟು ವಿಟ್ಠಲನಾಥ

ರಾಮಾಯಣ ಮಹಾಭಾರತಗಳಂತೆಯೇ ನಮ್ಮ ಜನರಿಗೆ ಅತ್ಯಂತ ಪ್ರಿಯವಾಗಿರುವ ಶುಕಮುನಿರಚಿತ ಭಾಗವತವನ್ನು ಕನ್ನಡಕ್ಕೆ ತಂದುಕೊಟ್ಟ ಕೀರ್ತಿ ಈತನದು. 'ಇದು ಸದಾನಂದಾಖ್ಯ ಯೋಗಿಯ ತೊದಲು ನುಡಿ'; 'ಗೋಪೀನಾಥನು ಮಂಗಳವನೀವನು ಸದಾನಂದಾಖ್ಯ ಮುನಿವರಗೆ' ಎಂದು ಕಾವ್ಯದ ಕೆಲವಡೆ ಈತನು ಹೇಳಿಕೊಂಡಿರುವುದರಿಂದ ಈತನ ನಿಜವಾದ ಹೆಸರು ಸದಾನಂದಯೋಗಿಯೆಂದು ಹೇಳಲು ಅವಕಾಶವಿದೆ. ಭಾರತವನ್ನು ಬರೆದ ನಾರಣಪ್ಪ 'ಕುಮಾರವ್ಯಾಸ'ನಾದಂತೆ, ರಾಮಾಯಣವನ್ನು ಬರೆದ ನರಹರಿ 'ಕುಮಾರವಾಲ್ಮೀಕಿ'ಯಾದಂತೆ, ಭಾಗವತವನ್ನು ಬರೆದ ಸದಾನಂದನು 'ನಿತ್ಯಾತ್ಮ ಶುಕಯೋಗಿ'ಎಂಬ ಬಿರುದಿನಿಂದ ಅಥವಾ ಕಾವ್ಯನಾಮದಿಂದ ವ್ಯವಹೃತನಾಗಿದ್ದಾನೆ. ಈ ಕಾವ್ಯಕರ್ತೃತ್ವದ ವಿಚಾರವಾಗಿ ಸಾಕಷ್ಟು ಭಿನ್ನಾಭಿಪ್ರಾಯವಿದೆ. ನಿತ್ಯಾತ್ಮನಾಥ, ವಿದ್ಯಾನಾಥ, ಸದಾನಂದಯೋಗಿ, ನಿರ್ವಾಣನಾಥ, ಚಾಟುವಿಟ್ಠಲನಾಥ—ಎಂಬ ಐದು ಬೇರೆ ಬೇರೆಯ ಕವಿಗಳು ಆ ಭಾಗವತದ ಬೇರೆಬೇರೆಯ ಭಾಗಗಳನ್ನು ಬರೆದಿರುವರೆಂದೂ ಅವರು ಐವರೂ ಸನ್ಯಾಸಿಗಳಾಗಿದ್ದು ನವನಾಥಸಂಥಕ್ಕೆ ಸೇರಿದವರೆಂದೂ ಶ್ರೀ ಮಾನ್ ಬೆಟಗೇರಿ ಕೃಷ್ಣಶರ್ಮರು ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯ (ಸಂ: ೧೨; ಸಂ ೩) ತಮ್ಮ ಲೇಖನವೊಂದರಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಶ್ರೀ ಮಾನ್ ಆರ್. ಎಸ್. ಮುಗುಳಿಯವರು 'ಭಾಗವತದ ಹತ್ತು ಸ್ಕಂಧಗಳನ್ನು ಆರಾಧ್ಯೇಂದ್ರ ಬರೆದನೆಂದೂ, ಹನ್ನೊಂದನೆಯ ಸ್ಕಂಧವನ್ನು ಸದಾನಂದಯೋಗಿ ಬರೆದನೆಂದೂ, ಹನ್ನೆರಡನೆಯ ಸ್ಕಂಧವನ್ನು ನಿರ್ವಾಣನಾಥ ಬರೆದನೆಂದೂ ತಿಳಿಯಲೂ ಆಧಾರವಿದೆ. ಇವರೆಲ್ಲರ ಕೃತಿಗಳನ್ನೂ ಒಟ್ಟುಗೂಡಿಸಿ ಸಂಗ್ರಹಗೊಳಿಸಿದ ಶ್ರೇಯಸ್ಸುಮಾತ್ರ ಚಾಟುವಿಟ್ಠಲನಾಥನಿಗೆ ಸಲ್ಲುತ್ತದೆ'ಎಂದು ಹೇಳುತ್ತಾರೆ. ಹನ್ನೆರಡುಸಹಸ್ರಕ್ಕೂ ಹೆಚ್ಚು ಪದ್ಯಗಳನ್ನು ಒಳಗೊಂಡ ಈ ಬೃಹತ್ಕಾವ್ಯದ

ಹೆಸರನ್ನು ಈಚಿನ ಯಾವ ಕನ್ನಡಕವಿಯೂ ಸ್ಮರಿಸಿಲ್ಲ. ಕನ್ನಡ ಭಾಗವತ ಕರ್ತನೂ ಪೂರ್ವಕವಿಗಳಾರನ್ನೂ ಸ್ಮರಿಸಿಲ್ಲ. ಆದ್ದರಿಂದ ಈತನ ಕಾಲವನ್ನು ನಿರ್ದಿಷ್ಟವಾಗಿ ನಿರ್ಧರಿಸಲು ಆಧಾರ ಸಾಲದು. ಚಾಟುವಿಟ್ಠಲನಾಥನೇ ಬರೆದುದೆಂದು ಹೇಳಲಾದ ಭಾರತವು ಕುಮಾರವ್ಯಾಸಭಾರತದಲ್ಲಿ ಬೈಬಿಟ್ಟಿರುವ ಪೌಲೋಮ ಮತ್ತು ಆಸ್ತೀಕಪರ್ವಗಳ ಕಥೆಯನ್ನು ಒಳಗೊಂಡಿದೆ. ಇದರಲ್ಲಿ ಕುಮಾರವ್ಯಾಸನ ಪ್ರಭಾವ ಸುಸ್ಪಷ್ಟವಾಗಿ ಗೋಚರವಾಗುತ್ತದೆ. ಆತನ ಪ್ರತಿಭೆ ಕಲ್ಪನಾಶಕ್ತಿಗಳು ಇಲ್ಲಿ ಕಿಂಚಿತ್ತಾದರೂ ಕಾಣಬರುವುದಿಲ್ಲವಾದರೂ ವ್ಯಾಕರಣವಿರೋಧವಾದ ಪ್ರಯೋಗಗಳು ಮಾತ್ರ ಹೇರಳವಾಗಿ ದೊರೆಯುತ್ತವೆ. ಕಾವ್ಯದೃಷ್ಟಿಯಿಂದ ಇಲ್ಲಿ ಗಮನಾರ್ಹವಾದುದು ಏನೂ ಇಲ್ಲ. ಕವಿಯು ಕುಮಾರವ್ಯಾಸನಿಗಿಂತಲೂ ಈಚಿಯವನೆಂಬುದು ನಿರ್ವಿವಾದವೆಂದು ತೋರುತ್ತದೆ. ಕವಿಯು ಭಾಗವತದಲ್ಲಿ ತನ್ನ ಗುರುಗಳಾದ ಅಚ್ಯುತಾರಣ್ಯಯತಿಗಳನ್ನು ಸ್ತೋತ್ರಮಾಡುವ ಸಂದರ್ಭದಲ್ಲಿ ವಿಜಯನಗರದ ಕೃಷ್ಣದೇವರಾಯ (೧೫೦೯–೧೫೨೯) ಮತ್ತು ಅಚ್ಯುತರಾಯ (೧೫೩೦–೧೫೪೨) ರನ್ನು ಹೆಸರಿಸಿರುವುದರಿಂದ ಈತನ ಕಾಲ ಕ್ರಿ. ಶ. ೧೫೩೦ ಎಂಬುದಾಗಿ ಕವಿಚರಿತೆಕಾರರು ನಿರ್ಧರಿಸಿದ್ದಾರೆ.

ಕವಿಯು ಭಾಗವತ ಕಾವ್ಯಸೃಷ್ಟಿಗೆ ಕೈಹಾಕಿರುವುದು 'ಅಖಿಳ ಭವ ರೋಗ ಹರವಿದು' ಎಂಬ ಕಾರಣದಿಂದ. ಇದು ಕನ್ನಡದಲ್ಲಿದ್ದರೂ ಸಂಸ್ಕೃತ ಭಾಗವತದಷ್ಟೇ ಪೂಜ್ಯವಾದ್ದು. 'ಕನ್ನಡದ ಕೃತಿಯೆಂದವಜ್ಞಾಪನ್ನರಾಗದಿರಕಟ ದರ್ಪಣ ಕನ್ನಡಿಯಿದೆಂದೆಂದಡಾವುದು ಕೊರತೆ?' ಎಂಬುದು ಆತನ ಪ್ರಶ್ನೆ. 'ಹರಿಗುಣಸ್ತುತಿ, ಹರಿಪರಾಯಣ ಶರಣಜನ ಸತ್ಕೀರ್ತಿ ಸಂಸ್ತುತಿ, ಹರಿಪದಾಂಬುಜ ಭಕ್ತಿ. ತತ್ಸಾಧನದ ವಿಸ್ತಾರ। ಹರಿನಿಜಜ್ಞಾನೋಪಲಾಲಿತ ಪರತರಾನಂದಾನುಭವ' ಇವನ್ನು ಒಳಗೊಂಡ ಹರಿಭಕ್ತಿ ಕೋಶ-ಇದು. ಕವಿಯು ತನ್ನ ಹೆಗ್ಗುರಿಯಾದ ಧರ್ಮನಿರೂಪಣೆಯನ್ನು ಇಲ್ಲಿ ಸಾಧಿಸಿ ಕೃತಕೃತ್ಯನಾಗಿದ್ದಾನೆ. ಆದರೆ ಕಾವ್ಯಗುಣದಲ್ಲಿ ಅದೇ ಬಗೆಯಾದ ಕೃತಕೃತ್ಯತೆಯನ್ನು ಪಡೆದಿರುವನೆಂದು ಹೇಳುವಂತಿಲ್ಲ. ಕವಿಯ ಕೃತಿರಚನೆಯೇನೋ ಸರಳವಾಗಿ ಸತ್ವಯುಕ್ತವಾಗಿದೆ; ನಿರೂಪಣೆಯಲ್ಲಿ ನಿರರ್ಗಳತೆಯಿದೆ. ಅಲ್ಲಲ್ಲಿ ಸುಂದರವಾದ ಸಮಯೋಚಿತವಾದ

ವರ್ಣನೆಗಳಿವೆ—ದೇವಕಿಯನ್ನು ಕೊಲ್ಲಹೊರಟ ಕಂಸನನ್ನು ಕುರಿತು ವಸುದೇವನು 'ಮುಳ್ಳುಕಾಲಲಿ ಮುರಿದಡಕಟಾ ಹುಲ್ಲ ಸುಡುವರೆ ?' ಎಂದು ಕೇಳುತ್ತಾನೆ. ದೇವಕಿ ಮಕ್ಕಳನ್ನು ಹೆತ್ತುದು 'ನೆರೆ ದಂಡಕ್ಕೆ ಧನವನು ಗಳಿಸುವಂತೆ!' ಮಹಾವಿಷ್ಣು ಶಿಶುರೂಪದಿಂದ ಜನಿಸಿದ; ಆತ 'ಶ್ರುತಿ ಶಿರಕೆ ದುರ್ಗಮವಾವನಂಘ್ರಿದ್ವಯದ ಸಂಸ್ಥಾನ' ಅಂತಹ ಮಹಿಮ; ಇಂದ್ರನು ಮಳೆಗರೆದಾಗ 'ಗೋಕುಲವೈದೆ ನೀರೊಳಗಿಟ್ಟ ಮೃತ್ತಿಕೆಯಂತೆ ನೆನೆದುದು ನಿಮಿಷಮಾತ್ರದಲಿ,' ಕೃಷ್ಣನನ್ನು ಕೊಲ್ಲಲೆಂದು ಬಂದ ಪೂತನಿ 'ದೂಡಿದೊರೆಯ ಕಠಾರಿಯಂತೆ ಕಠೋರಭಾವ'ದಲ್ಲಿದ್ದಳು. ಬಲರಾಮ ಕೃಷ್ಣರು 'ಭೂಮಿಭಾರಾಯಿತ ನೃಪಾನ್ವಯ ಧೂಮಕೇತುಗಳಾಗಿ'ಬೆಳೆಯುತ್ತಿದ್ದರು. ಅಕ್ರೂರನು ಕೃಷ್ಣದರ್ಶನಕ್ಕಾಗಿ ಕಾತರಿಸುತ್ತಾ 'ಮೇಣಾವ ಕಲ್ಪಾಂತರಕೆ, ಬೆಳಗಹುದಲ್ಪಪುಣ್ಯಂಗೆಂದು ಬಿಸುಸುಯ್ದ' ಜನರು ಸುಂದರರಾದ ಬಲರಾಮ ಕೃಷ್ಣರನ್ನು 'ಕಣ್ಣಲಿ ಮುಳುಗಿ ಮೊಗೆದೀಂಟಿದರು.' ಕಂಸವಧೆಯ ವೃತ್ತಾಂತವನ್ನು ಕೇಳಿ ಜರಾಸಂಧನು 'ಕಣ್ಣಲಿ ಮುಕ್ಕುಳಿಸಿದನು ಮಗಧಪತಿ ರೋಷಾಗ್ನಿಯುರವಣೆಯ.' ಹಲಧರನೊಡನೆ ಯುದ್ಧಕ್ಕೆ ನಿಂತ ಜರಾಸಂಧನ ಚಿತ್ರ ಇದು—'ಕೆತ್ತಿದವು ಮೀಸೆಗಳು, ಕಂಗಳು ಹೊತ್ತವರುಣಚ್ಛವಿಯನೈತಹ ಮತ್ಯುವಿನವೋಲಿದಿರುಗೊಂಡನು.' ಈ ವರ್ಣನಾ ಭಾಗಗಳನ್ನು ಓದುವಾಗ ಕುಮಾರವ್ಯಾಸನ ನೆನಪಾಗುವುದು ಸಹಜವಾಗಿಯೇ ಇದೆ. ಕನ್ನಡ ಭಾಗವತ ಕುಮಾರವ್ಯಾಸಭಾರತದಂತೆ ಭಾಮಿನೀಷಟ್ಪದಿಯಲ್ಲಿದೆ. ಆದರೆ ಕಾವ್ಯಗುಣದಲ್ಲಿ ಆತನಿಗೂ ಭಾಗವತಕಾರನಿಗೂ ಬಹು ಅಂತರ—ಹಾಲ್ಕುಡಿದ ನಾಲಗೆ ನೀರು ಚಪ್ಪರಿಸಿದಂತಾಗುತ್ತದೆ. ಕವಿಯ ಬೃಹದ್ಗ್ರಂಥದಲ್ಲಿ ಶ್ರೀಕೃಷ್ಣ ಚರಿತೆಯನ್ನು ಒಳಗೊಂಡ ಹತ್ತನೆಯ ಸ್ಕಂಧ–ಅದರಲ್ಲಿಯೂ ಕೃಷ್ಣನ ಬಾಲಲೀಲೆ, ರುಕ್ಮಿಣೀ ಕಲ್ಯಾಣ, ಕುಚೇಲೋಪಾಖ್ಯಾನ ಇತ್ಯಾದಿಗಳು ಹೃದಯ ಸ್ಪರ್ಶಿಯಾಗಿವೆ.

## ಲಕ್ಷ್ಮೀಶ

ಮಹಾಕವಿ ಪಂಪನಿಗೆ ರನ್ನ, ಮಹಾಕವಿ ಹರಿಹರನಿಗೆ ರಾಘವಾಂಕ ಜೋಡಿಯಾಗಿ ದೊರೆತಂತೆ ಮಹಾಕವಿ ಕುಮಾರವ್ಯಾಸನಿಗೆ ಲಕ್ಷ್ಮೀಶನ

ಜೋಡಿ ಒದಗಿದೆ. ಈ ಹೋಲಿಕೆ ಅವರ ಕಾವ್ಯಶಕ್ತಿಗಿಂತಲೂ ಹೆಚ್ಚಾಗಿ ಅವರ ಕವಿಕಾವ್ಯದೃಷ್ಟಿಗೆ ಸಂಬಂಧಿಸಿದುದು. ಕುಮಾರವ್ಯಾಸ ಮತ್ತು ಲಕ್ಷ್ಮೀಶ–ಇಬ್ಬರೂ ಭಾರತವನ್ನು, ಪಾಂಡವರ ಕಥೆಯನ್ನು–ಕಾವ್ಯವಸ್ತುವಾಗಿ ಸ್ವೀಕರಿಸಿದ್ದಾರೆ; ಇಬ್ಬರ ಕಥಾನಾಯಕನೂ ಶ್ರೀಕೃಷ್ಣ ; ಭಾರತ ಇತಿಹಾಸ ಈ ಇಬ್ಬರ ಕೈಲೂ ಕೃಷ್ಣಚರಿತಾಮೃತವಾಗಿ ಪರಿವರ್ತನಗೊಂಡಿದೆ. ಒಬ್ಬನದು ವ್ಯಾಸಭಾರತ, ಮತ್ತೊಬ್ಬನದು ಜೈಮಿನಿಭಾರತ–ಮೂಲದ ಈ ಸಂಸ್ಕೃತ ಗ್ರಂಥಗಳು ಕನ್ನಡದಲ್ಲಿ ಸ್ವತಂತ್ರ ಕೃತಿಗಳೆನ್ನುವಷ್ಟು ತಮ್ಮತನವನ್ನು ಸ್ಥಾಪಿಸಿಕೊಂಡಿವೆ. ಕುಮಾರವ್ಯಾಸ ತನ್ನ ಆರಾಧ್ಯದೈವವಾದ ಗದುಗಿನ 'ವೀರನಾರಯಣನೆ ಕವಿ, ಲಿಪಿಕಾರ ಕುವರವ್ಯಾಸ' ಎಂಬ ನಮ್ರತೆಯನ್ನು ಮೆರೆದಿದ್ದರೆ ಲಕ್ಷ್ಮೀಶನು ತನ್ನ ಸ್ವಾಮಿಯಾದ 'ಗೀರ್ವಾಣ ಪುರನಿಲಯ ಲಕ್ಷ್ಮೀವರಂ ತಾನೆ, ಸಂಗೀತ ಸುಕಲಾನಿಪುಣನು ವೀಣೆಯಿಂ ಗಾನಮಂ ನುಡಿಸುವಂದದೊಳೆನ್ನ ವಾಣಿಯಿಂ ಕವಿತೆಯಂ ಪೇಳಿಸಿದ' ಎಂದು ಹೇಳುತ್ತಾನೆ. ಇಬ್ಬರೂ ಹರಿಹರ ವಿಭೇದದ ಸುಳಿಗೆ ಸಿಕ್ಕದೆ ಸರ್ವಧರ್ಮ ಸಮನ್ವಯ ಬುದ್ಧಿಯನ್ನು ತಮ್ಮ ಕಾವ್ಯಗಳಲ್ಲಿ ಪ್ರದರ್ಶಿಸಿದ್ದಾರೆ. ಕಾವ್ಯಶಕ್ತಿಯಲ್ಲಿ ಅಜಗಜಾಂತರ ವ್ಯತ್ಯಾಸವಿದ್ದರೂ ಇಬ್ಬರೂ ಸಮಾನವಾಗಿಯೇ ಪಂಡಿತಪಾಮರ ರಂಜಕರಾಗಿ ಜನಪ್ರಿಯರಾಗಿದ್ದಾರೆ. ಇಬ್ಬರೂ ಒಂದೊಂದು ದೃಷ್ಟಿಯಿಂದ ಅಸದೃಶ ಕೀರ್ತಿಶಾಲಿಗಳಾಗಿದ್ದಾರೆ. ಕುಮಾರವ್ಯಾಸನ ಹಿಮಾಚಲಸದೃಶವಾದ ಪ್ರತಿಭೆ ಭಾಮಿನೀಷಟ್ಪದಿಯಲ್ಲಿ ಅಭಿವ್ಯಕ್ತವಾಗಿದ್ದರೆ, ಲಕ್ಷ್ಮೀಶನ ವಾರ್ಧಕಷಟ್ಪದಿಯಲ್ಲಿ ಅದ್ವಿತೀಯವಾದ ನಾದಮಾಧುರ್ಯ–ಷಟ್ಪದಗಳ ಝೇಂಕಾರ–ಕಂಡುಬರುತ್ತದೆ.

ಲಕ್ಷ್ಮೀಶನ ಕಾಲ ದೇಶಗಳ ವಿಚಾರ ಅನಿರ್ದಿಷ್ಟವಾಗಿದೆ. ಕವಿಯು ತನ್ನನ್ನು ಕುರಿತು ಹೇಳಿಕೊಂಡಿರುವಷ್ಟರಿಂದ ಆತನು ಅಣ್ಣಮಾಂಕನ ಮಗನಾದ ಲಕ್ಷ್ಮೀಶನೆಂದೂ, 'ಕವಿಚೂತವನ ಚೈತ್ರ' ನೆಂದು ಆತನಿಗೆ ಬಿರುದಿತ್ತೆಂದೂ, ದೇವಪುರದ ಲಕ್ಷ್ಮೀರಮಣನು ಆತನ ಆರಾಧ್ಯದೈವವೆಂದೂ, ನಮಗೆ ಗೊತ್ತಾಗುತ್ತದೆ. ಈ ಕಾವ್ಯದ ಮಧ್ಯದಲ್ಲಿ ಕೆಲವು ವೇಳೆ ಆತನು ದೇವಪುರ ಎಂಬುದಕ್ಕೆ ಸುರಪುರ ಎಂಬ ಪರ್ಯಾಯ ಪದವನ್ನು ಬಳಸುತ್ತಾನೆ. ಆದರಿಂದ ಆತನ ಊರು ಮೈಸೂರು ಸಂಸ್ಥಾನದ ಕಡೂರು ಬಳಿ

ಯಲ್ಲಿರುವ ದೇವನೂರೆ? ಅಥವಾ ರಾಯಚೂರಿನ ಬಳಿ ಇರುವ ಸುರಪುರವೆ? ಎಂಬ ಪ್ರಶ್ನೆ ಏಳುತ್ತದೆ. ಕಡೂರು ಬಳಿಯಿರುವ ದೇವನೂರೇ ಆತನ ಸ್ಥಳವಾಗಬೇಕೆಂದು ಬಹುಜನರ ಅಭಿಪ್ರಾಯ. ಗ್ರಂಥದಲ್ಲಿರುವ ಆಂತರಿಕ ಪ್ರಮಾಣಗಳಿಂದಲೂ ಇದು ನಿಜವೆನ್ನಿಸುತ್ತದೆ. ಯೌವನಾಶ್ವನ ಭದ್ರಾವತಿಯನ್ನು ಕವಿ ವರ್ಣಿಸಿರುವ ರೀತಿಯನ್ನು ನೋಡಿದರೆ ಆತನು ಅದನ್ನು ಕಣ್ಣಾರೆ ಕಂಡು ಅನುಭವಿಸಿರಬೇಕು. ಆ ವರ್ಣನೆಗೆ ಹೊಂದಿಕೊಳ್ಳುವಂತಹ ಮಲೆನಾಡು ಪ್ರದೇಶ ದೇವನೂರಿನ ಹತ್ತಿರದಲ್ಲಿ ಕಂಡುಬರುತ್ತದೆ. ಅಲ್ಲದೆ ಕವಿಯು ಸುರಪುರವೆಂಬ ಮಾತನ್ನು ಕ್ವಚಿತ್ತಾಗಿ ಬಳಸಿ, ದೇವಪುರವೆಂಬ ಮಾತನ್ನೇ ಮತ್ತೆ ಮತ್ತೆ ಬಳಸಿದ್ದಾನೆ. ಈ ಕಾರಣಗಳಿಂದ ಕವಿಯು ಹುಟ್ಟಿದೂರು ದೇವಪುರವೇ ಇರಬೇಕು. ಇನ್ನು ಆತನ ಕಾಲ ವಿಚಾರದಲ್ಲಿ ನಿರ್ದಿಷ್ಟವಾದ ಅಭಿಪ್ರಾಯವನ್ನು ಕೊಡುವುದು ಕಷ್ಟ. ನಂದೀಮಹಾತ್ಮ್ಯವನ್ನು ಬರೆದ ಗೋಪಕವಿ (ಕ್ರಿ.ಶ. ೧೬೦೦) ಆತನನ್ನು ಹೊಗಳುವುದರಿಂದ ಕವಿಯ ಕಾಲ ಕ್ರಿ. ಶ. ೧೬೦೦ಕ್ಕೆ ಹಿಂದಿನದೆಂಬುದು ನಿರ್ವಿವಾದ. ಆದರೆ ಎಷ್ಟು ಹಿಂದಿನವನೆಂದು ಹೇಳುವುದಕ್ಕೆ ತಕ್ಕ ಆಧಾರಗಳಿಲ್ಲ. ಕವಿಯು ಮಾಡಿರುವ ಭದ್ರಾವತಿಯ ವರ್ಣನೆಯಿಂದ ವಿಜಯನಗರದ ವೈಭವ ಕಣ್ಣಿಗೆ ಕಟ್ಟುವಂತಿರುವುದರಿಂದ ಕವಿಯು ವಿಜಯನಗರದ ಅರಸರ ಕಾಲದವನಿರಬಹುದೆಂದು ಶ್ರೀಮಾನ್ ತಿರುಮಲೆ ತಾತಾಚಾರ್ಯಶರ್ಮರು ಅಭಿಪ್ರಾಯಪಡುತ್ತಾರೆ. (ಜೈಮಿನಿ ಭಾರತ ಸಂಗ್ರಹದ ಮುನ್ನುಡಿ) ಅದರಲ್ಲಿಯೂ ಆತನು ಕೃಷ್ಣದೇವರಾಯನ ಕಾಲದವನೇ ಆಗಿರಬೇಕೆಂದು ಅವರ ಊಹೆ. 'ಕೃಷ್ಣರಾಯನ ದಿಗ್ವಿಜಯ'ದಲ್ಲಿ ಅರ್ಜುನನ 'ದಿಗ್ವಿಜಯ'ದ ಛಾಯೆಯನ್ನು ಕಾಣುವುದು ಅಷ್ಟೇನೂ ಕಷ್ಟವಲ್ಲವೆಂದು ತೋರುತ್ತದೆ' ಎಂಬ ಹೇಳಿಕೆಯನ್ನೂ 'ಲಕ್ಷ್ಮೀಶನು ವರ್ಣಿಸುತ್ತಿರುವ ದ್ವಾರಕಾಪುರವು ವಿಜಯನಗರದ ಚಿತ್ರವನ್ನೂ, ಕೃಷ್ಣನ ಒಡ್ಡೋಲಗವು ಕೃಷ್ಣದೇವರಾಯನ ನವರಾತ್ರಿಯುತ್ಸವದ ರಾಜಸಭೆಯನ್ನೂ ನಮ್ಮ ಮುಂದೆ ಇಡುತ್ತವೆಯೆಂದು ಹೇಳ

---

[1] ತಿ. ತಾ. ಶರ್ಮರವರ ಜೈಮಿನಿ ಭಾರತ ಸಂಗ್ರಹ: ಮುನ್ನುಡಿ (೩. ಆ. ೧೯೩೯) ಪುಟ ೧೩.

ಬಹುದು"[1] ಎಂಬ ಹೇಳಿಕೆಯನ್ನೂ ಸ್ವೀಕರಿಸುವುದಾದರೆ ಲಕ್ಷ್ಮೀಶನ ಕಾಲ ಸುಮಾರು ಕ್ರಿ. ಶ. ೧೫೫೦ ಎಂದಾಗುತ್ತದೆ.

ಲಕ್ಷ್ಮೀಶನ 'ಜೈಮಿನಿ ಭಾರತ' ವು ನಮ್ಮ ಹಿಂದಿನ ತಲೆಮಾರಿನಲ್ಲಿ ಅತ್ಯಂತ ಜನಪ್ರಿಯವಾದ ಕಾವ್ಯವಾಗಿತ್ತು. ನಮ್ಮ ಜನರ ಕನ್ನಡ ಪಾಂಡಿತ್ಯಕ್ಕೆ ಇದೇ ಒರೆಗಲ್ಲಾಗಿತ್ತು. 'ಜೈಮಿನಿ ಭಾರತ' 'ರಾಜಶೇಖರ ವಿಲಾಸ'-ಗಳನ್ನು ಓದಿದವನೇ—ಅವನ್ನು ಓದಿ, ಸ್ವಾರಸ್ಯವಾಗಿ ಅರ್ಥ ಹೇಳಬಲ್ಲವನೇ—ಅಂದಿನ ವಿದ್ಯಾದಿಗ್ಗಜ. ಹೀಗೆ ಇದು ಅತ್ಯಂತ ಜನಪ್ರಿಯವಾಗಿದ್ದುದಕ್ಕೆ ಹಲವಾರು ಕಾರಣಗಳಿವೆ. ಕವಿ ಹೇಳುತ್ತಾನೆ—

ಪುಣ್ಯಮಿದು ಕೃಷ್ಣಚರಿತಾಮೃತಂ, ಸುಕವೀಂದ್ರ
ಗಣ್ಯಮಿದು, ಶೃಂಗಾರರಸಕುಸುಮತರು ತುರುಗಿದಾ
ರಣ್ಯಮಿದು, ನವರಸಪ್ರೌಢಿ ಲಾಲಿತ್ಯ ನಾನಾ ವಿಚಿತ್ರಾರ್ಥಂಗಳ
ಗಣ್ಯಮಿದು, ಶಾರದೆಯ ಸಮ್ಮೋಹನಾಂಗ ಲಾ
ವಣ್ಯಮಿದು, ಭಾವಕರ ಕಿವಿಮೊಡವಿಗೊದಗಿದ ಹಿ
ರಣ್ಯಮಿದು, ಭೂತಳದೊಳೆನೆ ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯರಚನೆ

ಕವಿಯ ದೃಷ್ಟಿಯಲ್ಲಿ ಇದು ಪುಣ್ಯಕರವಾದ 'ಕೃಷ್ಣಚರಿತಾಮೃತ'. ಇದನ್ನು ಓದಿ ಜನ ಉದ್ಧಾರವಾಗಲೆಂಬುದು ಆತನ ಆಶಯ. ಜನರು ಈ ಕಾವ್ಯದಲ್ಲಿ ಅತಿಶಯವಾದ ಆಸಕ್ತಿಯನ್ನು ತಾಳಿದುದೂ ಇದೇ ಕಾರಣದಿಂದಲೇ. ಲಕ್ಷ್ಮೀಶ ಕವಿಯು ಕುಮಾರವ್ಯಾಸನಂತೆಯೇ ಸಮಯ ಸಿಕ್ಕಿದಾಗಲೆಲ್ಲಾ ಮಹಾವಿಷ್ಣುವಿನ ಪೂರ್ಣಾವತಾರವಾದ ಶ್ರೀಕೃಷ್ಣನನ್ನು ಅನನ್ಯ ಭಕ್ತಿಯಿಂದ ಸ್ತೋತ್ರ ಮಾಡುತ್ತಾನೆ. ಎಲ್ಲೆಲ್ಲಿಯೂ ಆತನ ಹಿರಿಮೆ ಭಕ್ತವಾತ್ಸಲ್ಯಗಳ ಕಲ್ಯಾಣ ಗುಣವರ್ಣನೆಯೇ. ಯುದ್ಧ ಭೂಮಿಯಲ್ಲಿ ಸುಧನ್ವನು ಶ್ರೀಕೃಷ್ಣನನ್ನು ಕಂಡ :—

ಅತಸೀ ಕುಸುಮಗಾತ್ರನಂ ಕಮಲನೇತ್ರನಂ
ಸ್ಮಿತರುಚಿರ ಶುಭರದನನಂ ಚಾರುವದನನಂ
ಧೃತಮೃಗಮದೋಲ್ಲಸತ್ ಸುಲಲಾಟನಂ ಮಣಿಕಿರೀಟನಂ ಕಂಬುಗಳದ

---

[1] ತ. ಸು. ಶಾಮರಾಯರ ಜೈಮಿನಿ ಭಾರತ ಸಂಗ್ರಹ: ಮುನ್ನುಡಿ (ತಿ. ತಾ. ಶರ್ಮ) ಪುಟ ೧೧.

ಅತುಲ ತುಲಸೀ ಮಾಲನಂ ರಮಾಲೋಲನಂ
ಧೃತ ಕೌಸ್ತುಭೋದ್ಭಾಸನಂ ಪೀತವಾಸನಂ
ನುತ ಸಮಸ್ತಾಭರಣಂ ಪುಣ್ಯಚರಣನಂ ಕಲಿಸುಧನ್ವಂ ಕಂಡನು

ಕಂಡೊಡನೆಯೇ ಆತನ ಬಾಯಿಂದ ಭಗವಂತನ ಸ್ತೋತ್ರ ಹೊಳೆಯಾಗಿ ಹರಿದು ಬಂತು—

ಜೀಯ ಜಗದಂತರಾತ್ಮಕ ಸರ್ವಶಕ್ತಿಕನ್ಯ
ಜೀಯ ಶುದ್ಧಾತ್ಮಯ ನಿರಂಜನ ನಿರಾಭರಣ
ಜೀಯ ನಿನ್ನೊಳಗೀ ಸಮಸ್ತಮಧ್ಯಸ್ತವಾಗಿದೆ ನೀನೆ ಸತ್ಯರೂಪ
ಜೀಯ ನಾರಾಯಣ ಮುಕುಂದ ಮಾಧವ ಕೃಷ್ಣ
ಜೀಯ ಚಕ್ರಿಯೆ ಪೀತವಾಸ ಲಕ್ಷ್ಮೀಲೋಲ
ಜೀಯ ಸರ್ವಸ್ವತಂತ್ರನೆ ಬಿಡಿಸು ಸಂಸಾರಪಾಶದಿಂದೆನ್ನನೆಂದು

ವಿಷ್ಣುಸ್ತೋತ್ರದಷ್ಟೇ ಹೃದಯಸ್ಪರ್ಶಿಯಾದ ಶಿವಸ್ತೋತ್ರವೂ ಶಕ್ತಿ ಸ್ತೋತ್ರವೂ ಈತನಲ್ಲಿ ಕಂಡುಬರುತ್ತದೆ. ಒಂದೇ ಉಸಿರಿನಲ್ಲಿ ಹರಿಹರರಿಬ್ಬರನ್ನೂ ಸ್ತೋತ್ರಮಾಡುವುದೂ ಆತನಲ್ಲಿ ಸರ್ವಸಾಮಾನ್ಯ. ಹರಿ ಹರ ವಿಭೇದ ಆತನಲ್ಲಿ ಭಯಂಕರವಾದ ಪಾಪ. ಅರ್ಜುನನು ಸುಧನ್ವನೊಡನೆ ಕಾಳಗವಾಡುತ್ತಾ, ತನ್ನ ಎರಡು ಬಾಣಗಳು ವ್ಯರ್ಥವಾಗಲು, ಮೂರನೆಯದರಿಂದ 'ಇವನ ಶಿರವನು ರೂಥಿಯಿಂದರಿಯದೊಡೆ ಹರಿಹರ ವಿಭೇದಮಂ ಮಾಡಿ ನಿಂದಿಸಿದವನ ಗತಿಯಾಗಲೆನಗೆ' ಎಂದು ಪ್ರತಿಜ್ಞೆ ಮಾಡುತ್ತಾನೆ. ತನ್ನ ಕಾವ್ಯಕ್ಕೆ ಫಲಶ್ರುತಿಯನ್ನು ಹೇಳುವಾಗ 'ಹರಿಹರಾರ್ಚನೆಯ ಸುಕೃತಂಗಳಾವವು' ಎಂದು ಕವಿ ಹೇಳುವುದನ್ನು ಕೇಳಿದಾಗ ಕವಿಯ ದರ್ಶನ ನಮಗೆ ಅರ್ಥವಾಗುತ್ತದೆ ಇದರಿಂದಲೇ ಈತನ ಕಾವ್ಯ ಜಾತಿ ಮತಗಳ ಭೇದಕ್ಕೆ ಅವಕಾಶವಿಲ್ಲದಂತೆ ಎಲ್ಲರಿಗೂ ಪ್ರಿಯವಾಗಿದೆ.

ಲಕ್ಷ್ಮೀಶನ ಕಾವ್ಯ ಪಂಡಿತ ಪಾಮರರಿಗೆ, ಆಬಾಲವೃದ್ಧರಿಗೆ ಅತ್ಯಂತ ಪ್ರಿಯವಾಗಿರುವುದು ಅದರಲ್ಲಿರುವ ಕಥೆಗಳಿಂದ. ಕವಿಯು ಸರಸ್ವತಿಯನ್ನು ಕುರಿತು 'ಕಾವ್ಯಮಿದು ಭುವನದೊಳ್ ಸಕಲ ಜನರಿಂದ ಸುಶ್ರಾವ್ಯಮಪ್ಪಂತೆನ್ನ ವದನಾಬ್ಜದಲ್ಲಿ ನೀನೇ ವ್ಯಾಪಿಸಿರ್ದಮಲ ಸುಮತಿಯಂ

ತಾಯೆನಗೆ ತಾಯೆ ನಗೆಗೂಡಿ ನೋಡಿ' ಎಂದು ಪ್ರಾರ್ಥಿಸಿದ. ತಾಯಿ ಸರಸ್ವತಿ 'ತಥಾಸ್ತು' ಎಂದು ಆತನನ್ನು ಅನುಗ್ರಹಿಸಿದಳೆಂದು ತೋರುತ್ತದೆ. ಆತನು ಅದ್ಭುತಕಲಾವಿದನಾಗಿ, ಕತೆಗಾರನಾಗಿ ತನ್ನ ಇಷ್ಟಾರ್ಥ ಸಿದ್ಧಿಯನ್ನು ಪಡೆದಿದ್ದಾನೆ. ಯವ್ವನಾಶ್ವ, ನೀಲಧ್ವಜ, ಚಂಡಿ, ಸುಧನ್ವ, ಪ್ರಮೀಳೆ, ಬಭ್ರುವಾಹನ, ಮಯೂರಧ್ವಜ, ಚಂದ್ರಹಾಸ, ಬಕದಾಲ್ಭ್ಯ, ಸೀತಾದೇವಿ—ಕಾವ್ಯದ ಆದಿಯಿಂದ ಅಂತ್ಯದವರೆಗೂ ಕಥೆಯಮೇಲೆ ಕಥೆಯನ್ನು ಒಳಗೊಂಡ ಒಂದು ಕಥಾಸರಿತ್‌ಸಾಗರ, ಲಕ್ಷ್ಮೀಶನ 'ಜೈಮಿನಿ ಭಾರತ'. ಕಥೆಯ ಆರಂಭ, ಬೆಳವಣಿಗೆ, ಮುಕ್ತಾಯಗಳಲ್ಲಿ ಅದೆಂತಹ ಕಲಾ ಕೌಶಲ, ಆತನದು. 'ಇನ್ನೊರೆವೆನಾಲಿಸಾದೊಡೆ ಪಾರ್ಥ' ಎಂದು ನೇರವಾಗಿ ಕಥೆಯನ್ನು ಆರಂಭಿಸಿ, ಹೆಜ್ಜೆ ಹೆಜ್ಜೆಗೂ ಓದುಗರ ಕುತೂಹಲವನ್ನು ಕೆರಳಿಸುತ್ತಾ, ಈಟಿಯ ಎಸುಗೆಯಂತೆ ಅವಿರಾಮಶೀಲವಾಗಿ ಸಾಗಿ, ಮುಕ್ತಾಯವನ್ನು ಮುಟ್ಟುತ್ತಾನೆ. ಉದ್ದಾಲಕನೆಂಬ ಬ್ರಾಹ್ಮಣ 'ಕಾಲ ಕಾಲದ ಜಪಾನುಷ್ಠಾನ ಪೂಜೆಗಳಿಗೆ ಸಹಾಯಕಳಾಗಲೆಂದು ಚಂಡಿಯನ್ನು ಮದುವೆಯಾದ. ಆದರೆ ಅವಳು 'ಎಳ್ಳನಿತು ನಿನ್ನ ಮಾತಂ ಕೇಳ್ವಳೆಂದೆಣಿಕೆಗೊಳ್ಳದಿರ್' ಎಂದು ಚಂಡಿ ಹಿಡಿಯಲು, ಪಾಪ, ಆ ಬ್ರಾಹ್ಮಣನ ಸ್ಥಿತಿ 'ಮುಳ್ಳಿಡಿದ ಮರನೇರಿದಂತಾದುದು.' ಈ ವಿರಸದಾಂಪತ್ಯದ ದುಸ್ಥಿಯನ್ನು ನೋಡಿ ಕೌಂಡಿನ್ಯ ಋಷಿ ಮರುಕದಿಂದ 'ನಿನ್ನ ಇಷ್ಟಕ್ಕೆ ಪ್ರತಿಕೂಲವಾದುದನ್ನೇ ಅವಳಿಗೆ ಹೇಳು' ಎಂದು ಬುದ್ಧಿ ಹೇಳಿದ. ಉದ್ದಾಲಕ ಈ ಉಪದೇಶದಂತೆ ನಡೆದು ಸುಖವಾಗಿದ್ದ. ಒಂದು ದಿನ ತಂದೆಯ ವೈದೀಕ ಬಂತು. ಆ ದಿನ ಬ್ರಾಹ್ಮಣ ಹೆಂಡತಿಯೊಡನೆ 'ನಾಳೆ ಪೈತೃಕಮದಂ ನಾಡಿದಲ್ಲದೆ ಮಾಣೆನು, ಕದ್ದು ತಹೆನಥಮಧಾನ್ಯವ್ರೀಹಿ ಶಾಕಮಂ........ಪೇಳ್ದು ಬಹೆನ ಪಾತ್ರಂಗೆ' ಎಂದ. ಚಂಡಿ ಅದಕ್ಕೆ ಅವಕಾಶಕೊಡುವುದಿಲ್ಲವೆಂದಳು. ಸಕಾಲದಲ್ಲಿ ಶ್ರಾದ್ಧಮಾಡುವುದಿಲ್ಲ, ವಸ್ತ್ರದಕ್ಷಿಣೆಗಳನ್ನು ಬ್ರಾಹ್ಮಣರಿಗೆ ಕೊಡುವುದಿಲ್ಲ—ಇತ್ಯಾದಿಯಾಗಿ ಹೇಳಿ, ಹೆಂಡತಿಯಿಂದ ತನ್ನ ನಿಜವಾದ ಅಪೇಕ್ಷೆಯಿದ್ದುದನ್ನೆಲ್ಲಾ ಅವನು ನೆರವೇರಿಸಿಕೊಂಡ. ಆದರೆ ಆಕಸ್ಮಾತ್ ಮೈಮರೆತು ಆತ ಪಿತೃಪಿಂಡವನ್ನು ಮಡುವಿನಲ್ಲಿ ಹಾಕುವಂತೆ ಹೇಳಿದ; ಅವಳು ಅದನ್ನು ಎತ್ತಿ ಬೀದಿಗೆಸೆದಳು. ರೋಸಿಹೋದ ಬ್ರಾಹ್ಮಣ ಅವಳನ್ನು

ಕಲ್ಲಾಗೆಂದು ಶಪಿಸಿ ಹೊರಟುಹೋದ. ಕವಿಯು ಕಥೆಯನ್ನು ಎಷ್ಟು ಸಂಗ್ರಹವಾಗಿ, ಸಾರವತ್ತಾಗಿ, ರಸಭರಿತವಾಗಿ ಹೇಳುತ್ತಾನೆ! ಕಥೆಯು ಉದ್ದಕ್ಕೂ ಹಾಸ್ಯದ ಹೊಳೆಯನ್ನು ಹರಿಸುತ್ತಿದ್ದವನು ಮುಕ್ತಾಯದಲ್ಲಿ ಎಂತಹ ಅನಿರೀಕ್ಷಿತವಾದ ನಿಷ್ಠುರ ಘಟನೆಯನ್ನು ಓದುಗರ ಮುಂದೆ ಇಡುತ್ತಾನೆ! ತಾಯಿ ಸರಸ್ವತಿ 'ನಗೆಗೂಡಿ ನೋಡಿದ್ದಾಳೆ,' ಕವಿಯ ಕಡೆ.

ಜೈಮಿನಿ ಭಾರತವು ವೀರರಸಪ್ರಧಾನವಾದ ಕಾವ್ಯ. ಭಾರತದಲ್ಲಿ ಆದ ಬಂಧುವಧೆಯಿಂದ 'ಅನಿಲ ಸಂಚಾರವೊಂದಿನಿತಿಲ್ಲದುರಿವ ಕಡುವೇಸಗೆಯ ಬಿಸಿಲಿಂದೆ ಬಸವಳಿದ ಕೋಮಲ ರಸಾಲದಂತೆ' ಬಾಡಿದ ಮುಖವುಳ್ಳ ಧರ್ಮರಾಯನನ್ನು ವೇದವ್ಯಾಸರು ದೋಷನಿವಾರಣೆಗಾಗಿ ಅಶ್ವಮೇಧಯಾಗವನ್ನು ಕೈಕೊಳ್ಳುವಂತೆ ಪ್ರೇರೇಪಿಸಿದರು. ಆ ಯಾಗದ ಕುದರೆ ಒಂದು ವರ್ಷ ಭೂಮಂಡಲವನ್ನು ಸ್ವೇಚ್ಛೆಯಾಗಿ ತಿರುಗುತ್ತಿರುವಾಗ, ಅದನ್ನು ಹಿಡಿದು ಕಟ್ಟಿದ ಅತಿರಥ ಮಹಾರಥರನ್ನು ಅರ್ಜುನನು ಯುದ್ಧದಲ್ಲಿ ಸೋಲಿಸಿ, ಅಣ್ಣನ ಯಜ್ಞವನ್ನು ಸಾಂಗಗೊಳಿಸಿದನು. ಇದು 'ಜೈಮಿನಿ ಭಾರತ'ದ ಕಥಾವಸ್ತು. ಆದ್ದರಿಂದ ನಾವು ಇಲ್ಲಿ ಯುದ್ಧದಮೇಲೆ ಯುದ್ಧಗಳು ನಡೆಯುತ್ತಾ ಹೋಗುವುದನ್ನು ಕಾಣುತ್ತೇವೆ. ಕವಿಯು ಪ್ರತಿಭಾಶಾಲಿಯಾದುರಿಂದ ಈ ಯುದ್ಧವರ್ಣನೆಗಳನ್ನು ಸಾಕಷ್ಟು ವೈವಿಧ್ಯಮಯವಾಗಿ ಮಾಡಿದ್ದಾನೆ. ಅದೇನು ಪಟುಭಟರ ಸಿಂಹನಾದ, ಅದೇನು ರಥಗಳ ಚೀತ್ಕಾರ, ಅದೇನು ಆನೆ ಕುದುರೆಗಳ ಬೃಂಹಿತ ಹೇಷಿತಗಳು, ಅದೇನು ಮಂತ್ರಾಸ್ತ್ರಗಳ ಮಾರ್ಮೊಳಗು! 'ಜೈಮಿನಿ ಭಾರತ' ವೆಂದರೆ ಅದೊಂದು ಯುದ್ಧ ವಿದ್ಯೆಯ ವಿಶ್ವಕೋಶ. ತಮ್ಮ ಸ್ತ್ರೀಧನ ಗೋಧನಗಳ ರಕ್ಷಣೆಗಾಗಿ ಕೋಟೆಕೊತ್ತಲಗಳನ್ನು ಕಟ್ಟಿಕೊಂಡು, ಸದಾ ಕದನದಲ್ಲಿ ತೊಡಗಿರಬೇಕಾಗಿದ್ದ ಕನ್ನಡ ಕಲಿಗಳು ಈ ಗ್ರಂಥವನ್ನು ಮೆಚ್ಚಿದುದು ಸಹಜವಾಗಿಯೇ ಇದೆ. ಲಕ್ಷ್ಮೀಶನು ಉತ್ತರ ಕುಮಾರನನ್ನು ಕೂಡ ಸಂಗ್ರಾಮಶೂರನನ್ನಾಗಿ ಮಾಡಬಲ್ಲ ಮಾತಿನ ಮೋಡಿಯುಳ್ಳವನು. 'ತಲೆ ಬೀಳಲಟ್ಟೆಗಳು ಕಾದುವವು, ನೆಲಕುರುಳಿ ತಲೆಗಳೆದ್ದಾಡುವವು, ಕೈದುಗಳ ನಿಲುಕುವುವು ಖಂಡಿಸಿದ ತೋಳ್ಗಳ್, ಉರೆ ಕಡಿದ ಕಾಲ್ಗಳ್ ಮುಂದಕಡಿಯಿಡುವುವು' ಇಂತಹ ರಣರಂಗದ ಚಿತ್ರ ಎಷ್ಟು ಭೀಷಣರಮ್ಯವಾಗಿದೆ! ಆಧುನಿಕ ನಾಗರಿಕತೆಯ ಆಕ್ರಮಣಕ್ಕೆ ಸಿಕ್ಕಿ

ನೆತ್ತರಿನ ಕಾವನ್ನು ನೀಗಿಕೊಂಡಿರುವ ಇಂದಿನ ನಮ್ಮ ಜನಾಂಗ ಕೂಡ ಈ ಕಾವ್ಯಪಠನೆಯಿಂದ ಕೆರಳಿದ ಕೇಸರಿಗಳಾದಾರು ;

ಲಕ್ಷ್ಮೀಶನ ಕಾವ್ಯದ ಅರ್ಧದಷ್ಟು ಭಾಗವೇ ಯುದ್ಧವರ್ಣನೆಗಾಗಿ ಮೀಸಲಾಗಿರುವುದು ಕಾವ್ಯವಸ್ತುವಿನ ದೃಷ್ಟಿಯಿಂದ ಸಹಜವಾಗಿಯೇ ಇದೆ. ಆದರೆ ಕವಿಯು ವೀರನಾಗಿರುವಷ್ಟೇ ರಸಿಕನೂ ಆಗಿದ್ದಾನೆ. ವಿಶ್ವಮೋಹಕವಾದ ಶೃಂಗಾರರಸವನ್ನು ನಿರೂಪಿಸುವಲ್ಲಿ ಆತನು ಓದುಗರನ್ನು ಮೈಮರಸುತ್ತಾನೆ, ಹರ್ಷಪುಳಕಿತರನ್ನಾಗಿ ಮಾಡುತ್ತಾನೆ. ಒಮ್ಮೊಮ್ಮೆ ಆತನ ಸ್ತ್ರೀರೂಪವರ್ಣನೆ ಗಾಂಭೀರ್ಯದ ಎಲ್ಲೆಯನ್ನು ಮೀರಿತೇನೊ ಎನ್ನಿಸಬಹುದು; ವೇಶ್ಯಾವಾಟಿಯನ್ನೋ ರತಿಕ್ರೀಡೆಯನ್ನೊ ವರ್ಣಿಸುವಲ್ಲಿ ಆತನ ರುಚಿಶುದ್ಧಿಗೆ ಪ್ರಶ್ನಾರ್ಥಕ ಚಿಹ್ನೆ ಇದಿರಾಗಬಹುದು. ಆದರೆ ಸಾಮಾನ್ಯವಾಗಿ ಆತನ ಸ್ತ್ರೀವರ್ಣನೆ ಮನೋಜ್ಞವಾಗಿರುತ್ತದೆ. ಕುಂತಳ ನಗರದ ರಾಜಕುಮಾರಿ ಚಂಪಕಮಾಲಿನಿ ಮಂತ್ರಿಕುಮಾರಿಯಾದ ವಿಷಯೆಯೊಡನೆ ಉದ್ಯಾನವನಕ್ಕೆ ಬಂದು, 'ಅಂಗಜನ ಸೋಕ್ಷಾನೆಗಳ ತೆರದೊಳು' ಜಲಕ್ರೀಡೆಯಾಡಿ, ಅನಂತರ ಸಖಿಯರೊಡನೆ ಸರೋವರದ ಪಾವಟಿಗೆಗಳ ಮೇಲೆ ನಿಂತಿದ್ದಾಳೆ.

ಕೂಲವನಡರ್ದು, ನಸೆದುಂಗದೊಳ್ ಪತ್ತಿದ ದು
ಕೂಲದೊಳಿರಲ್ಕೆ, ತಾಪಸರ ದೃಢಮತಿಗೆ ಪ್ರತಿ
ಕೂಲ ಕೃತಿಗಳೊ, ಮೋಹನದ ರಸದೊಳಾರ್ದ್ರತೆಯನಾಂತ ಚೆಲ್ವಿನ ಕಣೆಗಳೊ
ಸಾಲ ಮಣಿಮಯದ ಸೋಪಾನದೊಳ್ ನಿಲಿಸಿರ್ದ
ಸಾಲಭಂಜಿಕೆಗಳೊ, ವಿಚಿತ್ರಮೆನೆ ರಂಜಿತ ರ
ಸಾಲ ಪಲ್ಲವಪಾಣಿ ಪಾದತಳದಬಲೆಯರ ರೂಪಗಳ್ ಕಣ್ಗೆಸೆದುವು ||

ಕೆಲವುವೇಳೆ ಆತನ ವರ್ಣನೆಯಲ್ಲಿ ಪ್ರತಿಭೆಗಿಂತ ಪಾಂಡಿತ್ಯಕ್ಕೇ ಹೆಚ್ಚು ಪ್ರಾಧಾನ್ಯ ದೊರೆಯುವುದುಂಟು. 'ಗುರುಕುಚದ ಭರಣಿ, ಸುಂದರಗಜಾರೋಹಿಣಿ, ಮದನಕೇಳಿರಸಾರ್ದ್ರೆ' ಹೀಗೆ ಭರಣಿ, ರೋಹಿಣಿ, ಆರ್ದ್ರೆ— ಇತ್ಯಾದಿ ನಕ್ಷತ್ರಗಳ ಹೆಸರು ಬರುವಂತೆಯೋ, 'ಕಮಲದಳ ನಯನ, ಕಾಳಿಯಮಥನ, ಕಿಸಲಯೋಪಮಚರಣ, ಕೀಶಪತಿಸೇವ್ಯ' ಹೀಗೆ ಕಕಾರದ ಕಾಗುಣಿತ ಕ್ರಮವಾಗಿ ಬರುವಂತೆಯೋ ಪದ್ಯಗಳನ್ನು ರಚನೆಮಾಡುವ

ಗೀಳು ಆತನ ಬೆನ್ನು ಹತ್ತುತ್ತದೆ. 'ಎತ್ತಿಬಹ ಸತ್ತಿಗೆಯ ವೊತ್ತಂಗಳೆತ್ತಲುಂ' ಎಂಬಂತಹ ಪ್ರಾಸಗಳನ್ನು ಬಳಸುವುದರಲ್ಲಿಯೂ ಆತನು ಚತುರ. ಸಮಕಾಲಿಕವಾದ ಜನಾಭಿರುಚಿಯನ್ನು ಇವು ಪೂರೈಸುತ್ತಿದ್ದವೆಂದು ತೋರುತ್ತದೆ. ಶಬ್ದಾಡಂಬರ ಶಬ್ದಚಮತ್ಕಾರಗಳಿಗೆ ಮಾರುಹೋಗುವ ಪ್ರಾಕೃತ ಮನಸ್ಸುಗಳನ್ನು ತಣಿಸಬಲ್ಲ ವಿಕೃತಿಯನ್ನೂ ಕವಿ ಸಾಕಷ್ಟು ರಚಿಸಿದ್ದಾನೆ. ಅದರಂತೆಯೇ ರಸಜ್ಞರನ್ನೂ ತಣಿಸಬಲ್ಲ ಸನ್ನಿವೇಶಗಳೂ ಇಲ್ಲಿ ಸಾಕಷ್ಟಿವೆ. 'ಲೋಕೋ ಭಿನ್ನರುಚಿರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ' ಎಂಬ ಕೀರ್ತಿ ನಾಟಕ ಸಾಹಿತ್ಯಕ್ಕೆ ಅನ್ವಯಿಸುವಂತೆ ಲಕ್ಷ್ಮೀಶನ ಕಾವ್ಯಕ್ಕೂ, ತನ್ನದೇ ಆದ ರೀತಿಯಲ್ಲಿ ಅನ್ವಯಿಸುತ್ತದೆ. ಲಕ್ಷ್ಮೀಶನು ಸೃಷ್ಟಿಸಿ ನಿಲ್ಲಿಸಿರುವ ಸುಂದರ ಶೃಂಗಾರ ಚಿತ್ರವೊಂದನ್ನು ನೋಡಿ: ಅಶ್ವಮೇಧದ ಕುದುರೆ ಚಂಪಕಾಪುರಕ್ಕೆ ಬಂದಿತು. ರಾಜನಾದ ಹಂಸಧ್ವಜನು ಅದನ್ನು ಕಟ್ಟಿಹಾಕಿದ. ಅರ್ಜುನನು ಆ ರಾಜನಮೇಲೆ ಯುದ್ಧಕ್ಕೆ ನಿಂತ. ರಾಜನ ಮೋಹದ ಕುಮಾರನಾದ ಸುಧನ್ವನು ಅರ್ಜುನನನ್ನು ಇದಿರಿಸಲು ಸೈನ್ಯ ಸಮೇತನಾಗಿ ಹೊರಟ. ಆತನನ್ನು ತಾಯಿತಂದೆಗಳು ಹರಸಿದರು. ಅವನ ತಂಗಿಯಾದ ಕುವಲೆ ಅಣ್ಣನಿಗೆ ಆರತಿ ಎತ್ತಿ, ವೀಳಯವಿತ್ತು, ಬೀಳ್ಕೊಟ್ಟಳು. ಸುಧನ್ವನು ತನ್ನ ಅಂತಃಪುರಕ್ಕೆ ಬಂದ., ಮಡದಿಯಿಂದ ಬೀಳ್ಕೊಳ್ಳಲು. 'ಪ್ರಭಾವತಿಯೆನಿಸಿದ ಅವನ ರಾಣಿ ಸುಶ್ರೋಣಿ, ಸರ್ಪವೇಣಿ' ಆತನನ್ನು ದೂರದಿಂದ ಕಂಡು 'ಪೊಂದಟ್ಟೆಯೊಳ್ ಸಂಪಗೆಯ ಪೂವನು, ಸರಸ ಪರಿಮಳ ಗಂಧ ಕರ್ಪೂರ ವೀಳೆಯವನ್ನು' ತೆಗೆದುಕೊಂಡು 'ಅಂಗಜನ ಜಯಸಿರಿ ತಾನೆನಲ್' ಅವನ ಹತ್ತಿರಕ್ಕೆ ಬಂದಳು. ಅಂದು ಚತುರ್ಥಸ್ನಾತಳಾದ ಆ ಹೆಣ್ಣು ಒರೆಯುಗಿದ ಕಠಾರಿಯಂತೆ ತೊಳಗಿ ಬೆಳಗುತ್ತಿದ್ದಾಳೆ. ಕವಿ ಅವಳ ಸೊಬಗನ್ನು ವರ್ಣಿಸುತ್ತಾನೆ.—

ಚಂದ್ರಮಂಡಲ ಸದೃಶವದನದೆಳನಗೆಯ ನವ
ಚಂದ್ರಿಕೆಯೆನಲ್ ಮೇಲುದಿನ ದುಕೂಲಂ ಮೆರೆಯೆ
ಚಂದ್ರತಿಲಕದ ರಾಗಮುಂ ಚಿತ್ತದನುರಾಗಮುಂ ಸೂಚಿಪಂತೆ ಸೊಗಸೆ
ಇಂದ್ರನೀಲದ ಮಣಿಯ ಮಿರುಗುವ ಲಲಿತಕಾಂತಿ
ಸಾಂದ್ರಮಾದವೊಲೆಸೆವಳಕ ಪಾಶದಿಂದೆ ನಯ
ನೇಂದ್ರಿಯವನುರೆ ಕಟ್ಟಿ ಕೆಡಪದಿರಳೆಂಬಿನಂ ರಂಜಿಸಿದಳಾ ಮೃಗಾಕ್ಷಿ॥

ಅವಳು ಮುಡಿದ ಮಲ್ಲಿಗೆ, ಅವಳ ಎಳನಗೆ, 'ನುಡಿದಾಗ ಹೊಳೆವ ಹಲ್ಲು, ಅವಳ ಕಡೆಗಣ್ಣು, ಕಂಠದ ಮುತ್ತಿನಹಾರ, ಉಟ್ಟ ಬಿಳಿಯ ಪಟ್ಟೆಯಸೀರೆ- ಎಲ್ಲವೂ ಸೇರಿ ಅವಳು' ಚಂದ್ರಕಾಂತದಿಂ ನಿರ್ಮಿಸಿದ ಪುತ್ಥಳಿಯ, ಹಾಗೆ ಇದ್ದಾಳೆ. ಕೈಲಿ ಅವಳು ಹಿಡಿದಿರುವ ಹೊಂದಟ್ಟೆಯಲ್ಲಿರುವ ಸಂಪಗೆ ಹೂಗಳು ಅವಳ ಮೈಬಣ್ಣಕ್ಕೆ ಜೋಡಿಯಾಗಬಲ್ಲವೆ? ಎಂದು ಪ್ರಶ್ನಿಸುವಂತೆ ನಿಂತಿದ್ದ ಅವಳನ್ನು ಸುಧನ್ವನು 'ಕಡೆಗಣ್ಣೊಳೊಯ್ಯನೀಕ್ಷಿಸಿ ನಗುತೆ. ಸರಸ ಪರಿಮಳ ನವ್ಯ ಕುಸುಮಂಗಳಂ ಕೊಂಡು' ಯುದ್ಧಕ್ಕೆ ಹೋಗಿಬರಲು ಅನುಮತಿಯನ್ನು ಬೇಡಿದ. ಆಕೆ ಹೇಳಿದಳು—'ಸಮರಕುದ್ಯುಕ್ತನಪ್ಪಾತಂಗೆ ಸಂತಾನಮಿಲ್ಲದಿರಲಪ್ಪುದೆ?' ಎಂದು. ಆದರೆ ಆಗಲೆ ಸಮರಭೇರಿ ಮೊಳಗುತ್ತಿದೆ. ಯುದ್ಧಕ್ಕೆ ಹೋಗುವುದು ತಡವಾದರೆ, ರಾಜದಂಡ. ಸುಧನ್ವ ಏನು ಮಾಡಬೇಕು? 'ಕ್ರಮವನರಿಯದಳೆ ನೀನ್? ಎನಗೆ ಸೈರಿಸಲಳವೆ? ಗಮನಕೊಲಿಮೊಗೆಂದು ಗಲ್ಲಂ ಪಿಡಿದು ಕಮಲಾಕ್ಷಿಯಂ ಮುದ್ದುಗೈದ.' ಗಂಡನ ಸೋಂಕಿನಿಂದ ಆ ಹೆಣ್ಣು ಮೈಮರೆತಳು. ಆತನನ್ನು ಭದ್ರವಾಗಿ ಆಲಂಗಿಸಿಕೊಂಡಳು.

ಪ್ರಿಯನ ತನು ಚಂದನಮಹೀಜಮಂ ಸುತ್ತಿದ ಫ
ಣಿಯೋ, ವಲ್ಲಭಾಂಗತಾಲಸ್ತಂಭಮಂ ತೊಡ
ರ್ದುಯುಗಶರಕರಿಯ ಸುಂಡಿಲೊ, ಕಾಂತಕಾಯ ಬಲವಂ
ಬಂಧಿಸಿದ ಮದನನ
ಜಯಪಾಶಮೋ, ರಮಣದೇಹ ಕಲ್ಪದ್ರುಮಾ
ಶ್ರಯದ ಕೋಮಲಲತೆಯೊ ಪೊಸತಾದುದೆಂಬಂತೆ
ನಿಯನನಪ್ಪಿದ ಹರಿಣಲೋಚನೆಯ ನಳಿತೋಳ್ಗಳೆಸೆದುವತಿ
ಗಾಢದಿಂದ

ಇದರಿಂದ ಸುಧನ್ವನು ಯುದ್ಧಭೂಮಿಗೆ ಹೋಗುವುದು ತಡವಾಗಿ ಆತನು ಕಠೋರವಾದ ರಾಜಶಾಸನಕ್ಕೆ ಗುರಿಯಾಗಬೇಕಾಯಿತು. ಇದನ್ನು ಅರಿತಾಗ ರಾಜಕುಮಾರಿಯ ಆಲಿಂಗನವನ್ನು ಕವಿ ವರ್ಣಿಸಿರುವ ರೀತಿ ಅರ್ಥಪೂರ್ಣವಾಗುತ್ತದೆ.

ಸರಸ್ವತಿಯ ಕೃಪೆಯನ್ನು ಬೇಡುವಂದು ಕವಿ 'ತಾಯೆ ನಗೆಗೂಡಿ

ನೋಡಿ' ಎಂದು ತಾನೆ ಬೇಡಿರುವುದು? ಆಕೆಯ ಕೃಪೆಯಿಂದ ಕವಿಗೆ ನಕ್ಕು ನಗಿಸುವ ಶಕ್ತಿ ಯಥೇಚ್ಛವಾಗಿದೆ. ಚಂಡಿಯ ಕಥೆಯಲ್ಲಿ ಕವಿಯ ಈ ಶಕ್ತಿ ನಮಗೆ ತಕ್ಕಮಟ್ಟಿಗೆ ಅರ್ಥವಾಗಿದೆ. ಆದರೆ ಅಲ್ಲಿನ ಹಾಸ್ಯದ ಹರಿಗೋಲು ಹಾದು ಹೋಗುತ್ತಿರುವುದು 'ಕಣ್ಣೀರಿನ ಕಡಲಿನ ಮೇಲೆ' ಅಲ್ಲದಿದ್ದರೂ ವಿಷಾದದ ತೆರೆಗಳಮೇಲೆ. ಆದರೆ ಭೀಮನು ಶ್ರೀಕೃಷ್ಣನನ್ನು ನೋಡಲು ಹೋದ ಒಂದು ಸಂದರ್ಭ ಹಗುರವಾದ ಮನಸ್ಸಿನಿಂದ ಹೊಟ್ಟೆ ಹುಣ್ಣಾಗುವಂತೆ ನಾವು ನಗಲು ತಕ್ಕ ಸನ್ನಿವೇಶವನ್ನು ಕಲ್ಪಿಸಿಕೊಟ್ಟಿದೆ. ಭೀಮಸೇನ ಈಗ ದ್ವಾರಕೆಗೆ ಬಂದ ಸಮಯದಲ್ಲಿ ಶ್ರೀಕೃಷ್ಣ 'ಷಡ್ರಸಾನ್ನದಾರೋಗಣೆಯೊಳಿರುತಿರ್ದನು.' ದೇವಕಿ ಯಶೋದರೆಯರು ಬಡಿಸುತ್ತಿರುವ ಶಾಲ್ಯೋದನ, ಸೂಪ, ಘೃತ, ಭಕ್ಷ್ಯ, ಪಾಯಸ, ಪರಡಿ, ಮಧು, ಶರ್ಕರಾಮಿಷ, ಪಳಿದ್ಯ, ಸೀಕರಣೆ, ಶಾಕ, ತನಿವಣ್ಣುಗಳು, ರಸ ರಸಾಯನ, ಸಾರ್ಗಳು, ಉಪ್ಪುಗಾಯ್, ಬಾಳಕ, ಕಚ್ಚಡಿ, ಹಾಲು, ಮೊಸರು,— ಇವುಗಳನ್ನು ಸವಿಯುತ್ತಾ, ಕೂರ್ತಮಡದಿ ಸತ್ಯಭಾಮೆಯೊಡನೆ ಸರಸವಾಡುತ್ತಿದ್ದಾನೆ, ಆತ. ಈ ರಸನಿಮಿಷದಲ್ಲಿ ಬಂದ ಭೀಮನನ್ನು ದೂರದಿಂದಲೇ ಕಂಡ ಶ್ರೀಕೃಷ್ಣ. ಆ ಭಾವನೊಡನೆ ಸ್ವಲ್ಪ ಸರಸವಾಡಬೇಕೆನ್ನಿಸಿತು. ಬಾಗಿಲು ಕಾಯುವವಳಿಗೆ ಆತನು ಅಪ್ಪಣೆಕೊಟ್ಟ. ಅವಳು ಭೀಮನೊಡನೆ 'ಆರೋಗಣೆಯ ಸಮಯ. ಒಳಪೋಗುವಡೆ ಔಚಿತ್ಯವಲ್ಲ' ಎಂದು ಅವನನ್ನು ಬಾಗಿಲ ಬಳಿಯಲ್ಲೆ ತಡೆದಳು. ಊಟದ ಸಮಯದಲ್ಲಿ ತನ್ನನ್ನು ಊಟಕ್ಕೆ ಆಹ್ವಾನಿಸದೆ ಆಳುಗಳಿಂದ ತಡೆಸಿದುದಕ್ಕಾಗಿ ಭೀಮನಿಗೆ ಭೀಮಕೋಪ ಬಂದುದು ಕೇವಲ ಸಹಜ. ಕೆರಳಿ ಕೆಂಡವಾದ ಅವನು 'ಆರೋಗಣೆಯ ಸಮಯಮಾರ್ಗೆ? ಭೂತಂ ಪೊಯ್ದುದಾರ ನೀ ಮನೆಯೊಳಗೆ? ಇಂತೀಗಳೇತಕೆ ಮೌನಂ? ಆರುಮಿಲ್ಲವೆ ಪೊರೆಯೊಳಿಹರೆ?..ಆರೆನ್ನನಿಂತು ತಡೆಸಿದರ್? ಆಯ್ತೆ ದುರ್ಭಿಕ್ಷಂ? ಊರೊಳ್ ಬೆಳೆಯದೆ ಧಾನ್ಯಂ? ಕರೆಯದೇ ವೃಷ್ಟಿ? ನಾರಿಯುರಸಿಬರಂ ಕಟ್ಟಿಕೊಳಲೇಕೆ?' ಎಂದು ಅಬ್ಬರಿಸಿದ. ಅವನ ಗರ್ಜನೆ ಕೃಷ್ಣನಿಗೆ ಕೇಳಿಸಿತು. ಅವನು ರುಕ್ಮಿಣಿ ಸತ್ಯಭಾಮೆಯರ ಕಡೆ ನೋಡಿ ನಗುತ್ತಾ ಢರ್‍ರೆಂದು ತೇಗಿದ. ಆ ತೇಗು, ಒಳಗಿನಿಂದ ಬರುತ್ತಿದ್ದ ಸವಿತಿಂಡಿಗಳ ಕಂಪು ಭೀಮನ ಜಠರಾಗ್ನಿ

ಯನ್ನು ಹೊತ್ತಿಸಿ. ಅವನ ಸಮತೆಯನ್ನು ದೂರಮಾಡಿದವು. ಆತನು ಕೃಷ್ಣನ ಕರುಳುಕರ್ಳಿಗೂ ನೀರು ಬಿಡುವವನಂತೆ

ಬಿಡದೆ ಕಳವಿಂದೆ ಲೋಗರ ಮನೆಗಳಂ ಪೊಕ್ಕು
ತುಡುತಿಂದವನ ಭೋಜನಕೆ ವ್ಯಪ್ಪಾನ್ನವಾ
ದೊಡೆ ಕೆಲಬಲಂಗಳಂ ನೋಡುವನೆ? ಗೋವಳಂಗರಸುತನ
ಮಾದ ಬಳಿಕ।
ಪೊಡವಿಯುಂ ಕಂಡು ನಡೆವನೆ? ಮುಳಿದು ಮಾವನಂ
ಬಡಿದವಂ ನಂಟರನರಿವನೆ? ಮೊಲೆಗೊಟ್ಟಳಸು
ಗುಡಿದವಂ ಪುರುಷಾರ್ಥಿಯಾದಪನೆ?

ಎಂದು ನಿಂದೆಯ ನುಳಿಗರೆದ, ಮತ್ತೆ ಮತ್ತೆ 'ದೇವತನವಂ ಬಿಟ್ಟು ನರನಾದವಂಗೆ ಬಳಿಕ ಅವ ಗೌರವಮಿಹುದು? ಇವಂ ನಾಚುವನೆ?' ಎಂದು ಗುಡುಗಿದ. ಶ್ರೀಕೃಷ್ಣನು ಏನೂ ಅರಿಯದವನಂತೆ ಒಳಗಿನಿಂದಲೆ, 'ಅನಿಲಜಂ ಆವಾಗ ಬಂದಂ? ಇತ್ತ ಕರೆ. ತಡೆದಳಾವಳ್?" ಎಂದು ಹೇಳಿದ. ಭೀಮನು ಆತನನ್ನು ಕಾಣುತ್ತಲೆ 'ದೇವ, ನಿಮ್ಮರ್ಜುನನ ಸಲುಗೆ ನಮಗುಂಟೆ? ಸಂಭಾವಿಸುವರಿಲ್ಲೆಮ್ಮನಿಲ್ಲಿ. 'ಎಂದು ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದ. ಆದರೆ ಆಕಂಠಪರಿಪೂರ್ತಿಯಾಗಿ ರಸಕವಳ ಬೀಳುತ್ತಲೆ ಭೀಮನ ಕೋಪವೆಲ್ಲ ಮಾಯವಾಯಿತು.

ಕವಿಯು ಭೀಮನ ಚಿತ್ರವನ್ನು ಎಷ್ಟು ಸಹಜವಾಗಿ, ಸಜೀವವಾಗಿ ಚಿತ್ರಿಸಿದ್ದಾನೆ! ಉಳಿದ ಪಾತ್ರಗಳೂ ಅಷ್ಟೆ. ಕಥೆಯ ಕೇಂದ್ರದಲ್ಲಿರುವ ಶ್ರೀಕೃಷ್ಣನ ಪಾತ್ರದಿಂದ ಹಿಡಿದು ಪಂಚಪಾಂಡವರು, ದ್ರೌಪದಿ, ವೃಷಕೇತು, ಭಾರತದ ಮಹಾವೀರರು—ಎಲ್ಲ ಪಾತ್ರಗಳೂ ಸಜೀವವಾಗಿ, ಸಮಕಾಲಿಕ ಸಮಾಜದಿಂದ ಎದ್ದು ಬಂದಿರುವಂತೆ ಚಿತ್ರಿತರಾಗಿದ್ದಾರೆ. ಮಾನವರೂಪಿನಿಂದ ಅವತರಿಸಿರುವ ಭಗವಂತನಾದ ಶ್ರೀಕೃಷ್ಣನು ಅಲೌಕಿಕವಾದ ಮಹತ್ತ್ವವುಳ್ಳವನಾದರೂ ಲೋಕದ ವ್ಯವಹಾರಕ್ಕೆ ಅಪೋಹವನ್ನು ತರುವುದಿಲ್ಲ. ತನಗಿಂತಲೂ ಹಿರಿಯನಾದ ಧರ್ಮರಾಯನಲ್ಲಿ ಆತನಿಗೆ ಆದರ, ಗೌರವ; ಬಹುಶಃ ಸಮವಯಸ್ಕನಾದ ಭೀಮನಲ್ಲಿ ಸದರ, ಸಲಿಗೆ, ಸರಸ; ಕಿರಿಯನಾದ ಅರ್ಜುನನಲ್ಲಿ ಪ್ರೀತಿ, ಭಕ್ತಳಾದ ದ್ರೌಪದಿಯಲ್ಲಿ

ವಾತ್ಸಲ್ಯ. ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರು ಈ ಪಾತ್ರವನ್ನು ಕುರಿತು 'ಜೈಮಿನಿಭಾರತದ ಕೃಷ್ಣನ ಪಾತ್ರವು ಊರ ಯಜಮಾನರಲ್ಲಿ ಇತರರಿಗಿಂತ ಹೆಚ್ಚಿನ ತಾಳ್ಮೆಯಿಂದ, ಹಿರಿತನದಿಂದ ನಡೆದುಕೊಳ್ಳುತ್ತಿದ್ದ ಮುಖಂಡನೊಬ್ಬನ ಚಿತ್ರವೆಂಬಂತೆ ಕಾಣುತ್ತದೆ'[1] ಎಂದು ಹೇಳಿರುವ ಮಾತು ಲಕ್ಷ್ಮೀಶನ ಲೋಕಾನುಭವಕ್ಕೆ ಹಿಡಿದ ಸೊಡರಿನಂತಿದೆ. 'ಸಾಹಿತ್ಯವು ಜೀವನದ ಪ್ರತಿಬಿಂಬ' ಎಂಬ ಹೇಳಿಕೆಯನ್ನು ಕವಿ ಸಾರ್ಥಕಗೊಳಿಸಿದ್ದಾನೆ, ತನ್ನ ಪಾತ್ರ ಸೃಷ್ಟಿಯಲ್ಲಿ. ಸುತ್ತುಮುತ್ತಿನ ಜನಜೀವನದಲ್ಲಿ ಕಾಣುತ್ತಿದ್ದ ವ್ಯಕ್ತಿಗಳು ಕವಿಯ ಪ್ರತಿಭಾಗಂಗೆಯಲ್ಲಿ ಮಿಂದು,ಪುನೀತರಾಗಿ ಕಾಣಿಸಿಕೊಂಡಿದ್ದಾರೆ, ಆತನ ಕಾವ್ಯದಲ್ಲಿ.

ಕುಮಾರವ್ಯಾಸನಂತೆ ಲಕ್ಷ್ಮೀಶನೂ ತನ್ನ ಕಾವ್ಯವಸ್ತುವನ್ನು ಸಂಸ್ಕೃತದಿಂದಲೇ ಎತ್ತಿಕೊಂಡಿರುವನಾದರೂ, ಆತನಂತೆ ಈತನೂ ಅದೊಂದು ಸ್ವತಂತ್ರ ಕೃತಿರತ್ನವೆಂಬಂತೆ ತನ್ನ ಕಾವ್ಯವನ್ನು ಸೃಷ್ಟಿಸಿದ್ದಾನೆ. ಲಕ್ಷ್ಮೀಶನು ಪುರಾಣರೂಪವಾದ ಮೂಲಗ್ರಂಥವನ್ನು ಅರ್ಧದಷ್ಟಕ್ಕೆ ಸಂಗ್ರಹಿಸಿರುವುದೂ, ಮೂಲ ಕಥೆಯನ್ನು ತನ್ನ ಅಭಿರುಚಿ ಆವಶ್ಯಕತೆಗಳಿಗೆ ತಕ್ಕಂತೆ ಹಿಗ್ಗಿಸಿ ಕುಗ್ಗಿಸಿರುವುದೂ ಆತನ ಹಿತಮಿತ ಜ್ಞಾನಕ್ಕೆ ಸಾಕ್ಷಿಯಾಗಿದ್ದರೂ ಅದೇ ಆತನ ಹಿರಿತನದ ಮೂಲಕಾರಣವಲ್ಲ. ಮೂಲದ ಪುರಾಣವು ಲಕ್ಷ್ಮೀಶನ ಕೈಲಿ ಕಾವ್ಯವಾಗಿ ಪರಿವರ್ತಿತವಾಗಿರುವುದು ಆತನ ರಸಮಯವಾದ ವರ್ಣನಾಚಾತುರ್ಯದಿಂದ. ಸ್ತ್ರೀಪುರುಷರ ರೂಪ ಶೀಲಗಳನ್ನು ಅದರಲ್ಲಿಯೂ ಶ್ರೀಕೃಷ್ಣನ ರೂಪಶೀಲಗಳನ್ನು ಕವಿ ಮೈದುಂಬಿ ಹಾಡಿ ಹರಿಸಿದ್ದಾನೆ. ಆತನ ಪ್ರಕೃತಿವರ್ಣನೆಯೂ ಅಷ್ಟೇ ಹೃದ್ಯವಾಗಿದೆ. ಯಜ್ಞಾಶ್ವಕ್ಕಾಗಿ ಭದ್ರಾವತಿಗೆ ಹೊರಟ ಭೀಮಾದಿಗಳ ಕಣ್ಣಿಗೆ ಬಿದ್ದ ಒಂದು ಕೊಳದ ವರ್ಣನೆ ಇದು—

ಅಂಚೆವಿಂಡಾಡದ ಕೊಳಂ, ಕೊಳಗಳೊಳು ಸಲೆ ಪ
ಳಂಚಿ ಸುಳಿಯದ ಗಾಳಿ, ಗಾಳಿಗಳ ಬಳಿವಿಡಿದು
ಸಂಚರಿಸದೆಳದುಂಬಿ, ತುಂಬಿಗಳ ಬಿಡಾಯಕೆಂಪೆಸಿಸದಚ್ಚಲರ್ಗಳಲರ್ಗಳ

1 ಕವಿಲಕ್ಷ್ಮೀಶ: ಪುಟ ೧೭.

ಗೊಂಚಲೆರಗಿಸದ ಲತೆ, ಲತೆಗಳಡರದ ತಳ್ಕೆ
ನಿಂ ಚಿಗುರದಿರ್ಮಾವು, ಮಾವುಗಳ ಚೆಂದಳಿರ್
ಮಿಂಚದ ಬನಂ, ಬನಗಳಿಂ ಬಳಸದೂರೂರ್ಗಳಿಲ್ಲವೆನೆಯಿಲ್ಲಿಳೆಯೊಳು

ಮೃದ್ವಕ್ಷರವಾದ 'ಳ' ಕಾರದ ಪುನರಾವರ್ತನೆಯೂ, ಅನುಸ್ವಾರಯುಕ್ತವಾದ ಪ್ರಾಸವೂ ಕವಿಯು ಕೊಡುತ್ತಿರುವ ಚಿತ್ರದಷ್ಟೇ ಹೃದಯಂಗಮವಾಗಿದೆ, ನಾದಮಯವಾಗಿದೆ. ಲಕ್ಷ್ಮೀಶನ ಪ್ರತಿಭೆ ಹುಚ್ಚು ಹೊಳೆಯಲ್ಲ, ಪ್ರಜ್ಞಾವಲಯದಲ್ಲಿನ ಮಧುರಲಾಸ್ಯ—ಎಂದು ನಾವು ನಿರ್ದೇಶಿಸುವುದು ಈ ಕಾರಣಕ್ಕಾಗಿಯೇ. ಆತನು ಓದುಗರ ಜೀವನಾಡಿಯನ್ನು ಹಿಡಿದು ಮಿಡಿಯುತ್ತಾನೆ. ಆತನದು ಗೇರುಸೊಪ್ಪೆ ಜಲಪಾತದ ಓಂಕಾರನಾದವಲ್ಲ, 'ಸಂಗೀತ ಸುಕಲಾನಿಪುಣನು ವೀಣೆಯಿಂ ಗಾನಮಂ ನುಡಿಸುವಂದ' ಈ ಸಂಜೆಗೆಂಪಿನ ವರ್ಣನೆಯಲ್ಲಿ ಕವಿಯು ಪ್ರದರ್ಶಿಸುವ ವರ್ಣವಿಜ್ಞಾನವನ್ನು ನೋಡಿ—

ರಂಜಿಸುವ ಪಶ್ಚಿಮಾಚಲ ಕಿರಾತಂ ತೊಟ್ಟ
ಗುಂಜಾಭರಣಮೊ, ಮೇಣ್ ಗಗನಾಂಬುಧಿಯ ತಡಿಯ
ಮಂಜುವಿದ್ರುಮಲತೆಯೋ, ಮೇಣಪರ ದಿಗ್ವಧುವಿನಂಗ
ಕುಂಕುಮಲೇಪವೊ
ಅಂಜನೇಭದ ಸಿಂಧುರವೊ, ಶಿವನ ಕೇಶಗಳ
ಕೆಂಜೆಡೆಯೊ, ವಿಷ್ಣುಪದ ಪಂಕರುಹದರುಣತೆಯೊ
ಸಂಜೆವೆಣ್ಣುಟ್ಟ ರಕ್ತಾಂಬರವೊ ಪೇಳೆನಲ್ಬೈಗುಗೆಂಪೆಸೆದುದು.

ಕವಿಯು ಕೊಡುವ ಉಪಮೆಗಳು ಮನೋಹರವಾಗಿವೆ. ಕವಿಗೆ ಉಪಮೆಗಳಲ್ಲಿ ಅತಿಶಯವಾದ ಪ್ರೀತಿ. ಈ ಉಪಮಾಲೋಲನ ಉಪಮೆಗಳೆಂದರೆ, ಕವಿ ಕುವೆಂಪು ಹೇಳುವಂತೆ 'ಮೂಡುವ ಸೂರ್ಯನ ಎಳೆಬಿಸಿಲಿನ ಹೊಂಬೆಳಗಿನಲ್ಲಿ ನಳನಳಿಸಿ, ತಣ್ಣನೆ ತೀಡುವ ತೆಳುಗಾಳಿಗೆ ತಲೆಯೊಲೆದು ನಲಿದಾಡುವ ಹಚ್ಚನೆಯ ಹೊಸ ಹಸುರಿನಲ್ಲಿ, ಗರಿಗೆದರಿ, ಮಳೆಬಿಲ್ಲಿನ ಮರಿಗಳಂತೆ ಮನೋಹರವಾಗಿ ನರ್ತಿಸುವ ಮಯೂರಗಳು'* ಕೆಲವು ಉದಾಹರಣೆಗಳನ್ನು ನೋಡಿ. ಬಂಧುವಧೆಯಿಂದ ನೊಂದ ಧರ್ಮರಾಯನು 'ಅನಿಲ

---

* ಕವಿ ಲಕ್ಷ್ಮೀಶ: ಪುಟ ೧೯೩.

ಸಂಚಾರವೊಂದಿಸಿತಿಲ್ಲದುರಿವ ಕಡುವೇಸಗೆಯ ಬಿಸಿಲಿಂದ ಬಸವಳಿದ ಕೋಮಲ ರಸಾಲದಂತೆ' ಇದ್ದನಂತೆ! ಯುವನಾಶ್ವನಲ್ಲಿದ್ದ ಯಜ್ಞಾಶ್ವವನ್ನು ಎತ್ತಿಕೊಂಡು ಆಕಾಶಕ್ಕೆ ಹಾರಿದ ಮೇಘನಾದನು 'ಸರದತ್ತಣಿಂದಂಚೆ ಬೆಳ್ದಾವರೆಯನಳ್ತಿಯಿಂ ಕಿತ್ತು ನಭಕೇಳ್ವಂತೆ' ಕಾಣಿಸಿದನಂತೆ! ಗರ್ಭಿಣಿಯಾದ ಸೀತಾದೇವಿ ಲಕ್ಷ್ಮಣನಿಂದ ಶ್ರೀರಾಮನ ಕಠೋರ ಸಂದೇಶವನ್ನು ಕೇಳುತ್ತಲೇ 'ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕದಳಿ ಮುರಿದಿಳೆಗೊರಗುವಂತೆ' ಮೈಮರೆತು ನೆಲಕ್ಕೆ ಬಿದ್ದಳಂತೆ! ಮೈಮರೆತು ಬಿದ್ದಿದ್ದ ಸೀತಾದೇವಿ 'ಬೇರ್ಗೊಯ್ದು ಬಿಸುಟೆಳೆಯ ಬಳ್ಳಿಯಂತೆ' ಇದ್ದಳಂತೆ! ಅಡವಿಯಲ್ಲಿ ದಿಕ್ಕೆಟ್ಟು ಅಳುತ್ತಿದ್ದ ಆಕೆ ವಾಲ್ಮೀಕಿಯ ಕಣ್ಣಿಗೆ 'ಗ್ರೀಷ್ಮಋತುವಿಂ ನೊಂದ ಕಾಂತಾರದಧಿದೇವಿ ತಾನೆನಲ್' ಕಾಣಿಸಿದಳಂತೆ! ಚಂದ್ರಹಾಸನನ್ನು ಕೊಲ್ಲಬೇಕೆಂದಿದ್ದ ದುಷ್ಟಬುದ್ಧಿ ಬ್ರಾಹ್ಮಣರ ಇದಿರಿನಲ್ಲಿ ವಿನೀತನಾಗಿ 'ಕ್ರೂರ ನಕ್ರಾಕುಲದೊಳಿಡಿದಿರ್ದ ಪೆರ್ಮಡು ಗಭೀರ ನಿರ್ಮಲಜಲದೊಳೆಸೆವಂತೆ' ಇದ್ದನಂತೆ! ತಂದೆಯೆಡೆಗೆ ಬರುತ್ತಿರುವ ವಿಷಯೆಯ ವರ್ಣನೆ ಇದು:

ಎಸಳು ಗಂಗಳ ದಿಟ್ಟ ಮನ್ಮಥನ ಕರದಿಟ್ಟ
ಮಿಸುಪ ಪುರ್ಬಿನ ಗಾಡಿ ದರ್ಪಕನ ಸಿಂಗಾಡಿ
ಲಸಿತ ಮಂದಸ್ಮಿತಂ ಮುನಿಜನದ ವಿಸ್ಮಿತಂ ಕುರುಳು ವಿಟನಿಕರದುರುಳು
ಅಸಿಯ ಕೋಮಲಕಾಯಮಂಗಜೋತ್ಸವಕಾಯ
ಮೆಸೆವ ನವ ಯೌವನಂ ಸ್ಮರನ ಕೇಳೀವನಂ

ಕುಮಾರವ್ಯಾಸನು 'ರೂಪಕಸಾಮ್ರಾಜ್ಯ ಚಕ್ರವರ್ತಿ' ಯಾದರೆ ಲಕ್ಷ್ಮೀಶ 'ಉಪಮಾಲೋಲ'.

ವಸ್ತು, ಪಾತ್ರ, ರಸ—ಈ ಮೂರು ದೃಷ್ಟಿಯಿಂದಲೂ ಲಕ್ಷ್ಮೀಶನ ಕಾವ್ಯ ಶ್ರೇಷ್ಠವಾದುದು. ಪುಷ್ಪ ಸಮುದಾಯದಲ್ಲಿ ಗುಲಾಬಿಯೆಂತೋ, ಅಂತು ಕವಿಸಮುದಾಯದಲ್ಲಿ ಲಕ್ಷ್ಮೀಶ ವಿಶಿಷ್ಟಗುಣ ಸಂಪನ್ನನಾದವನು. ಗುಲಾಬಿಗಿಂತಲೂ ಸುಂದರವಾದ ಪುಷ್ಪಗಳಿರಬಹುದು, ಆದರೆ ಅವುಗಳಿಗೆ ಅದರ ಸುವಾಸನೆಯಿಲ್ಲ; ಗುಲಾಬಿಗಿಂತಲೂ ಹೆಚ್ಚು ಕಂಪುಳ್ಳ ಪುಷ್ಪಗಳಿರಬಹುದು, ಅವುಗಳಿಗೆ ಅದರ ಚೆಲುವಿಲ್ಲ. ಸೊಬಗು ಸುವಾಸನೆ

ಗಳೆರಡನ್ನೂ ಸಮ ಪ್ರಮಾಣದಲ್ಲಿ ಪಡೆದ ಭಾಗ್ಯ ಗುಲಾಬಿಯದು. ಲಕ್ಷ್ಮೀಶನೂ ಇದೇ ಜಾತಿಯವನು. ಆತನಿಗಿಂತಲೂ ಪ್ರತಿಭಾಶಾಲಿಗಳಾದ ಮಹಾಕವಿಗಳಿದ್ದಾರೆ, ಆದರೆ ಅವರಲ್ಲಿ ಲಕ್ಷ್ಮೀಶನ ಪಾಂಡಿತ್ಯ, ಹಿತಮಿತಜ್ಞಾನ, ನಾದಮಾಧುರ್ಯಗಳು ಅಪೂರ್ವ; ಲಕ್ಷ್ಮೀಶನಿಗಿಂತ ಪಂಡಿತರಾದ ಕವಿಗಳಿಗೆ ಕನ್ನಡದಲ್ಲಿ ಕೊರತೆಯೇನೂ ಇಲ್ಲ; ಆದರೆ ಆತನ ಪದಲಾಲಿತ್ಯ, ಪ್ರಜ್ಞಾಪೂರ್ಣ ಪ್ರತಿಭೆಗಳು ಇತರರಲ್ಲಿ ದುರ್ಲಭ. ಆತನು ಅನನ್ಯಸಾಧಾರಣನಾದ ಕವಿ. ಆತನು ಪ್ರತಿಭಾಶಾಲಿ, ಆದರೆ ಆತನ ಪ್ರಜ್ಞಾವಲಯವೇ ಅದರ ನಾಟ್ಯರಂಗ. ಆತನ ಕವಿತೆ ಹುಚ್ಚು ಹೊಳೆಯಲ್ಲ; ನಿರ್ದಿಷ್ಟ ಪಾತ್ರದಲ್ಲಿ, ನಿರ್ದಿಷ್ಟ ಪ್ರಮಾಣದಲ್ಲಿ ಹರಿದುಕೊಂಡು ಹೋಗುವ ಪ್ರವಾಹ. ಆತನದು ಸ್ವೇಚ್ಛೆಯಾಗಿ ಬೆಳೆದಿರುವ ಮಹಾವೃಕ್ಷಗಳಿಂದಲೂ, ಸೀರ್ಬೀಳಗಳಿಂದಲೂ, ಮೃಗಪಕ್ಷಿಗಳಿಂದಲೂ ನಿಬಿಡವಾದ ಕಾನನವಲ್ಲ; ಕಣ್ಮನಗಳನ್ನು ರಂಜಿಸುವಂತೆ ಒಪ್ಪವಾಗಿ ನಿರ್ಮಿಸಿರುವ ಕಾರಂಜಿ, ಬುಗ್ಗೆ, ಜಲಪಾತಗಳನ್ನು ಒಳಗೊಂಡು, ವಿದ್ಯುಚ್ಛಕ್ತಿಯ ಬೆಳಕಿನಿಂದ ದೇದೀಪ್ಯಮಾನವಾಗಿ ಬೆಳಗುವ ಬೃಂದಾವನ!

**ಗೋವಿಂದ**

ಹದಿನಾರನೆಯ ಶತಮಾನದ ಕೊನೆಯ ಭಾಗದಲ್ಲಿ ಗೋವಿಂದ ಅಥವಾ ಗೋಪಕವಿಯೆಂಬುವನು 'ನಂದಿ ಮಾಹಾತ್ಮ್ಯೆ'ವನ್ನು ವಾರ್ಧಕ ಷಟ್ಪದಿಯಲ್ಲಿ ಬರೆದಿದ್ದಾನೆ. ಪಾರ್ವತೀದೇವಿಯನ್ನು ಆಸ್ಥಾನಕ್ಕೆ ಕರೆತರುವಂತೆ ಶಿವನಿಂದ ಆಜ್ಞಪ್ತನಾದ ನಂದಿಯು 'ಇಂದುಧರನ ರೂಪಂದಳೆದು' ಆಕೆಯ ಬಳಿಗೆ ಹೋದನು. ಪರಶಿವ ಸಾರೂಪ್ಯದಲ್ಲಿದ್ದ ಆತನನ್ನು ಕಂಡು ಗಿರಿಜೆ, ಪರಶಿವನೆಂದೇ ಭ್ರಮಿಸಿ, ಮೇಲೆದ್ದು ಆತನನ್ನು ಗೌರವಿಸಹೊರಟಳು. ಈ ಅಚಾತುರ್ಯಕ್ಕಾಗಿ ನೊಂದ ನಂದಿ ಆಕೆಯನ್ನು ಶಿವನ ಸಾನ್ನಿಧ್ಯಕ್ಕೆ ಕೊಂಡೊಯ್ದು ಬಿಟ್ಟವನೇ ತನ್ನ ಹಿಂದಿನ ರೂಪವನ್ನು ಪಡೆಯುವುದಕ್ಕಾಗಿ ಪರಶಿವನನ್ನು ಕುರಿತು ತಪಸ್ಸು ಮಾಡಬೇಕೆಂದು ನಿಶ್ಚಯಿಸಿದನು. ತನ್ನ ತಪಸ್ಸಿಗೆ ಯೋಗ್ಯವಾದ ಸ್ಥಳವಾವುದೆಂದು ಗಣನಾಥನಾದ ಕೂಷ್ಮಾಂಡನನ್ನು ಆತನು ಕೇಳಲು, ಆ ಗಣನಾಥನು ಶ್ರೀಶೈಲ, ಕೇದಾರ, ವಾರಣಾಸಿ, ಕಾಂಚಿ ಇತ್ಯಾದಿ ಶೈವಕ್ಷೇತ್ರಗಳ ಮಹಿಮೆಯನ್ನು ಆತನಿಗೆ ನಿರೂಪಿಸುವನು.

ಇದು 'ನಂದಿ ಮಹಾತ್ಮ್ಯೆ'ದ ಕಥಾವಸ್ತು. ೫೦ ಸಂಧಿಗಳಷ್ಟು ವಿಸ್ತಾರವಾಗಿರುವ ಈ ಗ್ರಂಥವು ಸಂಸ್ಕೃತ ಭೂಯಿಷ್ಠಮಯವಾಗಿ ಪ್ರೌಢವಾಗಿದೆ. ತನ್ನ ಕಾವ್ಯವು 'ಎಳೆನೀರೊಳೆಯ್ದೆ ತವರಾಜ ಬೆರೆದಂದದಿಂ, ಸುಲಿದ ರಸಗಂಧಿ ವಾಳೆಯೊಳು ಜೇನ್ದಳೆದಂತೆ' ಸವಿಯಾಗಿದೆಯೆಂದು ಕವಿ ಹೇಳಿಕೊಂಡಿರುವನಾದರೂ, ತಿರುಳಿಗಿಂತ ಚಿಪ್ಪೇ ದಪ್ಪವಾಗಿರುವ ನಾರಿಕೇಳ ಪಾಕ, ಈತನ ಗ್ರಂಥ. 'ಆನೆ ಹೋದುದೇ ಬೀದಿಯಲ್ಲವೆ ಜಗದೊಳು'? ಕವಿಗಳ ಹಿರಿಮೆಯೂ ಅಂತಹುದೇ ಎಂಬ ಕವಿಯ ಹೇಳಿಕೆ ನಿಜವಾದರೂ, ಗೋವಿಂದಗಜ ನುಗ್ಗಿಕೊಂಡು ಹೋಗುವ ಹಳುವದಲ್ಲಿ ಆತನ ಓದುಗರು ಹಿಂಬಾಲಿಸಿಕೊಂಡು ಹೋಗುವುದು ಬಹು ಕಷ್ಟಸಾಧ್ಯವಾಗುತ್ತದೆ. ಹಾಗೆ ಕಷ್ಟಪಟ್ಟರೂ ಆ ಮದಗಜ ನಮ್ಮನ್ನು ಕಬ್ಬಿನ ತೋಟಕ್ಕೇನೂ ಕರೆದೊಯ್ಯುವುದಿಲ್ಲ; ಜೊಂಡಿನ ಜೌಗು ಪ್ರದೇಶಕ್ಕೆ ಒಯ್ಯುತ್ತದೆ. ಒಮ್ಮೊಮ್ಮೆ ಕಬ್ಬಿನ ಗದ್ದೆಯೂ ಕಣ್ಣಿಗೆ ಬೀಳುವುದುಂಟು—'ಅಮರಕಾಂತಾಕದಂಬ' ಪುಷ್ಪಾಪಚಯಕ್ಕೂ ಜಲಕ್ರೀಡೆಗೂ ಹೊರಟರೆಂದು ಹೇಳಿ ಅವರನ್ನು ವರ್ಣಿಸುತ್ತಾ

ರಸವೆ ರಂಜಿಸುವಂತೆ, ಚಲ್ವೆ ಚೈತನ್ಯವಾಂ
ತೆಸೆವಂತೆ, ಚೋದ್ಯಮೇ ಹೃದ್ಯಮಪ್ಪಂತೆ, ಭಾ
ವಿಸಲಲಂಕಾರಮಾಕಾರಮಾಂತಂತೆ, ಕಲರುತಿಯೆ ಮಾತಾಡುವಂತೆ।
ಒಸೆದು ಚಾತುರ್ಯಮೇ ಚಾರುತನುವೆತ್ತು ಶೋ
ಭಿಸುವಂತೆ, ಕಲೆಯೆ ಕಾಲ್ದಳೆದು ನಡೆವಂತೆ, ಸವಿ
ಯೊಸೆದು ಸಾಲಿಡುವಂತೆ ವನಿತೆಯರ್ ನಡೆತಂದರುಪವನಕೆ
ವಹಿಲದಿಂದ॥

ಶ್ರೀಮಾನ್ ರಂ. ಶ್ರೀ. ಮುಗುಳಿಯವರು ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಈ ಕವಿಯ 'ಚಿತ್ರಭಾರತ' ವೆಂಬ ಮತ್ತೊಂದು ಗ್ರಂಥವು ದೊರೆತಿರುವುದಾಗಿ ತಿಳಿಸಿ, "ಮೂವತ್ತು ಸಂಧಿಗಳ ಸಾವಿರಾರು ವಾರ್ಧಕ ಷಟ್ಪದಿಗಳ ಈ ಕೃತಿಯಲ್ಲಿ ಭಕ್ತಿಯಿದೆ, ಚಮತ್ಕೃತಿಯಿದೆ, ಮಧ್ಯಮ ಕಾವ್ಯದ ಗುಣವಿದೆ. ಆದರೆ ಅವನು ಎಂದಂತೆ ಇದು ಮಹಾಕೃತಿಯಲ್ಲ. 'ನಂದಿ ಮಾಹಾತ್ಮ್ಯೆ' ಅವನ ಹೆಚು ಪರಿಪಕ್ವವಾದ ಕೃತಿ" ಎಂದು ಹೇಳು

ತ್ತಾರೆ. ಇದನ್ನು ಕೇಳಿದಮೇಲೆ 'ಚಿತ್ರಭಾರತ' ವನ್ನು ಓದಬೇಕೆಂಬ ಉತ್ಸಾಹ ಕಡಮೆಯಾಗುತ್ತದೆ.

ಈತನು ತನ್ನ ಕಾವ್ಯದಲ್ಲಿ ತಾನು ಕರಣಿಕನಾದ ಜ್ಯೋತಿಯೆಂಬುವನ ಮಗನೆಂದೂ, ಮದನಗೋಪಾಲನ ಭಕ್ತನೆಂದೂ ಹೇಳಿಕೊಂಡಿದ್ದಾನೆ. ತಾನು ಭೀಮರಥೀತೀರದ ಬುಯ್ಯಾರ ಗ್ರಾಮದವನೆಂದು ಹೇಳಿಕೊಂಡಿರುವು ದರಿಂದ ಈತ ಪೋಲಾಪುರದ ಜಿಲ್ಲೆಯವನಾಗಿದ್ದು, ಪಂಡರಾಪುರದ ಪಾಂಡುರಂಗನ ಭಕ್ತನಾಗಿದ್ದಿರಬಹುದು. ಚಿತ್ರಭಾರತದಲ್ಲಿ ತನ್ನ ಕಾಲ ವನ್ನು ಕ್ರಿ. ಶ. ೧೫೪೧ ಎಂದು ಹೇಳಿಕೊಂಡಿರುವುದಾಗಿಯೂ, 'ಸಾರಮಿದು ಶ್ರಿ ಹರಿಕಥಾಮೃತಂ' ಎಂದು ಹೇಳಿಕೊಂಡು ತನ್ನ ಭಾಗವತ ದೃಷ್ಟಿಯನ್ನು ಪ್ರಕಟಿಸಿರುವುದಾಗಿಯೂ ಶ್ರೀಮಾನ್ ರಂ. ಶ್ರೀ. ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆಯಿಂದ ತಿಳಿದು ಬರುತ್ತದೆ.

### ರಂಗನಾಥ

ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿ (ಸು. ೧೬೭೫)ದ್ದ ರಂಗನಾಥನು 'ಅನುಭವಾಮೃತ'ವೆಂಬ ಅದ್ವೈತ ಸಿದ್ಧಾಂತನಿರೂಪಣೆಯ ಗ್ರಂಥವನ್ನು ಬರೆದಿದ್ದಾನೆ. ಈತನಿಗೆ ರಂಗಾವಧೂತ, ಮಹಲಿಂಗ ರಂಗ ಎಂಬ ಪರ್ಯಾಯನಾಮಗಳೂ ಉಂಟು. ಈತನ ತಂದೆ 'ಸಹವಾಸಿ'ವಂಶದ ಮಹಲಿಂಗದೇವನೆಂದೂ, ಗುರು ಸಹಜಾನಂದನೆಂದೂ ಕವಿಯ ಗ್ರಂಥದಿಂದ ತಿಳಿದು ಬರುತ್ತದೆ. ಬಹುಶಃ ತಂದೆಯ ಹೆಸರನ್ನು ತನ್ನ ಹೆಸರಿನೊಡನೆ ಸೇರಿಸಿಕೊಂಡುದರಿಂದಲೇ ಈತನ ಹೆಸರು ಮಹಲಿಂಗರಂಗನೆಂದಾಗಿರಬೇಕು. 'ಸಹವಾಸಿ' ಎಂಬ ಈತನ ವಂಶದ ಹೆಸರು 'ಸವ್ವಾಶೆ' ಎಂಬ ಮರಾಠಿಪದ ದಿಂದ ಬಂದಿರಬೇಕು. 'ಸವ್ವಾಶೆ' ಎಂದರೆ ೧೨೫ ಎಂದರ್ಥ. ಧಾರವಾಡ ಜಿಲ್ಲೆಯ ೧೨೫ ಬ್ರಾಹ್ಮಣ ಮನೆತನದವರಾದ ಈ 'ಸವ್ವಾಶೆ' ಗಳು ಶಾಂಕರ ಶಿಷ್ಯಕೋಟಿಯವರಾಗಿದ್ದು, ರಂಗನಾಥನು ಆ ವಂಶಕ್ಕೆ ಸೇರಿ ದವನಾಗಿದ್ದಿರಬೇಕೆಂದು ಶ್ರೀ ಹೊಸಕೆರೆ ಚಿದಂಬರಯ್ಯನವರು 'ಅನುಭವಾ ಮೃತ'ದ ಪ್ರಸ್ತಾವನೆ (ಪುಟ: ಕ) ಯಲ್ಲಿ ಹೇಳುತ್ತಾರೆ. ಮಾಯೆಯ ಸ್ವರೂಪವನ್ನು ಕುರಿತು ಈತನು

ಕೇಳು ಶುಕಯೋಗೀಂದ್ರ, ಮಾಯೆಯ
ಮೂಲ ಮುಟ್ಟೆ ವಿಚಾರಿಸಲು ಪುಸಿ ;
ಕಾಳಲಾ ಅವಿಚಾರಸಿದ್ಧ; ವಿಚಾರಿಸಿದೊಡಿಲ್ಲ ;
ಹೇಳ ಹೇಳಲು ದೊಡ್ಡಿತಾಗಿ ವಿ
ಶಾಲವೆನಲುಚ್ಚಂಗಿ ಕೋಟೆಯ
ವೋಲು ಹೆಚ್ಚುವದಾಲಿಸಿದರೊವ್ಮೊಳನು ಕೇಳೆಂದ ||

ಎಂದು ಹೇಳುತ್ತಾನೆ. ಉಚ್ಚಂಗಿದುರ್ಗದ ಕೋಟೆಯನ್ನು ಒಳ ಹೊಕ್ಕು ನೋಡಿದರೆ ಹುರುಳಿಲ್ಲ ಎಂಬುದನ್ನು ನೋಡಿದರೆ ಈತನು ಆ ಸುಪ್ರಸಿದ್ಧವಾದ ಕೋಟೆಯ ಸುತ್ತುಮುತ್ತಿನ ಪ್ರದೇಶದವನೆಂದೂ, ಆ ಕೋಟೆ ಚಿತ್ರದುರ್ಗದ ಮದಕರಿ ನಾಯಕನಿಂದ ಕೋಳುಹೋದಮೇಲಿನ ಕಾಲದವನೆಂದೂ ಊಹಿಸಲು ಅವಕಾಶವಾಗುತ್ತದೆ. ಚಿತ್ರದುರ್ಗ ಜಿಲ್ಲೆಯ ದಾವಣಗೆರೆಗೆ ಹತ್ತು ಮೈಲಿ ದೂರದಲ್ಲಿರವ ಈ ಕೋಟೆ ಕರ್ಣಾಟಕ ಮಹಾ ರಾಷ್ಟ್ರಗಳ ಸಂಧಿಸ್ಥಾನದಲ್ಲಿರುವುದರಿಂದಲೂ, ಗ್ರಂಥದಲ್ಲಿ 'ಸಂಬಾಳಿಸು' 'ರಂಕ' ಇತ್ಯಾದಿ ಶಬ್ದಗಳು ಕಂಡುಬರುವುದರಿಂದಲೂ ಈತನ ಸ್ಥಳವು ಉಚ್ಚಂಗಿದುರ್ಗದ ಸುತ್ತುಮುತ್ತಿನದೇ ಆಗಿರಬೇಕೆಂಬ ಊಹೆಗೆ ಪೋಷಕ ವಾಗಿದೆ. ರಂಗನಾಥನು ಶಿವೋಪಾಸಕನಾದ ಅದ್ವೈತಿಯಾಗಿದ್ದವನೆಂಬುದು ಆತನ ಗ್ರಂಥದಿಂದ ವ್ಯಕ್ತವಾಗುತ್ತದೆ. ತನ್ನ ಗ್ರಂಥವನ್ನು ಕವಿಯು ಶ್ರೀ ಶೈಲದ ಮಲ್ಲಿಕಾರ್ಜುನನಿಗೆ ಅಂಕಿತ ಮಾಡಿದ್ದಾನೆ.

'ಅನುಭವಾಮೃತ' 'ಅಖಿಳವೇದಾಂತಾರ್ಥವನು ಸಂಗ್ರಹಿಸಿ' ಸಕಲರಿಗೂ ತಿಳಿವಂತೆ ಸುಲಭವಾಗಿ ಸರಳವಾಗಿ, ಲಲಿತವಾಗಿ ಭಾಮಿನೀ ಷಟ್ಪದಿಯಲ್ಲಿ ನಿರೂಪಿಸುವ 800 ಪದ್ಯಗಳನ್ನು ಒಳಗೊಂಡ ಗ್ರಂಥ. ಕವಿಯ ಕನ್ನಡಾಭಿಮಾನ ಸ್ತೋತ್ರಾರ್ಹವಾಗಿದೆ.

ಕನ್ನಡದ ನುಡಿಯೆಂದುಪೇಕ್ಷಿಸ
ಲಿನ್ನು ಹಿರಿಯರಿಗಂಜಿ ನುಡಿವೆನು
ಕನ್ನಡಿಯೆ ದರ್ಪಣವದಲ್ಲದೆ ಭೇದವೇನಿದಕೆ
ಮುನ್ನಲುಪನಿಷದರ್ಥವನು ಸಂ
ಪನ್ನ ಮತಿಗಳು ಪೇಳ್ದುದನೆ ನಾ

ಕನ್ನಡಿಸಿದೆನು ಕೊರತೆಯಿರ್ದೊಡೆ ಮನ್ನಿಸುವದೊಲಿದು

ಎಂದು ನಮ್ರತೆಯಿಂದ ಕೇಳಿಕೊಂಡು

ಸುಲಿದ ಬಾಳೆಯ ಹಣ್ಣಿನಂದದಿ
ಕಳೆದ ಸಿಗುರಿನ ಕಬ್ಬಿನಂದದ
ಲಿಳಿಸಿದುಷ್ಣದ ಹಾಲಿನಂದದಿ ಸುಲಭವಾಗಿರ್ಪ
ಲಲಿತವಹ ಕನ್ನಡದ ನುಡಿಯಲಿ
ತಿಳಿದು ತನ್ನೊಳು ತನ್ನ ಮೋಕ್ಷವ
ಗಳಿಸಿಕೊಂಡರೆ ಸಾಲದೆ ? ಸಂಸ್ಕೃತದಲಿನ್ನೇನು ?

ಎಂಬ ಆತನ ವಾದ ಹೃದಯಂಗಮವಾಗಿರುವುದು ಮಾತ್ರವೇ ಅಲ್ಲ, ಯುಕ್ತಿ ಯುಕ್ತವಾಗಿಯೂ ಇದೆ. ಮಾನವನು ಉದ್ಧಾರವಾಗುವುದು ಸಂಸ್ಕೃತದ ಭಾಷೆಯಿಂದಲ್ಲ; ಅದರಲ್ಲಿರುವ ಜ್ಞಾನದಿಂದ. ಆ ಜ್ಞಾನ ಕನ್ನಡದಲ್ಲಿಯೇ ದೊರೆಯುತ್ತಿರುವಾಗ ಸಂಸ್ಕೃತದ ಮೋಹವೇಕೆ? ತಾಯಿಯ ಎದೆಹಾಲು ಸಿಕ್ಕುವಂತಿದ್ದರೆ ಗೋಕ್ಷೀರದ ಹಿರಿಮೆಯನ್ನು ಎತ್ತಿ ಹಿಡಿಯುವುದೇಕೆ ?

ರಂಗನಾಥನು ಒಳ್ಳೆಯ ಕವಿಹೃದಯವುಳ್ಳವನು. ಗಹನವಾದ ವೇದಾಂತ ತತ್ವಗಳು ಆತನ ಪ್ರತಿಭೆಯ ಪ್ರಭಾವದಿಂದ ಕಾಂತಾಸಮ್ಮಿತದ ಬಣ್ಣವನ್ನು ತಳೆಯುತ್ತವೆ. ‘ಯೌವನಂ ಧನಸಂಪತ್ತಿ:’ ಇತ್ಯಾದಿಗಳುಳ್ಳವರಿಗೆ ಅಧ್ಯಾತ್ಮ ಅಳವಡದಂತೆ. ಅವರನ್ನು ಕುರಿತು

ಮೊದಲೆ ಮರ್ಕಟ ಮೇಲೆ ಮದ್ಯದ
ಮದವೆದೆಯ ಹಿಡಿದಿರಲು ವೃಶ್ಚಿಕ
ತುದಿಯ ಕಾಲನು ಕಚ್ಚಿದರೆ ಕುಣಿದಾಡುವಂದದಲಿ
ಅಧಿಕ ಧನ ಸಂಪತ್ತು ಯೌವನ
ವೊದಗಿರಲು ವನಿತಾದಿ ವಿಷಯಾ
ಸ್ಪದನೆನಿಸಿಯೊಡಲರಿಯದವಗಧ್ಯಾತ್ಮವೇಕೆಂದ ||

ಸುಜ್ಞಾನವಿಲ್ಲದೆ ಬರಿ ಸ್ನಾನ, ಜಪ, ಮೌನಾದಿ ಬಹಿರಾಡಂಬರಗಳು ವ್ಯರ್ಥ.

ಮೀನು ನೀರೊಳಗಿದ್ದೊಡೇನ್ನೈ
ಧ್ಯಾನವನು ಬಕ ಮಾಡಲೇನದು

ಕಾನನವನಾಶ್ರಯಿಸಿ ಮರ್ಕಟವಿದ್ದೊಡೇನಲ್ಲಿ।
ಮೌನದಲಿ ಕೋಗಿಲೆಯಿರಲ್ಕದ
ಕೇನು ಫಲ ಸುಜ್ಞಾನವಿಲ್ಲದೆ
ಮೌನವೊದಲಾದವರೊಳೇನೆಲೆ ಮಗನೆ ಕೇಳೆಂದ

ಐಶ್ವರ್ಯವಿರುವವರಿಗೆ ಮಡದಿ ಮಕ್ಕಳು ಬಂಧು ಬಾಂಧವರು ಕಡು ಮಮತೆಯನ್ನು ತೋರುತ್ತಾರೆ. ಬಡತನ ಬಂದೊಡನೆಯೇ ಅವರು ಮೆಲ್ಲನೆ ಸಡಿಲ ತೊಡಗುತ್ತಾರಂತೆ. ಅಹುದು—

ಬಿಡದು ಕರು ಹಾಲಿರಲು ತಾಯನು
ಕಡೆಗೆ ಹೋಹುದು ಬತ್ತಿದಡೆ ತಾ
ಕೆಡುವ ಕಾಲಕ್ಕಾರಿಗಾರೈ ಮಗನೆ ಕೇಳೆಂದ

'ಸುಕ್ಷೇತ್ರದಲಿ ಬೀಜವ ಬಿತ್ತೆ ಫಲವಹುದು'; 'ಮರ್ಕಟಗೇಕೆ ಮಾಣಿಕವು ?' 'ನಾಯಿಗೇತಕೆ ನವರಸಾನ್ನವು ?' 'ನರಿಗಳೂರನು ಸೇರುವವೆ ? 'ಕತ್ತೆಯರಿವುದೆ ಕತ್ತುರಿಯ ?' 'ನರಿಗೇಕೆ ಸುರಲೋಕ' 'ರಾಣಿಯೇಕೆ ನಪುಂಸಕಗೆ'—ಇಂತಹ ದೃಷ್ಟಾಂತ, ಉಪಮಾ, ರೂಪಕ—ಇತ್ಯಾದಿ ಅಲಂಕಾರಗಳು ವಿಷಯವನ್ನು ಸ್ಪಷ್ಟಗೊಳಿಸುವುದರೊಡನೆ ಕಾವ್ಯಾನಂದವನ್ನು ನೀಡುವುದಕ್ಕೂ ಸಹಾಯಕವಾಗುತ್ತವೆ.

ರಂಗನಾಥನು ವಿಷಯನಿರೂಪಣೆಯಲ್ಲಿ ಕೀರ್ತಿಶಾಲಿಯಾಗಿರುವಂತೆಯೇ ಹೇಳಿರುವ ವಿಷಯದಲ್ಲಿಯೂ ಅದ್ಭುತವಾದ ಅಪೂರ್ವವಾದ ಪ್ರತಿಭೆ ಪಾಂಡಿತ್ಯಗಳನ್ನೂ ಮೆರೆದಿದ್ದಾನೆ. ಆದ್ದರಿಂದಲೇ ಇದು ಸಂಸ್ಕೃತಕ್ಕೆ ಭಾಷಾಂತರಗೊಂಡಿದೆ. ಶ್ರೀಮತ್ಪರಮಹಂಸ ಬಾಲಕೃಷ್ಣ ಬ್ರಹ್ಮಾನಂದ ರಾಜಯೋಗಿಗಳೆಂಬುವರು ಮೂಲದ ಹೆಸರನ್ನೇ ಇಟ್ಟು ಇದನ್ನು ಸಂಸ್ಕೃತಕ್ಕೆ ಭಾಷಾಂತರಿಸಿದ್ದಾರೆಂದು ಕೇಳಿದಾಗ ಕನ್ನಡಿಗನು ಹರ್ಷ ಹೆಮ್ಮೆಗಳನ್ನು ತಾಳುವುದು ಸಹಜವಾಗಿಯೇ ಇದೆ.

**ನಾಗರಸ :**

ಭಗವದ್ಗೀತೆಯನ್ನು ಭಾಮಿನಿ ಷಟ್ಪದಿಯಲ್ಲಿ ಕನ್ನಡಿಸಿರುವ ನಾಗರಸನು ತನ್ನ ಕಾಲ ದೇಶಗಳ ವಿಚಾರವಾಗಿ ಏನನ್ನೂ ಹೇಳಿಕೊಂಡಿಲ್ಲ.

ಈತನು ಕಾಶ್ಯಪಗೋತ್ರದ ವಿಶ್ವೇಶ್ವರನ ಮಗನೆಂದೂ ಶಂಕರ ಗುರುವಿನ ಶಿಷ್ಯನೆಂದೂ ಮಾತ್ರ ಹೇಳಿಕೊಂಡಿದ್ದಾನೆ. ಗ್ರಂಥದ ಆರಂಭದಲ್ಲಿ 'ಪಂಡರಿ ವರದ ವಿಟ್ಠಲರಾಯ ರಕ್ಷಿಪುದು' ಎಂದು ಸ್ತೋತ್ರಮಾಡಿರುವುದರಿಂದ ಈತನು ವಿಟ್ಠಲನ ಭಕ್ತನೆಂದು ಊಹಿಸಬಹುದು. ಬಹುಶಃ ಅದೇ ಪ್ರಾಂತಕ್ಕೆ ಸೇರಿದವನಿದ್ದರೂ ಇರಬಹುದು. ತನ್ನ ಗ್ರಂಥವನ್ನು 'ವಾಸುದೇವ ಕಥಾಮೃತ'ವೆಂದು ಕರೆದು, ಇದನ್ನು 'ವಿಶ್ವಾಸದಿಂ ನೆರೆ ತಿಳಿದು ಸುಖಿಸುವುದು ಆಸೆಯೆಲ್ಲವ ಬಿಟ್ಟು ಮುನಿಗಳು ಹರಿಪರಾಯಣರು' ಎಂದು ಹೇಳಿಕೊಂಡಿರುವುದರಿಂದ ಈತನು ಭಾಗವತ ಪಂಥಕ್ಕೆ ಸೇರಿದವನೆಂದು ಹೇಳಬಹುದು. ಭಗವದ್ಗೀತೆಯ ಒಂದೊಂದು ಶ್ಲೋಕಕ್ಕೆ ಒಂದೊಂದು ಷಟ್ಪದಿಯನ್ನು ಬರೆಯುವುದಾಗಿ ಹೇಳಿಕೊಂಡು ೭೩೭ ಪದ್ಯಗಳನ್ನು ಬರೆದಿದ್ದಾನೆ. ಪದ್ಯಗಳು ಸರಳವಾಗಿ ಲಲಿತವಾಗಿ ಓಡುತ್ತವೆ. 'ನೈನಂ ಛಿದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ । ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ' ಎಂಬುದನ್ನು

'ನಿತ್ಯನಾತ್ಮನು ಸರ್ವಗತನ
ತ್ಯುತ್ತಮನು ತಾನಚಲನವರಿಂ
ಸುಸ್ಥಿರನು ತಾನಾದ ಕಾರಣ ಕಡಿವೊಡಳವಲ್ಲ ।
ಮತ್ತೆ ಸುಡಲಳವಲ್ಲ ನೀರಿನ
ಲೊತ್ತಿ ನನೆಯಿಸಬಾರದೊಣಗಿಸಿ
ಸತ್ವ ಗುಂದಿಸಬಾರದೈ ಕಲಿಪಾರ್ಥ ಕೇಳೆಂದ ॥

ಮೂಲದ ಬಿಕ್ಕಟ್ಟು, ಸೂತ್ರರೂಪವಾದ ಭಾಷೆ ಹಿಂಜಿದ ಹತ್ತಿಯಂತೆ ಆಗುತ್ತದೆ ಭಾಷಾಂತರದಲ್ಲಿ. ಆದರೂ ಮೂಲದ ಅರ್ಥಕ್ಕೆ ಎಲ್ಲಿಯೂ ಅಪೋಹ ತಂದಿಲ್ಲ. ಕಾವ್ಯ ದೃಷ್ಟಿಯಿಂದ ಇಲ್ಲಿ ಮಹತ್ತರವಾದುದೇನೂ ಇಲ್ಲ. ಶಾಸ್ತ್ರ ವಿಷಯವನ್ನು ಲಲಿತವಾಗಿ ಹೇಳಿದ ಕೀರ್ತಿ ನಾಗರಸನಿಗೆ ಸಲ್ಲಬೇಕು. ಈತನ ಕಾಲ ಸುಮಾರು ಸು. ೧೬೫೦ ಎಂದು ಕವಿಚರಿತೆಕಾರರು ತಿಳಿಸುತ್ತಾರೆ.

**ರಂಗಾಚಾರ್ಯ :**

ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿ (ಸು. ಕ್ರಿ.ಶ. ೧೫೭೦)

ಇದ್ದ ಈ ಕವಿ ಗದ್ಯದಲ್ಲಿ 'ಶ್ರೀರಂಗಮಾಹಾತ್ಮ್ಯ'ವನ್ನು ಬರೆದಿದ್ದಾನೆ. ಸಂಸ್ಕೃತದ ಬ್ರಹ್ಮಾಂಡಪುರಾಣದಲ್ಲಿ ಮಹೇಶ್ವರ-ನಾರದ ಸಂವಾದರೂಪವಾಗಿದ್ದ ಈ ಗ್ರಂಥವನ್ನು 'ಸರ್ವಜನರ್ಗೆ ಸುಲಭಮಾಗಿ ತಿಳಿವಂತೆ ಕರ್ಣಾಟಕ ಭಾಷಾರಚನೆಯಿಂ' ತಿಳಿಸುವುದಕ್ಕೆ ಹೊರಟಿದ್ದಾನೆ. ಈತ. ಕನ್ನಡದಲ್ಲಿ ಗ್ರಂಥರಚನೆ ಮಾಡಲು ಹೊರಟ ಶ್ರೀವೈಷ್ಣವರಲ್ಲಿ ಈತನೇ ಮೊತ್ತ ಮೊದಲಿನವನೆಂದು ತೋರುತ್ತದೆ.

**ತಿರುಮಲಭಟ್ಟ :**

ಕ್ರಿ. ಶ. ಸು. ೧೬೦೦ರಲ್ಲಿದ್ದ ಈ ಕವಿ ೩೭೭ ಪದ್ಯಗಳನ್ನು ಒಳಗೊಂಡ 'ಶಿವಗೀತೆ'ಯನ್ನು ವಾರ್ಧಕಷಟ್ಪದಿಯಲ್ಲಿ ಬರೆದಿದ್ದಾನೆ. 'ಉಭಯ ಪತ್ಕವಿಶಿರೋವರಮಣಿ' ಎಂದು ತನ್ನನ್ನು ಕರೆದುಕೊಂಡಿರುವ ಈ ಕವಿ, ಕೆಳದಿಯ ದೊರೆ ವೆಂಕಟಪ್ಪನಾಯಕ (೧೫೮೨-೧೬೨೯) ನ ಆಶ್ರಿತನಾಗಿದ್ದನು. ತನ್ನ ಪೋಷಕನ ಅಪ್ಪಣೆಯಂತೆ, ಪದ್ಮಪುರಾಣದ ಉತ್ತರಕಾಂಡದಲ್ಲಿರುವ ಶಿವಗೀತೆಯನ್ನು, ಆಂಧ್ರದಲ್ಲಿದ್ದ ಟೀಕೆಗಳನ್ನೆಲ್ಲಾ ನೋಡಿಕೊಂಡು ಕನ್ನಡದಲ್ಲಿ ಬರೆದಿರುವುದಾಗಿ ಆತನ ಹೇಳಿಕೆ. ಕಾವ್ಯದ ಆರಂಭದಲ್ಲಿ ತನ್ನ ರಾಜನ ವಂಶಾವಳಿಯನ್ನೂ ಅವರ ದಾನಧರ್ಮಪರಾಕ್ರಮಗಳನ್ನೂ ಹೊಗಳಿ ತನ್ನ ಪೋಷಕನನ್ನು ಸ್ತುತಿಸಿದ್ದಾನೆ. ಒಳಗೆ ಅಮೃತದಂತಹ ರಸತಿರುಳು ಇದ್ದರೂ ಅದರ ಮೇಲಿನ ಕರಟ ಚಿಪ್ಪುಗಳಿಗೆ ಹೆದರಿ ಹಣ್ಣುಗಳನ್ನು ಹುಡುಕುವ ಎಗ್ಗರಂತೆ ಮಹೋನ್ನತ ತತ್ವಗಳನ್ನೊಳಗೊಂಡ ಕಾವ್ಯಗಳನ್ನು ಕಠಿಣವೆಂದು ಹೇಳಿ ಕಣ್ಣೆತ್ತಿ ನೋಡದೆ ಹೋಗುವ ಅತಿರಸಿಕರಿಗಾಗಿ ತಾನು 'ಸಕಲರರಿವಂತೆ ವಿರಚಿಸುವೆನೀ ಕೃತಿಯನು' ಎನ್ನುತ್ತಾನೆ, ಕವಿ. ತನ್ನ ಕಾವ್ಯವು ಭಗವದ್ಗೀತೆಗಿಂತಲೂ ಶ್ರೇಷ್ಠವಾದುದಂತೆ! ಬಂಧುಬಾಂಧವರನ್ನು ಕೊಲ್ಲಬೇಕೆಂದು ಹೊರಟ ಅರ್ಜುನನಿಗೆ ಕುದುರೆಯ ಸಾರಥಿಯಾಗಿ ನಿಂತು ಬೋಧೆ ಮಾಡಹೊರಟ ಆ ಗೀತೆಯೆಲ್ಲಿ? 'ಭುವನೋಪಕಾರಕ್ಕೆ ನರನಾದ ಹರಿಗೊರೆದ ಶಿವಗೀತೆಗೇಂ ದೊರೆಯೆ, ಸರಿಯೆ' ಅದು? ಎಂದು ಕೇಳುತ್ತಾನೆ, ಕವಿ. ಆತನ ತರ್ಕಸರಣಿ ವಿಲಕ್ಷಣವಾಗಿದ್ದರೂ ಆತನ ಕವಿತೆಯಲ್ಲಿ ಪ್ರಾಸಾದಿಕ ಗುಣವಿದೆ. ಆತ್ಮದ ಸ್ವರೂಪವನ್ನು ಹೇಳುತ್ತಾ

ಘಟಮನೆಲ್ಲೆಲ್ಲಿಗಂ ಕೊಂಡೊಯ್ಯಲದರಲ್ಲಿ
ಘಟಿಸಿದಾಕಾಶವಾವಗಮಿರ್ಪ ಕಾರಣದೆ
ಘಟದೊಡನೆ ಪೂರ್ವಪ್ರದೇಶದಾಕಾಶಮೇ ಪೋಯ್ತೆಂದು ತಿಳಿವತೆರದಿಂ।
ಪಟುಕರ್ಮವಶದಿನೀ ಲಿಂಗದೇಹಂ ಮಹೋ
ತ್ಕಟದೇಹಮಂ ಬಿಟ್ಟು ಲೋಕಾಂತರಕೆ ಪೋಗ
ಲಟನವಿಲ್ಲದ ಪೂರ್ಣನಾದಾತ್ಮನುಂ ಪೋದನೆಂಬುದುಪಚಾರಮಾತ್ರಂ ॥

ಕಠಿನವಾದ ವಿಷಯವನ್ನು ಕೂಡ ಉಚಿತವಾದ ಉದಾಹರಣೆಯೊಡನೆ ಮನದಟ್ಟುವಂತೆ ಕವಿ ಬರೆದಿದ್ದಾನೆ. ಆತನ ಕಲ್ಪನಾ ಶಕ್ತಿಯೂ ಕೀಳಾದುದಲ್ಲ. ಈಶ್ವರನ ವಾಹನವಾದ ನಂದಿಯನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ. ಜನನದ ಘೋರ ದುಃಖವನ್ನು ವರ್ಣಿಸುತ್ತಾ 'ಮತಿಗೆಟ್ಟಧೋಮುಖನಾಗಿ ನೆಟ್ಟನೆ ನೆಲಕೆಬೀಳ್ವ ಕಟ್ಟಳೆಯನೇನೆಂಬೆ ?' ಎಂದು ಹೇಳಿ 'ನಟ್ಟ ಸುಜ್ಞಾನದೀ ಪುಟ್ಟನಳಿದವನೆ ಚದುರಂ'ಎಂದು ಉದ್ಗಾರ ತೆಗೆಯುವುದು ಹೃದಯಸ್ಪರ್ಶಿಯಾಗಿದೆ.

**ಸೋಮನಾಥಕವಿ :**

ಶ್ರೀಕೃಷ್ಣ ಬಲರಾಮರ ಜನನದಿಂದ ಹಿಡಿದು ಕಂಸವಧೆಯವರೆಗಿನ 'ಕೃಷ್ಣಚರಿತಾಮೃತ' ವನ್ನು ಒಳಗೊಂಡ 'ಅಕ್ರೂರಚರಿತೆ' ಯನ್ನು ಸೋಮನಾಥಕವಿ ಬರೆದಿದ್ದಾನೆ. ಹಿಂದಿನ ಕವಿಗಳಲ್ಲಿ ಭಾಗವತ ಪಂಥದ ಕಾವ್ಯಪರಂಪರೆಗೆ ಮೂಲಪುರುಷನಂತಿರುವ ಕುಮಾರವ್ಯಾಸನನ್ನು ಮಾತ್ರ ತನ್ನ ಕಾವ್ಯದ ಆರಂಭದಲ್ಲಿ ಸ್ತೋತ್ರಮಾಡಿದ್ದಾನೆ. ಈತನ ಕಾಲವನ್ನು ನಿರ್ಧರಿಸಲು ಯಾವ ಸಾಧನಗಳೂ ಇಲ್ಲ. "ಪೂರ್ವಕವಿಗಳಲ್ಲಿ ಕುಮಾರವ್ಯಾಸನನ್ನು (೧೪೩೦) ಸ್ತುತಿಸಿರುವುದರಿಂದ ಇವನ ಕಾಲವು ಸು. ೧೬೦೦ ಆಗಿರಬಹುದೆಂದು ತೋರುತ್ತದೆ"ಎಂದು ಕವಿಚರಿತಕಾರರು ಹೇಳಿರುವುದನ್ನೇ ಸ್ವೀಕರಿಸಬೇಕಾಗಿದೆ. ಆರಂಭದಲ್ಲಿ ಲಕ್ಷ್ಮೀಪತಿಯಾದ ನಾರಾಯಣನನ್ನೂ ಆಮೇಲೆ ಕ್ರಮವಾಗಿ ಈಶ್ವರ, ವಿಘ್ನೇಶ್ವರ, ಶಾರದೆ, ಗಜಾನನ, ಮನ್ಮಥ, ವೇದವ್ಯಾಸರನ್ನೂ ಸ್ತುತಿಸಿ

ಕವಿ ಕುಮಾರವ್ಯಾಸರಾಯನ
ಕವಿತೆ ಜಾಣರ ಸೊಬಗು ರಸ ಭಾ
ವವನು ಸದಲಂಕೃತಿಯನತಿ ಮಧುರೋಕ್ತಿ ಕೌಶಲವ
ಸವಿನುಡಿಯ ಗಮಕಿಗಳ ಚರಣಾ
ಬ್ಜವನು ಪಿಡಿದಕ್ರೂರಚರಿತೆಯ
ವಿವರಿಸಿದನಾ ಸೋಮನಾಥ ಕವೀಂದ್ರನೊಲವಿನಲಿ

ಎಂದು ತನ್ನ ಆದರ್ಶಕವಿಗೆ ಪುಷ್ಪಾಂಜಲಿಯನ್ನು ಅರ್ಪಿಸುತ್ತಾನೆ. ಅನಂತರ

ಧರೆಯರಿಯಲಾ ಕೃಷ್ಣಚರಿತದ
ಶರಧಿಯೊಳಗಕ್ರೂರಚರಿತೆಯ
ನೊರೆವೆನಚ್ಯುತಭಕ್ತರೆಲ್ಲರ ಚರಣಕಭಿನಮಿಸಿ

ಎಂದು ತನ್ನ ಕವಿತಾಸ್ವರೂಪವನ್ನು ಸೂಚಿಸುತ್ತಾನೆ. ಆದಿಯಿಂದ ಅಂತ್ಯದವರೆಗೆ ಶ್ರೀಕೃಷ್ಣನ ಕಥೆಯೇ ಇರುವುದರಿಂದ ಆತನನ್ನು ಅನನ್ಯಭಕ್ತಿಯಿಂದ ಸ್ತೋತ್ರಮಾಡುವುದಕ್ಕೆ ಸಾಕಷ್ಟು ಅವಕಾಶವಿದೆ. ಕಾವ್ಯವನ್ನು ಮನೋಹರವಾಗಿ ಬರೆಯಲು ಬೇಕಾದಷ್ಟು ರಸಸ್ಥಾನಗಳೂ ಕವಿಗೆ ದೊರೆತಿವೆ. ಆದರೆ ಅವುಗಳನ್ನು ಬಳಸಿಕೊಂಡು ರಸವತ್ಕಾವ್ಯವನ್ನು ಸೃಷ್ಟಿಮಾಡಬಲ್ಲ ಪ್ರತಿಭೆಯಾಗಲಿ, ಕಲ್ಪನಾಶಕ್ತಿಯಾಗಲಿ ಕವಿಗೆ ಇಲ್ಲ. ಸಕಲ ಇಷ್ಟಾರ್ಥಸಿದ್ಧಿಯನ್ನೂ ಪಡೆದ ಅಕ್ರೂರ ಕೃಷ್ಣನನ್ನು ಸ್ತೋತ್ರಮಾಡುತ್ತಾನೆ—

ಲೋಕದುದಯ ಸ್ಥಿತಿ ಲಯಕೆ ನೀ
ನಾಕೆವಾಳನು ಸಕಲ ಜೀವಾ
ನೀಕದಂತರ್ಯಾಮಿ ಸಾಕ್ಷಾದ್ವಿಷ್ಣುಮಯ ಮೂರ್ತಿ
ಏಕಮೇವಾದ್ವಿತೀಯನೆಂಬುದ
ನೂಕಿ ನರಲೀಲೆಯಲಿ ನಮ್ಮನು
ಸಾಕ ಬಂದೈ..........................

ಕುಮಾರವ್ಯಾಸನ ಮಾತುಗಳನ್ನೇ ಸೋಮನಾಥನೂ ಬಳಸುತ್ತಾನೆ. ಆದರೆ ? 'ಕಾಕಃ ಕಾಕಃ ಪಿಕಃ ಪಿಕಃ' ಎನ್ನಬೇಕೆನ್ನಿಸುತ್ತದೆ.

**ನರಹರಿ :**

ಕಾವೇರೀತೀರದ ಬಲ್ಲಳಪುರದ ಪ್ರಭುವಾದ ನರಹರಿಕವಿಯು ಹನ್ನೊಂದುನೂರಕ್ಕಿಂತಲೂ ಹೆಚ್ಚುಪದ್ಯಗಳನ್ನೊಳಗೊಂಡ 'ಪ್ರಹ್ಲಾದ ಚರಿತ್ರೆ'ಯನ್ನು ಭಾಮಿನಿಷಟ್ಪದಿಯಲ್ಲಿ ಬರೆದಿದ್ದಾನೆ. ತಾನು 'ಪೊಸ ರಸಾಲಂಕಾರ ಜಾಣ್ಣುಡಿ | ಯೆಸೆವ ಪದಬಂಧಗಳ ಶಬ್ದದ | ಗಸಣೆಯರಿತವನಲ್ಲ' ಎಂದು ನಮ್ರತೆಯನ್ನು ಪ್ರದರ್ಶಿಸಿ, ಲಕ್ಷ್ಮೀಶ ಕವಿ ತನ್ನ ಇಷ್ಟದೇವತೆಯನ್ನು ಪ್ರಾರ್ಥಿಸುವಂತೆ, ತಾನೂ ತನ್ನ ಇಷ್ಟದೇವತೆಯಾದ ಗರುಡಗಿರಿವಾಸನನ್ನು ತನ್ನ ನಾಲಗೆಯಲ್ಲಿ ನಿಂತು ನುಡಿಸಬೇಕೆಂದು ಪ್ರಾರ್ಥಿಸುತ್ತಾನೆ. ಇವನ ಕಾಲ ಸು. ೧೬೫೦ ಎಂದು ಕವಿಚರಿತೆಕಾರರು ಊಹಿಸಿದ್ದಾರೆ. ಕವಿಯು ತನ್ನ ಗ್ರಂಥವನ್ನು ಕುರಿತು

> ಹೊಸಕುಸುಮ ಪರಿಮಳವನಳಿ ಭುಂ
> ಜಿಸುವವೊಲು ಜೀಮೂತನಾದಗ
> ಳಿಸೆಯೆ ಶಿಖಿ ಕುಣಿವವೊಲ್ಲು ನೈದಿಲ ಮುಗುಳು ಚಂದ್ರಮನ
> ಮುಸುಡನೀಕ್ಷಿಸುವಂತೆ ಬೆಲ್ಲದ
> ರಸವ ಡಗೆ ಹತ್ತಿದವ ಸವಿವವೊ
> ಲೆಸೆವುದೀ ಹರಿಭಕ್ತಿಸಾರದ ಸುಖವು ಕೇಳ್ದರಿಗೆ

ಎಂದು ಹೇಳುತ್ತಾನೆ. ಆತನ ಹೇಳಿಕೆ ಬಂಡವಾಳವಿಲ್ಲದ ಬಡಾಯಿಯೇನೂ ಅಲ್ಲ. ಕವಿಗೆ ಒಳ್ಳೆಯ ಕಲ್ಪನಾ ಶಕ್ತಿಯಿದೆ. ಆತನ ಮಾತುಗಳು ಸರಳ, ಶೈಲಿ ಬಂಧುರ, ಕವಿತೆ ಭಾವಗರ್ಭಿತ. ಹಿರಣ್ಯಕಶಿಪು—ಪ್ರಹ್ಲಾದರ ಸಂಭಾಷಣೆ ಬಹು ಸರಸವಾಗಿದೆ. ತಂದೆ ಮಗನನ್ನು ಕುರಿತು ಮಧುಸೂದನನನ್ನು ನಂಬಬೇಡವೆಂದು ಬುದ್ಧಿ ಹೇಳುತ್ತಾ ಅವನ ಸ್ನೇಹ 'ತಿಮಿರದ ರವಿಯ ಸಖತನದ ಗಾದೆಯಹುದಂತ್ಯದಲಿ' ಎನ್ನುತ್ತಾನೆ. ಆಗ ಭಾಗವತೋತ್ತಮನಾದ ಮಗ

> ಅರಸುತಿಹ ಲತೆ ಕಾಲ ತೊಡಕಲು
> ಹರಿದು ಬಿಸುಡುವರುಂಟೆ ಸಿರಿ ಬರ
> ಲರಿದರಿದು ಪದದೊದೆದು ನೂಕುವರುಂಟೆ, ಹಸಿದಿರಲು

ಕರೆದು ಕ್ಷೀರಾನ್ನವನು ಬಡಿಸಲು
ಹೊರಗೆ ಸೂಸುವರುಂಟೆ ಸಿರಿಧರ
ಸ್ಮರಣೆ ಬಾಯಿಗೆ ಬರಲು ನಾನದನೆಂತು ಬಿಡಲೆಂದ

ಕವಿಯ ವರ್ಣನಾಭಾಗಗಳಲ್ಲಿ ಕುಮಾರವ್ಯಾಸನ ಛಾಯೆ ಸ್ಪಷ್ಟವಾಗಿ ಮೂಡಿದೆ. ಭಾಮಿನೀಷಟ್ಪದಿಯಲ್ಲಿ ಬರೆಯುವ ಯಾವ ಕವಿಯೇ ಆಗಲಿ, ಆ ಮಹಾಕವಿಯ ಪ್ರಾಸಾದಿಕ ವಾಣಿಯಿಂದ ಪ್ರಭಾವಿತನಾಗದಿರಲು ಹೇಗೆ ಸಾಧ್ಯ ?

**ವೆಂಕಕವಿ :**

ನರಹರಿಯ ಸಮಕಾಲಿಕನಾದ ವೆಂಕಕವಿ ' ವೆಂಕಟೇಶ್ವರ ಪ್ರಬಂಧ'ವೆಂಬ ಚಂಪೂಕಾವ್ಯವನ್ನುಬರೆದಿದ್ದಾನೆ. ತನ್ನ ಕಾವ್ಯದಲ್ಲಿ ' ಬೆಟ್ಟದ ಕೋಟೆರಾಯ'ನನ್ನು ಸ್ಮರಿಸಿದ್ದಾನೆ. ಮೈಸೂರು ಜಿಲ್ಲೆಯ ಹಿಮವದ್ಗೋಪಾಲಸ್ವಾಮಿ ಬೆಟ್ಟದ ಪ್ರಾಂತಕ್ಕೆ ' ಬೆಟ್ಟದ ಕೋಟೆ' ಯೆಂಬ ಹೆಸರಿತ್ತಂತೆ! ಆದ್ದರಿಂದ ಕವಿಯು ಆ ಪ್ರಾಂತದವನಾಗಿದ್ದು ಹಿಮವದ್ಗೋಪಾಲಸ್ವಾಮಿಯ ಭಕ್ತನಾಗಿರಬೇಕೆಂದು ತೋರುತ್ತದೆ. ಕವಿಚರಿತ್ರೆಯಲ್ಲಿ ಉದ್ಧೃತವಾಗಿರುವ ಆತನ ಪದ್ಯಗಳನ್ನು ನೋಡಿದರೆ ಕವಿಯ ಬಂಧವು ಬಹಳ ಪ್ರೌಢವಾಗಿರುವಂತೆಯೂ, ಆತನ ಪ್ರಕೃತಿವರ್ಣನೆಯು ರಮ್ಯವಾಗಿರುವಂತೆಯೂ ಕಂಡು ಬರುತ್ತದೆ. ಕವಿಯು ಕವಿಸಮಯಕ್ಕೆ ಶರಣನಾಗಿದ್ದರೂ ಪ್ರಕೃತಿಯ ಮಡಿಲಲ್ಲಿ ಬೆಳೆದು, ಅದರಿಂದ ಪ್ರಭಾವಿತನಾದಂತೆ ಕಾಣುತ್ತಾನೆ. ಈ ಕಾವ್ಯ ಅಸಮಗ್ರವಾಗಿದೆಯಂತೆ! ಆ ಅಸಮಗ್ರವಾದುದನ್ನಾದರೂ ಸಮಗ್ರವಾಗಿ ನೋಡದೆ ಏನೂ ಹೇಳುವಂತಿಲ್ಲ.

ಇದೇ ಕಾಲದ ಇತರ ಕವಿಗಳೆಂದರೆ 'ಪಂಪಾವಿರೂಪಾಕ್ಷಶತಕ' ವನ್ನು ಭಾಮಿನೀಷಟ್ಪದಿಯಲ್ಲಿ ಬರೆದ ಹಿರಿಯೂರು ರಂಗ, 'ಮಾರ್ಕಂಡೇಯ ರಾಮಾಯಣ' ವನ್ನು ವಾರ್ಧಕಷಟ್ಪದಿಯಲ್ಲಿ ಬರೆದ ತಿಮ್ಮರಸ, 'ತುಲಸೀ ಮಾಹಾತ್ಮ್ಯ'ವನ್ನು ಭಾಮಿನೀಷಟ್ಪದಿಯಲ್ಲಿ ಬರೆದಿರುವ ಅಚ್ಯುತದಾಸ "ರುಕ್ಮಾಂಗದ ಚರಿತೆ' ಯನ್ನು ಸಾಂಗತ್ಯದಲ್ಲಿ ಬರೆದ ಸೋಮನಾಥ ಇವರು ಸ್ಮರಣಾರ್ಹರು.

**ಬಬ್ಬೂರು ರಂಗ:**

ಈತನು ಬಹುಶಃ 'ಪಂಪಾವಿರೂಪಾಕ್ಷಶತಕ' ವನ್ನು ಬರೆದ ಹಿರಿಯೂರು ರಂಗಕವಿಯ ಮಗನಿರಬಹುದು. ತಾನು ಫೇನಪುರಿಯ(ಹಿರಿಯೂರು) ಕರಣಿಕಾಗ್ರಣಿ ರಂಗ ಮತ್ತು ಆತನ ಮಡದಿ ರುಕ್ಮಿಣಿ—ಇವರ ಮಗನೆಂದು ಕವಿ ಹೇಳಿಕೊಂಡಿದ್ದಾನೆ. ಈತನು ರಂಗಕವಿಯ ಮಗನೆಂದು ಸ್ವೀಕರಿಸುವುದಾದರೆ ಹದಿನೇಳನೆಯ ಶತಮಾನದ ಕಡೆ ಅಥವಾ ಹದಿನೆಂಟನೆಯ ಶತಮಾನದ ಆರಂಭದಲ್ಲಿ ಇದ್ದವನೆಂದು ಹೇಳಬೇಕಾಗುತ್ತದೆ. ಹಿರಿಯೂರಿನ ಸಮೀಪದಲ್ಲಿರುವ ಬಬ್ಬೂರಿನ ರಂಗನಾಥಸ್ವಾಮಿ ಇವನ ಕುಲದೈವ. ತನ್ನನ್ನು 'ಸುಕವಿಗಳ ಕರಮುಕುರ', 'ಕುಕವಿಗಳೆದೆಗಿಚ್ಚು' ಇತ್ಯಾದಿಯಾಗಿ ಹೊಗಳಿಕೊಂಡು, ತಾನು, ಕುಮಾರವ್ಯಾಸ, ಕುಮಾರ ವಾಲ್ಮೀಕಿ ಲಕ್ಷ್ಮೀಶ—ಈ ನಾಲ್ವರೇ ಕನ್ನಡದಲ್ಲಿ 'ಕೃತಿ ಸೃಜಿಸುವತಿ ದಿಗ್ಗಜರು. ತಮಗಿದಿರಾರು ಧರಣಿಯಲಿ?' ಎಂದು ಕೇಳುತ್ತಾನೆ. ಈತನು 'ಅಂಬಿಕಾವಿಜಯ' 'ಪರಶುರಾಮ ರಾಮಾಯಣ' ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. ಕುಮಾರವ್ಯಾಸನು 'ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ' ಎಂದು ಹೇಳಿಕೊಂಡಿರುವಂತೆ ಈತನೂ 'ಅಗ್ಗಳಿಕೆ ಪರರನುಸರಿಸದೊಂ | ದಗ್ಗಳಿಕೆ ಭಾಮಿನಿಯ ಷಟ್ಪದಿ ಮುಗ್ಗಿಸದೆ ಕರಪುಸ್ತಕದಿ ಪದಗಳನು ನಿರ್ಮಿಸುವ' ಎಂದು ಹೇಳಿಕೊಂಡಿದ್ದಾನೆ. ಬಬ್ಬೂರು ರಂಗಕವಿಯಲ್ಲಿ ತಕ್ಕಷ್ಟು ಪ್ರತಿಭೆ ಕಲ್ಪನಾಶಕ್ತಿಗಳು ಉಂಟು; ಆದರೂ ಕುಮಾರವ್ಯಾಸನಿಗೆ ಸಮನೆಂದು ಹೇಳಿಕೊಳ್ಳ ಹೊರಟರೆ 'ಎಲೆ ಬೆಕ್ಕೆ ರೂಪಿನಿಂದಲೆ ಹುಲಿಜಾತಿಗೆ ಸೇರ್ದೆನೆಂದು ಗರ್ವಿಸಬೇಡ' ಎಂದು ಹೇಳಬೇಕೆನಿಸುತ್ತದೆ.

'ಅಂಬಿಕಾವಿಜಯ'ವು ಸುಮಾರು ೩೦೦೦ ಪದ್ಯಗಳ ಭಾಮಿನೀ ಷಟ್ಪದಿಯಲ್ಲಿದೆ. ಆದಿಶಕ್ತಿಯಾದ ಅಂಬಿಕೆ ರಕ್ತಬೀಜಾಸುರನನ್ನು ಸಂಹರಿಸಿದ ಕಥೆ ಈ ಕಾವ್ಯದ ವಸ್ತು. ಶಿವಭಕ್ತನಾದ ಮಾರ್ಕಂಡೇಯನ ಕಥೆಯೂ ಇದರಲ್ಲಿ ಸೇರಿದೆ. ಆದಿಶಕ್ತಿಯ ಸೌಂದರ್ಯವನ್ನು ವರ್ಣಿಸುತ್ತಾ

ಅಂಬುಜವು ಮಸುಳಿಸಿದುವಾ ಶಶಿ
ಬಿಂಬವದನೆಯ ವದನಕಾಂತಿಗೆ
ತುಂಬಿಗಳು ಚೀರಿದುವು ಭೃಂಗಾಳಕದ ಸುಂದರಕೆ

ಕಂಬುಕಂಠಿಯ ರದನಕುರಿ ದಾ
ಳಿಂಬ ಬಾಯ್ಬಿಡುತಿಹುವು ತೊಡೆಗಳ
ಸಂಭ್ರಮಕೆ ಬೆರವಾಗಿ ಸಿಂಡುವು ಬಾಳೆ ಬನದೊಳಗೆ.

ಎಂದು ಹೇಳುವುದು ಕವಿಸಮಯದ ಚೌಕಟ್ಟಿನೊಳಗೇ ಇರುವ ಚಿತ್ರವಾದರೂ ನೂತನ ವರ್ಣವೈಖರಿಯನ್ನು ಪಡೆದಿದೆ. ಜಲಕ್ರೀಡೆಯಾಡುತ್ತಿದ್ದ ಖಚರಿಯರನ್ನು ಕಂಡು, ಅವರ ಕಣ್ಣ ಬೆಳಕಿಗೆ ನಾಚಿ, ಮತ್ಸ್ಯಗಳು ಮುಳುಗಿಕೊಂಡವಂತೆ; ಮುಖವನ್ನು ಕಂಡು ಕಮಲಗಳು ಭಯದಿಂದ ನಡುಗಿದವಂತೆ; ತ್ರಿವಳಿಯನ್ನು ಕಂಡು 'ತೊಲಗಿ ಹಿಮ್ಮೆಟ್ಟಿದವು ಕಿರುದೆರೆ' ಎಂದು ಹೇಳುವಾಗಲೂ ಇದೇ ಸ್ವರೂಪ ಕಾಣಬರುತ್ತದೆ. ಕವಿಯ 'ಪರಶುರಾಮರಾಮಾಯಣ' ೧೫೦೦ ಕ್ಕಿಂತಲೂ ಹೆಚ್ಚು ಪದ್ಯಗಳನ್ನು ಒಳಗೊಂಡು ವಾರ್ಧಕಷಟ್ಪದಿಯಲ್ಲಿದೆ. ಇದು ಪರಶುರಾಮನ ಜೀವಿತ ವೃತ್ತಾಂತವನ್ನು ಒಳಗೊಂಡಿದೆ. ಕಾವ್ಯಗುಣದಲ್ಲಿ ಎರಡಕ್ಕೂ ಹೆಚ್ಚು ವ್ಯತ್ಯಾಸವೇನೂ ಇಲ್ಲ; 'ಅಂಬಿಕಾವಿಜಯಮಂ ಭಾಮಿನಿಯೊಳರಿಪಿದೆಂ, ಮಿಗುಳಿದಂ ವಾರ್ಧಕದ ಷಟ್ಪದಿಯೊಳುಸಿರುವೆಂ' ಎಂದು ಕವಿ ಹೇಳಿರುವುದನ್ನು ನಾವು ಗಮನಿಸಬಹುದು. ಎರಡು ಗ್ರಂಥಗಳಲ್ಲಿಯೂ ಅದರ ಗಾತ್ರಕ್ಕೆ ತಕ್ಕಷ್ಟು ಕಥೆಯಿಲ್ಲ, ಬೇಕಾದಷ್ಟು ವರ್ಣನೆಗಳು. ಕವಿಯ ಭಾಷೆ ಸರಳ, ಸುಲಭ, ಪದ್ಯಗಳ ಓಟ ಧಾರಾಳವಾಗಿದೆ.

**ಕೋನಯ್ಯ :**

ಭಾಮಿನೀ ಷಟ್ಪದಿಯಲ್ಲಿ ಸುಮಾರು ೧೭೦೦ ಪದ್ಯಗಳುಳ್ಳ 'ಕೃಷ್ಣಾರ್ಜುನರ ಸಂಗರ' ವನ್ನು ಬರೆದ ಕವಿ ಕೋನಯ್ಯ ಸು. ೧೫೫೦ರಲ್ಲಿ ಇದ್ದನೆಂದು ಊಹಿಸಲಾಗಿದೆ. ಆತನು ಹೋತೂರ ಚಿಟ್ಟರಸನ ಮಗನೆಂದೂ, 'ಸರಸಭಾರತಿ' ಎಂಬುದು ಆತನ ಬಿರುದೆಂದೂ ಆತನ ಗ್ರಂಥದಿಂದ ತಿಳಿದು ಬರುತ್ತದೆ. ಗಯನೆಂಬ ಗಂಧರ್ವನು ಶ್ರೀಕೃಷ್ಣನಿಗೆ ದ್ರೋಹವೆಸಗಿ, ಪ್ರಾಣಭಯದಿಂದ ಅರ್ಜುನನ ಮರೆಹೊಕ್ಕನು. ಅವನನ್ನು ಕೃಷ್ಣನು ತನಗೆ ಕೊಡಹೇಳಲು ಅರ್ಜುನನು ಕೊಡೆನೆಂದು ಹೇಳಿದನು. ಇದರಿಂದ ಹರಿನರರು ದ್ವೈತಕಾನನದಲ್ಲಿ ಕಾದಿದರು. ಕಡೆಯಲ್ಲಿ ಪರಮೇಶ್ವರನು ಪ್ರತ್ಯಕ್ಷನಾಗಿ, 'ಇರ್ವರ ತಿಳುಹಿ ಸಾಮದಲೊಂದು ಮಾಡಿದನು'— ಇದು 'ಕೃಷ್ಣಾರ್ಜು

ನರ ಸಂಗರ'ದ ಕಥಾವಸ್ತು. ಇದಕ್ಕೆ 'ಗಯಚರಿತ್ರೆ' ಎಂಬ ಹೆಸರೂ ಉಂಟು. ಕವಿಯು ತನ್ನ ಕಥಾವಸ್ತುವನ್ನು ಭಾರತದ ವನಪರ್ವದಿಂದ ಆಯ್ದುಕೊಂಡನಂತೆ! ಆದರೆ ವ್ಯಾಸಭಾರತದ ವನಪರ್ವದಲ್ಲಿ ಈ ಕಥೆ ಸಿಕ್ಕುವುದಿಲ್ಲ. ಕವಿಗೆ ಆಕರವಾದ ಭಾರತ ಯಾವುದೋ ಗೊತ್ತಿಲ್ಲ. ಈ ಕಥೆಯೇನೋ ಜನಕ್ಕೆ ಬಹು ಮೆಚ್ಚಿಗೆಯಾದುದು. ಈ ವಸ್ತುವನ್ನು ಆಧರಿಸಿ ಅನೇಕ ಕಾವ್ಯ, ಯಕ್ಷಗಾನ, ನಾಟಕಗಳು ಹುಟ್ಟಿಕೊಂಡಿವೆ. ಕವಿಯ ಈ ಕಾವ್ಯವೂ ಬಹು ಸರಳವಾಗಿ, ಸುಲಭವಾಗಿ, ಸರಸವಾಗಿರುವುದರಿಂದ ತುಂಬ ಜನಪ್ರಿಯವಾಗಿದೆ.

### ಹೆಳವನಕಟ್ಟೆ ಗಿರಿಯಮ್ಮ :

ಚಿತ್ರದುರ್ಗದ ಜಿಲ್ಲೆಯ ಹರಿಹರದ ಸಮೀಪದಲ್ಲಿರುವ ಕೊಮಾರನ ಹಳ್ಳಿಯಲ್ಲಿ ಸುಮಾರು ಇನ್ನೂರು ವರ್ಷಗಳ ಕೆಳಗೆ ಈ ಕವಯಿತ್ರಿ ಜೀವಿಸಿದ್ದಳೆಂದು ಪ್ರತೀತಿಯಿದೆ. ಆ ಊರಿನಲ್ಲಿರುವ ಹೆಳವನಕಟ್ಟೆ ರಂಗನಾಥ ಸ್ವಾಮಿಯು ಈಕೆಯ ಆರಾಧ್ಯದೈವ. ಆ ದೇವರ ಅಂಕಿತದಲ್ಲಿಯೇ ಈಕೆ 'ಚಂದ್ರಹಾಸನ ಕಥೆ', 'ಸೀತಾಕಲ್ಯಾಣ', ಉದ್ದಾಳಿಕನ ಕಥೆ' ಎಂಬ ಗ್ರಂಥಗಳನ್ನು ಬರೆದಿರುವುದಲ್ಲದೆ ಅನೇಕ ಹಾಡುಗಳನ್ನೂ ರಚಿಸಿದ್ದಾಳೆ. ಈಕೆಯ ಮೂರು ಗ್ರಂಥಗಳೂ ಪೌರಾಣಿಕವಾದುವು. 'ಚಂದ್ರಹಾಸನ ಕಥೆ'ಯನ್ನು ಲಕ್ಷ್ಮೀಶನ ಜೈಮಿನಿ ಭಾರತದಿಂದ ಎತ್ತಿಕೊಂಡು ಸಾಂಗತ್ಯದಲ್ಲಿ ಬರೆಯುತ್ತಿರುವುದಾಗಿ ಕವಯಿತ್ರಿಯೇ ಹೇಳಿಕೊಂಡಿದ್ದಾಳೆ. ಕಾವ್ಯದಲ್ಲಿ ಲಕ್ಷ್ಮೀಶನ ಪ್ರಭಾವ ಎದ್ದು ಕಾಣುತ್ತದೆ. ಕಾವ್ಯದ ಆರಂಭದಲ್ಲಿ ಮನೆ ದೇವರನ್ನು ಸ್ಮರಿಸಿರುವುದರ ಜೊತೆಗೆ, ಭಾರತ ಸಾಧ್ವಿಗೆ ಸಹಜವಾದ ರೀತಿಯಲ್ಲಿ ಪತಿಚರಣಗಳನ್ನೂ ಸ್ಮರಿಸಿದ್ದಾಳೆ. ಕಾವ್ಯದ ಕೊನೆಯಲ್ಲಿ ' ನಿತ್ಯ ನಿರ್ಮಲ ಪರಮಾನಂದ ಹೃದಯೆ' ಯೆಂದು ತನ್ನನ್ನು ಕರೆದುಕೊಂಡಿದ್ದಾಳೆ. ಈಕೆಯ 'ಸೀತಾಕಲ್ಯಾಣ'ವು ಹಾಡಿನ ಮಟ್ಟಿನಲ್ಲಿದೆ. 'ಉದ್ದಾಳಿಕನ ಕಥೆ' ಸಾಂಗತ್ಯದಲ್ಲಿದೆ. ಉದ್ದಾಳಿಕನೆಂಬ ಋಷಿಕುಮಾರನ ಕಥೆ ಇದರ ವಸ್ತು. ಹೆಣ್ಣುಮಕ್ಕಳು ಓದಿ ಆನಂದಪಡುವುದಕ್ಕೂ ಬಾಳಿಗೆ ಬೆಳಕನ್ನು ಪಡೆಯುವುದಕ್ಕೂ ಅನುಕೂಲಿಸುವಂತೆ ಹಾಡುಗಬ್ಬಗಳಾಗಿ ರಚಿತವಾಗಿರುವ ಈಕೆಯ

ಕೃತಿಗಳು ಸಾಕಷ್ಟು ಜನಪ್ರಿಯವಾಗಿವೆ. ಈಕೆಯ ಹಾಡುಗಳ ತತ್ತ್ವ ಮತ್ತು ನೀತಿಬೋಧೆ ಸರಳವಾಗಿ ಅರ್ಥಗರ್ಭಿತವಾಗಿವೆ. 'ಮನವೆನ್ನ ಮಾತ ಕೇಳದು ಮಂದಜ್ಞಾನದಿ । ತನುವಿನಾಶಿಯು ಬಿಡಲೊಲ್ಲದು । ವನಜನಾಭ ನಿಮ್ಮ ನಾಮದ ಸ್ಮರಣೆಯ । ನೆನೆಯದೆ ಕಂಡಕಡೆಗೆ । ಎಳೆಯುತಲಿದೆ ॥ ಮದಗಜ ವ್ಯೆಯುಮರಿದು । ಮುಂದುಗಾಣದೆ । ಕುದುವಿನೊಳಗೆ ಬಿದ್ದಂತಾದೆನು । ಹೃದಯ ಕಮಲದೊಳು । ನಿಂತು ರಕ್ಷಿಸು ಎನ್ನ । ಪದುಮಾಕ್ಷ ಹೆಳವನಕಟ್ಟೆ ರಂಗಯ್ಯ'. ಗಿರಿಯಮ್ಮನ ಇಂತಹ ಹಾಡುಗಳು ಹರಿದಾಸರ ಹಾಡುಗಳಂತೆಯೇ ಜನಸಾಮಾನ್ಯರನ್ನೂ ಹೆಣ್ಣುಮಕ್ಕಳನ್ನೂ ಮೇಲೆತ್ತಲು ಶ್ರೇಷ್ಠ ಸಾಧನಗಳಾಗಿವೆಯೆಂದರೆ ಅತಿಶಯೋಕ್ತಿಯೇನೂ ಅಲ್ಲ.

**ತಿಮ್ಮಾಮಾತ್ಯ :**

'ರಾಮಾಭ್ಯುದಯ ಕಥಾ ಕುಸುಮಮಂಜರಿ' ಎಂಬುದು ಈತ ಭಾಮಿನೀಷಟ್ಪದಿಯಲ್ಲಿ ಬರೆದಿರುವ ಗ್ರಂಥ. ಸುಮಾರು ೩,೫೦೦ ಪದ್ಯಗಳನ್ನು ಒಳಗೊಂಡ ಈ ಗ್ರಂಥಕ್ಕೆ 'ಆನಂದ ರಾಮಾಯಣ' ಎಂಬ ಹೆಸರೂ ಉಂಟು. ಇದು ಎಲ್ಲ ರಾಮಾಯಣಗಳ ಕಥಾಸಾರವನ್ನೂ, ವಿಷ್ಣುವಿನ ವರಾಹ ನರಸಿಂಹ ಅವತಾರಗಳ ಕಥೆಯನ್ನೂ, ರಾವಣ ದಿಗ್ವಿಜಯವನ್ನೂ ಬಾಲಕಾಂಡದಲ್ಲಿಯೇ ಒಳಕೊಂಡು, ಶ್ರೀರಾಮನ ರಾಜ್ಯಭಾರ, ದಿಗ್ವಿಜಯ, ಅಶ್ವಮೇಧಗಳ ಕಥೆಯನ್ನು ಉತ್ತರಕಾಂಡದಲ್ಲಿ ಒಳಕೊಂಡಿದೆಯಂತೆ! ಈತನ ಸ್ಥಳ ಬೆಂಗಳೂರು ಜಿಲ್ಲೆಯ ಆಗರವೆಂದೂ, ಅದೇ ಜಿಲ್ಲೆಯಲ್ಲಿರುವ ಸಹದೇವಪುರ ಅಥವಾ ಸಾದನಹಳ್ಳಿಯ ತಿರುಮಲದೇವರು ಈತನ ಮನೆದೇವರೆಂದೂ, ಆ ದೇವರ ಅಂಕಿತದಲ್ಲಿಯೇ ತನ್ನ ಕಾವ್ಯವನ್ನು ಈತನು ರಚಿಸಿರುವನೆಂದೂ ತಿಳಿದು ಬರುತ್ತದೆ. ಈತನ ಕಾಲ ಸು ೧೫೫೦ ಎಂದು ಕವಿಚರಿತಕಾರರ ಮತ. ಈತನ ನುಡಿನಿರಿಗೆ ತಿಳಿಯಾಗಿ ಲಲಿತವಾಗಿದೆ. ತಂಗಾಳಿಯ ಈ ವರ್ಣನೆಯನ್ನು ನೋಡಿ—

ತಿಳಿಗೊಳಂಗಳ ಕಲಕಿ, ಕಮಲಾ
ವಳಿಯ ನಡುಗಿಸಿ, ಭ್ರಮರಿಕಾ ಸಂ
ಕುಳವ ಕೆದರಿ, ಮಾರಂದದೋಕುಳಿಯಾಡಿ, ಸುಮುಜವ

ಲಲಿತ ಕರದಿಂ ಚೆಲ್ಲಿ ತರುಗಳ
ತಳಿರ ತುಡುಕುತ ತೊಳತೊಳಲಿ ಸುಳಿ
ಸುಳಿದು ಚೈತ್ರನ ಕಲಭವೆನೆ ವಿಹರಿಸಿತು ತಂಬೆಲರು

ಲಕ್ಷ್ಮೀಶನ ಪ್ರಭಾವ ಕವಿಯಮೇಲೆ ಸಾಕಷ್ಟು ಆಗಿದೆಯೆಂಬುವಕ್ಕೆ ಈ ಉದಾಹರಣೆಯೊಂದು ಸಾಕು. ರಾಮಾಯಣದ ವಿವಿಧ ಕಥೆಗಳನ್ನು ಒಳಗೊಂಡು ರಾಮಾಯಣದ ಒಂದು ಕೋಶದಂತಿರುವ ಈ ಕಾವ್ಯ ಜನಪ್ರಿಯವಾಗಿದೆ.

**ಚಿದಾನಂದಾವಧೂತ :**

ಈತನು ಭಾಮಿಸೀಪಟ್ಪದಿಯಲ್ಲಿ 'ಜ್ಞಾನಸಿಂಧು' 'ದೇವೀ ಮಾಹಾತ್ಮ್ಯೆ' ಎಂಬ ಎರಡುಗ್ರಂಥಗಳನ್ನೂ 'ಪಂಚೀಕರಣ'ವೆಂಬ ವಚನ ಗ್ರಂಥವನ್ನೂ, 'ತತ್ವ ಚಿಂತಾಮಣಿ' ಎಂಬ ಗದ್ಯಗ್ರಂಥವನ್ನೂ, 'ನವಚಕ್ರ ಕುಲ ರೇಖಾಲಕ್ಷಣ' ಎಂಬ ಟೀಕಾಗ್ರಂಥವನ್ನೂ, 'ಬಗಳಾಂಬಾ ಸ್ತೋತ್ರ' 'ಕಾಮವಿಂಡಂಬನ' ಎಂಬ ಪದಗಳ ಗ್ರಂಥಗಳನ್ನೂ, 'ಚಿದಾನಂದರ ವಚನ' ಎಂಬ ಹಾಡುಗಳನ್ನೂ ಬರೆದಿದ್ದಾನೆ. ಇವುಗಳಲ್ಲಿ ಆತನ ಮೊದಲೆರಡು ಗ್ರಂಥಗಳು ಗಮನಾರ್ಹವಾದವು. 'ಜ್ಞಾನಸಿಂಧು'ವು ಅದ್ವೈತವೇದಾಂತವನ್ನು ವಿಸ್ತಾರವಾಗಿ ಪ್ರತಿಪಾದಿಸುವ ೩೬೨೦ ಪದ್ಯಗಳನ್ನು ಒಳಗೊಂಡಿದೆ. ಇದನ್ನು ಶಿವನು ಷಣ್ಮುಖನಿಗೆ ಬೋಧಿಸಿದನಂತೆ! ತನ್ನನ್ನು ತಾನೇ ತಿಳಿದು, ತಾನು ತಾನೇ ಆಗಿ, ತನ್ನ ಅನುಭವವನ್ನು ತುಂಬಿಕೊಂಡಿರುವುದರಿಂದ ಇದಕ್ಕೆ 'ಜ್ಞಾನಸಿಂಧು' ಎಂದು ಹೆಸರಾಯಿತಂತೆ! ಈ ಗ್ರಂಥವು ರಂಗನಾಥನ 'ಅನುಭವಾಮೃತ'ವನ್ನು ಬಹಳಮಟ್ಟಿಗೆ ಅನುಸರಿಸಿರುವುದಲ್ಲದೆ, ಅದರಂತೆಯೇ ಲಲಿತವಾಗಿದೆ. ಈತನ ಗುರುಸ್ವರೂಪದ ವರ್ಣನೆಯನ್ನು ನೋಡಿ—

ಅಚ್ಚ ಬೆಳುದಿಂಗಳಿನ ಪ್ರಭೆಗಳ
ಮುಚ್ಚಿಸಿಯೆ ಆನಂದ ಸುಖವನು
ಹೆಚ್ಚಿಸಿಯೆ ಚಿನ್ಬಿಂದು ಕಳೆಗಳ ಕವಚತೊಡಿಸಿಯೆ ಮೇಣ್

ಎಚ್ಚರನು ಮರಸಿಯೆ ಅವಿದ್ಯೆಯ
ಕೊಚ್ಚಿಸಿಯೆ ಪರಿಪೂರ್ಣಪರವಶ
ದಚ್ಚರಿಯ ಮಾಳ್ಪಾತನೇ ಸದ್ಗುರುವು ಕೇಳೆಂದ ॥

ನೀರಸವಾದ ವೇದಾಂತವಿಚಾರವನ್ನು ಸರಳವಾಗಿ, ಸುಲಭವಾಗಿ, ಲಲಿತವಾಗಿ ಹೇಳಿರುವ ಈತ ಅಭಿವಂದ್ಯ.

ಕವಿಯ 'ದೇವೀಮಾಹಾತ್ಮ್ಯ'ವು ಸಂಸ್ಕೃತ ಗ್ರಂಥದ ಭಾಷಾಂತರ. ತನ್ನ ಗುರು ಚಿದಾನಂದನ ಆಜ್ಞೆಯಂತೆ ಆತನು ಈ ಕಾವ್ಯ ಬರೆದನಂತೆ. ತುಂಗಭದ್ರಾತೀರದ ಅಯೋಧ್ಯೆಯಲ್ಲಿದ್ದ ತನ್ನ ಗುರುವನ್ನು ಇದರಲ್ಲಿ ಸ್ತುತಿಸಿದ್ದಾನೆ. ಕವಿಯ ಕಾವ್ಯಶಕ್ತಿಗೆ ಉದಾಹರಣೆಯಂತಿರುವ ದೇವಿಯ ಯುದ್ಧದ ಈ ಪದ್ಯವನ್ನು ನೋಡಿ—

ಏರಿಸಿದಳೈ ದೇವಿ ಧನುವನು
ಕಾರಿಸಿದಳಸುಗಳನು ದೈತ್ಯರ
ತೂರಿದಳು ಕೂರ್ಗಣೆಯ ಗರಿ ಗಾಳಿಯಲುಳಿಯದಂತೆ ।
ಹಾರಿದವು ತಲೆ ಕುದುರೆ ಗಜಗಳ
ಸೋರಿಡುವ ರಕ್ತದಲಿ ದಿನಪನ
ಚಾರು ಕಿರಣಗಳಡಗಿದವು ಕತ್ತಲೆಯು ಕವಿಯಿತ್ತು ॥

ಕುಮಾರವ್ಯಾಸನ ಛಾಯೆ ಈತನ ಪದ್ಯಗಳಲ್ಲಿ ಸ್ಪಷ್ಟವಾಗಿ ಮೂಡಿದೆ, ನಿಜ. ಅದನ್ನು ಬಳಸಿಕೊಳ್ಳುವಲ್ಲಿ ತನ್ನತನವನ್ನೂ ಮೆರೆದಿದ್ದಾನೆ. ಈತನ ಕಲ್ಪನಾಶಕ್ತಿ, ಸಮತೋಲನವಾದ ಶೈಲಿ, ಸಾರ್ಥಕವಾದ ಭಾಷೆ ಸ್ತೋತ್ರಾರ್ಹವಾಗಿವೆ. ತುಂಗಾತೀರ ವಾಸಿಯಾಗಿದ್ದ ಈತನು ಒಬ್ಬ ಅವಧೂತನೊ ಸನ್ಯಾಸಿಯೊ ಆಗಿದ್ದಿರಬೇಕು.

**ವೆಂಕಾಮಾತ್ಯ :**

ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ (ಸು. ೧೭೭೦)ದ್ದ ಈ ಕವಿ 'ರಾಮಾಯಣ,' 'ಇಂದಿರಾಭ್ಯುದಯ,' 'ಹನುಮದ್ವಿಲಾಸ' ಎಂಬ ಕನ್ನಡ ಗ್ರಂಥಗಳನ್ನೂ ಅನೇಕ ಸಂಸ್ಕೃತ ಗ್ರಂಥಗಳನ್ನೂ ಬರೆದಿದ್ದಾನೆ. ರಾಮಪುರಿಯ ಹಂಪೆಯಾಮಾತ್ಯ-ವಾಚಾಂಬೆಯರ ಪುತ್ರನಾದ ಈತನು

ಆಂಜನೇಯನ ವರಪ್ರಸಾದದಿಂದ ಕವಿತಾಶಕ್ತಿಯನ್ನು ಪಡೆದನೆಂದೂ ಕವಿತಾಶಕ್ತಿ ಮಾತ್ರವೇ ಅಲ್ಲದೆ ಗಾಂಧರ್ವಕಳಾವಿದನಾಗಿಯೂ ಇದ್ದ ನೆಂದೂ ಹೇಳಿಕೊಂಡಿದ್ದಾನೆ. ಆತನ ಅಲಂಕಾರಮಣಿದರ್ಪಣದಲ್ಲಿ ಕವಿಯು ತನ್ನನ್ನು ಷಡ್ದರ್ಶನೀವಲ್ಲಭ, ಘಟಿಕಾಪ್ರಬಂಧರಚನಾವಿದಗ್ಧ— ಎಂದು ಕರೆದುಕೊಂಡಿದ್ದಾನೆ. ಆತನ ರಾಮಾಯಣವು ವಾರ್ಧಕಷಟ್ಪದಿ ಯಲ್ಲಿದ್ದು ೯೮೬೫ ಪದ್ಯಗಳನ್ನು ಒಳಗೊಂಡಿದೆ. ಈತನ ರಚನೆಯು ಲಕ್ಷಣ ಬದ್ಧವಾಗಿ ಪ್ರೌಢವಾಗಿದೆ. ಕವಿಯ ಇಂದಿರಾಭ್ಯುದಯವು ಚಂಪೂರೂಪ ವಾಗಿದೆ; ಲಕ್ಷ್ಮೀದೇವಿಯ ಅವತಾರಾದಿ ವಿಷಯಗಳನ್ನು ಒಳಗೊಂಡಿದೆ.

**ಮುದ್ದಣ :**

'ಮುದ್ದಣ'ನೆಂಬ ಕಾವ್ಯನಾಮದಿಂದ ಗ್ರಂಥರಚನೆಮಾಡಿ, ಕುಮಾರ ವ್ಯಾಸಯುಗಕ್ಕೂ ಆಧುನಿಕ ಯುಗಕ್ಕೂ ರಸಸೇತುವೆಯನ್ನು ನಿರ್ಮಿಸಿದ ಲಕ್ಷ್ಮೀನಾರಣಪ್ಪನು ಉಡುಪಿಯ ಸಮೀಪದ ನಂದಳಿಕೆ ಎಂಬ ಹಳ್ಳಿಯಲ್ಲಿ ಹುಟ್ಟಿದವನು. ತಿಮ್ಮಪ್ಪಯ್ಯ—ಮಹಲಕ್ಷ್ಮಮ್ಮ ಎಂಬ ಬಡದಂಪತಿಗಳ ಮಗನಾಗಿ ಹುಟ್ಟಿದ ಈತ, ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಅವಕಾಶವಿಲ್ಲದೆ ಉಡುಪಿಯ ಶಾಲೆಯೊಂದರಲ್ಲಿ ಅಂಗಸಾಧನೆಯನ್ನು ಕಲಿಸುವ ಉಪಾ ಧ್ಯಾಯನಾದನು. ಚಿಕ್ಕಂದಿನಿಂದಲೂ ಯಕ್ಷಗಾನಗಳಲ್ಲಿ ಮಮತೆಯಿದ್ದ ಈತ, ಅವುಗಳಲ್ಲಿ ಪಾತ್ರಧಾರಿಯಾಗಿ ನಟಿಸುತ್ತಿದ್ದು, 'ರತ್ನಾವತೀ ಕಲ್ಯಾಣ' ಮತ್ತು 'ಕುಮಾರ ವಿಜಯ' ಎಂಬ ಎರಡು ಯಕ್ಷಗಾನಗಳನ್ನು ಬರೆದ. ಕನ್ನಡವೆಂದರೆ ಜನ ಮೂಗು ಮುರಿಯುತ್ತಿದ್ದ ಆ ಕಾಲದಲ್ಲಿ ಲಕ್ಷ್ಮೀನಾರಣ ಪ್ಪನಿಗೆ ಕನ್ನಡದಲ್ಲಿ ಉತ್ಕಟವಾದ ಪ್ರೇಮ. ಆತನು ಸ್ವಪ್ರಯತ್ನದಿಂದ ಸಾರ ಸ್ವತ ತಪಸ್ಸನ್ನೇ ಆಚರಿಸಿ, ಕನ್ನಡ ಭಾಷಾಸಾಹಿತ್ಯಗಳಲ್ಲಿ ಅದ್ವಿತೀಯ ವಾದ ಪಾಂಡಿತ್ಯವನ್ನು ಪಡೆದ. ಅನಂತರ ಆತನು ಕ್ರಮವಾಗಿ 'ಅದ್ಭುತ ರಾಮಾಯಣ' 'ರಾಮ ಪಟ್ಟಾಭಿಷೇಕ,' 'ರಾಮಾಶ್ವಮೇಧ'—ಎಂಬ ಮೂರು ಸುಂದರ ಕೃತಿಗಳನ್ನು ರಚಿಸಿದನು. ಕವಿಗೆ ರಾಮಾಯಣದಲ್ಲಿರುವ ಪ್ರೇಮ ಭಕ್ತಿಗಳು ಆತನು ಆಯ್ದುಕೊಂಡು ಬರೆದ ಗ್ರಂಥಗಳಿಂದಲೇ ಅರ್ಥ ವಾಗುತ್ತದೆ, ಮೂರೂ ರಾಮಾಯಣದಿಂದಲೇ ಆಯ್ದುಕೊಂಡವು. ಕವಿಯ ಆದರ್ಶ 'ಅಳಿದೊಡಂ ಉಳಿದೊಡಂ ಬಟ್ಟೆದೋರಿಪ ರಸಭರಿತಂ ಚರಿತಂ'

ಆಗಿರಬೇಕು, ತನ್ನ ಕಾವ್ಯಗಳು—ಎಂಬುದು. ಆತ ತನ್ನ ಆದರ್ಶವನ್ನೇನೋ ಸಾಧಿಸಿದ, ಆದರೆ ಅದನ್ನು ಸಾಧಿಸಿರುವೆನೆಂಬ ಆತ್ಮಪ್ರತ್ಯಯ ಮಾತ್ರ ಕವಿಗೆ ಬರಲಿಲ್ಲವೆಂದು ತೋರುತ್ತದೆ. ವಸ್ತು ಹಳೆಯದಾದರೂ ನಿರೂಪಣಾವಿಧಾನ ಹೊಚ್ಚ ಹೊಸದಾದುದರಿಂದ ಜನ ಮೆಚ್ಚುವರೋ ಇಲ್ಲವೋ ಎಂಬ ಅಳುಕು, ಕವಿಗೆ. ಆದ್ದರಿಂದ ಆತನು ತಾನು ಬರೆದ ಮೂರು ಗ್ರಂಥಗಳೂ ಅನ್ಯಕವಿ ಕೃತಿಗಳೆಂದು ಹೇಳಿ, ಹೊರತಂದ. 'ಅದ್ಭುತರಾಮಾಯಣ'ವು ಪುರಾತನ ಗ್ರಂಥಸಂಗ್ರಹದಲ್ಲಿ ದೊರೆತ ಅನಾಮಕರ್ತೃಕವೆಂದೂ, 'ರಾಮಪಟ್ಟಾಭಿಷೇಕ'ದ ಕರ್ತೃ ಅಜ್ಞಾತ ಕವಯಿತ್ರಿ ಲಕ್ಷ್ಮಿಯೆಂಬುವಳೆಂದೂ,' ರಾಮಾಶ್ವಮೇಧವು' ಮುದ್ದಣನೆಂಬ ಪೂರ್ವಕವಿಕೃತವೆಂದೂ ಹೇಳಿದ. ಈ ಮೂರು ಗ್ರಂಥಗಳಲ್ಲದೆ 'ಗೋದಾವರಿ'ಯೆಂಬ ಕಾಲ್ಪನಿಕ ಕಾದಂಬರಿಯನ್ನು ಕವಿ ಅಸಮಗ್ರವಾಗಿ ಬರೆದಿದ್ದಾನೆ. ತನ್ನ ಕೃತಿಗಳು ಪ್ರಕಟಗೊಂಡು ಅಸದೃಶ ಗೌರವಾದರಗಳನ್ನು ಗಳಿಸಿದುದನ್ನು ಕಾಣುವ ಮುನ್ನವೇ ಕವಿ ತನ್ನ ಎಳೆಯ ವಯಸ್ಸಿನಲ್ಲಿಯೇ ದೈವಾಧೀನನಾದ.

ಕವಿಯ ಗ್ರಂಥಗಳಲ್ಲಿ 'ಅದ್ಭುತ ರಾಮಾಯಣ' 'ರಾಮಾಶ್ವಮೇಧ'ಗಳು ಹಳಗನ್ನಡದ ಗದ್ಯದಲ್ಲಿವೆ ; 'ರಾಮಪಟ್ಟಾಭಿಷೇಕ' ವಾರ್ಧಕಷಟ್ಪದಿಯಲ್ಲಿದೆ. ಹದಿನಾಲ್ಕು ವರ್ಷಗಳು ವನವಾಸವನ್ನು ಮುಗಿಸಿ ಸೀತಾರಾಮಲಕ್ಷ್ಮಣರು ಅಯೋಧ್ಯೆಗೆ ಹಿಂದಿರುಗುತ್ತಿದ್ದಾರೆ. ಅವರ ಮನಸ್ಸಿನ ಆನಂದ ಅವರಿಗೇ ವೇದ್ಯ. ಅವರನ್ನು ನಿರೀಕ್ಷಿಸುತ್ತಿರುವವರ ಸಂಭ್ರಮ ಬರುತ್ತಿರುವವರ ಸುಖಕ್ಕಿಂತ ಕಡಿಮೆಯಾದುದೇನೂ ಅಲ್ಲ. ಭರತನ ಸಡಗರದ ಚಿತ್ರ ಇದು. ವಾರ್ತಾವಾಹಕನನ್ನು ಕುರಿತು ಆತ–

ಅಟವಿಯಿಂ ಪೊರಟಿಹರೆ ? ಬಹರೆ ? ದಾರಿಯೊಳೇಂ ಪೊ
ರಟುದಿಲ್ಲವೆ ? ರಾಮನೊಳ್ಳಿತಾಗಿಹನೆ ? ಪ
ರ್ಯಟನದಿಂ ಬಾಡಿಹರೆ ? ಬರುತುಮಿರ್ಪರೆ ? ಬಹರೆ ? ಬಂದರೆ ?....

ಎಂದು ಕೇಳುತ್ತಾನೆ. ರಾಮ ಕೌಸಲ್ಯೆಯರ ಸಮಾಗಮದಿಂದ ಅವರಿಗಾದ ಸಂತೋಷ 'ಅನ್ಯೋನ್ಯ ದರ್ಶನ ಸುಖಂ, ದಾಶರಥಿ ಕೌಸಲ್ಯೆಯರ ದರ್ಶನದ ಸುಖದಂತೆ ವೊಲ್' ಆಯಿತಂತೆ ! 'ಗಗನಂ ಗಗನಾಕಾರಂ ಸಾಗರಂ ಸಾಗರೋಪಮಂ' ಎಂದು ಹೇಳಿದಂತೆ, ಆ ತಾಯಿ ಮಕ್ಕಳ ಸಂತೋಷ ಉಪ

ಮಾಡೀತ. ರಾಮಪಟ್ಟಾಭಿಷೇಕದ ದಿನ ಜಗತ್ತೇ ಸಂತೋಷಸಮುದ್ರ ವಾಗಿದೆ. ಆ ದಿನ ಬೆಳಗ್ಗೆ ಕೂಗುವ ಕಾಗೆ ಕೂಡ ರಾಮಪ್ರಾರ್ಥನೆಯಲ್ಲಿ ನಿರತವಾಗಿದೆ. ಹಿಂದೆ ತನ್ನ ತಪ್ಪನ್ನು ಕ್ಷಮಿಸಿ ಪ್ರಾಣದಾನಮಾಡಿದ ಆತ ನನ್ನು 'ಪೊಗಳಿ, 'ಕಾ' ' ಕಾ 'ಯೆಂದು ಬೇಡಿಕೊಂಡವುದೆನಲ್ ಕಾಗೆ ಕೂಗಿದುವಾಗಳೆ.' ಸಿಂಹಾವಲೋಕನ ಕ್ರಮವನ್ನು ಅನುಸರಿಸಿ ರನ್ನ ಮಹಾ ಕವಿ ತನ್ನ 'ಗದಾಯುದ್ಧ' ದಲ್ಲಿ ಭಾರತವನ್ನೆಲ್ಲಾ ಹೇಳಿರುವಂತೆ, ಲಕ್ಷ್ಮೀ ನಾರಣಪ್ಪ ಕವಿ ತನ್ನ 'ರಾಮಪಟ್ಟಾಭಿಷೇಕ'ದಲ್ಲಿ ಇಡೀ ರಾಮಾಯಣವನ್ನೇ ಚಿತ್ರಿಸಿದ್ದಾನೆ. ಪುಷ್ಪಕವಿಮಾನದಲ್ಲಿ ಹಿಂದಿರುಗಿ ಬರುತ್ತಾ ಆತನು ಸೀತೆ ಯೊಡನೆ ಆಯಾ ಸ್ಥಳಗಳನ್ನು ತೋರಿಸುತ್ತಾ ಆಡುವ ಮಾತುಗಳು ಕಥೆಯ ಸುರಳಿಯನ್ನು ಹಿಂದಕ್ಕೆ ಬಿಚ್ಚುತ್ತಾ ಹೊರಟು, ಇಡೀ ರಾಮಾಯಣದ ಕಥೆಯನ್ನೇ ತಿಳಿಸುತ್ತದೆ. ಈ ಭಾಗವನ್ನು ಓದುವಾಗ ಕಾಳಿದಾಸನ 'ಮೇಘ ಸಂದೇಶ' ಜ್ಞಾಪಕಕ್ಕೆ ಬರುತ್ತದೆ.

'ಅದ್ಭುತ ರಾಮಾಯಣ'ವು ಕವಿಯ ಮೊದಲ ಕಾವ್ಯ. ಶ್ರೀರಾಮನು ಸಹಸ್ರಕಂಠ ರಾವಣನನ್ನು ಕೆಣಕಿ, ಅರೆಜೀವದೊಡನೆ ಹಿಂದಿರುಗುತ್ತಾನೆ. ಆಗ ಸೀತೆ ಶಕ್ತಿಯ ಅವತಾರವನ್ನು ತಾಳಿ, ರಕ್ಕಸನನ್ನು ಕೊಂದು ರಾಮ ನನ್ನು ರಕ್ಷಿಸುತ್ತಾಳೆ. ಶಕ್ತ್ಯಾರಾಧಕರ ಈ ಪುರಾಣ ಕಥೆಯಲ್ಲಿ ಪುರಾಣ ಪುರುಷನಾದ ಶ್ರೀರಾಮನಿಗಿಂತಲೂ ಪ್ರಕೃತಿಸ್ವರೂಪಿಣಿಯಾದ ಸೀತೆ ಹೆಚ್ಚು ಮಹಿಮಾನ್ವಿತಳಾಗಿದ್ದಾಳೆ. ಸುರಸುಂದರಿಯಾದ ಸೀತೆ ಕರಾಳರೂಪಿಣಿ ಯಾದುದನ್ನು ಕವಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. ಈ ರೂಪಾಂತರದ ವರ್ಣನೆಯನ್ನು ನೋಡಿ—

'ತಿರ್ದಿದ ಕೊಂದಲ್ ನಿಗುರ್ದು ಕೆದರ್ದಿರೆ, ಪೆರೆನೊಸಲ್ ಪೆರ್ನೊ ಸಲಾಗೆ, ಎಸೆಳ್ಗಣ್ ಗುಳಿಗಣ್ಣಾಗೆ, ನಗೆಮೊಗಂ ಉರಿಮೊಗಮಾಗೆ, ಸುಲಿ ಪಲ್ ನಿಡುವಲ್ಲಾಗೆ, ತಳಿರ್ನಾಲಗೆ ಜೋಲ್ನಾಲಿಗೆಯಾಗೆ, ಸೀತೆ ಕರಾಳ ಮುಖಿಯಾದಳ್. ..................ಇಂತು ಲೋಕೋತ್ತರ ಸುಂದರಿಯಪ್ಪಾ ಸೀತೆಯೊಡನೆ ಅದ್ಭುತ ರೂಪದಿಂ ಮಾಕಾಳಿಯಾಗಿ ದಿಮ್ಮನೆ ತಿರೆಗೆ ಧುಮ್ಮಿ ಕ್ಕುತೆ, ಕೋರೆವಲ್ಗಳ್ ಮಿನುಗೆ, ತುಟಿಯುಲುಗೆ, ನಾಲಿಗೆ ನೀಡೆ, ಕಣ್ಣಾವೆ ರಾಟಳದಂತೆ ಸುತ್ತೆ, ಶೂಲಂ, ಕಡುಗಂ, ತಲೆಯೋಡು ಇಂತಿವುಗಳಂ ಪಿಡಿದು

ಪಕ್ಕಿವೇಗದಿಂ ರಕ್ಕಸನೆಡೆಗೆ ಸಾರ್ತಂದಳ್.'

ಕವಿಯ ಕಾವ್ಯಗಳ ಮಾಲೆಯಲ್ಲಿ 'ರಾಮಾಶ್ವಮೇಧಂ'ಕಡೆಯದಾದರೂ ಅಗ್ರಗಣ್ಯವಾದುದು. ಕವಿಯ ಕಾವ್ಯಶಕ್ತಿ ಇಲ್ಲಿ ಪರಿಣತವಾಗಿದೆ. ಪ್ರಾಚೀನ ಅರ್ವಾಚೀನಗಳ ಸಂಗಮವನ್ನು ಕಾಣುತ್ತೇವೆ, ನಾವಿಲ್ಲಿ. ಪುರಾಣಕಥೆ ಇದು, ನಿಜ. ಆದರೆ ಹಿಂದಿನ ಕಾವ್ಯಗಳಲ್ಲಿ ಎಲ್ಲಿಯೂ ಕಾಣಬರದ ಒಂದು ನವೀನತೆ ನಮ್ಮನ್ನು ಇಲ್ಲಿ ಇದಿರುಗೊಳ್ಳುತ್ತದೆ. ಕಾವ್ಯವನ್ನು ಪ್ರಾರಂಭಿಸುವುದೇ ಒಂದು ಕಾದಂಬರಿಯು ಬೆಗಡುಗೊಳಿಸುವ ಸುಂದರ ಶೈಲಿಯಿಂದ–ಓ, ಕಾಲಪುರುಷಂಗೆ ಗುಣಮಣಮಿಲ್ಲ. ಗಡ, ನಿಸ್ತೇಜಂ ಗಡ, ಜಡಂ ಗಡ-ಇತ್ಯಾದಿಯಾದ ವರ್ಷಾಕಾಲದ ರಮ್ಯವರ್ಣನೆಯಿಂದ ನಾವು ಸಂತಸಪಡುತ್ತಿರುವಂತೆಯೇ ಮುದ್ದಣ, ಮನೋರಮೆ–ಎಂಬ ನೂತನ ದಂಪತಿಗಳ ಗೃಹಜೀವನ ನಮ್ಮ ಕಣ್ಣೆದುರು ಕಾಣಿಸಿಕೊಳ್ಳುತ್ತದೆ. ಗಂಡ ರಸಿಕ, ಹೆಂಡತಿ ಧರ್ಮಪರಳಾದ ರಸಜ್ಞಳು. ಆಕೆಗೆ ಕಥೆ ಹೇಳಲೆಂದೇ ಇಲ್ಲಿ ವರ್ಷಾಕಾಲ ತಲೆದೋರಿರುವುದು. ಜಡಿಮಳೆಯಿಂದ ತಲೆ ಬೇಸರ ಹಿಡಿದ ಆಕೆ ರಸಭರಿತವಾದೊಂದು ಕಥೆ ಹೇಳುವಂತೆ ಗಂಡನನ್ನು ಕೇಳುತ್ತಾಳೆ. ಆಕೆ ಸೀತಾಸ್ವಯಂವರವನ್ನು ಆಗಲೇ ಕೇಳಿದ್ದಾಳಂತೆ, ಸೀತಾಪಹರಣದ ಕಥೆಯನ್ನು 'ಉಹುಃ ಆನೊಲ್ಲೆ' ಎನ್ನುತ್ತಾಳೆ. ರಾಮಾಶ್ವಮೇಧವನ್ನು ಹೇಳಬಹುದು. ಆದರೆ ಪದ್ಯದಲ್ಲಿ ಕೂಡದು, 'ಪದ್ಯಂ ವಧ್ಯಂ ಗದ್ಯಂ ಹೃದ್ಯಂ, ಹೃದ್ಯಮಪ್ಪ ಗದ್ಯದೊಳು ಪೇಳ್ವುದು' ಎನ್ನುತ್ತಾಳೆ, ಆಕೆ. ಇದನ್ನು ಹೇಳಿದುದಕ್ಕೆ ಬಹುಮಾನವೇನು ಕೊಡುತ್ತಿ? ಎಂದು ಗಂಡ ಕೇಳಿದ

ಮನೋರಮೆ : ಎನ್ನನೆ ನಾನೀವೆಂ

ಮುದ್ದಣ: ಬಲ್ಲಡಸುಗಾರ್ತಿಯೈಸೆ. ಅರಿಯಾ ಮುನ್ನಮೆ ನಿನ್ನ ತಾಯ್ತಂದೆವಿರ್ ಎನಗಿತ್ತರೆಂಬುದಂ ?

ಮನೋರಮೆ: ಇದೇತರ ನುಡಿ ? ಪೋ‌ಕೆ, ಆಂ ಪರಾಧೀನೆ ಗಡ ! ಪುರಾಣಮನೋದಿದಂ ಬಳಿಯಲ್ಲಿ. ದಕ್ಷಿಣೆಯ ನೀವುದು ?...............ನಿನುಂ ಕಥೆಯುಂ ಕೇಳ್ದು ಬಲ್ಲಂತೆ ಸಮ್ಮಾನಿಸುವೆಂ.

ಮುದ್ದಣ: ಕತೆಯನಾಲಿಸಿ ಲಾಲಿಸಿ ಬಳಕ್ಕವೀಯಮೆನೆಂದೊಡೆ ಬಿಡೆಂ

ಮನೋರಮೆ : ಆನುಂ ನೋಳ್ಪೆಂ ಕತೆಯ ಪುರುಳೆಂತಿರ್ಕುಮೆಂದು

ಇಷ್ಟಾದಮೇಲೆ ಕತೆ ದೀರ್ಘವಾದ ಸಂಸ್ಕೃತ ಸಮಾಸಪದದೊಡನೆ ಪ್ರಾರಂಭವಾಯಿತು. ಮನೋರಮೆ ಅದನ್ನು ತಡೆದು ನೀರಿಳಿಯದ ಗಂಟಲಲ್ಲಿ ಕಡುಬನ್ನು ತುರುಕಿದಂತಾಯ್ತು, 'ತಿರುಳ್ಗನ್ನಡದ ಬೆಳ್ನುಡಿಯೊಳೆ ಪುರುಳೊಂದೆ ಪೇಳ್ವುದು' ಎಂದು ಹೇಳಿದಳು. ಕನ್ನಡದಲ್ಲಿ ಅತಿಯಾಗಿ ಸಂಸ್ಕೃತ ಬೆರೆಸುವುದನ್ನು ಆಕೆ ಸಹಿಸಳು. 'ಕರ್ಮಣಿ ಸರದೊಳ್ ಜೆಂಬವಳಮಂ ಕೋದಂತಿರೆ' ತಿರುಳ್ಗನ್ನಡದಲ್ಲಿ ಕತೆ ಹೇಳುವಂತೆ ಮಾಡುತ್ತಾಳೆ. ಕಥೆ ಪ್ರಾರಂಭವಾಗುತ್ತದೆ.

"ರಾಮಾಶ್ವಮೇಧದ" ಕಥೆ ಪದ್ಮಪುರಾಣಾಂತರ್ಗತವಾದ್ದು, ಆದರೆ ಜೈಮಿನಿ ಭಾರತವು ಕವಿಯಮೇಲೆ ಅಪಾರವಾದ ಪ್ರಭಾವವನ್ನು ಬೀರಿರುವುದರಿಂದಲೂ ಪ್ರತಿಭಾನ್ವಿತನಾದ ಕವಿ ಜನರ ಜೀವನಾಡಿಯನ್ನು ಮಿಡಿಯಬಲ್ಲವನಾದುದರಿಂದಲೂ ಮೂಲದ ಕಥೆಯ ವಿವರಣೆಗಳನ್ನು ಸಾಕಷ್ಟು ರೂಪಾಂತರಗೊಳಿಸಿ, ಕಥೆಗೆ ನೂತನ ಚೇತನವನ್ನು ತುಂಬಿದ್ದಾನೆ. ಇಲ್ಲಿ ಬರುವ ಸೀತೆಯ ಪುತ್ರದೋಹಳ, ಸೀತೆಯನ್ನು ಅಡವಿಗಟ್ಟುವ ಸನ್ನಿವೇಶದಲ್ಲಿ ಲಕ್ಷ್ಮಣನ ಅಂತರಿಕ ಹೋರಾಟ, ರಾಮನು ತನ್ನನ್ನು ತ್ಯಜಿಸಿದನೆಂದು ಕೇಳಿದಾಗ ಸೀತೆ ತೋರಿದ ಪ್ರತಿಕ್ರಿಯೆ ಈ ಭಾಗಗಳಲ್ಲಿ ಕವಿಯ ಪ್ರತಿಭೆ ಮುಗಿಲು ಮುಟ್ಟಿದೆ. ಒಂದೊಂದೂ ಒಂದು ರಸದ ಮಡುವಿನಂತಿದೆ. ರಾಮಾಶ್ವಮೇಧದ ಕಥೆಯೆಂದ ಮೇಲೆ ಆ ಯಜ್ಞಾಶ್ವ ದೇಶ ದೇಶಗಳನ್ನೆಲ್ಲಾ ತಿರುಗಿಕೊಂಡು ಹೋಗಬೇಕಷ್ಟೆ. ಕಥೆ ಎಲ್ಲಿಯಾದರೂ ಸರಗತೆಯಾಗಿ ಬೇಸರ ಹಿಡಿಸುವುದೆಂದು ಕವಿಗೆ ಬೋಧೆಯಾದರೆ, ಆತನು ತನ್ನ ಕಾವ್ಯವಿಮರ್ಶೆಗೆ ಪ್ರತಿನಿಧಿಯಾಗುವಂತೆ ಸೃಷ್ಟಿಸಿಕೊಂಡಿರುವ ಮನೋರಮೆಯನ್ನು ಮಧ್ಯದಲ್ಲಿ ತಂದು, ಹಾಸ್ಯರಸದ ಹೊನಲನ್ನು ಹರಿಸುತ್ತಾನೆ. ಒಮ್ಮೆ ಕುದುರೆ ಆರಣ್ಯಕನೆಂಬ ಋಷಿಯ ಆಶ್ರಮಕ್ಕೆ ಹೋಯಿತಂತೆ! ಋಷಿ ರಾಮನ ಅಸಂಖ್ಯಾತ ಸೇನೆಗೆಲ್ಲಾ ರಾಜೋಪಚಾರ ಮಾಡಿದನಂತೆ! ಈ ಸನ್ನಿವೇಶದಲ್ಲಿ ಕವಿ ಕಥೆಯನ್ನು ನಿಲ್ಲಿಸಿ, ಮನೋರಮೆಯನ್ನು ಮುಂದೆ ತರುತ್ತಾನೆ. ಕತೆ ಕೇಳುತ್ತಿದ್ದ ಆಕೆ ಋಷಿಗೆ ಅಷ್ಟು ಐಶ್ವರ್ಯವೆಲ್ಲಿಯದು ? ಉಪಚಾರವೆಂದರೆ ಬಾಯುಪ

ಚಾರವೆ? ಎನ್ನುತ್ತಾಳೆ. ಮುದ್ದಣ ಆ ಋಷಿಗಳು ಸಾಧಿಸಿರುವ ಮಂತ್ರ ಮಹಿಮೆ ಎಂದ. ಹಾಳು ಕಥೆಗಳನ್ನು ಹೇಳಿಕೊಂಡು ಓಡಾಡುತ್ತಿರುವ ಕವಿಗಳು (ನೀನು) ಅಂತಹ ಮಂತ್ರವನ್ನು ಉಪದೇಶ ತೆಗೆದುಕೊಳ್ಳ ಬಾರದೆ? ಎಂದಳು, ಮನೋರಮೆ.

ಮುದ್ದಣ: ನಾಡಂ ಕಾಡಂ, ಕಾಡಂ ಬೀಡಂಗೆಯ್ವೊಂದು ಪೆರ್ಮೆಯ ಬಲ್ಮೆಯ ಕಬ್ಬಿಗರೇಂ ಮುದುದವಸಿಗಳತ್ತಣಿಂ ಪಿರಿಯರಾಗರೆ?

ಮನೋರಮೆ: ನಿಮ್ಮವರ್ಗಮಂತಿರೆ ಮಂತ್ರಂ ಸಿದ್ಧಿವರ್ಕುಮೆ?

ಮುದ್ದಣ: ತಡೆಯೇನಕ್ಕೀಂ

ಮನೋರಮೆ: ನಿನ್ನೊಳವೊಳವೆ?

ಮುದ್ದಣ: ಎನ್ನೊಳಿಂತಿದು ಪಾಸುವೊಕ್ಕು.

ಮನೋರಮೆ: ಆಃ ನೀನುಂ ಬಲ್ಮೆಯ್ಮೆಗಾರಂ, ನಿನಗಾರತ್ತಣಿಂದುಪ ದೇಶವಾಯ್ತು?

ಮುದ್ದಣ: ಗುರುವತ್ತಣಿಂದೆಳವೆಯೊಳೆ.

ಮನೋರಮೆ: ಅದಾವುದೊ ಮಂತ್ರಮೆನ್ನೊಳುಸಿರ.

ಮುದ್ದಣ: ಆಃ, ಒಳ್ಳಿತೊಳ್ಳಿತು. ಮಂತ್ರಂ ಗಡ, ತನಗೊರೆವುದು ಗಡ! ಚಿಃ ಚಿಃ ಪೆಣ್ಗಳ್ಗೆ ಮಂತ್ರೋಪದೇಶಂ ಸಲ್ಗುಮೆ?

ಮನೋರಮೆ: ಆನರಿಯೆನೆ? ನಿನ್ನತ್ತಣಿಸುಪದೇಶಂ ಬೇಡುವೆನೆ? ನೀನಾಗಳೆಂದ ಮಂತ್ರಂಗಳೊಳಾವುದದರ ಪೆಸರೇನೆಂದೆ ಕೇಳ್ಪೆಂ

ಮುದ್ದಣ: ಆಗಳೆಂದ ಮುನಿಗಳ ಮಂತ್ರಂಗಳೊಲಲ್ತು. ಎಮ್ಮ ಮಂತ್ರಂಗಳ ಬಗೆ ಬೇರೆ. ಮೂರೆರಡಕ್ಕರದ ಮಂತ್ರಂಗಳಿವಃಗಕ್ಕುಮೆ? ನಮ್ಮ ತಂತು ಕಿರಿದಲ್ತು, ಬಲ್ಪಿರಿದು. ಒಂದಕ್ಕರಮಲ್ತು, ಎರಡಲ್ತು. ಮೂರಲ್ತು, ನಾಲ್ಕೈದಲ್ತು, ಆರುಮಲ್ತು, ಏಳಕ್ಕರದ ಬೀಜಮಂತ್ರಂ, ಸರ್ವಮಂತ್ರಗಳ್ಗೆ ತಲೆಯೊಳಿರ್ದು ಮೇಲೆನಿಸಿಪ್ಪ ಸಪ್ತಾಕ್ಷರೀ ಮಂತ್ರಮೆಂದು ಪೆಸರ್.

ಮನೋರಮೆ: ಹಾ! ಹಾ! ಆ ಮಂತ್ರಕ್ಕಭಿಮಾನದೇವತೆ ಯಾವುದು? ಮುನ್ನವಾರಿದಂ ಜಪಿಸಿ ಸಿದ್ಧಿಗಂಡರ್?

ಮುದ್ದಣ: ಇಂತೇರ್ಪಟ್ಟ ಮಂತ್ರದಧಿದೇವತೆ ಜ್ಯೇಷ್ಠೆ, ಮುನ್ನ ಮೀಶ್ವರಂ ತನ್ನೊಂದು ಲೀಲೆಯೊಳ್ ಜಪಿಸಿ ಸಿದ್ಧಿಗೊಂಡನದರಿಂ ಆತನೆ ಋಷಿ

ಮನೋರಮೆ ಮೂಲಮಂತ್ರವನ್ನು ಹೇಳುವಂತೆ ಗಂಡನನ್ನು ಕಾಡಿ ಬೇಡುತ್ತಾಳೆ. ಆತ ಹೆಂಗಸರು ಮಂತ್ರ ಕೇಳಿದರೆ 'ಕಣ್ಗೆ ಕಾಲ್ಗೆ ಕೇಡು' ಎಂದು ಹೇಳಿ, ಅವಳ ಒತ್ತಾಯ ಹೆಚ್ಚಾಗಲು 'ಚಿಃ ಎಳೆವೆಂಡಿರ ಕೈಯೊಳಿರ್ಪ ಕಬ್ಬಿಗರ ಬಾಳ್ಕೆಯೆ ದೂಷ್ಯಂ' ಎಂದು ಒಟಗುಟ್ಟಿಕೊಂಡು, ಅದನ್ನು ಯಾರಿಗೂ ಹೇಳುವುದಿಲ್ಲವೆಂದು ಅವಳಿಂದ ಭಾಷೆ ತೆಗೆದುಕೊಂಡಮೇಲೆ, ಲೋಭಿ ಹಣವನ್ನು ಬಿಚ್ಚುವಂತೆ ಒಂದೊಂದೇ ಅಕ್ಷರಗಳನ್ನು ಹೇಳುತ್ತಾ ಅವಳನ್ನು ಚಿಟಗುಮುಳ್ಳಾಡಿಸಿ, ಕೊನೆಗೆ ಹೇಳುತ್ತಾನೆ—'ಭವತಿ ಭಿಕ್ಷಾಂ ದೇಹಿ' ಎಂದು. 'ಇದೇ ಆ ಕಬ್ಬಿಗರ್ಗೆ ಸಿದ್ಧಿಸಿದ ಪೆರ್ಮೆಯ ಸಪ್ತಾಕ್ಷರೀ ಮಂತ್ರಂ. ಆರೊಳಾನು ಮುಸಿರದಿರ್' ಎನ್ನುತ್ತಾನೆ. ಇಂತಹ ಸುಂದರವಾದ, ಸರಸಮಯವಾದ ಸಂಸಾರಜೀವನದ ಸುವರ್ಣಮಯ ಚೌಕಟ್ಟಿನ ಮಧ್ಯದಲ್ಲಿದೆ, ಮುದ್ದಣನ ರಾಮಾಶ್ವಮೇಧದ ಚಿತ್ರ. ಆದ್ದರಿಂದ ಆ ಪೌರಣಿಕ ಕಥೆಗೆ ಚಿರನೂತನತೆಯನ್ನು ಒದಗಿಸಿದಂತಾಗಿದೆ.

ಕಾವ್ಯದ ಭಾಷೆಯ ವಿಚಾರವಾಗಿ, ಆತನು ತಳೆದಿರುವ ಭಾವನೆ ಸರ್ವಜನಾದರಣೀಯವಾದದ್ದು. ಅತಿಯಾಗಿ ಸಂಸ್ಕೃತವನ್ನು ಕನ್ನಡದ ಕಾವ್ಯಗಳಲ್ಲಿ ಬಳಸುವುದರ ವಿರುದ್ಧವಾಗಿ ಪ್ರತಿಭಟನೆ ಮೊದಲಿನಿಂದಲೂ ನಮ್ಮಲ್ಲಿ ಕಾಣಬರುತ್ತದೆ. ಆದರೂ ಸಂಸ್ಕೃತದ ಬಳಕೆಯಲ್ಲಿ ನಮ್ಮ ಕವಿಗಳು ಮಿತಿಯನ್ನು ಅನುಸರಿಸಿರುವರೆಂದು ಹೇಳುವಂತಿಲ್ಲ. ಮುದ್ದಣನು 'ಕರ್ಮಣಿಸರದೊಳ್ ಚೆಂಬವಳಮಂ ಕೋದಂತಿರೆ' ಸಂಸ್ಕೃತವನ್ನು ಬಳಸಬೇಕೆಂದು ಹೇಳಿರುವುದು ಎಷ್ಟು ಅರ್ಥವತ್ತಾಗಿದೆ. ಮಂಗಳ ಸೂತ್ರದಲ್ಲಿ ಪವಿತ್ರವಾದುದು ಕರಿಮಣಿ; ಇದು ಕನ್ನಡಕ್ಕಿರಬೇಕಾದ ಸ್ಥಾನ. ಕೆಂಪು ಹವಳ ಅಲ್ಲೊಂದು ಇಲ್ಲೊಂದು ಅಲಂಕಾರಕ್ಕಿದ್ದರೆ ಸಾಕು. ಕವಿಯು ಕಾವ್ಯವನ್ನು ಆರಂಭಿಸಿರುವುದು ಆತನ ವೈಶಿಷ್ಟ್ಯ. ಪುರಾಣ ಕಾವ್ಯವನ್ನು ಹಾಗೆ ಆರಂಭಿಸಿರುವವರಲ್ಲಿ ಆತನೇ ಮೊದಲಿಗ. ಆತನ ಹಾಸ್ಯ ನವಿರಾಗಿ ಸುಂದರವಾಗಿದೆ. ಅಷ್ಟೇ ಅಲ್ಲ, ಅರ್ಥಪೂರ್ಣವಾಗಿದೆ, ಧ್ವನಿಪೂರ್ಣವಾಗಿದೆ.

ಕಬ್ಬಿಗರಿಗೆ ಸಿದ್ಧಿಸಿರುವ 'ಸಪ್ತಾಕ್ಷರೀಮಂತ್ರ' ಇದಕ್ಕೆ ಅತ್ಯುತ್ತಮವಾದ ಉದಾಹರಣೆ. ಇದೆಲ್ಲಕ್ಕೂ ಹೆಚ್ಚಾಗಿ, ಆತನ ಕಾವ್ಯದಿಂದ ದೊಡ್ಡದೊಂದು ಸಂದೇಶ ಧ್ವನಿತವಾಗುತ್ತದೆ. ಧನಿಕರಾಗುವುದು ಎಲ್ಲರಿಗೂ ಸಾಧ್ಯವಿಲ್ಲದಿರಬಹುದು. ಆದರೆ ಪ್ರಯತ್ನದಿಂದ ಪ್ರತಿಯೊಬ್ಬರೂ ರಸಿಕರಾಗುವುದು ಸಾಧ್ಯ; ಮುದ್ದಣ-ಮನೋರಮೆಯರಂತೆ ಸತ್ಕಥಾವಿನೋದದಲ್ಲಿ ಬಾಳುವುದು ಸಾಧ್ಯ. ಇದನ್ನು ಗಳಿಸಿಕೊಂಡರೆ ಜೀವನದ ಎಲ್ಲ ಅರಕೆಗಳನ್ನೂ ತುಂಬಿಕೊಂಡಂತೆಯೇ.

# ದಾಸವಾಙ್ಮಯ

ಹನ್ನೆರಡನೆಯ ಶತಮಾನದಲ್ಲಿ ತಲೆಯೆತ್ತಿದ ವೀರಶೈವಮತದ ಪ್ರಾಬಲ್ಯದಿಂದ ವರ್ಣಾಶ್ರಮಗಳ ತಳಹದಿಯ ಮೇಲೆ ನಿಂತಿದ್ದ ಸನಾತನ ವೈದಿಕ ಮತವು ಬುಡಮಟ್ಟ ಅಲ್ಲಾಡಿ ಹೋಯಿತೆಂದು ತೋರುತ್ತದೆ. ಸರ್ವ ಸಮಾನತೆಯನ್ನು ಸಾರುತ್ತಿದ್ದ ಹೊಸಮತದತ್ತ ಆಕರ್ಷಿತರಾದ ವೈದಿಕ ಮತಾನುಯಾಯಿಗಳು ತಂಡ ತಂಡವಾಗಿ ಹೋಗಿ ಹೊಸ ಮತದ ಧರ್ಮ ಧ್ವಜದ ಅಡಿಯಲ್ಲಿ ಆಶ್ರಯ ಪಡೆಯಲು ಆರಂಭಿಸಿದರು. ಇದೇ ಕಾಲದಲ್ಲಿ ಹುಟ್ಟಿದ ಶ್ರೀವೈಷ್ಣವ ಮತವು ವೈಧಿಕಧರ್ಮದ ಚೌಕಟ್ಟಿನಲ್ಲಿಯೇ ಹುಟ್ಟಿ ಬೆಳೆದುದಾದರೂ, ವರ್ಣಭೇದವನ್ನು ಕಿತ್ತೆಸೆದು ಉದ್ಧಾರದ ಸಮಾನಾವ ಕಾಶವನ್ನು ಸರ್ವರಿಗೂ ಒದಗಿಸಿತು. ಹೀಗಾಗಿ ವರ್ಣಸಂಕರದ–ವೈದಿಕ ಮತ ಅಳಿದು ಹೋಗುವುದೆಂಬ–ಭೀತಿ ವೈದಿಕರನ್ನು ಆವರಿಸಿತೆಂದು ತೋರು ತ್ತದೆ. ಶ್ರೀವೈಷ್ಣವ ಮತದ ತತ್ವಗಳನ್ನು ಬೋಧಿಸುವ ಕನ್ನಡ ಗ್ರಂಥ ಗಳಾವುವೂ ಹದಿನೇಳನೇ ಶತಮಾನದವರೆಗೆ ಹುಟ್ಟಿದಂತೆ ಕಾಣುವುದಿಲ್ಲ. ಆದರೆ ವೀರಶೈವವು 'ಶೂನ್ಯಸಿಂಹಾಸನ' 'ಅನುಭವ ಮಂಟಪ'ಗಳ ಸ್ಥಾಪನೆ ಸುಸಂಘಟನೆಗಳ ಮೂಲಕ ಜನಮನವನ್ನು ಸೂರೆಗೊಂಡು, ವಚನ ವಾಙ್ಮಯದ ಪ್ರಸಾರ ಪ್ರಚಾರಗಳನ್ನು ನಡೆಸಿ, ಜನಸಂಗ್ರಹಣೆಯ ಕಾರ್ಯ ದಲ್ಲಿ ಅದ್ಭುತ ವಿಜಯವನ್ನು ಸಾಧಿಸಿತ್ತು. ಅಂದು ಅಸ್ತಿತ್ವದಲ್ಲಿದ್ದ ವೈದಿಕ ಮತದ ಅದ್ವೈತ ಸಿದ್ಧಾಂತಗಳು ಈ ಹೊಸ ಮತದ ಉರುಬನ್ನು ತಡೆಯು ವತ್ತ ಗಮನವನ್ನು ಹರಿಸಲಿಲ್ಲವೆಂದು ತೋರುತ್ತದೆ. 'ಅಹಂ ಬ್ರಹ್ಮಾಸ್ಮಿ' ಬ್ರಹ್ಮ ಸತ್ಯ, ಜಗನ್ಮಿಥ್ಯ'ಕ್ಕೆ ವಿಪರೀತಾರ್ಥವನ್ನು ಕಲ್ಪಿಸಿಕೊಂಡು ಅವರು ಜಡತನಕ್ಕೆ ಇಳಿದಿದ್ದರೇನೋ! ಸಿದ್ಧಾಂತಕ್ಕೂ ಆಚರಣೆಗೂ ತಕ್ಕಷ್ಟು ತಾರ್ಕಣೆಯಿಲ್ಲದೆ ಅಸಂಬದ್ಧವಾದ ವಿತರ್ಕದಲ್ಲಿಯೂ ಅವರು ಮಗ್ನರಾಗಿದ್ದಿರ ಬಹುದು. ಹೀಗಾಗಿ ವೈದಿಕ ಪಂಥದಲ್ಲಿ ವಿಚಾರಪರರಾದವರು ತಮ್ಮ ಧರ್ಮದ ಉಳಿವಿಗಾಗಿ ಹೊಸ ಸಿದ್ಧಾಂತವೊಂದನ್ನು ಸ್ಥಾಪಿಸಹೊರಟಿರ ಬೇಕು. ಅವರ ಈ ಪ್ರಯತ್ನದ ಫಲವೇ ದ್ವೈತಮತ ಸ್ಥಾಪನೆ. ಈ ಮತ

ಸ್ಥಾಪಕನು ಮಧ್ವಾಚಾರ್ಯನಾದುದರಿಂದ ಈ ಮತಕ್ಕೆ ಮಾಧ್ವಮತವೆಂದೂ ಹೆಸರು ಬಂದಿದೆ.

ಹನ್ನೆರಡನೆಯ ಶತಮಾನದ ಕಡೆಯ ಭಾಗದಲ್ಲಿ ಉಡುಪಿಯ ಸಮೀಪದ ಶಿವಳ್ಳಿಯಲ್ಲಿದ್ದ ಮಧ್ಯಗೇಹಭಟ್ಟನೆಂಬ ಸಾತ್ವಿಕ ಬ್ರಾಹ್ಮಣನ ಸುಪುತ್ರನಾಗಿ ಜನಿಸಿದ ಮಧ್ವಾಚಾರ್ಯನು ಬಾಲ್ಯದಲ್ಲಿಯೇ ತನ್ನ ಅಲೌಕಿಕ ಶಕ್ತಿ ತೇಜಸ್ಸುಗಳಿಂದ ಅಸಾಧಾರಣವಾದ ವ್ಯಕ್ತಿತ್ವವನ್ನು ಪಡೆದಿದ್ದವನು. ಬ್ರಹ್ಮಚರ್ಯಾಶ್ರಮದಲ್ಲಿರುವಾಗಲೆ ಸನ್ಯಾಸಾಶ್ರಮವನ್ನು ಸ್ವೀಕರಿಸಿದ ಈ ಮೇಧಾವಿ ಅಂದು ಪ್ರಚಲಿತವಾಗಿದ್ದ ಅದ್ವೈತಮತವನ್ನು ಖಂಡಿಸಿ, ದ್ವೈತ ಮತವನ್ನು ಸ್ಥಾಪಿಸಿದನು. ಅಸಂಖ್ಯಾತರಾದ ಗೃಹಸ್ಥರೂ ಅನೇಕ ಸನ್ಯಾಸಿಗಳೂ ಆತನ ಉಪದೇಶವನ್ನು ಸ್ವೀಕರಿಸಿ ಆತನ ಅನುಯಾಯಿಗಳಾದರು. ಮಧ್ವಾಚಾರ್ಯನು ನಾಡಿನಲ್ಲೆಲ್ಲಾ ಸಂಚರಿಸಿ, ಅನೇಕ ಪಂಡಿತರನ್ನು ವಾದದಲ್ಲಿ ಗೆದ್ದು, ದ್ವೈತಮತ ಪ್ರಸಾರ ಮಾಡಿದುದಲ್ಲದೆ ಅನೇಕ ಪವಾಡಗಳನ್ನೂ ಮೆರೆದನು. ಈತನು ಉಡುಪಿಯಲ್ಲಿ ಅಷ್ಟಮಠಗಳನ್ನು ಸ್ಥಾಪಿಸಿ, ಅಲ್ಲಿ ಶ್ರೀಕೃಷ್ಣನ ಪೂಜೆಯು ಸಂತತವಾಗಿ ನಡೆದುಕೊಂಡು ಹೋಗುವಂತೆ ಏರ್ಪಡಿಸಿದನು. ಇಂದಿಗೂ ಉಡುಪಿಯು ದ್ವೈತಮತದ ಮುಖ್ಯ ಕೇಂದ್ರವಾಗಿ ನಡೆದುಕೊಂಡು ಬರುತ್ತಿದೆ.

ಮಧ್ವಾಚಾರ್ಯನ ಶಿಷ್ಯ ಪರಂಪರೆಯಲ್ಲಿ ಪ್ರಮುಖನಾಗಿ, ದ್ವೈತಮತ ಪ್ರಚಾರಕರಲ್ಲಿ ಸುಪ್ರಸಿದ್ಧನಾಗಿರುವ ವ್ಯಾಸರಾಜನು ದ್ವೈತಮತದ ಸಿದ್ಧಾಂತಗಳನ್ನು ಸಾರವತ್ತಾಗಿ ಸಂಗ್ರಹವಾಗಿ ಹೀಗೆ ನಿರೂಪಿಸಿದ್ದಾನೆ.

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ವತೋ
ಭಿನ್ನಾ ಜೀವಗಣಾಃ ಹರೇರನುಚರಾಃ ನೀಚೋಚ್ಚಭಾವಂಗತಾಃ
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ

ಶ್ರೀಮಧ್ವಮತದಲ್ಲಿ ಹರಿಯೇ ಸರ್ವೋತ್ತಮ; ಜಗತ್ತು ಸತ್ಯ; ಜೀವರಲ್ಲಿ ತಾರತಮ್ಯವಿದೆ; ಎಲ್ಲ ಜೀವರೂ ಹರಿಯ ಅನುಚರರು; ಎಲ್ಲದರಲ್ಲಿಯೂ ತರ ತಮ ಭಾವವಿದೆ; ನೈಜಸುಖಾನುಭವವೇ ಮುಕ್ತಿ; ಈ ಮುಕ್ತಿಗೆ ಭಕ್ತಿಯೇ ಸಾಧನ; ಪ್ರತ್ಯಕ್ಷ, ಅನುಮಾನ, ಶಬ್ದ,-ಎಂಬ ಮೂರು

ಪ್ರಮಾಣಗಳು; ಹರಿಯು ವೇದಗಳಿಗೆ ಮಾತ್ರ ವೇದ್ಯ–ಈ ಒಂಭತ್ತು ತತ್ವಗಳನ್ನು ಜನಸಾಮಾನ್ಯರಲ್ಲಿ ಪ್ರಚಾರಮಾಡಿ, ದ್ವೈತ ಧರ್ಮವನ್ನು ಪ್ರಸಾರಮಾಡುವುದಕ್ಕಾಗಿ ಉದಿಸಿದುದು ದಾಸವಾಙ್ಮಯ.

ಹರಪಾರಮ್ಯವನ್ನು ಘೋಷಿಸಿ, ವೀರಶೈವವನ್ನು ಪೋಷಿಸಿ, ಪ್ರಚಾರ ಮಾಡಿದ ಬಸವಣ್ಣನಂತೆ ಹರಿಸರ್ವೋತ್ತಮತತ್ವವನ್ನು ಸಾರಿ ವೈಷ್ಣವವನ್ನು ಪೋಷಿಸಿ ಬೆಳೆಸಿದ ಮಧ್ವಾಚಾರ್ಯನೂ ಕನ್ನಡಿಗನೇ. ಇಬ್ಬರ ಕಾರ್ಯರಂಗವೂ ಬಹುಮಟ್ಟಿಗೆ ಕರ್ಣಾಟಕವೇ. ಇಬ್ಬರೂ ಭಕ್ತಿಗೆ ಪ್ರಥಮ ಸ್ಥಾನವನ್ನು ನೀಡಿದ್ದಾರೆ. ತಮ್ಮ ಮತ ಪ್ರಚಾರಕ್ಕಾಗಿ ಇಬ್ಬರು ಅನುಸರಿಸಿದ ಮಾರ್ಗವೂ ಸ್ವಲ್ಪ ಹೆಚ್ಚುಕಡಿಮೆ ಸಮಾನವಾದುದೇ. ವೀರಶೈವವನ್ನು ಜನರು ಸ್ವಾಗತಿಸಿದುದಕ್ಕೆ ಅದರ ಉದಾತ್ತ ತತ್ವಗಳು ಕಾರಣವಾಗಿದ್ದರೆ ಅದು ತ್ವರಿತಗತಿಯಿಂದ ಹರಡಿದುದಕ್ಕೆ ಅದರ ಭಾಷೆ ಮುಖ್ಯ ಕಾರಣ. ಈ ಗುಟ್ಟನ್ನು ಅರ್ಥ ಮಾಡಿಕೊಂಡುದರಿಂದಲೆ ದ್ವೈತಧರ್ಮವು ತನ್ನ ಪ್ರಸಾರ ಕಾರ್ಯಕ್ಕೆ ಜನರ ನುಡಿಯನ್ನೆ ಆಶ್ರಯಿಸಿತು. ಶಿವಶರಣರು ಕಾವ್ಯಮಯ ವಾದ ಗದ್ಯದಲ್ಲಿ ವಚನಗಳನ್ನು ಕಟ್ಟಿ ಜನಮನವನ್ನು ಆಕರ್ಷಿಸ ಹೊರಟರೆ ಹರಿದಾಸರು ವಚನಗಳಿಗಿಂತಲೂ ಹೆಚ್ಚು ತೀವ್ರವಾಗಿ, ಪರಿಣಾಮಕಾರಿ ಯಾಗಿ ಹೃದಯವನ್ನು ಸೂರೆಗೊಳ್ಳಬಲ್ಲ ಕೀರ್ತನೆಗಳನ್ನು ಹಾಡಿ ಜನರನ್ನು ಒಲಿಸಿಕೊಳ್ಳ ಹೊರಟರು. ಕಾಲಕ್ರಮದಲ್ಲಿ ಹಾಡಿನೊಡನೆ ಅವರು ನೃತ್ಯ ವನ್ನೂ ಅಳವಡಿಸಿಕೊಂಡರು. ಭಗವಂತನ ಆರಾಧನೆಗೆ ಸಂಗೀತವು ಅದ್ಭುತ ಸಾಧನವಾಗಬಲ್ಲುದೆಂಬ ರಹಸ್ಯ ನಮ್ಮ ಜನಕ್ಕೆ ಅನಾದಿಕಾಲದಿಂದಲೂ ತಿಳಿದಿದ್ದಿತೆನ್ನುವುದಕ್ಕೆ ಸಾಮವೇದವೇ ಸಾಕ್ಷಿ. ಭಗವಂತನು ಸಾಮಗಾನ ಪ್ರಿಯನಂತೆ! ಸಂಗೀತದಿಂದ ಮನಸ್ಸು ಏಕಾಗ್ರತೆಯನ್ನು ಪಡೆದು, ಅದ ರಿಂದ ದೈವಸಾಕ್ಷಾತ್ಕಾರಕ್ಕೆ ನೆರವಾಗುವುದು ಮಾತ್ರವೇ ಅಲ್ಲ, ಜನಮನ ವಶ್ಯತೆಗೂ ಅದು ಅದ್ವಿತೀಯ ಸಾಧನ. ದಾಸಪಂಥದವರು ಇದರ ಬಳಕೆ ಯಿಂದ ಪಡೆದ ಯಶಸ್ಸನ್ನು ಕಂಡೋ ಏನೋ, ವಚನಕಾರರು ಗದ್ಯರೂಪ ದಲ್ಲಿದ್ದ ವಚನಗಳನ್ನು ಹಾಡುವ ಸಂಪ್ರದಾಯದನ್ನು ಬಳಕೆಗೆ ತಂದುಕೊಂಡ ರೆಂದು ತೋರುತ್ತದೆ. ವಚನಕಾರರು ಹಾಡುಗಳನ್ನೂ ರಚಿಸಿದ್ದಾರೆ; ಆದರೆ ಅವೆಲ್ಲವೂ ಪ್ರಾಯಶಃ ಸ್ತೋತ್ರರೂಪವಾದವು. ಅವುಗಳನ್ನು ಅವರು ಮತ

ಪ್ರಚಾರಕ್ಕೇನೂ ಬಳಸಲಿಲ್ಲ. ಹರಿದಾಸರಾದರೊ, ಸಂಕೀರ್ತನೆ ಮತ ಪ್ರಚಾರಗಳೆರಡಕ್ಕೂ ಅವುಗಳನ್ನು ಏಕಕಾಲಕ್ಕೆ ಬಳಸಿಕೊಂಡರು.

ವೀರಶೈವ ಸಂಘಟನೆ ಮಾರ್ಗದರ್ಶನಗಳಿಗೆ 'ಶೂನ್ಯಸಿಂಹಾಸನ' 'ಅನುಭವಮಂಟಪ'ಗಳು ನೆರವಾದಂತೆ ಹರಿದಾಸರ ಸಂಘಟನೆ ಮಾರ್ಗದರ್ಶನಗಳಿಗೆ 'ವ್ಯಾಸಕೂಟ' 'ದಾಸಕೂಟ'ಗಳು ನೆರವಾದವು. ಹೊರನೋಟಕ್ಕೆ ಈ ಕೂಟಗಳು ಬೇರೆ ಬೇರೆಯಾಗಿ ಕಂಡರೂ ಅವೆರಡರ ಹೆಗ್ಗುರಿಯೂ ಒಂದೇ–ವೇದನಿಹಿತವಾದ ತತ್ವಗಳನ್ನು ದ್ವೈತಮಾರ್ಗಾನುಸಾರಿಯಾಗಿ ವಿವರಿಸುವುದು. ವೈದಿಕ ಆಧಾರ ಗ್ರಂಥಗಳೆಲ್ಲವೂ ವ್ಯಾಸಕೃತವಷ್ಟೆ? ಅವುಗಳನ್ನು ಮೂಲದಲ್ಲಿಯೇ ಓದಿ ವಿವರಣೆ ನೀಡಬಲ್ಲ ಸಂಸ್ಕೃತ ಪಂಡಿತರ ತಂಡವೇ ವ್ಯಾಸಕೂಟ'. ಇವರು ಅಧ್ಯಾತ್ಮವನ್ನು ಸಂಸ್ಕೃತ ಶ್ಲೋಕರೂಪದಲ್ಲಿ ವಿವರಿಸುತ್ತಾರೆ. ಮೂಲಗ್ರಂಥಗಳ ವಿವರಣೆಯಲ್ಲಿ ತಲೆದೋರಬಹುದಾದ ಸಮಸ್ಯೆ ಸಂದೇಹಗಳಿಗೆ ಸಮಾಧಾನ ಸದುತ್ತರಗಳನ್ನು ನೀಡಬಲ್ಲ ಸಂಸ್ಕೃತದಿಗ್ದಂತಿಗಳು ಇವರು. ಇವರಿಂದ ನಿರ್ಣೀತವಾದ ತತ್ವಗಳನ್ನು, ಧಾರ್ಮಿಕ ರೀತಿನೀತಿಗಳನ್ನು ಜನಸಾಮಾನ್ಯರಲ್ಲಿ ಕೀರ್ತನೆಗಳ ಮೂಲಕ ಪ್ರಚಾರಮಾಡುವ ಕಾರ್ಯ ದಾಸಕೂಟಕ್ಕೆ ಸೇರಿದುದು. ಒಂದು ಕೂಟಕ್ಕೆ ಸೇರಿದವರು ಮತ್ತೊಂದು ಕೂಟಕ್ಕೆ ಸದಸ್ಯರಾಗಿರಬಾರದೆಂಬ ನಿಯಮವೇನೂ ಇಲ್ಲ. ದಾಸಕೂಟಕ್ಕೆ ಸೇರಿದ ಅನೇಕರು ವ್ಯಾಸಕೂಟದಲ್ಲಿಯೂ ದಕ್ಷರಾಗಿದ್ದವರು. ಈ ಎರಡು ಕೂಟಗಳಿಗೂ ಇರುವ ವ್ಯತ್ಯಾಸ ಕೇವಲ ಭಾಷೆಗೆ ಸಂಬಂಧಪಟ್ಟುದು ಮಾತ್ರ. ಇದು ಕೂಡ ವ್ಯಾಸರಾಜ, ಪುರಂದರರ ಕಾಲದಿಂದ ಈಚೆಗೆ ಬಂದುದು.

ಹರಪಾರಮ್ಯ, ಹರಿಪಾರಮ್ಯಗಳ ವ್ಯತ್ಯಾಸವನ್ನು ಬಿಟ್ಟರೆ ದಾಸಸಾಹಿತ್ಯ ವಚನವಾಙ್ಮಯಗಳ ಹುರುಳು ಬಹುಮಟ್ಟಿಗೆ ಒಂದೇ ಎಂದು ಹೇಳಬಹುದು. ಎರಡರ ಗುರಿಯೂ ತಮ್ಮ ಮತ ತತ್ವಗಳ ಪ್ರತಿಪಾದನೆ, ಪ್ರಚಾರ. ಈ ಕಾರ್ಯದಲ್ಲಿ ತೊಡಗಿರುವಾಗ ಇತರ ಮತಗಳಿಗಿಂತ ತಮ್ಮ ಮತ ಶ್ರೇಷ್ಠವಾದುದೆಂಬ ಸಮರ್ಥನೆ, ಇತರ ದೈವಗಳ ಮತ್ತು ಮತಗಳ ಅಲ್ಪಸ್ವಲ್ಪ ಅವಹೇಳನ–ಇವು ಕಂಡುಬರುತ್ತವೆ. ಆದರೆ ಈ ಸಂಕುಚಿತ ಭಾವನೆಯನ್ನು ಮೆಟ್ಟಿ ಮೇಲೆದ್ದು ನಿಂತಿರುವ ನಿತ್ಯ ತತ್ವಗಳು ಎರಡರಲ್ಲಿಯೂ

ಕಂಡುಬರುತ್ತನೆ. ಆಗಿನ ಕಾಲದ ಧಾರ್ಮಿಕ ದುಸ್ಥಿತಿಯನ್ನು ಪ್ರತಿಬಿಂಬಿಸುವುದರಲ್ಲಿಯೂ ಸಂಸ್ಕೃತದಲ್ಲಿ ಹೆಪ್ಪುಗಟ್ಟಿ ಕುಳಿತಿದ್ದ ಆಧ್ಯಾತ್ಮಿಕ ತತ್ವಗಳನ್ನು ಜನರ ಮಾತಿನಲ್ಲಿ ಅಳವಡಿಸಿಕೊಂಡು ಮನೆಮನೆಯ ಬಾಗಿಲಿಗೂ ಕೊಂಡೊಯ್ದು ಹಂಚುವ ಸತ್ಕಾರ್ಯದಲ್ಲಿಯೂ ಎರಡೂ ವಾಙ್ಮಯಗಳಿಗೆ ಸಮಾನವಾದ ಪ್ರಶಸ್ತಿ ಸಲ್ಲಬೇಕಾಗಿದೆ. ವಚನಕಾರರಂತೆ ಹರಿದಾಸರೂ ತಮ್ಮ ಬೋಧನೆಯನ್ನು ನೀತಿಯ ನೆಲೆಗಟ್ಟಿನ ಮೇಲೆಯೇ ಸ್ಥಾಪಿಸಿದ್ದಾರೆ. ಆಳವಾದ ಆಧ್ಯಾತ್ಮಿಕ ಚಿಂತನೆಯಿಂದ ತಮಗೆ ಗೋಚರವಾದ ಸತ್ಯವನ್ನು ಅವ್ಯಾಜ ಪ್ರೇಮದಿಂದ ಜನರಿಗೆ ಬೋಧಿಸಿದ ಉದಾತ್ತಚೇತನರು, ಅವರು. ಸಮಾಜದಲ್ಲಿರುವ ದುರಾಚಾರಗಳನ್ನು, ಲೋಪದೋಷಗಳನ್ನು ಕಂಡು ಖಂಡಿಸುವುದರಲ್ಲಿ 'ವಜ್ರಾದಪಿ ಕಠೋರಾಣಿ' ಯಾಗಿ ಅವರ ಸಾತ್ವಿಕ ಕೋಪ ಕಾಣಿಸಿಕೊಂಡರೂ ಜನರ ಕಷ್ಟಗಳಿಗಾಗಿ ಮರುಗುವುದರಲ್ಲಿ, ಅವರಿಗೆ ವಿವೇಕ ಬೋಧೆ ಮಾಡುವುದರಲ್ಲಿ 'ಮೃದೂನಿ ಕುಸುಮಾದಪಿ'ಯಾಗಿ ವ್ಯವಹರಿಸುವುದರಲ್ಲಿ ಇರ್ವರೂ ಸಮಾನಗೌರವಕ್ಕೆ ಪಾತ್ರರು. ನುಡಿದಂತೆ ನಡೆದು ದೊಡ್ಡ ಬಾಳನ್ನು ನಡೆಸಿದ ಈ ಸಂತಜೀವಿಗಳು ಜನರಲ್ಲಿ ದೈವಭಕ್ತಿಯನ್ನು ಪ್ರಚೋದಿಸಿ, ಸಮಾಜದ ನೈತಿಕ ಮಟ್ಟವನ್ನು ಮೇಲಕ್ಕೆತ್ತುವುದರಲ್ಲಿ ಕೃತಕೃತ್ಯರಾದರು. ಕೈಲಿ ಏಕನಾದವನ್ನೊ ತಂಬೂರಿಯನ್ನೊ ಹಿಡಿದು ಮನೆಯಿಂದ ಮನೆಗೆ ಹಾಡುತ್ತಾ ಹೋಗುತ್ತಿರುವ ಈ ವೈರಾಗ್ಯ ಜೀವಿಗಳನ್ನು ಮನಸ್ಸಿನಲ್ಲಿ ಚಿತ್ರಿಸಿಕೊಳ್ಳುವುದರಿಂದಲೆ ಜೀವ ಪುಳಕಿತಗೊಳ್ಳುತ್ತದೆ.

ವಚನವಾಙ್ಮಯದಂತೆ ಹರಿದಾಸವಾಙ್ಮಯವೂ ಅಪಾರವಾಗಿರುವುದಾಗಿ ತಿಳಿದುಬರುತ್ತದೆ. ಒಬ್ಬೊಬ್ಬ ವಚನಕಾರನೂ ಸಹಸ್ರಾರು ವಚನಗಳನ್ನು ಬರೆದಿರುವನೆಂಬ ಪ್ರತೀತಿ ಇರುವಂತೆ ಒಬ್ಬೊಬ್ಬ ಹರಿದಾಸನೂ ಸಹಸ್ರಾರು ಕೃತಿಗಳನ್ನು ರಚಿಸಿರುವಂತೆ ಪ್ರವಾದವಿದೆ. ಪುರಂದರದಾಸನು 'ಇಂತು ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ ಕೃತಿಯ.........ವ್ಯಾಸಮುನಿಗಳು ಪೇಳಿಸಿದರು' ಎಂದು ಹೇಳಿಕೊಂಡಿರುವುದಾಗಿ ಕಂಡುಬರುತ್ತದೆ. ಇವನ್ನು ಆತನೇ ಹೇಳಿಕೊಂಡನೋ. ಇತರರು ಯಾರಾದರೂ ಆತನ ಅಂಕಿತದಲ್ಲಿ ಬರೆದು ಸೇರಿಸಿದರೊ! ಆತನೇ ಬರೆದನೆಂದುಕೊಂಡರೂ

ಅದನ್ನು ನಂಬುವುದು ಅಸಾಧ್ಯವೇ ಸರಿ. ಇದುವರೆಗೆ ಸುಮಾರು ಇನ್ನೂರು ಜನ ದಾಸಪಂಥದವರ ಹೆಸರುಗಳೂ ಕೃತಿಗಳೂ ಕಂಡುಬಂದಿವೆ. ಈಗ ಉಪಲಬ್ಧವಾಗದಿರುವ ಹಲವಾರು ಕೃತಿಗಳೂ ಇದ್ದಿರಬಹುದು. ನಾವು ವಚನವಾಙ್ಮಯವನ್ನು ಕುರಿತು ಹಿಂದೆಯೇ ಹೇಳಿರುವಂತೆ ಈ ದಾಸ ಸಾಹಿತ್ಯದಲ್ಲಿಯೂ ಕಳೆದುಹೋಗಿರುವ ಕೃತಿಗಳಲ್ಲಿ ಕೆಲವು ಕಳೆದುಹೋಗಲು ಅರ್ಹವಾಗಿಯೂ ಇದ್ದಿರಬಹುದು. ಅಚ್ಚುಕೂಟದ ಸಹಾಯವಿಲ್ಲದಿದ್ದಾಗ ಉತ್ತಮಕೃತಿಗಳಿಗೆ ಮಾತ್ರವೇ ಪುರಸ್ಕಾರ ದೊರೆತಿದ್ದರೆ ಅದು ಅತ್ಯಂತ ಸಹಜವೆಂದು ಹೇಳಬೇಕಾಗುತ್ತದೆ.

ವೀರಶೈವರ ವಚನಗಳಿಗೂ ಹರಿದಾಸರ ಕೀರ್ತನೆಗಳಿಗೂ ಸಾಮಾನ್ಯ ವಾದ ಮತ್ತೊಂದು ಅಂಶವೆಂದರೆ ಅವರ ಕೃತಿಗಳಲ್ಲಿ ಕಾಣಬರುವ ಅಂಕಿತ. ವಚನಕಾರರು ತಮ್ಮ ಇಷ್ಟದೈವವನ್ನು ತಮ್ಮ ವಚನಗಳಲ್ಲಿ ಅಂಕಿತವಾಗಿ ಬಳಸುತ್ತಿದ್ದರು. ಹರಿದಾಸರೂ ಮೊದ ಮೊದಲು ಇದೇ ಕ್ರಮವನ್ನು ಅನು ಸರಿಸಿದಂತೆ ಕಾಣುತ್ತದೆ. ಆದರೆ ಪುರಂದರದಾಸರ ಕಾಲಕ್ಕೆ ಹರಿದಾಸನಾಗು ವವನು ಗುರುವಿನಿಂದ ಅಂಕಿತವನ್ನು ಸ್ವೀಕರಿಸಬೇಕೆಂಬ ನಿಯಮ ಬಳಕೆಗೆ ಬಂದಿತು. ಗುರುವು ಶಿಷ್ಯನಿಗೆ ಅಂಕಿತವನ್ನು ಕೊಡುವ ಮುನ್ನ 'ಅಂಕಿತ ಪದ' ವೊಂದನ್ನು ರಚಿಸಿ ಅದರ ಪ್ರಾರಂಭದ ಚರಣದಲ್ಲಿ ಶಿಷ್ಯನ ಅಂಕಿತ ವನ್ನೂ ಮುಕ್ತಾಯದ ನುಡಿಯಲ್ಲಿ ತನ್ನ ಅಂಕಿತವನ್ನೂ ಹಾಕುವ ಸಂಪ್ರ ದಾಯ ಬೆಳೆದು ಬಂದಿತು. ಕಾಲಕ್ರಮದಲ್ಲಿ ಈ ಪದ್ಧತಿಯು ಅನಿವಾರ್ಯ ನಿಯಮವಾಗಿ ಮಾರ್ಪಟ್ಟು, ಗುರುವಿನಿಂದ ಅಂಕಿತಪಡೆಯದವನ ಕೃತಿ ಪುರಸ್ಕಾರಯೋಗ್ಯವಲ್ಲವೆಂದೂ, ಅವರಿಂದ ಶ್ರೀಹರಿ ಸುಪ್ರೀತನಾಗುವು ದಿಲ್ಲವೆಂದೂ ಜನ ನಂಬುವಂತಾಯಿತು. ಪಂಡರಪುರದ ವಿಠಲಸ್ವಾಮಿಯು ನಾದಬ್ರಹ್ಮನೆಂದು ಪ್ರಖ್ಯಾತನಾಗಿರುವುದರಿಂದ ಆತನೇ ದಾಸಪಂಥದವರ ಉಪಾಸ್ಯದೈವ. ಆದ್ದರಿಂದಲೇ ದಾಸರ ಅಂಕಿತದಲ್ಲಿ 'ವಿಠಲ' ನಾಮವೂ ಸೇರಿಕೊಂಡಿದೆ

'ದಾಸಕೂಟ' ಎಂದರೆ ಸೇವಕರ ಗುಂಪು ಎಂದು ವಾಚ್ಯಾರ್ಥ. ದ್ವೈತಮತದಲ್ಲಿ ಈ ಪದಕ್ಕೆ ಹರಿದಾಸ ಪಂಥಕ್ಕೆ ಸೇರಿದವರು ಎಂಬ ಅರ್ಥ ವಿದೆ. ಆ ಮತದ ಪ್ರಕಾರ ಜಗತ್ತಿನ ಜೀವಕೋಟಿಯೆಲ್ಲವೂ ಹರಿದಾಸರೆ.

ದೇವ ಜೀವರಿಬ್ಬರೂ ನಿತ್ಯರೆಂದು ದ್ವೈತಮತ ಹೇಳುವುದರಿಂದ ದಾಸ ಕೂಟವೂ ಅನಾದಿ. ಸಾಕ್ಷಾತ್ ಲಕ್ಷ್ಮಿಯೇ ಹರಿಯ ಪ್ರಥಮದಾಸಿ. ಆಕೆಯ ನಂತರ ಬ್ರಹ್ಮ ವಾಯು ಸರಸ್ವತಿ ಮೊದಲಾದ ದೇವತೆಗಳೂ ನಾರದ ಶುಕ ಮೊದಲಾದ ಋಷಿಗಳೂ ಲವಕುಶರೇ ಮೊದಲಾದ ಪುರಾಣಪುರುಷರೂ ಹರಿದಾಸಪಂಥಕ್ಕೆ ಸೇರಿದವರೆಂದು ದ್ವೈತಿಗಳ ಭಾವನೆ. ಐತಿಹಾಸಿಕ ದೃಷ್ಟಿಯಿಂದ ನೋಡಿದರೆ, ದ್ವೈತಮತಸ್ಥಾಪಕನಾದ ಮಧ್ವಾಚಾರ್ಯನೇ ದಾಸಪಂಥಕ್ಕೂ ಮೂಲಪುರುಷನೆಂದೂ, ಆತನಿಂದಲೆ ದಾಸವಾಙ್ಮಯ ಆರಂಭವಾಯಿತೆಂದೂ ಹೇಳಬೇಕಾಗುತ್ತದೆ. ಆತನು ಪಶ್ಚಿಮಸಮುದ್ರ ತೀರದಿಂದ ಉಡುಪಿಯವರೆಗೆ ಮೂರು ಗೋಪೀಚಂದನದ ಗಡ್ಡೆಗಳನ್ನು ಹೊತ್ತುಕೊಂಡು ಬರುತ್ತಾ ತನ್ನ ದ್ವಾದಶಸ್ತೋತ್ರವನ್ನು ರಚಿಸಿ ಹಾಡಿದ ನಂತೆ! ಇದರಿಂದ ದಾಸವಾಙ್ಮಯದ ಬೀಜಾವಾಪನೆಯಾಯಿತು.

ಆನಂದ ಮುಕುಂದ ಅರವಿಂದ ನಯನ
ಆನಂದ ತೀರ್ಥ ಪರಾನಂದ ವರದ
ಸುಂದರ ಮಂದಿರ ಗೋವಿಂದ ವಂದೆ
ಆನಂದತೀರ್ಥ ಪರಾನಂದ ವರದ

ಇಂತಹ ಹನ್ನೆರಡು ಸಾಲುಗಳಲ್ಲಿಯೂ 'ಆನಂದ ತೀರ್ಥ' ಎಂಬ ಅಂಕಿತ ಕಂಡುಬರುತ್ತದೆ. ಅದು ಆತನ ಆಶ್ರಮನಾಮವೂ ಅಹುದು. ಈ ಸ್ತೋತ್ರವು ಹಲವಾರು ರಾಗಗಳಲ್ಲಿ ಹಾಡಲು ತಕ್ಕಂತಿರುವುದಲ್ಲದೆ ಕೋಲಾಟದಲ್ಲಿಯೂ ಲಾಲಿಪದವಾಗಿಯೂ ಇದನ್ನು ಬಳಸುವ ಪದ್ಧತಿ ಉಡುಪಿಯ ಪ್ರಾಂತದಲ್ಲಿ ಈಗಲೂ ಇದೆಯಂತೆ. ಮಧ್ವಾಚಾರ್ಯನು ಜನಸಾಮಾನ್ಯರ ಬಳಕೆಗಾಗಿ ತುಳುಭಾಷೆಯಲ್ಲಿ ಹಲವು ಕೀರ್ತನೆಗಳನ್ನು ರಚಿಸಿದ್ದಾನಂತೆ. ಆದರೆ ಕನ್ನಡದಲ್ಲಿ ಆತನು ಕೀರ್ತನೆಗಳನ್ನು ರಚಿಸಿದಂತೆ ಕಂಡುಬರುವುದಿಲ್ಲ. ಆ ಕಾರ್ಯ ಆತನ ಶಿಷ್ಯ ಪ್ರಶಿಷ್ಯರಿಂದ ನಡೆಯಬೇಕಾಯಿತು.

ಮಧ್ವಾಚಾರ್ಯನಿಗಿಂತಲೂ ಮುಂಚೆಯೇ ಒಂಬತ್ತನೆಯ ಶತಮಾನ ದಲ್ಲಿದ್ದ ಅಚಲಾನಂದದಾಸನು ದಾಸವಾಙ್ಮಯವನ್ನು ಆರಂಭಿಸಿದನೆಂದು ಶ್ರೀ ಕೇಶವದಾಸರು ತಮ್ಮ 'ಭಕ್ತವಿಜಯ'ದಲ್ಲಿ ಹೇಳಿದ್ದಾರೆ. ಆದರೆ ಈ ಹೇಳಿಕೆ ಸತ್ಯವೆಂದು ಸ್ವೀಕರಿಸಲು ಸಾಕಷ್ಟು ಆಧಾರಗಳಿಲ್ಲ. "ಅಚಲಾನಂದ

ವಿಠಲ” ಎಂಬ ಅಂಕಿತದಿಂದ ದೊರೆಯುವ ಆತನ ಕೀರ್ತನೆಗಳು ಭಾಷಾ ದೃಷ್ಟಿಯಿಂದ ಅಷ್ಟು ಪುರಾತನವಾಗಿ ತೋರುತ್ತಿಲ್ಲ. ‘ ಇದಕ್ಯಾರಂಜುವರೊ ಗೋಪಾಲ ! ಇದಕ್ಯಾರಂಜುವರೊ ! ನಾಳೆ ಬಾಹೋದು ನಮಗಿಂದೇ ಬರಲಿ ! ಇಂದೆ ಬಾಹೋದು ನಾಳಿಗೆ ಬರಲಿ ! ಆಗ ಬಾಹೋದು ಯಮಗೀ ಕ್ಷಣ ಬರಲಿ ! ಯಾತರ ಭಯವು ಅಚಲಾನಂದ ವಿಠಲ ”– ಈ ಪದ್ಯದ ಭಾಷೆ, ಪದಪ್ರಯೋಗಗಳನ್ನು ಒಂಬತ್ತನೆಯ ಶತಮಾನದ್ದೆಂದು ಹೇಳಲು ಹೇಗೆ ಸಾಧ್ಯ ? ಈತನು ಪುರಂದರದಾಸನಿಂದ ಅಂಕಿತವನ್ನು ಪಡೆದನೆಂಬ ಐತಿಹ್ಯವಿದೆ. ಈ ಐತಿಹ್ಯ ಸತ್ಯದೂರವಲ್ಲವೆಂದು ತೋರುತ್ತದೆ. ಇವೆಲ್ಲ ಕಾರಣಗಳಿಗಿಂತಲೂ ಹೆಚ್ಚಾಗಿ ಈತನ ಪದ್ಯವೊಂದರಲ್ಲಿ ಮಧ್ವಾಚಾರ್ಯನ ಹೆಸರು ಕಂಡು ಬರುತ್ತದೆ”–“ಕೇಳೊ ಜೀವವೆ ನೀ ಮಧ್ವಮತವನನುಸರಿಸಿ ಶ್ರೀಲೋಲನಂಘ್ರಿಗಳ ನೆನೆದು ಸುಖಿಸೊ” ಎಂದು ಆರಂಭವಾಗುವ ಪದ್ಯ ಈತನನ್ನು ಮಧ್ವಾಚಾರ್ಯನಿಂದ ಈಚೆಯವನೆಂಬುದನ್ನು ನಿಸ್ಸಂದೇಹವಾಗಿ ನಿರ್ದೇಶಿಸುತ್ತದೆ.

ಹರಿದಾಸರ ಕೀರ್ತನೆಗಳು ದ್ವೈತಮತ ತತ್ವಗಳ ಪ್ರಸಾರದಲ್ಲಿ ಪ್ರವೃತ್ತವಾಗಿದ್ದರೂ ಇವು ದ್ವೈತಸಿದ್ಧಾಂತಕ್ಕೆ ಆಧಾರಗ್ರಂಥಗಳೇನೂ ಅಲ್ಲ. ವೈದಿಕಮತವಾದ ದ್ವೈತಕ್ಕೆ ವೇದಾದಿ ವೈದಿಕಗ್ರಂಥಗಳೇ ಆಧಾರ ಗ್ರಂಥಗಳು. ಈ ದೃಷ್ಟಿಯಲ್ಲಿ ಇದು ವಚನವಾಙ್ಮಯದಿಂದ ಭಿನ್ನವಾದುದು. ಅಲ್ಲದೆ, ವಚನಗಳಲ್ಲಿ ಕಾಣಬರುವ ಸೂತ್ರಸದೃಶವಾದ ಸಂಗ್ರಹಗುಣವೂ ದಾಸರ ಕೀರ್ತನೆಗಳಲ್ಲಿ ಅಷ್ಟಾಗಿ ಇಲ್ಲವೆನ್ನಿಸುತ್ತದೆ. ಆದರೂ ದಾಸಸಾಹಿತ್ಯ ದಿಂದ ಕನ್ನಡ ಭಾಷಾ ಸಾಹಿತ್ಯಗಳಿಗಾಗಿರುವ ತುಷ್ಟಿ ಪುಷ್ಟಿ ಅಲ್ಪವಾದು ದೇನೂ ಅಲ್ಲ. ‘ ಸಂಗೀತಮಪಿ ಸಾಹಿತ್ಯಂ ಸರಸ್ವತ್ಯಾ ಸ್ತನದ್ವಯಂ’ಅಲ್ಲವೆ ? ಸಾಹಿತ್ಯಜಗತ್ತಿನಂತೆ ಸಂಗೀತಜಗತ್ತಿನಲ್ಲಿಯೂ ಹರಿದಾಸರಿಂದ ಅಪಾರ ಸೇವೆ ಸಂದಿದೆ. ಅವರ ಪರಿಶ್ರಮದಿಂದ ಕನ್ನಡ ಸಂಗೀತಭಾಷೆಯಾಯಿತು. ಕರ್ಣಾಟಕ ಸಂಗೀತ ಪದ್ಧತಿಯ ಪಿತಾಮಹನೆಂದು ಕೀರ್ತಿಗೆ ಪಾತ್ರನಾ ಗಿರುವ ಪುರಂದರದಾಸನು ಅದುವರೆಗಿದ್ದ ಸಂಗೀತದ ಪಾಠಪದ್ಧತಿಯನ್ನು ಬದಲಾಯಿಸಿ ಈಗ ಸಂಗೀತ ಜಗತ್ತಿನಲ್ಲಿ ಸುಪ್ರಸಿದ್ಧವಾಗಿರುವ “ ಪಿಳ್ಳಾರಿ ಗೀತೆ” ಗಳನ್ನು, ರಸಾನುಗುಣವಾದ ತಾಳಭೇದವುಳ್ಳ ಸಹಸ್ರಾರು ಇತರ

ಪ್ರಬಂಧಗಳನ್ನು ಸೃಷ್ಟಿಸಿದನು. ಇಂದು ದಕ್ಷಿಣ ಭಾರತದಲ್ಲಿ ಪ್ರಚಾರದಲ್ಲಿರುವ ಗಾನವನ್ನೆಲ್ಲ-ಅದು ಕನ್ನಡ ತೆಲುಗು ತಮಿಳು ಯಾವುದೇ ಆಗಲಿ-ಕರ್ಣಾಟಕ ಸಂಗೀತವೆಂದು ಕರೆಯುವುದು ರೂಢಿಯಾಗಿದೆ. ಸಂಗೀತ ಜಗತ್ತಿನಲ್ಲಿ ಪುರಂದರದಾಸರಿಗಿರುವ ಹಿರಿಯ ಸ್ಥಾನವನ್ನು ಅರ್ಥಮಾಡಿಕೊಳ್ಳಬೇಕಾದರೆ, ಆತನು ಸಂಗೀತಜಗತ್ತಿನ ಧ್ರುವತಾರೆಯಾದ ತ್ಯಾಗರಾಜರಿಗೆ ಸ್ಫೂರ್ತಿಯನ್ನಿತ್ತವನೆಂಬುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

ಹರಿದಾಸರ ಹಾಡುಗಳು ಹಲವಾರು ಬಗೆಯ ಛಂದಸ್ಸುಗಳಲ್ಲಿ ಕಂಡುಬರುವುವಾದರೂ, ಅವು ಮುಖ್ಯವಾಗಿ 'ಕೀರ್ತನೆ', 'ಸುಳಾದಿ', 'ಉಗಾಭೋಗ'-ಎಂಬ ಮೂರು ರೂಪಗಳಲ್ಲಿ ಕಂಡುಬರುತ್ತವೆ. ರಾಗತಾಳಗಳಿಂದ ಕೂಡಿದ ಕೀರ್ತನೆಯೆಂಬುದು ಪಲ್ಲವಿ, ಅನುಪಲ್ಲವಿ, ನುಡಿಗಳೆಂಬ ಮೂರು ಅಂಗಗಳಿಂದ ಕೂಡಿದುದು. ನುಡಿಗಳು ಇಷ್ಟೇ ಇರಬೇಕೆಂಬ ನಿಯಮವೇನೂ ಇಲ್ಲ. ಇಲ್ಲಿ ಮಾತ್ರೆಗಿಂತಲೂ ಲಯಕ್ಕೇ ಹೆಚ್ಚು ಪ್ರಾಧಾನ್ಯ. ನಾವು ಹಿಂದೆಯೇ ತಿಳಿಸಿರುವಂತೆ ಈ ಹಾಡುಗಳನ್ನು ರಚಿಸುವ ಕ್ರಮ ವೀರಶೈವಶರಣರಿಂದ ಆಗಲೆ ಪ್ರಾರಂಭವಾಗಿತ್ತಾದರೂ ಆ ಹಾಡುಗಳಿಗೆ ಸಂಗೀತದಲ್ಲಿ ನಿರ್ದಿಷ್ಟ ಸ್ವರೂಪವನ್ನು ನೀಡಿದ ಕೀರ್ತಿ ಹರಿದಾಸರಿಗೆ ಸಲ್ಲುತ್ತದೆ. 'ಸುಳಾದಿ' ಗಳು ವಚನಕ್ಕೂ ಕೀರ್ತನೆಗೂ ಮಧ್ಯವರ್ತಿಯಾದ ಲಯವನ್ನು ಪಡೆದಿವೆ. ಸಪ್ತತಾಳಗಳಲ್ಲಿ ಯಾವುದಾದರೂ ಒಂದು ತಾಳದಲ್ಲಿ ಹಾಡುವುದಕ್ಕೆ ತಕ್ಕಂತೆ ಇವುಗಳ ರಚನೆಯೆಂದು ಸಂಗೀತಗಾರರ ಮತ. 'ಸುಳಾದಿ' ಎಂಬ ಶಬ್ದವು 'ಸೂಡಾಲಿ' ಎಂಬುದರ ಪರ್ಯಾಯವೆಂದೂ 'ಧ್ರುವ' ಮುಂತಾದ ಎಂಟು ತಾಳಗಳಿಗೆ ಸೂಡಾದಿ (ಸುಳಾದಿ) ಎಂಬುದಾಗಿ ಪುಂಡರೀಕ ವಿಟ್ಠಲನ 'ನರ್ತನ ನಿರ್ಣಯ' ದಲ್ಲಿದೆ ಎಂದೂ ಶ್ರೀಮಾನ್ ಮುಗುಳಿಯವರು ತಿಳಿಸುತ್ತಾರೆ. ಉಗಾಭೋಗ ಎಂಬ ಶಬ್ದವು ಉದ್ಗ್ರಾಹ ಮತ್ತು ಆಭೋಗ ಎಂಬ ಶಬ್ದಗಳಿಂದ ಕೂಡಿ ಆಗಿದೆ. ಇದರ ಸ್ವರೂಪವನ್ನು ವಿವರಿಸುತ್ತಾ ಶ್ರೀಮಾನ್ ಮುಗುಳಿಯವರು 'ಉತ್ತರ ಭಾರತದಲ್ಲಿ ಸ್ಥಾಯಿ ಠಾಯೀ, ಆಸ್ತಾಯಿ ಎಂದು ಕರೆಸಿಕೊಳ್ಳುವ ಪ್ರಬಂಧವು ಹರಿದಾಸ ಸಾಹಿತ್ಯದ ಮೊದಲ ಪ್ರಬಂಧವಾಯಿತು. ಉದ್ಗ್ರಾಹ, ಮೇಲಾಪಕ, ಧ್ರುವ ಅಂತರ, ಆಭೋಗವೆಂಬವುಗಳು ಉಗಾಭೋಗದ ಐದು ಧಾತುಗಳು.

ಒಂದು ರಾಗವನ್ನು ಗ್ರಹಿಸಿ ಮೇಳದಲ್ಲಿ ನಿಲ್ಲಿಸಿ ಧ್ರುವಗೊಳಿಸಿ ಸಮೀಪರಾಗಗಳ ಸೂಕ್ಷ್ಮಸ್ಥಾನದಲ್ಲಿ ವಿನ್ಯಾಸಗೊಳಿಸಿ ರಾಗಸಮಾರೋಪಣ ಮಾಡುವುದು ಧಾತುಗಳ ತಾತ್ಪರ್ಯ........ಇಷ್ಟನ್ನೂ ಮೂಕರಾಗದಲ್ಲಿ ವಿನ್ಯಾಸಮಾಡದೆ ಲಲಿತಸಾಹಿತ್ಯ ಸಹಿತವಾಗಿ ಪೂರ್ಣಮಾಡಿದರೆ ಅದು ಉಗಾಭೋಗವೆನಿಸಿಸುವುದು' ಎಂದು ಬೇಲೂರು ಕೇಶವದಾಸರ ಹರಿದಾಸಸಾಹಿತ್ಯದಿಂದ ಉದ್ಧರಿಸಿ ಬರೆಯುತ್ತಾರೆ. ಈ ಉಗಾಭೋಗಗಳು ತಮ್ಮ ಸ್ವರೂಪದಲ್ಲಿ ಬಹುಮಟ್ಟಿಗೆ ಶಿವಶರಣರ ವಚನಗಳನ್ನು ಹೋಲುತ್ತವೆ. ವಚನಸಾಹಿತ್ಯದ ಪ್ರಭಾವ ಇವುಗಳ ಮೇಲೆ ಹೇರಳವಾಗಿ ಆಗಿರುವಂತೆ ಕಂಡುಬರುತ್ತದೆ.

ಹರಿದಾಸರ ಕೀರ್ತನೆಗಳು ವೀರಶೈವ ವಚನಗಳಂತೆ ಮತ ತತ್ವಗಳನ್ನು ಪ್ರಚಾರಮಾಡುವ ಕಾರ್ಯದಲ್ಲಿಯೇ ಪ್ರವೃತ್ತವಾಗಿದ್ದರೂ ಇವು ದ್ವೈತಮತ ಸಿದ್ಧಾಂತಗಳಿಗೆ ಆಧಾರಗ್ರಂಥಗಳೇನೂ ಅಲ್ಲ. ವೇದಾದಿ ವೈದಿಕ ಗ್ರಂಥಗಳೇ ದ್ವೈತಕ್ಕೆ ಪ್ರಮಾಣಗ್ರಂಥಗಳು. ಈ ದೃಷ್ಟಿಯಲ್ಲಿ ದಾಸವಾಙ್ಮಯವು ವಚನವಾಙ್ಮಯದಿಂದ ಭಿನ್ನವಾದುದು. ವಚನಗಳಲ್ಲಿ ಕಾಣಬರುವ ಸೂತ್ರಸದೃಶವಾದ ಸಂಗ್ರಹಗುಣ ದಾಸರ ಕೀರ್ತನೆಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಇಷ್ಟೇ ಅಲ್ಲ, ದಾಸಸಾಹಿತ್ಯಕ್ಕಿಂತಲೂ ಮುಂಚೆಯೆ ಹುಟ್ಟಿದ್ದ ವಚನಗಳು ದಾಸಸಾಹಿತ್ಯದ ಮೇಲೆ ತಮ್ಮ ಪ್ರಭಾವವನ್ನು ಸಾಕಷ್ಟು ಬೀರಿವೆಯೆಂಬುದು ಗಮನಾರ್ಹ.

ಹರಿದಾಸಕೀರ್ತನೆಗಳಿಗೆ ಅಂಕುರಾರ್ಪಣವಾದುದು ಮಧ್ವಾಚಾರ್ಯರಿಂದಲಾದರೂ ಕನ್ನಡದಲ್ಲಿ ಅವುಗಳನ್ನು ಮೊಟ್ಟ ಮೊದಲು ಕಟ್ಟಿ ಹಾಡಿದ ಕೀರ್ತಿ ನರಹರಿತೀರ್ಥನಿಗೆ ಸಲ್ಲಬೇಕು. ಅವನ ಕಾಲದಿಂದ ಮುಂದೆ ಒಂದು ಶತಮಾನಕ್ಕಿಂತಲೂ ಹೆಚ್ಚುಕಾಲ ದಾಸರ ಕೀರ್ತನೆಗಳು ಕಂಡುಬರದಿರುವುದರಿಂದಲೂ, ನರಹರಿತೀರ್ಥನ ಎರಡು ಕೀರ್ತನೆಗಳು ಮಾತ್ರ ಈಗ ಉಪಲಬ್ಧವಾಗಿರುವುದರಿಂದಲೂ ಹರಿದಾಸರಲ್ಲಿ ಈತನು ಆದ್ಯನೆಂಬುದನ್ನೆ ಮರೆತು ಹದಿನೈದನೆಯ ಶತಮಾನದಲ್ಲಿ ಕಾಣಬರುವ ಶ್ರೀಪಾದರಾಯನನ್ನ ತಮ್ಮ

1 ಕನ್ನಡ ಸಾಹಿತ್ಯ ಚರಿತ್ರೆ : ಪುಟ ೩೦೪

2 " " ಪುಟ ೩೦೯.

ಪಂಥದ ಮೂಲ ಪುರುಷನೆಂದು ಗೌರವಿಸುವ ಸಂಪ್ರದಾಯ ಬೆಳೆದುಕೊಂಡು ಬಂದಿತೆಂದು ತೋರುತ್ತದೆ. ಆದರೆ ಆ ಗೌರವ ನ್ಯಾಯವಾಗಿ ಸಲ್ಲಬೇಕಾದುದು ನರಹರಿತೀರ್ಥನಿಗೇ.

**ನರಹರಿ ತೀರ್ಥ :**

ಹದಿಮೂರನೆಯ ಶತಮಾನದ ಕಡೆಯ ಭಾಗದಲ್ಲಿದ್ದ (ಕ್ರಿ. ಶ. ಸು. ೧೨೮೦) ನರಹರಿತೀರ್ಥನು ಮಧ್ವಾಚಾರ್ಯನ ಶಿಷ್ಯರಲ್ಲಿ ಅಗ್ರಗಣ್ಯನಾದವನು. ಈತನು ತನ್ನ ಪೂರ್ವಾಶ್ರಮದಲ್ಲಿ ಸ್ವಾಮಿಶಾಸ್ತ್ರಿಯೆಂಬ ಹೆಸರಿನಿಂದ ಒರಿಸ್ಸಾ ದೇಶದ ಗಜಪತಿ ರಾಜನಲ್ಲಿ ಅಧಿಕಾರಿಯಾಗಿದ್ದನು. ಮಧ್ವಾಚಾರ್ಯನು ಬದರಿಯ ಯಾತ್ರೆಯನ್ನು ಮುಗಿಸಿ ಹಿಂದಿರುಗುತ್ತಾ ಒರಿಸ್ಸಾ ದೇಶಕ್ಕೆ ಬಂದಾಗ, ಸ್ವಾಮಿಶಾಸ್ತ್ರಿಯು ಆತನ ಪಾಂಡಿತ್ಯಕ್ಕೂ ಉಪದೇಶಕ್ಕೂ ಮನಸೋತು ಶಿಷ್ಯನಾಗಿ, ಸನ್ಯಾಸವನ್ನು ಸ್ವೀಕರಿಸಿದನು. ಪ್ರಸಿದ್ಧ ಪಂಡಿತನಾದ ಸ್ವಾಮಿಶಾಸ್ತ್ರಿಯೊಡನೆ ಇನ್ನೂ ಅನೇಕರು ದ್ವೈತಮತವನ್ನು ಅವಲಂಬಿಸಿದರು. ನರಹರಿತೀರ್ಥನು ಗುರುವಿನ ಅಪ್ಪಣೆಯಂತೆ ಒರಿಸ್ಸಾ ದೇಶದ ರಾಜಧಾನಿಯಲ್ಲೇ ನಿಂತನು. ಇದಾದ ಕೆಲವು ದಿನಗಳಲ್ಲಿಯೇ ಗಜಪತಿ ರಾಜನು ಗರ್ಭಿಣಿಯಾಗಿದ್ದ ಹೆಂಡತಿಯನ್ನು ಬಿಟ್ಟು ಸತ್ತುಹೋಗಲು, ನರಹರಿ ತೀರ್ಥನು ರಾಜಕುಮಾರನು ಜನಿಸಿ ಪ್ರಾಪ್ತವಯಸ್ಕನಾಗುವವರೆಗೆ ಅಲ್ಲಿಯೇ ರಾಜ್ಯವಾಳುತ್ತಿದ್ದನು. ಅನಂತರ ಆತನು ರಾಜ್ಯವನ್ನು ಅದರ ಹಕ್ಕುದಾರನಿಗೆ ವಹಿಸಿಕೊಟ್ಟು, ಮಧ್ವಾಚಾರ್ಯನ ಅಪೇಕ್ಷೆಯಂತೆ ರಾಜನ ಬೊಕ್ಕಸದಲ್ಲಿದ್ದ ರಾಮ ಸೀತೆಯರ ಮೂಲವಿಗ್ರಹಗಳನ್ನು ರಾಜನಿಂದ ಪಡೆದು, ಅವನ್ನು ಗುರುವಿಗೆ ಒಪ್ಪಿಸಿದನಂತೆ! ಈತನು ರಾಜಪ್ರತಿನಿಧಿಯಾಗಿದ್ದಾಗಿನ ಕೆಲವು ಶಾಸನಗಳು ಸಹ ಕಂಡುಬರುತ್ತವೆ.

ಸಂಸ್ಕೃತದಲ್ಲಿ ಉದ್ದಾಮ ಪಂಡಿತನಾಗಿದ್ದ ನರಹರಿ ತೀರ್ಥನು ಕನ್ನಡದಲ್ಲಿ ಹರಿಕೀರ್ತನೆಗಳನ್ನು ರಚಿಸಿ, ಆ ಮೂಲಕ ಜನರಲ್ಲಿ ದ್ವೈತಮತವನ್ನು ಪ್ರಚಾರಮಾಡುತ್ತಾ ಅನೇಕ ಕ್ಷೇತ್ರಯಾತ್ರೆಗಳನ್ನು ಮಾಡಿದನು. ಈತನು ಅನೇಕ ಕೀರ್ತನೆಗಳನ್ನು ರಚಿಸಿರುವನೆಂಬ ಪ್ರತೀತಿಯಿದ್ದರೂ ಈಗ ಎರಡು ಮಾತ್ರ ಉಪಲಬ್ಧವಾಗಿವೆ. ಇವುಗಳಲ್ಲಿ ಮೊದಲನೆಯದು—ಹರಿದಾಸ ಕೀರ್ತನೆಗಳಲ್ಲಿ ಮೊಟ್ಟ ಮೊದಲನೆಯದು—'ಎಂತು ಮರುಳಾದೆ | ನಾ |

ನೆಂತು ಮರುಳಾದೆ' ಎಂದು ಭಗವಂತನಲ್ಲಿ ತನ್ನ ತಪ್ಪನ್ನು ತೋಡಿಕೊಳ್ಳುವ ಹಾಡು. ಈ ಹಾಡಿನಲ್ಲಿ ಸಾಕಷ್ಟು ಪಾಠಾಂತರಗಳು ದೊರೆಯುತ್ತವೆ. ಬಹುಶಃ ಆ ಕಾರಣದಿಂದಲೆ ಈತನ ಅಂಕಿತ 'ನರಹರಿ'ಯೊ, 'ರಘುಪತಿಯೋ' 'ಶ್ರೀ ರಘುಪತಿಯೋ' ಎಂಬ ಸಂದೇಹ ಹುಟ್ಟಲು ಕಾರಣವಾಗಿದೆ. ಈತನು ಮೊದಲ ಕೀರ್ತನೆಯ ಕಡೆಯ ನುಡಿಯಲ್ಲಿ 'ಭಜಿಸು ಬ್ರಹ್ಮಾದಿ ವಂದಿತ ಹರಿಯ| ತ್ಯಜಿಸು ಕಾಮಾದಿ ದುರ್ವಿಷಯ | ಸುಜನವಂದಿತನಾದ ನರಹರಿಯ | ಭಜಿಸು ಶ್ರೀ ಶ್ರೀ ಶ್ರೀ ರಘುಪತಿಯ' ಎಂದು ಹೇಳಿರುವಲ್ಲಿ 'ಶ್ರೀ ರಘುಪತಿ' ಯೆಂಬುದು ಆತನ ಅಂಕಿತವಿರಬೇಕೆನ್ನಿಸುತ್ತದೆ. 'ಹರಿಯೇ ಇದು ಸರಿಯೇ | ಚರಣ ಸೇವಕನಲ್ಲಿ ಕರುಣ ಬಾರದ್ಯಾಕೆ' ಎಂಬ ಆತನ ಎರಡನೆಯ ಕೀರ್ತನೆಯಲ್ಲಿ ಕಡೆಯ ನುಡಿ 'ದೊರೆ ನಿನ್ನ ಮನಸಿಗೆ ಸರಿ ಬಂದಂತೆ ಮಾಡು | ಮರೆಹೊಕ್ಕೆನು ನಾ ನರಹರಿಪೂರ್ಣನೆ' ಎಂದಿರುವುದನ್ನು ನೋಡಿದಾಗ 'ನರಹರಿಪೂರ್ಣ' ಎಂಬುದು ಆತನ ಅಂಕಿತವಿರಬಹುದೆನ್ನಿಸುತ್ತದೆ. ಇದನ್ನು ಹೀಗೆಯೇ ಸರಿ ಎಂದು ಹೇಳುವುದಕ್ಕೆ ಆಧಾರ ಸಾಲದು. ಈತನ ಈ ಎರಡು ಹಾಡುಗಳನ್ನೂ ನೋಡಿದರೆ ಈತನು ನುರಿತ ಕವಿಯಂತೆ ಕಾಣಿಸುತ್ತಾನೆ. ಆದರೆ ಇವೆರಡೇ ಪದ್ಯಗಳ ಆಧಾರದಿಂದ ಈತನ ಕೃತಿಶಕ್ತಿಯನ್ನು ಅಳೆಯಹೊರಡುವುದು ನಮಗೆ ಉಚಿತವೆನಿಸುತ್ತಿಲ್ಲ.

ನರಹರಿ ತೀರ್ಥನು ಕ್ರಿ. ಶ. ೧೩೩೩ರಲ್ಲಿ ಕಾಲವಾದನೆಂದು ತಿಳಿದು ಬರುತ್ತದೆ. ಈತನ ನಂತರ ವೇದಾಂತಪಟ್ಟಕ್ಕೆ ಬಂದವರು ದ್ವೈತವೇದಾಂತ ಗ್ರಂಥಗಳ ರಚನೆಯಲ್ಲಿಯೂ ವಾದಿ ನಿಗ್ರಹಕಾರ್ಯದಲ್ಲಿಯೂ ತೊಡಗಬೇಕಾಗಿ ಬಂದುದರಿಂದ ಮುಂದೆ ಒಂದು ಶತಮಾನಕ್ಕೂ ಹೆಚ್ಚು ಕಾಲ ದಾಸ ಪಂಥದ ಕಾರ್ಯ್ಯರಂಗ ಸ್ಥಗಿತವಾಗಿತ್ತೆಂದು ತೋರುತ್ತದೆ. ಅದನ್ನು ಮುಂದುವರಿಸಿ, ಪ್ರಾಕೃತ ಭಾಷೆಯಲ್ಲಿ ಧರ್ಮೋಪದೇಶ ಮಾಡುವ ಕಾರ್ಯವನ್ನು ಸಮರ್ಪಕವಾಗಿ ವ್ಯವಸ್ಥೆಗೊಳಿಸಿದ ಕೀರ್ತಿ ಹದಿನೈದನೆಯ ಶತಮಾನದ ಮಧ್ಯಭಾಗದಲ್ಲಿ (ಕ್ರಿ. ಶ. ೧೪೫೦) ವೇದಾಂತ ಪಟ್ಟವನ್ನೇರಿದ ಶ್ರೀಪಾದ ರಾಜನಿಗೆ ಸಲ್ಲುತ್ತದೆ.

**ಶ್ರೀಪಾದರಾಜ :**

ಸರ್ವಸಂಗ ಪರಿತ್ಯಾಗ ಮಾಡಿದ ಸನ್ಯಾಸಿಯಾದರೂ ರಾಜನಂತೆ

ವೈಭವದಿಂದ ಬಾಳಿದ ಭಾಗ್ಯಶಾಲಿ ಶ್ರೀಪಾದರಾಜ. ಹಾಸಿಗೆಯಿಂದ ಏಳುವಾಗ ಈತನ ಹೆಸರನ್ನು ಹೇಳಿದರೆ ಆ ದಿನ ಮೃಷ್ಟಾನ್ನ ಭೋಜನ ದೊರೆಯುತ್ತದಂತೆ! ಇಂತಹ ಅದೃಷ್ಟಶಾಲಿ ಹುಟ್ಟಿದುದು ಮಾತ್ರ ದಟ್ಟ ದರಿದ್ರನಾಗಿ. ಬೆಂಗಳೂರು ಜಿಲ್ಲೆಯ ಅಬ್ಬೂರಿನಲ್ಲಿ ಶೇಷಗಿರಿ—ಗಿರಿಯಮ್ಮ ಎಂಬ ಬಡ ಬ್ರಾಹ್ಮಣ ದಂಪತಿಗಳು, ಅವರ ಒಬ್ಬನೇ ಮಗ ಲಕ್ಷ್ಮೀನಾರಾಯಣ. ಹುಡುಗನ ಬುದ್ಧಿ ಪಾದರಸದಂತೆ ಚುರುಕು. ಆದರೆ ಹೊಟ್ಟೆಗೆ ಹಿಟ್ಟಿಲ್ಲದ ಶೇಷಗಿರಿ ಮಗನನ್ನು ಮನೆಯಲ್ಲಿದ್ದ ದನಗಳನ್ನು ಕಾಯಲು ನೇಮಿಸಿದ್ದ. ಅಕಸ್ಮಾತ್ತಾಗಿ ಈ ಹುಡುಗ ಸ್ವರ್ಣವರ್ಣ ತೀರ್ಥರ ಕಣ್ಣಿಗೆ ಬಿದ್ದ. ಅವರು ಆ ಹುಡುಗನನ್ನು ಶ್ರೀರಂಗಕ್ಕೆ ಕರೆದೊಯ್ದು, ತಮ್ಮ ಮಠದಲ್ಲಿ ಅವನಿಗೆ ವಿದ್ಯಾಭ್ಯಾಸ ಮಾಡಿಸಿದರು. ರತ್ನವನ್ನು ಸಾಣೆಗೆ ಕೊಟ್ಟಂತಾಯಿತು, ಹುಡುಗ ಅದ್ಭುತ ಪಂಡಿತನಾದ. ಸ್ವಾಮಿಗಳ ಕಾಲಾನಂತರ ಆತನೇ ಮಠಾಧಿಪತಿಯಾಗಿ ಲಕ್ಷ್ಮೀನಾರಾಯಣ ಮುನಿಯಾದ. ಬಾಲಕನಾದರೂ ವಿದ್ಯಾವಿನಯಸಂಪನ್ನನಾಗಿ ಮಹಾಜ್ಞಾನಿಯಾಗಿದ್ದ ಈ ಬಾಲಸನ್ಯಾಸಿಯನ್ನು ಉತ್ತರಾದಿಮಠದ ಶ್ರೀ ರಘುನಾಥತೀರ್ಥರು ಬಾಯ್ತುಂಬ ಹೊಗಳುತ್ತಾ 'ನಾವು ಶ್ರೀಪಾದಂಗಳಾದರೆ ನೀನು ಶ್ರೀಪಾದರಾಜ' ಎಂದು ಕರೆದರು. ಅಂದಿನಿಂದ ಆತನ ಹೆಸರು ಶ್ರೀಪಾದರಾಜನೆಂದೇ ಪ್ರಸಿದ್ಧವಾಯಿತು. ಈತನು ಮುಳುಬಾಗಿಲಿನಲ್ಲಿದ್ದ ಪದ್ಮನಾಭತೀರ್ಥರ ಮಠದ ಅಧಿಪತಿಯೂ ಆದನು: ಆ ಮಠದಲ್ಲಿ ವಿದ್ಯಾಕೇಂದ್ರವೊಂದನ್ನು ಸ್ಥಾಪಿಸಿ, ಸಂಸ್ಕೃತ ಪ್ರೌಢವಿದ್ಯೆಯ ವ್ಯಾಸಂಗಕ್ಕೆ ಅವಕಾಶವನ್ನು ಕಲ್ಪಿಸಿದನು. ವಿಜಯನಗರದ ರಾಜನಾದ ಸಾಳುವ ನರಸಿಂಹನು ತಿರುಪತಿಯ ಅರ್ಚಕರ ಅಕೃತ್ಯವನ್ನು ಸಹಿಸಲಾರದೆ ಅವರನ್ನು ಸಮೂಲವಾಗಿ ನಾಶಪಡಿಸಿದನಂತೆ! ಆ ಪಾಪದ ಪ್ರಕ್ಷಾಲನೆಗಾಗಿ ಅವನು ಶ್ರೀಪಾದರಾಯನನ್ನು ಆಶ್ರಯಿಸಿದನು. ಆತನು ರಾಜನಿಂದ ಶಾಂತಿಕರ್ಮಗಳನ್ನು ಮಾಡಿಸಿದನು. ಸುಪ್ರೀತನಾದ ರಾಜನು ಶ್ರೀಪಾದರಾಜನನ್ನು ಸಿಂಹಾಸನದಲ್ಲಿ ಕೂರಿಸಿ ಕನಕಾಭಿಷೇಕ ಮಾಡಿದನಂತೆ. ಅನಂತರ ಶ್ರೀಪಾದರಾಜನು ಅನೇಕ ತೀರ್ಥಕ್ಷೇತ್ರಗಳಲ್ಲಿ ಯಾತ್ರೆ ಮಾಡಿ, ಹಲವಾರು ಪವಾಡಗಳನ್ನು ಮೆರೆದು, ದೇವಾಂಶಸಂಭೂತನೆಂದು ಕೀರ್ತಿತನಾದನು. ಈತನು 'ವಾಗ್ವಜ್ರ'ವೇ ಮೊದಲಾದ ಸಂಸ್ಕೃತ ಪ್ರೌಢ ಗ್ರಂಥ

ಗಳನ್ನೂ ' ರಂಗ ವಿಠಲ'ನೆಂಬ ಅಂಕಿತದಿಂದ ಅನೇಕ ದೇವರನಾಮುಗಳನ್ನೂ ರಚಿಸಿದನು. ಈತನು ಕ್ರಿ. ಶ. ೧೪೮೬ನೆಯ ಇಸವಿಯಲ್ಲಿ ಬೃಂದಾವನಸ್ಥನಾದನಂತೆ. ಮುಳುಬಾಗಿಲಿನಲ್ಲಿರುವ ಆತನ ಬೃಂದಾವನಕ್ಕೆ ಈಗಲೂ ಪೂಜೆ ಸಲ್ಲುತ್ತಿದೆ; ಪ್ರತಿವರ್ಷವೂ ಆತನ ಹೆಸರಿನಲ್ಲಿ ರಥೋತ್ಸವ ನಡೆಯುತ್ತಿದೆ.

'ದಾಸಕೂಟ'ದ ಇತಿಹಾಸದಲ್ಲಿ ಶ್ರೀ ಪಾದರಾಯನು ಚಿರಸ್ಮರಣೀಯನಾಗಿದ್ದಾನೆ. ಬ್ರಾಹ್ಮಣರ ಮಠದಲ್ಲಿ ಕನ್ನಡ ಮಾತನಾಡುವುದೇ ಅಬ್ರಹ್ಮಣ್ಯವೆನ್ನುವ ಕಾಲದಲ್ಲಿ, ಮಠಾಧಿಪತಿಯಾದ ಶ್ರೀಪಾದರಾಜನು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದುದಲ್ಲದೆ, ಅವುಗಳನ್ನು ಪೂಜಾಕಾಲದಲ್ಲಿ ದೇವರ ಮುಂದೆ ಹಾಡಿಸುವ ಪದ್ಧತಿಯನ್ನು ಬಳಕೆಗೆ ತಂದನು. ಆತನೇ ರಚಿಸಿದ್ದ ಭ್ರಮರಗೀತೆ ವೇಣುಗೀತೆ ಗೋಪೀಗೀತೆಗಳನ್ನು ದಾಸರು ವೇದ ಪಾರಾಯಣಮಾಡುವಂತೆ ಹಾಡುತ್ತಿದ್ದರಂತೆ! ಶ್ರೀರಂಗದಲ್ಲಿ ಬಹುಕಾಲ ಇದ್ದ ಶ್ರೀಪಾದರಾಜನಿಗೆ, ಅಲ್ಲಿನ ತಮಿಳರು ವೈಷ್ಣವ ಪ್ರಬಂಧಗಳನ್ನು ತಮಿಳಿನಲ್ಲಿ ಹಾಡುತ್ತಿದ್ದುದನ್ನು ಕೇಳಿ, ಮಾತೃಭಾಷಾಭಿಮಾನ ಜಾಗ್ರತವಾಯಿತೆಂದು ತೋರುತ್ತದೆ. ಈತನು ಕನ್ನಡ ಕೀರ್ತನೆಗಳಿಗೆ ಆಧ್ಯಾತ್ಮಿಕ ತತ್ವಗಳ ಸ್ಥಾನಮಾನವನ್ನು ಗಳಿಸಿಕೊಟ್ಟದ್ದು ಮಾತ್ರವೇ ಅಲ್ಲ; ಅವುಗಳ ಮೂಲಕ ದ್ವೈತ ತತ್ವವನ್ನು ಜನಸಾಮಾನ್ಯರಲ್ಲಿ ಪ್ರಚಾರಮಾಡಬಲ್ಲ ಹರಿದಾಸರ ತಂಡವೊಂದನ್ನು ತಯಾರುಮಾಡಿದನು. ಸಂಸ್ಕೃತದಲ್ಲಿದ್ದ ವೇದಾಂತಜ್ಞಾನದ ಜೊತೆಗೆ ಸಂಗೀತ ನರ್ತನಗಳ ಪರಿಜ್ಞಾನವನ್ನೂ ಕನ್ನಡದ ಬೆಳವಣಿಗೆಗಾಗಿ ಆತ ಬಳಸಿದನು. ಈತನ ಕಾಲದಲ್ಲಿ ಕೀರ್ತನೆಯ ಜೊತೆಯಲ್ಲಿ ನರ್ತನ ಮಾಡುವ ಪರಿಪಾಠಿಯೂ ಬೆಳೆದು ಬಂತು. ಭಗವಂತನಿಗೆ ನರ್ತನ ಸೇವೆಯನ್ನು ಸಲ್ಲಿಸುವುದಕ್ಕಾಗಿಯೇ ಪ್ರತ್ಯೇಕವಾದ ಕೃತಿಗಳನ್ನು ಈತನು ರಚಿಸಿದ್ದಾನೆ.

ಶ್ರೀ ಪಾದರಾಯನ ಅಂಕಿತ ರಂಗವಿಠಲ—ಕಾವೇರೀತೀರದ ರಂಗನಾಥನನ್ನೂ ಪಂಢರಿಪುರದ ವಿಟ್ಠಲನನ್ನೂ ಒಳಗೊಂಡುದು—ಎಂದು. ಆತನ ಕವಿತಾಶಕ್ತಿ ಅಷ್ಟೇನೂ ಉನ್ನತವಾಗಿಲ್ಲದಿದ್ದರೂ ಭಕ್ತಿ ವೈರಾಗ್ಯಗಳನ್ನು ಪ್ರತಿಪಾದಿಸುವಲ್ಲಿ, ಅದರಲ್ಲಿಯೂ ಭಾಗವತದ ದಶಮಸ್ಕಂಧದಲ್ಲಿ ಬರುವ ಶ್ರೀ ಕೃಷ್ಣನ ಬಾಲಲೀಲೆಯನ್ನು ನಿರೂಪಿಸುವಲ್ಲಿ, ಆತನ ಆಧ್ಯಾ

ತ್ಯಾಸುರಾಗ ಮಹಿಮಾನ್ವಿತವಾಗಿ ಕಾಣಬರುತ್ತದೆ. 'ಭಕ್ತಿಬೇಕು, ವಿರಕ್ತಿ ಬೇಕು, ಶಕ್ತಿ ಬೇಕು ಮುಂದೆ ಮುಕ್ತಿ ಬಯಸುವಗೆ' ಎಂಬುದು ಆತನ ಆಧ್ಯಾತ್ಮಿಕ ನಿಲವು. ಜಪತಪಗಳು ಕೂಡ ಭಗವದರ್ಪಿತವಾದಾಗ ಮಾತ್ರ ಸಾರ್ಥಕವಾಗುತ್ತವೆ. ಇಂದ್ರಿಯಗಳೆಲ್ಲವೂ ಭಗವಂತನ ಕೈಂಕರ್ಯದಲ್ಲಿ ಲೀನವಾಗಬೇಕು. ಇದೇ ಪರಿಪಾಕ ಸ್ಥಿತಿ. ಈ ಸ್ಥಿತಿಯನ್ನು ಪಡೆದಾಗ ಸಂಸಾರದಿಂದ ಉದ್ಧಾರ. ಈ ಮರ್ಮವನ್ನು ಅರಿತ ಶ್ರೀಪಾದರಾಜ ಶ್ರೀ ಹರಿಯನ್ನು ಕುರಿತು 'ನಾ ನಿನಗೇನು ಬೇಡುವುದಿಲ್ಲ, ಎನ್ನ! ಹೃದಯ ಮಂಟಪದೊಳು ನಿಂದಿರೊ ಕೃಷ್ಣ' ಎಂದು ಬೇಡಿಕೊಳ್ಳುತ್ತಾನೆ. 'ಶಿರ ನಿನ್ನ ಚರಣದಲ್ಲೆರಗಲಿ, ಎನ್ನ! ಚಕ್ಷುಗಳು ನಿನ್ನ ನೋಡಲಿ! ಕರ್ಣ ಗೀತಂಗಳ ಕೇಳಲಿ, ಎನ್ನ! ನಾಸಿಕ ನಿರ್ಮಾಲ್ಯಾಘ್ರಾಣಿಸಲಿ, ಕೃಷ್ಣ' ಎಂಬುದು ಆತನ ಹಾರೈಕೆ. ತನ್ನ ಬುದ್ಧಿ ತಪ್ಪು ಹಾದಿಗೆ ಹೋಗುತ್ತದೆ; ಅಂದಮಾತ್ರಕ್ಕೆ ತನ್ನನ್ನು ದೇವರು ದೂರಮಾಡಬೇಕೇನು? 'ಹೆತ್ತ ಮಕ್ಕಳು ಹುಚ್ಚರಾದರೆ ತಾಯ್ತಂದೆ! ಎತ್ತದೆ, ನೆಲಕೆ ಬಿಸುಡುವರೆ ಗೋವಿಂದ?' ಎಂದು ಆತನು ಬಹು ಮಾರ್ಮಿಕವಾಗಿ ದೇವರನ್ನು ಪ್ರಶ್ನಿಸುತ್ತಾನೆ. ಹಾಗೆ ಎತ್ತಲು ಸಾಧ್ಯವಿಲ್ಲದಿದ್ದರೆ ತನ್ನನ್ನು ಏಕೆ ಹುಟ್ಟಿಸಬೇಕಾಗಿತ್ತು? 'ಯಾಕೆ ಪುಟ್ಟಿಸಿದೆ ಸೀ ಸಾಕಲಾರದೆ ಜಗ!.ದೇಕ ಕಾರಣ ಪುರುಷನೆ ಕೃಷ್ಣ?' ಎಂದು ಆತನು ದೇವರನ್ನು ಕುರಿತು ಕೇಳುವ ಪ್ರಶ್ನೆ ಹೃದಯಸ್ಪರ್ಶಿಯಾಗಿದೆ. ಭಗವಂತನ ಸಾಕ್ಷಾತ್ಕಾರ ದೊರೆಯದೆ ಹೋದಾಗ ಆತನ ಹೃದಯವೇದನೆ ಸಹಿಸಲಸದಳವಾಗುತ್ತದೆ. ಆಗ ಆತನು 'ಉರಿಯೊಳಗೆ ಬಿದ್ದು ಶರೀರವನು ಕಳೆಯಲೊ! ಪರ್ವತವನೇರುರುಳಲೋ ಕೃಷ್ಣ?' ಎಂದು ಹಳಹಳಿಸುತ್ತಾನೆ. ವಿಷ ಕುಡಿಯಲೋ, ಗರಗಸಕ್ಕೆ ಶಿರ ಒಡ್ಡಲೊ, ಉರುಲು ಹಾಕಿಕೊಳ್ಳಲೊ?' ಎಂದು ಭಗವಂತನನ್ನು ಅಂಗಲಾಚುತ್ತಾ 'ಕರುಣವಾರಿಧಿಯೆನ್ನ ಕರಪಿಡಿದು ಸಲಹದಿರೆ, ಧರೆಯೊಳುದ್ಧರಿಪರಾರೊ?' ಎಂದು ಪ್ರಶ್ನಿಸುತ್ತಾನೆ.

ಶ್ರೀಪಾದರಾಜನ ಕೃತಿಗಳು ಜನರ ನೀತಿಯನ್ನು ತಿದ್ದಿ, ಅವರಲ್ಲಿ ಧಾರ್ಮಿಕ ಜಾಗ್ರತಿಯನ್ನು ಬೆಳೆಸುವುದರಲ್ಲಿ ಕೃತಕೃತ್ಯತೆಯನ್ನು ಪಡೆದಿವೆ. ಈತನನ್ನು ಈತನ ಶಿಷ್ಯನಾದ ವ್ಯಾಸರಾಜನು 'ವೇದಶಾಸ್ತ್ರ ಪುರಾಣದಲಿ!

ಆದಿಶೇಷನ ಪೋಲ್ವ ಮುನಿ' ಎಂದೂ ಪುರಂದರ ದಾಸರ ಮಗನಾದ ಮಧ್ವಪತಿದಾಸನು 'ವರಧ್ರುವನವತಾರ ಶ್ರೀಪಾದರಾಯರು' ಎಂದೂ ಹೊಗಳಿರುವುದು ಸಾರ್ಥಕವಾಗಿದೆ.

**ವ್ಯಾಸರಾಯ :**

ಮೈಸೂರು ಜಿಲ್ಲೆಯ ಬನ್ನೂರಿನಲ್ಲಿ ಬಾಲಣ್ಣ (ಬಲ್ಲಣ್ಣ) ಸುಮತಿ ಅಕ್ಕಮ್ಮ ಎಂಬ ಸಾತ್ವಿಕ ದಂಪತಿಗಳಿಗೆ ಶ್ರೀ ಮಧ್ವಾಚಾರ್ಯನ ಮೂಲ ಪೀಠಸ್ಥರಾದ ಬ್ರಹ್ಮಣ್ಯತೀರ್ಥ ಸ್ವಾಮಿಗಳ ಆಶೀರ್ವಾದದಿಂದ ಒಂದು ಗಂಡು ಮಗು ಹುಟ್ಟಿತಂತೆ. ಅದನ್ನು ಬ್ರಹ್ಮಣ್ಯತೀರ್ಥರಿಗೆ ಒಪ್ಪಿಸಬೇಕೆಂದು ಮೊದಲೇ ಗೊತ್ತಾಗಿದ್ದುದರಿಂದ, ಮುಂದೆ ಯತಿಯಾಗಬೇಕಾದ ಆ ಮಗನಿಗೆ ಯತಿರಾಜನೆಂದೇ ನಾಮಕರಣವಾಯಿತು. ಭೂಸ್ಪರ್ಶಕ್ಕಿಂತಲೂ ಮೊದಲೇ ತಾಯ್ತಂದೆಗಳಿಂದ ಈ ಮಗುವನ್ನು ಕೊಂಡೊಯ್ದು ಬ್ರಹ್ಮಣ್ಯತೀರ್ಥರು, ತಾವು ಪೂಜಿಸುತ್ತಿದ್ದ ಶ್ರೀರಾಮಚಂದ್ರನ ಅಭಿಷೇಕದ ಹಾಲಿನಿಂದಲೆ ಈ ಮಗುವನ್ನು ಪೋಷಿಸಿ ಬೆಳೆಸುತ್ತಾ, ಆತನ ಐದನೆಯ ವರ್ಷದಲ್ಲಿಯೇ ಉಪನಯನ ಮಾಡಿ, ಏಳನೆಯ ವಯಸ್ಸಿನಲ್ಲಿ ಸನ್ಯಾಸ ದೀಕ್ಷೆಯನ್ನು ಕೊಟ್ಟು 'ವ್ಯಾಸರಾಯ'ನೆಂದು ಕರೆದರು. ವ್ಯಾಸರಾಯನು ಶ್ರೀಪಾದರಾಯನಲ್ಲಿ ಶಿಕ್ಷಣವನ್ನು ಪಡೆದು ಪಾಂಡಿತ್ಯದಲ್ಲಿ ಗುರುವನ್ನೂ ಮೀರಿಸಿದನು. ಬ್ರಹ್ಮಣ್ಯತೀರ್ಥರ ಕಾಲಾನಂತರ ಈತನು ತೀರ್ಥಯಾತ್ರೆಯನ್ನು ಕೈಕೊಂಡು, ಕಂಚಿಯೇ ಮೊದಲಾದ ಪುಣ್ಯಕ್ಷೇತ್ರಗಳಲ್ಲಿದ್ದ ಪಂಡಿತರನ್ನೆಲ್ಲಾ ವಾದದಲ್ಲಿ ಗೆದ್ದು ದ್ವೈತಮತವನ್ನು ಪ್ರಚಾರ ಮಾಡಿ ವ್ಯಾಸರಾಯ ಮಠದ ಸ್ವಾಮಿಯಾದನು. ವಿಜಯನಗರದ ಸಾಳುವ ನರಸಿಂಹನು ಶ್ರೀಪಾದರಾಯನನ್ನು ತನ್ನ ರಾಜಗುರುವಾಗಿರುವಂತೆ ಪ್ರಾರ್ಥಿಸಲು, ಆತನು ಅದಕ್ಕೊಪ್ಪದೆ ವ್ಯಾಸರಾಯನನ್ನು ಆ ಕಾರ್ಯಕ್ಕೆ ನೇಮಿಸಿದನು. ಅಲ್ಲಿಂದ ಮುಂದೆ ಈತನು ಸುಮಾರು ಅರವತ್ತು ವರ್ಷಗಳಷ್ಟು ದೀರ್ಘಕಾಲ–ಐದು ಜನ ರಾಜರ ಕಾಲದಲ್ಲಿ—ವಿಜಯನಗರ ಸಾಮ್ರಾಜ್ಯದ ರಾಜಗುರುವಾಗಿ, ಸಂರಕ್ಷಕನಾಗಿ, ಲೌಕಿಕ ಪಾರಲೌಕಿಕಗಳೆರಡರಲ್ಲೂ ರಾಜರಿಗೆ ಮಾರ್ಗದರ್ಶಕನಾಗಿ ಕೀರ್ತಿಶಾಲಿಯಾದನು. ಒಮ್ಮೆ ವಿಜಯನಗರದ ಕೃಷ್ಣದೇವರಾಯನಿಗೆ ಪ್ರಾಪ್ತವಾಗಿದ್ದ 'ಕುಹು' ದುರ್ಯೋಗವನ್ನು ತಪ್ಪಿಸುವುದಕ್ಕಾಗಿ ಈತನು

ಕೆಲವು ಕಾಲ ವಿಜಯನಗರದ ಸಿಂಹಾಸನವನ್ನು ಏರಿ ರಾಜ್ಯಭಾರವನ್ನೂ ನಿರ್ವಹಿಸಿದನಂತೆ! ಆ ಸಮಯದಲ್ಲಿ ಬೇಕಾದಷ್ಟು ದಾನಧರ್ಮಗಳನ್ನೂ ಮಾಡಿದಂತೆ ಕಂಡುಬರುತ್ತದೆ. ಈತನು ರಾಜಗುರುವಾಗುವ ವೇಳೆಗೆ ಸಾಳುವ ನರಸಿಂಹನ ಕೋಪಕ್ಕೆ ತುತ್ತಾಗಿ ತಿರುಪತಿಯ ಅರ್ಚಕರ ವಂಶ ನಿರ್ಮೂಲವಾಗಿದ್ದುದರಿಂದ ವ್ಯಾಸರಾಯನು ತಾನೇ ತಿರುಪತಿಯ ದೇವತಾರ್ಚನೆಯನ್ನು ವಹಿಸಿಕೊಂಡು ಹನ್ನೆರಡು ವರ್ಷಗಳ ಕಾಲ ನಡಸುತ್ತಿದ್ದನಂತೆ. ಈತನು ತೊಂಬತ್ತು ವರುಷಗಳಿಗಿಂತಲೂ ಹೆಚ್ಚು ಕಾಲ ಬಾಳಿ, ಸಹಸ್ರಾರು ಗುಡಿಗೋಪುರಗಳನ್ನೂ ಅನೇಕ ಕೆರೆಕಟ್ಟೆಗಳನ್ನೂ ಕಟ್ಟಿಸಿ ಜನರ ಲೌಕಿಕ ಜೀವನಕ್ಕೆ ಸಹಾಯವನ್ನು ಒದಗಿಸಿದುದಲ್ಲದೆ, ವ್ಯಾಸತ್ರಯವೆಂದು ಪ್ರಸಿದ್ಧವಾಗಿರುವ ನ್ಯಾಯಾಮೃತ, ತರ್ಕತಾಂಡವ, ತಾತ್ಪರ್ಯಚಂದ್ರಿಕಾ ಎಂಬ ಸಂಸ್ಕೃತ ಗ್ರಂಥಗಳ ಜೊತೆಗೆ ಅನೇಕ ಸಂಸ್ಕೃತ ಗ್ರಂಥಗಳನ್ನೂ ನೂರಾರು ಕನ್ನಡ ಕೀರ್ತನೆಗಳನ್ನೂ ರಚಿಸಿ, ಜನರ ಆಧ್ಯಾತ್ಮಿಕ ಜೀವನವನ್ನು ಉತ್ತಮಗೊಳಿಸಲು ಪ್ರಯತ್ನಿಸಿದನು. ಈತನ ಅಂಕಿತ ಕೃಷ್ಣ, ಶ್ರೀಕೃಷ್ಣ ಅಥವಾ ಸಿರಿಕೃಷ್ಣ.

ವ್ಯಾಸರಾಯನ ಕೀರ್ತನೆಗಳಲ್ಲಿ ಕೆಲವು ಲಲಿತ ಮನೋಹರವಾಗಿ, ಭಾವಪೂರ್ಣವಾಗಿ, ರಸಭರಿತವಾಗಿವೆ ವಾತ್ಸಲ್ಯಭಾವವನ್ನು ಹೊರ ಚೆಲ್ಲುವ ಈ ಸುಂದರವಾದ ಕೀರ್ತನೆಯನ್ನು ನೋಡಿ

ಕೊಳಲನೂದುವ ಚದುರನಾರೆ ಪೇಳಮ್ಮಯ್ಯ! ತಳಿರಂದದಿ ತಾ ಪೊಳೆವ ಕರದಿ ಪಿಡಿದು | ಪ | ನಾದವಿ ತುಂಬಿತು ಗೋವರ್ಧನ ಗಿರಿ | ಯಾದವ ಕುಲಜನ ಒರೆವಿತು ಖಗಕುಲ | ಸಾಧಿಸಿ ನೋಡಲು ಕೃಷ್ಣನ ಈಗಲೆ ಸಾಧ್ಯವೇನೇ ಬೃಂದಾವನದೊಳು ॥ ೧ ॥ ಮೇವ ಮರೆತವು ಗೋವುಗಳೆಲ್ಲ | ಸಾವಧಾನದಿ ಹರಿದಳು ಯಮುನಾ | ಆವ ಕಾವುತಲಿ ಗೋವಳರೆಲ್ಲರ | ಹಾವಭಾವದಲಿ ಬೃಂದಾವನದಲಿ ॥೨॥ ಸುರರು ಸುರಿದರಾಕಾಶದಿ ಸುಮಗಳ | ಪರಿದುಪೋಗಿ ನೋಡೆ ಬೃಂದಾವನದೊಳು | ಸಾರಿ ಸಾರಿ ಶ್ರೀ ಕೃಷ್ಣನು ಈಗಲೆ | ತುರುಗಳ ಕಾಯುವ ಕದಂಬವನದೊಳು ॥೩॥

ಇತರ ಹರಿದಾಸರಂತೆ ವ್ಯಾಸರಾಯನೂ ಸಂಸಾರದ ಅನಿತ್ಯತೆ ಕಷ್ಟ ಕಾರ್ಪಣ್ಯಗಳನ್ನೂ ಇದರಿಂದ ಉದ್ಧಾರವಾಗಲು ಶ್ರೀಹರಿಕರುಣವೊಂದೇ

ಹೆದ್ದಾರಿಯೆಂಬುದನ್ನೂ ಎರಡಿಲ್ಲದ ಭಕ್ತಿಯಿಂದ ಆತನನ್ನು ಶರಣುಹೋಗ ಬೇಕೆಂಬುದನ್ನೂ ಬೋಧಿಸಿದ್ದಾನೆ. ಆದರೆ ಈತನ ಕೀರ್ತನೆಗಳ ವೈಶಿಷ್ಟ್ಯ ವೆಂದರೆ ಮೇಲಿಂದ ಮೇಲೆ ಕಾಣಬರುವ ರೂಪಕಗಳು. 'ಸಂಸಾರವೆಂಬ ಮಾರಿಗೆ ಸಿಲುಕದೆ ಕಂಸಾರಿ ಕರುಣದಿಂದೆನ್ನ ನೋಡಯ್ಯ' ಎಂಬ ಆತನ ಬೇಡಿಕೆಗೆ ಪೋಷಕವಾಗಿ 'ನಮೋ ನಮೋ ಸಿರಿಕೃಷ್ಣ ಎಂಬ ಘೋಷ ಮುಕುತಿ ಕನ್ನಿಕೆಯ ವಾದ್ಯಘೋಷ' ಎಂಬ ಹೇಳಿಕೆ ಬಂದಿದೆ. ಸಪ್ತಾ ವರಣಗಳಿಂದ ಕೂಡಿದ ತನ್ನ ದೇಹವನ್ನು ಯಮದೂತರಿಂದ ಕಾಪಾಡೆಂದು ಹರಿಯನ್ನು ಬೇಡುವಲ್ಲಿ 'ಏಳುಸುತ್ತಿನ ಕೋಟೆ ಯಮನಾಳು ಮುತ್ತಿ ಕೊಂಡು। ಪಾಳು ಮಾಡೇವೆಂದು ಪೇಳುತಿರಲು। ಆಳು ಸಾಮಗ್ರಿಯ ಅಪಾರ ಬಲ ಮಾಡಿ। ಕೋಳುಹೋಗದ ಮುನ್ನ ಕೋಟೆ ರಕ್ಷಿಸಬೇಕು' ಎನ್ನುತ್ತಾನೆ. ಮಾಯೆಯಿಂದ ತನ್ನನ್ನು ಉದ್ಧರಿಸೆಂದು ಹರಿಯನ್ನು ಬೇಡುವಲ್ಲಿ 'ಮಾಯೆಯೆಂಬ ದುಷ್ಟರಾಯ। ಮಾನವೆಂಬ ಬಿನುಗು ಮಂತ್ರಿ। ಇಂದ್ರಿಯಗಳೆಂಬ ತಿರಿದೋಡುವ ಪರಿವಾರ। ಬಿಗಿದು ಕಟ್ಟಿ ಎನ್ನ ಹಗೆ ಗಳಿಗಿತ್ತರು। ಕಾಮಾದಿ ಹಗೆಗಳ ಶಿಕ್ಷಿಸಿ ರಕ್ಷಿಸೈಯ ಸಿರಿಕೃಷ್ಣ' ಎಂದು ಹೇಳುತ್ತಾನೆ. ಕೊಳಲು ನುಡಿಸೆಂದು ಹರಿಯನ್ನು ಬೇಡುವ ಈ ಭಾವ ಗೀತೆಯಲ್ಲಿ ಬರುವ ರೂಪಕಪರಂಪರೆಯನ್ನು ನೋಡಿ—'ಕೊಳಲ ನುಡಿಸು ಕಿವಿಯೊಳೆನಗೆ ಚೆಲುವ ಮೋಹನ ॥ಪ॥ ಕೊಳಲ ನುಡಿಸಿ ಪ್ರೇಮ ಸುಧೆಯು। ಮಳೆಯ ಸುರಿಸಿ, ಭವದ ತಾಪ। ಕಳೆದು, ತಿಳಿವಿನೆಳೆಬಳ್ಳಿಯ। ಬೆಳೆಯಿಸಿ, ಬೆಳಗೆನ್ನ ಮನದೊಳು ॥'

ಸಂಸಾರದಿಂದ ಉದ್ಧಾರವಾಗಲು ಪರಮಾತ್ಮನ ಕೃಪೆ ಬೇಕು. ಪರ ಮಾತ್ಮನಾದರೋ ಭಕ್ತಾಧೀನ. ಆದ್ದರಿಂದ ಭಕ್ತರ ಸಂಗ ಅತ್ಯಗತ್ಯ. ಅವರ ಸಂಗವಿದ್ದ ಮೇಲೆ ಭಯವೆಲ್ಲಿಯದು? 'ಕರಿಯ ಭಯವುಂಟೆ ಕೇಸರಿಯ ಇಕ್ಕೆಯೊಳಿದ್ದವಗೆ? ದುರಿತದ ಭಯವುಂಟೆ ಶ್ರೀಕೃಷ್ಣನ ದಾಸರ ಸಂಗವಿರಲು? ದುರಿತ ತಿಮಿರಕ್ಕೆ ತರಣಿ ತಾನಲ್ಲವೆ?' ಎಂದು ಕೇಳುತ್ತಾನೆ ವ್ಯಾಸರಾಯ. ಲೌಕಿಕ ಹಿತಗಳಿಗಾಗಿ ಮಾನವರನ್ನು ಆಶ್ರಯಿಸುವವರನ್ನು ಕಂಡರೆ ಆತನಿಗೆ ಕೆಂಡದಂತಹ ಕೋಪ. 'ಸುರ ಧೇನುವಿರಲಾಗಿ ಶ್ವಾನನ ಪಾಲ ಕರೆದು ಕುಡಿಯ ಬೇಡವೋ! ಕರಿ

ತುರುಗವು ಇರಲಾಗಿ ಕೆಡುವಂಥ ಖರ ಯೇರಲಿಬೇಡವೋ!' ಎಂದು ಅಂತ ಹರನ್ನು ಛೀಗುಟ್ಟುತ್ತಾನೆ. ಸರ್ವ ಇಷ್ಟಾರ್ಥಗಳು ನೆರವೇರಬೇಕಾದರೆ ಶ್ರೀಹರಿಯಲ್ಲಿ ಏಕನಿಷ್ಠೆ ಇರಬೇಕು. ಹಾಗೆ ಏಕನಿಷ್ಠೆಯಿಲ್ಲದಿದ್ದರೆ ಮನುಷ್ಯನು ಮಾಡುವ ವ್ರತನಿಯಮಾದಿಗಳೆಲ್ಲವೂ ವ್ಯರ್ಥ. 'ಅಮರೇಶ ಕೃಷ್ಣನಿ ಗರ್ಪಿತವಲ್ಲದ ಕರ್ಮ। ಅಸತಿಯ ವ್ರತನೇಮವೊ ॥ ರಮೆಯರಸಗೆ ಪ್ರೀತಿ ಯಿಲ್ಲದ ವಿತರಣೆ। ರಂಡೆ ಕೊರಳ ಸೂತ್ರವೊ ॥ ಕಮಲನಾಭನ ಹಾಡಿ ಪೊಗಳದ ಸಂಗೀತ। ಗಾರ್ದಭ ರೋದನವೊ ॥ ಮಮತೆಯಿಂದಲಿ ಕೇಶವನ್ನ ನಮಸ್ಕಾರ ಮಾಡದವ ಮೃಗವೊ' ಎಂಬ ಅತನ ಮಾತುಗಳಲ್ಲಿ ನಯ ನಾಜೋಕುಗಳು ಅಷ್ಟಾಗಿ ಕಾಣಬರದಿದ್ದರೂ ಕೇಳುವವರ ಮನಸ್ಸನ್ನು ಭೇದಿಸಬಲ್ಲ ಮಾರ್ಮಿಕತೆ ಇದೆ. ಹೃದಯದಿಂದ ನೇರವಾಗಿ ಬಂದ ಆತನ ಮಾತುಗಳು ಹೃದಯಕ್ಕೆ ನೇರವಾಗಿ ಪ್ರವೇಶಿಸುತ್ತವೆ.

ವ್ಯಾಸರಾಯನಿಂದ ವ್ಯಾಸಪಂಥ ದಾಸಪಂಥಗಳೆರಡಕ್ಕೂ ಅಪಾರ ವಾದ ಸೇವೆ ದೊರೆಯಿತು. ದಾಸಪಂಥವಂತೂ ಆತನಿಂದ ಸರ್ವತೋಮುಖ ವಾದ ಬೆಳವಣಿಗೆಯನ್ನು ಪಡೆಯಿತೆಂದು ಭಾಸವಾಗುತ್ತದೆ. ಆತನು ರಾಜ ಗುರುವಾಗಿ, ವಿದ್ಯಾನಗರದ ವಿದ್ಯಾಸಿಂಹಾಸನದ ಅಧಿಪತಿಯಾಗಿ. ತನ್ನ ಸ್ಥಾನಬಲ ಬುದ್ಧಿಬಲಗಳಿಂದ ಧರ್ಮಪ್ರಚಾರಕಾರ್ಯದಲ್ಲಿ ದಿಗ್ವಿಜಯಿ ಯಾದ. ಇದಕ್ಕೂ ಹೆಚ್ಚಾಗಿ ಆತನ ಶಿಷ್ಯರಾದ ವಾದಿರಾಜ, ವಿಜಯೀಂದ್ರ, ಪುರಂದರ, ಕನಕ, ವೈಕುಂಠ, ಮೊದಲಾದವರು—ಇವರಲ್ಲಿ ಒಬ್ಬೊಬ್ಬರೂ ದಾಸವಾಙ್ಮಯ ಜಗತ್ತಿನಲ್ಲಿ ಚಿರಸ್ಮರಣೀಯರು—ತಮ್ಮ ಕೀರ್ತನೆಗಳಿಂದ ಜನಸಮುದ್ರದಲ್ಲಿ ಭಕ್ತಿಯ ತೆರೆಗಳನ್ನೆಬ್ಬಿಸಿ, ಆಧ್ಯಾತ್ಮದ ರಸಪ್ರವಾಹ ವನ್ನು ನಾಡಿನ ಮೂಲೆ ಮೂಲೆಯಲ್ಲಿಯೂ ಹರಿಸಿದರು. ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣವು ವೀರಶೈವದ ವಾತಾವರಣದಿಂದ ತುಂಬಿ ತುಳು ಕುತ್ತಿದ್ದಂತೆ ವ್ಯಾಸರಾಯನ ಕಾಲದಲ್ಲಿ ವಿಜಯನಗರವು ಹರಿನಾಮ ಸಂಕೀರ್ತನೆಯಿಂದ ಮಾರ್ಮೊಳಗುತ್ತಿತ್ತೆಂದು ತೋರುತ್ತದೆ ಶೂನ್ಯಸಿಂಹ ನಾಸೀನನಾದ ಪ್ರಭುದೇವನ ನೇತೃತ್ವದಲ್ಲಿ ಬಸವಣ್ಣ, ಸಿದ್ಧರಾಮ, ಅಕ್ಕ ಮಹಾದೇವಿ ಮೊದಲಾದ ಶಿವಶರಣರು ತಮ್ಮ ವಚನ ಸುಧೆಯಿಂದ ಜನಮನ ಗಳನ್ನು ಮಂಗಳಮಯವಾಗಿ ಮಾಡಿದಂತೆ ವಿದ್ಯಾಸಿಂಹಾಸನಾಸೀನನಾಗಿದ್ದು

ವ್ಯಾಸಕೂಟ ದಾಸಕೂಟಗಳೆರಡಕ್ಕೂ ಹೃದಯಸ್ವರೂಪಿಯಾಗಿದ್ದ ವ್ಯಾಸರಾಯನ ನೇತೃತ್ವದಲ್ಲಿ ಪುರಂದರದಾಸ, ಕನಕದಾಸ, ವಾದಿರಾಜ, ವೈಕುಂಠದಾಸ ಮೊದಲಾದ ಹರಿದಾಸರು ತಮ್ಮ ಹರಿಸಂಕೀರ್ತನಾಮೃತದಿಂದ ಜನರ ಆಧ್ಯಾತ್ಮಿಕ ಜೀವನವನ್ನು ಸಚೇತನಗೊಳಿಸಿದರು. ಮಹಾನುಭಾವನಾದ ವ್ಯಾಸರಾಜನ ವೈರಾಗ್ಯವನ್ನು 'ಸಾಸಿರ ಜಿಹ್ವೆಗಳುಳ್ಳ ಶೇಷನೇ ಕೊಂಡಾಡಬೇಕು' ಎಂದು ಆತನ ಗುರುವಾದ ಶ್ರೀಪಾದರಾಜನು ಕೊಂಡಾಡಿದ್ದಾನೆ. ವ್ಯಾಸರಾಜನ ಶಿಷ್ಯನಾದ ಪುರಂದರ ದಾಸನು ತನ್ನ ಗುರುವನ್ನು 'ಶೇಷಾವೇಶ ಪ್ರಹ್ಲಾದನವತಾರ' ಎಂದು ಸ್ತುತಿಸಿ, ಗೌರವಿಸಿದ್ದಾನೆ.

ವ್ಯಾಸರಾಜನು ಹದಿನೈದನೆಯ ಶತಮಾನದ ಮಧ್ಯಭಾಗದಿಂದ ಹದಿನಾರನೆಯ ಶತಮಾನದ ಮಧ್ಯಭಾಗದವರೆಗೆ, ಸುಮಾರು ತೊಂಭತ್ತು ವರ್ಷಗಳಿಗಿಂತಲೂ ಹೆಚ್ಚು ಕಾಲ ಬಾಳಿ, ವೈದಿಕ ಲೌಕಿಕ ಸಾಮ್ರಾಜ್ಯಗಳೆರಡರಲ್ಲೂ ಅಸಾಧಾರಣವಾದ ಕೀರ್ತಿಯನ್ನು ಗಳಿಸಿ, ಸಾರ್ಥಕ ಜೀವಿಯಾದನು. ಆತನ ಕಾಲವು ಜಗತ್ತಿನ ಧಾರ್ಮಿಕ ಇತಿಹಾಸದಲ್ಲಿಯೇ ಚಿರಸ್ಮರಣೀಯವಾದ ಕಾಲ. ಚೈತನ್ಯ, ಕಬೀರ, ತುಳಸೀದಾಸರಂತಹ ಸಂತರು ಭರತಖಂಡದಲ್ಲಿ ಧರ್ಮಜಾಗ್ರತಿಯನ್ನು ಸಾಧಿಸಿದ ಕಾಲವದು. ಪಾಶ್ಚಾತ್ಯ ದೇಶದಲ್ಲಿ ಮಾರ್ಟಿನ್ ಲ್ಯೂಥರನು ಕ್ರೈಸ್ತಮತದಲ್ಲಿ ಸುಧಾರಣೆಯನ್ನು ಸಾಧಿಸಿದುದು ಈ ಕಾಲದಲ್ಲಿಯೇ. ಧರ್ಮಜಾಗ್ರತಿಯ ಒಂದು ಗಾಳಿಯೇನಾದರೂ ಆ ಕಾಲದಲ್ಲಿ ಜಗತ್ತಿನಲ್ಲೆಲ್ಲ ಬೀಸಿತೋ ಏನೋ!

**ವಾದಿರಾಜ :**

ದಕ್ಷಿಣ ಕನ್ನಡ ಜಿಲ್ಲೆಯ ಹೂವಿನಕೆರೆಯೆಂಬ ಹಳ್ಳಿಯಲ್ಲಿದ್ದ ದೇವರ ರಾಮಭಟ್ಟ, ಗೌರಿದೇವಿ ಎಂಬ ಸಾತ್ವಿಕ ದಂಪತಿಗಳ ಸತ್ಪುತ್ರ ಭೂವರ. ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಸೋದೆಮಠದ ಸ್ವಾಮಿಗಳಾಗಿದ್ದ ವಾಗೀಶತೀರ್ಥಯತಿಗಳು ಈ ಭೂವರನಿಗೆ ವಿದ್ಯಾ ಬುದ್ಧಿಗಳನ್ನು ಕಲಿಸಿ, ಬಾಲ್ಯದಲ್ಲಿಯೇ ಸನ್ಯಾಸಿ ದೀಕ್ಷೆಯನ್ನು ಕೊಟ್ಟು ವಾದಿರಾಜನೆಂಬ ಆಶ್ರಮ ನಾಮವನ್ನು ಕೊಟ್ಟರು. ಗುರುಗಳನಂತರ ಮಠಾಧಿಪತಿಯಾದ ವಾದಿರಾಜನು ವ್ಯಾಸರಾಯನಲ್ಲಿ ಪ್ರೌಢವಿದ್ಯಾಭ್ಯಾಸವನ್ನು ಮಾಡಿ ಅದ್ವಿತೀಯ ಪಂಡಿತನಾದನು. ಈತನ ಪಾಂಡಿತ್ಯವನ್ನೂ ವಾಗ್

ವೈಖರಿಯನ್ನೂ ಕಂಡು ಮೆಚ್ಚಿದ ಕೃಷ್ಣದೇವರಾಜನು ಈತನಿಗೆ 'ಪ್ರಸಂಗಾಭರಣತೀರ್ಥ 'ಎಂಬ ಬಿರುದನ್ನು ಕೊಟ್ಟನಂತೆ! ಈತನೂ ವ್ಯಾಸರಾಯನಂತೆ ವ್ಯಾಸಕೂಟ ದಾಸಕೂಟಗಳೆರಡಕ್ಕೂ ಅಪಾರವಾದ ಸೇವೆಯನ್ನು ಸಲ್ಲಿಸಿದ್ದಾನೆ. ಈತನು ಸಂಸ್ಕೃತದಲ್ಲಿ ಹಲವಾರು ಗ್ರಂಥಗಳನ್ನು ರಚಿಸಿರುವುದಲ್ಲದೆ ಕನ್ನಡದಲ್ಲಿ 'ವೈಕುಂಠವರ್ಣನೆ,' 'ಸ್ವಪ್ನಗದ್ಯ,' ಲಕ್ಷ್ಮಿಯ ಶೋಭಾನೆ,' ಭಾರತ ತಾತ್ಪರ್ಯನಿರ್ಣಯ ಟೀಕೆ' ಎಂಬ ಗ್ರಂಥಗಳನ್ನೂ ಅನೇಕ ಕೀರ್ತನೆ, ಸುಳಾದಿ, ಉಗಾಭೋಗಗಳನ್ನೂ ರಚಿಸಿದ್ದಾನೆ. ಈತನ ಕಾವ್ಯಗಳೇ ಆಗಲಿ, ಕೀರ್ತನೆಗಳೇ ಆಗಲಿ, ಅವುಗಳ ತಿರುಳು ಒಂದೆ—ದ್ವೈತಮತತತ್ವಗಳ ನಿರೂಪಣೆ. ಈತನ 'ವೈಕುಂಠ ವರ್ಣನೆ'ಗೆ 'ತತ್ವಸಾರದ ಸೊಬಗಿನ ಸೋನೆ' ಎಂಬ ಮತ್ತೊಂದು ಹೆಸರೂ ಉಂಟು. ಇದು ಸಾಂಗತ್ಯ, ಹಾಡುಗಳನ್ನು ಒಳಗೊಂಡ ನಾಲ್ಕು ಸಂಧಿಗಳ ಗ್ರಂಥ. 'ತತ್ವಸಾರದ ಸೊಬಗು ಧರೆಯೊಳು ವಿಸ್ತರಿಸಬೇಕೆಂದು ಮುನಿಕುಲ। ರತ್ನ ಶ್ರೀಗುರು ವಾದಿರಾಜನು ಶ್ರುತಿಪುರಾಣಗಳ॥ ಮೊತ್ತವನು ನೆರೆ ಮಥಿಸಿ ಮೇಲಣ। ಮುಕ್ತಿ ಸೃಷ್ಟಿಸ್ಥಿತಿಲಯಂಗಳ। ನರ್ಥಿಯಲಿ ಬಣ್ಣಿಸಿದ ಕಥೆಯನು ಕೇಳಿ ಸಜ್ಜನರು' ಎಂದು ಗ್ರಂಥಾರಂಭದಲ್ಲಿ ಬರುವ ಒಂದು ಷಟ್ಪದಿಯಿಂದ ಈ ಗ್ರಂಥದ ತಿರುಳನ್ನು ನಾವು ಅರ್ಥಮಾಡಿಕೊಳ್ಳಬಹುದು. 'ಸ್ವಪ್ನಗದ್ಯ' ಎಂಬುದು ಗದ್ಯವೇನೂ ಅಲ್ಲ; ೪೫ ಭಾಮಿನೀ ಷಟ್ಪದಿಗಳನ್ನು ಒಳಗೊಂಡ ಒಂದು ಪದ್ಯಕಾವ್ಯ. ಭಗವಂತ ವಾದಿರಾಜನ ಸ್ವಪ್ನದಲ್ಲಿ ಪ್ರತ್ಯಕ್ಷನಾಗಿ ಈ ಪದ್ಯಗಳನ್ನು ಹಾಡಿದುದರಿಂದ ಇದಕ್ಕೆ ಆ ಹೆಸರಂತೆ! 'ಲಕ್ಷ್ಮಿಯ ಶೋಭಾನೆ' ೧೧೨ ಪದಗಳನ್ನು ಒಳಗೊಂಡ ಒಂದು ಪುಟ್ಟ ಗ್ರಂಥ. ಸ್ವಾದಿಯ ಅರಸನಾಗಿದ್ದ ಅರಸಪ್ಪನಾಯಕನ ಅಳಿಯ ಜ್ವರಪೀಡಿತನಾಗಿ ಸತ್ತುಹೋಗಿರಲು, ರಾಜನು ತನ್ನ ಮಗಳ ಮಾಂಗಲ್ಯವನ್ನು ಉಳಿಸಬೇಕೆಂದು ಬೇಡಿಕೊಂಡಾಗ ವಾದಿರಾಜನು ಈ ಶೋಭಾನೆಯನ್ನು ಹಾಡಿ ಸತ್ತವನನ್ನ ಬದುಕಿಸಿದನಂತೆ! ಈ ಪದಗಳಲ್ಲಿ ಹಲವು ಕಡೆ 'ಸಲಹಲಿ (ರಕ್ಷಿಸಲಿ) ನಮ್ಮ ವಧೂವರರ' ಎಂಬ ಹಾರೈಕೆ ಕಂಡುಬರುತ್ತದೆ. ಲಕ್ಷ್ಮೀದೇವಿಯು ಸಮುದ್ರಮಥನ ಕಾಲದಲ್ಲಿ ಜನಿಸಿ, ನಾರಾಯಣನನ್ನು ವರಿಸಿದ ಕಥೆ ಇದರಲ್ಲಿ ಕಂಡುಬರುತ್ತದೆ. ಮಧ್ವರಾಯನು ಸಂಸ್ಕೃತದಲ್ಲಿ ಬರೆದ 'ಮಹಾಭಾರತ ತಾತ್ಪರ್ಯ

ನಿರ್ಣಯ 'ಕ್ಕೆ ಕನ್ನಡ ವಚನರೂಪದಲ್ಲಿ ಬರೆದ ಟೀಕೆಯೇ ' ಭಾರತ ತಾತ್ಪರ್ಯ ನಿರ್ಣಯ ಟೀಕೆ.'

ವಾದಿರಾಜನು ತನ್ನ ಉಪಾಸ್ಯ ದೈವವಾದ ' ಹಯವದನ 'ನ ಅಂಕಿತವಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿದ್ದಾನೆ. ಈತನು ತುಳು ಭಾಷೆಯಲ್ಲಿಯೂ ಕೀರ್ತನೆಗಳನ್ನು ರಚಿಸಿ ಅಂತ್ಯಜರ ಉದ್ಧಾರಕ್ಕೆ ಹೆದ್ದಾರಿಯನ್ನು ಹಾಕಿಕೊಟ್ಟನಂತೆ! ಕನ್ನಡ ಕೀರ್ತನೆಗಳಲ್ಲಿ ಅತ್ಯಂತ ಪ್ರಸಿದ್ಧವಾದ್ದು ಐಶ್ವರ್ಯದ ಗುಣವರ್ಣನೆ-' ಹಣವೆ ನಿನ್ನಯ ಗುಣವೆನಿತು ಬಣ್ಣಿಸಲಿ ! ಹಣವಿಲ್ಲದವನೊಬ್ಬ ಹೆಣಕಿಂತ ಕಡೆಯಯ್ಯ ॥ ಪ ॥ ಬೆಲೆಯಾಗದನೆಲ್ಲ ಬೆಲೆಯ ಮಾಡಿಸುವಿ । ಎಲ್ಲ ವಸ್ತುಗಳನ್ನು ಇದ್ದಲ್ಲಿ ತರಿಸುವಿ । ಕುಲಗೆಟ್ಟವರ ಸತ್ಕುಲಕೆ ಸೇರಿಸುವಿ । ಹೊಲೆಯನಾದರು ತಂದು ಒಳಗೆ ಸೇರಿಸುವಿ ॥ ೧ ॥ ಅಂಗನೆಯರ ಸಂಗತಿಯ ಮಾಡಿಸುವಿ । ಶೃಂಗಾರಾಭರಣಂಗಳ ಬೇಗ ತರಿಸುವೆ । ಮಂಗನೆಂದರು ಅನಂಗನೆಂದೆನಿಸುವಿ । ಕಂಗಳಿಲ್ಲದವನಿಗೆ ಮಗಳ ಕೊಡಿಸುವಿ ॥ ೨ ॥ ಚರಣಕ್ಕೆ ಬಂದಂಥ ದುರಿತ ಬಿಡಿಸುವಿ । ಸರ್ವರಿಗೆ ಶ್ರೇಷ್ಠನನ ಮಾಡಿಸುವಿ । ಅರಿಯದ ಶುಂಠನ ಅರಿತವನೆನಿಸುವಿ । ಸಿರಿಹಯವದನನ ಸ್ಮರಣೆ ಮರಸುವಿ ॥ ೩ ॥ ಇಲ್ಲಿನ ಮಾತುಗಳು ಸರಳವಾಗಿರುವಷ್ಟೆ ಮೊನಚಾಗಿ ಪ್ರಭಾವಯುತವಾಗಿವೆ. ಈ ಕೀರ್ತನವೊಂದು ಸಾಕು, ವಾದಿರಾಜನ ತರ್ಕಬದ್ಧವಾದ ಕವಿತಾಶಕ್ತಿಗೆ. ಜನರಿಗೆ ತಾಳ್ಮೆಯನ್ನು ಬೋಧಿಸುತ್ತಾ ಆತನು ' ತಾಳುವಿಕೆಗಿಂತ ತಪವು ಇಲ್ಲ ' ಎಂದು ಸೂತ್ರರೂಪವಾಗಿ ಹೇಳಿ, ಆ ಸೂತ್ರಕ್ಕೆ ಬರೆದ ಭಾಷ್ಯದಂತೆ ' ನಕ್ಕು ನುಡಿವರ ಮುಂದೆ ಮುಕ್ಕುರಿಸಿದರು ತಾಳು, ಅಕ್ಕಸವ ಮಾಡುವರ ಅಕ್ಕರದಿ ತಾಳು ' ಎಂದು ಹೇಳುತ್ತಾನೆ. ಹರಿನಾಮಾಮೃತದ ಸವಿಯನ್ನು ಹರಿದಾಸರು ಮಾತ್ರ ಬಲ್ಲರಂತೆ! ' ಕೇಸರಿ ಕೆನೆಹಾಲು ದೂಷಿಸುವಂತಿದೆ ' ಯಂತೆ ಆ ಹರಿನಾಮ ! ವಾದಿರಾಜನು ಮೇಧಾವಿಯಾದ ತಾರ್ಕಿಕ. ವಾದಿಗಳನ್ನು ಗೆಲ್ಲುವುದರಲ್ಲಿ ಎತ್ತಿದ ಕೈಯಾಗಿ ' ವಾದಿರಾಜ ' ನೆಂಬ ತನ್ನ ಹೆಸರನ್ನು ಸಾರ್ಥಕಗೊಳಿಸಿಕೊಂಡವನು ಆತ. ಆತನ ಕೀರ್ತನೆಗಳಲ್ಲಿಯೂ ಆ ಗುಣ ಕಂಡು ಬಂದಿದೆ. ಆತನದು ಶಾಸ್ತ್ರ ಸಾಹಿತ್ಯ.

ವಾದಿರಾಜನು ಸಾಹಿತ್ಯ ಜಗತ್ತಿಗಿಂತಲೂ ಧಾರ್ಮಿಕ ಜಗತ್ತಿನಲ್ಲಿ

ಹೆಚ್ಚು ಉಜ್ವಲವಾಗಿ ಬೆಳಗಿದವನು. ಉಡುಪಿಯಲ್ಲಿ ಎರಡು ತಿಂಗಳಿಗೊಮ್ಮೆ ನಡೆಯುತ್ತಿದ್ದ ಪರ್ಯಾಯೋತ್ಸವವನ್ನು ಈಗ ನಡೆಯುತ್ತಿರುವಂತೆ ಎರಡು ವರ್ಷಗಳಿಗೊಮ್ಮೆ ನಡೆಯುವಂತೆ ಏರ್ಪಡಿಸಿದವನು ಈತನೇ. ಈಗ ಸುಪ್ರಸಿದ್ಧವಾಗಿರುವ ಧರ್ಮಸ್ಥಳದ ಮಂಜುನಾಥ ಸ್ವಾಮಿಯನ್ನು ಕದಿರೆಯಿಂದ ತಂದು ಧರ್ಮಸ್ಥಳದಲ್ಲಿ ಸ್ಥಾಪಿಸಿದ ಕೀರ್ತಿ ಈತನಿಗೇ ಸಲ್ಲುತ್ತದೆ. ಈತನು ಸ್ವಾದಿಯ ಅರಸನಿಗೆ ಗುರುವಾಗಿದ್ದು ಆತನಿಂದ ಸ್ವಾದಿಯ ಮಠಕ್ಕೆ ಬೇಕಾದಷ್ಟು ಸೇವೆ ಸಲ್ಲುವಂತೆ ಮಾಡಿದನು. ಸುಮಾರು ೧೨೦ ವರ್ಷಗಳಷ್ಟು ದೀರ್ಘಕಾಲ ಬಾಳಿ ಐದು ಪರ್ಯಾಯೋತ್ಸವಗಳನ್ನು ತಾನು ನಡೆಸಿದುದಲ್ಲದೆ, ತನ್ನ ಸರದಿಯಾದ ಮೇಲೆ ಮತ್ತೊಮ್ಮೆ ಸರದಿ ಬರುವವರೆಗೂ ೧೪ ವರ್ಷಗಳ ಕಾಲ ದೇಶಸಂಚಾರ ಮಾಡುತ್ತಾ ದ್ವೈತಮತವನ್ನು ಅತಿಶಯವಾಗಿ ಪ್ರಚಾರಮಾಡಿದನು. ಹಲವು ಪವಾಡಗಳನ್ನು ಮೆರೆದ ಈತನನ್ನು ಮುಂದಿನ ವಾಯುದೇವನೆಂದು ದ್ವೈತಿಗಳು ನಂಬುತ್ತಾರೆ.

**ಪುರಂದರ ದಾಸ :** (ಕ್ರಿ. ಶ. ೧೪೮೪–೧೫೬೪)

ವಚನಕಾರರಲ್ಲಿ ಬಸವಣ್ಣನು ಹೇಗೋ, ಹಾಗೆ ಹರಿದಾಸರಲ್ಲಿ ಪುರಂದರದಾಸನು ಅಗ್ರಗಣ್ಯ. ಶೂನ್ಯಸಿಂಹಾಸನಕ್ಕೆ ಅಧಿಕಾರಿಯಾಗಿ ಸರ್ವಜ್ಞನೆಂತಿದ್ದ ಪ್ರಭುದೇವನು ‘ ಸಕಲ ಭ್ರಮೆಯನೆ ಜರಿದು ಗುಹೇಶ್ವರ ಲಿಂಗದಲ್ಲಿ ಬಸವಣ್ಣನೊಬ್ಬನೇ ಅಚ್ಚಪ್ರಸಾದಿ’ ಎಂದು ಬಸವಣ್ಣನನ್ನು ಹೊಗಳಿದಂತೆ, ವಿದ್ಯಾ ಸಿಂಹಾಸನದಲ್ಲಿ ಮಂಡಿಸಿ, ಪರಮಪೂಜ್ಯನೆಂದು ಪರಿಗಣಿತನಾಗಿದ್ದ ವ್ಯಾಸರಾಯನು ‘ ದಾಸರೆಂದರೆ ಪುರಂದರ ದಾಸರಯ್ಯ’ ಎಂದು ಪುರಂದರ ದಾಸನನ್ನು ಬಾಯ್ತುಂಬ ಹೊಗಳಿದ್ದಾನೆ. ಬಸವಣ್ಣನು ವೃಷಭ ಮುಖನ ಅವತಾರವಾದರೆ, ಪುರಂದರದಾಸನು ನಾರದರ ಅವತಾರ. ಧರ್ಮ ಬೋಧೆಯಲ್ಲಿಯೂ ಅವರಿಬ್ಬರೂ ಅದ್ವಿತೀಯರೇ. ವಿಷಯ ನಿರೂಪಣೆಯಲ್ಲಿ, ಜೀವನಾನುಭವದಲ್ಲಿ, ಭಕ್ತಿಯ ನಿರ್ಭರತೆಯಲ್ಲಿ, ಲೋಕಾನುಕಂಪದಲ್ಲಿ ಇವರಿಬ್ಬರೂ ಸಮಾನಧರ್ಮಿಗಳಾಗಿರುವುದಷ್ಟೇ ಅಲ್ಲ; ಅವರಿಬ್ಬರ ಜೀವನ ಕಥೆಯೂ ಅಸಾಧಾರಣವಾದ ಘಟನೆಗಳನ್ನು ಒಳಗೊಂಡಿರುವುದು ಕಂಡು ಬರುತ್ತದೆ. ಅತ್ಯಂತ ಶ್ರೇಷ್ಠವೆನಿಸಿದ್ದ ಬ್ರಾಹ್ಮಣ ಮತದಲ್ಲಿ ಹುಟ್ಟಿದ ಬಸವಣ್ಣ ತನ್ನ ಜೀವನವನ್ನು ಕೀಳುಮತದವರೆನಿಸಿಕೊಂಡಿದ್ದವರ ಉದ್ಧಾರ

ಕ್ಕಾಗಿ ಮೀಸಲು ಮಾಡಿದ; ಪುರಂದರದಾಸ ಆಗರ್ಭ ಶ್ರೀಮಂತನಾಗಿ ಹುಟ್ಟಿದವನು ತನ್ನ ಶ್ರೀಮಂತಿಕೆಯನ್ನು ಕಾಲಿನಿಂದೊದೆದು, ಭಿಕ್ಷುಕ ವೃತ್ತಿಯನ್ನು ಅವಲಂಬಿಸಿ, ದೀನದಲಿತರ ಸೇವೆಯಲ್ಲಿ ತನ್ನ ಜೀವಿತವನ್ನು ಸಾರ್ಥಕಪಡಿಸಿಕೊಂಡ. ಇಬ್ಬರೂ ಪವಾಡಪುರುಷರು, ಮಹಾನುಭಾವರು, ಜನಮನದಲ್ಲಿ ದೇವತ್ವವನ್ನು ಪಡೆದವರು.

ನಾರದ ಮಹರ್ಷಿ ತಾನು ರಚಿಸಿದ ಭಕ್ತಿಸೂತ್ರಗಳನ್ನು ಆಚರಣೆಗೆ ತರುವುದಕ್ಕಾಗಿ ಪುರಂದರಗಡದ ವರದಪ್ಪನಾಯಕನೆಂಬ ಕೋಟೀಶ್ವರನ ಹೊಟ್ಟೆಯಲ್ಲಿ ಶ್ರೀನಿವಾಸನೆಂಬ ಹೆಸರಿನಿಂದ ಜನಿಸಿದನಂತೆ! ಮಾನವನಾಗಿ ಹುಟ್ಟಿದಮೇಲೆ ಮಾನವಸಹಜವಾಗಿಯೇ ವ್ಯವಹರಿಸಬೇಕಷ್ಟೆ? ಲೌಕಿಕ ವೈದಿಕ ವಿದ್ಯೆಗಳಲ್ಲಿಯೂ ಸಂಗೀತದಲ್ಲಿಯೂ ಸಾಕಷ್ಟು ಪರಿಶ್ರಮಪಡೆದ ಶ್ರೀನಿವಾಸ ಸರಸ್ವತಿಯೆಂಬ ಸತ್ಕುಲಪ್ರಸೂತೆಯನ್ನು ವಿವಾಹವಾಗಿ, ತಂದೆಯನಂತರ ಆತನ ಅಪಾರವಾದ ಐಶ್ವರ್ಯಕ್ಕೆ ಅಧಿಪತಿಯಾದ. ರತ್ನ ಪಡಿವ್ಯಾಪಾರದಲ್ಲಿ ತೊಡಗಿದ್ದ ಶ್ರೀನಿವಾಸನಾಯಕ ಹಲವು ರಾಜರ ಆಸ್ಥಾನ ದಲ್ಲಿ ಪ್ರಸಿದ್ಧವರ್ತಕನೆಂದು ಹೆಸರು ಗಳಿಸಿದ. ಐಶ್ವರ್ಯ ಹೆಚ್ಚಿದಂತೆ ಅವನ ಧನದಾಶೆಯೂ ಬೆಳೆಯಿತು. ಅವನು ಪರಮಲೋಭಿಯಾದ. ಈ ಲೋಭಿ ಪರಮ ತ್ಯಾಗಿಯಾಗುವಂತಹ ಸನ್ನಿವೇಶ ಬಂತು. ಒಂದು ದಿನ ಒಬ್ಬ ಬಡ ಬ್ರಾಹ್ಮಣ, ತನ್ನ ಮಗನ ಉಪನಯನವೆಂದು ಹೇಳಿಕೊಂಡು ಇವನಲ್ಲಿ ಯಾಚನೆಗೆ ಬಂದ. ಆರು ತಿಂಗಳಕಾಲ ಅಲೆಸಿದರೂ ಈ ಜಿಗಣೆಯಂತಹ ಬ್ರಾಹ್ಮಣ ಅವನಿಂದ ತೊಲಗದೆ, ಮತ್ತೆ ಮತ್ತೆ ಬಂದು ಬೇಡಿದ. ಬೇಸತ್ತ ನಾಯಕ ಕೊನೆಗೊಂದು ದಿನ ಅವನಿಗೆ ಒಂದು ಸವಕಲು ನಾಣ್ಯವನ್ನು ದಾನವಾಗಿ ಕೊಟ್ಟ. ಅದನ್ನು ತೆಗೆದುಕೊಂಡ ಬ್ರಾಹ್ಮಣ ನೇರವಾಗಿ ನಾಯಕನ ಹೆಂಡತಿಯ ಹತ್ತಿರಕ್ಕೆ ಹೋಗಿ, ಹಣವನ್ನು ಯಾಚಿಸಿದ. ಪಾಪ, ಸರಸ್ವತೀ ಬಾಯಿ ಸರಸ್ವತಿಯಾಗಿದ್ದಳೇ ಹೊರತು ಲಕ್ಷ್ಮಿಯಾಗಿರಲಿಲ್ಲ. ಅಡಿಗೆ ಮಾಡುವುದರಲ್ಲಿ ಕೂಡ, ಏನು ಎಷ್ಟು ಎಂಬುದರಲ್ಲಿ, ಆಕೆ ಅಸ್ವತಂತ್ರಳು. ಆಕೆ ಏನು ಕೊಟ್ಟಾಳು? ಆದರೆ ಬಂದ ಬ್ರಾಹ್ಮಣ ಸಾಮಾನ್ಯನಲ್ಲ. ಆಕೆಯ ಮನಕರಗುವಂತೆ ತನ್ನ ದುಸ್ಥಿತಿಯನ್ನು ತೋಡಿಕೊಂಡ, ಧರ್ಮ ಬೋಧೆ ಮಾಡಿದ; ತೌರುಮನೆಯವರು ಕೊಟ್ಟಿರುವ ಮೂಗುತಿಯನ್ನು

ಕೊಟ್ಟರೆ ಪಾಪವಿಲ್ಲ, ತನ್ನ ಸಮಯಕ್ಕೆ ಒದಗಿದ ಪುಣ್ಯ ಬರುತ್ತದೆ— ಎಂದ. ಮುಗ್ಧಳಾದ ಸರಸ್ವತಿ ಆತನಿಗೆ ಮೂಗುತಿಯನ್ನು ಎತ್ತಿಕೊಟ್ಟು 'ಕೃಷ್ಣಾರ್ಪಣ' ಎಂದಳು. ಆ ಕಪಟಬ್ರಾಹ್ಮಣ ಆ ಮೂಗುತಿಯನ್ನು ಎತ್ತಿಕೊಂಡು ನೇರವಾಗಿ ಶ್ರೀನಿವಾಸನಾಯಕನ ಬಳಿಗೇ ಬಂದು, ಅದನ್ನು ಕೊಳ್ಳುವಂತೆ ಕೇಳಿದ. ನಾಯಕನಿಗೆ ಆ ಮೂಗುತಿಯ ಗುರುತು ಹತ್ತಿತು. ಅದನ್ನು ಪೆಟ್ಟಿಗೆಯಲ್ಲಿ ಮೊಹರುಮಾಡಿಟ್ಟು ಮನೆಗೆ ಓಡಿದ. ಹೆಂಡತಿಯ ಬರಿ ಮೂಗನ್ನು ಕಂಡು 'ಮೂಗುತಿ ಎಲ್ಲಿ?' ಎಂದು ಅಬ್ಬರಿಸಿದ. ಹೆದರಿದ ಹೆಣ್ಣು 'ಒಳಗಿದೆ'ಎಂದಳು. ಅದನ್ನು ತಕ್ಷಣವೇ ತರುವಂತೆ ಆಜ್ಞಾಪಿಸಿದ. ಆಕೆ ಒಳಗೆ ಹೋಗಿ, ಈ ಕುತ್ತದಿಂದ ಪಾರಾಗುವುದಕ್ಕಾಗಿ ವಿಷಪ್ರಾಶನ ಮಾಡಲು ಸಿದ್ಧಳಾದಳು. ವಿಷದ ಬಟ್ಟಲಲ್ಲಿ ಮೂಗುತಿ ಕಾಣಿಸಿತು. ಆಕೆ ಭಗವಂತನನ್ನು ಕೃತಜ್ಞತೆಯಿಂದ ಸ್ಮರಿಸುತ್ತಾ ಅದನ್ನು ಗಂಡನಿಗೆ ತಂದಿತ್ತಳು. ನಾಯಕನಿಗೆ ಅದನ್ನು ಕಂಡು ಗರಬಡಿದಂತಾಯ್ತು. ಮತ್ತೆ ಅಂಗಡಿಗೆ ಓಡಿ ಹೋಗಿ, ಪೆಟ್ಟಿಗೆಯ ಮುದ್ರೆಯನ್ನು ಒಡೆದು ನೋಡಿದ. ಅಲ್ಲಿ ಮೂಗುತಿ ಇರಲಿಲ್ಲ! ಅದನ್ನು ತಂದಿತ್ತ ಬ್ರಾಹ್ಮಣ ಎಲ್ಲಿ? ಅವನು ಎಲ್ಲೋ ವಿಠಲನ ಗುಡಿಯಕಡೆ ಹೋದವನು ಮಂಗಮಾಯವಾಗಿದ್ದ. ಶ್ರೀನಿವಾಸನಾಯಕ ಮುಂದೋರದೆ ಮತ್ತೆ ಮನೆಗೆ ಹೋಗಿ, ಹೆಂಡತಿಯೊಡನೆ ನಡೆದ ಸಂಗತಿಯನ್ನು ಸ್ಪಷ್ಟಪಡಿಸುವಂತೆ ಕೇಳಿಕೊಂಡ. ಆಕೆ ಗಂಡನ ಕಳವಳವನ್ನು ಕಂಡು, ನಡೆದುದನ್ನು ನಡೆದಂತೆ ತಿಳಿಸಿದಳು. ಆಲೋಚನಾಮಗ್ನನಾದ ನಾಯಕನಿಗೆ ನಡೆದುದೆಲ್ಲವೂ ಭಗವಂತನ ಲೀಲೆ ಎನಿಸಿತು; ಸಾಕ್ಷಾತ್ ವಿಠಲನೇ ಬ್ರಾಹ್ಮಣರೂಪಿನಿಂದ ಕಾಣಿಸಿಕೊಂಡು ತನಗೆ ಜ್ಞಾನೋದಯ ವಿತ್ತನೆಂದುಕೊಂಡ. ಆತನಿಗೆ ವೈರಾಗ್ಯ ಹುಟ್ಟಿತು. ತನ್ನ ಐಶ್ವರ್ಯವನ್ನೆಲ್ಲಾ ತುಳಸೀದಳವಿಟ್ಟು ದಾನಮಾಡಿ, ತಾಳ ತಂಬೂರಿಗಳನ್ನು ಕೈಲಿ ಹಿಡಿದು, ಹೆಂಡತಿ ಮಕ್ಕಳೊಡನೆ ಹಂಪೆಗೆ ಹೊರಟ. ಆತನ ಬಾಯಿಂದ ಕವಿತೆ ಉಕ್ಕಿ ಬಂತು—

ಆದದ್ದೆಲ್ಲಾ ಒಳಿತೆ ಆಯಿತು। ನಾಥವನಂಘ್ರಿಯ ಸೇವಿಸುವದಕೆ ಸಾಧನ ಸಂಪತ್ತಾಯಿತು ॥ ಪ ॥ ದಂಡಿಗೆ ಬೆತ್ತ ಹಿಡಿಯುವುದಕ್ಕೆ। ಮುಂಡೆ ಬಾಗಿ ನಾಚುತಲಿದ್ದೆ। ಹೆಂಡತಿ ಸಂತತಿ ಸಾವಿರವಾಗಲಿ। ದಂಡಿಗೆ ಬೆತ್ತ

ಹಿಡಿಸಿದಳಯ್ಯ ॥ ೧ ॥ ಗೋಪಾಳ ಬುಟ್ಟಿ ಹಿಡಿಯುವುದಕ್ಕೆ । ಭೂಪನೆಂದು ನಾಚುತಲಿದ್ದೆ । ಆ ಪತಿವ್ರತೆ ವ್ರತ ಅತಿ ಘನವಾಗಲಿ । ಗೋಪಾಳ ಬುಟ್ಟಿ ಹಿಡಿಸಿದಳಯ್ಯ ॥ ೨ ॥ ತುಲಸೀಮಾಲೆ ಹಾಕುವುದಕ್ಕೆ। ಅಲಸನಾಗಿ ತಿರುಗುತಲಿದ್ದೆ । ಜಲಜನಯನ ಶ್ರೀ ಪುರಂದರವಿಠಲ । ತುಲಸೀಮಾಲೆ ಹಾಕಿಸಿದ ॥ ೩ ॥

ಹೀಗೆಂದು ಹಾಡುತ್ತಾ ಹೊರಟ ಆತನಿಗೆ 'ಕೃಷ್ಣಮೂರ್ತಿ ಕಣ್ಣ ಮುಂದೆ ನಿಂತಿರ್ದಂತಿದೆ' ಎನ್ನಿಸುತ್ತಿತ್ತೇನೋ! ಸಾತ್ವಿಕ ಭಾವವನ್ನು ಮೆಲಕುಹಾಕುತ್ತಾ ಆತನು ಹಂಪೆಯಲ್ಲಿದ್ದ ವ್ಯಾಸರಾಯನಿಂದ ಹರಿದಾಸ ದೀಕ್ಷೆಯನ್ನು ವಹಿಸಿದ. ಅಂದಿನಿಂದ ಆತನು ಅಂದಂದಿನ ಆಹಾರವನ್ನು ಭಿಕ್ಷೆಬೇಡಿ ಸಂಪಾದಿಸುತ್ತಾ ಸಂಸಾರವನ್ನು ನಡೆಸತೊಡಗಿದನು. 'ಸಾಲ ಮಾಡಬೇಡ, ಸಾಲದೆನಬೇಡ, ನಾಳೆಗಿಡಬೇಡ' ಎಂಬುದು ಆತನ ಜೀವನಾದರ್ಶವಾಯಿತು. ಗುರುವು ನೀಡಿದ 'ಪುರಂದರದಾಸ' ಎಂಬ ಹೆಸರಿನಿಂದ ಆತನು ಪ್ರಸಿದ್ಧನಾದನು. ಆತನ ಕೀರ್ತನೆಗಳಿಗೂ ಅದೇ ಅಂಕಿತವಾಯಿತು. ವಿಜಯನಗರದ ಅರಸನಾದ ಕೃಷ್ಣರಾಯನು ಆತನನ್ನು ಅರಮನೆಗೆ ಕರೆದೊಯ್ದು ಗೌರವಿಸಿದನು. ನಿಂತಲ್ಲಿ ಕೂತಲ್ಲಿ ಹರಿಕೀರ್ತನೆಗಳನ್ನು ಸ್ಫೂರ್ತಿಯಿಂದ ಹಾಡುತ್ತಿದ್ದ ಪುರಂದರದಾಸನು ರಾಜನನ್ನು ಕುರಿತು 'ನಮ್ಮ ಭಾಗ್ಯ ದೊಡ್ಡದೋ । ನಿಮ್ಮ ಭಾಗ್ಯ ದೊಡ್ಡದೊ । ಸುಮ್ಮನೆ ಇಬ್ಬರು ಕೂಡಿ । ಸಾಟಿಮಾಡಿ ನೋಡುವ' ಎಂದು ಹಾಡಿ, ರಾಜನ ಭೋಗಜೀವನಕ್ಕಿಂತಲೂ ತಾನು ಸ್ವೀಕರಿಸಿದ್ದ ತ್ಯಾಗಜೀವನವೇ ಶ್ರೇಷ್ಠವಾದುದೆಂದು ಪ್ರತಿಪಾದಿಸಿದನಂತೆ! ಈತನ ಕೀರ್ತಿಯನ್ನು ಕಂಡು ಕರುಬಿದ ಕೆಲವು ಪಂಡಿತರು ಆತನ ಕೀರ್ತನೆಗಳನ್ನು ತೆಗಳಿ, ವ್ಯಾಸಕೂಟದ ಮುಂದೆ ದಾಸಕೂಟ ಕೀಳು ಎಂಬ ರೀತಿಯಲ್ಲಿ ವರ್ತನೆ ಮಾಡಿದಂತೆ ಕಂಡುಬರುತ್ತದೆ. ಆದರೆ ವ್ಯಾಸರಾಯರು ಈ ವರ್ತನೆಯನ್ನು ಖಂಡಿಸಿ, ಪುರಂದರದಾಸನ ಕೀರ್ತನೆಗಳನ್ನು 'ಪುರಂದರೋಪನಿಷತ್' ಎಂದು ಕರೆದು ಗೌರವಿಸಿದರು. ಪುರಂದರದಾಸನು ಹಲವು ಪವಾಡಗಳನ್ನು ನಡಸಿದಂತೆಯೂ ಹರಿದಾಸ ಕೀರ್ತನೆಗಳಿಂದ ಕಂಡುಬರುತ್ತದೆ. ಅವುಗಳಲ್ಲಿ ಒಂದು ವಿಠಲನ ಗುಡಿಯಲ್ಲಿ ದೇವರ ಮುಂದಿನ ಪರದೆ ಬೆಂಕಿ ಹೊತ್ತಿಕೊಂಡಾಗ, ಪುರಂದರ

ದಾಸನು ಕುಳಿತಲ್ಲಿನಿಂದಲೇ ಕೈಗಳನ್ನು ಹೊಸಕಿ. ಅದನ್ನು ಆರಿಸಿದನೆಂಬುದು. ಇದು ಹರಿಹರಕವಿಯ ಇದೇ ಬಗೆಯ ಪವಾಡವನ್ನು ಜ್ಞಾಪಕಕ್ಕೆ ತರುತ್ತದೆ. ಪುರಂದರದಾಸನು ಭರತಖಂಡವನ್ನೆಲ್ಲಾ ತಿರುಗಿ, ಎಲ್ಲ ತೀರ್ಥಕ್ಷೇತ್ರಗಳನ್ನೂ ಸಂದರ್ಶಿಸಿದನೆಂದು ತೋರುತ್ತದೆ. ಆತನ ಕೀರ್ತನೆಗಳಲ್ಲಿ ಈ ಕ್ಷೇತ್ರಗಳ ಮಹಿಮೆ ವರ್ಣಿತವಾಗಿದೆ. ಹೀಗೆ ಸಂಚರಿಸುವಾಗ ಬಗೆಬಗೆಯ ಜನರೊಡನೆ ಬೆರೆತು, ಆತನ ಲೋಕಾನುಭವವೂ, ಜೀವನವೈವಿಧ್ಯದ ಪರಿಜ್ಞಾನವೂ ಮಾಗಿ ಹಣ್ಣಾಗಿರಬೇಕು. ಆತನ ನೂರಾರು ಕೀರ್ತನೆಗಳಲ್ಲಿ ಇದನ್ನು ನಾವು ಸ್ಪಷ್ಟವಾಗಿ ಕಾಣುತ್ತೇವೆ. ಉಳಿದೆಲ್ಲ ದಾಸರಿಗಿಂತಲೂ ಈತನು ಆಳವಾಗಿ, ವಿವರವಾಗಿ ಜನಜೀವನವನ್ನು ಕಂಡಿರುವುದು ಮಾತ್ರವೇ ಅಲ್ಲ, ಉಳಿದೆಲ್ಲರಿಗಿಂತ ಹೆಚ್ಚು ಪ್ರಭಾವಯುತವಾಗಿ ಅದನ್ನು ನಿರೂಪಿಸುತ್ತಾನೆ; ಸಮಾಜದ ಲೋಪದೋಷಗಳನ್ನು ಗುರುತಿಸುವಂತೆ ಅದರ ಉದ್ಧಾರದ ಮಾರ್ಗವನ್ನೂ ಸೂಚಿಸುತ್ತಾನೆ. ಕನಕದಾಸನೊಬ್ಬನನ್ನು ಬಿಟ್ಟರೆ ಈತನಷ್ಟು ಭಾವಪೂರ್ಣವಾಗಿ, ಭಕ್ತಿಭರಿತವಾಗಿ, ರಸಸ್ಯಂದಿಯಾಗಿ ಕೀರ್ತನೆಗಳನ್ನು ಕಟ್ಟಿ ಹಾಡಿರುವ ಮತ್ತೊಬ್ಬ ಹರಿದಾಸನಿಲ್ಲ—'ದಾಸರೆಂದರೆ ಪುರಂದರ ದಾಸರೈಯ' ಎಂದು ವ್ಯಾಸರಾಯನು ಈತನನ್ನು ಹೊಗಳಿರುವುದು ಸಾರ್ಥಕವಾಗಿದೆ.

ಹರಿದಾಸರೆಲ್ಲರೂ ಹರಿಸರ್ವೋತ್ತಮತ್ವವನ್ನು ಸ್ಥಾಪಿಸಹೊರಟಿರುವಂತೆ ಪುರಂದರ ದಾಸನೂ ಹೊರಟಿದ್ದಾನೆ. ಈತನು ಹೇಳುವ ಧಾಟಿ ಮಾತ್ರ ಅದ್ವಿತೀಯ.

'ಹೊಡಿ ನಗಾರಿ ಮೇಲೆ ಕೈಯ | ಘುಡ ಘುಡ | ಹೊಡಿ ನಗಾರಿ ಮೇಲೆ ಕೈಯ ‖ ಪ ‖ ಮೃಡವಂದ್ಯನ ಪದ ಬಿಡದೆ ಭಜಿಪರ | ಬಿಡಿಸಿ ಪೊರೆವ ಜಗದೊಡೆಯನೆ ಪರನೆಂದು ‖ ಅ. ಪ. ಇಂತಹ ಅಚಲವಾದ ನಂಬುಗೆಯಿಂದ ಭಗವಂತನನ್ನು ಶರಣು ಹೊಕ್ಕವನು ಲೌಕಿಕ ವಿಚಾರಗಳಲ್ಲಿ ನಿರ್ಭೀತನಾಗುತ್ತಾನೆ. ಸರ್ವಶಕ್ತನಾದ ಭಗವಂತನನ್ನು ತನ್ನ ಸರ್ವಸ್ವವೆಂದು ತಿಳಿದು ಅವನು ಭಕ್ತಿರಸದಲ್ಲಿ ಮುಳುಗಿಹೋಗುತ್ತಾನೆ. ತನಗೆ ಯಾವ ಕೊರತೆಯೂ ಇಲ್ಲವೆಂಬ ಕೆಚ್ಚಿನಿಂದ ಆತ ಹಾಡುತ್ತಾನೆ—

ನಾನ್ಯಾಕೆ ಬಡವನು ? ನಾನ್ಯಾಕೆ ಪರದೇಶಿ ? ಶ್ರೀನಿಧೆ ಹರಿಯೆನಗೆ

ನೀನಿರುವತನಕ ॥ ಪ ॥ ಪುಟ್ಟಿಸಿದ ತಾಯ್ತಂದೆ ಇಷ್ಟಮಿತ್ರನು ನೀನೆ। ಅಷ್ಟು ಬಂಧು ಸರ್ವ ಬಳಗ ನೀನೆ । ಪೆಟ್ಟಿಗೆಯೊಳಗಣ ಅಷ್ಟಾಭರಣ ನೀನೆ। ಶ್ರೇಷ್ಠ ಮೂರುತಿ ಕೃಷ್ಣ ನೀನಿರುವತನಕ ॥ ೧ ॥ ಒಡಹುಟ್ಟಿದವ ನೀನೆ, ಒಡಲಿಗ್ಹಾಕುವ ನೀನೆ। ಉಡಲು ಹೊದಿಯಲು ವಸ್ತ್ರ ಕೊಡುವ ನೀನೆ। ಮಡದಿ ಮಕ್ಕಳನೆಲ್ಲ ಕಡೆಹಾಯ್ಸುವವ ನೀನೆ। ಬಿಡದೆ ಸಲಹುವ ಒಡೆಯ ನೀನಿರುವ ತನಕ ॥ ೨ ॥ ವಿದ್ಯೆ ಹೇಳುವ ನೀನೆ ಬುದ್ಧಿಕಲಿಸುವ ನೀನೆ। ಉದ್ಧಾರಕರ್ತ ಮಮ ಸ್ವಾಮಿ ನೀನೆ। ಮುದ್ದು ಸಿರಿ ಪುರಂದರ ವಿಠಲ ನಿನ್ನಡಿ ಮೇಲೆ। ಬಿದ್ದುಕೊಂಡಿರುವೆನಗೆ ಯಾತರ ಭಯವು ? ॥ ೩ ॥

ಅಹುದು, ಸಂಪೂರ್ಣ ಶರಣಾಗತನಾದ ಮೇಲೆ ಭಯವೇನೂ ಇಲ್ಲ. ಆದರೆ ಈ ಸ್ಥಿತಿಯನ್ನು ಪಡೆಯಲು ಇಹ ಸುಖಗಳಲ್ಲಿ ಜಿಹಾಸೆ ಹುಟ್ಟಿ, ವೈರಾಗ್ಯ ಮನೆ ಮಾಡಿಕೊಂಡಿರಬೇಕು. ಮಾನವನ ಮನಸ್ಸನ್ನು ಆಕರ್ಷಿಸುವ ವಸ್ತುಗಳು ಮುಖ್ಯವಾಗಿ ಮೂರು—ಹೊನ್ನು, ಹೆಣ್ಣು, ಮಣ್ಣು. ಈ ಮೂರರ ಮೇಲಿನ ಮೋಹವೇ ಮಾನವನ ಎಲ್ಲ ದೋಷಗಳಿಗೂ ಮೂಲ ಕಾರಣ, ಅವನ ಉದ್ಧಾರಕ್ಕೆ ಅಡ್ಡವಾಗಿ ನಿಂತಿರುವ ಅಡ್ಡಿ ಆತಂಕಗಳು. ಪುರಂದರದಾಸನು ಈ ಮೂರರ ಪೊಳ್ಳನ್ನು ಎತ್ತಿ ತೋರಿಸುವುದಕ್ಕಾಗಿ ತನ್ನ ಮನಸ್ಸಿಗೇ ಸವಾಲು ಹಾಕುತ್ತಿದ್ದಾನೆ—

ಆರು ಹಿತವರು ನಿನಗೆ ಮೂವರೊಳಗೆ? ನಾರಿಯೊ ಧಾರಿಣಿಯೊ ಬಲುಧನದ ಸಿರಿಯೊ? ॥ ಪ ॥

ಹೆಣ್ಣು ಬೇಕೆ? ಆ ಹೆಣ್ಣಿನಿಂದ ನಿನಗಾಗುವ ಉದ್ಧಾರ ಇಷ್ಟೆ—

ಅನ್ಯರಲಿ ಜನಿಸಿರ್ದ ಅಂಗನೆಯ ಕರೆತಂದು। ನಿನ್ನ ಮನೆಗವಳ ಯಜಮಾನಿಯೆನಿಸಿ। ಭಿನ್ನವಿಲ್ಲದೆಯರ್ಧದೇಹವೆನಿಸುವ ಸತಿಯು! ಕಣ್ಣಲ್ಲಿ ನೋಡಲಂಜುವಳು ಕಾಲವಶದಿ ॥ ೧ ॥

ಇನ್ನು ಮಣ್ಣು, ಆಸ್ತಿ, ರಾಜ್ಯ?

ಮುನ್ನ ಶತಕೋಟಿ ರಾಯರುಗಳಾಳಿದ ನೆಲವು! ತನ್ನದೆಂದೆನುತ ಶಾಸನವ ಬರೆಸಿ! ಬಿನ್ನಣದ ಮನೆಕಟ್ಟಿ ಕೋಟೆ ಕೊತ್ತಳವಿಕ್ಕಿ! ಚೆನ್ನಿನವನಸುವಳಿಯೆ ಹೊರಗೆ ಹಾಕುವರು ॥ ೨ ॥

ಹಾಗೆಯೇ ಹಣವೂ ಕೂಡ. ಉದ್ಯೋಗ, ವ್ಯವಹಾರ, ನೃಪಸೇವೆ ಇತ್ಯಾದಿ

ಗಳಲ್ಲಿ ತೊಡಗಿ, ಕೊನೆಗೆ ಕ್ಷುದ್ರತನ, ಕಳವು, ಪರತಾಪಗಳಿಗೆ ಕೂಡ ಹೇಸದೆ ಗಳಿಸಿದ ಹಣವನ್ನೆಲ್ಲಾ ಯಾರ ಪಾಲೋ ಮಾಡಿ ಸತ್ತು ಹೋಗುವುದು ತಾನೆ? ಈ ಸತ್ಯವನ್ನು ಅರಿತು, ಅರ್ಥಮಾಡಿಕೊಂಡಿದ್ದರೆ ಹೆಣ್ಣು ಮಣ್ಣು ಹೊನ್ನುಗಳಿಗಾಗಿ ಲೋಕದಲ್ಲಿ ನಡೆಯುವ ಎಷ್ಟು ಅನರ್ಥಗಳು ಕಡಮೆಯಾದಾವು! ಈ ಮೂರೂ ಕೇವಲ ಈ ದೇಹಕ್ಕೆ ಸಂಬಂದಪಟ್ಟುವು; ಈ ದೇಹ ಅಸ್ಥಿರ; ಇದು ಬಿದ್ದು ಹೋದಾಗ ಇವುಗಳ ಸಂಬಂಧ ತಪ್ಪಿ ಹೋಗುತ್ತದೆ. ಇಷ್ಟೇ ಅಲ್ಲ, ಇದ್ದಾಗಲೂ ಇವುಗಳಿಂದ ಚಿಂತೆ ತಪ್ಪಿದುದಲ್ಲ. 'ಯಾವಾಗಲು ಚಿಂತೆ ಜೀವಕ್ಕೆ ‖ ಪ ‖ ಈ ಜೀವ ಒಂದು ಪರಿಯಾಗೊ ತನಕ ‖ ಅ. ಪ ‖' ಈ ಚಿಂತೆಯಿಂದ ನಿಶ್ಚಿಂತನಾಗಬೇಕಾದರೆ ಅರಿಷಡ್ವರ್ಗಗಳನ್ನು ಗೆದ್ದು ವಿರಕ್ತನಾಗಬೇಕು. ವಿಷಯ ಸೇವನೆಗಿಂತಲೂ ಅದರ ಆಸಕ್ತಿಯೇ ನಿಜವಾದ ದುಃಖಮೂಲ. ಈ ವಿಷಯಾಸಕ್ತಿ ಸಾಯದೆ ಭಗವಂತನ ಸ್ಮರಣ ಕೀರ್ತನಗಳಿಂದ ಏನು ಪ್ರಯೋಜನ? 'ಬೇವು ಬೆಲ್ಲದೊಳಿಡಲೇನು ಫಲ? ಹಾವಿಗೆ ಹಾಲೆರೆದೇನು ಫಲ?' ವಿಷಯ ವಾಸನೆಯನ್ನು ಇಟ್ಟುಕೊಂಡು, ಜಪತಪಾದಿ ಬಹಿರಾಡಂಬರಗಳನ್ನು ಆಚರಿಸುವುದು ಕೇವಲ 'ಉದರ ವೈರಾಗ್ಯ'ವೆಂದು ಪುರಂದರದಾಸನ ಹೇಳಿಕೆ—

ಉದರ ವೈರಾಗ್ಯವಿದು ನಮ್ಮ | ಪದುಮನಾಭನಲ್ಲಿ ಲೇಶ ಭಕುತಿ ಇಲ್ಲ ‖ ಪ ‖ ಉದಯ ಕಾಲದಲೆದ್ದು ಗಡಗಡ ನಡುಗುತ | ನದಿಯೊಳು ಮಿಂದೆವೆಂದು ಹಿಗ್ಗುತಲಿ | ಮದ ಮತ್ಸರ ಕ್ರೋಧ ಒಳಗೆ ತುಂಬಿಕೊಂಡು | ಬದಿಯಲಿದ್ದವರಿಗಾಶ್ಚರ್ಯ ತೋರುವ ‖ ೧ ‖ ಕಂಚುಗಾರರ ಬಿಡಾರದಂವದಲಿ | ಕಂಚು ಹಿತ್ತಾಳೆ ಪ್ರತಿಮೆ ನೆರಹಿ | ಮಿಂಚಲೆನುತ ಬಹು ಜ್ಯೋತಿಗಳನೆ ಹಚ್ಚಿ | ವಂಚನೆಯಲಿ ಘನ ಪೂಜೆಯ ಮಾಡುವ ‖ ೨ ‖ ಕರದಲಿ ಜಪಮಣಿ ಬಾಯಲಿ ಮಂತ್ರವು | ಅರಿವೆಯ ಮುಸುಕು ಮೋರೆಗೆ ಹಾಕಿ | ಪರಸತಿಯರ ಗುಣ ಸ್ಮರಿಸುತ ಅನುದಿನ | ಪರಮವೈರಾಗ್ಯಶಾಲಿಯೆಂದೆನಿಸುವ ‖ ೩ ‖ ಬೂಟಕ ತನವಲಿ ಬಹಳ ಭಕುತಿ ಮಾಡಿ | ದಿಟನೀತ ಸರಿಯಾರಿಲ್ಲೆನಿಸಿ | ನಾಟಕ ಸ್ತ್ರೀಯಂತೆ ಬಯಲು ಡಂಭವ ತೋರಿ | ಊಟದ ಮಾರ್ಗದ ಜ್ಞಾನವಿದಲ್ಲದೆ ‖ ೪ ‖ ನಾನು ಎಂಬುದು ಬಿಟ್ಟು ಜ್ಞಾನಿಗಳೊಡನಾಡಿ | ಏನಾದರು ಹರಿ ಪ್ರೇರಣೆಯೆಂದು | ಧ್ಯಾನಿಸಿ

ಮೌನದಿ ಪುರಂದರ ವಿಠಲನ। ಕಾಣದೆ ಮಾಡಿದ ಕಾರ್ಯಗಳೆಲ್ಲವು ॥ ೫ ॥

ಬಹಿರಾಡಂಬರದ ಬೂಟಾಟಿಕೆಯವರನ್ನು ಕಂಡು ಪುರಂದರ ದಾಸನು.' ನಗೆಯು ಬರುತಿದೆ ಎನಗೆ ನಗೆಯು ಬರುತಿದೆ। ಜಗದೊಳಿರುವ ಜಾಣರೆಲ್ಲ ಹಗರಣ ಮಾಡುವುದ ಕಂಡು' ಎನ್ನುತ್ತಾನೆ. ಸಮಾಜದ ಅಧೋಗತಿಗೆ ಹಿಡಿದ ಸೊಡರಿನಂತಿವೆ, ಆತನ ಹಲವು ಕೃತಿಗಳು. ನಮ್ಮ ಸಮಾಜದಲ್ಲಿ ಅಂದಿನಿಂದ ಇಂದಿನವರೆಗೂ ಹೊತ್ತಿ ಬೇಯುತ್ತಿರುವ ಜಾತೀಯತೆ, ಮಡಿ ವೈಲಿಗೆಗಳ ವಿಚಾರದಲ್ಲಿ ಪುರಂದರದಾಸನ ದೃಷ್ಟಿ ಬಹು ಉದಾರವಾಗಿದೆ. ಮಾನವ ಶ್ರೇಷ್ಠನಾಗುವುದು ಜನ್ಮದಿಂದಲ್ಲ, ಗುಣಕರ್ಮಗಳಿಂದ-ಎಂಬ ತತ್ವ ಆತನದು. ' ಹೊಲೆಯ ಹೊರಗಿಹನೆ ಊರೊಳಗಿಲ್ಲವೆ ?' ಎಂದು ಪ್ರಶ್ನೆಹಾಕಿಕೊಂಡು, ಎಂತಹ ಗುಣಗಳುಳ್ಳವನು ಹೊಲೆಯನಾಗುವನೆಂಬ ಒಂದು ಪಟ್ಟಿಯನ್ನೇ ಕೊಡುತ್ತಾನೆ. ' ಹೊಲತಿ ಹೊಲೆಯ ಇವರವರಲ್ಲ। ಹೊಲೆಗೇರಿಲಿ ಹೊಲೆಯ ಹೊಲತಿಯಿಲ್ಲ.' ಹಾಗಾದರೆ ಎಲ್ಲಿದ್ದಾರೆ? 'ಸತಿ ವಶನಾಗಿ ಜನನಿ ಜನಕಗೆ। ಅತಿ ನಿಷ್ಠುರ ನುಡಿವವ ಹೊಲೆಯ। ಸುತರ ಪಡೆದು ವಾರ್ಧಿಕ ಮದವೇರಿ ಪತಿದ್ವೇಷ ಮಾಡುವವಳೆ ಹೊಲತಿ ' ॥ ಹೀಗೆಯೇ ಹೊಲೆಯ ಹೊಲತಿಯರ ಒಂದು ಪಟ್ಟಿಯನ್ನು ಕೊಡುತ್ತಾನೆ. ಮಡಿಯ ವಿಚಾರದಲ್ಲಿಯೂ ಅಷ್ಟೆ. ' ಮಡಿ ಮಡಿಯೆಂದು ಮೂರ್ಮಾರು ಹಾರುತಿ । ಮಡಿಯೆಲ್ಲಿ ಬಂತೇ ಬಿಕನಾಸಿ ?' ಎಂದು ಆತ ಕೇಳುತ್ತಾನೆ. ಮಲ ಮೂತ್ರಗಳಿಂದ ತುಂಬಿ ಹೊಲಸಾದ ಈ ದೇಹದಲ್ಲಿರುವಾಗ, ಹುಟ್ಟು ಸಾವುಗಳ ಸೂತಕದ ಮಧ್ಯೆ ನಿಂತಿರುವಾಗ ' ಬಿಟ್ಟು ಬಿಡದೆ ಕಾವೇರಿಲಿ ಮುಳುಗಲು' ವೈಲಿಗೆ ಹೋಗುತ್ತದೆಯೆ ? ' ಚರ್ಮವ ತೊಳೆದರೆ ಕರ್ಮವು ಹೋಗೋದೆ । ಮರ್ಮವ ತಿಳಿಯದೆ ಬಿಕನಾಸಿ ॥ ಬರ್ಮನಯ್ಯ ಶ್ರೀ ಪುರಂದರ ವಿಠಲನ ಪಾಡಿ । ನಿರ್ಮಲದಿಂ ಬಾಳೆ ಬಿಕನಾಸಿ ' ಎನ್ನುತ್ತಾನೆ, ಆತ. ಕಾಮಕ್ರೋಧಾದಿಗಳನ್ನು ಹೊಟ್ಟೆಯೊಳಗಿಟ್ಟುಕೊಂಡು ನೀರಿನಲ್ಲಿ ಮುಳುಗಿದ ಮಾತ್ರಕ್ಕೆ ಮಡಿಯಾಗುತ್ತದೆಯೆ ? ' ಪೊಡವಿಪಾಲಕನ ಪಾದ ಧ್ಯಾನವನು ಬಿಡದೆ ಮಾಡುವದದು ಮಡಿಯು.' ಇನ್ನು ಸ್ನಾನವೆಂದರೆ ನೆತ್ತಿಯಮೇಲೆ ನೀರು ಸುರಿದುಕೊಳ್ಳುವುದಲ್ಲ. ' ಸ್ನಾನ ಮಾಡಿರೊ ಜ್ಞಾನ ತೀರ್ಥದಲಿ । ನಾನು ತಾನು ಎಂಬ ಅಹಂಕಾರವನು ಬಿಟ್ಟು ' ಎಂದು ಪುರಂದರದಾಸನ ಉಪದೇಶ.

ಪುರಂದರದಾಸನ ಕೃತಿಗಳಲ್ಲಿ ಹಲವಕ್ಕೆ ಬಹು ಸುಂದರವಾದ ಒಂದು ಹಿನ್ನೆಲೆಯನ್ನು ಊಹಿಸುವುದು ಅಷ್ಟೇನೂ ಕಷ್ಟವಲ್ಲ. ಭಿಕ್ಷಕ್ಕೆ ಹೊರಟಾಗ ಯಾರೋ ರಾಗಿಯನ್ನು ತಂದರೆಂದು ಕಾಣುತ್ತದೆ. ಆಶುಕವಿ ಪುರಂದರ ಒಡನೆಯೆ 'ರಾಗಿ ತಂದೀರಾ, ಭಿಕ್ಷಕ್ಕೆ, ರಾಗಿ ತಂದೀರಾ ?' ಎಂದು ಅವರನ್ನು ಛಿಗುಟ್ಟಿದ. ಯಾರೋ ದೂರದಿಂದ ದಾಸನನ್ನು ಕಂಡು ಬಾಗಿಲು ಹಾಕಿಕೊಂಡಳೇನೊ! 'ಕದವ ಮುಚ್ಚಿದಳದೇಕೊ | ಗೃಹಿಣಿ ಮುಖ | ಕದವ ಮುಚ್ಚಿದಳೇಕೊ | ಚಿಲಕವಲ್ಲಾಡುತಿದೆ ಒಳಗಿದ್ದ ಹಾಸವೆಲ್ಲ ಹೊರಗೆ ತೋರಿದೀತೆಂದು' ಎಂದು ಹಾಡಿ, ಆ ಹೆಣ್ಣಿನ ಮುಖದಲ್ಲಿ ನೀರಿಳಿಸಿರಬೇಕು. ಮಧ್ಯಾಹ್ನ ಹಸಿದು ಹೋಗಿರುವ ವೇಳೆಯಲ್ಲಿ ಅತಿಥಿಯ ಕಡೆ ಕಣ್ಣೆತ್ತಿ ನೋಡದೆ ಆಟದಲ್ಲಿ ಮಗ್ನಳಾಗಿದ್ದ ಹೆಣ್ಣನ್ನು ಕುರಿತು 'ಊಟಕ್ಕೆ ಬಂದೆವು ನಾವು. ನಿಮ್ಮ ಆಟ ಪಾಟವ ಬಿಟ್ಟು ಅಡುಗೆ ಮಾಡಮ್ಮ' ಎಂದು ಹೇಳಿ ಆಕೆಯ ಕರ್ತವ್ಯವನ್ನು ಜ್ಞಾಪಿಸಿರಬೇಕು. ಇಂತಹ ಕೃತಿಗಳು ಪುರಂದರದಾಸನಲ್ಲಿ ತಂಡ ತಂಡವಾಗಿ ಸಿಕ್ಕುತ್ತವೆ.

ಸಂಸಾರವು ಅಸಾರ, ಅಶಾಶ್ವತವೆಂಬುದು ನಿಜವಾದರೂ ಅದನ್ನು ಬಿಟ್ಟು ಓಡಿಹೋಗಬೇಕೆಂದು ಪುರಂದರದಾಸ ಹೇಳುವುದಿಲ್ಲ. 'ಈಸಬೇಕು, ಇದ್ದು ಜೈಸಬೇಕು; ಹೇಸಿಗೆ ಸಂಸಾರದಲ್ಲಿ ಆಶಲೇಶ ಮಾಡದ್ಹಾಂಗೆ' ಎಂಬುದು ಆತನ ನಿಲವು. ಕಷ್ಟ ಸುಖಗಳಿಂದ ಚಲನಿಚಲಿತನಾಗದೆ 'ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ.' ಹಾಗಿದ್ದರೆ 'ಸಂಸಾರವೆಂಬಂಥ ಭಾಗ್ಯವಿರಲಿ | ಕಂಸಾರಿ ನೆನೆವೆಂಬ ಸೌಭಾಗ್ಯವಿರಲಿ' ಎನ್ನಿಸೀತು. ವಿವೇಕಿಯಾದ ಮನುಷ್ಯ ತಾನು ಮಾನವನಾಗಿ ಹುಟ್ಟಿದುದಕ್ಕಾಗಿ ಸಂತೋಷಿಸುತ್ತಾನೆ. ಜೀವಿಯ ಉದ್ಧಾರಕ್ಕೆ ಮಾನವ ಜನ್ಮಕ್ಕಿಂತ ಉತ್ತಮವಾದ ಸಾಧನ ಸಿಕ್ಕದು. 'ಮಾನವ ಜನ್ಮ ದೊಡ್ಡದು, ಇದ | ಹಾನಿ ಮಾಡಲಿಬೇಡ ಹುಚ್ಚಪ್ಪಗಳಿರಾ' ಎಂದು ಪುರಂದರದಾಸ ಸಾರಿ ಹೇಳುತ್ತಾನೆ. 'ಧರ್ಮವೇ ಜಯವೆಂಬ ದಿವ್ಯಮಂತ್ರ'ವನ್ನು ಪಠಿಸುತ್ತ 'ಬಂದದ್ದೆಲ್ಲಾ ಬರಲಿ, ಗೋವಿಂದನ ದಯವೊಂದಿರಲಿ' ಎಂದುಕೊಂಡು ಮುಂದುವರಿಯುವವನು ಉದ್ಧಾರವಾಗುತ್ತಾನೆ. ಹೆಜ್ಜೆಹೆಜ್ಜೆಗೂ ತನ್ನನ್ನು ತಾನೇ ಪರೀಕ್ಷಿಸಿಕೊಂಡು, ತನ್ನ ತಪ್ಪುಗಳನ್ನು ಆತ ಅರಿತುಕೊಳ್ಳುತ್ತಾನೆ. ಆ

ತಪ್ಪುಗಳ ಹೊರೆಯನ್ನು ಕಂಡಾಗ 'ಬಿನ್ನಹಕೆ ಬಾಯಿಲ್ಲವಯ್ಯ | ಅನಂತ ಅಪರಾಧ ಎನ್ನಲ್ಲಿ ಇರಲಾಗಿ' ಎನ್ನಿಸುತ್ತದೆ, ಆತನಿಗೆ. ಮೋಹ, ಮದ, ದುರಾಶೆಗಳನ್ನು ತುಂಬಿಟ್ಟುಕೊಂಡು ಉದ್ಧಾರಕ್ಕಾಗಿ ದೇವರನ್ನು ಬೇಡಿದರೆ ಹೇಗೆ? ಹಾಗೆ ಬೇಡುವುದಕ್ಕೆ ಬಾಯಿಲ್ಲವಾದರೂ ಬೇಡದೆ ಗತ್ಯಂತರವಿಲ್ಲ. ಭಗವಂತನ ಕೃಪೆಯಾಗದ ಹೊರತು ಅರಿಷಡ್ವರ್ಗಗಳನ್ನು ಗೆಲ್ಲಲಾಗುವುದಿಲ್ಲ. 'ಕಂಡೂ ಕಂಡು ನೀ ಎನ್ನ ಕೈ ಬಿಡುವರೇ ಕೃಷ್ಣ !' ಎಂದು ಆರ್ತನಾಗಿ ಬೇಡುವುದೊಂದೇ ಅವನ ಕರ್ತವ್ಯ.

ಪುರಂದರ ದಾಸನು ಶ್ರೀ ಕೃಷ್ಣನ ಲೀಲೆಯನ್ನು ವರ್ಣಿಸುವ ಹಲವು ಸುಂದರ ಕೃತಿಗಳನ್ನು ರಚಿಸಿದ್ದಾನೆ. ಅವುಗಳಲ್ಲಿ 'ಪೋಗದಿರೆಲೊ ರಂಗ | ಬಾಗಿಲಿಂದಾಚೆ' ಎಂಬ ಕೃತಿ ಬಹು ಮನೋಹರವಾಗಿದೆ. ಹಾಗೆಯೇ 'ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು' ಎಂಬ ಕೀರ್ತನೆಯಲ್ಲಿ ಪುರಂದರನು ಪರಾಶ್ರಯದ ದೈನ್ಯಸ್ಥಿತಿ ಎಷ್ಟು ಹೃದಯವೇಧಕವಾದದ್ದು, ಅಧಿಕಾರಾರೂಢರು ಎಷ್ಟು ಕಠಿಣ ಹೃದಯರು ಎಂಬುದನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಾನೆ. 'ಕಲ್ಲು ಕರಗಿಸಬಹುದು, ಹುಲಿಗಡಲೊಳು ಅದರ | ತೈಲವನು ತೆಗೆದಾದರುಣ್ಣಬಹುದು | ಬಲ್ಲಿದರ ಮನಸು ಮೆಚ್ಚಿಸಲಾರೆ | ಪ್ರತಿ ಹಲ್ಲು ಕಿರಿಕಿರಿದು ಹಂಬಲಿಸಿ ಬಾಯ್ಬಿಡುತ | ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು' ಎಂಬುದು ಎಷ್ಟು ಮಾರ್ಮಿಕವಾಗಿ, ಹೃದಯಸ್ಪರ್ಶಿಯಾಗಿದೆ! ಹರಿದಾಸರು ಹರಿಸ್ವರೂಪರೇ ಎಂದು ಸಾರಿದ ಪುರಂದರ ದಾಸನು 'ಹರ ನೀ ಹೆಂಗಾದೆ' ಎಂದು ಹರಭಕ್ತನೊಬ್ಬನನ್ನು ಆಕ್ಷೇಪಿಸಿ, ಅಸಹನೆ ತೋರಿದಂತೆ ಕಂಡುಬರುವುದಾದರೂ ಆತನ ಶಿವಸ್ತುತಿರೂಪವಾದ ಹಲವು ಕೀರ್ತನೆಗಳು ಆತನ ಉದಾರ ಚೇತನಕ್ಕೆ ಸಾಕ್ಷಿಯಾಗಿವೆ. 'ಕಂಡೆ ಕರುಣ ನಿಧಿಯ | ಗಂಗೆಯ ಮಂಡೆಯೊಳಿಟ್ಟ ಧೊರೆಯ' ಎಂಬ ಆತನ ಕೀರ್ತನೆ ಭಕ್ತಿಭಾವ ಭರಿತವಾಗಿದೆ. ಸೊಲ್ಲಾಪುರದಲ್ಲಿ ಬ್ರಾಹ್ಮಣ ಲಿಂಗಾಯತರಲ್ಲಿ ವ್ಯಾಜ್ಯವೆದ್ದಾಗ 'ಜಂಗಮರು ನಾವು ಜಗದೊಳು' ಎಂಬ ಕೃತಿಯನ್ನು ಹಾಡಿ ಆ ಜಗಳವನ್ನು ಹೋಗಲಾಡಿಸಿದನಂತೆ!

ಪುರಂದರದಾಸನು ತನ್ನ ಕೀರ್ತನೆಗಳಿಂದ ಪರಲೋಕ ದೃಷ್ಟಿಯನ್ನು ನೀಡಿರುವುದರ ಜೊತೆಗೆ ಇಹಲೋಕದ ತುಷ್ಟಿಯನ್ನೂ ಉಪದೇಶಿಸಿದ್ದಾನೆ.

ಮಧುರ, ವಾತ್ಸಲ್ಯ ಮೊದಲಾದ ನವವಿಧ ಭಕ್ತಿಭಾವಗಳನ್ನೂ ಒಳಗೊಂಡು ರಸಮಯವಾಗಿ, ಕಾವ್ಯದ ಮೆರುಗನ್ನು ಹೊಂದಿವೆ, ಆತನ ಕೃತಿಗಳು. ಆತನ ಉಪದೇಶ ಜನಮನವನ್ನು ಸೂರೆಗೊಂಡು ಸಮಾಜ ಜೀವನವನ್ನು ಹಸನಾಗಿಸಿತು. ಆತನ ಕವಿತೆ ಕನ್ನಡಭಾಷೆಗೆ ತುಷ್ಟಿ ಪುಷ್ಟಿಗಳನ್ನು ನೀಡಿದುದು ಮಾತ್ರವೇ ಅಲ್ಲ, ನಟವಿಟಗಾಯಕರ ಸ್ವತ್ತೆನಿಸಿದ್ದ ಸಂಗೀತಕ್ಕೆ ಭಕ್ತಿಯುಕ್ತವಾದ ಸಾಹಿತ್ಯವನ್ನು ಒದಗಿಸಿ 'ಕರ್ಣಾಟಕ ಸಂಗೀತ'ವೆಂಬ ಕೀರ್ತಿಯ ಕೋಡು ಮೂಡಿಸಿತು. ತ್ಯಾಗರಾಜನು ತನ್ನ ತಾಯಿ ಹಾಡುತ್ತಿದ್ದ ಪುರಂದರದಾಸನ ಕೀರ್ತನೆಗಳನ್ನು ಕೇಳಿ, ತನ್ನ ಕೃತಿರಚನೆಗೆ ಸ್ಫೂರ್ತಿಯನ್ನು ಪಡೆದನಂತೆ! ದಾಸಪಂಥದವರ ಗಣನಾ ಪ್ರಸಂಗದಲ್ಲಿ ಪುರಂದರನ ಹೆಸರು ಮೊದಲನೆಯದಾಗಿರುವುದು ಮಾತ್ರವೇ ಅಲ್ಲ, ಅಗ್ರಗಣ್ಯವೂ ನಿಜ.

**ಕನಕದಾಸ:** (ಕ್ರಿ. ಶ. ೧೫೦೯–೧೬೦೭)

ಕನಕದಾಸನು ಪುರಂದರದಾಸನ ಸಮಕಾಲೀನ. ಇವರಿಬ್ಬರೂ ದಾಸಪಂಥದ ಅಶ್ವಿನೀ ದೇವತೆಗಳಂತಿರುವವರು. ಇಬ್ಬರೂ ವ್ಯಾಸರಾಯನ ಶಿಷ್ಯರಾಗಿ, ಸಹಾಧ್ಯಾಯಿಗಳಂತಿದ್ದವರು. ಪುರಂದರನು ತನ್ನ ಹರಿಕೀರ್ತನೆಗಳಿಂದ ಹರಿದಾಸನೆಂದು ಕೀರ್ತಿತನಾಗಿದ್ದಾನೆ. ಕನಕದಾಸನು ಕೀರ್ತನಕಾರನು ಮಾತ್ರವೇ ಅಲ್ಲ; 'ಮೋಹನತರಂಗಿಣಿ', 'ರಾಮಧಾನ್ಯ ಚರಿತ್ರೆ' 'ನಳಚರಿತ್ರೆ'. 'ಹರಿಭಕ್ತಿಸಾರ' ಎಂಬ ಕಾವ್ಯಗಳನ್ನು ರಚಿಸಿದ ಅಸಾಧಾರಣ ಕವಿಯೂ ಆಗಿದ್ದಾನೆ. ಈತನ ಕೀರ್ತನೆಗಳಲ್ಲಿ ಭಗವಂತನ ಸ್ತೋತ್ರ ಪ್ರಾರ್ಥನೆಗಳಿಗಿಂದ ನೀತಿನಿರೂಪಣೆಯೇ ಹೆಚ್ಚು. ವಿಚಾರ ಸ್ವಾತಂತ್ರ್ಯದಲ್ಲಿ, ಕವಿತಾಶಕ್ತಿಯಲ್ಲಿ ಈತನು ದಾಸಪಂಥದವರಲ್ಲೆಲ್ಲಾ ಅತ್ಯಂತ ಪ್ರತಿಭಾಶಾಲಿಯೆಂದು ಹೇಳಬಹುದು.

ಧಾರವಾಡ ಜಿಲ್ಲೆಯ ಬಾಡವೆಂಬ ಗ್ರಾಮದಲ್ಲಿ ಬೀರಪ್ಪ–ಬಚ್ಚಮ್ಮ ಎಂಬ ಕುರುಬ ದಂಪತಿಗಳು ಇದ್ದರು. ಮನೆದೇವರಾದ ತಿರುಪತಿಯ ವೆಂಕಟರಮಣನ ಕೃಪೆಯಿಂದ ಈ ದಂಪತಿಗಳಲ್ಲಿ ಜನಿಸಿದ ಏಕಮಾತ್ರ ಸುಪುತ್ರ ತಿಮ್ಮಪ್ಪ. ಬೀರಪ್ಪ ವಿಜಯನಗರದ ಅರಸರಿಗೆ ಅಧೀನನಾದ ಒಬ್ಬ ಪುಟ್ಟ ಪಾಳೆಯಗಾರನಾಗಿದ್ದ. ಆದ್ದರಿಂದ ತಿಮ್ಮಪ್ಪ ಬಾಲ್ಯದಿಂದಲೂ ಕ್ಷತ್ರಿ

ಯೋಚಿತವಾದ ವೀರವಿದ್ಯೆಗಳಲ್ಲಿ ಆಸಕ್ತನಾಗಿ ಮಹಾ ಪರಾಕ್ರಮಿಯೆನಿಸಿದ. ತಂದೆಯ ಮರಣಾನಂತರ ತಿಮ್ಮಪ್ಪ ದಕ್ಷನಾದ ರಾಜನೆಂದೂ ಕೀರ್ತಿಶಾಲಿಯೂದ. ಒಮ್ಮೆ ಈತನು ಭೂಶೋಧನೆಯಲ್ಲಿ ತೊಡಗಿದ್ದಾಗ ಅಪಾರವಾದ ಧನರಾಶಿ ಸಿಕ್ಕಿತು. ಜನ ತಿಮ್ಮಪ್ಪನನ್ನು ಕನಕಪ್ಪ– ಕನಕನಾಯಕ–ಎಂದು ಕರೆದರು. ಈ ಅನ್ವರ್ಥನಾಮವೆ ಆತನ ಅಂಕಿತನಾಮವಾಯಿತು. ಆತನು ತನಗೆ ದೊರೆತ ನಿಧಿಯಿಂದ ಕಾಗಿನೆಲೆಯಲ್ಲಿ ಭವ್ಯವಾದ ಒಂದು ಗುಡಿಯನ್ನು ಕಟ್ಟಿಸಿ, ಅದರಲ್ಲಿ ಆದಿಕೇಶವ ಸ್ವಾಮಿಯನ್ನು ಸ್ಥಾಪಿಸಿದನು. ಕಾಲಕ್ರಮದಲ್ಲಿ ಇದು ಉತ್ತರ ಕರ್ಣಾಟಕದ ಒಂದು ತಿರುಪತಿಯಾಯಿತು. ಕನಕನಾಯಕ ಕೇಶವನಲ್ಲಿ ಅಪಾರವಾದ ಭಕ್ತಿಯನ್ನು ಬೆಳೆಸಿಕೊಂಡು, 'ಕಾಗಿನೆಲೆಯಾದಿಕೇಶವ' ನೆಂಬ ಅಂಕಿತದಿಂದ ಕೀರ್ತನೆಗಳನ್ನು ರಚಿಸಲು ಅರಂಭಿಸಿದನು. ಅಧಿಕಾರ, ಐಶ್ವರ್ಯ, ಯೌವನ, ಕೀರ್ತಿಗಳ ಶಿಖರದಲ್ಲಿದ್ದ ಕನಕನ ಬಾಳು ಇದ್ದಕ್ಕಿದ್ದಂತೆ ದುಃಖದ ತಗ್ಗಿಗಿಳಿಯಬೇಕಾಯಿತು. ಆತನ ಪ್ರಿಯಪತ್ನಿಯ ವಿಯೋಗದಿಂದ ನಾಯಕನಿಗೆ ಜೀವನದಲ್ಲಿ ಜಿಗುಪ್ಸೆ ಹುಟ್ಟಿತು. ಇದೇ ಸಮಯದಲ್ಲಿ ಆತನಿಗೆ ಯುದ್ಧದಲ್ಲಿ ಪರಾಜಯವಾಯಿತು. ಭಯಂಕರವಾಗಿ ಗಾಯಗೊಂಡು ನೆಲಕ್ಕುರುಳಿದನು. ದುಃಖ, ಅಪಮಾನ, ನೋವುಗಳಿಂದ ಘಾಸಿಗೊಂಡ ನಾಯಕ ವೈರಾಗ್ಯಪರನಾಗಿ, ವ್ಯಾಸರಾಯರ ಶಿಷ್ಯನಾದ. ಕನಕನಾಯಕನು ಕನಕದಾಸನಾಗಿ ಗುರುಗಳ ಜೊತೆಯಲ್ಲಿ ಭಜನೆ ಮಾಡುತ್ತಾ ದಾಸಕೂಟದ ಸದಸ್ಯರಲ್ಲಿ ಪ್ರಮುಖನಾದನು. ಪುರಂದರ ದಾಸನೂ ಆತನೂ ಜೀವದ ಗೆಳೆಯರಾದರು. ಪುರಂದರನು ಪರಂಧಾಮಕ್ಕೆ ತೆರಳುವಾಗ ತನ್ನ ತಂಬೂರಿಯನ್ನು ಕನಕನಿಗೆ ಒಪ್ಪಿಸಿದನಂತೆ! ಕನಕನು ತನ್ನ ಜೀವಿತದ ಬಹುಭಾಗವನ್ನು ತಿರುಪತಿಯಲ್ಲೇ ಕಳೆದು, ಕಡೆಗಾಲದಲ್ಲಿ ಕಾಗಿನೆಲೆಯ ಕೇಶವನ ಪಾದದಲ್ಲಿ ತಲೆಯಿಟ್ಟುಕೊಂಡು ಕಡೆಯುಸಿರನ್ನು ಎಳೆದನಂತೆ!

ಕನಕದಾಸನು ಮಹಾ ವಿದ್ವಾಂಸನಲ್ಲದಿದ್ದರೂ ತುಂಬ ಜಾಣನಾಗಿದ್ದ, ಜ್ಞಾನಿಯಾಗಿದ್ದನೆಂದು ತೋರುತ್ತದೆ. ಆತನ ಅಪಾರವಾದ ಜ್ಞಾನ, ಅಸಾಧಾರಣವಾದ ಬುದ್ಧಿಶಕ್ತಿಗಳನ್ನು ಎತ್ತಿ ತೋರಿಸುವ ಹಲವು ಪ್ರಸಂಗಗಳು ದಂತಕಥೆಗಳಂತೆ ನಮ್ಮ ಜನರ ಬಾಯಲ್ಲಿ ಹರಿದುಬಂದಿವೆ. ವ್ಯಾಸರಾಯನು

ಶೂದ್ರನಾದ ಕನಕನಿಗಿತ್ತ ಸಲಿಗೆಯನ್ನೂ ಅವನ ಕೃತಿಗಳಿಗಿತ್ತ ಮನ್ನಣೆಯನ್ನೂ ಕಂಡು ಸಂಪ್ರದಾಯವಾದಿಗಳಾದ ಬ್ರಾಹ್ಮಣರು ಆಕ್ಷೇಪಿಸಿದರಂತೆ! ವ್ಯಾಸರಾಯನು ಅವರ ಅಜ್ಞಾನವನ್ನು ಹೋಗಲಾಡಿಸಿ, ಕನಕನ ಯೋಗ್ಯತೆಯನ್ನು ಸ್ಥಾಪಿಸಲು ಬಗೆದು, ಒಂದು ದಿನ ವಿದ್ವದ್ಗೋಷ್ಠಿಯಲ್ಲಿ ಮೋಕ್ಷಕ್ಕೆ ಯಾರು ಅರ್ಹರೆಂಬ ಪ್ರಶ್ನೆಯನ್ನು ಎತ್ತಿದನಂತೆ! ತಾವು ಅರ್ಹರೆಂದು ಹೇಳುವ ದಿಟ್ಟತನ ಯಾರಿಗೂ ಇಲ್ಲದಾಯಿತು. ಕನಕನ ಸರದಿ ಬಂದಿತು. ಆತ ಅಲ್ಲಿ ನೆರದವರಾರಿಗೂ ಮೋಕ್ಷಕ್ಕೆ ಅರ್ಹತೆಯಿಲ್ಲವೆಂದ. ಸ್ವತಃ ವ್ಯಾಸರಾಯನಿಗೂ ಅದು ಸಂದೇಹ. ಆದರೆ 'ನಾನು ಹೋದರೆ ಹೋದೇನು' ಎಂದ ಆತ. ನೆರೆದಿದ್ದವರೆಲ್ಲ ಇದನ್ನು ಕೇಳಿ ಕೆರಳಿದರು. ಕನಕ ಶಾಂತನಾಗಿ ಹೇಳಿದ-"ಅಹುದು, 'ನಾನು' ಎಂಬುದು ಹೋದವನಿಗೆ ಮಾತ್ರ ಮೋಕ್ಷ" ಎಂದು. ಇದನ್ನು ಕೇಳಿ ಹುಯಿಲೆಬ್ಬಿಸಿದ ಪಂಡಿತರೆಲ್ಲ ತಣ್ಣಗಾದರು. ಮತ್ತೊಂದು ದಿನ ವ್ಯಾಸರಾಯನು ಶಿಷ್ಯರನ್ನೆಲ್ಲಾ ಕರೆದು, ಯಾರೂ ಇಲ್ಲದೆಡೆ ತಿನ್ನುವಂತೆ ಹೇಳಿ ಒಬ್ಬೊಬ್ಬರಿಗೂ ಒಂದು ಬಾಳೆಯ ಹಣ್ಣು ಕೊಟ್ಟ. ಎಲ್ಲರೂ ತಮ ತಮಗೆ ತೋರಿದ ರೀತಿಯಲ್ಲಿ ಅದನ್ನು ಗೋಪ್ಯವಾಗಿ ತಿಂದು ಬಂದರು. ಕನಕನು ಮಾತ್ರ ಹಣ್ಣಿನೊಡನೆ ಹಿಂದಕ್ಕೆ ಬಂದನು. 'ದೇವರಿಲ್ಲದ ಸ್ಥಳವಿಲ್ಲ; ಯಾರು ಇಲ್ಲದ ಸ್ಥಳವೇ ಇಲ್ಲ' ಎಂದು ಹೇಳಿದ. ಇಂತಹ ಸೂಕ್ಷ್ಮ ಬುದ್ಧಿಯನ್ನು ಮೇಲಿಂದ ಮೇಲೆ ಮೆರೆದುದರಿಂದ ಆತನು ಸರ್ವಮಾನ್ಯನಾದ.

ಕನಕನು ಹಲವು ಪವಾಡಗಳನ್ನು ಮೆರೆದಂತೆ ತಿಳಿದುಬರುತ್ತದೆ. ಒಮ್ಮೆ ಆತನು ಉಡುಪಿಯ ಶ್ರೀ ಕೃಷ್ಣನನ್ನು ಸಂದರ್ಶಿಸಲೆಂದು ಗುಡಿಗೆ ಹೋದನಂತೆ! ಅಲ್ಲಿನ ಅರ್ಚಕರು ಶೂದ್ರನಾದ ಕನಕನಿಗೆ ಅದಕ್ಕೆ ತಕ್ಕ ಅವಕಾಶವನ್ನು ಕಲ್ಪಿಸಿಕೊಡಲಿಲ್ಲ. ಆಗ ಅಲ್ಲಿನ ವಿಗ್ರಹ ಕನಕನು ನಿಂತಿದ್ದ ದಿಕ್ಕಿಗೇ ತಿರುಗಿಕೊಂಡಿತಂತೆ! ಅಲ್ಲಿನ ಗೋಡೆಯಲ್ಲಿ ಒಂದು ಕಿಂಡಿ ಬಿದ್ದಿತು ಅದೇ 'ಕನಕನ ಕಿಂಡಿ' ಯೆಂಬ ಹೆಸರಿನಿಂದ ಈಗಲೂ ಪ್ರಸಿದ್ಧವಾಗಿದೆ. ಇಂತಹುದೇ ಇನ್ನೂ ಅನೇಕ ಪವಾಡಗಳು ಆತನಿಗೆ ಆರೋಪಿತವಾಗಿವೆ. ಇಂತಹ ಅಲೌಕಿಕ ಶಕ್ತಿಯನ್ನು ಮೆರೆದುದರಿಂದಲೋ ಏನೋ ಆತನನ್ನು ಯಮಧರ್ಮನ ಅವತಾರವೆಂದು ಕರೆದು ಗೌರವಿಸಿದ್ದಾರೆ.

ಕನಕದಾಸನ ಕಾವ್ಯಗಳಲ್ಲಿ 'ಮೋಹನ ತರಂಗಿಣಿ'ಯು ಸುಮಾರು ೨೭೦೦ ಪದ್ಯಗಳನ್ನು ಒಳಗೊಂಡ ಸಾಂಗತ್ಯಗ್ರಂಥ. ಉಳಿದ ಆತನ ಮೂರು ಗ್ರಂಥಗಳು ಭಾಮಿನಿ ಷಟ್ಪದಿಯಲ್ಲಿವೆ. ಮೋಹನ ತರಂಗಿಣಿಗೆ 'ಕೃಷ್ಣ ಚರಿತೆ' ಯೆಂಬ ಮತ್ತೊಂದು ಹೆಸರೂ ಉಂಟು. ಶಿವನ ಹಣೆಗಣ್ಣಿನಿಂದ ಕಾಮದಹನ, ಮನ್ಮಥನ ಪುನರ್ಜನನ, ಶಂಬರಾಸುರನ ವಧೆ, ಉಷಾ–ಅನಿರುದ್ಧರ ಪ್ರೇಮಲೀಲೆ, ಬಾಣಾಸುರ ವಿಜಯ–ಇವು ಈ ಕಾವ್ಯದ ಕಥಾವಸ್ತು. ಈ ಗ್ರಂಥದ ಆರಂಭದಲ್ಲಿ ಕವಿಯು 'ಸಾತ್ವಿಕೋಲ್ಲಾಸ ಶ್ರೀ ರಾಮಾನುಜಮುನಿ ಶರಣು' ಎಂದು ರಾಮಾನುಜ ಮುನಿಗಳನ್ನು ಸ್ತುತಿಸಿ, ನಂತರ ತಾತಾಚಾರ್ಯರನ್ನು ಸ್ತೋತ್ರ ಮಾಡಿದ್ದಾನೆ; ಅಲ್ಲದೆ ಈತನು ಶ್ರೀವೈಷ್ಣವದ ಪದ್ಧತಿಯಂತೆ ಹಲವು ವರ್ಣನೆಗಳನ್ನು ತಂದಿದ್ದಾನೆ. ಇದರಿಂದ ಈತನು 'ಮೋಹನ ತರಂಗಿಣಿ' ಯನ್ನು ಬರೆದ ಕಾಲಕ್ಕೆ ಶ್ರೀ ವೈಷ್ಣವ ಮತದ ಅನುಯಾಯಿಯಾಗಿದ್ದರೂ ಇದ್ದಿರಬಹುದು. ಈತನು ಶ್ರೀ ವೈಷ್ಣವರ ಪ್ರಭಾವಕ್ಕೆ ಕೆಲವು ಕಾಲವಾದರೂ ಒಳಗಾಗಿದ್ದನೆಂಬುದು ನಿರ್ವಿವಾದವೆಂದು ಹೇಳಬಹುದು. ಕವಿಯು ತನ್ನ ಈ ಕಾವ್ಯವು 'ಹರಿಶರಣರ ಪೆರ್ಚು, ಬುಧ ಜನರಿಗೆ ಮೆಚ್ಚು, ದುರಿತಾಟವಿಗೆ ಕಾಳ್ಕಿಚ್ಚು, ವಿರಹಿಗಳಿಗೆ ಮಚ್ಚು, ಕೇಳ್ವರಿಗಿದು ತನಿಬೆಲ್ಲದಚ್ಚು' ॥ ಎಂದು ಹೇಳಿಕೊಂಡಿರುವುದು ಬಹುಮಟ್ಟಿಗೆ ಸಾರ್ಥಕವಾಗಿದೆ. ಕವಿಯು ತನ್ನ ಕಾವ್ಯಕ್ಕೆ ಮಹಾಕಾವ್ಯದ ಪಟ್ಟವನ್ನು ಗಳಿಸಿಕೊಡಲೆಂದೊ, ಏನೋ, ಸಂಪ್ರದಾಯದ ಹದಿನೆಂಟು ವರ್ಣನೆಗಳನ್ನೂ ಬಳಸಹೊರಟಿದ್ದಾನೆ. ಇದರಿಂದ ಕಥೆಯ ಓಟಕ್ಕೆ ಸ್ವಲ್ಪಮಟ್ಟಿಗೆ ಭಂಗಬಂದಂತಾಗಿ, ವರ್ಣನೆಯು ಸ್ವಲ್ಪ ಅತಿಯಾಯಿತೇನೋ ಎನ್ನಿಸುತ್ತದೆ. ಆದರೆ ವರ್ಣನೆಗಳಲ್ಲಿ ಸಹಜತೆಯಿದೆ. ಸುಂದರವಾದ ಕಲ್ಪನಾವಿಲಾಸವಿದೆ. ಅಚ್ಚಕನ್ನಡ ಶೈಲಿಯಿಂದ ಕೂಡಿದ ಆತನ ಸಾಂಗತ್ಯದ ಬಂಧ ಬಂಧುರವಾಗಿದೆ. ಈ ಸೂರ್ಯಾಸ್ತದ ವರ್ಣನೆಯನ್ನು ನೋಡಿ, 'ಅರೆಯಿಟ್ಟ ಖಳರ ಖಂಡಿಸಿ, ರಕುತವ ಕೆಂ | ದೊರೆಯೊಳು ತೊಳೆದು ಚಕ್ರವನು | ಒರೆಯೊಳು ಕೃಷ್ಣ ಬೈಚಿಡುವಂತೆ ಪಡುವೆಟ್ಟ | ಮರೆಯೊಳು ರವಿ ಮುಳುಗಿದನು.' ಇಂತಹ ವರ್ಣನೆಗಳನ್ನು ಮತ್ತೆ ಮತ್ತೆ, ಮೇಲಿಂದ ಮೇಲೆ ಕಂಡಾಗ ಈ ಗ್ರಂಥಕ್ಕೆ 'ಮೋಹನ ತರಂಗಿಣಿ' ಎಂದು ನಾಮಕರಣ

ಮಾಡಿರುವುದು ಸರಿ ಎನ್ನಿಸುತ್ತದೆ. ಕವಿಯು ಇದನ್ನು 'ಕೃಷ್ಣ ಚರಿತ'ವೆಂದು ಕರೆದಿರುವುದೂ ಒಂದು ವಿಶೇಷಾರ್ಥವನ್ನು ಸೂಚಿಸುತ್ತಿರುವಂತೆ ಭಾಸವಾಗುತ್ತದೆ. ಈತನ ವರ್ಣನೆಗಳಲ್ಲಿ ಸಮಕಾಲಿಕ ಜೀವನದ ಚಿತ್ರಣವಿರುವಂತೆ ಕಂಡುಬರುವುದರಿಂದ ವಿಜಯನಗರದ ಅರಸನಾದ ಕೃಷ್ಣರಾಯನನ್ನು ಕವಿಯು ಸೂಚಿಸುತ್ತಿರಬಹುದೋ ಏನೋ! ಆದರೆ ಕಥೆಯಲ್ಲಿ ಪುರಾಣಸಹಜವಾದ ಹಲವು ಅದ್ಭುತ ಘಟನೆಗಳೂ ಸನ್ನಿವೇಶಗಳೂ ತುಂಬಿರುವುದರಿಂದ ಇಲ್ಲಿನ ಪಾತ್ರಗಳಲ್ಲಿ ಮಾನವೀಯತೆಗೆ ಸ್ವಲ್ಪ ಮಟ್ಟಿಗೆ ಲೋಪ ಬಂದಿದೆ. ಕವಿಯ ಹೆಗ್ಗುರಿ ಭಕ್ತಿಯಾದರೂ ಕಾವ್ಯ ಸರಸವಾಗಿದೆ. ಕಾವ್ಯದ ಕೊನೆಯಲ್ಲಿ ಬರುವ ಬಾಣಾಸುರ ಶ್ರೀಕೃಷ್ಣರ ಯುದ್ಧದ ಸಮಯದಲ್ಲಿ ಹರಿ-ಹರ ಸಮಾನತೆಯನ್ನು ಎತ್ತಿ ಹಿಡಿದಿರುವುದು ಕವಿಯ ಉದಾತ್ತದೃಷ್ಟಿಗೆ ಉದಾಹರಣೆಯಂತಿದೆ. ಒಟ್ಟಿನಲ್ಲಿ ಈ ಕಾವ್ಯವು ಮಹಾ ಕಾವ್ಯವಲ್ಲದಿದ್ದರೂ, ಕವಿಯ ಮಾತಿನಲ್ಲೇ ಹೇಳುವುದಾದರೆ ಇದೊಂದು 'ಮೇಲ್ಗತೆ.'

ಕನಕದಾಸನ 'ರಾಮಧಾನ್ಯ ಚರಿತ್ರೆ' ಚಮತ್ಕಾರಯುಕ್ತವಾದ ಒಂದು ಖಂಡಕಾವ್ಯ. ಇದರಲ್ಲಿ ರಾಗಿಯ ಹಿರಿಮೆಯನ್ನು ಸಂಸ್ಥಾಪಿಸಹೊರಟಿರುವ ೧೫೬ ಪದ್ಯಗಳಿವೆ. ರಾವಣವಧಾನಂತರ ಶ್ರೀರಾಮನು ಋಷಿಗಳ ಆಶ್ರಮಕ್ಕೆ ಬಂದನಂತೆ! ಋಷಿಗಳು ಆತನಿಗೆ ಹಲವು ಬಗೆಯ ಭಕ್ಷ್ಯಗಳನ್ನು ತಿನ್ನಲು ಕೊಟ್ಟರಂತೆ! ಅವುಗಳ ರುಚಿಯನ್ನು ನೋಡಿದ ಶ್ರೀರಾಮನು ಅವುಗಳನ್ನು ತಯಾರಿಸಲು ಬಳಸಿದ ಧಾನ್ಯಗಳನ್ನು ತರಿಸಿದನಂತೆ! ನರೆದಲೆಗ (ರಾಗಿ), ನೆಲ್ಲು, ಹಾರಕ, ಜೋಳ, ಸಾಮೆ, ನವಣೆ, ಗೋಧಿ,ಬರಗು ಜೋಳ- ಎಂಬ ನವಧಾನ್ಯಗಳಲ್ಲಿ ಯಾವುದು ಶ್ರೇಷ್ಠವೆಂಬ ಜಿಜ್ಞಾಸೆ ನಡೆಯಿತು. ಒಬ್ಬೊಬ್ಬ ಋಷಿ ಒಂದೊಂದು ಧಾನ್ಯವನ್ನು ಹೊಗಳಿದರು. ಆಗ ನರೆದಲೆಗನಿಗೂ ವ್ರೀಹಿ (ಅಕ್ಕಿ)ಗೂ ಶ್ರೀರಾಮನ ಇದಿರಿನಲ್ಲೇ ವಾಗ್ವಾದ ನಡೆಯಿತು. ತಾನು ಯಜ್ಞಯಾಗಾದಿಗಳಲ್ಲೂ, ಉಪನಯನಾದಿ ಮಂಗಳ ಕಾರ್ಯಗಳಲ್ಲೂ ಅನಿವಾರ್ಯ; ದೇವರ ಪೂಜೆಗೆ ಮಂತ್ರಾಕ್ಷತೆಯಾಗಲು ತಾನು ಬೇಕೇಬೇಕೆಂದು ಅಕ್ಕಿಯ ಅಹಂಕಾರ. ಅಷ್ಟೇ ಅಲ್ಲ;

ಜನಪರಿಗೆ ಶಿಶುಗಳಿಗೆ ಬಾಂಧವ। ಜನರೆಡೆಗೆ ಬ್ರಾಹ್ಮರ ಸಮಾರಾ

ಧನೆಗೆ ವಿದ್ಯಾರಂಭ ಕಲಿಸುವ ಸಕಲ ಭೂಸುರರ
ಮನೆಗಳಲಿ ಹರಿದಿವಸದೌಪಾ। ಸನಗಳಲಿ ತಾ ಯೋಗ್ಯನಹುದೆಂ
ದೆನಿಸಿಕೊಂಬೆನು ನೀನಯೋಗ್ಯನು ಭ್ರಷ್ಟ ತೊಲಗೆಂದ ॥

ವ್ರೀಹಿಯ ಭರ್ತ್ಸನೆಯಿಂದ ನರೆದಲೆಗನಿಗೂ ರೇಗಿತು. ವ್ರೀಹಿಯನ್ನು ತೆಗಳುತ್ತಾ :

ಸತ್ವಹೀನರ ಬಡವರನು ಕ। ಣ್ಣೆತ್ತಿ ನೋಡೆ ಧನಾಢ್ಯರನು ಬೆಂ
ಬತ್ತಿ ನಡೆವೆಯುಪೇಕ್ಷೆ ನಿನ್ನದು ಹೇಳಲೇನದನು
ಹೆತ್ತ ಬಾಣಂತಿಯರಿಗೆ ರೋಗಿಗೆ। ಪಥ್ಯಪಾನದಿ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ ॥

'ಎಸೆವ ವಿಪ್ರರ ಫಾಲದಲಿ ರಂ। ಜಿಸುವ ಗಂಧಾಕ್ಷತೆಯಹೆನು' ಎಂದು ವ್ರೀಹಿ ಜಂಭಕೊಚ್ಚಿಕೊಂಡತೆ, ನರೆದಲೆಗ–'ಸತ್ತವರ ಪ್ರತಿಬಿಂಬರೂಪನು' ಎಂದು ಅದನ್ನು ಹೀಯಾಳಿಸಿದ. ತನ್ನ ಇದಿರಿನಲ್ಲಿಯೇ ಮರ್ಯಾದೆ ಮೀರಿ ಮಾತನಾಡಿದ ಆ ಧಾನ್ಯಗಳನ್ನು ಆರು ತಿಂಗಳು ಸೆರೆಯಲ್ಲಿಡುವಂತೆ ಶ್ರೀರಾಮನು ಆಜ್ಞಾಪಿಸಿದನು. ಗಡುವು ತೀರಿದ ಮೇಲೆ ಗೌತಮನು ಅವೆರಡು ಧಾನ್ಯಗಳನ್ನೂ ಶ್ರೀರಾಮನ ಆಸ್ಥಾನಕ್ಕೆ ಕರೆದೊಯ್ಯುತ್ತಾನೆ. ದೇವೇಂದ್ರನು ಆ ಎರಡು ಧಾನ್ಯಗಳನ್ನೂ ವಿಮರ್ಶಿಸಿ, ನರೆದಲಗ ಸಾರಹೃದಯವೆಂದೂ, ವ್ರೀಹಿ ನಿಸ್ಸಾರವೆಂದೂ ತೀರ್ಮಾನ ಹೇಳಿದ. ಶ್ರೀರಾಮನು ನರೆದಲೆಗನನ್ನು ಹತ್ತಿರಕ್ಕೆ ಕರೆದು ಅದಕ್ಕೆ 'ರಾಘವ' ಎಂದು ಹೆಸರುಕೊಟ್ಟನು. ಅದೇ ಈಗ 'ರಾಗಿ' ಯೆಂದಾಗಿದೆ.

'ರಾಮಧಾನ್ಯ ಚರಿತ್ರೆ' ಮನೋಹರವಾದ ಒಂದು ವಿಡಂಬನಕಾವ್ಯ. ಉತ್ತಮ ಜಾತಿಯವರೆನಿಸಿಕೊಂಡವರು, ಶ್ರೀಮಂತರೆನಿಸಿಕೊಂಡವರೂ, ಅಂತಸ್ಸತ್ವವಿಲ್ಲದಿದ್ದರೂ ಅಹಂಕಾರಿಗಳಾಗಿ, ಬಹಿರಾಡಂಬರದಿಂದ ಬಾಳ ತಕ್ಕವರು–ದೈವಕ್ಕೆ ದೂರರಾದವರು ಎಂಬ ತತ್ವವನ್ನು ಕವಿ ಮಾರ್ಮಿಕ ವಾಗಿ ಚಿತ್ರಿಸಿದ್ದಾನೆ, ಇಲ್ಲಿ.

ಕವಿಯ ಕಾವ್ಯಗಳಲ್ಲಿ 'ನಳಚರಿತ್ರೆ' ಯು ಅತ್ಯಂತ ರಮ್ಯವಾದ ಒಂದು ಕಥನಕಾವ್ಯ. ಸಂಸ್ಕೃತ ಮಹಾಭಾರತದಲ್ಲಿ ಇಪ್ಪತ್ತೆಂಟು ಅಧ್ಯಾಯ ಗಳಷ್ಟು ವಿಸ್ತಾರವಾಗಿರುವ ನಳೋಪಾಖ್ಯಾನದಿಂದ ಕಥಾವಸ್ತುವನ್ನು ಎತ್ತಿ

ಕೊಂಡು, ಭಾಮಿನಿ ಷಟ್ಪದಿಯ ಸುಮಾರು ೪೮೦ ಪದ್ಯಗಳನ್ನು ಒಳಗೊಂಡ ಒಂಬತ್ತು ಸಂಧಿಗಳಲ್ಲಿ ಇದನ್ನು ಸಂಗ್ರಹವಾಗಿ ಸಾರವತ್ತಾಗಿ ನಿರೂಪಿಸಿದ್ದಾನೆ, ಕವಿ. ಅತ್ಯಂತ ಜನಪ್ರಿಯವಾಗಿರುವ ಕನ್ನಡಕಾವ್ಯಗಳಲ್ಲಿ ನಳ ಚರಿತ್ರೆಯೂ ಒಂದು. ಔಚಿತ್ಯದ ಎಲ್ಲೆಯನ್ನು ಎಳ್ಳಷ್ಟೂ ಮೀರದೆ, ಹಿತಮಿತವಾದ ವರ್ಣನೆಗಳೊಡನೆ, ಮೃದುಪದಗತಿಯಲ್ಲಿ, ರಸವತ್ತಾಗಿ ಹರಿಯುತ್ತದೆ, ಇಲ್ಲಿನ ಕಥೆ. ಇದರಲ್ಲಿ ಬರುವ ಮುಖ್ಯ ಪಾತ್ರಗಳಾದ ನಳ, ದಮಯಂತಿಯರ ಚಿತ್ರಣ ಸಜೀವವಾಗಿ, ಉದಾತ್ತವಾಗಿದೆ. ಮಾನವೀಯತೆಯ ವಿವಿಧ ಭಾವಗಳನ್ನು ಕವಿಯು ಹೃದಯಸ್ಪರ್ಶಿಯಾಗಿ ನಿರೂಪಿಸಿದ್ದಾನೆ. ರಾಜ್ಯಭ್ರಷ್ಟನಾದ ನಳಮಹಾರಾಜನು, ನಿದ್ರಿಸುತ್ತಿದ್ದ ತನ್ನ ಮಡದಿಯನ್ನು ನಟ್ಟಡವಿಯಲ್ಲಿ ಬಿಟ್ಟು ಹೊರಟುಹೋಗುತ್ತಾನೆ. ಆದರೆ ಮರುಕ್ಷಣದಲ್ಲಿಯೇ ಆತನ ಮನಸ್ಸು ಪಶ್ಚಾತ್ತಾಪದಿಂದ ಮರುಗುತ್ತದೆ.

ವನಿತೆ ಮಲಗಿಹಳೊ, ಅಧೈರ್ಯದಿ । ನೆನೆವಳೊ ದೈವವನು ಮನದಲಿ ।
ಕನಸ ಕಂಡೇಳುವಳೊ ಕಾಣದೆ ಹಲವ ಹಂಬಲಿಸಿ ॥
ಕನಲಿ ವಿಧಿಯನು ಬೈವಳೊ, ಕಂ । ಬನಿಯ ಸುರಿವಳೊ ಶೋಕದಲಿ ನಿಜ
ತನುವ ಬಿಡುವಳೊ ಕಾಂತೆಯೆಂತಿಹಳೆನುತ ಬಿಸುಸುಯ್ದು ॥
ಸುತರ ಪರರಿಡೆಗಿತ್ತು, ನಂಬಿದ । ಸತಿಯ ತಂದಡವಿಯಲಿ ಮಲಗಿಸಿ ।
ಮತಿವಿಕಳನಾದೆನು ಪುರಾಕೃತ ಕರ್ಮಫಲವೆನಿಸೆ ॥
ಕ್ಷಿತಿಯೊಳಾರುಂಟೆನ್ನವೊಲ್ ನಿಜ ಸತಿಗೆ ತಪ್ಪಿದ ಬಾಹಿರರು ಎಂ ।
ದತಿಶಯದ ಶೋಕದಲಿ ನಡೆದನು ಶಿವಶಿವಾಯೆನುತ ॥

ಹೆಂಡತಿಯನ್ನು ಅಗಲಿದ ಪಶ್ಚಾತ್ತಾಪದಿಂದ ಸಂಕಟಪಡುತ್ತಿದ್ದರೂ ನಳನು ಬೆಂಕಿಯಲ್ಲಿ ಬೇಯುತ್ತಿದ್ದ ಕಾರ್ಕೋಟಕನನ್ನು ಉದ್ಧರಿಸಿದ. ಈ ಉಪಕಾರಕ್ಕೆ ಪ್ರತಿಯಾಗಿ ಅದು ಅವನನ್ನು ಕಚ್ಚಿತು. ಭಯಂಕರವಾದ ಅದರ ವಿಷವೇರಿ ರಾಜನು ಕುರೂಪಿಯಾಗಿ ಹೋದನು ಅದರ ವರ್ಣನೆ ಇದು—

ದೊಡ್ಡ ಹೊಟ್ಟೆಯ, ಗೂನು ಬೆನ್ನಿನ, ಅಡ್ಡ ಮೋರೆಯ, ಗಂಟುಮೂಗಿನ।
ದೊಡ್ಡ ಕೈಕಾಲುಗಳ, ಉದುರಿದ ರೋಮ ಮೀಸೆಗಳ ॥
ಜಿಡ್ಡು ದೇಹದ, ಗುಜ್ಜು ಗೊರಲಿನ। ಗಿಡ್ಡು ರೂಪಿನ, ಹರಕುಗಡ್ಡದ
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ॥

ಸಾಮಾನ್ಯವಾಗಿ ಈ ಪದ್ಯವನ್ನು ಓದಿ ನಗದ ಕನ್ನಡ ವಿದ್ಯಾರ್ಥಿಯೇ ಇಲ್ಲವೆಂದು ಹೇಳಬಹುದು. ಮನ್ಮಥನಂತಿದ್ದ ನಳ ಮಹಾರಾಜನು ಈ ವಿಕಾರರೂಪವನ್ನು ತಾಳಿದುದಕ್ಕಾಗಿ ಮನಸ್ಸು ಮಿಡುಕುವುದಾದರೂ— ಕವಿಯು 'ತೋರ ಮಾಣಿಕವೆಂದು ಪಿಡಿದರೆ ಘೋರ ಕೆಂಡವಿದಾಯ್ತು' ಎಂದು ಹೇಳಿ ನಮ್ಮ ಕರುಣೆಯನ್ನು ಹಿಂಡುವನಾದರೂ—ಆತನ ವರ್ಣನೆಯಲ್ಲಿರುವ ರೂಪು ಕಣ್ಣಿಗೆ ಕಟ್ಟಿದಂತಾಗಿ, ನಮ್ಮ ಅರಿವಿಲ್ಲದಂತೆಯೇ ನಮ್ಮ ತುಟಿಗಳಲ್ಲಿ ಬಿರಿನಗು ತಾಂಡವವಾಡುತ್ತದೆ.

ಗಂಡನಿಂದ ಅಗಲಿದ ದಮಯಂತಿ ಹಲವಾರು ಸಂಕಟಗಳನ್ನು ಅನುಭವಿಸಿ, ಕಟ್ಟಕಡೆಗೆ ಚೇದಿ ಪಟ್ಟಣಕ್ಕೆ ಬರುತ್ತಾಳೆ. ಕವಿಯು ಆಕೆಯನ್ನು ವರ್ಣಿಸುತ್ತಾನೆ.

ನುಡಿಗೆ ಶುಕ ಪಿಕ ನಲಿಯೆ ಮಿಗೆ ಸೆಳೆ । ನಡು ಬಳುಕೆ ವೃತ್ತಸ್ತನಕೆ ಸೋ ।
ಮ್ಮಡಿಯ ಭಾರಕೆ ಕೊರಳು ಕೊಂಕಲು ಮೆಲ್ಲಡಿಯನಿಡುತ
ಕುಡಿತೆಗಂಗಳ ನೋಟ ಕಾಮ್ಮಗಿ । ಲೊಡೆದು ಮಿಂಚುವ ಮಿಂಚಿನಂದದಿ ।
ಸಡಗರದಿ ಬರುತಿರ್ದಳಂಗನೆ ಹೊಳಲ ಬೀದಿಯಲಿ ॥

ಕವಿಯ ಇತರ ಕಾವ್ಯಗಳಂತೆ ನಳಚರಿತ್ರೆಯಲ್ಲಿಯೂ ತಿಳಿಯಾದ ಅಚ್ಚಗನ್ನಡ ಶೈಲಿ ಕಂಡುಬರುತ್ತದೆ. ಸುಪ್ರಸಿದ್ಧವಾದ, ಹೃದಯಂಗಮವಾದ, ಆದರ್ಶ ಪ್ರೇಮದ ಕಥೆ; ತಿಳಿಯಾದ, ಸರಳವಾದ, ಸುಲಭವಾದ ನಿರೂಪಣೆ; ಹಿತಮಿತವಾದ, ರಸಸ್ಯಂದಿಯಾದ ವರ್ಣನೆ—ಇವುಗಳಿಂದ ಕೂಡಿದ ನಳ ಚರಿತ್ರೆ ಒಂದು ರಸಪಾಕದಂತಿದೆ. ಈ ಕಾವ್ಯದಲ್ಲಿ ಕುಮಾರವ್ಯಾಸನ ಛಾಯೆ ಅಲ್ಲಲ್ಲಿ ಸಾಕಷ್ಟು ಕಂಡುಬರುತ್ತದೆ. ಇದು ಕವಿಯ ರಸಜ್ಞತೆಗೆ, ಆತನ ಅಭಿರುಚಿಗೆ ಸಾಕ್ಷಿಯಾಗಿದೆಯೇ ಹೊರತು ಇದರಲ್ಲಿ ದೋಷವೇನೂ ಇಲ್ಲ.

ಕನಕನ 'ಹರಿಭಕ್ತಿಸಾರ' ನಳಚರಿತ್ರೆಯಂತೆಯೇ ಅತ್ಯಂತ ಜನಪ್ರಿಯವಾದ, ಲಲಿತ ಸುಲಭ ಸರಳ ಸುಂದರವಾದ ಪುಟ್ಟ ಕಾವ್ಯ. ನೀತಿ ಭಕ್ತಿ ವೈರಾಗ್ಯಗಳನ್ನು ಬೋಧಿಸುವ ೧೧೦ ಪದ್ಯಗಳ ಈ ಗ್ರಂಥದಲ್ಲಿ ಪ್ರತಿಯೊಂದು ಪದ್ಯವೂ 'ರಕ್ಷಿಸು ನಮ್ಮನನವರತ' ಎಂದು ಕೊನೆಯಾಗು

ತ್ತದೆ. ಕನ್ನಡ ಮಕ್ಕಳು ಕಣ್ದೆರೆದು ಕಾವ್ಯಾಭ್ಯಾಸಕ್ಕೆ ತೊಡಗುವ ಮುನ್ನ ಇದರ ಪರಿಚಯವನ್ನು ಪಡದೇ ಇರುತ್ತಾರೆಯೆಂದು ಹೇಳಬಹುದು. ಇಲ್ಲಿನ ಪ್ರತಿಯೊಂದು·ಪದ್ಯವೂ ಭಕ್ತಿಮುಕ್ತಾಫಲ. ಕವಿತೆಯು ಭಕ್ತಿಭಾವ ಭರಿತವಾಗಿದ್ದರೂ ಎಷ್ಟು ತಿಳಿಯಾಗಿದೆ, ನೋಡಿ.

ದೀನ ನಾನು, ಸಮಸ್ತಲೊಕಕೆ | ದಾನಿ ನೀನು, ವಿಚಾರಿಸಲು ಮತಿ
ಹೀನ ನಾನು, ಮಹಾಮಹಿಮ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ? ಸೆರೆಸು | ಜ್ಞಾನ ಮೂರುತಿ ನೀನು, ನಿನ್ನನ
ಮಾನನುಂಟೆ ? ದೇವ ರಕ್ಷಿಸು ನಮ್ಮನನವರತ ||

ಉನ್ನತವಾದ ಭಾವಗಳನ್ನು ಆತನು ಎಷ್ಟು ಸರಳವಾಗಿ, ಲೀಲಾಜಾಲ ವಾಗಿ ಹೇಳಬಲ್ಲ !

ಎಂಜಲೆಂಜಲು ಎಂಬರಾ ನುಡಿ | ಎಂಜಲಲ್ಲವೆ ? ವಾರಿ ಜಲಚರ
ದೆಂಜಲಲ್ಲವೆ ? ಹಾಲು ಕರುವಿನ ಎಂಜಲೆನಿಸಿರದೆ ?
ಎಂಜಲಿಲ್ಲಿಯುದೆಲ್ಲಿಯುಂ ಪರ | ರೆಂಜಲಲ್ಲದೆ ಬೇರೆ ಭಾವಿಸ
ಲೆಂಜಲುಂಟೇ ? ದೇವ ರಕ್ಷಿಸು ನಮ್ಮನನವರತ ||

ಈ ಮಾತುಗಳು ಧ್ವನಿಪೂರ್ಣವಾಗಿಯೂ ಇರುವಂತೆ ತೋರುತ್ತದೆ. ಯಾಗು, ಕವಿಯ ಯಾವ ಕಾವ್ಯ ಭಾಗವನ್ನು ಪರರ ಎಂಜಲೆಂದು ಜರೆ ದಿದ್ದರೊ !

ಕನಕನು 'ನೃಸಿಂಹಸ್ತವ' ಎಂಬ ೯೭ ಪದ್ಯಗಳ ಪುಟ್ಟ ಸಾಂಗತ್ಯ ಗ್ರಂಥವನ್ನೂ ಬರೆದಿರಬಹುದೆಂದು ಕವಿಚರಿತೆಕಾರರು ಊಹಿಸುತ್ತಾರೆ.

ಕನಕದಾಸನ ಕವಿತಾಶಕ್ತಿ ಸಂಪೂರ್ಣವಾಗಿ ಅರಳಿ ಮಘಮಘಿಸು ವುದು ಆತನ ಕೀರ್ತನೆಗಳಲ್ಲಿ. ಅವುಗಳ ವೈವಿಧ್ಯದಲ್ಲಿ ಪುರಂದರದಾಸನು ಅಗ್ರ ಗಣ್ಯನಾಗಿರುವಂತೆ ಕಾವ್ಯಗುಣದಲ್ಲಿ ಕನಕದಾಸನು ಅಗ್ರಗಣ್ಯ. ಈತನ ಉಪಮಾನ ಉಪಮೇಯಗಳೂ ದೃಷ್ಟಾಂತಗಳೂ ರಮ್ಯವಾಗಿವೆ. ಸಂತ ಕವಿಯಾದ ಕನಕನು ಹಾಡಿರುವ ರಾಗಗಳೂ ಬಳಸಿರುವ ಪದಗಳೂ ರಾಗ ರಸ ರಂಜಿತವಾಗಿ ಹೃದಯಂಗಮವಾಗಿವೆ. ದೈವದತ್ತವಾದ ಪ್ರತಿಭೆಯೊಡನೆ ಆತನಿಗಿದ್ದ ಲೋಕಾನುಭವವೂ ಅಪಾರವಾದುದು. ಜನಸಾಮಾನ್ಯರ ಜೀವನದಂತೆಯೇ ಅವರ ನುಡಿಗಟ್ಟೂ, ಪಾಳೆಯಗಾರನಾಗಿದ್ದ ಕನಕನಿಗೆ

ಚಿರಪರಿಚಿತವಾಗಿದೆ. ಆದ್ದರಿಂದಲೇ ಆತನ ಕಿರುನುಡಿಗಳು ಸತ್ವಯುಕ್ತ ವಾಗಿವೆ. ಅಲ್ಲದೆ ಆತನು ಜನಜೀವನದ ಲೋಪದೋಷಗಳನ್ನು ಕಂಡಾಗ ಕೆರಳಿ ಕೆಂಗೆಂಡವಾಗುತ್ತಾನೆ; ಅವುಗಳನ್ನು ಕಟುವಾಗಿ ಟೀಕಿಸುತ್ತಾನೆ. ಆತನ ಮಾತುಗಳು ಅರಳು ಹುರಿದಂತೆ ಪಟ ಪಟ ಸಿಡಿಯುತ್ತವೆ; ಅವುಗಳಲ್ಲಿ ಕಾವುಂಟು.

ನಮ್ಮ ಸಮಾಜದ ಹಲವು ಕುಂದುಕೊರತೆಗಳಲ್ಲಿ ಜಾತೀಯತೆ ಅಗ್ರ ಗಣ್ಯವಾದುದು. ಇದರ ತೀವ್ರತೆಯನ್ನು ಕನಕನೂ ಅನುಭವಿಸಿದ್ದನೆಂದು ತೋರುತ್ತದೆ. ಆದ್ದರಿಂದಲೇ ಆತನು ಕಡ್ಡಿ ಮುರಿದು ಕೈಗೆ ಕೊಟ್ಟಂತೆ ನಿಷ್ಠುರ ಸತ್ಯವನ್ನು ನಮ್ಮ ಮುಂದಿಡುತ್ತಾನೆ—

ಕುಲ ಕುಲ ಕುಲವೆನ್ನುತಿಹರು । ಕುಲ ಯಾವುದು ಸತ್ಯಸುಖವುಳ್ಳ ಜನರಿಗೆ ॥ ಪ ॥ ಕೆಸರೊಳು ತಾವರೆ ಪುಟ್ಟಲು ಅದತಂದು ಬಿಸಜನಾಭನಿ ಗರ್ಪಿಸಲಿಲ್ಲವೆ । ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು ವಸುಧೆಯೊಳಗೆ ಭೂಸುರರುಣಲಿಲ್ಲವೆ ॥ ೧ ॥ ಮೃಗಗಳ ಮೈಯಲ್ಲಿ ಪುಟ್ಟಲು ಕಸ್ತೂರಿ। ತೆಗೆದು ಪೂಸುವರು ದ್ವಿಜರೆಲ್ಲರು ॥ ಒಗೆಯಿಂದ ನಾರಾಯಣನಾವ ಕುಲವಯ್ಯ । ಅಗಜವಲ್ಲಭನಾವ ಕುಲ ಪೇಳಿರಯ್ಯ ॥ ೨ ॥ ಆತ್ಮ ಯಾವ ಕುಲ, ಜೀವ ಯಾವ ಕುಲ । ತತ್ವೇಂದ್ರಿಯಗಳ ಕುಲ ಪೇಳಿರಯ್ಯ । ಆತ್ಮ ಮಹಾತ್ಮನು ನೆಲೆಯಾದಿ ಕೇಶವ । ಆತನೊಲಿದ ಮೇಲೆ ಯಾತರ ಕುಲವಯ್ಯ ॥ ೩ ॥

ಇದೇ ಬಗೆಯಾದ ಖಂಡಿತೋಕ್ತಿ ಕಾಣಬರುತ್ತದೆ 'ಮಗನಿಂದ ಮುಕ್ತಿ' 'ಪುನ್ನಾಮ ನರಕಾತ್ ತ್ರಾಯತೇ ಇತಿ ಪುತ್ರಃ' ಎಂಬ ಮೂಢ ನಂಬಿಕೆ ಯನ್ನು ಖಂಡಿಸುವಲ್ಲಿ—

ಮಗನಿಂದ ಮುಕ್ತಿಯುಂಟೆ ಜಗದೊಳು ॥ ಪ ॥ ನಿಗಮಾಂತಸಾರ ಮುಕ್ತಿಯಲ್ಲದಲೆ ॥ ಅ ॥ ಪ ॥ ತ್ರಿಗುಣರಹಿತ ಪರಮಾತ್ಮನ ಧ್ಯಾನದಿ । ಹಗಲಿರಳು ನಿತ್ಯಾನಂದದಿ । ತೆಗೆದು ಪ್ರಪಂಚ ವಾಸನೆಯ ಸುಟ್ಟವರಿಗೆ। ಮಗ ನಿದ್ದರೇನು ಇಲ್ಲದಿದ್ದರೇನು ॥ ೧ ॥ ಲಲನೆ ಪುರುಷರು ತಮ್ಮ ತಮ್ಮ ಕಾಮದ । ಸಲುವಾಗಿ ಕೂಡೆ ಶೋಣಿತ ಶುಕ್ಲದಿ । ಮಿಳಿತ ಮಾಂಸಪಿಂಡ ತನ್ನ ಪೂರ್ವಗತಿಯಿಂದ । ನೆಲಕೆ ಬೀಳಲು ತಾನು ಸಲಹಿ ರಕ್ಷಿಪುದೆ ॥ ೨ ॥

ಪರಮ ದುಷ್ಟನು ಆಗಿ ಮರೆತು ಸದ್ಧರ್ಮವ ।ಗುರುಹಿರಿಯರ ಸಾಧುಗಳ ನಿಂದಿಸಿ । ಜರೆದನ್ಯಜಾತಿಯ ಪರನಾರಿಯ ಕೂಡಿ । ಹಿರಿಯರ ಜರಿದು ಆ ನರಕಕ್ಕೆ ಬೀಳುವ ॥ ೩ ॥ ಸತ್ಯನೊಬ್ಬ ಮಗ । ಶಾಂತನೊಬ್ಬ ಮಗ ದುರ । ವೃತ್ತಿನಿಗ್ರಹ ಸಮಚಿತ್ತನು । ಉತ್ತಮರೀ ನಾಲ್ಕು ಮಕ್ಕಳಿದ್ದ ಮೇಲೆ । ಹೆತ್ತರೆ ಫಲವೇನು ಹರದಿದ್ದರೇನಯ್ಯ ॥ ೪ ॥ ಸುತರಿಲ್ಲದವರಿಗೆ ಗತಿಯಿಲ್ಲ ವೆಂಬೊಂದು । ಕೃತಕಶಾಸ್ತ್ರ ಲೌಕಿಕಭವಕೆ । ಕ್ಷಿತಿಯೊಳು ಬಿಡದೊಡೆ ಯಾದಿಕೇಶವ ಜಗ । ತ್ಪತಿಯ ಧ್ಯಾನಿಪಗೆ ಸದ್ಗತಿಯಿಲ್ಲದ್ಹೋಗದೊ ॥ ೫ ॥

ಭಗವಂತನ ಅನುಗ್ರಹದಲ್ಲಿ ಅಚಲ ವಿಶ್ವಾಸವನ್ನಿಟ್ಟ ಭಕ್ತಿನಿರ್ಭರತೆ ಯನ್ನು ಸಾರುತ್ತಿರುವ ಕನಕನ ಈ ಭಾವಗೀತೆಯನ್ನು ನೋಡಿ—

ತಲ್ಲಣಿಸದಿರು ಕಂಡ್ಯ ತಾಳು ಮನವೆ । ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ಪ ॥ ಬೆಟ್ಟದಾ ತುದಿಯಲ್ಲಿ ಹುಟ್ಟಿರುವ ವೃಕ್ಷಕ್ಕೆ । ಕಟ್ಟೆ ಯನು ಕಟ್ಟಿ ನೀರೆರೆದವರು ಯಾರೋ । ಪುಟ್ಟಿಸಿದ ಸ್ವಾಮಿ ತಾ ಹೊಣೆ ಗಾರನಾಗಿರಲು । ಕೊಟ್ಟು ರಕ್ಷಿಪನಿದಕೆ ಸಂದೇಹ ಬೇಡ ॥ ೧ ॥ ಅಡವಿಯೊಳ ಗಾಡುವಾ ಮೃಗಪಕ್ಷಿಗಳಿಗೆಲ್ಲ । ಅಡಿಗಡಿಗಾಹಾರವಿತ್ತವರು ಯಾರೋ । ಪಡೆದ ಜನನಿಯ ತೆರದಿ ಸ್ವಾಮಿ ಹೊಣೆಗೀಡಾಗಿ । ಬಿಡದೆ ರಕ್ಷಿಪನಿದಕೆ ಸಂದೇಹಬೇಡ ॥ ೨ ॥ ಕಲ್ಲೊಳಗೆ ಹುಟ್ಟಿ ಕೂಗುವ ಪಕ್ಷಿಗಳಿಗೆಲ್ಲ । ಅಲ್ಲಲ್ಲಿ ಗಾಹಾರವಿತ್ತವರು ಯಾರೋ । ಬಲ್ಲಿದನು ಕಾಗಿನೆಲೆಯಾದಿ ಕೇಶವರಾಯ । ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ೩ ॥

ಕಡೆಯ ಎರಡು ಸಾಲಿನಲ್ಲಿ ಕಾಣಬರುವ ನಿಶ್ಚಲಭಕ್ತಿಗೆ ಉಳಿದ ಸಾಲು ಗಳು ಎಷ್ಟು ಪೋಷಕವಾಗಿವೆ! ಭಕ್ತಿ ಭಾವಗೀತೆಗಳು ಇಲ್ಲಿ ಸಮರಸವಾಗಿ ಬೆರೆತಿವೆ. ಇದೇ ಬಗೆಯಾದ ಕಾವ್ಯಧರ್ಮ ಧರ್ಮಗಳ ಸುಂದರ ಸಮ್ಮೇಳನ ವನ್ನು 'ತನು ನಿನ್ನದು ಜೀವನ ನಿನ್ನದು ಸ್ವಾಮಿ'—ಎಂಬ ಕೀರ್ತನೆ ಯಲ್ಲಿಯೂ ಕಾಣುತ್ತೇವೆ. 'ಕಾಗಿನೆಲೆಯಾದಿ ಕೇಶವರಾಯ ನೀನಲ್ಲದೆ ನರರು ಸ್ವತಂತ್ರರೆ?' ಎಂಬ ಸಿದ್ಧಾಂತವನ್ನು ಕೀರ್ತನೆಯ ಉಳಿದ ಭಾಗವು ಮನೋಹರವಾಗಿ ಪೋಷಿಸುತ್ತದೆ.

ಕವಿ ಕನಕನ ಹಾಡುಗಳಲ್ಲಿ ಸಾಕಷ್ಟು ವ್ಯಂಗ್ಯ, ಉಕ್ತಿಚಾತುರ್ಯವನ್ನು ನಾವು ಕಾಣುತ್ತೇವೆ. ಅಯೋಗ್ಯರ ಸಹವಾಸ ಬೇಡವೆಂದು ಹೇಳುತ್ತಾ

'ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ, ಸುಜ್ಞಾನಿಗಳ ಕೂಡೆ ಜಗಳ ಲೇಸು' ಎಂಬ ಅತನ ಮಾತು ಎಷ್ಟು ಮಾರ್ಮಿಕವಾಗಿದೆ! ಬಾಹ್ಯಾಡಂಬರದ ಪೊಳ್ಳನ್ನು ಸಾರುತ್ತಾ 'ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ?, ಜನ್ಮ ಸಾರ್ಥಕವಿಲ್ಲದವರೆಲ್ಲ ಭಾಗವತರೇ?' ಎಂದು ಪ್ರಶ್ನಿಸಿ ಆತನು ಮತಮತಗಳವರೂ ತೋರುವ ಡಾಂಭಿಕತನವನ್ನು ಬಯಲಿಗೆಳೆಯುತ್ತಾನೆ. ಜನರು ಯಾವ ಸೋಗನ್ನೇ ಹಾಕಲಿ, ಅವರು ಮಾಡುವುದೆಲ್ಲವೂ ಕೇವಲ ಹೊಟ್ಟೆ ಬಟ್ಟೆಗಳಿಗಾಗಿ. 'ಸನ್ಯಾಸಿ, ಜಂಗಮ, ಜೋಗಿ, ಜಟ್ಟಿ, ಮೊಂಡ, ಬೈರಾಗಿ—ನಾನಾ ವೇಷಗಳೆಲ್ಲ ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ' ಎನ್ನುತ್ತಾನೆ, ಆತ. ಸಮಾಜದಲ್ಲಿ ಕೀಳರೆನಿಸಿದ್ದವರನ್ನೂ ಮೇಲಕ್ಕೆ ಎತ್ತುವ ಕಾರ್ಯದಲ್ಲಿ ಈತನು ವಹಿಸಿದ ಪಾತ್ರ ಅದ್ವಿತೀಯವಾದುದು. ಆತನು ಅವರ ನಂಬಿಕೆ, ಸಂಸ್ಕಾರ, ಆಚರಣೆಗಳನ್ನು ಬಳಸಿಕೊಂಡು, ಅವರ ಮಟ್ಟದಲ್ಲಿಯೇ—ಅವರ ಭಾಷೆ, ಧಾಟಿಗಳಲ್ಲ—ಜಾನಪದ ಧಾಟಿಯಲ್ಲಿ ಹಾಡುಗಳನ್ನು ಕಟ್ಟಿ ಅವರನ್ನು ಪ್ರಬೋಧಿಸಲು ಪ್ರಯತ್ನಿಸಿದ್ದಾನೆ. 'ದೇವಿ ನಮ್ಮ ದ್ಯಾವರು ಬಂದರು ಬನ್ನೀರೆ, ನೋಡ ಬನ್ನೀರೆ' ಎಂದು ಜನರನ್ನು ಆಹ್ವಾನಿಸಿ, ಅವರ ಮನಸ್ಸು ಕೀಳು, ಕಿರುಕುಳ, ಕ್ಷುದ್ರ ದೈವಗಳಿಂದ ದೂರವಾಗುವಂತೆ–ಅವರ ದೈವಿಕ ಭಾವನೆ ಹೆಚ್ಚು ಉದಾತ್ತವಾಗುವಂತೆ—ಮಾಡುತ್ತಾನೆ. ಒಮ್ಮೊಮ್ಮೆ ದೊಡ್ಡ ತತ್ವಗಳನ್ನೂ ಅವರಿಗೆ ಮನದಟ್ಟು ಮಾಡಿಕೊಡುತ್ತಾನೆ. ಅಲ್ಪದಲ್ಲಿ ಕಲ್ಪವನ್ನು ಕಾಣಿಸಬಲ್ಲ ಆತನ ಈ ಐಂದ್ರಜಾಲಿಕತನವನ್ನು ನೋಡಿ–ಸಂಸಾರದ ಅಸ್ಥಿರತೆಯು ಮೂಢಜನರಿಗೂ ಮನವರಿಕೆಯಾಗುವಂತೆ 'ಬೆಳ್ಳಿ ಬಂಗಾರಿಟ್ಟುಕೊಂಡು, ಒಳ್ಳೆ ವಸ್ತ್ರ ಹೊದ್ದುಕೊಂಡು, ಅಳ್ಳಂಬೇರ ಬೊಂಬೆಯಂತೆ ಆಡಿ ಹೋಯಿತು; ಹಳ್ಳ ಹರಿದುಹೋಗುವಾಗ, ಗುಳ್ಳೆ ಬಂದು ಒಡೆಯಿತಲ್ಲ, ಉಳ್ಳಿ ಪೊರೆಯಂತೆ ಕಾಣೊ ಸಂಸಾರದ ಆಟ' ಎಂದು ವರ್ಣಿಸುತ್ತಾನೆ.

ಕನಕದಾಸನು ಅಲ್ಲಮಪ್ರಭುವಿನಂತೆ ಗೂಢಾರ್ಥವನ್ನು ಒಳಗೊಂಡು ಒಗಟೆಯಂತಿರುವ ಕೃತಿಗಳು ಹಲವನ್ನೂ ರಚಿಸಿದ್ದಾನೆ. ಅವುಗಳನ್ನು 'ಕನಕನ ಮುಂಡಿಗೆ' ಗಳೆಂದು ಕರೆಯುತ್ತಾರೆ. ಮೋಡದ ಗರ್ಭದಲ್ಲಿ ಅಡಗಿರುವ ಮಿಂಚಿನಂತೆ ಅವುಗಳ ಅರ್ಥ ಆಕಸ್ಮಾತ್ತಾಗಿ ಆಗಬೇಕು. ಹೊರನೋಟಕ್ಕೆ

ಅಸಂಬದ್ಧವಾಗಿ ಕಾಣುವ ಈ ಹಾಡುಗಳು ಸಾಂಕೇತಿಕಭಾಷೆಯನ್ನು ತಿಳಿದವರಿಗೆ ಗಹನವಾದ ಆಧ್ಯಾತ್ಮಿಕತತ್ವಗಳೆಂದು ಅರ್ಥವಾಗುತ್ತದೆ—

ಒಂಬತ್ತು ಹೂವಿಗೆ ಒಂದೇನಾಳವು ಚಂದ ಮಾಮಾ ।
ತುಂಬಿ ನಾಳ ತುದಿ ತುಂಬ ಭಾನುಪ್ರಭೆ ಚಂದಮಾಮ ।
ಕಾಲಿಲ್ಲದಾತನು ಹತ್ತಿದನಾ ಮರ ಚಂದಮಾಮ ।
ಕೈಯಿಲ್ಲದಾತನು ಕೊಯ್ದನು ಆ ಹಣ್ಣ ಚಂದಮಾಮ ।

ತಾನು ಹೇಳುತ್ತಿರುವುದು ಸಾಮಾನ್ಯರಿಗೆ ಅರ್ಥವಾಗುವುದಿಲ್ಲವೆಂದು ಕವಿಗೆ ಗೊತ್ತು. ಆದ್ದರಿಂದಲೇ ಆತ 'ಕನಕನಾಡಿದ ಗುಟ್ಟು ಆದಿಕೇಶವ ಬಲ್ಲ ಚಂದಮಾಮ' ಎಂದು ಹೇಳುತ್ತಾನೆ.

ಕನಕದಾಸನ ಕಲ್ಪನಾಶಕ್ತಿ ಅನೇಕ ವೇಳೆ ಗಗನಚುಂಬಿಯಾಗುತ್ತದೆ. ಆತನ ಭಾವಗಳು ಭವ್ಯತೆಗೇರುತ್ತವೆ. ಓದುಗರು ದಿವ್ಯದರ್ಶಿಗಳಂತೆ ಪುಲಕಿತರಾಗುತ್ತಾರೆ. 'ಹಲವು ಜನುಮದಿ ತಾಯಿ ಎನಗಿತ್ತ ಮೊಲೆಹಾಲು ನಲಿದುಂಬಾಗ ನೆಲಕ್ಕೆ ಬಿದ್ದುದು ಕೂಡಿ, ಅಳಿಯೆ ಕ್ಷೀರಾಂಬುಧಿಗೆ ಇಮ್ಮಿಗಿಲು' ಎನ್ನುತ್ತಾನೆ, ಆತ. ಈ ವಿಚಾರಧಾರೆಯನ್ನೇ ಮುಂದುವರಿಸಿ, ಮಗುವಾಗಿ ಜನಿಸಿದಾಗ ಅತ್ತ ಕಣ್ಣೀರೆಲ್ಲಾ ಸೇರಿಸಿದರೆ ಲವಣಸಮುದ್ರದ ಮೂರಷ್ಟಾಗುವುದೆಂದೂ, ಆಯಾ ಜನ್ಮಗಳಲ್ಲಾದ ದೇಹಗಳ ಎಲಬುಗಳನ್ನೆಲ್ಲಾ ಒಟ್ಟಿದರೆ ಮೇರುಪರ್ವತಕ್ಕೆ ನಾಲ್ಕು ಮಡಿಯಾಗುವುದೆಂದೂ ಆತನು ಹೇಳುತ್ತಾನೆ. ಎಂದಮೇಲೆ ಜೀವನು ಎಷ್ಟು ಜನ್ಮಗಳನ್ನು ಎತ್ತಿ ಬಂದಿರಬೇಕು! ಈ ವರ್ಣನೆಯನ್ನು ಕೇಳಿದಾಗ ಸಾತ್ವಿಕ ಜೀವರಿಗೆ ಈ ಸಂಸಾರ ಸಾಕೆನಿಸುವುದು ಸ್ವಾಭಾವಿಕ. ಕವಿ ಕನಕನು ಕಣ್ಣಿಗೆ ಕಟ್ಟುವಂತೆ ರೂಪಕಗಳನ್ನು ಕಟ್ಟುವುದರಲ್ಲಿಯೂ ಅದ್ಭುತವಾದ ಶಕ್ತಿಯನ್ನು ಪ್ರದರ್ಶಿಸಿದ್ದಾನೆ. 'ಪಂಚೇಂದ್ರಿಯಗಳೆಂಬ ಮಂಚಿಗೆಯ ಹಾಕಿರಯ್ಯ, ಚಂಚಲವೆಂಬ ಹಕ್ಕಿಯನ್ನು ಓಡಿಸಿರಯ್ಯ, ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ, ಆಯುಷ್ಯದ ರಾಶಿಯನು ಅಳೆಯಿರಯ್ಯ' ಎಂದು ಹೇಳುವಲ್ಲಿ ಆತನ ಕಲ್ಪನೆ ಎಷ್ಟು ಭವ್ಯವಾಗಿದೆ! 'ಗಾಳಿಗೊಡ್ಡಿದ ಸೊಡರು ಈ ಸಂಸಾರ,' 'ಸಂಸಾರವೆಂಬ ಸಾಗರವನುತ್ತಾರಿಸುವೊಡೆ ಕಂಸಾರಿ ನಾಮವೊಂದೇ ಸಾಕು.' 'ಹೇರೊಪ್ಪಿಸಿದ ಮೇಲೆ ಸುಂಕವೆ?' 'ದೇವರಿಲ್ಲದ

ಗುಡಿಯು ಹಾಳುಬಿದ್ದಂಗಡಿಯು'—ಇತ್ಯಾದಿ ಹಲವು ರೂಪಕಗಳಲ್ಲಿರುವ ಭಾವ ಭಾಷೆಗಳ ಔಚಿತ್ಯ ಹಾಗಿರಲಿ, 'ಬೊಂಬೆಯಾಟವನಾಡಿಸಿದೆ ಮಹಾಭಾರತದ' ಎಂದು ಶ್ರೀಕೃಷ್ಣನನ್ನು ಕವಿ ಸ್ತೋತ್ರಮಾಡಿರುವುದು ಆತನ ಭಕ್ತಿ ಕಾವ್ಯಶಕ್ತಿಗಳಿಗೆ ಹಿಡಿದ ಸೊಡರಿನಂತಿದೆ!

ಸಂತಕವಿ ಕನಕದಾಸನು ಕನ್ನಡ ನಾಡು ನುಡಿಗಳ ಒಂದು ಕೀರ್ತಿಧ್ವಜ

**ವೈಕುಂಠದಾಸ:**

ವ್ಯಾಸ ವಾದಿರಾಜ, ಪುರಂದರ, ಕನಕ—ಇವರ ಸಮಕಾಲೀನನಾಗಿದ್ದ ವೈಕುಂಠದಾಸನು ಶ್ರೀವೈಷ್ಣವಮತಕ್ಕೆ ಸೇರಿದವನೆಂದೂ, ಬೇಲೂರಿನ ಚನ್ನಕೇಶವಸ್ವಾಮಿಯ ಭಕ್ತನಾಗಿದ್ದು ಹಲವು ಪವಾಡಗಳನ್ನು ಮೆರೆದನೆಂದೂ ತಿಳಿದುಬರುತ್ತದೆ. 'ವೈಕುಂಠಕೇಶವ' ಎಂಬ ಅಂಕಿತದಿಂದ ಆತನು ಹಲವಾರು ಕೀರ್ತನೆಗಳನ್ನು ರಚಿಸಿದ್ದಾನೆ. ಒಮ್ಮೆ ಆತನು ದೇವರ ದರ್ಶನಕ್ಕೆ ಹೋದಾಗ ಗುಡಿಯ ಬಾಗಿಲು ಹಾಕಿರಲು 'ಬಾಗಿಲನು ತೆಗೆದು ಸೇವೆಯನು ಕೊಡು ಹರಿಯೆ। ಕೂಗಿಡುವ ಧ್ವನಿಯು ಕೇಳಿಸುವುದಿಲ್ಲವೇ ನಿನಗೆ' ಎಂದು ಆರ್ತನಾಗಿ ಬೇಡಿದನಂತೆ ಒಡನೆಯೆ ಕದವು ತೆರೆಯಿತಂತೆ! ಈ ಕೀರ್ತನೆ ಆತನ ಹೃದಯರೋದನವನ್ನು ಮಾರ್ಮಿಕವಾಗಿ ಚಿತ್ರಿಸುತ್ತದೆ. ಆತನ ಕೀರ್ತನೆಗಳಲ್ಲಿ ಕಾವ್ಯಗುಣಕ್ಕಿಂತಲೂ ಭಕ್ತಿಭಾವವೇ ಹೆಚ್ಚು. ಆತನ ದೆಸೆಯಿಂದ ಬೇಲೂರು ಭಕ್ತರ ಭೂವೈಕುಂಠವೆನಿಸಿತು.

ಇಲ್ಲಿಂದ ಮುಂದೆ ಹದಿನೇಳನೆಯ ಶತಮಾನದ ಕೊನೆಯವರೆಗೆ ಎಂದರೆ ಸುಮಾರು ಎಪ್ಪತ್ತು ಎಂಬತ್ತು ವರ್ಷಗಳವರೆಗೆ ದಾಸಸಾಹಿತ್ಯದ ಬೆಳವಣಿಗೆ ಬಹುಮಟ್ಟಿಗೆ ಕುಂಠಿತವಾಯಿತೆಂದು ತೋರುತ್ತದೆ. ದಾಸಪರಂಪರೆಯು ಸಂಪೂರ್ಣವಾಗಿ ನಿಂತುಹೋಗಿತ್ತೆಂದು ಹೇಳಲಾಗದಿದ್ದರೂ ಮಹಾ ಪ್ರತಿಭಾಶಾಲಿಗಳಾದ ಅಪರೋಕ್ಷಜ್ಞಾನಿಗಳು ಅಷ್ಟಾಗಿ ಆದಂತೆ ತೋರುವುದಿಲ್ಲ. ಪುರಂದರದಾಸ ಕನಕದಾಸನಂತಹ ಹಿರಿಯ ಹೆಸರುಗಳ ಜೊತೆಯಲ್ಲಿ ನಿಲ್ಲಬಲ್ಲ ಹಿರಿಯ ಹೆಸರನ್ನು ಕಾಣಬೇಕಾದರೆ ನಾವು ಹದಿನೆಂಟನೆಯ ಶತಮಾನದ ಪೂರ್ವಾರ್ಧದಲ್ಲಿ ಕಾಣಬರುವ ಜಗನ್ನಾಥದಾಸನ ಬಳಿಗೆ ಬರಬೇಕು. ಆತನಿಗೂ ಮುಂಚೆ ಪುರಂದರದಾಸನ ನಾಲ್ವರು ಮಕ್ಕಳೂ ದಾಸಪರಂಪರೆಯನ್ನು ಮುಂದುವರಿಸಿದರೆಂದು ತೋರುತ್ತದೆ. ವಿಜಯೀಂದ್ರ

ತೀರ್ಥನೂ ಆತನ ಶಿಷ್ಯಪರಂಪರೆಯೂ ದಾಸ ಸಾಹಿತ್ಯಕ್ಕೆ ತಮ್ಮ ಕಾಣಿಕೆಯನ್ನು ಸಲ್ಲಿಸಿರಬಹುದು. ಸುಧೀಂದ್ರ ತೀರ್ಥರ ಶಿಷ್ಯನಾದ **ರಾಘವೇಂದ್ರ ತೀರ್ಥನು** ಈ ಕಾಲದ ಅತ್ಯಂತ ಪ್ರತಿಭಾಶಾಲಿಯಾದ ವ್ಯಕ್ತಿ. ಕುಂಭಕೋಣದ ತಿಮ್ಮಪ್ಪನಿಗೆ ವೆಂಕಟೇಶನ ಅನುಗ್ರಹದಿಂದ ಜನಿಸಿದ ಈತನು ಚಿಕ್ಕಂದಿನಲ್ಲಿಯೇ ತರ್ಕ ವ್ಯಾಕರಣ ವೇದಾಂತಾದಿಗಳಲ್ಲಿ ದಿಗ್ದಂತಿಯಾಗಿ ಸುಧೀಂದ್ರರಲ್ಲಿ 'ಸುಧಾ' ಪಾಠವನ್ನು ಮುಗಿಸಿ, ಅದಕ್ಕೆ 'ಪರಿಮಳ' ವೆಂಬ ವ್ಯಾಖ್ಯಾನವನ್ನು ಬರೆದನು. ಶ್ರೀಸುಧೀಂದ್ರರಿಂದ ಸನ್ಯಾಸವನ್ನು ಸ್ವೀಕರಿಸುವ ಮುನ್ನ ಈತನು ದಾಂಪತ್ಯ ಜೀವನವನ್ನು ಕೈಕೊಂಡು ಲಕ್ಷ್ಮೀನಾರಾಯಣನೆಂಬ ಮಗನನ್ನು ಪಡೆದಿದ್ದನಂತೆ! ಸನ್ಯಾಸಿಯಾಗಿ ಮಂತ್ರಾಲಯದಲ್ಲಿ ನೆಲಸಿದ ಈತನು ಹಲವು ಪವಾಡಗಳನ್ನು ಮೆರೆದು ಅಪರೋಕ್ಷ ಜ್ಞಾನಿಗಳಲ್ಲಿ ಅಗ್ರಗಣ್ಯನೆನಿಸಿದುದಲ್ಲದೆ, ತನ್ನ ಹಲವು ಸಂಸ್ಕೃತ ಗ್ರಂಥಗಳಿಂದ ವ್ಯಾಸಕೂಟಕ್ಕೂ ಕನ್ನಡ ಕೀರ್ತನೆಗಳಿಂದ ದಾಸಕೂಟಕ್ಕೂ ಸೇವೆ ಸಲ್ಲಿಸಿದನು. 'ವೇಣುಗೋಪಾಲ' ಎಂಬ ಅಂಕಿತದಿಂದ ಈತನು ಬರೆದಿರುವ ಕೀರ್ತನೆಗಳಲ್ಲಿ ಬಹು ಜನಪ್ರಿಯವಾದುದು ಇದು—

ಇಂದು ಯನಗೆ ಗೋವಿಂದ ನಿನ್ನಯ ಪಾದಾರ | ವಿಂದವ ತೋರೊ ಮುಕುಂದನೆ ॥ ಪ ॥ ಮಂದರೋದ್ಧಾರನೆ, ನಂದಗೋಪನ ಕಂದ | ಇಂದಿರಾರಮಣ ಗೋವಿಂದ ಗೋಕುಲಾನಂದ ॥ ಅ ॥ ಪ ॥ ನೊಂದೆನಯ್ಯಾ ಭವ ಬಂಧನದೊಳು ಸಿಲುಕಿ | ಮುಂದೆ ದಾರಿ ಗಾಣದೆ ಕುಂದಿದೆ ಜಗದೊಳು ॥ ಕಂದ ನಾನೆಂದೆನ್ನ ಕುಂದುಗಳೆಣಿಸದೆ | ತಂದೆ ನೀ ಕಾಯೋ ಕಂದರ್ಪ ಜನಕನೆ ॥ ೧ ॥ ಮೂಢತನದಿ ಬಲು ಹೇಡಿ ಜೀವನನಾಗಿ | ದೃಢಭಕ್ತಿಯ ಮಾಡಲಿಲ್ಲವೂ ಹರಿಯೆ ॥ ನೋಡಲಿಲ್ಲವೊ ನಿನ್ನ, ಪಾಡಲಿಲ್ಲವೊ ಮಹಿಮೆ | ಗಾಡಿಕಾರ ಕೃಷ್ಣ ಬೇಡಿಕೊಂಬೆನು ಸ್ವಾಮಿ ॥ ೨ ॥ ಧಾರುಣಿಯೊಳು ಭೂಭಾರ ಜೀವನನಾಗಿ | ಮೀರಿದಪ್ಪಿ ನಡೆದು ಸೇರಿದೆ ಕುಜನರ ॥ ಯಾರು ಕಾಯುವರಿಲ್ಲ ಸೇರಿದೆ ನಿನನಯ್ಯ | ಧೀರ ವೇಣುಗೋಪಾಲ ಪಾರುಗಾಣಿಸೊ ಸ್ವಾಮಿ ॥ ೩ ॥

ರಾಘವೇಂದ್ರತೀರ್ಥನು ಸಾಹಿತಿಯಾಗಿ ಅಲ್ಲದಿದ್ದರೂ ಅಪರೋಕ್ಷ ಜ್ಞಾನಿಯಾಗಿ ಅದ್ವಿತೀಯವಾದ ಕೀರ್ತಿಗೆ ಪಾತ್ರನಾಗಿದ್ದಾನೆ. ಮಂತ್ರಾಲ

ಯದ ರಾಯನೆಂದು ಪ್ರಸಿದ್ಧನಾಗಿರುವ ಆತನ ಮಾಹಾತ್ಮ್ಯವನ್ನು ಕೇಳದ ಕನ್ನಡಿಗನೇ ಇಲ್ಲವೆನ್ನಬಹುದು. ಅಸಂಖ್ಯಾತ ಜನ ಆತನ ಚಿತ್ರವನ್ನೊ ಬೃಂದಾವನವನ್ನೊ ಪೂಜಿಸಿ ತಮ್ಮ ಅಭೀಷ್ಟಸಿದ್ಧಿಯನ್ನು ಪಡೆಯುತ್ತಿದ್ದಾರೆ. ವಿಜಯನಗರದ ಪತನಾನಂತರ ದಕ್ಷಿಣದೇಶದಲ್ಲಿ ನಡೆಯುತ್ತಿದ್ದ ಧಾರ್ಮಿಕ ವಿಪ್ಲವವನ್ನು ತಡೆಗಟ್ಟಿದ ಕೀರ್ತಿ ರಾಘವೇಂದ್ರತೀರ್ಥನಿಗೆ ಸಲ್ಲುತ್ತದೆ. ಈತನ ಪ್ರಭಾವದಿಂದ ಮಂತ್ರಾಲಯದ ಸುತ್ತಮುತ್ತ ಹಲವು ಹರಿದಾಸರು ಉದಯಿಸಿದರು. ಪ್ರಸನ್ನ ವೆಂಕಟದಾಸ, ವಿಜಯದಾಸ, ತಿಮ್ಮಣ್ಣದಾಸ, ಗೋಪಾಲದಾಸ. ಮೋಹನದಾಸ, ಜನನ್ನಾಥದಾಸ ಮೊದಲಾದ ಅನೇಕ ಹರಿದಾಸರು ಏಕಕಾಲದಲ್ಲಿ ಜನಿಸಿ ದಾಸಸಾಹಿತ್ಯದ ತುಷ್ಟಿ ಪುಷ್ಟಿಗಳಿಗೆ ಕಾರಣರಾದರು.

**ಪ್ರಸನ್ನ ವೆಂಕಟದಾಸ :** (ಕ್ರಿ.ಶ. ೧೬೮೦)ನು ಬಿಜಾಪುರ ಜಿಲ್ಲೆಯ ಬಾಗಲಕೋಟೆಯಲ್ಲಿ ಜನಿಸಿ, ಚಿಕ್ಕಂದಿನಲ್ಲಿಯೇ ತಾಯಿತಂದೆಗಳನ್ನು ಕಳೆದುಕೊಂಡು, ತನ್ನ ಅತ್ತಿಗೆಯ ಕಾಟವನ್ನು ತಡೆಯಲಾರದೆ ತಿರುಪತಿಗೆ ಓಡಿಹೋದನಂತೆ. ನಿರಕ್ಷರಕುಕ್ಷಿಯಾದ ಈತನಿಗೆ ತಿರುಪತಿಯ ವೆಂಕಟರಮಣಸ್ವಾಮಿಯ ಅನುಗ್ರಹದಿಂದ ಕವಿತಾಶಕ್ತಿ ಉದಿಸಿತಂತೆ! 'ಪ್ರಸನ್ನ ವೆಂಕಟ ಕೃಷ್ಣ' ಎಂಬ ಅಂಕಿತದಿಂದ ಈತನು ಹಲವು ಕೀರ್ತನೆಗಳನ್ನು ರಚಿಸಿದ್ದಾನೆ. 'ಅರಿಗಳೇ ಸಖರಕ್ಕು, ಅತಿ ವಿಷಾಮೃತವಕ್ಕು, ಉರಗ ಪೂಮಾಲೆಯಕ್ಕು, ಉರಿ ತಣ್ಣಗಕ್ಕು, ಶರಧಿ ಗೋಷ್ಪದವಕ್ಕು, ಶರಘಾತ ಬೆಂಡಕ್ಕು ನರಹರಿಯ ನಾಮವನು ನಂಬಿ ಭಜಿಪರಿಗೆ' ಎಂಬ ನಂಬುಗೆಯಿಂದ ಬಾಳಿ, ಆ ನಂಬುಗೆಯನ್ನು ಇತರರಿಗೂ ಹಂಚಿ ಬಾಳಿದ ದೊಡ್ಡ ಜೀವ ಆತನದು. 'ರಂಗ ಕೊಳಲನೂದಲಾಗಿ, ರಂಗಯ್ಯ ಕೊಳಲನೂದಲು | ಮಂಗಳಮಯವಾಯಿತು ಧರೆ, ಜನಂಗಳು ಜೀವನ ಚೇತನ ಮರೆದು ರಂಗಧ್ಯಾನ ಪರರಾದರು' ಎಂದು ಹಾಡುತ್ತಾ ಈತ ಜನರನ್ನು ರಂಗಧ್ಯಾನಪರರನ್ನಾಗಿ ಮಾಡಿ ಕೃತಕೃತ್ಯನಾದನು. ಈತನು ಭಾಗವತದ ದಶಮಸ್ಕಂಧವನ್ನು ಹಾಡು, ದ್ವಿಪದಿ, ವೃತ್ತಗಳಾಗಿ ಕನ್ನಡಿಸಿದ್ದಾನೆ. ಶ್ರೀಕೃಷ್ಣನ ಬಾಲಲೀಲೆ—ಅದರಲ್ಲಿಯೂ ಆತನ ಬಾಲ ಭಾಷೆಯ ಬಳಕೆ—ಹೃದ್ಯವಾಗಿದೆ. 'ಯತೋದೆಯಮ್ಮ ನಂಗನ್ನೆತ್ತಿಕೊ ಅಮ್ಮ | ಒತ್ತಿ ಬಲು

ಅತ್ತು ಬಂದೀನೆ ನಾ' (ಯಶೋದೆಯಮ್ಮ ರಂಗನ್ನೆತ್ತಿಕೊ ಅಮ್ಮ। ಹೊಟ್ಟೆ ಬಲು ಹಸ್ತು ಬಂದೀನೆ ನಾ) ಎಂದು ಮೊದಲಾಗಿ ಹಾಡುವಲ್ಲಿ ದಾಸನ ಹೃದಯ ಮಗುವಿನಷ್ಟೆ ಮುಗ್ಧವಾಗಿದ್ದಿರಬೇಕೆನ್ನಿಸುತ್ತದೆ. ಈತನ ಭಾಷೆ ಉತ್ತರ ಕರ್ನಾಟಕದ ಭಾಷೆ; ಆ ಪ್ರಾಂತದಲ್ಲಿ ಈತನ ಕೀರ್ತನೆಗಳು ಬಹು ಜನಪ್ರಿಯವಾಗಿವೆಯಂತೆ.

ವಿಜಯದಾಸನು ಪ್ರಸನ್ನ ವೆಂಕಟದಾಸನ ಸಮಕಾಲಿಕನಾದವನು. ರಾಯಚೂರು ಜಿಲ್ಲೆಯ ಒಂದು ಹಳ್ಳಿಯಲ್ಲಿದ್ದ ಶ್ರೀನಿವಾಸ-ಕೂಸಮ್ಮ ಎಂಬ ಬಡದಂಪತಿಗಳ ಹಿರಿಯಮಗ ದಾಸಪ್ಪ. ಮಂಕನಾಗಿದ್ದ ಈ ಬಡ ಹುಡುಗನನ್ನು ಕಂಡವರೆಲ್ಲ 'ಕೂಸಿ ಮಗ ದಾಸ' ಎಂದು ಗೇಲಿಮಾಡುತ್ತಿದ್ದರಂತೆ. ಇದರಿಂದ ನೊಂದ ಹುಡುಗ ಮನೆ ಬಿಟ್ಟು ಕಾಶಿಗೆ ಓಡಿಹೋದನಂತೆ! ಅಲ್ಲಿ ಒಂದುದಿನ ರಾತ್ರಿ ಇವನ ಕನಸಿನಲ್ಲಿ ಪುರಂದರದಾಸನು ಕಾಣಿಸಿಕೊಂಡು, ಅವನ ನಾಲಗೆಯಮೇಲೆ ಬೀಜಾಕ್ಷರಗಳನ್ನು ಬರೆದನಂತೆ! ಅಂದಿನಿಂದ ಅವನು ಆಡಿದುದೆಲ್ಲ ಹಾಡಾಯಿತು. 'ಹಯವದನ ವಿಠಲ' ಎಂಬ ಅಂಕಿತದಿಂದ ಅನೇಕ ಹಾಡುಗಳನ್ನು ರಚಿಸಿ, ಆತನು ಕೀರ್ತಿಶಾಲಿಯಾದನು. ತನ್ನ ಅಂತರಂಗದಲ್ಲಿ ಜ್ಯೋತಿ ಬೆಳಗಿದೆಂದು ಆತ 'ಅಂತರಂಗದ ಕದವು ತೆರೆಯಿತಿಂದು। ಇಂತು ಪುಣ್ಯದ ಫಲದ ಪ್ರಾಪ್ತಿ ಫಲಿಸಿತೆನಗೆ' ಎಂದು ಹೇಳಿಕೊಂಡು, ಅಂದಿನತನಕ ತಾನು 'ಸೂಸು ತಮಸಿನಲಿ ಮುಳುಗಿ'ದ್ದುದಕ್ಕಾಗಿ ತಪಿಸುತ್ತಾನೆ. ಸದಾ ಭಗವಂತನ ಸಾನ್ನಿಧ್ಯವನ್ನು ಕರುಣಿಸುವಂತೆ ಪ್ರಾರ್ಥಿಸುವ ಆತನ ಕೀರ್ತನೆ ಹೃದಯಂಗಮವಾಗಿದೆ 'ಸದಾ ಎನ್ನ ಹೃದಯದಲ್ಲಿ ವಾಸಮಾಡೊ ಶ್ರೀಹರಿ' ಎಂದು ಆರಂಭಿಸಿ 'ನಿನ್ನ ನಾನು ಬಿಡುವನಲ್ಲ, ಎನ್ನ ನೀನು ಬಿಡಲು ಸಲ್ಲ' ಎಂದು ಆತ ಮುಕ್ತಾಯಮಾಡುತ್ತಾನೆ. ಆತನು ಅಸಂಖ್ಯಾತ ಸುಳಾದಿಗಳನ್ನು ಬರೆದಿದ್ದಾನೆ. ಪುರಂದರದಾಸನನ್ನು ಬಿಟ್ಟರೆ, ಈತನಷ್ಟು ಸುಳಾದಿಗಳನ್ನು ರಚಿಸಿದ ಮತ್ತೊಬ್ಬ ಹರಿದಾಸನಿಲ್ಲ. ಆತನ ಈ ಸುಳಾದಿಗಳೂ ಕೀರ್ತನೆಗಳೂ ಅರ್ಥಗರ್ಭಿತವಾಗಿ, ತತ್ವ ಬೋಧಕವಾಗಿವೆ.

ಹದಿನೆಂಟನೆಯ ಶತಮಾನದ ದಾಸಪಂಥದವರಲ್ಲಿ ಮಹಿಪತಿದಾಸನ ಹೆಸರು ಬಹು ಮುಖ್ಯವಾದುದು. ಆತನು ಭಕ್ತಿಭರಿತವಾದ ಅನೇಕ ಕೀರ್ತನೆ

ಗಳನ್ನು ರಚಿಸಿದ್ದಾನೆ. ಆದರೆ ಆತನ ಕೃತಿಗಳು ಇನ್ನೂ ಪ್ರಕಟವಾಗಿಲ್ಲ.

**ಗೋಪಾಲದಾಸ:** ಹದಿನೆಂಟನೆಯ ಶತಮಾನದ ಹರಿದಾಸರಲ್ಲಿ ಮತ್ತೊಂದು ಹಿರಿಯ ಹೆಸರೆಂದರೆ ವಿಜಯದಾಸನ ಶಿಷ್ಯನಾದ ಗೋಪಾಲ ದಾಸನದು. ಈತನು ರಾಯಚೂರು ಜಿಲ್ಲೆಯ ಮೊಸರುಕಲ್ಲು ಎಂಬ ಊರಿನಲ್ಲಿ ಮುರಾರಿ ರಾಯ– ವೆಂಕಮ್ಮ ಎಂಬ ಬಡದಂಪತಿಗಳ ಹಿರಿಯ ಮಗನಾಗಿ ಭಾಗಣ್ಣನೆಂಬ ಹೆಸರಿನಿಂದ ಜನಿಸಿದವನು. ಬಾಲ್ಯದಲ್ಲಿ ಬಡತನದ ಕಷ್ಟಕ್ಕೆ ಸಿಕ್ಕಿ ನಲುಗಿಹೋದ ಈತನು ದೈವಕ್ಕೆ ಶರಣು ಹೋದನು. ಒಮ್ಮೆ ಈತನು ದೈವಚಿಂತನೆಯಲ್ಲಿಯೇ ಮುಳುಗಿ, ಪುರವೊಂದರ ಕೆಳಗೆ ಮಲಗಿರುವಾಗ ಕೃಷ್ಣಸರ್ಪವೊಂದು ಈತನ ಮೈಮೇಲೆಲ್ಲಾ ಹರಿದಾಡಿತಂತೆ! ಅದನ್ನು ಕಂಡ ಜನ ಆತನನ್ನು ಮಹಿಮಸಿಂಯನೆಂದರು. ಅದಕ್ಕೆ ತಕ್ಕಂತೆ ಆತನಲ್ಲಿ ಅಂದಿನಿಂದ ಮಹತ್ತು ಕಾಣಿಸಿಕೊಂಡಿತು. ಆತನು ಭಕ್ತಿಪರವಶನಾಗಿ ನರ್ತಿಸುತ್ತಾ ಇರಲು, ಹರಿಕೀರ್ತನೆ ಆತನ ಬಾಯಿಂದ ಹರಿದು ಬರಲು ಪ್ರಾರಂಭವಾಯಿತು. ಅಕಸ್ಮಾತ್ತಾಗಿ ಈತನನ್ನು ಕಂಡ ವಿಜಯದಾಸನು ಈತನಿಗೆ ದಾಸದೀಕ್ಷೆಯನ್ನು ಕೊಟ್ಟು 'ಗೋಪಾಲವಿಠಲ' ಎಂಬ ಅಂಕಿತವನ್ನು ನೀಡಿದನು. ದೀಕ್ಷೆಯನ್ನು ವಹಿಸಿದಮೇಲೆ ಈತನು ಗೋಪಾಲದಾಸನೆಂಬ ಹೆಸರಿನಿಂದ ಪ್ರಖ್ಯಾತನಾಗಿ, ಭಕ್ತಿಭರಿತವಾದ ಅನೇಕ ಕೀರ್ತನೆಗಳನ್ನು ರಚಿಸಿ, 'ಭಕ್ತಿಯಲಿ ಭಾಗಣ್ಣ'ಎಂಬ ಕೀರ್ತಿಗೆ ಪಾತ್ರನಾದನು ರೋಗನಿದಾನವನ್ನು ಮಾಡಿ, ಭವರೋಗದಿಂದ ತನ್ನನ್ನು ಮುಕ್ತನನ್ನಾಗಿ ಮಾಡುವಂತೆ ದೇವರನ್ನು ಬೇಡುತ್ತಾ ಆತನು—'ಆವ ರೋಗವು ಎನಗೆ ದೇವ ಧನ್ವಂತ್ರಿ? ಸಾವಧಾನದಿ ಎನ್ನ ಕೈಪಿಡಿದು ನೋಡಯ್ಯ' ಎನ್ನುತ್ತಾನೆ. ತನ್ನ ರೋಗದ ಲಕ್ಷಣವನ್ನು ಹೇಳುತ್ತಾ 'ಹರಿ ಮೂರ್ತಿಗಳು ಎನ್ನ ಕಂಗಳಿಗೆ ಕಾಣಿಸವು, ಹರಿಯ ಕೀರ್ತನೆ ಕೇಳಿಸದೆನ್ನ ಕಿವಿಗೆ, ಹರಿ ಮಂತ್ರ ಸ್ತೋತ್ರ ಬಾರದು ಎನ್ನ ನಾಲಗೆಗೆ, ಹರಿಪ್ರಸಾದ ಜಿಹ್ವೆಗೆ ಸವಿಯಾಗದಯ್ಯ'—ಹಾಗೆಯೇ ಹರಿಪಾದಸೇವೆಗೆ ಹಸ್ತ ಚಲಿಸುವುದಿಲ್ಲ, ಗುರು ಹಿರಿಯರ ಅಂಘ್ರಿಗೆ ಶಿರ ಬಾಗದು, ಹರಿಮಂತ್ರ ನಾಲಿಗೆಗೆ ಬಾರದು; ಹರಿಯಾತ್ರೆಗಳಿಗೆ ಕಾಲೇಳವು—ಅನಾದಿಕಾಲದಿಂದ ಬಂದ ಈ ಭವರೋಗವನ್ನು ಕಳೆಯಯ್ಯ' ಎಂದು ಹಾಡುವುದು ಚಮತ್ಕಾರವಾಗಿರುವಷ್ಟೆ ಚೆಲು

ವಾಗಿಯೂ ಇದೆ. ' ಏನ ಬೇಡಲಿ ನಿನ್ನ ಬಳಿಗೆ ಬಂದು ?' ಎಂದು ಈತನು ತಾನೇ ದೇವರನ್ನು ಪ್ರಶ್ನಿಸಿ, ತಾಯಿ ತಂದೆ ಧನ ಪುತ್ರ ಅಧಿಕಾರಗಳಿಂದ ಸುಖ ದಕ್ಕದೆಂಬುದನ್ನು ಉದಾಹರಣೆಗಳೊಡನೆ ತೋರಿಸಿ, ಕಡೆಗೆ ' ಬೇಡ ದಂತೆ ವರ ಮಾಡೆನ್ನ ದೊರೆಯೆ' ಎಂಬ ಬೇಡಿಕೆಯೊಡನೆ ಅದನ್ನು ಮುಕ್ತಾಯಗೊಳಿಸಿರುವುದು ಮನೋಹರವಾಗಿದೆ.

ಗೋಪಾಲದಾಸನ ಶಿಷ್ಯಸಮುದಾಯ ಬಹು ಶ್ರೀಮಂತವಾದುದು. ಆತನ ಮೂವರು ತಮ್ಮಂದಿರೂ ಆತನ ಶಿಷ್ಯರಾಗಿ ದಾಸ ಸಂಪ್ರದಾಯವನ್ನು ಬೆಳೆಸಿದರು. ಹದಿನೆಂಟನೆಯ ಶತಮಾನದ ಹರಿದಾಸರಲ್ಲಿ ಅಗ್ರಗಣ್ಯನಾದ ಜಗನ್ನಾಥದಾಸನೂ, ಕವಯಿತ್ರಿಯಾದ ಹೆಳವನಕಟ್ಟೆ ಗಿರಿಯಮ್ಮನೂ ಈತನ ಶಿಷ್ಯವರ್ಗಕ್ಕೆ ಸೇರಿದವರು.

**ಜಗನ್ನಾಥದಾಸ :**

ರಾಯಚೂರು ಜಿಲ್ಲೆಯ ಬ್ಯಾಗವಟ್ಟೆ ಎಂಬ ಗ್ರಾಮದಲ್ಲಿ ಕರಣಿಕ ನಾಗಿದ್ದ ನರಸಪ್ಪನೆಂಬುವನು ಜೀವನದ ಏಳು ಬೀಳುಗಳನ್ನು ಅನುಭವಿಸಿ, ತನ್ನ ಮಡದಿಯಾದ ಲಕ್ಷ್ಮೀಬಾಯಿಯೊಡನೆ ಮಾನವಿ ಎಂಬಲ್ಲಿ ಬಂದು ನೆಲಸಿದನು. ಕಾಲಕ್ರಮದಲ್ಲಿ ಈತನು ' ನರಸಿಂಹ ವಿಠಲ ' ಎಂಬ ಅಂಕಿತ ವನ್ನು ಪಡೆದು ಹರಿದಾಸನಾದನು. ಈ ಹರಿದಾಸನಿಗೆ ಶ್ರೀನಿವಾಸದೇವರ ಅನುಗ್ರಹದಿಂದ ಜನಿಸಿದ ಮಗನೇ ಶ್ರೀನಿವಾಸ ಬಾಲ್ಯದಲ್ಲಿ ತಂದೆಯಿಂದ ಸಂಸ್ಕೃತ ಕನ್ನಡಗಳಲ್ಲಿ ಶಿಕ್ಷಣವನ್ನು ಪಡೆದ ಶ್ರೀನಿವಾಸನು ಮಂತ್ರಾಲಯ ದಲ್ಲಿ ಸಂಸ್ಕೃತದ ಪ್ರೌಢ ಶಿಕ್ಷಣವನ್ನುಪಡೆದು ಅದ್ವಿತೀಯ ಪಂಡಿತನಾದನು. ದೈವದತ್ತವಾಗಿ ಬಂದಿದ್ದ ಈತನ ಕವಿತಾಶಕ್ತಿ ಪಾಂಡಿತ್ಯದಿಂದ ಪ್ರೋಜ್ವಲ ಗೊಂಡಿತು. ಮಂತ್ರಾಲಯದ ಸ್ವಾಮಿಗಳು ಈತನಿಗೆ ' ಆಚಾರ್ಯ ' ನೆಂದು ಬಿರುದಿತ್ತು ಸನ್ಮಾನಿಸಿದರು. ಶ್ರೀನಿವಾಸಾಚಾರ್ಯನು ವಿದ್ಯೆ, ಬುದ್ಧಿ, ಗೌರವ, ಕೀರ್ತಿಗಳೊಡನೆ ಸಾಕಷ್ಟು ಶ್ರೀಮಂತಿಕೆಯನ್ನೂ ಗಳಿಸಿಕೊಂಡು ಅಹಂಕಾರಿಯಾದನು. ಆತನ ' ವಿದ್ಯಾಮದ'ವು ಕಾಲ್ಕೆರೆದು ವಾದಭೂಮಿ ಯಲ್ಲಿ ಘೀಂಕರಿಸಿತು. ಗೆಲವು ದೊರೆತಂತೆಲ್ಲಾ ಗರ್ವ ಬೆಳೆಯಿತು. ಒಮ್ಮೆ ವಿಜಯದಾಸನನ್ನು ಸಂಧಿಸಿದಾಗ ಶ್ರೀನಿವಾಸನು ಆತನನ್ನು ' ಕೂಸಿ ಮಗ ದಾಸವೇಷದಿಂದ ಜನರಿಗೆ ಮೋಸಮಾಡುವವ' ಎಂದು ಹೀಯಾಳಿಸಿ, ಅಪ

ಮಾನಮಾಡಿದನು. ಇದರ ಫಲವಾಗಿ ಆತನಿಗೆ ಕ್ಷಯರೋಗ ಪ್ರಾಪ್ತವಾಯಿತಂತೆ! ಅದರ ನಿವಾರಣೆಗಾಗಿ ಆತ ವಿಜಯದಾಸನಿಗೇ ಶರಣು ಹೋಗಬೇಕಾಯಿತು. ವಿಜಯದಾಸನು ಆತನನ್ನು ಗೋಪಾಲದಾಸನಲ್ಲಿಗೆ ಕಳುಹಿಸಿದನು. ಗೋಪಾಲದಾಸನು ಸಾಮಾನ್ಯನಲ್ಲ; ಸಾಕ್ಷಾತ್ ಸಿದ್ಧಿವಿನಾಯಕನ ಅಂಶದಿಂದ ಹುಟ್ಟಿದವನು. ಆತನು ಒಂದು ಜೋಳದ ರೊಟ್ಟಿಯನ್ನು ಅಭಿಮಂತ್ರಿಸಿ ಶ್ರೀನಿವಾಸನಿಗೆ ಕೊಟ್ಟನು. ಅದನ್ನು ತಿಂದಮೇಲೆ ಆತನ ರೋಗ ವಾಸಿಯಾಯಿತು. ಕ್ಷಯರೋಗದೊಡನೆ ಆತನ ಭವರೋಗವೂ ವಾಸಿಯಾಯಿತು. ಆದುವರೆಗೂ ಹರಿದಾಸರ ಪದಗಳನ್ನು 'ಪ್ರಾಕೃತ ಪದ'ಗಳೆಂದು ಹೀಯಾಳಿಸುತ್ತಿದ್ದ ಶ್ರೀನಿವಾಸನು ತಾನೂ ಹರಿದಾಸನಾಗಬೇಕೆಂದು ಬಯಸಿ, ಅಂಕಿತವನ್ನು ಅನುಗ್ರಹಿಸುವಂತೆ ಗೋಪಾಲದಾಸನನ್ನು ಬೇಡಿದನು. ಆದರೆ ಅಂಕಿತವನ್ನು ವಿಠಲನೇ ಅನುಗ್ರಹಿಸುವನೆಂದು ಹೇಳಿ, ಗುರುವು ಆತನನ್ನು ಪಂಡರಿಪುರಿಗೆ ಕಳುಹಿಸಿದನಂತೆ. ಅಲ್ಲಿ ಚಂದ್ರಭಾಗಾ ನದಿಯಲ್ಲಿ ಸ್ನಾನಮಾಡುತ್ತಿರುವಾಗ 'ಜಗನ್ನಾಥ ವಿಠಲ' ಎಂದು ಕೆತ್ತಿದ್ದ ಒಂದು ಕಲ್ಲು ಆತನ ಕೈಗೆ ಸಿಕ್ಕಿತು. ಅಂದಿನಿಂದ ಆತನು ಜಗನ್ನಾಥದಾಸನೆಂಬ ಹೆಸರನ್ನು ತಳೆದು. ದೈವದತ್ತವಾದ ಅಂಕಿತದಲ್ಲಿ ದಿವ್ಯ ನಾಮುವನ್ನು ಹಾಡುತ್ತಾ ಹೊರಟನು.

ಮೇಲಿನ ಜಗನ್ನಾಥದಾಸನ ಜೀವನ ವೃತ್ತಾಂತಕ್ಕೆ ತಂದೆ ವೆಂಕಟೇಶ ವಿಟ್ಠಲನೆಂಬುವನ ಪದವು ಮುಖ್ಯವಾದ ಆಧಾರವಾಗಿದೆ. ಅದರಲ್ಲಿ ಬರುವ ಅಲೌಕಿಕ ಘಟನೆಗಳನ್ನು ದಂತಕಥೆಗಳೆಂದು ಕೈಬಿಟ್ಟರೂ ಜಗನ್ನಾಥದಾಸನ ಜೀವನ ಸಾಕಷ್ಟು ವೈವಿಧ್ಯಮಯವಾದುದು, ಅನುಭವಪೂರ್ಣವಾದುದು ಎಂಬುದರಲ್ಲಿ ಸಂದೇಹವೇನೂ ಇಲ್ಲ. ಆತನು ರಚಿಸಿರುವ 'ಹರಿಕಥಾಮೃತಸಾರ'ದಲ್ಲಿ ಆತನ ಅಪಾರವಾದ ಪಾಂಡಿತ್ಯವು ಹೆಪ್ಪುಗಟ್ಟಿಕುಳಿತಿದೆ. ಈ ಗ್ರಂಥದ ಮೂವತ್ತೆರಡು ಸಂಧಿಗಳಲ್ಲಿ ಸುಮಾರು ಒಂದು ಸಹಸ್ರಪದ್ಯಗಳಷ್ಟು ವಿಸ್ತಾರವಾಗಿ ಹರಡಿಕೊಂಡಿರುವ ಮಧ್ವಮತತತ್ವ ಅಧಿಕಾರಯುತವಾಗಿ ಪ್ರಮಾಣಭೂತವಾಗಿದೆ. ದ್ವೈತತತ್ವದ ಸಕಲ ಸಿದ್ಧಾಂತಗಳನ್ನೂ ಒಳಗೊಂಡ ಈ ಗ್ರಂಥವನ್ನು ದ್ವೈತ ಸಿದ್ಧಾಂತದ ಒಂದು ಪುಟ್ಟ ವಿಶ್ವಕೋಶವೆನ್ನಬಹುದು. ಆದ್ದರಿಂದ ಸ್ವಾಭಾವಿಕವಾಗಿಯೇ ಇದು

ರಲ್ಲಿ ಕಾವ್ಯಾಂಶಕ್ಕಿಂತಲೂ ಶಾಸ್ತ್ರಾಂಶ ಹೆಚ್ಚು. ಆದರೂ 'ಅನುಭವಾಮೃತ' ದ ಮಹಲಿಂಗರಂಗನಂತೆ ಜಗನ್ನಾಥದಾಸನೂ ಪ್ರಭುಸಮ್ಮಿತವನ್ನು ಕಾಂತಾಸಮ್ಮಿತವಾಗಿ ಮಾಡಲು ಪ್ರಯತ್ನಿಸಿದ್ದಾನೆ. ಶಾಸ್ತ್ರವಿಷಯ ಕಾವ್ಯರೀತಿಯನ್ನು ತಳೆದಿದೆ. ಅತ್ಯಂತ ಕ್ಲಿಷ್ಟವಾದ ವೇದಾಂತ ತತ್ವಗಳನ್ನು ಕವಿಯು ಸರಳವಾಗಿ ಸುಲಭವಾಗಿ ಸುಂದರವಾಗಿ ಆ ಬಾಲಗೋಪಾಲ ವಿದಿತವಾಗುವಂತೆ ಪ್ರತಿಪಾದಿಸಿದ್ದಾನೆ. ಭಗವಂತನು ಎಂತಹ ಕರುಣಾಮಯನೆಂದು ವರ್ಣಿಸುತ್ತಾ

ಮಲಗಿ ಪರಮಾದರದಿ ಪಾಡಲು । ಕುಳಿತು ಕೇಳುವ, ಕುಳಿತು ಪಾಡಲು
ನಿಲುವ, ನಿಂತರೆ ನಲಿವ, ನಲಿದರೆ ಒಲಿವೆ ನಿಮಗೆಂಬ
ಸುಲಭನೊ ಹರಿ. ತನ್ನವರನರೆ । ಘಳಿಗೆ ಬಿಟ್ಟಗಲನೋ, ರಮಾಧವ
ನೊಲಿಸಲರಿಯದೆ ಬಳಲುವರು ಪಾಮರರು ಭವದೊಳಗೆ ॥

ಎಂದು ಹೇಳಿರುವುದು ಎಷ್ಟು ಸುಲಭವೋ ಅಷ್ಟು ಹೃದಯಂಗಮವಾಗಿದೆ! ಭಗವಂತನ ಸ್ಮರಣೆಗೆ ಕಾಲದೇಶಗಳ ಅಥವಾ ಮಡಿಮೈಲಿಗೆಗಳ ಎಲ್ಲೆಕಟ್ಟುಗಳೇನೂ ಬೇಡ. ಬೇರೆ ಕೆಲಸದಲ್ಲಿ ತೊಡಗಿದ್ದಾಗ ಸ್ಮರಿಸಿದರೂ ಸಾಕು

ಮಕ್ಕಳಾಡಿಸುವಾಗ, ಮಡದಿಯೊ । ಳಕ್ಕರದಿ ನಲಿವಾಗ ಹಯ ಪ
ಲ್ಲಕ್ಕಿ ಗಜ ಮೊದಲಾದ ವಾಹನವೇರಿ ಮೆರೆವಾಗ
ಚಿಕ್ಕವಾಗಾಕಳಿಸುತಲಿ ದೇ । ವಕ್ಕಿ ತನಯನ ಸ್ಮರಿಸುತಿಹ ನರ
ಸಿಕ್ಕನೋ ಯಮದೂತರಿಗೆ ಆವಲ್ಲಿ ನೋಡಿದರು ॥

ಜಗನ್ನಾಥದಾಸನು ದ್ವೈತಮತ ಪ್ರತಿಪಾದನೆಯಲ್ಲಿ ತೊಡಗಿದ್ದರೂ ಆತನ ದೃಷ್ಟಿ ಉದಾತ್ತವಾಗಿದೆ, ಅತ್ಯಂತ ಉದಾರವಾಗಿದೆ, ಸರ್ವಜನ ಸಮ್ಮತವಾಗಿದೆ—

ಆವ ಕುಲದವನಾದೊಡೇ ನಿ । ನ್ನಾವ ದೇಶದೊಳಿದ್ದೊಡೇ ನಿ
ನ್ನಾವ ಕರ್ಮವ ಮಾಡಲೇ ನಿನ್ನಾವ ಕಾಲದಲಿ
ಶ್ರೀವರನ ಸರ್ವತ್ರದಲಿ ಸಂ । ಭಾವಿಸುತ ಪೂಜಿಸುತ ಮೋದಿಪ
ಕೋವಿದರಿಗುಂಟೇನೊ ಭವದುಃಖಾದಿ ದೋಷಗಳು ॥

ಸರ್ವಸಮಾನತೆಯನ್ನು ಸಾರುತ್ತಿರುವ ಕವಿಗೆ

ಸರ್ವದೇಶವು ಪುಣ್ಯದೇಶವು | ಸರ್ವಕಾಲವು ಪುಣ್ಯಕಾಲವು
ಸರ್ವಜೀವರು ದಾನಪಾತ್ರರು ಮೂರುಲೋಕದೊಳು
ಸರ್ವ ಮಾತುಗಳೆಲ್ಲ ಮಂತ್ರವು | ಸರ್ವಕೆಲಸಗಳೆಲ್ಲ ಪೂಜೆಯು
ಸರ್ವವಂದ್ಯನ ವಿಮಲಮೂರ್ತಿ ಧ್ಯಾನವುಳ್ಳವಗೆ

ಭಗವಂತನು ಎಲ್ಲಿಲ್ಲ? ಎಲ್ಲೆಲ್ಲಿಯೂ ತಾನೇ ತಾನಾಗಿದ್ದಾನೆ—

ಎಲ್ಲಿ ಕೇಳಿದರಲ್ಲಿ ನೋಡಿದ | ರಲ್ಲಿ ಬೇಡಿದರಲ್ಲಿ ನೀಡಿದ
ರಲ್ಲಿ ಓಡಿದರಲ್ಲಿಯಾಡಿದರಲ್ಲಿ ಇರುತಿಹನು

ಕವಿಯ ದೃಷ್ಟಿ ಉದಾತ್ತ, ವಿಷಯನಿರೂಪಣೆ ಸರಳ ಸುಂದರ; ಭಾಮಿನಿ ಷಟ್ಪದಿಯಲ್ಲಿ ನಿರರ್ಗಳವಾಗಿ ಹರಿಯುತ್ತಿರುವ ಈ ತತ್ತ್ವಪ್ರತಿಪಾದಕ ಕಾವ್ಯದಲ್ಲಿ ಹೃದಯಂಗಮವಾದ ಉಪಮೆಗಳು ಮೇಲಿಂದಮೇಲೆ ಕಾಣಿಸಿಕೊಂಡು ಓದುಗರನ್ನು ಒಲಿಸಿಕೊಳ್ಳುತ್ತವೆ; ಅವರನ್ನು ತಲ್ಲೀನಗೊಳಿಸುತ್ತವೆ. ಭಗವದ್ಭಕ್ತಿಗೆ ಬದಲಾಗಿ ಐಹಿಕ ಸುಖವನ್ನು ಬಯಸುವುದು 'ಕ್ಷೋಣಿಪತಿ ಸುತನೆನಿಸಿ ಕೈ ದುಗ್ಗಾಣಿಗೊಡ್ಡುವ ತೆರ,' 'ಸುಮನಸಧೇನು ಮನೆಯೊಳಗಿರಲು ಗೋಮಯ ಬಯಸುವಂದ.' ಭಕ್ತರ ಸ್ತುತಿಗೆ ಭಗವಂತ 'ಬಾಲಕನ ಕಲಭಾಷೆ ಜನನಿಯು ಕೇಳಿ ಸುಖಪಡುವಂತೆ' ಹಿಗ್ಗುತ್ತಾನೆ. ಭವದ ಸುಖ 'ಝಲ್ಲಿಡಿಯ ನೆಳಲಂತೆ ತೋರ್ಪುದು.' ಇಂತಹ ಉಪಮೆ ಮತ್ತು ದೃಷ್ಟಾಂತಗಳ ಮೂಲಕ ಗಹನವಾದ ವೇದಾಂತ ತತ್ತ್ವಗಳನ್ನು ಸುಲಿದ ಬಾಳೆಯ ಹಣ್ಣಿನಂತೆ ಸುಲಭವಾಗಿ ವೇದ್ಯವಾಗುವಂತೆ ಮಾಡಿದ ಕೀರ್ತಿ ಜಗನ್ನಾಥದಾಸನಿಗೆ ಸಲ್ಲುತ್ತದೆ.

ಜಗನ್ನಾಥದಾಸನ ಶೈಲಿ ಎಲ್ಲೆಡೆಯಲ್ಲಿಯೂ ಅತ್ಯಂತ ಸುಲಭವಾಗಿದೆಯೆಂದು ತಿಳಿಯಬಾರದು. ಆತನು ಸಂಸ್ಕೃತದಲ್ಲಿ ಅಪಾರವಾದ ಪಾಂಡಿತ್ಯವುಳ್ಳವನು. ಆದ್ದರಿಂದ ಅನೇಕವೇಳೆ ಆತನ ಶೈಲಿ ಸಂಸ್ಕೃತಭೂಯಿಷ್ಠವಾಗಿ, ಸಾಮಾನ್ಯ ಓದುಗನಿಗೆ ದುರವಗಾಹವಾಗುವುದೂ ಉಂಟು. ಇದನ್ನು ಆತನ 'ಹರಿಕಥಾಮೃತಸಾರ'ಕ್ಕಿಂತಲೂ ಆತನ ಕೀರ್ತನೆಗಳಲ್ಲಿ ಹೆಚ್ಚಾಗಿ ಕಾಣುತ್ತೇವೆ. ಆತನು ಸಹಸ್ರಾರು ಕೀರ್ತನೆಗಳನ್ನು ರಚಿಸಿರುವನೆಂಬ ಪ್ರತೀತಿಯಿದ್ದರೂ, ಈಗ ಸುಮಾರು ಇನ್ನೂರು ಕೀರ್ತನೆಗಳು ಮಾತ್ರ ಅಚ್ಚಾಗಿವೆ. ಇವುಗಳಲ್ಲಿ ಬಹುಭಾಗ ಭಗವಂತ ಮತ್ತು ಭಾಗವತರ

ಸ್ತೋತ್ರರೂಪವಾದ ಹಾಡುಗಳು. ಇತರ ಹರಿದಾಸರಂತೆ ಈತನಲ್ಲಿಯೂ ಭಕ್ತಿ ವಿರಕ್ತಿಗಳು ಹಾಸುಹೊಕ್ಕಾಗಿ ಕಾಣಬಂದರೂ ಈತನ ಪಾಂಡಿತ್ಯ ಉಳಿದ ಹರಿದಾಸರಲ್ಲಿ ಕಾಣಬರದು. ಒಮ್ಮೊಮ್ಮೆ ಇದೇನು ಕನ್ನಡವೊ ಸಂಸ್ಕೃತವೊ ಎಂಬ ಭ್ರಾಂತಿ ಹುಟ್ಟುತ್ತದೆ. 'ದಾಸೋಹಂ ತವ ದಾಸೋಹಂ ತವ। ದಾಸೋಹಂ ತವ ದಾಸೋಹಂ। ವಾಸುದೇವ ವಿಗತಾಘ ಸಂಘ ತವ ॥ ಪ ॥ ಜೀವಾಂತರ್ಗತ ಜೀವನಿಯಾಮಕ। ಜೀವವಿಲಕ್ಷಣ ಜೀವನದ। ಜೀವಾಧಾರಕ ಜೀವರೂಪ ರಾ। ಜೀವ ಭವ ಜನಕ ಜೀವೇಶ್ವರ ತವ ॥ ೧ ॥ ಎಂದೋ, 'ಸ್ವಾಂತ ಧ್ವಾಂತ ನಿಕೃಂತನ ಕಮಲಾ। ಕಾಂತ ಶ್ರೀಮದಾನಂತ ನಮೊ। ಚಿಂತಿತ ಫಲದ ಮದಂತರ್ಯಾಮಿ ದುರಂತ। ಶಕ್ತಿ ಜಯವಂತ ನಮೊ' ಎಂದೋ ಹಾಡಿದಾಗ ಅದನ್ನು ಕನ್ನಡ ಹಾಡಾಗಿ ನಾವು ಸ್ವೀಕರಿಸಬೇಕಾಗಿದೆ. ಆಗಾಗ ಆತನ ಒಲವು ಪ್ರಾಸದತ್ತ ಒಲೆಯುವುದೂ ಉಂಟು. 'ಪಾಲಿಸೆನ್ನ ಗೋಪಾಲಕೃಷ್ಣ। ವ್ಯಾಪ್ತಗುಪ್ತ, ಜಗದಾಪ್ತ, ದೋಷ ನಿರ್ಲಿಪ್ತ, ತೃಪ್ತ, ಗತ ಸುಪ್ತ, ಸುಷುಪ್ತ.' ಇದು ಸಂಸ್ಕೃತಭೂಯಿಷ್ಠವಾದರೆ 'ಶ್ರೀ ವೆಂಕಟಾಚಲನಿವಾಸ, ನಿನ್ನ। ಸೇವಾನು ಸೇವಕರ ದಾಸ, ಎನಿಸಿ। ಜೀವಿಸುವ ನರಗೆ ಆಯಾಸ, ಯಾಕೆ। ಶ್ರೀವರನೆ ಕೊಡು ಎನಗೆ ಲೇಸಾ ॥' ಎಂಬುದು ತಿಳಿಗನ್ನಡ; ಎರಡರಲ್ಲೂ ಪ್ರಾಸ ಬರಿಯ ಪ್ರಯಾಸವಾಗದೆ ಅರ್ಥವತ್ತಾಗಿ, ಭಾವಪೂರ್ಣವಾಗಿದೆ.

ಜಗನ್ನಾಥದಾಸನ ಕೀರ್ತನೆಗಳಲ್ಲಿ ಸಾಕಷ್ಟು ಚಿಂತನಾಂಶವಿದೆ. ಮನುಷ್ಯನ ಜೀವನ ಸಫಲವಾಗುವುದು ಹೇಗೆ? 'ಫಲವಿದು ಬಾಳ್ದುದಕೆ। ಸಿರಿನಿಲಯನ ಗುಣಗಳ ತಿಳಿದು ಭಜಿಸುವುದೆ.' ಭಗವಂತನಲ್ಲಿ ಏನು ಬೇಡಬೇಕು? 'ಇವನೆ ಪಾಲಿಸು ಜನ್ಮ ಜನ್ಮಗಳಲಿ। ಮಧುಸೂಧನನೆ ನಿನ್ನ ಸ್ಮರಣೆ, ದಾಸರ ಸಂಗ,' ಮನುಷ್ಯ ನಿಶ್ಚಿಂತನಾಗಿರಬೇಕಾದರೆ ಭಗವಂತನಲ್ಲಿ ಎಲ್ಲ ಭಾರವನ್ನೂ ಇರಿಸಬೇಕು. 'ನಿನ್ನ ಸಂಕಲ್ಪಾನುಸಾರ ಮಾಡೋ ಎನ್ನ ಸಾಕುವ ದೊರೆಯೆ ತಿಳಿದು ನೀ ನೋಡೊ' ಎಂದು ಭಗವಂತನಲ್ಲಿ ಹೇಳಿಕೊಳ್ಳಬೇಕು. ಆಗ 'ಭಯವಿಲ್ಲ ಪರಾವರೇಶನ ಸಕಲ। ಠಾವಿನಲ್ಲಿ ಚಿಂತಿಸುವ ಭಾವಜ್ಞರಿಂಗೆ'. ನಾವು ಧರ್ಮದಲ್ಲಿ ನಡೆದರೂ ಜನ ನಮ್ಮನ್ನು ನಿಂದಿಸುತ್ತಾರಲ್ಲ? ಜಗನ್ನಾಥದಾಸ ಹೇಳುತ್ತಾನೆ 'ಇರಬೇಕು ನಿಂದಕರು

ಸಜ್ಜನರಿಗೆ | ದುರಿತ ರಾಶಿಗಳೆಲ್ಲ ಪರಿಹರಿಸಲೋಸುಗದಿ, 'ಎಂದು. ಪುರಂದರ ದಾಸನು ನಿಂದಕರನ್ನು ಹಂದಿಗೆ ಹೋಲಿಸಿದರೆ ಜಗನ್ನಾಥದಾಸನು ಇನ್ನೊಂದು ಹೆಜ್ಜೆ ಮುಂದೆ ಹೋಗಿ 'ಮಲವ ತೊಳೆವಳು ತಾಯಿ ನೀರಿನಿಂದಲಿ ನಿತ್ಯ | ತೊಳೆವ ನಿಂದಕ ತನ್ನ ನಾಲಿಗಿಂದ' ಎನ್ನುತ್ತಾನೆ. ಭಾಗವತ ಲಕ್ಷಣವನ್ನು 'ರಂಗ ನಿನ್ನ ಕೊಂಡಾಡುವ ಮಂಗಳಾತ್ಮರಾ | ಸಂಗ ಸುಖವನಿತ್ತು ಕಾಯೊ ಕರುಣಸಾಗರ' ಎಂಬ ಪದ್ಯದಲ್ಲಿ ಮನೋಹರವಾಗಿ ನಿರೂಪಿಸುತ್ತಾನೆ. ಭಕ್ತರು 'ಕಂಡಕಂಡಲ್ಲಿ ವಿಶ್ವರೂಪ ಕಾಂಬರು | ಉಂಡು ಉಣಿಸಿದ್ದೆಲ್ಲ ನಿನ್ನ ಯಜ್ಞವೆಂಬರು | ಬಂಡುಣಿಯಂದದಿ ನಾಮಾಮೃತವನುಂಬರು | ಹೆಂಡಿರು ಮಕ್ಕಳು ನಿನ್ನ ತೊಂಡರೆಂಬರು' ಎಂಬಲ್ಲಿ ವ್ಯಾಪ್ತ್ಯೋಪಾಸನೆ ಎಷ್ಟು ಸ್ಪಷ್ಟವಾಗಿ ವ್ಯಕ್ತವಾಗಿದೆ! ಹಾಗೆಯೇ 'ಅರಿತವರಿಗತಿ ಸುಲಭ ಹರಿಯ ಪೂಜೆ' ಎಂಬ ಆತನ ಕೀರ್ತನೆಯಲ್ಲಿ ಸರ್ವಸಮರ್ಪಣಭಾವ-ಶಾಂತ ಭಾವ- ದಿವ್ಯವಾಗಿ ಪ್ರಕಟಗೊಂಡಿದೆ. ದಾಸಸಾಹಿತ್ಯದಲ್ಲಿ ಅಗ್ರಗಣ್ಯವಾಗಬಹುದಾದ ಈ ಕೀರ್ತನೆಯಲ್ಲಿ ವಿರಾಟಪೂಜೆಯ ದಿಗ್ದರ್ಶನವಾಗುತ್ತದೆ. 'ಹೈಮಾಂಡ ಮಂಟಪವು ಭೂಮಂಡಲವೆ ಪೀಠ, ಸೋಮ ಸೂರ್ಯರೆ ದೀಪ, ಭೂರುಹಗಳು ಚಾಮರಗಳತಿವಿಮಲ ವ್ಯೋಮ ಮಂಡಲ ಛತ್ರ, ಯಾಮಾಷ್ಟಕಗಳಷ್ಟದಳ ಪದ್ಮವು' ಎಂದು 'ಅರಿತವರಿಗತಿ ಸುಲಭ ಹರಿಯ ಪೂಜೆ | ಅರಿಯದವ ನಿರ್ಭಾಗ್ಯತರ ಲೋಕದೊಳಗೆ.' ಹಾಗೆಯೇ 'ಮಳೆಯೆ ಮಜ್ಜನ, ದಿಗ್ವಳಯಗಳೆ ವಸನ, ಮಲಯಜಾನಿಲವೆ ಶ್ರೀ ಗಂಧಧೂಪ' ಇತ್ಯಾದಿಯಾದ ರೂಪಕಗಳು ಭವ್ಯವಾಗಿದ್ದು, ಜಗನ್ನಾಥ ದಾಸನ ಹಿರಿತನಕ್ಕೆ ಹಿಡಿದ ಸೊಡರಿನಂತಿವೆ.

ಜಗನ್ನಾಥದಾಸನು ಕೀರ್ತನೆಗಳನ್ನೂ ಸುಳಾದಿಗಳನ್ನೂ ಬರೆದಿರುವುದಲ್ಲದೆ, ಜನಸಾಮಾನ್ಯರಲ್ಲಿ ಅತ್ಯಂತ ಪ್ರಿಯವಾಗಿದ್ದ ತ್ರಿಪದಿಯ ಛಂದಸ್ಸಿನಲ್ಲಿ ತತ್ವಬೋಧಕವಾದ, ಭಕ್ತಿಭರಿತವಾದ 'ತತ್ವ ಸುವಾಲಿ' ಗಳನ್ನೂ ವಿಷ್ಣುಸ್ತುತಿರೂಪವಾದ ೨೭ ನುಡಿಗಳನ್ನೊಳಗೊಂಡ 'ತಂತ್ರಸಾರ' ವನ್ನೂ ರಚಿಸಿದ್ದಾನೆ. 'ತತ್ವ ಸುವಾಲಿ' ಗಳು ಅತ್ಯಂತ ಸರಳವಾಗಿ ಸುಲಭಗ್ರಾಹ್ಯವಾಗಿವೆ. ಹೃದಯಂಗಮವಾಗಿವೆ. 'ಹರಿ ಭಕ್ತಿಸಾರ' ದಲ್ಲಿ ಪ್ರತಿಪಾದಿತವಾದ ಗಹನ ತತ್ವಗಳು ಇಲ್ಲಿ ಹಾಡಿನ ಛಂದಸ್ಸನ್ನು ಆಶ್ರಯಿಸಿ, ಅಲ್ಪಜ್ಞ

ರಿಗೂ ಆ ಬೆಳಕನ್ನು ನೀಡಿವೆ. 'ಉಂಡು ಉಟ್ಟುದ್ದೆಲ್ಲ ರಂಗನ ಸೇವೆಯೆನ್ನಿ' ಕಂಡ | ಕಂಡದ್ದು ಹರಿಪ್ರೀತಿಯೆನ್ನಿ | ಹರಿಪ್ರೀತಿಯೆನ್ನಿ ಮೂಲೋಕಕ್ಕೆ | ಪಾಂಡವಪ್ರಿಯನೆ ದೊರೆಯೆನ್ನಿ ||

ಜಗನ್ನಾಥದಾಸನನ್ನು 'ರಂಗನೊಲಿದ ದಾಸ' ಎಂದು ಕರೆದು ಗೌರವಿಸಿದ್ದಾರೆ. ಆತನ ಕಾವ್ಯ ಕವನಗಳನ್ನು ಓದಿದಾಗ ಆ ಪ್ರಶಸ್ತಿಗೆ ಆತನು ತಕ್ಕ ಪಾತ್ರನೆನ್ನಿಸುತ್ತದೆ. ಆತನು ರಂಗೋಲಿಯಲ್ಲಿ ದೇವರ ವಿಗ್ರಹಗಳನ್ನು ಬಹು ಸುಂದರವಾಗಿ ನಿರ್ಮಿಸುತ್ತಿದ್ದುದರಿಂದ ಆತನಿಗೆ 'ರಂಗೋಲಿದಾಸ' ನೆಂಬ ಅಡ್ಡ ಹೆಸರೂ ಇತ್ತಂತೆ. ಆತನು ಭಾಗವತೋತ್ತಮನಾಗಿ ಬಾಳಿ, ಸುತ್ತುಮುತ್ತಿನ ಜನಜೀವನವನ್ನು ಹಸನಾಗುವಂತೆ ಮಾಡಿದುದಲ್ಲದೆ ಹಲವು ಶಿಷ್ಯರ ಮೂಲಕ ದಾಸಸಂಪ್ರದಾಯ ಮುಂದುವರಿಯುವಂತೆ ಮಾಡಿ, ಕನ್ನಡಸಾಹಿತ್ಯ ಸಂಸ್ಕೃತಿಗಳ ಇತಿಹಾಸದಲ್ಲಿ ಅಮರವಾದ ಕೀರ್ತಿಗೆ ಪಾತ್ರನಾಗಿದ್ದಾನೆ.

# ಮೈಸೂರು ಒಡೆಯರ ಕಾಲದ ಕನ್ನಡ ಸಾಹಿತ್ಯ.

---

'ವನಿತೆಯರಂತೆ, ಲತೆಯಂತೆ, ಕವಿಯೂ ಆಶ್ರಯಹೀನನಾದರೆ ಶೋಭಿಸನು' ಎಂದು ಸಂಸ್ಕೃತದಲ್ಲಿ ಒಂದು ಸೂಕ್ತಿಯಿದೆ. ಅದು ಬಹುಮಟ್ಟಿಗೆ ನಿಜ. ಲಕ್ಷ್ಮಿ ಸರಸ್ವತಿಯರು ಅತ್ತೆ ಸೊಸೆಯರು ; ಆದ್ದರಿಂದ ಸರಸ್ವತೀಪುತ್ರರಿಗೆ ಲಕ್ಷ್ಮೀಕಟಾಕ್ಷ ಕಡಮೆ. ಅವರು ಬರೆದ ಕಾವ್ಯಗಳನ್ನು ಓದಿ ಅಥವಾ ಓದಿಸಿ ಕೇಳಿ, ಸಂತೋಷಪಟ್ಟು 'ನೀನು ಬರೆ. ನಾನು ನಿನ್ನ ಹೊಟ್ಟೆಬಟ್ಟೆಗಳನ್ನು ನೋಡಿಕೊಳ್ಳುತ್ತೇನೆ.' ಎಂದು ಪ್ರೋತ್ಸಾಹ ಕೊಡುವ ಲಕ್ಷ್ಮೀಪುತ್ರರಿಲ್ಲದಿದ್ದರೆ ಅವರ ಕಾವ್ಯಶಕ್ತಿ ಬಡತನದ 'ಗಾಳಿಗೊಡ್ಡಿದ ದೀಪಾಂಕುರ'ದಂತಾಗಬಹುದು. ಜಗತ್ತಿನಲ್ಲೆಲ್ಲ ಸಾಹಿತ್ಯ ಕಲೆಗಳು ಉಳಿದು ಬೆಳೆದು ಬಂದಿರುವುದು ಅರಮನೆ ಗುರುಮನೆಗಳ ಉದಾರಾಶ್ರಯದಲ್ಲಿಯೇ. ಕನ್ನಡ ಸಾಹಿತ್ಯವನ್ನು ಕುರಿತು ಹೇಳುವುದಾದರೆ, ಅದರ ಅರುಣೋದಯವಾಗಿರುವುದೇ ನೃಪತುಂಗರಾಜನಿಂದ. ಆತ ಬರಿಯ ರಾಜನಲ್ಲ, ಕವಿರಾಜ. ಒಂದು ದೊಡ್ಡ ಕವಿಗಳ ತಂಡವೇ ಆತನ ಶ್ವೇತಚ್ಛತ್ರದ ನೆರಳಿನಲ್ಲಿ ತುಷ್ಟಿಪುಷ್ಟಿಗಳನ್ನು ಪಡೆದಿತ್ತೆಂದು ತೋರುತ್ತದೆ. ಪಂಪಯುಗದ ಕವಿಗಳೆಲ್ಲರೂ ರಾಜಾಸ್ಥಾನದ ಮನ್ನಣೆಗೆ ಪಾತ್ರರಾಗಿದ್ದವರೇ. ಈ ಸಂಪ್ರದಾಯವನ್ನು ಪ್ರತಿಭಟಿಸಿದವನು ಸ್ವತಂತ್ರಯುಗಸ್ಥಾಪಕನಾದ ಹರಿಹರ. ಆದರೇನು ? ಸಂಪ್ರದಾಯಶೀಲರಾದವರು ಆತನನ್ನು ಗಮನಿಸಲಿಲ್ಲ; ಆತನ ಮಾರ್ಗವನ್ನು ಅನುಸರಿಸಲಿಲ್ಲ ಹಿಂದಿನಿಂದಲೂ ನಡೆದು ಬಂದಂತೆ ರಾಜಾಶ್ರಯದಲ್ಲಿ ಚಂಪೂ ಕಾವ್ಯಗಳನ್ನು ಬರೆಯುವ ಸಂಪ್ರದಾಯ ಮುಂದುವರೆಯಿತು. ಹದಿನಾಲ್ಕನೆಯ ಶತಮಾನದಲ್ಲಿ ಸ್ಥಾಪಿತವಾದ ವಿಜಯನಗರ 'ವಿದ್ಯಾನಗರಿ'ಯೂ ಆಯಿತು. ಅದರಲ್ಲಿಯೂ ಪ್ರೌಢದೇವರಾಯನ ಕಾಲದಲ್ಲಿ, ಆತನ ದಂಡನಾಯಕನಾದ ಲಕ್ಕಣ್ಣನು ನೂರೊಂದು ವಿರಕ್ತರಿಗೆ ಪೋಷಣೆ ಪ್ರೋತ್ಸಾಹಗಳನ್ನು ನೀಡಿ, ಕನ್ನಡ ಸಾಹಿತ್ಯಕ್ಕೆ ಸುಗ್ಗಿಯನ್ನು ಒದಗಿಸಿದನು. ವಿಜಯನಗರದ ಕೃಷ್ಣದೇವರಾಯನೂ ಕನ್ನಡ ಕವಿಗಳಿಗೆ ಸಾಕಷ್ಟು ಪ್ರೋತ್ಸಾಹ ನೀಡಿದನು. ಹದಿನಾರನೆಯ ಶತಮಾನದಲ್ಲಿ ವಿಜಯನಗರದ

ಪತನವಾದ ಮೇಲೆ ದಕ್ಷಿಣದಲ್ಲಿ ಮೈಸೂರು ಒಡೆಯರ ರಾಜ್ಯ ನೆಲೆಯಾಗಿ ನಿಂತಿತು. ಈ ರಾಜ್ಯದ ರಮಾರಮಣರು ಕನ್ನಡ ಕವಿಗಳಿಗೆ ಆಶ್ರಯದಾತರಾದರು.

ಮೈಸೂರು ಒಡೆಯರ ಚರಿತ್ರೆ ಹದಿನೇಳನೆಯ ಶತಮಾನದಿಂದ ಆರಂಭವಾಗುತ್ತದೆ. ಅದರೊಡನೆಯೇ ಒಡೆಯರ ಕಾಲದ ಸಾಹಿತ್ಯ ಚರಿತ್ರೆಯೂ ಪ್ರಾರಂಭವಾಗುತ್ತದೆ. ಕ್ರಿ. ಶ. ೧೬೧೦ ರಲ್ಲಿ **ರಾಜ ಒಡೆಯರು** ಶ್ರೀರಂಗಪಟ್ಟಣದಲ್ಲಿ ಪಟ್ಟಾಭಿಷಿಕ್ತರಾಗಿ, ಸ್ವತಂತ್ರ ರಾಜರಾದರು. ಅವರ ದಂಡನಾಯಕನಾದ ತಿರುಮಲಾರ್ಯನು 'ಕರ್ಣ ವೃತ್ತಾಂತ ಕಥೆ' ಯನ್ನು ಸಾಂಗತ್ಯದಲ್ಲಿ ಬರೆದಿದ್ದಾನೆ. ಮಹಾಭಾರತದ ಶಾಂತಿಪರ್ವದಲ್ಲಿ ಬರುವ ಕರ್ಣವೃತ್ತಾಂತವು ಇಲ್ಲಿ ನಿರೂಪಿತವಾಗಿದೆ. ರಾಜ ಒಡೆಯರ ತರುವಾಯ ಪಟ್ಟಕ್ಕೆ ಬಂದ **ಚಾಮರಾಜ ಒಡೆಯರು** (೧೬೧೭-೧೬೩೭) 'ಚಾಮರಾಜೋಕ್ತಿವಿಲಾಸ' 'ಮಣಿಪ್ರಕಾಶ' ಎಂಬ ಎರಡು ಗ್ರಂಥಗಳ ಕರ್ತೃವೆಂಬ ಪ್ರತೀತಿಯಿದೆ. 'ಚಾಮರಾಜೋಕ್ತಿ ವಿಲಾಸ' ವು ವಾಲ್ಮೀಕಿರಾಮಾಯಣಕ್ಕೆ ಗದ್ಯರೂಪದಲ್ಲಿ ಬರೆದಿರುವ ಟೀಕೆ. ಕನ್ನಡ ಗದ್ಯರಾಮಾಯಣಗಳಲ್ಲಿ ಇದು ಮೊಟ್ಟಮೊದಲನೆಯದು. ಗ್ರಂಥಾರಂಭದಲ್ಲಿ ಬರುವ 'ಲೋಕಾನಾಮುಪಕಾರಾಯ ವಿರೂಪಾಕ್ಷೇಣ ಧೀಮತಾ। ವಿದುಷಾ ಕೃತವಾನ್ ಸಮ್ಯಕ್ ಪ್ರತಿಜ್ಞಾಂ ಚಾಮಭೂಪತಿಃ'— ಎಂಬ ಶ್ಲೋಕವನ್ನು ನೋಡಿದರೆ ರಾಜನು ವಿರೂಪಾಕ್ಷನೆಂಬ ಪಂಡಿತನಿಂದ ಈ ಕಾವ್ಯವನ್ನು ಬರೆಸಿರಬೇಕೆಂದು ಭಾಸವಾಗುತ್ತದೆ. ಚಾಮರಾಜರ ಮತ್ತೊಂದು ಗ್ರಂಥ ಮಣಿಪ್ರಕಾಶವು ಸ್ಕಾಂದ ಪುರಾಣಾಂತರ್ಗತ ಬ್ರಹ್ಮೋತ್ತರಖಂಡದ ಗದ್ಯರೂಪದ ಕನ್ನಡ ವ್ಯಾಖ್ಯೆ. ಕಾವ್ಯದೃಷ್ಟಿಯಿಂದ ಇವೆರಡರಲ್ಲಿಯೂ ಗಮನಾರ್ಹವಾದುದೇನೂ ಇಲ್ಲ.

ಚಾಮರಾಜನ ಆಶ್ರಯದಲ್ಲಿದ್ದ ರಾಮಚಂದ್ರನೆಂಬುವನು ಶಾಲಿಹೋತ್ರನ ಅಶ್ವಶಾಸ್ತ್ರವನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾನೆ. 'ಬಾಲಕರರಿವಂತೆ ಸಾಂಗೋಪಾಂಗವಾಗಿ ಕನ್ನಡಿಸಿದೆನು' ಎಂಬುದು ಕವಿಯ ಹೇಳಿಕೆ. ಇದು ಲಲಿತವಾಗಿದ್ದು ಚಾಮರಾಜನ ಯಶೋರೂಪವಾಗಿದೆಯೆಂದು ಕವಿ ಹೇಳಿಕೊಂಡಿದ್ದಾನೆ. ಚಾಮರಾಜನ ಮತ್ತೊಬ್ಬ ಆಶ್ರಿತ

ನಾದ ಪದ್ಮಣ ಪಂಡಿತನು 'ಚಾಮರಾಜೀಯ' ವೆಂಬ ಹೆಸರಿನಿಂದ ಹಯಸಾರ ಸಮುಚ್ಚಯವನ್ನು ಬರೆದಿದ್ದಾನೆ. ಕಂದ ರೂಪದಲ್ಲಿರುವ ಈ ಗ್ರಂಥ ಇಪ್ಪತ್ತು ಅಧ್ಯಾಯಗಳಷ್ಟು ವಿಸ್ತಾರವಾಗಿದೆ. ಕ್ಷಾತ್ರತೇಜಸ್ಸಿನಿಂದ ತುಂಬಿದ ಆ ಕಾಲದಲ್ಲಿ ಕುದುರೆಗಳಿಗೂ, ಅವುಗಳ ಲಕ್ಷಣಶಾಸ್ತ್ರಕ್ಕೂ ಇದ್ದ ಪ್ರಾಮುಖ್ಯತೆ ಅರ್ಥವಾಗುತ್ತದೆ, ಈ ಗ್ರಂಥಗಳ ಸೃಷ್ಟಿಯನ್ನು ನೋಡಿದರೆ.

ಮೈಸೂರಿನ ಅರಸರಲ್ಲಿ **ಕಂಠೀರವ ನರಸರಾಜರು** (೧೬೩೮-೧೬೫೯) ಹೆಸರಿಗೆ ತಕ್ಕಂತೆ ಸಿಂಹ ಪರಾಕ್ರಮಿಯಾಗಿದ್ದವರು. ಅವರು ತಮ್ಮ ರಾಜ್ಯವನ್ನು ವಿಸ್ತರಿಸಿದಂತೆಯೇ ವಿದ್ವಜ್ಜನ ಗೋಷ್ಠಿಯನ್ನು ವಿಸ್ತರಿಸಿದರು. ಅವರ ಅರಮನೆಯಲ್ಲಿ ಚಿತ್ರಶಾಲೆ, ನಾಟಕಶಾಲೆಗಳಿಗೆ ಅಸ್ತಿತ್ವ ದೊರೆಯಿತು. ಕವಿ, ಗಮಕಿ, ವಾದಿ, ವಾಗ್ಮಿಗಳಿಗೆ ಅಲ್ಲಿ ಪುರಸ್ಕಾರ ದೊರೆಯಿತು. ರಾಜರ ಆಶ್ರಯದಲ್ಲಿದ್ದ ಭಾಸ್ಕರನೆಂಬ ಕವಿ 'ಬೇಹಾರಗಣಿತ' ವನ್ನು ಬರೆದನು. 'ಸರಸಂ ಸತ್ಕವಿವಲ್ಲಭಂ' ಆದ ತಾನು ತನ್ನ ಕವಿತಾಶಕ್ತಿಯನ್ನೂ ಗಣಿತಶಕ್ತಿ ಪರಿಣತಿಯನ್ನೂ ಪ್ರದರ್ಶಿಸುವುದಕ್ಕಾಗಿ ತಾನು ಈ ಗ್ರಂಥವನ್ನು ಬರೆದುದಾಗಿ ಕವಿಯ ಹೇಳಿಕೆ. ಕವಿತಾಶಕ್ತಿಯ ಪ್ರದರ್ಶನಕ್ಕೆ ಇಲ್ಲಿ ಅವಕಾಶ ಅಷ್ಟಾಗಿ ಇಲ್ಲ; ಆದರೆ ಆತನ ಶಾಸ್ತ್ರಪರಿಣತಿ ಮೆಚ್ಚತಕ್ಕುದೇ ಸರಿ. ರಣಧೀರನ ಆಶ್ರಯದಲ್ಲಿದ್ದ ಮತ್ತೊಬ್ಬ ಕವಿ ಗೋವಿಂದ ವೈದ್ಯನು 'ಕಂಠೀರವ ನರಸರಾಜ ವಿಜಯವನ್ನು' ಸಾಂಗತ್ಯದಲ್ಲಿ ಬರೆದಿದ್ದಾನೆ. ಇದನ್ನು ರಾಜರ ದಳವಾಯಿಯಾದ ನಂಜರಾಜೇಂದ್ರನ ಪ್ರೇರಣೆಯಿಂದ ರಚಿಸಿದನಂತೆ. ಇದನ್ನು ಭಾರತಿ ನಂಜನೆಂಬುವನು ರಾಜಾಸ್ಥಾನದಲ್ಲಿ ಓದಿದನಂತೆ. ತಾನು ವೇದಾಧ್ಯಯನ ಸಂಪನ್ನನಾಗಿದ್ದುದಾಗಿ ಕವಿ ಹೇಳಿಕೊಂಡಿದ್ದಾನೆ. ಛಂದಸ್ಸು, ಗಣ, ಲಕ್ಷ್ಯ, ಲಕ್ಷಣಗಳೂ ಆತನಿಗೆ ಗೊತ್ತಂತೆ. ತನ್ನ ಕಾವ್ಯ

ಸೊಕ್ಕು ಜವ್ವನೆಯ ತಕ್ಕೆಯ ಸವಿಯಂದದೆ
ಸಕ್ಕರೆ ಚಿಲುಪಾಲಿನಂತೆ |
ಅಕ್ಕರಿಂದಲಿ ಕೇಳುವರಿಗತಿ ಹರುಷವ
ಮಿಕ್ಕೆಸಗುವುದೀ ಕಾವ್ಯ

ಎಂದು ಹೇಳಿಕೊಂಡಿದ್ದಾನೆ. ತನ್ನ ಕಾವ್ಯವನ್ನು 'ನರಸ್ತುತಿ' ಯೆಂದು

ತೆಗಳಕೂಡದಂತೆ! ಏಕೆಂದರೆ 'ನಾವಿಷ್ಣುಃ ಪೃಥಿವೀಪತಿಯೆಂದು ವೇ| ದಾವಳಿಗಳು ಸಾರುತಿವೆ ಕೋ.' ಕಂಠೀರವನು ಅಂದಿನ ನರಸಿಂಹನ ಅಪ ರಾವತಾರವಂತೆ. 'ಕಲಿಯುಗ ದನುಜರ ಸಂಹರಿಸುವೊಡೆ ಮನುಜಾವತಾರದೆ ಬಂದ' ಅಂತಹ ಮಹಿಮನ 'ಸುಚರಿತ್ರ ಶೌರ್‍ಯಗಳ, ಸುತ್ರಾಮ ಭೋಗನ ಧರ್ಮದಿರವ, ನೇಮದ ಮಾಂಗಲ್ಯ ಕೃತಿಯಾಗೆ ಪೇಳ್ವೆನು' ಎಂದು ಹೇಳಿ ಕೊಂಡು ರಾಜನ ಚರಿತ್ರೆಯನ್ನು ಪ್ರಾರಂಭಿಸುತ್ತಾನೆ. ಕಾವ್ಯಸಹಜವಾದ ವರ್ಣನಾಭಾಗಗಳನ್ನು ಬಿಟ್ಟರೆ ಈ ಗ್ರಂಥವು ಒಂದು ಇತಿಹಾಸ; ಕಂಠೀರವ ನರಸರಾಜ ದಿಗ್ವಿಜಯ ಪರಂಪರೆಯನ್ನು ದಿಗ್ದರ್ಶಿಸುತ್ತದೆ ಇದರಲ್ಲಿ ಬರುವ ಯುದ್ಧವರ್ಣನೆ ಸಹಜವಾಗಿದೆ. ಯುದ್ಧ ಪದ್ಧತಿ. ಪಾಳೆಯ ರಚನೆ. ಉಡುಪುಗಳು, ಆಯುಧಗಳು—ಇತ್ಯಾದಿ ವಿಷಯಗಳನ್ನು ಕುರಿತ ವಿಸ್ತೃತ ವರ್ಣನೆಗಳನ್ನು ನಾವಿಲ್ಲಿ ಕಾಣುತ್ತೇವೆ. ವೀರರಸಪ್ರಧಾನವಾದ ಈ ಕಾವ್ಯ ದಲ್ಲಿ ಕವಿಯು 'ಮದನ ಮೋಹಿನಿ' ಯ ಪ್ರಸಂಗವನ್ನು ತಂದು ಶೃಂಗಾರ ನಿರೂಪಣೆಗೂ ಆಸ್ಪದ ಕಲ್ಪಿಸಿಕೊಂಡಿದ್ದಾನೆ. ಈ ಪ್ರಸಂಗವು ಕಾವ್ಯಕ್ಕೆ ಅಪ್ರಾಸಂಗಿಕವಾದರೂ ಮನೋಹರವಾಗಿದೆ. ಮದನಮೋಹಿನಿಯೆಂಬ ವೇಶ್ಯಾರತ್ನ 'ಎನ್ನ ರೂಪಿಗೆ ತಕ್ಕಂಥ ಪುರುಷ,' 'ರೂಪಜಯಂತನೆನಿಪ' ಕಂಠೀರವನೆಂದು ಚಿತ್ರಲೇಖೆಯಿಂದ ಕೇಳಿ, ಆತನನ್ನು ತನ್ನ ಗೆಳತಿಯ ಸಹಾಯದಿಂದ ಪಡೆದು ಸಂತಸಗೊಂಡುದು, ಈ ಕಥೆಯ ಹುರುಳು. ಎರಡು ಸಂಧಿಗಳಷ್ಟು ವಿಸ್ತಾರವಾಗಿ ಹರಡಿರುವ ಈ ಕಥೆ ಔಚಿತ್ಯಕ್ಕೆ ಲೋಪ ತಂದಿ ದ್ದರೂ ಹೃದಯಂಗಮವಾಗಿದೆ. ಕವಿಯ ಶೈಲಿ ತಿಳಿಯಾಗಿದೆ, ಕಥಾನಿರೂ ಪಣೆ ನಿರರ್ಗಳವಾಗಿದೆ. ಶ್ರೀರಂಗಪಟ್ಟಣವನ್ನು ವರ್ಣಿಸುವಲ್ಲಿ ಬರುವ ಕೆಲವು ವರ್ಣನೆಗಳು ಮನೋಹರವಾಗಿವೆ; ಆ ಕಾಲದ ಜನಜೀವನಕ್ಕೆ ಕನ್ನಡಿ ಹಿಡಿಯುತ್ತವೆ. ಬಹುಶಃ ಅನೇಕ ಉರ್ದು ಪದಗಳು ಆಗಿನ ಕಾಲದಲ್ಲಿ ಕನ್ನಡದಲ್ಲಿ ಬಳಕೆಗೆ ಬಂದಿರಬೇಕು. ಕವಿಯು ಅವುಗಳನ್ನು ಧಾರಾಳವಾಗಿ ಬಳಸುತ್ತಾನೆ. ಇಷ್ಟೇ ಅಲ್ಲ. ಇಡೀ ಪದ್ಯವನ್ನೇ ಉರ್ದುವಿನಲ್ಲಿ ಬರೆಯು ತ್ತಾನೆ—'ಅರೆ ಭಾಂಚೋದು ಗಂಡಿಯುಕು ಕುಚ್ ನಹಿ ದೇವ| ಪಿರ ಮಾರುಮಾರೆನುತ' ಪಿರಿಯಾಪಟ್ಟಣದ ತುರುಕರು ಉರವಣಿಸಿದರಂತೆ!

ದಿಲ್ಕರನ ಸಾಹೇಬು ಅಬ್ ತುಮೆ ಜಾನಫರ್| ಖಿಲ್ಮಿ ಆ ಸಬಿ ಜೋಡ್ಲೆ

ಡಲ್ಕು ತಲವಾರಿಮೇ ಮಾಗಯತೋ ಹಮೇ ಹಲ್ಕಹೋಯೇಂಗೆ
ರಾಜಾಕು ||

ಕನ್ನಡದಲ್ಲಿ ಇಂದು ಗುರುತುಹಿಡಿಯಲು ಅಸಾಧ್ಯವಾಗುವಂತೆ ಬೆರೆತು ಹೋಗಿರುವ ಉರ್ದುಪದಗಳು ಹೇಗೆ ಇಲ್ಲಿ ಬಂದು ಸೇರಿದುವೆಂಬುದರ ಇತಿಹಾಸ ನಮಗಿಲ್ಲಿ ಸ್ವಲ್ಪಮಟ್ಟಿಗೆ ಸೂಚಿತವಾಗುತ್ತದೆ.

**ಚಿಕ್ಕದೇವರಾಜ ಒಡೆಯರ** ಕಾಲ (೧೬೭೨-೧೭೦೪) ಮೈಸೂರ ಇತಿಹಾಸದಲ್ಲಿ ಒಂದು ಸ್ವರ್ಣಯುಗ; ಒಡೆಯರ ಕಾಲದ ಸಾಹಿತ್ಯಚರಿತ್ರೆಯಲ್ಲಿಯೂ ಇದು ಸ್ವರ್ಣಯುಗ. ಚಿಕ್ಕದೇವರಾಜನು ತನ್ನ ಭುಜಬಲದಿಂದ ಮೈಸೂರು ರಾಜ್ಯವನ್ನು ಅಭೂತಪೂರ್ವವಾಗಿ ವಿಸ್ತರಿಸಿ 'ಅಪ್ರತಿಮವೀರ' ನೆನಿಸಿದನು; ರಾಜ್ಯಾಡಳಿತವನ್ನು ಸುವ್ಯವಸ್ಥೆಗೊಳಿಸಿ ರಾಮರಾಜ್ಯವನ್ನಾಗಿ ಮಾಡಿದನು; ಅಪಾರವಾದ ಹಣವನ್ನು ಗಳಿಸಿ 'ನವಕೋಟಿ ನಾರಾಯಣ' ನೆನಿಸಿಕೊಂಡನು. ಈತನ ಕೀರ್ತಿ ದೆಹಲಿಯವರೆಗೆ ವ್ಯಾಪಿಸಿತು. ಚಕ್ರವರ್ತಿಯಾಗಿದ್ದ ಅವರಂಗಜೇಬನು ಈತನನ್ನು ಮನ್ನಿಸಿ 'ರಾಜಾ ಜಗದೇವ' ನೆಂಬ ಬಿರುದಿತ್ತು, ಸಖ್ಯವನ್ನು ಬೆಳಸಿ, ಸನ್ಮಾನಿಸಿದನು. ರಾಜಕೀಯವಾಗಿ ಮಹೋನ್ನತಿಯನ್ನು ಪಡೆದಿದ್ದ ರಾಜನು ಅದ್ವಿತೀಯ ದೈವಭಕ್ತನೂ ಆಗಿದ್ದನು ಮೇಲುಕೋಟೆಯ ನಾರಾಯಣಸ್ವಾಮಿಯಲ್ಲಿ ಆತನಿಗೆ ಅಪಾರವಾದ ಭಕ್ತಿಯಿತ್ತು. 'ಚಿಕದೇವರಾಜ ಬಿನ್ನಪ' ಎಂಬ ಹೆಸರಿನಿಂದ ಆತನು ತನ್ನ ಇಷ್ಟದೈವಕ್ಕೆ ಮೂವತ್ತು ಬಿನ್ನಪಗಳನ್ನು ಸಲ್ಲಿಸಿದ್ದಾನೆ. ಸಂಗೀತ ಸಾಹಿತ್ಯಗಳೆರಡರಲ್ಲಿಯೂ ಆತನಿಗೆ ಅತಿಶಯವಾದ ಆದರ, ಅಭಿರುಚಿ. ಪರಿಶ್ರಮ. 'ರಸಿಕಜನ ಕರ್ಣರಸಾಯನೀಕೃತ ಸಂಗೀತ ವಿಸ್ತರಂ' 'ಸಾಹಿತ್ಯ ವಿದ್ಯಾನಿಕಷಪ್ರಸ್ತರಂ'—ಎಂಬ ಆತನ ಬಿರುದುಗಳು ಸಾರ್ಥಕವಾದುವು. ಆತನು ವೀಣೆ ಬಾರಿಸಿದನೆಂದರೆ ಕಸ್ತೂರಿಯ ಕಂಪಿನಂತೆ ನಾದ ಕವಿಯುತ್ತಿತ್ತಂತೆ! ಸಾಹಿತ್ಯಜಗತ್ತಿನಲ್ಲಂತೂ ಆತ ಚಿರಜೀವಿ. ಆತನು ಸಂಸ್ಕೃತದಲ್ಲಿ 'ಯದುಗಿರಿ ನಾರಾಯಣಸ್ತವ', 'ಸತ್ ಶೂದ್ರಾಚಾರ ನಿರ್ಣಯ' ಗಳನ್ನೂ ಕನ್ನಡದಲ್ಲಿ 'ಚಿಕ್ಕದೇವರಾಜ ಬಿನ್ನಪ'. 'ಗೀತಗೋಪಾಲ', 'ಭಾರತ' 'ಭಾಗವತ' ಮತ್ತು 'ಶೇಷಧರ್ಮ' ಎಂಬ ಗ್ರಂಥಗಳನ್ನೂ ಬರೆದಿರುವನೆಂದು ಪ್ರತೀತಿ. ಇವುಗಳಲ್ಲಿ ಕೆಲವು ಆತ ಬರೆದುವಲ್ಲ

ವೆಂಬೂ ತೋರುತ್ತದೆ. ಆತನು ಗ್ರಂಥರಚನೆ ಮಾಡಿರಲಿ, ಅಥವಾ ಇತರರು ಮಾಡಿ ಆತನಲ್ಲಿ ಆರೋಪಿಸಿರಲಿ. ಆತನ ಪೋಷಣೆಯಲ್ಲಿ ತಿರುಮಲಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ, ಶೃಂಗಾರಮ್ಮ, ಹೊನ್ನಮ್ಮ, ವೇಣುಗೋಪಾಲವರಪ್ರಸಾದ, ತಿಮ್ಮಕವಿ, ಮಲ್ಲಿಕಾರ್ಜುನ, ಚಿದಾನಂದಕವಿ, ಮಲ್ಲರಸ—ಮೊದಲಾದ ಕವಿಗಳು ಇದ್ದುದಂತೂ ನಿಶ್ಚಯ ; ಏಕಕಾಲದಲ್ಲಿ ಇಷ್ಟು ಜನ ಕವಿಗಳು ಒಂದೆಡೆ ಸೇರಿ, ಅಮಿತವಾದ ಕಾವ್ಯರಚನೆಯಿಂದ ಕನ್ನಡ ಸಾಹಿತ್ಯದ ತುಷ್ಟಿಪುಷ್ಟಿಗಳನ್ನು ಸಾಧಿಸಿದುದು ನಿಜ. ಆತನ ಹೆಸರು ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಅಮೂಲ್ಯವಾದುದು.

**ಚಿಕ್ಕದೇವರಾಜ ಬಿನ್ನಪ:** ಇಲ್ಲಿನ ಮುವ್ವತ್ತು ಬಿನ್ನಪಗಳೂ ವಿಶಿಷ್ಟಾದ್ವೈತಮತದ ಸಾರವನ್ನು ನಿರೂಪಿಸಹೊರಟಿವೆ. ಗದ್ಯರೂಪದಲ್ಲಿರುವ ಈ ಪ್ರತಿಯೊಂದು ಬಿನ್ನಪದ ಆರಂಭದಲ್ಲಿಯೂ ಒಂದೊಂದು ಕಂದಪದ್ಯವಿದೆ. ಈ ಬಿನ್ನಪಗಳು ರಾಜ್ಯದ ಪ್ರಜೆಗಳಿಗೆಲ್ಲಾ (ಇಹದಲ್ಲಿ ರಾಜನು ಆಗಲೆ ಸುಖವನ್ನು ಒದಗಿಸಿಕೊಟ್ಟಿದ್ದಾನೆ.) ಪರಗತಿಯನ್ನು ಸಾಧಿಸಿಕೊಡಬೇಕೆಂಬ ಉದಾತ್ತ ಧ್ಯೇಯದಿಂದ ಪ್ರಚೋದಿತವಾದವು. ಗೀತೆಯಲ್ಲಿ ಶ್ರೀಕೃಷ್ಣನು ಭಕ್ತಿಯಿಂದ ತನ್ನನ್ನು ನಂಬಿದವರಿಗೆ ಅವರು ಪಾಪಿಗಳಾದರೂ, ಯಾವ ಜಾತಿಯವರಾದರೂ ಮುಕ್ತಿಯನ್ನು ನೀಡುವುದಾಗಿ ಕೊಟ್ಟಿರುವ ಅಭಿವಚನಕ್ಕೆ ತಕ್ಕಂತೆ 'ಅಕ್ಕರಮನರಿಯದೊಕ್ಕಲಿಗರ್ಗಂ ಪೆಣ್ಗಳ್ಗಂ ಸಕ್ಕದದಿಂ ತತ್ವಜ್ಞಾನಮುಪ್ಪುದರಿದು ; ಎಂದು ಎಲ್ಲರುಮರಿವಂತೆ ಕನ್ನಡವಾತಿನೊಳಂ ಮೆಲ್ನುಡಿಗಳಿಂದೆ ಅಖಿಲ ತತ್ವಾರ್ಥಂಗಳಂ ಸಂಗತಿಗೊಳಿಸಿ' ಬಿನ್ನಪ ರೂಪವಾಗಿ ಹೇಳುತ್ತಿರುವೆನೆಂಬುದು ಕವಿಯ ಆಶಯ. ಆತನು ಬಳಸಿರುವ ಭಾಷೆ ಆತನ ಆಶಯವನ್ನು ಎಷ್ಟರಮಟ್ಟಿಗೆ ಸಾರ್ಥಕಗೊಳಿಸೀತೆಂಬುದು ಸಂಶಯವಾದರೂ ಆಶಯ ಉತ್ತಮವಾದುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಇಷ್ಟೇ ಅಲ್ಲ, ಬಿನ್ನಪಗಳನ್ನು ಓದಿದಮೇಲೆ ಅವುಗಳ ಕವಿ ತಿಳಿಮನಸ್ಸಿನ, ಸರಳ ಸ್ವಭಾವದ ಶ್ರೇಷ್ಠಭಕ್ತನೆಂದು ಬೋಧೆಯಾಗುತ್ತದೆ. ಕನ್ನಡ ಗದ್ಯದ ಬೆಳವಣಿಗೆಯಲ್ಲಿ ಬಿನ್ನಪಕ್ಕೆ ವಿಶಿಷ್ಟಸ್ಥಾನವಿದೆ.

ಚಿಕ್ಕದೇವರಾಜನ ಭಾರತ, ಭಾಗವತ, ಶೇಷಧರ್ಮ—ಇವು ಆಯಾ ಹೆಸರಿನ ಸಂಸ್ಕೃತ ಗ್ರಂಥಗಳ ಕನ್ನಡ ಗದ್ಯಾನುವಾದಗಳು. ಕವಿಯು 'ಭಾರ

ತ'ವು ಶಾಂತಿಪರ್ವದಿಂದ ಮುಂದಕ್ಕೆ ಮಾತ್ರ ಇದೆ. ಬಹುಶಃ ಅದು ವೇದಾಂತ ವಿಷಯಗಳಿಂದ ತುಂಬಿರುವುದೇ ಅದಕ್ಕೆ ಕಾರಣವಿರಬಹುದು.

ಚಿಕ್ಕದೇವರಾಜನವೆಂದು ಹೇಳಲಾದ ಗ್ರಂಥಗಳಲ್ಲಿ 'ಗೀತಗೋಪಾಲ' ಅತ್ಯಂತ ಪ್ರಸಿದ್ಧವಾದುದು. ಇದು ಜಯದೇವಕವಿಯ 'ಗೀತಗೋವಿಂದ'ದಂತೆ ಕೀರ್ತನರೂಪವಾದುದು. ಇದರಲ್ಲಿ ಎರಡು ಭಾಗಗಳಿವೆ. ಒಂದೊಂದು ಭಾಗದಲ್ಲಿಯೂ ಏಳು ಖಂಡಗಳೂ, ಪ್ರತಿಖಂಡದಲ್ಲಿಯೂ ಏಳು ಕೀರ್ತನಗಳೂ ಇವೆ. ಆದ್ದರಿಂದ ಇದನ್ನು 'ಸಪ್ತಪದಿ' ಎಂದು ಕರೆಯುತ್ತಾರೆ. ಒಂದೊಂದು ಸಪ್ತಪದಿಯ ಆರಂಭದಲ್ಲಿಯೂ ಆ ಸಪ್ತಪದಿಯಲ್ಲಿ ಹೇಳಿರುವ ವಿಷಯವು ಸಂಗ್ರಹವಾಗಿ ಗದ್ಯರೂಪದಲ್ಲಿ ಕೊಟ್ಟಿದೆ. 'ಹರಿಕೀರ್ತನವೊಂದೆ ಪರಗತಿಗನುಕೂಲ' ಎಂಬ ಸಂಬುಗೆಯಿಂದ ಹೊರಟ ಕವಿ—

ಪಾಲಂ ಬಯಸಿದ ರೋಗಿಗೆ
ಪಾಲಿಂದೌಷಧಮನೀವ ವೈದ್ಯನ ತೆಱದಿಂ
ದೀ ಲೋಗರೊಲ್ವ ಗೀತದ
ಮೂಲದೊಳೇ ಮುಕ್ತಿಗತಿಯ ಮೊಗದೋರಿಸಿದಂ

ಹಾಲನ್ನು ಬಯಸಿದ ರೋಗಿಗೆ ಹಾಲಿನಿಂದಲೆ ಔಷಧವನ್ನು ಕೊಡುವ ವೈದ್ಯನಂತೆ, ಲೋಕದ ಜನರು ಒಲಿಯುವ ಸಂಗೀತರೂಪದಿಂದಲೇ ಮುಕ್ತಿ ಮಾರ್ಗವನ್ನು ತೋರಿಸಿಕೊಟ್ಟನಂತೆ! ನಿಜ. ಇಲ್ಲಿನ ನುಡಿಗಳು ಭಕ್ತಿಯ ಭಾರದಿಂದ ಬಳುಕುತ್ತವೆ. ಸಂಗೀತಕ್ಕೆ ಅಳವಡಿಸಿದಾಗ ಇವು ಕಿವಿಗೆ ಇಂಪನ್ನೂ, ಹೃದಯಕ್ಕೆ ತಂಪನ್ನೂ, ಆತ್ಮಕ್ಕೆ ಸೊಂಪನ್ನೂ ನೀಡಬಲ್ಲವು. ಸಪ್ತಮ ಸಪ್ತಪದಿಯಲ್ಲಿ ದಿವ್ಯ ಮಂಗಳವಿಗ್ರಹನಾದ ಪರಮಾತ್ಮನ 'ದಿವ್ಯ ಮಂಗಳವಿಗ್ರಹ ಗುಣಂಗಳನನುಭವಿಸುವರ್' ಎಂದು ಹೇಳಿ ಈ ಕೀರ್ತನೆಯನ್ನು ಹಾಡಿದ್ದಾನೆ, ಕವಿ. ಅದರ ಒಂದೆರಡು ನುಡಿಗಳನ್ನು ನೋಡಿ—

ರಾಗ—ಯದುಕುಲ ಕಾಂಭೋಧಿ ; ತಾಳ : ಝಂಪೆ.

ಕಂಗೊಳಿಸದಿರಲಾರೆ ಕಣ್ಣ ಪುಣ್ಯದ ಬೆಳಸ। ಕಂಗೊಳಿಸದಿರಲಾರೆನೆ
ಪೊಂಗೊಳಲ ನುಡಿಸುತಿಳಿಹೊತ್ತಿನೊಳು ಪುರವೀಧಿ। ಶಿಂಗರಿಸಿ
ಮೆರೆವ ಹರಿಯ ಸಿರಿಯ ॥ ಪ ॥
ಕ್ರಮದಿ ನಡು ತೋಳ್ಮುಡಿಗಳೊಂದಿಸಿಸು ಕೊಂಕಿನೊಳು ಕಮನೀಯ

ವೆಂದೆನಿಸಿ ಮೆರೆಯೆ |
ಸಮತಳದಿ ನಿಂದಡಿಯ ಮುಂದೆ ಮತ್ತೊಂದಡಿಯ ಸಾರ್ಚಿಯುಂಗು
ಟವನೂರಿ |
ರಮಣೀಯ ರೇಖೆಯೊಳು ನಿಂದು ಕೊಳಲುಲಿಗೊಳುವ ರಾಯ
ಗೋವಳನ ತೋರೆ, ನೀರೆ ‖ ೧ ‖
ಕಳೆವೆತ್ತ ಕಸ್ತುರಿಯ ವೀಣೆಯೊಡನೊಡನುಣ್ಮೆ ಕವಿವ ತನಿಗಂಪಿನಂತೆ |
ಬಳೆವ ತಾನದ ಗಮಕಗತಿಯ ವೈಖರಿಗೆ ಮೊಗ ಬಗೆಬಗೆಯ ಭಾವ
ವಡೆಯೆ |
ಕೊಳಲಿಗಿಂದುಟಿಯ ಸವಿಮೋರಿಯೊಳದನಿಗೊಳುವ! ಕೊನಬು
ಗೋವಳನ ತೋರೆ, ನೀರೆ

ಮೊದಲ ನುಡಿ ಮುದ್ದು ಗೋಪಾಲಕೃಷ್ಣನ ಮನೋಹರ ಚಿತ್ರವನ್ನು ಕಣ್ಣೆದುರಿಗೆ ಕಟ್ಟುತ್ತಿದ್ದರೆ, ಎರಡನೆಯ ನುಡಿ ಸಂಗೀತದ ಮಾಧುರ್ಯವನ್ನು ಹೃದಯಸಂವೇದ್ಯವಾಗುವಂತೆ ಬಣ್ಣಿಸುತ್ತದೆ.

'ಗೀತಗೋಪಾಲ'ವನ್ನೂ 'ಬಿನ್ನಪ'ವನ್ನೂ ಚಿಕ್ಕದೇವರಾಜನ ಆಸ್ಥಾನಕವಿ ತಿರುಮಲಾರ್ಯನು ಬರೆದಿರಬೇಕೆಂದು ಭಾವಿಸಲು ಸಾಕಷ್ಟು ಕಾರಣಗಳಿವೆ. ಅನ್ನದಾತನಲ್ಲಿನ ಕೃತಜ್ಞತೆ, ಭಕ್ತಿ, ಪ್ರೇಮ ಆತನನ್ನು ಹೀಗೆ ಮಾಡಲು ಪ್ರೇರೇಪಿಸಿದ್ದರೆ ಆಶ್ಚರ್ಯವೇನೂ ಇಲ್ಲ. ಈ ಕವಿಯ 'ಅಪ್ರತಿಮವೀರ ಚರಿತ್ರೆ,' 'ಚಿಕ್ಕದೇವರಾಯವಿಜಯ'ಗಳಲ್ಲಿ 'ಬಿನ್ನಪ' 'ಗೀತಗೋಪಾಲ'ದ ಪದ್ಯಗಳು ದೊರೆಯುವುದರಿಂದಲೂ, ಈ ಎರಡು ಕೃತಿಗಳಲ್ಲಿಯೂ ಬರುವ ಚಿಕ್ಕದೇವರಾಜನ ಪ್ರಶಂಸೆಗಳು ಸ್ವಪ್ರಶಂಸೆಗಳಾಗಿರಲಾರವೆಂಬುದರಿಂದಲೂ—ಯಾರೂ ತಮ್ಮನ್ನು ತಾವೇ ಹಾಗೆ ಹೊಗಳಿಕೊಳ್ಳಲಾರರು—ಈ ಎರಡೂ ಕೃತಿಗಳು ತಿರುಮಲಾರ್ಯನವೇ ಇರಬಹುದು. ಯಾರವಾದರೂ ಅವು ಸ್ತೋತ್ರಾರ್ಹವಾದ ಕೃತಿಗಳೇ.

ಇನ್ನು ಚಿಕ್ಕದೇವರಾಜರ ಆಶ್ರಯದಲ್ಲಿದ್ದ ಕವಿಗಳನ್ನು ಕುರಿತು ಈಗ ಸ್ವಲ್ಪ ವಿಚಾರಮಾಡೋಣ.

**ತಿರುಮಲಾರ್ಯ :**

ಚಿಕ್ಕದೇವರಾಜನ ಆಸ್ಥಾನಕವಿಗಳಲ್ಲಿ ಅಗ್ರಗಣ್ಯನಾದವನು ತಿರುಮ

ಲಾರ್ಯ. ಈತನ ತಂದೆ ಆಳಸಿಂಗರಾರ್ಯನು. ಚಿಕ್ಕದೇವರಾಜನ ತಂದೆ ದೊಡ್ಡ ದೇವರಾಜರಲ್ಲಿ ಪೌರಾಣಿಕನಾಗಿ ಪೂಜ್ಯನಾಗಿದ್ದವನು; ತಾಯಿ ಸಿಂಗಾರಮ್ಮ 'ಕರ್ಣವೃತ್ತಾಂತಕಥೆ'ಯನ್ನು ಬರೆದ ಪ್ರಧಾನಿ ತಿರುಮಲಾರ್ಯನ ಮಗನ ಮಗಳು. ಈ ಸಾತ್ವಿಕದಂಪತಿಗಳ ಹಿರಿಯಮಗನಾಗಿ ಹುಟ್ಟಿದ ತಿರುಮಲಾರ್ಯನು ಬಾಲ್ಯದಲ್ಲಿ ಚಿಕ್ಕದೇವರಾಜನ ಸಹಪಾಠಿಯಾಗಿ, ಗೆಳೆಯನಾಗಿ, ಗೆಳೆಯನ ಆಸ್ಥಾನದಲ್ಲಿ ಪಂಡಿತನಾಗಿ, ಕಡೆಗೆ ಆತನ ಮಂತ್ರಿಯೂ ಆದನು. ರಾಜರಿಗೂ ಈತನಿಗೂ ಅತಿಶಯವಾದ ಪ್ರೀತಿ ಬೆಳೆದುಬಂದಿತ್ತೆಂದು ತೋರುತ್ತದೆ. 'ಚಿಕ್ಕದೇವರಾಜವಿಜಯ'ದಲ್ಲಿ ಕವಿ ತನ್ನನ್ನು 'ಅವನೊಲ್ಮೆ ಪುರುಷಾಕೃತಿವೆತ್ತವೊಲಿಸೆವ ಸುಕೃತಿ'—ಆತನ (ಚಿಕ್ಕದೇವರಾಜನ) ಪ್ರೇಮವೇ ಪುರುಷಾಕೃತಿಯನ್ನು ತಾಳಿದಂತೆ ಪ್ರಕಾಶಿಸುವ ಪುಣ್ಯವಂತ— ಎಂದು ಹೇಳಿಕೊಂಡಿರುವುದನ್ನು ನೋಡಿದರೆ ಇದು ಸ್ಪಷ್ಟವಾಗುತ್ತದೆ. ಪಂಪ—ಅರಿಕೇಸರಿಗಳ ನೆನಪು ಬರುತ್ತದೆ, ಇವರ ಸ್ನೇಹವನ್ನು ಕಂಡಾಗ. ಪಂಪನು ತನ್ನ ಸ್ವಾಮಿಯನ್ನು ತನ್ನ ಕಾವ್ಯದ ಕಥಾನಾಯಕನನ್ನಾಗಿ ಮಾಡಿದ; ತಿರುಮಲಾರ್ಯ ತನ್ನ ಸ್ವಾಮಿಯನ್ನು ಕುರಿತು ಕಾವ್ಯರಚನೆಯನ್ನು ಮಾಡಿದುದು ಮಾತ್ರವೇ ಅಲ್ಲ. ತನ್ನ ಕಾವ್ಯಗಳಲ್ಲಿ ಶ್ರೇಷ್ಠವಾದ ಎರಡನ್ನು ಆತನ ಹೆಸರಿನಲ್ಲಿಯೇ ಪ್ರಕಟಗೊಳಿಸಿದನೆಂದು ತೋರುತ್ತದೆ.

ತಿರುಮಲಾರ್ಯನು 'ಚಿಕದೇವರಾಜ ವಿಜಯ' 'ಚಿಕದೇವರಾಜ ವಂಶಾವಳಿ,' 'ಚಿಕದೇವರಾಜ ಶತಕ' ಎಂಬ ಕಾವ್ಯಗಳನ್ನೂ 'ಅಪ್ರತಿಮ ವೀರಚರಿತೆ' ಎಂಬ ಅಲಂಕಾರ ಗ್ರಂಥವನ್ನೂ ಬರೆದಿದ್ದಾನೆ. ಇವುಗಳಲ್ಲಿ 'ಚಿಕ್ಕದೇವರಾಜ ಶತಕ' ವು ಈಗ ಉಪಲಬ್ಧವಾಗಿಲ್ಲ. ಕವಿಯ 'ಅಪ್ರತಿಮವೀರ ಚರಿತೆ' ಯುಹಿಂದಿನ ಸಂಸ್ಕೃತ ಅಲಂಕಾರ ಗ್ರಂಥಗಳಾದ 'ಚಂದ್ರಾಲೋಕ' 'ಕಾವ್ಯಪ್ರಕಾಶ' ಇತ್ಯಾದಿಗಳನ್ನು ಅನುಸರಿಸಿರುವ ನಾಲ್ಕು ಪ್ರಕರಣಗಳ ಒಂದು ಲಕ್ಷಣ ಗ್ರಂಥ. ಸಂಸ್ಕೃತದ ಸೂತ್ರಗಳಿಗೆ ಕನ್ನಡದಲ್ಲಿ ವೃತ್ತಿಯನ್ನು ಬರೆದು, ಸ್ವಕಲ್ಪಿತವಾದ ಕನ್ನಡ ಪದ್ಯಗಳನ್ನು ಉದಾಹರಣೆಯಾಗಿ ಕೊಟ್ಟಿದೆ. ಈ ಉದಾಹರಣೆಗಳೆಲ್ಲವೂ ಚಿಕ್ಕದೇವರಾಜನ ಸ್ತುತಿರೂಪವಾದ ಪದ್ಯಗಳು. ಚಿಕ್ಕದೇವರಾಜನಿಗೆ 'ಅಪ್ರತಿಮವೀರ' ನೆಂಬ ಬಿರುದಿದ್ದುದರಿಂದ, ಆತನ ಸ್ತುತಿರೂಪವಾದ ಪದ್ಯಗಳನ್ನೊಳ

ಗೊಂಡ ಈ ಗ್ರಂಥಕ್ಕೆ 'ಅಪ್ರತಿಮವೀರಚರಿತೆ' ಯೆಂಬ ಹೆಸರು ಬಂದಿದೆ. ಸಂಪ್ರದಾಯವನ್ನು ಅನುಸರಿಸಿರುವ ಈ ಲಕ್ಷಣ ಗ್ರಂಥದಲ್ಲಿ ಗಮನಾರ್ಹ ವಾದ ಮಹತ್ವವೇನೂ ಇಲ್ಲ. ಕಾವ್ಯಕ್ಕೆ ಜೀವ ಜೀವಾಳದಂತಿರುವ ರಸ, ಧ್ವನಿಗಳ ಪ್ರತಿಪಾದನೆಯೇ ಈ ಗ್ರಂಥದಲ್ಲಿ ಕಂಡು ಬರುವುದಿಲ್ಲ.

ತಿರುಮಲಾರ್ಯನ 'ಚಿಕದೇವರಾಜ ವಿಜಯ' ವು ಚಿಕ್ಕದೇವರಾಜನ ಜೀವನ ಚರಿತ್ರೆಯನ್ನು ಒಳಗೊಂಡ ಒಂದು ಚಂಪೂಗ್ರಂಥ. ಅಲ್ಲಲ್ಲಿ ತ್ರಿಪದಿ ಸಾಂಗತ್ಯ ಹಾಡುಗಳೂ ಇವೆ ಚಿಕ್ಕದೇವರಾಜನಿಗಿಂತಲೂ ಹಿಂದಿನ ಮೈಸೂರು ದೊರೆಗಳ ಇತಿಹಾಸವನ್ನು ಕಾವ್ಯಮಯವಾಗಿ ವರ್ಣಿಸಿ ಚಿಕ್ಕ ದೇವರಾಜನ ಬಾಲ್ಯ. ವಿದ್ಯಾಭ್ಯಾಸ. ಸಂಗೀತ ನೈಪುಣ್ಯಗಳನ್ನು ಮುಕ್ತ ಕಂಠನಾಗಿ ಹೊಗಳಿದ್ದಾನೆ ರಾಜನ ರಾಜ್ಯವಿಸ್ತರಣ, ರಾಜ್ಯಭಾರ ವೈಭ ವಾದಿಗಳನ್ನು ಒಳಗೊಳ್ಳದಿರುವ ಈ ಕಾವ್ಯ ಅಸಮಗ್ರವಾಗಿದೆಯೆಂದು ತೋರುತ್ತದೆ. ಇರುವಷ್ಟು ಭಾಗದಲ್ಲಿಯೇ ಕವಿ ತನ್ನ ಸ್ವಾಮಿಯನ್ನು ಮೈ ದುಂಬಿ ಹಾಡಿಹರಸುವುದರ ಮೂಲಕ ತನ್ನ ಪ್ರೇಮವನ್ನೂ ಭಕ್ತಿಯನ್ನೂ ದಿಗ್ದರ್ಶಿಸಿದ್ದಾನೆ. ಐತಿಹಾಸಿಕ ದೃಷ್ಟಿಯಿಂದ ಈ ಕಾವ್ಯಕ್ಕೆ ಸಾಕಷ್ಟು ಬೆಲೆ ಯಿದೆ. ಕಾವ್ಯದೃಷ್ಟಿಯಿಂದಲೂ ಅದರ ಯೋಗ್ಯತೆ ಅಸಾಮಾನ್ಯವಾದುದೇ. 'ಕಬ್ಬಿಗರ್ ತಾಮಘಟಿತ ಘಟನಾ ನೂತನ ಬ್ರಹ್ಮರಲ್ತೆ?' ಎಂದು ಕವಿ ಗಳ ಶಕ್ತಿಯನ್ನು ಅದ್ವಿತೀಯವಾಗಿ ವರ್ಣಿಸಿರುವ ಕವಿ, ತನ್ನ ಕಾವ್ಯದ ವರ್ಣನಾಭಾಗದಲ್ಲಿ ಆ ಹೇಳಿಕೆಗೆ ಸ್ವಲ್ಪಮಟ್ಟಿನ ಸಾರ್ಥಕತೆಯನ್ನು ಸಾಧಿ ಸಿದ್ದಾನೆ. 'ಚಿಕ್ಕದೇವರಾಜ ವಿಜಯ' ದಲ್ಲಿ ಅಂತಹ ಕಥಾಸ್ವಾರಸ್ಯವೇನೂ ಇಲ್ಲ. ಆತನ ಶೈಲಿಯಲ್ಲಿ ಪ್ರಸಾದ ಗುಣವೂ ಕಡಿಮೆ. ಆದರೆ ಆತನ ವರ್ಣ ನಾವೈಖರಿ ದಿವ್ಯವಾಗಿದೆ. ಚಿಕ್ಕದೇವರಾಜನು ವೀಣಾವಾದನ ಲೋಲ ನಾಗಿದ್ದನೆಂದು ಹೇಳಿ, ಆ ನಾದದ ವರ್ಣನೆಯಲ್ಲಿ ಓದುಗರ ಮನಸ್ಸನ್ನು ಸೂರೆಗೊಳ್ಳುತ್ತಾನೆ ಕವಿಯು ನಾದಸುಖವನ್ನು ಅನುಭವಿಸಿ, ಆ ಅನುಭವ ವನ್ನು ತನ್ನ ಓದುಗರಲ್ಲಿಯೂ ಉಂಟುಮಾಡುತ್ತಾನೆ-ಬಯಕಾಜರು ದೇವ ರಾಯನಲ್ಲಿ ಕುವರನ ಸಂಗೀತ ವಿದ್ಯಾಪ್ರೌಢಿಮೆಯನ್ನು ವರ್ಣಿಸುತ್ತಾರೆ.—

ಜಾಣಂ ಬೀಣೆಯನೀ ಕುಮಾರ ಚಿಕದೇವಂ ಬಾಜಿಸುತ್ತಿರ್ಪಿನಂ।
ಪ್ರಾಣಂ ಬಂದುದು ಜಂತ್ರ ಬಿಜ್ಜೆಗೆ, ಜಸಂ ಪೋಗಿತ್ತು ಸಂಗೀತಕಂ।

ಪೂಣಲ್ಕಾಗದುದು ದೇವಗಾನದಿರವಿಂಗಾವೆಲ್ಲರುಂ ಚೆಲ್ಲದಿಂ |
ಪಾಣಿಪ್ರಾಂತದೊಳಾಂತುದಿಂದುಚಿತವಾಯ್ತಾ ವಾಣಿಯುಂ ವೀಣೆಯಾ

ಜಾಣನಾದ ಈ ಚಿಕದೇವರಾಜಕುಮಾರ ವೀಣೆಯನ್ನು ಬಾರಿಸುತ್ತಿರಲು, ಯಂತ್ರವಿದ್ಯೆಗೆ ಪ್ರಾಣ ಬಂದಿತು; ಸಂಗೀತಕ್ಕೆ ಕೀರ್ತಿ ಬೆಳೆಯಿತು. ನಾವೆಲ್ಲರೂ ಗಂಧರ್ವಗಾನವಿದ್ಯೆಗೆಂದು ಕಲಿಯಹೊರಟುದು, ಸಾರ್ಥಕವಾಯಿತು; ಸರಸ್ವತಿಯು ತನ್ನ ಕೈಗಳಲ್ಲಿ ವೀಣೆಯನ್ನು ಹಿಡಿದುಕೊಂಡುದು ಉಚಿತವಾಯಿತು.

ಅಸಿತುಂ ತಂತ್ರಿಗಳಿಂದವೊಂದೆ ದನಿಯುಣ್ಮಿತ್ತೆಂಬಿನಂ ಕೂಡೆ ನು
ಣ್ಣನೆ ಕಂಚಚ್ಚಿನೊಳೀಕ್ಷ್ವ ಪೂಜರಿಗೆಯಂ ಪೋಲ್ತುಂ, ಶ್ರುತಿಸ್ಫೂರ್ತಿ ಕ
ಮ್ಮನೆ ಕಸ್ತೂರಿಯ ಕಂಪಿನಂತೆ ಕವಿಗುಂ ನಾದಂ, ಸ್ವರಪ್ರಕ್ರಮಂ
ಘನರತ್ನಾವಳಿಯಂತೆ ತೋಱಿ ಚಿಕದೇವಂ ಬಾಜಿಕುಂ ವೀಣೆಯಂ ||

ಎಲ್ಲ ತಂತಿಗಳಿಂದಲೂ ಒಂದೆ ದನಿ ಹೊರಟಿತೆಂಬಂತೆ ತೋರುವ ನಾದವು ಕಂಚಚ್ಚಿನಲ್ಲಿ ಎಳೆದ ಚಿನ್ನದ ಸರಿಗೆಯನ್ನು ಹೋಲುತ್ತದೆಯಂತೆ! ಕಸ್ತೂರಿಯ ಸುವಾಸನೆಯಂತೆ ತುಂಬಿಕೊಳ್ಳುತ್ತದೆಯಂತೆ! ಸ್ವರಪ್ರಸ್ತಾರವು ರತ್ನ ಸಮೂಹದಂತೆ ಕಾಣುತ್ತದೆಯಂತೆ! 'ವಾಣಿಯ ನೂಪುರಸ್ವನ', 'ತುಂಬಿಯ ಬಂಬಲ ಒಳ್ಸರ', 'ಗಿಳಿವಾತಿನ ಸುಣ್ಣರ'— ಇವು ಮುಪ್ಪುರಿಗೊಂಡಿತಿದೆಯಂತೆ 'ಚಿಕದೇವನ ವೀಣೆಯಿಂಚರ'. ಆತನ ವೀಣೆಯಿಂಚರವನ್ನು ಕೇಳಿದವರು 'ಅಲುಗದ ದಿಟ್ಟಿ, ಆಡದ ಎವೆ, ಸಂತಸದಿಂ ತೊಱಿದುಕುರ್ವ ಅಲಿನೀರ್, ಅಲಿವಡೆದ ಅಂಗಂ, ಉಕ್ಕುಳಿಪ ಪೊಂಪುಳಿ, ಸುಣ್ಣಾಸಿಗೊಂಬ ತಣ್ಬೆಮರ್, ಮುಲ್ದ ಎರ್ದೆ, ಮಾಣ್ದ ಗೆಯ್ಮೆ. ಮೆಯ್ಮೊರೆವ ಕರಣಂಗಳಿಂದ'ಕೂಡಿದವರಾಗಿ ಸಂತಸಪಡುತ್ತಾರಂತೆ! ಮರಗಳೆಲ್ಲ ಸಂಗೀತವನ್ನು ಕೇಳಿ ರೋಮಾಂಚನಗೊಂಡು ಮಾನವರಂತಾಗಿವೆಯಂತೆ; ಮಾನವರು ಅದನ್ನು ಕೇಳಿ ಮೈಮರೆತು ಮರಗಳಂತೆ ನಿಂತಿದ್ದಾರಂತೆ! ರತ್ನಾಕರವರ್ಣಿಯನ್ನು ಹೊರತು ಸಂಗೀತವನ್ನು ಇಷ್ಟು ಸುಂದರವಾಗಿ ವರ್ಣಿಸಿರುವ ಕವಿ ತಿರುಮಲಾರ್ಯನನ್ನು ಬಿಟ್ಟರೆ ಕನ್ನಡದಲ್ಲಿ ಮತ್ತೊಬ್ಬನಿಲ್ಲ. ಪ್ರಕೃತಿವರ್ಣನೆಯಲ್ಲಿಯೂ, ತಿರುಮಲಾರ್ಯನು ತನ್ನ ಸಾಮರ್ಥ್ಯವನ್ನು, ನೂತನತೆಯನ್ನು, ವೈಶಿಷ್ಟ್ಯವನ್ನು ಪ್ರದರ್ಶಿಸಿದ್ದಾನೆ. ಇದೊಂದು ಚಂದ್ರೋದಯ

ವರ್ಣನೆ—

ಎಸೆದುದು ಸಂಜೆಗೆಂಪೆನಿಪ ಕಾಮನ ಚೂಳಿಯ ದೂಳ ದಾಳಿಗಂ
ಮುಸುಕುವ ಮರ್ಚೆನಿಪ್ಪಿಡುವ ಬಾಣ ತುಪಾಕದ ಧೂಮದುರ್ಬುಗಂ
ನಿಸುಸುಪಜ್ಜುಲೆಂಬರಲ್ಗಣೆಗಮುಳ್ಕದ ಕಲ್ಲೆರ್ದೆವೆಣ್ಗಳೊಡ್ಡನಾ
ರ್ದಿಸೆಯುರಿಗೊಂಡು ಪೊಣ್ಮುವ ಪಿರಂಗಿಯ ಗುಂಡೆನೆ ಚಂದ್ರಮಂಡಲಂ

ಕಾಮನ ಸೈನ್ಯದ ದಾಳಿಯಿಂದೆದ್ದ ದೂಳಿಯಂತಿದೆ ಸಂಜೆಗೆಂಪು; ಆ ಸೈನ್ಯದ ಬಾಣ ತುಪಾಕಿಗಳ ಹೊಗೆಯಂತಿದೆ ಮುಸುಕಿದ ಕತ್ತಲು; ಪುಷ್ಪ ಬಾಣಗಳಂತಿವೆ ನಕ್ಷತ್ರಗಳು. ಇವು ಯಾವುದಕ್ಕೂ ಹೆದರದ ಕಲ್ಲೆದೆಯ ಹೆಣ್ಣುಗಳ ಮೇಲೆ ಗರ್ಜಿಸಿ ಪ್ರಯೋಗಿಸಿದ ಪಿರಂಗಿಯ ಗುಂಡಿನಂತಿದೆ ಚಂದ್ರ ಮಂಡಲ—ಎನ್ನುತ್ತಾನೆ ಕವಿ. ಮನ್ಮಥನು ಮೂರು ಲೋಕಗಳ ವಿಜಯಯಾತ್ರೆಗೆ ಹೊರಟಾಗ ಪೂರ್ವದಿಗಂಗನೆ ಆತನಿಗೆ 'ಮಂಗಲಗಾನಂ ಬೆರಸೆತ್ತುವಾರತಿಯ ಚೆಂಬೊನ್‌ತಟ್ಟೆಯೋ' ಎಂಬಂತಿದ್ದಾನಂತೆ, ಚಂದ್ರ. 'ತ್ರಿವಿಕ್ರಮಂ ನೆಗಪಿದ ಪಾದದುಂಗುಟದ ಬಟ್ಟುಗುರೆಂಬಿನಂ' ಚಂದ್ರನೆಸೆದಿತ್ತು! ಹೀಗೆಯೇ ಕವಿಯ ಬೆಳುದಿಂಗಳ ವರ್ಣನೆಯೂ ಮನೋಹರವಾಗಿದೆ, ಚಿರನೂತನವಾಗಿದೆ. ಒಟ್ಟಿನಲ್ಲಿ 'ಚಿಕದೇವರಾಜ ವಿಜಯ'ವು ಮನೋಹರವಾದ ಕಾವ್ಯಾಂಶಗಳಿಂದ ಕೂಡಿದ ಒಂದು ಒಳ್ಳೆಯ ವರ್ಣನಾ ಪ್ರಧಾನವಾದ ಕಾವ್ಯ.

'ಚಿಕದೇವರಾಜ ವಂಶಾವಳಿ'ಯು ಮೈಸೂರು ರಾಜವಂಶದ ಇತಿಹಾಸವನ್ನು ಕಾವ್ಯವಸ್ತುವಾಗಿ ಒಳಗೊಂಡಿರುವ ಒಂದು ಹಳಗನ್ನಡ ಗದ್ಯ ಗ್ರಂಥ. ರಾಜಒಡೆಯರಿಂದ ಹಿಡಿದು ಚಿಕ್ಕದೇವರಾಜ ಒಡೆಯರವರೆಗಿನ ಮೈಸೂರು ರಾಜರ ಜೀವನಚರಿತ್ರೆ ಇಲ್ಲಿ ನಿರೂಪಿತವಾಗಿದೆ. ಗದ್ಯ ಸಾಹಿತ್ಯ ಮೊಲದ ಕೋಡಾಗಿರುವ ಹಳಗನ್ನಡ ಸಾಹಿತ್ಯದಲ್ಲಿ ಈ ಸುಂದರವಾದ ಗದ್ಯ ಕಾವ್ಯಕ್ಕೆ ಆದರದ ಸ್ವಾಗತವನ್ನು ನೀಡಬಹುದು. ಮೈಸೂರಿನ ಇತಿಹಾಸವನ್ನು ಕಾವ್ಯವಸ್ತುವಾಗಿ ಬಳಸಿಕೊಂಡಿದ್ದರೂ ಇದು ಅಪ್ಪಟ ಇತಿಹಾಸವೇನೂ ಅಲ್ಲ. ತಿರುಮಲಾರ್ಯನು ಕವಿಯೇ ಹೊರತು ಇತಿಹಾಸಕಾರನಲ್ಲ. ಆದ್ದರಿಂದ ಇತಿಹಾಸಕಾರನ ಪ್ರತಿಕೃತಿ ದೃಷ್ಟಿಯಿಂದ ಇದನ್ನು ಪರಿಶೀಲಿಸುವುದು ಸೂಕ್ತವಲ್ಲ. ಕವಿಯು ತಾನು ಕಂಡ ಕಾವ್ಯಾಂಶದ ಮೆರುಗನ್ನು

ಕೊಟ್ಟು ಈ ಕಾವ್ಯವನ್ನು ಸೃಷ್ಟಿಸಿದ್ದಾನೆ. ಇದೂ ಸಮಗ್ರವಾಗಿ ಸಿಕ್ಕಿಲ್ಲ. ಚಿಕ್ಕದೇವರಾಜನ ಜೈತ್ರಯಾತ್ರಾ ಪ್ರಸಂಗದಲ್ಲಿ ಕಾವ್ಯವು ವಾಕ್ಯಾರ್ಧದಲ್ಲಿಯೇ ನಿಂತುಹೋಗಿದೆ. ಇರುವಷ್ಟರಲ್ಲಿಯೇ ಕವಿಗೆ ರಾಜನಲ್ಲಿಯೂ, ರಾಜವಂಶದಲ್ಲಿಯೂ ಅಪಾರವಾದ ಆದರ, ಪ್ರೇಮ, ಗೌರವಗಳು ತುಂಬಿ ತುಳುಕುತ್ತಿವೆ. ಮೈಸೂರು ಅರಸರನ್ನು ಆದರ್ಶಪ್ರಭುಗಳಾಗಿ ಚಿತ್ರಿಸಬೇಕೆಂದುಕೊಂಡು ಹೊರಟಿರುವ ಕವಿ ತನ್ನ ಗುರಿಯನ್ನು ಸಾಧಿಸಿದ್ದಾನೆಂದು ಹೇಳಬಹುದು. ಇಡೀ ಗ್ರಂಥವನ್ನು ಅಖಂಡವಾಗಿ ನೋಡಿದಾಗ ಆ ಕವಿಯ ಪ್ರಮಾಣಜ್ಞಾನಕ್ಕೆ ಸ್ವಲ್ಪ ಮಬ್ಬು ಮುಸಿಕಿರುವಂತೆ ಭಾಸವಾಗುತ್ತದೆ. ತನ್ನ ರಾಜನ ತಂದೆಯಾದ ದೊಡ್ಡದೇವರಾಜನ ಇತಿಹಾಸವನ್ನು ವರ್ಣನೆಗಳ ಮೂಲಕ ಅತಿಶಯವಾಗಿ ಬೆಳೆಸಿಕೊಂಡುಹೋಗಿರುವ ಕವಿ ಅದ್ವಿತೀಯ ಪರಾಕ್ರಮಿಯೆಂದು ಇತಿಹಾಸ ಸಾರುತ್ತಿರುವ ಕಂಠೀರವನ ಜೀವನ ವೃತ್ತಾಂತವನ್ನು ಹ್ರಸ್ವಗೊಳಿಸಿರುವುದು ಅಷ್ಟೇನೂ ಉಚಿತವಾಗಿಲ್ಲ. ಅಲ್ಲದೆ ಕೆಲವು ವೇಳೆ ಇಲ್ಲಿನ ವರ್ಣನಾ ಭಾಗ ಅತಿಯಾಯಿತೇನೋ ಎನ್ನಿಸುವುದೂ ಉಂಟು. ಆದರೆ ವರ್ಣನೆಗಳನ್ನು ಬಿಡಿಬಿಡಿಯಾಗಿ ತೆಗೆದುಕೊಂಡಾಗ ಅವುಗಳ ಸಹಜತೆ, ಉಚಿತ ಪದಪ್ರಯೋಗಗಳು ರಮ್ಯವಾಗಿವೆ. ತಿರುಮಲಾರ್ಯನು ಕನ್ನಡ, ಸಂಸ್ಕೃತಗಳಲ್ಲಿ ಅದ್ವಿತೀಯ ಪಾಂಡಿತ್ಯವುಳ್ಳವನು ಒಳ್ಳೆಯ ಕವಿಹೃದಯವುಳ್ಳವನು. ಆತನ ಶೈಲಿ ಪದಗಳ ಸಮತೋಲನದಿಂದ ಕೂಡಿ, ತುಂಬುಗಂಭೀರವಾಗಿ ಹರಿಯುವ ಮಹಾನದಿಯಂತೆ ರಮಣೀಯವಾಗಿದೆ. ಹಾಲಿಗೆ ಸಕ್ಕರೆ ಬೆರೆತಂತೆ ಆತನ ಭಕ್ತಿಭಾವವು ಕಾವ್ಯಕ್ಕೆ ಹೃದ್ಯತೆಯನ್ನು ಗಳಿಸಿಕೊಟ್ಟಿದೆ. ತನ್ನ ಆರಾಧ್ಯದೈವವನ್ನು ಅಡಿಯಿಂದ ಮುಡಿಯವರೆಗೆ, ಮುಡಿಯಿಂದ ಅಡಿಯವರೆಗೆ ವರ್ಣಿಸಿ ಆತನು ಭಕ್ತಿಪರವಶತೆಯಿಂದ ದಣಿದು ಹೋಗುತ್ತಾನೆ. ಓದುಗರನ್ನೂ ತಣಿಸುತ್ತಾನೆ. 'ಗದ್ಯಂ ಕವೀನಾಂ ನಿಕಷಂ ವದಂತಿ' ಎಂಬ ಸೂಕ್ತಿಗೆ ಉದಾಹರಣೆಯಂತಿದೆ 'ಚಿಕದೇವರಾಜ ವಂಶಾವಳಿ'. ಕನ್ನಡ ಗದ್ಯಸಾಹಿತ್ಯದ ಇತಿಹಾಸದಲ್ಲಿ ಇದಕ್ಕೆ ಒಂದು ಪ್ರಮುಖವಾದ ಸ್ಥಾನವುಂಟು.

**ಚಿಕ್ಕುಪಾಧ್ಯಾಯ :**

ತ್ರಿಕದಂಬಪುರ ಅಥವಾ ತೆರಕಣಾಂಬಿಯ ರಂಗಾಚಾರ್ಯಪಂಡಿತ—

ನಾಚ್ಚಾರಮ್ಮ ಎಂಬ ಶ್ರೀವೈಷ್ಣವ ದಂಪತಿಗಳ ಯಮಳ ಪುತ್ರರಲ್ಲಿ ಒಬ್ಬನಾದ ಲಕ್ಷ್ಮೀಪತಿಯೆಂಬುವನೇ ಚಿಕ್ಕುಪಾಧ್ಯಾಯನೆಂಬ ಹೆಸರಿನಿಂದ ಚಿಕ್ಕದೇವರಾಜನ ಕರಣಿಕಾಗ್ರೇಸರನಾಗಿ, ಮಂತ್ರಿಯಾಗಿ ಸುಮಾರು ಇಪ್ಪತ್ತೆಂಟಕ್ಕಿಂತ ಹೆಚ್ಚಾಗಿ ಗ್ರಂಥಗಳನ್ನು ರಚಿಸಿ ಸುಪ್ರಸಿದ್ಧನಾಗಿದ್ದಾನೆ. ಈತನು ಚಿಕ್ಕದೇವರಾಜನಿಗೆ ಉಪಾಧ್ಯಾಯನಾಗಿದ್ದನಂತೆ. ಆದ್ದರಿಂದ ಈತನ ಹೆಸರು ಚಿಕ್ಕುಪಾಧ್ಯಾಯನೆಂದೇ ಹೆಚ್ಚು ಪ್ರಚುರವಾಗಿದೆ. ಈತನು ಅಷ್ಟೈಶ್ವರ್ಯ ಸಂಪನ್ನನಾಗಿ, ಅಮಿತವಾದ ಅಧಿಕಾರ ಗೌರವಗಳನ್ನು ಪಡೆದು ಇಬ್ಬರು ಪತ್ನಿಯರೊಡನೆ ಸುಖವಾಗಿ ತುಂಬು ಜೀವನವನ್ನು ಬಾಳಿದಂತೆ ಆತನ ಹೇಳಿಕೆಯಿಂದ ತಿಳಿದು ಬರುತ್ತದೆ. ಈತನ ಗ್ರಂಥಗಳ ಪ್ರಸ್ತಾವನಾ ಭಾಗದಲ್ಲಿ ಮೈಸೂರು ಅರಸರ ವಂಶಾವಳಿಯನ್ನು ಸಾಕಷ್ಟು ಸುದೀರ್ಘವಾಗಿ ಪ್ರಸ್ತಾಪಿಸಿದ್ದಾನೆ. ಮೈಸೂರು ರಾಜರ ಇತಿಹಾಸವನ್ನು ಬರೆಯುವವನಿಗೆ ಈತನ ಗ್ರಂಥಗಳಿಂದ ಸ್ವಲ್ಪಮಟ್ಟಿಗೆ ಸಹಾಯ ದೊರೆತೀತು.

ಚಿಕ್ಕುಪಾಧ್ಯಾಯನಷ್ಟು ವಿಪುಲವಾದ ಗ್ರಂಥರಾಶಿಯನ್ನು ಕನ್ನಡದ ಮತ್ತಾವ ಕವಿಯೂ ಸೃಷ್ಟಿಸಿಲ್ಲವೆಂದು ತೋರುತ್ತದೆ. ಅವುಗಳಲ್ಲಿ ಹಲವು ಬೃಹದ್ಗ್ರಂಥಗಳು. ಅವುಗಳ ಮಹತ್ತಿನ ವಿಚಾರ ಹಾಗಿರಲಿ, ಅವುಗಳ ಬೃಹತ್ತನ್ನು ಕಂಡರೇ ನಮ್ಮ ಚೇತನ ಆತನಲ್ಲಿ ಗೌರವವನ್ನು ತಾಳುತ್ತದೆ. ಆತನ ಗ್ರಂಥಗಳಲ್ಲಿ ಕಮಲಾಚಲ ಮಾಹಾತ್ಮ್ಯ, ಹಸ್ತಗಿರಿ ಮಾಹಾತ್ಮ್ಯ, ಯಾದವಗಿರಿ ಮಾಹಾತ್ಮ್ಯ, ಪಶ್ಚಿಮರಂಗ ಮಾಹಾತ್ಮ್ಯ,' 'ವೆಂಕಟಗಿರಿ ಮಾಹಾತ್ಮ್ಯ,' 'ಯದುಗಿರಿ ಮಾಹಾತ್ಮ್ಯ,' 'ಶ್ರೀರಂಗ ಮಾಹಾತ್ಮ್ಯ'— ಇವು ಸ್ಥಳ ಮಹಾತ್ಮೆಗಳನ್ನು ನಿರೂಪಿಸುವ ಗ್ರಂಥಗಳು. 'ಕಮಲಾಚಲ ಮಾಹಾತ್ಮ್ಯ' ಹಿಮವದ್ಗೋಪಾಲಸ್ವಾಮಿ ಬೆಟ್ಟದ ಮಹಾತ್ಮೆಯನ್ನು ಸುಮಾರು ೩೭೫೦ ಪದ್ಯಗಳಷ್ಟು ವಿಸ್ತಾರವಾಗಿ ವಿವರಿಸುವ ಚಂಪೂಗ್ರಂಥ. 'ಹಸ್ತಗಿರಿ ಮಾಹಾತ್ಮ್ಯ' ಕಂಚಿಯ ಮಹತ್ತನ್ನು ಹೊಗಳುತ್ತದೆ, ಸುಮಾರು ೧೨೦೦ ಪದ್ಯಗಳನ್ನು ಒಳಗೊಂಡ ಚಂಪೂಗ್ರಂಥ ಇದು. 'ಇನಿವಾಲನ್ನು ಕೆನೆಗಟ್ಟುವಂತೆ ಕಾಸಿ ಸವಿದಂತೆ, ಕೂರ್ತ ಜವ್ವನೆಯನ್ನು ಸೋಂಕಿದ ಮಾಳ್ಕೆ' ತನ್ನ ಕಾವ್ಯದಿಂದ ಆಪ್ಯಾಯನವನ್ನುಂಟುಮಾಡುವೆನೆಂದು 'ಕಮಲಾಚಲ ಮಾಹಾತ್ಮ್ಯ'ದಲ್ಲಿ ಹೇಳಿಕೊಂಡಿದ್ದಾರೆ. 'ಅಳಿಮುಸುಕದ ಸುಮಲತೆಯಂತೆ,

ಎಳೆವರೆಯುದ ಕನ್ನೆಯಂತೆ, ಇನಿವಾಲಂತೆ, ಉಜ್ವಳಿಪ ತಿಳಿಜೊನ್ನದಂತೆ—ಎರ್ದೆಗೊಳೆ ಪೇಳ್ವೆ' ಎಂದು 'ಹಸ್ತಗಿರಿ ಮಾಹಾತ್ಮ್ಯ'ದಲ್ಲಿ ಕವಿ ಹೇಳಿಕೊಂಡಿದ್ದಾನೆ. ಆತನ 'ಯಾದವಗಿರಿ ಮಾಹಾತ್ಮ್ಯ' (ಸು. ೧೨೦೦ ಪದ್ಯಗಳು), 'ಪಕ್ಷಿಮಲಂಗ ಮಾಹಾತ್ಮ್ಯ' (ಸು. ೩೨೦ ಪದ್ಯಗಳು)—ಇವೆರಡೂ ಸಾಂಗತ್ಯದ ಧಾಟಿಯಲ್ಲಿವೆ. ಉಳಿದ ಮೂರು ಮಾಹಾತ್ಮ್ಯ ಗ್ರಂಥಗಳೂ ಗದ್ಯದಲ್ಲಿವೆ. ಈ ಮಾಹಾತ್ಮ್ಯಗ್ರಂಥಗಳಲ್ಲದೆ ಕವಿಯು 'ರುಕ್ಮಾಂಗದ ಚರಿತೆ' (೨೨೮೬ ಪದ್ಯಗಳು) ಎಂಬ ಏಕಾದಶೀ ವ್ರತಮಹಿಮೆಯನ್ನು ಒಳಗೊಂಡ ರುಕ್ಮಾಂಗದನ ಕಥೆಯನ್ನೂ 'ವಿಷ್ಣು ಪುರಾಣ' (೬೨೫೫)ವೆಂಬ ಸಂಸ್ಕೃತಗ್ರಂಥದ ಅನುವಾದವನ್ನೂ, 'ದಿವ್ಯಸೂರಿ ಚರಿತೆ' (೮೨೮ ಗದ್ಯಪದ್ಯಗಳು) ಎಂಬ ಹನ್ನೆರಡು ಜನ ವಿಷ್ಣುಭಕ್ತರಾದ ಆಳ್ವಾರರುಗಳ ಕಥೆಯನ್ನೂ, 'ಸಾತ್ವಿಕ ಬ್ರಹ್ಮವಿದ್ಯಾವಿಲಾಸ' (೯ ಆಶ್ವಾಸ) ವೆಂಬ ಗುರುಶಿಷ್ಯ ಪ್ರಶ್ನೋತ್ತರ ರೂಪವಾದ ವಿಶಿಷ್ಟಾದ್ವೈತದ ಪ್ರಮಾಣಗ್ರಂಥವೊಂದನ್ನೂ (ಇದೇ ಹೆಸರಿನ ಸಂಸ್ಕೃತ ಗ್ರಂಥದ ಕನ್ನಡ ಭಾಷಾಂತರ), 'ಅರ್ಥಪಂಚಕ' ಎಂಬ (ಸ್ವಸ್ವರೂಪ ಪರಸ್ವರೂಪ, ಉಪಾಯ ಸ್ವರೂಪ. ಪುರುಷಾರ್ಥಸ್ವರೂಪ, ವಿರೋಧಿ ಸ್ವರೂಪ) ತಮಿಳು ಗ್ರಂಥದ ಕನ್ನಡ ಭಾಷಾಂತರವನ್ನೂ ಚಂಪೂರೂಪದಲ್ಲಿ ಬರೆದಿದ್ದಾನೆ. ವಿಷ್ಣು ಪುರಾಣವನ್ನು ಚಂಪುವಿನಲ್ಲಿ ಬರೆದುದು ಸಾಲದೆಂಬಂತೆ ಕವಿ ಅದನ್ನು ಗದ್ಯದಲ್ಲಿಯೂ ಬರೆದಿದ್ದಾನೆ ಹರಿವಂಶದ ಆಶ್ವಮೇಧಿಕ ಪರ್ವದಲ್ಲಿ ಬರುವ 'ಶೇಷಧರ್ಮ'ವನ್ನು ೨೫ ಅಧ್ಯಾಯಗಳಲ್ಲಿ ಗದ್ಯರೂಪವಾಗಿ ಕನ್ನಡಿಸಿರುವುದಲ್ಲದೆ 'ಕಾಮಂದಕನೀತಿ,' 'ತಿರುವಾಯ್ಮೊಳಿ'ಗಳಿಗೆ ಟೀಕೆಗಳನ್ನು ಬರೆದಿದ್ದಾನೆ. ಸಂಸ್ಕೃತದಿಂದ ಕನ್ನಡಕ್ಕೆ ತಂದುಕೊಂಡಿರುವ 'ಕಾಮಂದಕನೀತಿ' ಟೀಕೆಗೆ 'ಉಪಾಧ್ಯಾಯ ನಿರಪೇಕ್ಷಾ' ಎಂಬ ಹೆಸರಂತೆ! 'ತಿರುವಾಯ್ಮೊಳಿ ಟೀಕೆ' ನಮ್ಮಾಳ್ವಾರ್ ಎಂಬ ಹೆಸರಿನಿಂದ ಶಠಕೋಪಯೋಗಿ ತಮಿಳಿನಲ್ಲಿ ಬರೆದ ಪ್ರಬಂಧದ ವ್ಯಾಖ್ಯಾನ. ಸಂಸ್ಕೃತದ 'ಶುಕಸಪ್ತತಿ'ಯನ್ನು ೭೦೦೦ ಗ್ರಂಥಗಳಷ್ಟು ವಿಸ್ತಾರವಾಗಿ ಗದ್ಯರೂಪದಲ್ಲಿ ಬರೆದಿದ್ದಾನೆ. ಮದನಮೋಹಿನೀ ಕಥೆಯನ್ನು ಸಾಂಗತ್ಯದಲ್ಲಿ ಈತನೇ ಬರೆದಿರಬೇಕೆಂದು ತೋರುತ್ತದೆ. ಶ್ರೀರಂಗಪಟ್ಟಣದ ರಂಗನಾಥನನ್ನು ಕುರಿತು ಈತ 'ರಂಗ

ಧಾಮ ಸ್ತುತಿಸಾಂಗತ್ಯ.' 'ಪಶ್ಚಿಮ ರಂಗಸಾಂಗತ್ಯ.' 'ರಂಗಧಾಮಪ್ರಭುವ ವಿರಹದ ಸಾಂಗತ್ಯ.' 'ರಂಗಧಾಮ ನೀತಿ ಶತಕದ ಸಾಂಗತ್ಯ.' 'ರಂಗನಾಯಕ ರಂಗನಾಯಕೀಸ್ತುತಿ ಸಾಂಗತ್ಯ'-ಇತ್ಯಾದಿ ಸಾಂಗತ್ಯ ಸ್ತೋತ್ರಗಳನ್ನು ಬರೆದಿರುವುದಲ್ಲದೆ 'ಶೃಂಗಾರ ಶತಕದ ಸಾಂಗತ್ಯ' 'ಚಿತ್ರ ಶತಕದ ಸಾಂಗತ್ಯ' 'ಅಕ್ಷರ ಮಾಲಿಕಾ ಸಾಂಗತ್ಯ' ಎಂಬ ಮೂರು ಸಾಂಗತ್ಯಗ್ರಂಥಗಳನ್ನೂ ಬರೆದಿದ್ದಾನೆ. ಮೊದಲನೆಯದರಲ್ಲಿ ಶ್ರೀಕೃಷ್ಣನ ರೂಪನ್ನು ಕಂಡ ರಮಣಿಯರ ಸಂಕಲ್ಪಗಳೂ, ಎರಡನೆಯದರಲ್ಲಿ ಕನ್ನಡ ಭಾಷೆಯನ್ನು ಕುರಿತ ಚತುರೋಕ್ತಿಗಳೂ, ಮೂರನೆಯದರಲ್ಲಿ ಕಕಾರದಿಂದ ಕ್ಷಕಾರದವರೆಗೆ ಬರುವ ಅಕ್ಷರಗಳಿಂದ ಆರಂಭವಾಗಿ. ಗುಣಿತದೊಡನೆ ನಾರಾಯಣ ಸ್ತೋತ್ರವೂ ಅಡಕವಾಗಿದೆ. 'ರಂಗನಾಥಸ್ವಾಮಿಯ ಶೃಂಗಾರ ಸೂತ್ರೋದಾಹರಣೆ' ಎಂಬ ಹೆಸರಿನಿಂದ ಶೃಂಗಾರವಿಷಯಕವಾದ ಸೂತ್ರಗಳನ್ನು ಒಳಗೊಂಡ ಒಂದು ಕಂದ ಪದ್ಯಗಳ ಗ್ರಂಥವನ್ನು ಈತ ಬರೆದಿದ್ದಾನೆ. ಚಿಕದೇವರಾಜನ ಸ್ತುತಿರೂಪವಾದ ಹಲವು ಶೃಂಗಾರದ ಹಾಡುಗಳೂ ಈತನ ಹೆಸರಿನಲ್ಲಿವೆ. ಈತನ 'ವೈದ್ಯಾಮೃತ ಟೀಕೆ.' 'ತತ್ವತ್ರಯ' 'ಅಮರು ಶತಕ' ಇತ್ಯಾದಿಗಳು ಉಪಲಬ್ಧವಾಗಿಲ್ಲ.

ಚಿಕ್ಕುಪಾಧ್ಯಾಯನ ಸಾಹಿತ್ಯಸೃಷ್ಟಿ ವಿಪುಲವಾಗಿರುವುದು ಮಾತ್ರವೇ ಅಲ್ಲ. ವೈವಿಧ್ಯಪೂರ್ಣವಾಗಿಯೂ ಇದೆ. ಆತನ ಕಾವ್ಯವಸ್ತುಗಳಲ್ಲಿ— ಮಹಾತ್ಮ್ಯ, ಶಾಸ್ತ್ರ, ಪುರಾಣ, ಸ್ತೋತ್ರ, ಕಥೆ, ವೇದಾಂತ, ವೈದ್ಯ ಸಹ-ಸಾಕಷ್ಟು ವೈವಿಧ್ಯವಿರುವಂತೆ. ನಿರೂಪಣಾ ವಿಧಾನದಲ್ಲಿಯೂ—ಚಂಪೂ. ಸಾಂಗತ್ಯ, ಕಂದ, ಹಾಡು, ಗದ್ಯ— ವೈವಿಧ್ಯವಿದೆ ಇಷ್ಟೇ ಅಲ್ಲ. ಆತನ ಚಂಪೂಗ್ರಂಥಗಳು ಕ್ಲಿಷ್ಟವಾಗಿ ಸಂಸ್ಕೃತ ಭೂಯಿಷ್ಠವಾಗಿದ್ದರೆ, ಸಾಂಗತ್ಯ ಸರಳವಾಗಿ ತಿಳಿಯಾಗಿರುತ್ತದೆ; ಆತನ ಗದ್ಯ ಮನೋಹರವಾಗಿರುತ್ತದೆ. ಇವುಗಳಲ್ಲೆಲ್ಲಾ ಕಾಣಬರುವ ಒಂದು ಸಾಮಾನ್ಯ ಗುಣವೆಂದರೆ ಶ್ರೀವೈಷ್ಣವಧರ್ಮದ ನಿರೂಪಣೆ. ಈತನ ಗ್ರಂಥಗಳಲ್ಲಿ ಹಲವು ಚಿಕ್ಕದೇವರಾಜನ ಸ್ತುತಿ, ವಂಶಾವಳಿ, ವಿಜಯ ಪರಂಪರೆಗಳ ನಿರೂಪಣೆಯೊಡನೆ ಪ್ರಾರಂಭವಾತ್ತವೆ. ಆ ರಾಜನ ಅಪ್ಪಣೆಯಂತೆ ಕವಿಯು ಗ್ರಂಥ ರಚನೆಯನ್ನು ಆರಂಭಿಸಿದಂತೆ ಕಂಡುಬರುತ್ತದೆ. ಶ್ರೀ ವೈಷ್ಣವಧರ್ಮದ ಆಸ

ಸಹಾಯಕನಾಗಿ, ಅಭಿಮಾನಿಯಾಗಿದ್ದ ಚಿಕ್ಕದೇವರಾಜನ ಒತ್ತಾಸೆ ಪ್ರೋತ್ಸಾಹಗಳಿಂದ ಆ ಧರ್ಮದ ಗ್ರಂಥಗಳು ವಿಪುಲವಾಗಿ ಬೆಳೆದು, ಸಾಕಷ್ಟು ಧರ್ಮಪ್ರಸಾರವಾಗಲು ಸಹಾಯಕವಾಯಿತೆಂದು ತೋರುತ್ತದೆ.

ಇತರ ಎಲ್ಲ ಕವಿಗಳಂತೆ ಚಿಕ್ಕುಪಾಧ್ಯಾಯನೂ ತನ್ನ ಕವಿತಾಶಕ್ತಿಯನ್ನು ಬೇಕಾದಷ್ಟು ಹೊಗಳಿಕೊಂಡಿದ್ದಾನೆ. ವಿಪುಲವಾದ ಗ್ರಂಥರಾಶಿಯನ್ನು ಸೃಷ್ಟಿಸುವ ಆತನಲ್ಲಿ ಒಂದು ಗ್ರಂಥದ ಹೇಳಿಕೆಯೇ ಮತ್ತೊಂದು ಗ್ರಂಥದಲ್ಲಿಯೂ ಪ್ರಕಾರಾಂತರವಾಗಿ ಬಂದಿದ್ದರೆ ಆಶ್ಚರ್ಯವೇನೂ ಇಲ್ಲ. ಇನಿವಾಲನ್ನು ಕಸಿಗಟ್ಟುವಂತೆ ಕಾಸಿ ಸವಿದಾಗ. ಕೃತಿಯ ಬಣ್ಣನೆಯನ್ನು ಸೋಂಕಿದಾಗ ಬರುವ ಸಂತಸವೇ ತನ್ನ ಕಾವ್ಯವಾಚನದಿಂದ ಬರುವುದೆಂದು ‘ಕಮಲಾಚಲ ಮಹಾತ್ಮ್ಯೆ’ದಲ್ಲಿ ಹೇಳಿಕೊಂಡಿದ್ದರೆ, ‘ಅಳಿಮುಸುಕಿದ ಕುಸುಮಲತೆಯಂತೆ, ಎಳೆವರೆಯದ ಕನ್ನೆಯಂತೆ, ಇನಿವಾಲಂತೆ, ಉಜ್ಜ್ವಳಿಪ ತಿಳಿಜೊನ್ನದಂತೆ ಎರ್ದೆಗೊಳೆ ಹೇಳ್ವೆಂ’ ಎಂದು ‘ಹಸ್ತಿಗಿರಿ ಮಹಾತ್ಮ್ಯೆ’ದಲ್ಲಿ ಹೇಳಿಕೊಂಡಿದ್ದಾನೆ. ಇಂತಹ ಹೇಳಿಕೆಗಳು ಕೇವಲ ಸಂಪ್ರದಾಯದ ನುಡಿಗಳೆಂದು ನಾವು ಅರ್ಥಮಾಡಿಕೊಳ್ಳಬೇಕೇ ಹೊರತು ಸರ್ವಸತ್ಯವೆಂದು ಗ್ರಹಿಸಬೇಕಾಗಿಲ್ಲ. ಆತನ ಕಾವ್ಯವಾಹಿನಿಯು ಮಾತ್ರ ಅತ್ಯಂತ ವಿಸ್ತಾರವಾಗಿದೆ, ನಿಜ. ಆದರೆ ಅದರಲ್ಲಿ ಹರಿವುದು ಕಾಲುಹೊಳೆ. ಅದರಲ್ಲಿ ಪೂರ್ಣ ಪ್ರವಾಹದ ಮಹಾಪೂರಗಳನ್ನಾಗಲಿ, ಆಳ ಸೆಳವುಗಳನ್ನಾಗಲಿ ನಾವು ಕಾಣಲಾರೆವು. ಆತನ ಪ್ರತಿಭೆ ಕಲ್ಪನಾ ಶಕ್ತಿಗಳು ವಿಹಂಗಮ ವಿಹಾರಿಗಳೇನೂ ಅಲ್ಲ. ಆತನು ಪದ್ಯರಚನೆಯಲ್ಲಿ ಸಿದ್ಧಹಸ್ತನಾಗಿದ್ದಾನೆ. ಆದರೆ ಆತನ ಕವಿತೆ ಸಂಪ್ರದಾಯದ ಚೌಕಟ್ಟನ್ನು ಆಶ್ರಯಿಸಿಯೇ ನಿಲ್ಲಬೇಕು. ಪ್ರತಿಭಾಪೂರ್ಣವಾದ ನವೀನತೆಗಿಂತಲೂ ಕವಿಸಮಯಾಶ್ರಯವಾದ ಚಾತುರ್ಯತೆಯೇ ಅಲ್ಲಿ ಹೆಚ್ಚು. ವರ್ಷಾಕಾಲದ ಈ ವರ್ಣನೆಯನ್ನು ನೋಡಿ —

ಚಾರುತರ ಹಂಸಗಮನಕೆ | ಭೇರಿರವಂ ಕೇಕಿನಾಟ್ಯಕ್ಕೆ ಧಕ್ಕಾನಿನದಂ
ನೀರದನೃಪಾಲ ಘನವಾ | ದ್ಯಾರವಮಂ ಮೊಳಗಿತೊಡನೆ ಮೇಘಧ್ವಾನಂ |

ಗುಡುಗಿನ ಧ್ವನಿಯು ಹಂಸಗಮನಕ್ಕೆ ಅನುಸಾರವಾದ ಭೇರಿಯ ಶಬ್ದದಂತೆ, ನವಿಲುಗಳ ನರ್ತನಕ್ಕೆ ತಕ್ಕುದಾದ ಧಕ್ಕಾಧ್ವನಿಯಂತೆ, ಮೇಘರಾಜನ ಗೌರವಕ್ಕಾಗಿ ಆಗುತ್ತಿರುವ ಘನ (ಮೇಘ) ವಾದ್ಯ ಶಬ್ದದಂತೆ ಇದೆ.

ಕವಿಯು 'ಹಸ್ತಿಗಿರಿಯ ಮಾಹಾತ್ಮ್ಯೆ' ದಲ್ಲಿ ಬರುವ ಕನ್ನಡ ನಾಡಿನ ವರ್ಣನೆ ಮನೋಹರವಾಗಿದೆ.

ಗಾಡಿಯ ಸೀಮೆ, ಚೆಲ್ವಿಂಗೆಡ ತಾಣಮಲಂಪಿನ ಸಂತೆ, ಪೆಂಪು ಸಾ
ರ್ದಾಡುವ ಭೂಮಿ, ಸೌಖ್ಯದೆಡೆ, ಪುಣ್ಯದಗೊತ್ತು, ವಿನೋದದಾಗರಂ
ಮೋಡಿಯ ಮಂಟಪಂ, ಸಿರಿಯ ಪೆರ್ಚುಗೆಗೊಳ್ಗನೆ, ಮುಕ್ತಿಕಾಂತೆ ಕೈ
ಗೂಡುವ ಬೀಡು, ಕನ್ನಡದ ನಾಡು ವಿರಾಜಿಪುದೆಂತು ಬಣ್ಣಿಪೆಂ॥

ಕವಿಯ ಹೃದಯ ತುಂಬಿ ಹೊರಹರಿದು ಬಂದ ಮಾತುಗಳಿವು. ಆದ್ದರಿಂದಲೇ ಇವುಗಳಲ್ಲಿ ಆ ಸರಳತೆ, ಆ ಸೌಂದರ್ಯ, ಆ ಭಾವಪುಷ್ಟಿ! 'ಚಿತ್ರಶತಕ ಸಾಂಗತ್ಯ' ದಲ್ಲಿ ಕವಿಯು ಕನ್ನಡ ನುಡಿಯ ವಿಚಾರವಾಗಿ ಕೆಲವು ಚಮತ್ಕಾರವಾದ ಮಾತುಗಳನ್ನು ಹೇಳಿದ್ದಾನೆ.

ಸರಸನರಸನೆಂಬುದು ಪೂರ್ಣಗೃಹವನು। ಅರಮನೆಯೆಂದುಸುರುವುದು
ನರಪ ಕುಮಾರನನರಮಗನೆಂಬುದೇ। ನೊರೆ ರಂಗ ಕನ್ನಡದೊಳ್ಪ.

ಹೀಗೆಯೇ ಹಲವಾರು ಕನ್ನಡ ಶಬ್ದಗಳನ್ನು ಎತ್ತಿಕೊಂಡು, ಕವಿಯು ತನ್ನ ಚಾತುರ್ಯವನ್ನು ಮೆರೆದಿದ್ದಾನೆ. ಕವಿಯ ಶಬ್ದ ಭಂಡಾರ ಎಷ್ಟು ಶ್ರೀಮಂತವಾದುದೆಂಬುದು ಇದರಿಂದ ನಮಗೆ ಅರ್ಥವಾಗುತ್ತದೆ.

ಕವಿಯ ಚಂಪೂಗ್ರಂಥಗಳಲ್ಲೆಲ್ಲಾ 'ರುಕ್ಮಾಂಗದ ಚರಿತೆ' ಅತ್ಯಂತ ಶ್ರೇಷ್ಠವಾದುದು. 'ದಿವ್ಯಸೂರಿ ಚರಿತೆ' ಯಲ್ಲಿ ಕವಿಯು ಭಕ್ತಿರಸವನ್ನು ಉಕ್ಕಿಹರಿಸಲು ಬೇಕಾದಷ್ಟು ಅವಕಾಶವಿರುವುದಾದರೂ ಕವಿಯು ಏಕೋ ಮೈದುಂಬಿಲ್ಲ. ಇದರ ಹಿರಿಮೆಯೇನಿದ್ದರೂ ತಮಿಳಿನಿಂದ ಮಹಾಭಕ್ತರಾದ ಆಳ್ವಾರರ ಚರಿತೆಯನ್ನು ಕನ್ನಡಕ್ಕೆ ತಂದುಕೊಟ್ಟಿರುವುದು. 'ರುಕ್ಮಾಂಗದ ಚರಿತೆ' ಯಲ್ಲಿ ಕವಿಯು ಒಂದೆರಡು ರಸಸ್ಥಾನಗಳನ್ನು ನಿರ್ಮಿಸಿ ನಮ್ಮ ಹೃದಯವನ್ನು ಸೂರೆಗೊಳ್ಳುತ್ತಾನೆ. ರುಕ್ಮಾಂಗದನ ಪ್ರಜೆಗಳೆಲ್ಲರೂ ಏಕಾದಶೀವ್ರತವನ್ನಾಚರಿಸಿ, ಯಮರಾಜನಿಗೆ ಕೆಲಸವೇ ಇಲ್ಲದಂತಾಗಲು, ಆತನು ಬ್ರಹ್ಮನಲ್ಲಿ ತನ್ನ ದುಃಖವನ್ನು ತೋಡಿಕೊಳ್ಳುತ್ತಾನೆ. ಬ್ರಹ್ಮನು ಮೋಹಿನಿಯನ್ನು ಸೃಷ್ಟಿಮಾಡಿ ರುಕ್ಮಾಂಗದನನ್ನು ವ್ರತಗೇಡಿಯಾಗಿ ಮಾಡುವಂತೆ ನೇಮಿಸುತ್ತಾನೆ. ಅವಳು ಹಿಮವತ್ಪರ್ವತದಲ್ಲಿ ಗಾನ ಮಾಡು

ತ್ತಿದ್ದಾಗ ಅವಳನ್ನು ಕಂಡ ರುಕ್ಮಾಂಗದನು ಅವಳನ್ನು ಮೋಹಿಸಿ, ವರಿಸಿದನು. ಅವಳು ಇವನ ವ್ರತಭಂಗಕ್ಕೆ ಪ್ರಯತ್ನಿಸಿ, ಭಯಂಕರವಾದ ಒಂದು ಧರ್ಮಸಂಕಟವನ್ನು ತಂದು ಒಡ್ಡುತ್ತಾಳೆ. ಆತನು ವ್ರತಾಚರಣೆಯನ್ನು ನಿಲ್ಲಿಸದಿದ್ದರೆ, ಮಗನನ್ನು ಕೊಲ್ಲಬೇಕಾಗುತ್ತದೆ. ರಾಜನು ಮಗನಾದ ಧರ್ಮಾಂಗದನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಕೊಲ್ಲಲು ಸಿದ್ಧನಾದಾಗ, ವಿಷ್ಣು ಪ್ರತ್ಯಕ್ಷನಾಗಿ ಎಲ್ಲರನ್ನೂ ವೈಕುಂಠಕ್ಕೆ ಕರೆದೊಯ್ಯುತ್ತಾನೆ. ಇಲ್ಲಿ ಬರುವ ಧರ್ಮಾಂಗದನ ಪಾತ್ರ ಜೀವಪೂರ್ಣವಾಗಿದೆ. ರುಕ್ಮಾಂಗದನ ಧರ್ಮ ಸಂಕಟವೂ ಮನೋಹರವಾಗಿದೆ.

ಚಿಕ್ಕುಪಾಧ್ಯಾಯನು ಕನ್ನಡದ ಪೂರ್ವಕವಿಗಳಲ್ಲಿ ರುದ್ರಭಟ್ಟನನ್ನು ಮಾತ್ರ ಸ್ಮರಿಸಿದ್ದಾನೆ. ಆದರೆ ಆತನು ಪಂಪಯುಗದ ಕವಿಗಳೆಲ್ಲರನ್ನೂ ಕರತಲಾಮಲಕವಾಗಿ ಮಾಡಿಕೊಂಡಿದ್ದುದಲ್ಲದೆ ಷಡಕ್ಷರಿ ಕವಿಯನ್ನೂ ಆಮೂಲಾಗ್ರವಾಗಿ ಓದಿರಬೇಕು. ಹಿಂದಿನ ಕವಿಗಳ ಭಾವಗಳನ್ನು ಚಿಕ್ಕುಪಾಧ್ಯಾಯನು ಸ್ವೀಕರಿಸಿರುವುದು ಸುಸ್ಪಷ್ಟವಾಗಿದೆ. ಆತನು 'ರುಕ್ಮಾಂಗದ ಚರಿತೆ' ಯಲ್ಲಿ ತಂದಿರುವ ಮೋಹಿನಿಯ ಸಂಗೀತ 'ಕರ್ಣಾಟಕ ಕಾದಂಬರಿ'ಯಲ್ಲಿ ಬರುವ ಮಹಾಶ್ವೇತೆಯ ಸಂಗೀತವನ್ನು ಹೋಲುತ್ತದೆ. ವಿಷ್ಣುಪುರಾಣದಲ್ಲಿ ಬರುವ ಹಲವಾರು ಪದ್ಯಗಳಿಗೆ ರುದ್ರಭಟ್ಟನ 'ಜಗನ್ನಾಥ ವಿಜಯ', ಷಡಕ್ಷರಿಯ 'ರಾಜಶೇಖರವಿಲಾಸ' ಆಕರಗಳಾಗಿವೆ. (ಮದ್ರಾಸ್ ವಿಶ್ವವಿದ್ಯಾನಿಲಯ ಪ್ರಕಟಿಸಿರುವ ವಿಷ್ಣುಪುರಾಣದ ಮುನ್ನುಡಿಯಲ್ಲಿ ಇದಕ್ಕೆ ಸಾಕಷ್ಟು ಉದಾಹರಣೆಗಳಿವೆ.) ಪಂಪನಿಂದ ಎತ್ತಿಕೊಂಡಿರುವ ಭಾವಗಳನ್ನೂ ಚಿಕ್ಕುಪಾಧ್ಯಾಯನ ಕಾವ್ಯಗಳಲ್ಲಿ ಹೆಕ್ಕಿ ತೋರಿಸಬಹುದು. ಪೂರ್ವಕವಿಗ್ರಂಥಗಳ ಅಭ್ಯಾಸದಿಂದ ಕವಿಗೆ ಕನ್ನಡದಲ್ಲಿ ಅಪಾರವಾದ ಪಾಂಡಿತ್ಯ ಬಂದಿದೆ. ಸಂಸ್ಕೃತ ಕನ್ನಡಗಳಲ್ಲಿ ಮಾತ್ರವೇ ಅಲ್ಲದೆ ತಮಿಳಿನಲ್ಲಿಯೂ ಆತನು ಬಹು ದೊಡ್ಡ ಪಂಡಿತನಾಗಿರಬೇಕು. ಆತನ ಈ ಪಾಂಡಿತ್ಯದ ಫಲವಾಗಿ ಕನ್ನಡ ಸಾಹಿತ್ಯ ಸಾಕಷ್ಟು ತುಷ್ಟಿ ಪುಷ್ಟಿಗಳನ್ನು ಪಡೆದಿದೆ. ಆತನ ಗದ್ಯ ಗ್ರಂಥಗಳು ಅಂದಿನ ಗದ್ಯ ಶೈಲಿಗೆ ಹಿಡಿದ ಕನ್ನಡಿಯಂತಿವೆ. ಕನ್ನಡ ಗದ್ಯಚರಿತ್ರೆಯಲ್ಲಿ ಚಿಕ್ಕುಪಾಧ್ಯಾಯನಿಗೆ ಒಂದು ಪ್ರಮುಖಸ್ಥಾನ ಮೀಸಲಾಗಿದೆ.

**ತಿಮ್ಮಕವಿ :**

ಈತನು ಚಿಕ್ಕದೇವರಾಜನ ಆಶ್ರಿತ. ರಾಜನ ಅಪ್ಪಣೆಯಂತೆ ಚಿಕ್ಕುಪಾಧ್ಯಾಯನ ಪ್ರೇರಣೆಯಿಂದ 'ಯಾದವಗಿರಿ ಮಾಹಾತ್ಮ್ಯ,' 'ವೆಂಕಟಗಿರಿ ಮಾಹಾತ್ಮ್ಯ,' 'ಪಶ್ಚಿಮರಂಗ ಮಾಹಾತ್ಮ್ಯ' ಎಂಬ ಮೂರು ಚಂಪೂ ಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಕ್ರಮವಾಗಿ ಮೇಲುಕೋಟೆ, ತಿರುಪತಿ ಮತ್ತು ಶ್ರೀರಂಗಪಟ್ಟಣ—ಇವುಗಳ ಮಹಿಮೆ ವರ್ಣಿತವಾಗಿದೆ. 'ಯಾದವಗಿರಿ ಮಾಹಾತ್ಮ್ಯ'ದ ಆರಂಭದಲ್ಲಿ ಕವಿಯು ನಾಲ್ಕು ಆಶ್ವಾಸಗಳಷ್ಟನ್ನು ಚಿಕ್ಕದೇವರಾಜನ ವಂಶಾವಳಿ, ರಾಜನ ಪರಾಕ್ರಮ—ಇವುಗಳ ವರ್ಣನೆಗೆ ಮೀಸಲಾಗಿಟ್ಟಿದ್ದಾನೆ. ಕನ್ನಡದ ಪೂರ್ವಕವಿಗಳಲ್ಲಿ ರುದ್ರಭಟ್ಟನನ್ನು ಮಾತ್ರ ಸ್ತುತಿಸಿದ್ದಾನೆ. ಆತನೇ ಕವಿಯ ಆದರ್ಶ. ರುದ್ರ ಭಟ್ಟನಿಗೆ ಹೋಲ್‌ಕಯ್ ಆಗುವಂತೆ ಪ್ರೌಢವಾಗಿ ಕಾವ್ಯರಚನೆ ಮಾಡಿದ್ದಾನೆ.

**ಮಲ್ಲಿಕಾರ್ಜುನ :**

ಚಿಕ್ಕದೇವರಾಜನ ಆಶ್ರಿತನಾದ ಮಲ್ಲಿಕಾರ್ಜುನಕವಿ ಬ್ರಹ್ಮಾಂಡ ಪುರಾಣಾಂತರ್ಗತವಾದ ಶಿವ-ನಾರದ ಸಂವಾದ ರೂಪದ ಶ್ರೀರಂಗ ಕ್ಷೇತ್ರದ ಮಹಿಮೆಯನ್ನು 'ಶ್ರೀರಂಗ ಮಾಹಾತ್ಮ್ಯ' ಎಂಬ ಹೆಸರಿನಿಂದ ಚಂಪೂವಿನಲ್ಲಿ ಬರೆದಿದ್ದಾನೆ. ಈ ಗ್ರಂಥದ ಮೊದಲೆರಡು ಆಶ್ವಾಸಗಳಲ್ಲಿ ಕರ್ಣಾಟಕದೇಶ ಮತ್ತು ಚಿಕ್ಕದೇವರಾಜನ ವಂಶಪರಂಪರೆಯ ವರ್ಣನೆಗಳು ಕಂಡುಬರುತ್ತವೆ. ತನ್ನ ಕಾವ್ಯವು 'ಚದುರರ ನಾಲಗೆಗಿಂಪಂ, ಮತಿವಂತರ ಬಗೆಗೆ ಪೊಚ್ಚ ಪೊಸವೇಟಮುಂ' ಒದಗಿಸುತ್ತದೆಯೆಂದು ಹೇಳಿಕೊಂಡಿದ್ದಾನೆ. ಈ ಮಾತಿನಲ್ಲಿ ಸ್ವಲ್ಪ ಮಟ್ಟಿಗೆ ಸತ್ಯವಿದೆ. ಆತನ ಕಲ್ಪನಾಶಕ್ತಿ ಮಹೋನ್ನತವಾದುದಲ್ಲವಾದರೂ ಆತನ ಶೈಲಿ ಲಲಿತವಾಗಿದೆ.

**ಸಿಂಗರಾರ್ಯ :**

ಈತನು ಕವಿ ತಿರುಮಲಾರ್ಯನ ತಮ್ಮ ; ಚಿಕ್ಕದೇವರಾಜನ ಆಸ್ಥಾನದ ಕವಿ. 'ಮಿತ್ರವಿಂದಾ ಗೋವಿಂದ' ಎಂಬ ನಾಟಕವನ್ನು ಬರೆದಿದ್ದಾನೆ. ಇದು ಕನ್ನಡದಲ್ಲಿ ಉಪಲಬ್ಧವಾಗಿರುವ ನಾಟಕಗಳಲ್ಲಿ ಮೊತ್ತಮೊದಲನೆಯದು. ಇದೇ ಈ ಕಾವ್ಯದ ಹಿರಿಮೆ. ಸಿಂಗರಾರ್ಯನು ಹಾಗೆ ಹೇಳಿಕೊಂಡಿಲ್ಲವಾದರೂ ಆತನ ನಾಟಕ ಶ್ರೀ ಹರ್ಷಕವಿ ಸಂಸ್ಕೃತದಲ್ಲಿ ಬರೆದಿರುವ

'ರತ್ನಾವಳಿ' ನಾಟಿಕೆಯ ರೂಪಾಂತರ ಶೃಂಗಾರಮಯವಾದ ಮೂಲ ನಾಟಕವನ್ನು ಇದ್ದುದನ್ನು ಇದ್ದಂತೆ ಭಾಷಾಂತರ ಮಾಡುವುದಕ್ಕೆ ಬದಲಾಗಿ, ಬಹುಶಃ ಶ್ರೀ ವೈಷ್ಣವ ಮತದ ಮೇಲಿನ ಅಭಿಮಾನದಿಂದಲೊ ಏನೊ ಸಿಂಗರಾರ್ಯನು 'ರತ್ನಾವಳಿ'ಯನ್ನು 'ಮಿತ್ರವಿಂದಾ ಗೋವಿಂದ'ವನ್ನು ಮಾಡಿದ್ದಾನೆ. ಸ್ತ್ರೀಲೋಲನಾದ ವತ್ಸರಾಜನ ಪೋಷಾಕನ್ನು ಶ್ರೀಕೃಷ್ಣನಿಗೂ ವಾಸವದತ್ತೆಯ ವೇಷವನ್ನು ರುಕ್ಮಿಣಿಗೂ, ರತ್ನಾವಳಿಯ ಉಡಿಗೆಯನ್ನು ಸರಸ್ವತಿಗೂ, ಹೊಟ್ಟೆಬಾಕ ವಿದೂಷಕನ ಹೊದಿಕೆಯನ್ನು ಕುಚೇಲನಿಗೂ ಅಳವಡಿಸಿ ಕೂಡಿಸಿದ್ದಾನೆ. ಇದರಿಂದ 'ಐವಾರು ಚೇಶಿನದಿ ಕೋತಿ ಪಿಲ್ಲಾಯ' ಎಂಬ ತೆಲಗು ಗಾದೆಯಂತೆ ಕೃತಿ ವಿಕೃತಿಯಾಗಿದೆ. ಮೂಲದ ಸನ್ನಿವೇಶ ರಚನಾ ಕೌಶಲವಾಗಲಿ, ಸಂಭಾಷಣಾ ಚಾತುರ್ಯವಾಗಲಿ, ರಸಾಭಿವ್ಯಕ್ತಿಯಾಗಲಿ ಭಾಷಾಂತರದಲ್ಲಿ ನಾವು ಕಾಣಲಾರೆವು. ಇಷ್ಟೇ ಅಲ್ಲ. ಶೃಂಗಾರರಸ ನಿರೂಪಣವೇ ಸರ್ವಸ್ವವಾಗಿ ಕುಳಿತಿರುವ ಈ ನಾಟಕದ ಹಳಗನ್ನಡ ಶೈಲಿ ಕಡಲೆಯನ್ನು ಮುಕ್ಕುತ್ತಿರವಾಗ ಕಲ್ಲು ಹರಳನ್ನು ಅಗೆದಂತಾಗುತ್ತದೆ. ವಿಷಯ ಪ್ರೌಢವಿಲ್ಲದಾಗ ಭಾಷಾ ಪ್ರೌಢಿಮೆ ಬಂದರೆ ಅಣಕದಂತೆ ಕಾಣಬರುತ್ತದೆ. ಈ ನಾಟಕದ ಆರಂಭದಲ್ಲಿ ವಿಸ್ತಾರವಾದ ಪ್ರಸ್ತಾವನೆಯಿದೆ. ಇದರಿಂದ ಕವಿಯ ಕಾಲದ ಚರಿತ್ರೆಗೆ ಸಹಾಯವಾಗುತ್ತದೆಯೆಂದೇ ಸಮಾಧಾನಮಾಡಿಕೊಳ್ಳಬಹುದು. ಹತ್ತು ತಪ್ಪುಗಳಿದ್ದರೂ ಇದು ಕನ್ನಡದ ಮೊದಲ ನಾಟಕ. ಆ ಗೌರವ ಪ್ರಶಸ್ತಿಗಳು ನಿರ್ವಿವಾದವಾಗಿಯೂ ಅದಕ್ಕೆ ಸಲ್ಲಬೇಕಾದುದೆ. ಈತನು ರಾಘವಾಭ್ಯುದಯ, ಗೀತರಂಗೇಶ್ವರವೆಂಬ ಕಾವ್ಯಗಳನ್ನು ಬರೆದಿರುವುದಾಗಿ ಹೇಳಿಕೊಂಡಿದ್ದಾನೆ, ಇವು ಇದುವರೆಗೆ ಸಿಕ್ಕಿಲ್ಲ.

ಚಿಕ್ಕದೇವರಾಜ ಆಶ್ರಿತರಲ್ಲಿ ವೇಣುಗೋಪಾಲ ವರಪ್ರಸಾದನು 'ಚಿಕ್ಕದೇವರಾಜ ವಂಶಾವಳಿ'ಯನ್ನೂ ಚಿದಾನಂದಕವಿಯು 'ಮುನಿವಂಶಾಭ್ಯುದಯ' ವನ್ನೂ ಮಲ್ಲರಸನು 'ದಶಾವತಾರ ಚರಿತೆ'ಯನ್ನೂ ಬರೆದಿದ್ದಾರೆ. 'ಚಿಕದೇವರಾಜ ವಂಶಾವಳಿ' ಯೂ 'ದಶಾವತಾರ ಚರಿತೆ'ಯೂ ಚಂಪೂರೂಪದಲ್ಲಿವೆ. 'ಚಿಕದೇವರಾಜ ವಂಶಾವಳಿ' ಅದರ ಹೆಸರೇ ಸೂಚಿಸುವಂತೆ ಮೈಸೂರು ರಾಜರ ವಂಶಾವಳಿಯ ಇತಿಹಾಸವನ್ನು ಒಳಗೊಂಡಿದೆ.

ಇದರಲ್ಲಿ ಕಥೆಗಿಂತ ವರ್ಣನೆಯೇ ಹೆಚ್ಚು. 'ದಶಾವತಾರ ಚರಿತೆ' ಯಲ್ಲಿ ವಿಷ್ಣುವಿನ ಹತ್ತು ಅವತಾರಗಳ ಕಥೆ ಇದೆ. ಕಾವ್ಯಗುಣಕ್ಕಿಂತಲೂ ಅಷ್ಟಾದಶ ವರ್ಣನೆಗಳ ಮೆರವಣಿಗೆಗೆ ಇಲ್ಲಿ ಮಹತ್ವ ಹೆಚ್ಚು. ಚಿದಾನಂದ ಕವಿಯ 'ಮುನಿವಂಶಾಭ್ಯುದಯ'ವು ಸಾಂಗತ್ಯದಲ್ಲಿದೆ. ಜೈನಮುನಿಗಳ ಪರಂಪರೆಯನ್ನು ಹೇಳಿರುವುದರಿಂದ ಅದಕ್ಕೆ ಆ ಹೆಸರು. ಇದರಲ್ಲಿ ಭದ್ರಬಾಹು ಮತ್ತು ಚಂದ್ರಗುಪ್ತರು ಶ್ರವಣಬೆಳಗೊಳಕ್ಕೆ ಬಂದ ವಿಷಯ ನಿರೂಪಿತವಾಗಿದೆ.

ಚಿಕ್ಕದೇವರಾಜರ ಆಶ್ರಯದಲ್ಲಿದ್ದ ಕವಿಯಿತ್ರಿಯರಿಬ್ಬರು–ಹೊನ್ನಮ್ಮ, ಶೃಂಗಾರಮ್ಮ ಉಲ್ಲೇಖಾರ್ಹರಾಗಿದ್ದಾರೆ. ಹೊನ್ನಮ್ಮನು ಚಿಕ್ಕದೇವರಾಜನ ಸಂಚಿಯ ಊಳಿಗದಲ್ಲಿದ್ದವಳು. ರಾಜನ ಪಟ್ಟ ಮಹಿಷಿಯಾದ ದೇವಾಜಮ್ಮಣ್ಣಿಯ ಪ್ರೀತಿಪಾತ್ರಳಾಗಿದ್ದವಳು; ಅಳಸಿಂಗರಾರ್ಯನ ಶಿಷ್ಯಳಾಗಿದ್ದವಳು. ರಾಜನು ತನ್ನ ಪಟ್ಟ ಮಹಿಷಿಯೊಡನೆ ಹೊನ್ನಮ್ಮನನ್ನು ಸರಸ ಸಾಹಿತ್ಯದ ವರದೇವತೆ ಎಂದು ಹೊಗಳಿ ಇವಳಿಂದ ಸರಸವಾದ ಒಂದು ಗ್ರಂಥವನ್ನು ಬರೆಸುವಂತೆ ಹೇಳಲು, ರಾಣಿಯ ಅಪ್ಪಣೆಯಂತೆ ಹೊನ್ನಮ್ಮ ಕಾವ್ಯ ರಚನೆಗೆ ಕೈಹಾಕಿ 'ಹದಿಬದೆಯ ಧರ್ಮ' ವನ್ನು ರಚಿಸಿದಳಂತೆ! ಇದು ೪೭೭ ಪದ್ಯಗಳನ್ನು ಒಳಗೊಂಡ ಸಾಂಗತ್ಯ ಗ್ರಂಥ. ಇದರಲ್ಲಿ ಪತಿವ್ರತಾ ಸ್ತ್ರೀಯರ ಧರ್ಮವೇನೆಂಬುದು ದಿಗ್ದರ್ಶಿತವಾಗಿದೆ. ರಾಮಾಯಣ, ಭಾರತ ಮನುಧರ್ಮಶಾಸ್ತ್ರಾದಿ ಗ್ರಂಥಗಳಿಂದ ತನ್ನ ನಿರೂಪಣಾಸಾಮಗ್ರಿಗಳನ್ನು ಆಯ್ದುಕೊಂಡಿರುವುದಾಗಿ ಕವಿಯಿತ್ರಿ ಹೇಳಿಕೊಂಡಿದ್ದಾಳೆ. ಆಕೆಯನ್ನು ಚಿಕ್ಕದೇವರಾಜನು 'ಸರಸಸಾಹಿತ್ಯದ ವರದೇವತೆ' ಯೆಂದು ಹೊಗಳಿರುವುದು ಅನ್ಯಾಯವೇನಲ್ಲ. ಆಕೆಯಲ್ಲಿ ಔಚಿತ್ಯ ಜ್ಞಾನವಿದೆ. 'ಪದಿನೆಂಟು ಬಣ್ಣನೆಯೆಂದು ಬವಣಿಗೊಂಡು, ಪದಗಟ್ಟು ಬಯಲ ಬಣ್ಣಿಸದೆ' ತನ್ನ ಕಾವ್ಯದಲ್ಲಿ 'ಧರ್ಮದ ತನಿಗಂಪು ತಲೆದೋರೆ ಕಾವ್ಯದ | ಪೆರ್ಮೆ ಬೇರ್ವರಿದು ಬಿತ್ತರಿಸೆ! ನಿರ್ಮಲ ಸತಿಯರ ಧರ್ಮದ ಕೃತಿ'ಯನ್ನು ನಿರ್ಮಿಸುವುದಾಗಿ ಹೇಳಿಕೊಂಡಿದ್ದಾಳೆ. ಹೆಣ್ಣಿನ ಸ್ಥಾನ ಮಾನಗಳೇನೆಂಬುದನ್ನು ಆಕೆ ಸಹಜವಾದ ವಾಣಿಯಿಂದ ಹೇಳುತ್ತಾಳೆ.

ಪೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದ ತಾಯಿ | ಪೆಣ್ಣಲ್ಲವೆ ಪೊರೆದವಳು |
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು | ಕಣ್ಣು ಕಾಣದ ಗಾವಿಲರು !

ಎಂಬ ಆಕೆಯ ಮಾತು ಸಹಜವಾಗಿ ಸ್ಪಷ್ಟವಾಗಿರುಂತೆ ಶಕ್ತಿಯುತ ವಾಗಿಯೂ ಇದೆ. ಭಾರತದ ಸ್ತ್ರೀತ್ವದ ಆದರ್ಶವನ್ನು ಎತ್ತಿ ಹಿಡಿಯುತ್ತಾ 'ಗುಣವಂತೆಯರೆಸಗುವ ಪತಿಶುಶ್ರೂಷೆಗೆಣೆಯಹ ತಪವಿನ್ನೊಳವೆ?' ಎಂದು ಕೇಳಿ, ಆ ಪತಿವ್ರತೆ.

ಮುಡಿಯೊಳು ಪೂತ್ತು ಮುದ್ದಿಸಿದೊಡೇನಡಿಗಳಂ | ಪೊಡವಿಗಿ ಟ್ಟೊರಸಿದೊಡೇನು |
ಒಡೆಯನಿಟ್ಟಂತಿರ್ಪುದೊಡವೆಗುಚಿತವೆಂದು | ನಡೆವುದು ನಲ್ಪೆಂ ಡಿರೊಲಿದು ||

ಎಂದು ಹೇಳುವ ಮಾತು ಆಧುನಿಕ ಸ್ತ್ರೀಯರಿಗೆ ರುಚಿಸುವುದೊ, ಇಲ್ಲವೊ! ಆದರೆ ಹೆಣ್ಣು ಅಂತಹ ಪತಿವ್ರತೆಯಾದರೆ

ಮಳೆ ಕರೆವುದು ಬೆಳೆ ಪೆರ್ಚುವುದಿಳೆ ತಳ| ಕಿಳಿದು ಪೋಗದೆ ತಡೆದಿಹುದು|
ಪಳಿಪಿಲ್ಲದೆ ಪತಿವ್ರತೆಯರ ನಡತೆಯು | ಬಳದೊಳೆಂಬರು ಬಲ್ಲವರು ||

ಎಂದು ಹೇಳುತ್ತಾಳೆ. 'ಕುವರನಾದಡೆ ಬಂದ ಗುಣವೇನವರಿಂದೆ. ಕುವರಿಯಾದೊಡೆ ಕುಂದೇನು?' ಎಂದೂ 'ಪೆಣ್ಣು ಪೆತ್ತುದರಿಂದ ಪೆಸರೆ ಸಿಸಿತು ಮಿಗೆ | ಬಣ್ಣವೇರಿತು ಪಾಲ್ಗಡಲು' ಎಂದೂ ಹೆಣ್ಣಿನ ಮೇಲ್ಮೆ ಯನ್ನು ಎತ್ತಿ ಹಿಡಿಯುತ್ತಾಳೆ. ಹೆಣ್ಣು ಹೇಗೆ ಗಂಡನ್ನು ಅನುಸರಿಸು ವಳೋ ಗಂಡೂ ಹಾಗೆಯೇ ಅವಳನ್ನು ಪೋಷಿಸಬೇಕು. 'ಮನದನ್ನ ನೊಳು ಮಾಧವನ ಭಾವಿಸೆ' ಸತಿಗೆ ಮೋಕ್ಷ; ಹಾಗೆಯೇ 'ನಸು ನಾಣ್ಚುವೆಳವೆಂಡಿರ ನಲವೇರಿಸಿ....ಪೊಸಪೂವ ಸರಗೈದು ಮುಡಿ'ಯುವಂತೆ ಹೆಣ್ಣನ್ನು ಸಂತೋಷಗೊಳಿಸಬೇಕು, ಗಂಡು. ಶ್ರೀಪತಿಯ ಭಕ್ತಿಗಿಂತಲೂ ಪತಿಭಕ್ತಿ ಮಿಗಿಲೆಂದು ಬೋಧಿಸುತ್ತಾ ಈಕೆ ಹೇಳಿರುವ ಪತಿವ್ರತೆಯ ಕಥೆ ಅತ್ಯಂತ ರಮ್ಯವಾಗಿದೆ, ರಸವತ್ತಾಗಿದೆ. ಬೋಧಪ್ರದವಾಗಿದೆ. ಇಲ್ಲಿನ ಗುರಿ ನೀತಿಬೋಧೆ. ಹೊನ್ನಮ್ಮ ಅದನ್ನು ಚೊಕ್ಕವಾಗಿ ನಿರ್ವಹಿಸಿದ್ದಾಳೆ. ನೀತಿ ಬೋಧಕರಾದ ಕವಿಗಳ ಶ್ರೇಣಿಯಲ್ಲಿ ಆಕೆ ಅಗ್ರಗಣ್ಯಳು.

**ಶೃಂಗಾರಮ್ಮ :**

ಚಿಕ್ಕದೇವರಾಜನ ಕೃಪಾಪಾತ್ರಳಾದ ಮತ್ತೊಬ್ಬ ಕವಯಿತ್ರಿ— ಶೃಂಗಾರಮ್ಮ—'ಚಿಕದೇವಭೂಪಾಲ ಸಂತವಿಸಿದ ಸಣ್ಣ ಮಗಳು'

ಎಂದು ತನ್ನನ್ನು ಕರೆದುಕೊಂಡು ‘ಪದ್ಮಿನೀ ಕಲ್ಯಾಣ’ ವನ್ನು ಸಾಂಗತ್ಯದಲ್ಲಿ ರಚಿಸಿದ್ದಾಳೆ. ತಿರುಪತಿಯ ಶ್ರೀನಿವಾಸನಿಗೂ ಪದ್ಮಾವತಿಗೂ ನಡೆದ ವಿವಾಹ ವರ್ಣನೆ ಇದರ ತಿರುಳು. ಹೊನ್ನಮ್ಮನ ಕಾವ್ಯಶಕ್ತಿ ಈಕೆಯಲ್ಲಿಲ್ಲ. ಕಾವ್ಯವು ಕೇವಲ ೧೮೯ ಪದ್ಯಗಳನ್ನು ಒಳಕೊಂಡ ಪುಟ್ಟಗ್ರಂಥವಾಗಿದೆ. ಪದ್ಮಾವತಿಯ ಸಖಿಯರನ್ನು ವರ್ಣಿಸುತ್ತಾ—

ನುಡಿವರು ಗಿಳಿಯಂತೆ. ನಡೆಯಲೊಂದಾಗಿ ನೆಲ| ಪಿಡಿಯುವವರು
ಹಂಸೆಯಂತೆ
ಬೆಡಗಿಂದ ನವಿಲಂತೆ ನಲಿಯುತಿದ್ದರು ಮುನ್ನ ಕಡುಚಪಲೆಯರೊಂದು
ಗೂಡಿ ||

ಎಂದು ಹಾಡುವುದು ಕವಿಸಮಯದ ಚೌಕಟ್ಟಿನಲ್ಲಿಯೇ ಇರುವ ಒಂದು ಚಿತ್ರ. ಕವಯಿತ್ರಿಯರ ವಿರಳ ಸಂಖ್ಯೆಯ ದೃಷ್ಟಿಯಿಂದ ಈಕೆಗೆ ಸ್ವಾಗತವುಂಟು.

ಚಿಕ್ಕದೇವರಾಜ ಒಡೆಯರ ನಂತರ ರಾಜನಾದ ಇಮ್ಮಡಿ ಕಂಠೀರವ ನರಸರಾಜನ ಕಾಲದಲ್ಲಿ ಸಾಹಿತ್ಯಕ್ಕೆ ಅಷ್ಟೇನೂ ಪ್ರೋತ್ಸಾಹ ದೊರೆತಂತೆ ಕಾಣುವುದಿಲ್ಲ. ಆತನ ತರುವಾಯ ರಾಜನಾದ ದೊಡ್ಡದೇವರಾಜರ ಕಾಲದಲ್ಲಿ (೧೭೧೭-೩೧) ಆತನ ಕರಣಿಕನಾದ ವೆಂಕಟಪತಿಯ ಪ್ರೋತ್ಸಾಹದಿಂದ ಬಾಲವೈದ್ಯದ ಚಲುವನೆಂಬುವನು ‘ ಕನ್ನಡ ಲೀಲಾವತಿ ’, ‘ ರತ್ನಶಾಸ್ತ್ರ ’ ಗಳನ್ನು ಬರೆದನು. ಗಣಿತಶಾಸ್ತ್ರದ ‘ಲೀಲಾವತಿ’ಯು ಕಂದ, ವಾರ್ಧಕದಲ್ಲಿಯೂ ‘ ರತ್ನಶಾಸ್ತ್ರ’ ಬರಿಯ ವಾರ್ಧಕದಲ್ಲಿಯೂ ರಚಿತವಾಗಿದೆ. ರಾಜನ ಪಟ್ಟಮಹಿಷಿಯಾದ ಚೆಲುವಾಂಬೆಯು ತನ್ನ ಗಂಡನ ಅಪ್ಪಣೆಯಂತೆ ‘ವರನಂದೀಕಲ್ಯಾಣ’ ವೆಂಬ ಏಳು ಸಂಧಿಗಳ ಸಾಂಗತ್ಯಗ್ರಂಥವನ್ನು ರಚಿಸಿದಳು. ದೆಹಲಿಯ ಬಾದಶಹನ ಮಗಳು ವರನಂದಿಗೂ ಮೇಲುಕೋಟೆಯ ಚೆಲುವರಾಯಸ್ವಾಮಿಗೂ ನಡೆದ ವಿವಾಹವು ಇದರ ಕಥಾವಸ್ತು. ಸತ್ಯಭಾಮೆಯೇ ವರನಂದಿನಿಯಾಗಿ ಹುಟ್ಟಿದ್ದಳೆಂದು ಕವಯಿತ್ರಿಯ ಹೇಳಿಕೆ. ಈಕೆಯ ಶೈಲಿ ಲಲಿತವಾಗಿದೆ, ಮಧುರವಾಗಿದೆ. ಮನೋಹರವಾಗಿದೆ.

ಮಣಿಮೇಳವಿಂಬೊ ಪೊಂಡೆಳೆನೆಯ್ದ್ಯ, ಬಿಡುಮುಡಿ | ರಿಡುವ ಸಂಪಗೆಯೊ
ನಾಸಿಕವೋ

ಕಡುಸವಿಯೋರಿ ಪಿಡುಕುತಿರ್ದ ಸವಳವೊ | ಬೆಡಗಿನ ಚೆಂಬಣ್ಣ
ದುಟಿಯೆಂದೊ॥

ಎಂಬಂತಿದ್ದ ಆ ಹೆಣ್ಣು ಚಲುವರಾಯನ ವಿರಹದಿಂದ ಕೊರಗುತ್ತಾ ಮನ್ಮಥನನ್ನು ಕುರಿತು-

ಕುಸುಮಬಾಣಗಳೆಂದು ನಿನ್ನ ಶರಗಳಿಗೆ | ಹೆಸರಿಟ್ಟವರಾರೋ ತಿಳಿಯೆ
ಮಸೆದು ಕತ್ತರಿಸಿ ಮುಂಗುಡ ಮಾಡಿಯೂ ಬಾಯ | ಬಿಸಿದ ದಾಡೆ
ವೊಲು ತೋರುವವು

ಎಂದು ಮನ್ಮಥನನ್ನು ನಿಂದಿಸುತ್ತಾಳೆ. ಯುದ್ಧದಲ್ಲಿ ಶೂರರಾದವರು ತಮ್ಮ ಶತ್ರು ಹುಲ್ಲು ಕಚ್ಚಿದರೆ, ಮರೆಯೊಂದಿದರೆ ಅವನನ್ನು ಕೊಲ್ಲದೆ ಕಾಯುತ್ತಾರೆ; ಅವರು ಹೆಣ್ಣುಗಳ ಮೇಲೆ ಎಂದಿಗೂ ಕೈಮಾಡುವುದಿಲ್ಲ. ಆದರೆ ‘ಈ ಮದನನು ಹೆಂಗೊಲೆಗೆಂದೇ ಹುಟ್ಟಿದನು’ ಎಂದು ಬಿಸುಸುಯ್ಯುತ್ತಾಳೆ. ಸಂಪ್ರದಾಯವನ್ನೇ ಅನುಸರಿಸುತ್ತಿದ್ದರೂ ಶೃಂಗಾರದಲ್ಲಿ ನವೀನತೆಯಿದೆ. ಈಕೆಯು ವೆಂಕಟಾಚಲದ ಮಹಾತ್ಮ್ಯೆಯನ್ನು ನಿರೂಪಿಸುವ ಸುಮಾರು ೨೦೦ ಪದಗಳನ್ನು ಒಳಗೊಂಡ ‘ವೆಂಕಟಾಚಲ ಮಹಾತ್ಮ್ಯೆ ಲಾಲಿಪದ’ವನ್ನೂ, ವೆಂಕಟರಮಣಸ್ವಾಮಿಯ ಮಡದಿ ‘ಅಲುಮೇಲುಮಂಗೆ ಲಾಲಿಪದ’ವೆಂಬ ೩೫ ಪದಗಳನ್ನೂ ರಚಿಸಿರುವುದಲ್ಲದೆ ಗದ್ಯರೂಪದ ‘ತುಲಾಕಾವೇರೀ ಮಾಹಾತ್ಮ್ಯ ಟೀಕೆ’ಯನ್ನೂ ಬರೆದಿದ್ದಾಳೆ.

ಕಳಲೆರಾಜರಲ್ಲಿ ಒಬ್ಬನಾದ ವೀರರಾಜನೆಂಬುವನು (ಕ್ರಿ. ಶ. ೧೭೨೦) ‘ವೈದ್ಯ ಸಂಹಿತಾ ಸಾರಾರ್ಣವ’ವನ್ನು ಬರೆದಿದ್ದಾನೆ. ಈತನು ಚಿಕ್ಕದೇವರಾಜನ ಆಶ್ರಿತನಾಗಿದ್ದ ದೊಡ್ಡೇಂದ್ರನ ಮಗ. ದೇವಚಂದ್ರನು ತನ್ನ ರಾಜಾವಳೀ ಕಥೆಯಲ್ಲಿ ಈತನನ್ನು ಹೊಗಳಿದ್ದಾನೆ. ವೈದ್ಯಶಾಸ್ತ್ರವನ್ನು ಅಭ್ಯಾಸ ಮಾಡುವವರಿಗೆ ಈತನ ಕಾವ್ಯ ಬಹು ಉಪಯುಕ್ತವಾಗಿರುವಂತೆ ತೋರುತ್ತದೆ. ಈತನ ಗ್ರಂಥಕ್ಕೆ ‘ವೀರರಾಜೋಕ್ತಿವಿಲಾಸ’ವೆಂಬ ಹೆಸರೂ ಉಂಟು. ದೊಡ್ಡಕೃಷ್ಣರಾಜ ಒಡೆಯರ ನಂತರ ಐದನೆಯ ಚಾಮರಾಜ, ಚಿಕ್ಕಕೃಷ್ಣರಾಜ ಇವರು ಕ್ರಮವಾಗಿ ಮೈಸೂರು ಅರಸರಾದರು. ಇವರ ಕಾಲದಲ್ಲಿ ಸ್ತೋತ್ರ ಮಹಿಮೆ, ಯಕ್ಷಗಾನ, ಹಾಡು ಇತ್ಯಾದಿ ಚಿಲ್ಲರೆ ಗ್ರಂಥಗಳೇ ಹೊರತು ಗಮನಾರ್ಹವಾದ ಕಲಾಕೃತಿಗಳಾವುವೂ ರಚಿತವಾಗಿಲ್ಲ. ಚಿಕ್ಕ ಕೃಷ್ಣರಾಜರ

ಕಾಲದಲ್ಲಿ ರಾಜ್ಯವು ಹೈದರಾಲಿಯ ವಶವಾಯಿತು. ಅಲ್ಲಿಂದ ಮುಂದೆ ಕ್ರಿ.ಶ. ೧೮೦೦ರವರೆಗೆ ಮೈಸೂರು ರಾಜವಂಶ ರಾಹುಗ್ರಸ್ತ ಚಂದ್ರನಂತೆ ಅಜ್ಞಾತ ವಾಗಿತ್ತು. ಈ ಕಾಲದಲ್ಲಿ ಹುಟ್ಟಿದ ಗ್ರಂಥಗಳಲ್ಲಿ ದೇವಚಂದ್ರನ 'ರಾಜಾವಳೀ ಕಥೆ' ಯೊಂದೇ ಗಮನಾರ್ಹವಾದುದು. ಇದನ್ನು ಕುರಿತು ಪ್ರತ್ಯೇಕವಾಗಿ ನಿರೂಪಿಸಲಾಗಿದೆ. ಕ್ರಿ. ಶ. ೧೮೧೧ರಲ್ಲಿ ಮುಮ್ಮಡಿ ಕೃಷ್ಣರಾಜರು ರಾಜ್ಯ ಭಾರ ಸೂತ್ರಗಳನ್ನು ವಹಿಸಿಕೊಂಡಮೇಲೆ, ಮೈಸೂರು ಅರಸರೊಡನೆ ಕನ್ನಡಸಾಹಿತ್ಯವೂ ಮತ್ತೆ ಏಳಿಗೆಯನ್ನು ಪಡೆಯಿತು.

**ಮುಮ್ಮಡಿ ಕೃಷ್ಣದೇವರಾಯ** (೧೭೯೪-೧೮೬೮) :

ಮುಮ್ಮಡಿಕೃಷ್ಣರಾಜನು ಮರಾಠಿ, ಉರ್ದು, ಪಾರ್ಸಿ ಭಾಷೆಗಳನ್ನು ಬಲ್ಲವನಾಗಿದ್ದನು ಸಂಗೀತ ಸಾಹಿತ್ಯಗಳಲ್ಲಿ ಮಾತ್ರವೇ ಅಲ್ಲದೆ ವೇದಾಂತ ಜ್ಯೋತಿಷ್ಯಾದಿಗಳಲ್ಲಿ ಅತನಿಗೆ ಆಳವಾದ ಪರಿಜ್ಞಾನವಿತ್ತು. ರನ್ನ ಕವಿ—ಶ್ರೀಮಂತನಲ್ಲಿ ಔದಾರ್ಯವೂ, ವಿದ್ವಾಂಸನಲ್ಲಿ ಅಮತ್ಸರತ್ವವೂ ಇರುವುದಿಲ್ಲ—ವೆಂದು ಹೇಳಿ ' ಉದಾರಂ ಶ್ರೀಯುತನ್, ಅಮತ್ಸರಂ ವಾಕ್‌ಶ್ರೀಯುತನ್ ಆದೊಡೆ ಕೃತಾರ್ಥರಾಗರೆ ಕವಿಗಳ್'—ಉದಾರಿ ಶ್ರೀಮಂತನಾದರೆ. ಅಸೂಯೆಯಿಲ್ಲದವನು ವಿದ್ವಾಂಸನಾದರೆ ಕವಿಗಳು ಧನ್ಯರು— ಎನ್ನುತ್ತಾನೆ. ಮುಮ್ಮಡಿ ಕೃಷ್ಣರಾಜನು ಕವಿಗಳು ಧನ್ಯರಾಗಬಹುದಾದ ಎರಡು ಗುಣ ಗಳಿಗೂ ತವರುಮನೆಯಾಗಿದ್ದನು. ಅತನು ಸ್ವತಃ ಕವಿಯಾಗಿದ್ದು ಐವತ್ತು ಗ್ರಂಥಗಳ ಕರ್ತೃವೆಂದು ಪ್ರಸಿದ್ಧನಾಗಿದ್ದಾನೆ. ಇದರ ಜೊತೆಗೆ ಕವಿಗಳಿಗೆ ಕಲಾವಿದರಿಗೆ ಕೊಡುಗೈಯಿಂದ ಸಹಾಯ ನೀಡಿ ಪ್ರೋತ್ಸಾಹಿಸಿದನು. ಉದಾರಚರಿತಾನಾಂ ತು ವಸುಧೈವ ಕುಟುಂಬಕಂ' ಅಲ್ಲವೆ ? ಧರ್ಮಪರಾ ಯಣನಾದ ಪ್ರಭುವು ಮಠ, ದೇವಾಲಯಗಳಿಗೂ ಉದಾರವಾಗಿ ದಾನ ದತ್ತಿಗಳನ್ನಿತ್ತು ಪ್ರೋತ್ಸಾಹಿಸಿದನು. ರಾಜನ ಆಸ್ಥಾನ 'ಸರಸ್ವತೀ ನಿಲ್ದಾಣ' ವಾಯಿತು. ಅನೇಕ ಕವಿಗಳು ವಿಪುಲವಾಗಿ ಗ್ರಂಥರಚನೆಮಾಡಿದರು. ಪ್ರಜೆ ಗಳೆಲ್ಲರೂ ಧರ್ಮಪರರಾಗಿ ಸುಖಸಂತುಷ್ಟಿಗಳನ್ನು ಪಡೆದರು. ' ಕೃಷ್ಣರಾಜ ಭೂಪ—ಮನೆಯೆಲ್ಲ ದೀಪ' ಎಂಬ ಗಾದೆಯೊಂದು ಕನ್ನಡದಲ್ಲಿ ಹುಟ್ಟಿ ಕೊಂಡಿತು.

ಮುಮ್ಮಡಿ ಕೃಷ್ಣರಾಜಕವಿಯ ಗ್ರಂಥ ವೈಪುಲ್ಯ ವೈವಿಧ್ಯಗಳನ್ನು

ಕಂಡರೆ ಆನಂದವಾಗುವಷ್ಟೆ ಆಶ್ಚರ್ಯವೂ ಆಗುತ್ತದೆ. ಆತನು ‘ಕೃಷ್ಣರಾಜ ವಾಣೀವಿಲಾಸ ರತ್ನಾಕರ’ ವೆಂಬ ಹೆಸರಿನಿಂದ ಕಾಳಿದಾಸನ ಶಾಕುಂತಲ, ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ ನಾಟಕಗಳ ಕಥೆಯನ್ನೂ ‘ವತ್ಸ ರಾಜನ ಕಥೆ’ ಎಂಬ ಹೆಸರಿನಿಂದ ಶ್ರೀಹರ್ಷಕವಿಯ ರತ್ನಾವಳೀ ನಾಟಕದ ಕಥೆಯನ್ನೂ ಗದ್ಯರೂಪದಲ್ಲಿ ಬರೆದಿದ್ದಾನೆ. ಉತ್ತರರಾಮ ಚರಿತಕಥೆ, ಕಾದಂಬರಿ, ದಶಕುಮಾರ ಕಲಾನಿಧಿ, ಉಷಾಪರಿಣಯ, ಹರಿಶ್ಚಂದ್ರೋ ಪಾಖ್ಯಾನ, ನಳೋಪಾಖ್ಯಾನ, ಭಾವಾಕಥೆ ಮೊದಲಾದ ಲಲಿತ ಸುಂದರ ಕಥಾನಕಗಳನ್ನೂ ಬತ್ತೀಸ ಪುತ್ಥಳಿಯ ಕಥೆ, ಭೇತಾಳ ಪಂಚವಿಂಶತಿಯ ಕಥೆ, ಶುಕಸಪ್ತತಿ ಇತ್ಯಾದಿ ಅದ್ಭುತ ರಮ್ಯಕಥೆಗಳನ್ನೂ ಬರೆದಿರುವಂತೆಯೇ ಅಖಂಡ ಕಾವೇರಿ ಮಾಹಾತ್ಮ್ಯ, ಅರ್ಕಪುಷ್ಕರಣೀಮಾಹಾತ್ಮ್ಯ, ಚುಂಚನ ಕಟ್ಟೆಯ ಮಾಹಾತ್ಮ್ಯ; ತುಲಾ ಕಾವೇರೀ ಮಾಹಾತ್ಮ್ಯ, ಯಾದವಗಿರಿ ಮಾಹಾತ್ಮ್ಯ, ಶ್ರೀಶೈಲ ಮಾಹಾತ್ಮ್ಯ, ಹಾಲಾಸ್ಯಮಾಹಾತ್ಮ್ಯ ಗ್ರಂಥ ಗಳನ್ನೂ ಬರೆದಿದ್ದಾನೆ. ಅಶ್ವಮೇಧಿಕಪರ್ವದ ಟೀಕೆ, ದೇವೀಭಾಗ ವತ ತಾತ್ಪರ್ಯ ಟೀಕೆ, ರಾಮಾಯಣ ಟೀಕೆ, ರಾಮಾಯಣ ತಾತ್ಪರ್ಯ ದೀಪಿಕಾ ಟೀಕೆ ಇತ್ಯಾದಿ ಪೌರಾಣಿಕ ಗ್ರಂಥಗಳ ಟೀಕೆಯನ್ನು ಬರೆದಿರುವಂತೆ ಜಾತಕಸಾಮ್ರಾಜ್ಯ ಟೀಕೆಯನ್ನೂ ಬರೆದಿದ್ದಾನೆ. ದೇವೀ ಮಾಹಾತ್ಮ್ಯ, ಸಪ್ತಶತಿ, ಲಲಿತೋಪಾಖ್ಯಾನಗಳನ್ನೂ ಲೈಂಗ್ಯಪುರಾಣ, ಶಂಕರ ಸಂಹಿತೆ ಗಳನ್ನೂ ಕೃಷ್ಣಕಥಾಸಾರ ಸಂಗ್ರಹ,’ ‘ಕೃಷ್ಣಕಥಾರತ್ನಾಕರ,’ ‘ಗಯ ಚರಿತ್ರೆ’ಗಳನ್ನೂ ಬರೆದಿದ್ದಾನೆ. ‘ರಾಮಕಥಾ ಕಲ್ಪವೃಕ್ಷ.’ ‘ಭಾರತ,’ ‘ಭಾಗವತ’, ‘ಭಗವದ್ಗೀತೆ’ ಗಳೂ ಆತನಿಂದ ಕನ್ನಡಕ್ಕೆ ಇಳಿದು ಬಂದಿವೆ. ‘ಅಧ್ಯಾತ್ಮ ರಾಮಾಯಣ’, ‘ಕಾಶೀಕಾಂಡ’ ‘ಉತ್ತರ ಗೀತೆ,’ ‘ಶನೈಶ್ಚರ ಕಥೆ’ ಇತ್ಯಾದಿಗಳೆಲ್ಲವೂ ಆತನ ಕೃಪೆಯಿಂದ ಕನ್ನಡದಲ್ಲಿ ಕಾಣಿಸಿಕೊಂಡಿವೆ. ಆತನು ಏನು ಬರೆದಿದ್ದಾನೆ ಎಂದು ಪಟ್ಟಿಮಾಡಿ ಹೇಳುವುದಕ್ಕಿಂತಲೂ ಆತನು ಏನನ್ನೂ ಬರೆಯದೆ ಬಿಟ್ಟಿಲ್ಲವೆಂದು ಹೇಳಬಹುದೊ ಏನೋ!

ಮುಮ್ಮಡಿ ಕೃಷ್ಣರಾಜಕವಿಯ ಗ್ರಂಥಗಳೆಲ್ಲವೂ ಬಹುಮಟ್ಟಿಗೆ ಗದ್ಯ ಗ್ರಂಥಗಳು. ‘ಸೌಗಂಧಿಕಾ ಪರಿಣಯ’ (ಇದು ಗದ್ಯದಲ್ಲಿಯೂ ಇದೆ)

'ನಂಜುಂಡಶತಕ'—ಇತ್ಯಾದಿ ಎರಡು ಮೂರು ಗ್ರಂಥಗಳನ್ನು ಬಿಟ್ಟರೆ ಉಳಿದುವೆಲ್ಲವೂ ಗದ್ಯ ಗ್ರಂಥಗಳೇ. ಈತನ ಈ ಗದ್ಯ ಗ್ರಂಥಗಳ ಶೈಲಿ ಪೌರಾಣಿಕವಾದುದು. ಆದರೂ ಅದು ರಮ್ಯವಾಗಿದೆ. ಗದ್ಯದ ಬೆಳವಣಿಗೆಯಲ್ಲಿ ಮುಮ್ಮಡಿ ಕೃಷ್ಣರಾಜಕವಿಯೂ ಆತನ ಆಶ್ರಿತರೂ ಸೇಡಿರುವ ಪಾತ್ರ ಅದ್ವಿತೀಯವಾದುದು. ಆಧುನಿಕ ಕನ್ನಡ ಸಾಹಿತ್ಯದ ಅರುಣೋದಯಕ್ಕೂ ಈ ರಾಜಕವಿಯೇ ಸಹಾಯಕನಾಗಿದ್ದಾನೆಂದರೆ ತಪ್ಪಾಗಲಾರದು. ಕವಿಯು ಗ್ರಂಥರಚನೆಯಲ್ಲಿ ಎಷ್ಟು ಆಸಕ್ತಿ ಅಭಿಮಾನಗಳನ್ನೂ ಪರಿಶ್ರಮ ಪಾಂಡಿತ್ಯಗಳನ್ನೂ ಮೆರೆದಿರುವನೆಂಬುದನ್ನು ಕಂಡಾಗ ನಾವು ಹರ್ಷಪುಳಕಿತರಾಗುತ್ತೇವೆ. ಆತನ 'ರಾಮಕಥಾಕಲ್ಪವೃಕ್ಷ'ವನ್ನು ಬರೆಯುವ ಮುನ್ನ ಕವಿಯು "ಶ್ರೀಮದ್ರಾಮಾಯಣ,' 'ವಿಷ್ಣು ಪುರಾಣ,' 'ಪದ್ಮಪುರಾಣ' 'ಕೂರ್ಮ ಪುರಾಣ,' 'ಅಧ್ಯಾತ್ಮ ರಾಮಾಯಣ,' 'ಶಿವ ಧರ್ಮೋತ್ತರ,' 'ವಿಷ್ಣು ಧರ್ಮೋತ್ತರ,' 'ಜೈಮಿನಿ'—ಇತ್ಯಾದಿ ಗ್ರಂಥಗಳಲ್ಲಿರುವ ರಾಮಕಥೆಗಳನ್ನು ಪರಿಶೋಧನೆ ಮಾಡಿ, ಸಾರವನ್ನು ಸಂಗ್ರಹಿಸಿ ಲೋಕೋಪಕಾರಾರ್ಥವಾಗಿ ಈ ಗ್ರಂಥವನ್ನು ರಚಿಸಿದಂತೆ ಕವಿ ಹೇಳುತ್ತಾನೆ."[1] 'ಕೃಷ್ಣ ಕಥಾರತ್ನಾಕರ'ವನ್ನು ಬರೆಯುವ ಮುನ್ನ 'ಭಾಗವತ ದಶಮಸ್ಕಂಧ,' 'ವಿಷ್ಣುಪುರಾಣ' 'ಹರಿವಂಶ', 'ಭಾರತ'—ಇತ್ಯಾದಿ ಅನೇಕ ಗ್ರಂಥಗಳನ್ನು ಪರಿಶೋಧನೆ ಮಾಡಿರುವನಂತೆ![2] ಹೀಗೆಯೇ ಇನ್ನೂ ಅನೇಕ ಗ್ರಂಥಗಳ ರಚನೆ ಈತನಿಂದ ನಡೆದಿದೆ.

ಈತನ ಗ್ರಂಥಗಳಲ್ಲಿ 'ನಳೋಪಾಖ್ಯಾನ,' 'ಬತ್ತೀಸ ಪುತ್ಥಳೀ ಕಥೆ' 'ಸೌಗಂಧಿಕಾ ಪರಿಣಯ,' 'ಭಾರತ,' 'ಕೃಷ್ಣರಾಜ ವಾಣೀವಿಲಾಸ ರತ್ನಾಕರ' 'ವತ್ಸರಾಜನ ಕಥೆ'—ಇವು ಬಹು ಜನಪ್ರಿಯವಾಗಿವೆ.

ಮುಮ್ಮಡಿ ಕೃಷ್ಣರಾಜಕವಿಯ ಆಶ್ರಯದಲ್ಲಿದ್ದ ಅನೇಕ ಕವಿಗಳು ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ನೂರಾರು ಕಾವ್ಯಗಳನ್ನು ಬರೆದಿದ್ದಾರೆ. ಕನ್ನಡದಲ್ಲಿ ವೆಂಕಟರಾಮಾಶಾಸ್ತ್ರಿಯು 'ಅಮರುಕಟೀಕೆ,' 'ಶಸಿತ್ರಯೋದಶಿ ವ್ರತ' 'ಧನುರ್ಮಾಸ ಮಹಿಮೆ,' 'ಗಜಗೌರೀವ್ರತ' ಕಥೆಗಳನ್ನು ಬರೆ

---

1_2 ಕವಿಚರಿತ್ರೆ III ಭಾಗ ಪುಟ : ೧೭೫.

ದಿದ್ದಾನೆ. ರಾಮಕೃಷ್ಣಶಾಸ್ತ್ರಿಯು ತಾನೇ ಸಂಸ್ಕೃತದಲ್ಲಿ ಬರೆದಿರುವ 'ಭುವನ ಪ್ರದೀಪಿಕೆ'ಗೆ ಕನ್ನಡ ಟೀಕನ್ನು ಬರೆದಿದ್ದಾನೆ. ಶ್ರೀನಿವಾಸಕವಿ 'ಕೃಷ್ಣ ನೃಪ ವಿಜಯೋತ್ಕರ್ಷವನ್ನು' ಬರೆದಿದ್ದಾನೆ. ಶಾಂತರಾಜ ಪಂಡಿತನು ಲಕ್ಷ್ಮೀದೇವಿಗೆ ಹೂ ಮುಡಿಸುವ ಹಾಡುಗಳನ್ನು ಬರೆದಿದ್ದಾನೆ.

**ಕೆಂಪು ನಾರಾಯಣ :**

ಮುಮ್ಮಡಿ ಕೃಷ್ಣರಾಜರ ಆಶ್ರಿತರಲ್ಲಿ ಕೆಂಪು ನಾರಾಯಣನು ಅತ್ಯಂತ ಪ್ರಸಿದ್ಧನು. ಆತನ ಕಾವ್ಯ'ಮುದ್ರಾಮಂಜೂಷ'. ವಿಶಾಖದತ್ತನ 'ಮುದ್ರಾ ರಾಕ್ಷಸ'ದ ಆಧಾರದಮೇಲೆ ಕನ್ನಡದಲ್ಲಿ ರಚಿತವಾಗಿರುವ ಈ ಗದ್ಯಗ್ರಂಥ ಅತ್ಯಂತ ಜನಪ್ರಿಯವಾದುದು. ರಾಜತಂತ್ರ ನಿಪುಣನಾದ ಚಾಣಕ್ಯನು ಮದಾಂಧರಾದ ನವನಂದರನ್ನು ಸಂಹರಿಸಿ, ಮೌರ್ಯನಾದ ಚಂದ್ರಗುಪ್ತ ನನ್ನು ಪಟ್ಟಕ್ಕೇರಿಸಿದುದು ಈ ಕಥೆಯ ವಸ್ತು. 'ಮುದ್ರಾ ರಾಕ್ಷಸ' ನಾಟ ಕದ ಕಥೆ ಆರಂಭವಾಗುವುದಕ್ಕೆ ಹಿಂದಿನ ಕಥಾನಕವನ್ನು—ತಾನು ಎಡ ವಿದ ಗರುಕೆಯನ್ನು ಚಾಣಕ್ಯನು ಸಮೂಲ ಕಿತ್ತೆಸೆಯುವುದು, ಇದನ್ನು ಕಂಡ ಚಂದ್ರಗುಪ್ತ ಆತನನ್ನು ಆಶ್ರಯಿಸುವುದು, ಅನ್ನಸತ್ರದಲ್ಲಿ ತನಗಾದ ಅಪಮಾನದಿಂದ ಚಾಣಕ್ಯನು ಪ್ರತಿಜ್ಞೆಮಾಡುವುದು ಇತ್ಯಾದಿ—ಬೃಹ ತ್ಕಥೆ, ವಿಷ್ಣುಪುರಾಣ, ಕಾಮಂದಕಾದಿಗಳಿಂದ ಸಂಗ್ರಹಿಸಿ, ಚಾಣಕ್ಯನ ಕಥೆಯನ್ನು ಆದ್ಯಂತವಾಗಿ ನಿರೂಪಿಸಿದ್ದಾನೆ. ಇಲ್ಲಿ ವ್ಯವಹರಿಸುವ ಚಾಣ ಕ್ಯನ ಸೂಕ್ಷ್ಮಬುದ್ಧಿ, ಕಾರ್ಯದಕ್ಷತೆ, ರಾಜತಂತ್ರಗಳಷ್ಟೆ ಆತನ ನಿಸ್ವಾರ್ಥ ಬುದ್ಧಿ, ತ್ಯಾಗಶೀಲತೆ, ಬ್ರಹ್ಮತೇಜಸ್ಸುಗಳು ನಮ್ಮನ್ನು ಬೆರಗುಗೊಳಿಸು ತ್ತವೆ. ಚಂದ್ರಗುಪ್ತನು ರಾಜನಾಗಿದ್ದಾಗ ಆತನಿದ್ದುದು ಕುಟೀರದಲ್ಲಿ. ರಾಜ ಕುಮಾರನನ್ನು ಸಿಂಹಾಸನದಲ್ಲಿ ಕೂಡಿಸಿ, ಸ್ವಾಮಿಭಕ್ತನೂ ರಾಷ್ಟ್ರ ಪ್ರೇಮಿಯೂ ಆದ ರಾಕ್ಷಸನನ್ನು ಆತನ ಮಂತ್ರಿಯಾಗಿ ನೇಮಿಸಿ, ರಾಜ್ಯವು ಸುಸ್ಥಿರವಾದುದನ್ನುಕಂಡು ತಾನು ತಪಸ್ಸಿಗೆ ಹೊರಟುಹೋಗುತ್ತಾನೆ. ಆತನ ಪಾತ್ರ ಉಜ್ವಲವಾಗಿದೆ, ಪ್ರಭಾವಪೂರ್ಣವಾಗಿದೆ, ಮಹೋನ್ನತವಾಗಿದೆ. ಕೆಂಪು ನಾರಾಯಣನ ಗದ್ಯ ಪ್ರೌಢವಾಗಿದ್ದರೂ ಲಲಿತವಾಗಿದೆ, ಜೀವಪೂರ್ಣ ವಾಗಿದೆ, ಶಕ್ತಿಯುತವಾಗಿದೆ. ಗದ್ಯ ಸಾಹಿತ್ಯದ ಬೆಳವಣಿಗೆಯಲ್ಲಿ ಆಧುನಿಕ ಸಾಹಿತ್ಯವನ್ನು ಮುಟ್ಟುವುದರ ಹಿಂದಿನ ಮಜಲೇ 'ಮುದ್ರಾ ಮಂಜೂಷ.'

**ಅಳಿಯ ಲಿಂಗರಾಜ :**

ಮುಮ್ಮಡಿ ಕೃಷ್ಣರಾಜನ ಪೋಷಣೆಯಲ್ಲಿ ಬೆಳೆದು, ತನ್ನ ಆಶ್ರಯ ದಾತನಂತೆಯೇ ಉಭಯ ಕವಿತಾವಿಶಾರದನಾಗಿ, ಉದಾರಿಯಾಗಿ, ವಿದ್ವಜ್ಜನ ಪೋಷಕನಾಗಿ, ಧರ್ಮಪರನಾಗಿ ಬಾಳಿ ಚಿರಸ್ಮರಣೀಯನಾದವನು ಅಳಿಯ ಲಿಂಗರಾಜ. ದೊರೆಯು ಈತನಿಗೆ ಇಬ್ಬರು ಕನ್ಯೆಯರನ್ನು ಮದುವೆ ಮಾಡಿ ಅಪಾರವಾದ ಐಶ್ವರ್ಯವನ್ನು ಕೊಟ್ಟುದರಿಂದ ಈತನಿಗೆ 'ಅಳಿಯ ಲಿಂಗರಾಜ' ಎಂಬ ಹೆಸರು ಬಂದಿತು. ಕನ್ನಡ ಸಂಸ್ಕೃತಗಳಲ್ಲಿ ಅಪಾರ ಪಾಂಡಿತ್ಯವನ್ನು ಗಳಿಸಿಕೊಂಡು, ಸಂಗೀತ ಸಾಹಿತ್ಯಗಳಲ್ಲಿ ನಿಪುಣನೆಂದು ಕೀರ್ತಿವೆತ್ತ ಲಿಂಗರಾಜನು ಅಪಾರವಾದ ಗ್ರಂಥರಾಶಿಯನ್ನು ಸೃಷ್ಟಿಸಿ ದೊರೆಯಿಂದ 'ಉಭಯ ಕವಿತಾ ವಿಶಾರದ'ನೆಂಬ ಬಿರುವನ್ನು ಪಡೆದನು. ತನ್ನ ಸ್ವಾಮಿಯಂತೆ ಈತನೂ ಸುಮಾರು ೫೦ ಗ್ರಂಥಗಳನ್ನು ರಚಿಸಿದ್ದಾನೆ. ಇವು ಚಂಪೂ, ಷಟ್ಪದಿ, ಸಾಂಗತ್ಯ, ಶತಕ, ಯಕ್ಷಗಾನ, ಹಾಡು ಇತ್ಯಾದಿ ಹಲವು ರೂಪಗಳಲ್ಲಿದ್ದು, ಲಿಂಗರಾಜನ ಸರ್ವತೋಮುಖವಾದ ಕವಿತಾ ಶಕ್ತಿಯನ್ನು ದಿಗ್ದರ್ಶಿಸುತ್ತವೆ. ಈತನ 'ನರಪತಿ ಚರಿತೆ'ಯು ಒಂದು ಅಲಂಕಾರ ಗ್ರಂಥ ; ಇದರ ಉದಾಹರಣಾ ಪದ್ಯಗಳೆಲ್ಲಾ ಮುಮ್ಮಡಿ ಕೃಷ್ಣ ರಾಜನ ಸ್ತುತಿರೂಪವಾಗಿವೆ. ಈ ಗ್ರಂಥವನ್ನು ಕೇಳಿಯೇ ರಾಜನು ಈತ ನಿಗೆ 'ಉಭಯ ಕವಿತಾ ವಿಶಾರದ'ನೆಂಬ ಬಿರುದನ್ನು ಕೊಟ್ಟಿದ್ದು. ಈತನ ಕಾವ್ಯಗಳಲ್ಲಿ ಯಕ್ಷಗಾನಗಳೇ ಹೆಚ್ಚು. ಬಹುಶಃ ರಾಜನಿಗೆ ಯಕ್ಷಗಾನಗಳ ಮೇಲೆ ಬಹಳ ಅಭಿಮಾನವಿತ್ತೆಂದು ತೋರುತ್ತದೆ. ಈ ಕಾಲದಲ್ಲಿ ಯಕ್ಷ ಗಾನಗಳ ಸುರಿಮಳೆಯನ್ನೇ ಕಾಣುತ್ತೇವೆ. ದಕ್ಷಿಣ ಕನ್ನಡದಿಂದ ಒಂದು ಯಕ್ಷಗಾನದ ಗುಂಪೆ ಆಗ ಮೈಸೂರಿಗೆ ಬಂದು ಮಹಾರಾಜನ ಉದಾರಾಶ್ರಯದಲ್ಲಿ ಪ್ರದರ್ಶನಗಳನ್ನು ಏರ್ಪಡಿಸುತ್ತಿದ್ದಂತೆ ಕಾಣಬರುತ್ತದೆ. ಲಿಂಗರಾಜನೂ ಸುಮಾರು ೩೦ ಯಕ್ಷಗಾನಗಳನ್ನು ಬರೆದಿದ್ದಾನೆ.

ಮುಮ್ಮಡಿ ಕೃಷ್ಣ ರಾಜನ ಇತರ ಆಶ್ರಿತ ಕವಿಗಳೆಂದರೆ 'ರಾಜವಂಶ ರತ್ನ ಪ್ರಭೆ' ಎಂಬ ಚಂಪೂಕಾವ್ಯವನ್ನು ಬರೆದ ತಮ್ಮಯ್ಯ ಕವಿ, 'ಕೃಷ್ಣ ರಾಜೇಂದ್ರ ವಿಲಾಸ 'ವನ್ನು ಬರೆದ ಮದ್ದಗಿರಿ ನಂಜಪ್ಪ, 'ಸಹಸ್ರಾಯು ಕಥೆ'ಯನ್ನು ಬರೆದ ಸೀತಾರಾಮ ಸೂರಿ, 'ಕೃಷ್ಣರಾಜ ಭಕ್ತಿಸಾರ,' 'ಕೃಷ್ಣ

ರಾಜ ಭೋಗಾವಳಿ,' 'ಕೃಷ್ಣರಾಜ ಶೃಂಗಾರ ಶತಕ' ಇತ್ಯಾದಿ ಹಲವು ಗ್ರಂಥಗಳನ್ನು ಬರೆದ ನಂಜುಂಡಕವಿ—ಇವರು ಮುಖ್ಯರು. 'ಶೃಂಗಾರ ಶತಕ' ಕಂದ ಪದ್ಯದಲ್ಲಿದೆ; ಅಲ್ಲಲ್ಲಿ ಗದ್ಯವೂ ಉಂಟು. ರಾಜನು ಮೆರವಣಿಗೆ ಹೊರಟಾಗ ಪುರಸ್ತ್ರೀಯರು ಆತನಲ್ಲಿ ತೋರಿದ ಅನುರಾಗ ಇದರ ತಿರುಳು.

ಪಿಡಿನಡೆಯಂ ನಿಡುಜಡೆಯಂ
ಬಡನಡುವಂ ಬಳ್ಕುವಂತೆ ಭಾರಸ್ತನಗಳ್
ಜಡಿಯುತ್ತಿರೆ ಜಗದೊಡೆಯನ
ಸಡಗರದಿಂ ನೋಳ್ಪಳೊರ್ವ ಚದುರೆಯು ಬೆಡಗಿಂ ||

ಪದ್ಯಗಳು ಸರಳ ಸುಂದರವಾಗಿವೆ. ಸರಸವಾಗಿವೆ—

ಮುಮ್ಮಡಿ ಕೃಷ್ಣರಾಜನನ್ನು ಕನ್ನಡದ ಭೋಜರಾಜನೆಂದು ಕರೆದು ಗೌರವಿಸುತ್ತಾರೆ. ಆತನ ರಸಜ್ಞತೆ, ರಸಿಕತೆ, ಔದಾರ್ಯ, ವಿದ್ವಜ್ಜನ ಗೋಷ್ಠಿಗಳನ್ನು ನೋಡಿದಾಗ ಆತನು ಆ ಗೌರವಕ್ಕೆ ಸರ್ವಾತ್ಮನಾ ಅರ್ಹನೆಂದು ಹೇಳಬಹುದು.

ಮುಮ್ಮಡಿ ಕೃಷ್ಣರಾಜನ ನಂತರ ಚಾಮರಾಜನು, ಮೈಸೂರು ಅರಸನಾದನು. ಆತನ ಸಿಂಹಾಸನಾರೋಹಣದೊಡನೆ ಕನ್ನಡ ಸಾಹಿತ್ಯದ ಆಧುನಿಕ ಯುಗ ಆರಂಭವಾಯಿತೆಂದು ಹೇಳಬಹುದು. ಅದರಲ್ಲಿಯೂ ಕನ್ನಡದಲ್ಲಿ ಮೊಲದ ಕೋಡಾಗಿದ್ದ ನಾಟಕ ಸಾಹಿತ್ಯ ಈತನ ಪ್ರೋತ್ಸಾಹದಿಂದ ಅತುಲವಾಗಿ ಬೆಳೆಯಿತು. ಕರ್ಣಾಟಕ ಭಾಷೋಜ್ಜೀವಿನೀ ಪಾಠಶಾಲೆ, ಪ್ರಾಚ್ಯ ಕೋಶಾಗಾರಗಳನ್ನು ಸ್ಥಾಪಿಸಿದಷ್ಟು ಉತ್ಸಾಹದಿಂದಲೆ ಈತನು 'ಚಾಮರಾಜೇಂದ್ರ ನಾಟಕ ಸಭಾ' ವನ್ನೂ ಸ್ಥಾಪಿಸಿದನು. ಕನ್ನಡನಾಡಿನಲ್ಲಿದ್ದ ನಟನ ಕಲಾ ವಿದರಿಗೆಲ್ಲರೂ ರಾಜನಿಂದ ಪೋಷಿತರಾಗಿ, ಪ್ರೋತ್ಸಾಹಿತರಾಗಿ ರಂಗಸ್ಥಳವನ್ನೂ ಪ್ರವೇಶಿಸಿದರು. ನಾಟಕಾಚಾರ್ಯ ಕೃಷ್ಣಯ್ಯಂಗಾರ್, ನಟಶ್ರೇಷ್ಠ ವರದಾಚಾರ್, ಹಾಸ್ಯನಟ ಪುಟ್ಟಾರಿಶಾಸ್ತ್ರಿ, ಲಕ್ಷ್ಮೀಪತಿಶಾಸ್ತ್ರಿ, ಸುಬ್ಬಣ್ಣ । ರಾಜಕೋಟಿ—ಇತ್ಯಾದಿ ನಟರ ಹೆಸರುಗಳು ಬಿ. ಎಲ್. ರೈಸ್, ಆರ್. ನರಸಿಂಹಾಚಾರ್ ಇತ್ಯಾದಿ ಪ್ರಾಚ್ಯಸಂಶೋಧಕರ ಹೆಸರುಗಳಷ್ಟೆ ಸುಪ್ರಸಿದ್ಧವಾದುವು. ಅಭಿನವ ಕಾಳಿದಾಸ ಬಸಪ್ಪಶಾಸ್ತ್ರೀ, ನಂಜನಗೂಡು

ಸುಬ್ಬಾಶಾಸ್ತ್ರೀ. ಅನಂತನಾರಾಯಣಶಾಸ್ತ್ರಿ, ಜಯರಾಮಾಚಾರ್ಯ ಇತ್ಯಾದಿ ಕವಿಗಳು ರಾಜನ ಪ್ರೋತ್ಸಾಹದಿಂದ ನಾಟಕರಚನೆಗೆ ಕೈ ಹಾಕಿದರು. ಭಾರತೀಯ ಭಾಷೆಗಳಿಂದ ಮಾತ್ರವೇ ಅಲ್ಲದೆ ಇಂಗ್ಲಿಷಿನಿಂದಲೂ ನಾಟಕಗಳನ್ನು ತಂದುಕೊಂಡು, ಕನ್ನಡದಲ್ಲಿ ನಾಟಕಗಳ ಹುಲುಸಾದ ಬೆಳೆಯನ್ನು ತೆಗೆಯುವ ಪ್ರಯತ್ನಗಳಾದುವು. ಹೀಗೆ ಭಾಷಾಂತರಿತವಾದ ನಾಟಕಗಳು, ಅದರಲ್ಲಿಯೂ ಇಂಗ್ಲಿಷಿನಿಂದ ಭಾಷಾಂತರಿತವಾದ ನಾಟಕಗಳಲ್ಲಿ ಅನೇಕ ಸರ್ವ ಸಮರ್ಪಕವಾಗಿವೆಯೆಂದು ಹೇಳುವುದಿರಲಿ. ಅವುಗಳಲ್ಲಿ ಅನೇಕ ನಾಟಕಗಳು ವಿಕೃತಿಗಳಾಗಿವೆ. ಆದರೂ, ಒಮ್ಮೆ ಆ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವ ಪ್ರಯತ್ನ ನಡೆದುದೇ ತಡ, ಅದರ ಪ್ರಭಾವ ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಕಾಣಿಸಿಕೊಂಡಿತು. ಕತೆ, ಕಾದಂಬರಿ, ಕವಿತೆ, ನಾಟಕ ಇತ್ಯಾದಿಗಳು ಆ ಭಾಷೆಯಿಂದ ಭಾಷಾಂತರಗೊಂಡು, ರೂಪಾಂತರಗೊಂಡು, ಮಾದರಿಯಾಗಿಟ್ಟುಕೊಂಡು ಸೃಷ್ಟಿಯಾಗಲು ಆರಂಭವಾಯಿತು.

**ಬಸಪ್ಪ ಶಾಸ್ತ್ರೀ :**

ಚಾಮರಾಜರ ಆಸ್ಥಾನಕವಿಯಾಗಿ, ಅರಮನೆಯ ಪುರೋಹಿತನಾಗಿ ಕನ್ನಡ ಸಂಸ್ಕೃತಗಳಲ್ಲಿ ಅದ್ವಿತೀಯ ಪಂಡಿತನಾಗಿದ್ದ ಬಸಪ್ಪಶಾಸ್ತ್ರೀ ಪ್ರತಿಭಾನ್ವಿತನಾದ ಕವಿಯೂ ಆಗಿದ್ದನು. ಈತನು ‘ ಸಾವಿತ್ರೀಚರಿತ್ರೆ,’ಯನ್ನು ಷಟ್ಪದಿಯಲ್ಲಿಯೂ, ‘ ಭರ್ತೃಹರಿ ಸುಭಾಷಿತ’ವನ್ನು ವೃತ್ತದಲ್ಲಿಯೂ, ‘ ನೀತಿಸಾರ ಸಂಗ್ರಹ’ವನ್ನು ಕಂದದಲ್ಲಿಯೂ, ‘ ದಮಯಂತೀ ಸ್ವಯಂವರ ’ ಮತ್ತು ‘ ರೇಣುಕಾರ್ಯ ವಿಜಯ’ಗಳನ್ನು ಚಂಪೂವಿನಲ್ಲಿಯೂ ಬರೆದಿದ್ದಾನೆ. ಆತನ ಕವಿತೆ ಲಲಿತವಾಗಿ, ಭಾವಗರ್ಭಿತವಾಗಿ ನಿರರ್ಗಳವಾಗಿ ಹರಿಯುತ್ತದೆ. ಆದರೂ ಆತನ ಕೀರ್ತಿ ಮುಗಿಲು ಮುಟ್ಟಿರುವುದು ಆತನ ನಾಟಕಗಳಿಂದ. ‘ ಚಾಮರಾಜೇಂದ್ರ ನಾಟಕ ಸಭೆ’ಗೆ ನಾಟಕಗಳನ್ನು ಬರೆದು ಕೊಡಹೊರಟ ಬಸಪ್ಪಶಾಸ್ತ್ರೀ ‘ ಶಾಕುಂತಲ’ ‘ ವಿಕ್ರಮೋರ್ವಶೀಯ ‘ ಚಂಡಕೌಶಿಕ,’ ‘ ಉತ್ತರ ರಾಮಚರಿತೆ’ ‘ ರತ್ನಾವಳಿ’ ‘ ಮಾಲತೀಮಾಧವ’ ‘ ಶೂರಸೇನ ಚರಿತ್ರೆ’—ಎಂಬ ಏಳು ನಾಟಕಗಳನ್ನು ಕನ್ನಡಕ್ಕೆ ಕೊಟ್ಟಿದ್ದಾನೆ. ಇವುಗಳಲ್ಲಿ ಕಡೆಯದಾದ ‘ ಶೂರಸೇನ ಚರಿತೆ ’ಯು ‘ ಷೇಕ್ಸ್‌ಪಿಯರನ’

'ಒಥೋಲೊ' ನಾಟಕದ ಭಾಷಾಂತರ. ಈತನಿಗೆ ಇಂಗ್ಲಿಷ್ ಬರದು. ಇನ್ನೊಬ್ಬರ ಭಾಷಾಂತರ, ಈತನ ಕಾವ್ಯರಚನೆ. ಆದ್ದರಿಂದ ಇದರಲ್ಲಿ ಮೂಲದ ರಸರಹಿತ ಛಾಯೆಯನ್ನು ಮಾತ್ರ ನಾವು ಕಾಣುತ್ತೇವೆ. ಈತನ ಉಳಿದ ಆರು ನಾಟಕಗಳೂ ಸಂಸ್ಕೃತದಿಂದ ಭಾಷಾಂತರಿತವಾದುವು. ವರಕವಿ ಕಾಳಿದಾಸನ ಅಂತರಂಗವನ್ನು ಹೊಕ್ಕು ಅವರ ಆಳ ಔನ್ನತ್ಯಗಳನ್ನು ಅರಿತು, ಇತರರಿಗೆ ದರ್ಶನಮಾಡಿಸುವ ಪವಾಡವನ್ನು ನಡೆಸಿದ್ದಾನೆ ಈಕವಿ. ಈತನ 'ಅಭಿಜ್ಞಾನ ಶಾಕುಂತಲ ನಾಟಕ'ದಲ್ಲಿ ಅನುಕರಣಾತೀತವಾದ ಮೂಲದ ಶೈಲಿ ಬಸಪ್ಪಶಾಸ್ತ್ರಿಯ ರಸತಪಸ್ಸಿಗೆ ಒಲಿದು ಸ್ವಾಧೀನವಾಗಿದೆ. ಮೂಲದ ನಯ, ನಾಜೋಕು, ಭಾಷೆಯ ಲಾಲಿತ್ಯ, ಮಾತಿನ ಬೆಡಗು ಕನ್ನಡದಲ್ಲಿಯೂ ಇಳಿದುಬಂದಿದೆ. ಈತನ ನಾಟಕಗಳನ್ನು ಓದುತ್ತಿರುವಾಗ ಅವು ಭಾಷಾಂತರಗಳೆಂಬ ಭಾವನೆಯೇ ನಮಗೆ ಬರುವುದಿಲ್ಲ. ಶಾಕುಂತಲ ನಾಟಕದಲ್ಲಿ ಬರುವ 'ಕೊರಲಂ ತಾಂ ಕೊಂಕು ಗೈಯುತ್ತಡಿಗಡಿಗೊಡ ನೈತರ್ಪ ತೇರಲ್ಲಣಂ ನಟ್ಟರೆ ನೋಟಂ' ಎಂಬ ಜಿಂಕೆಯ ವರ್ಣನೆ ಅಥವಾ 'ಪ್ರಾಣಂ ಬೊಯ್ದನೊ ಚಿತ್ರಿಸುತ್ತಮುವಳಂ ಸೌಂದರ್ಯ ಸಾರಂಗಳಿಂ' ಎಂಬ ಶಂಕುತಲೆಯ ವರ್ಣನೆಯನ್ನು ಓದಿದಾಗ ನಮಗೆ ಅರ್ಥವಾಗುತ್ತದೆ, ಈತನಿಗೆ 'ಅಭಿನವ ಕಾಳಿದಾಸ' ನೆಂಬ ಬಿರುದು ಹೇಗೆ ಸಲ್ಲುತ್ತದೆ ಯೆಂಬುದು.

## ಕುಮಾರವ್ಯಾಸ ಯುಗ ; ಜೈನಕವಿಗಳು

ಚಂಪುವಿನಲ್ಲಿ ಕನ್ನಡ ಸಾಹಿತ್ಯವನ್ನು ಮೇಲೆತ್ತಿ ಮುಗಿಲು ಮುಟ್ಟಿಸಿದ ಜೈನಕವಿಗಳು ಕುಮಾರವ್ಯಾಸಯುಗದಲ್ಲಿ, ಈ ಯುಗಧರ್ಮಕ್ಕೆ ಶರಣಾಗಿ ತಮ್ಮ ಕಾವ್ಯಸೃಷ್ಟಿಗೆ ದೇಶೀಯಛಂದಸ್ಸನ್ನು ಬಳಸಿಕೊಂಡಿದ್ದಾರೆ. ಪಾಂಡಿತ್ಯ ಪ್ರಚುರವಾಗಿ, ರಾಜಗಾಂಭೀರ್ಯದಿಂದ ಮೆರೆಯುತ್ತಿದ್ದ ಅವರ ತೀರ್ಥಂಕರ ಚರಿತ್ರೆಗಳೂ ಮತಬೋಧಕ ಗ್ರಂಥಗಳೂ ಷಟ್ಪದಿ ಸಾಂಗತ್ಯಗಳ ಧಾಟಿಯನ್ನು ಪಡೆದು ಜನಸಾಮಾನ್ಯರ ಸ್ವತ್ತಾದವು. ಇವರ ಪ್ರಭಾವ ಇತರ ಕವಿಗಳ ಮೇಲಾಗುವುದಕ್ಕಿಂತಲೂ ಹೆಚ್ಚಾಗಿ, ವೀರಶೈವ ಮತ್ತು ವೈದಿಕ ಸಾಹಿತ್ಯಗಳ ಪ್ರಭಾವ ಇವರ ಮೇಲೆ ಬಿದ್ದಿರುವಂತೆ ಕಾಣುತ್ತದೆ. ಈ ಯುಗದಲ್ಲಿ ಜೈನಕವಿಗಳ ಸಂಖ್ಯೆ ಕಡಿಮೆ. ಅವರಲ್ಲಿಯೂ ಉತ್ತಮ ಕವಿಗಳು ಮತ್ತೂ ಕಡಿಮೆ. ಒಬ್ಬಿಬ್ಬರನ್ನು ಬಿಟ್ಟರೆ ಉಳಿದವರೆಲ್ಲರೂ ಸಾಮಾನ್ಯರೆಂದು ಹೇಳಬಹುದು. ಈ ಯುಗದ ಜೈನ ಕವಿಗಳಲ್ಲಿ ಮುಖ್ಯರಾದ ಕೆಲವರನ್ನು ಈಗ ಪರಿಚಯಮಾಡಿಕೊಳ್ಳೋಣ.

**ಭಾಸ್ಕರ :**

ಹದಿನೈದನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಈ ಕವಿ ಭಾಮಿನಿ ಷಟ್ಪದಿಯಲ್ಲಿ 'ಜೀವಂಧರ ಚರಿತೆ'ಯನ್ನು ಬರೆದಿದ್ದಾನೆ. ಆ ಕಾವ್ಯದಿಂದ ಕವಿಯು ಬಸವಾಂಕನೆಂಬ ಜೈನಬ್ರಾಹ್ಮಣನ ಮಗನೆಂದೂ, ಪೆನುಗೊಂಡೆಯ ಶಾಂತೀಶ್ವರ ಜಿನಾಲಯದಲ್ಲಿ ಶಕ. ೧೩೪೬ರಲ್ಲಿ ಎಂದರೆ ಕ್ರಿ. ಶ. ೧೪೨೪ರಲ್ಲಿ ತನ್ನ ಕಾವ್ಯವನ್ನು ಬರೆದನೆಂದೂ ತಿಳಿದುಬರುತ್ತದೆ. ಕಾವ್ಯದಲ್ಲಿರುವ ಕಥಾಭಾಗವು ರಮ್ಯವಾಗಿದೆ. ರಾಜಪುರಿಯ ಸತ್ಯಂಧರ ರಾಜನ ಮಗ ಜೀವಂಧರ. ಇವನು ಗರ್ಭದಲ್ಲಿದ್ದಾಗಲೇ ಇವನ ತಾಯಿ ಮಂತ್ರಿಯಾದ ಕಾಷ್ಠಾಂಗಾರನ ಕೃತ್ರಿಮದ ಫಲವಾಗಿ ಅಡವಿಯ ಪಾಲಾಗುತ್ತಾಳೆ. ಅಲ್ಲಿ ಅಲೆಯುತ್ತಿರುವಾಗ ಜೀವಂಧರ ಜನಿಸುತ್ತಾನೆ. ಈ ಬಾಲಕನು ದೇಶ ದೇಶಗಳನ್ನು ತಿರುಗಿ ಹಲವಾರು ರಾಜಕುಮಾರಿಯರನ್ನು ಮದುವೆಯಾಗಿ, ಕಡೆಗೆ ತನ್ನ ರಾಜಧಾನಿಗೆ ಹಿಂದಿರುಗಿ, ಕಾಷ್ಠಾಂಗಾರನನ್ನು ನಿಗ್ರಹಿಸಿ, ರಾಜನಾಗು

ತ್ತಾನೆ. ಕೆಲವು ದಿನಗಳ ಮೇಲೆ ಆತನು ವೈರಾಗ್ಯಪರನಾಗಿ ಸನ್ಯಾಸವನ್ನು ಸ್ವೀಕರಿಸುತ್ತಾನೆ. ಸನ್ನಿವೇಶ ರಚನೆಯಲ್ಲಿ ಭಾಸ್ಕರಕವಿ ತನ್ನ ಕೌಶಲವನ್ನು ಪ್ರದರ್ಶಿಸಿದ್ದಾನೆ. ಜೀವಂಧರನ ತಾಯಿಯು ಅಡವಿಯಲ್ಲಿ ದಿಕ್ಕೆಟ್ಟು ತಿರುಗುವ ಸಂದರ್ಭವನ್ನು ಕವಿಯು ಕರುಳು ಕರಗುವಷ್ಟು ಕರುಣಾರಸಭರಿತ ವಾಗಿ ಚಿತ್ರಿಸಿದ್ದಾನೆ, ಕವಿಯ ಶೈಲಿ ಸರಳವಾಗಿದೆ, ಲಲಿತವಾಗಿದೆ, ನಾದ ಮಯವಾಗಿದೆ. ಈದೊಂದು ಸಂಜೆಯ ವರ್ಣನೆ—

ಸುಡಿಸಿ ತುಂಬಿಯನೆಲರ ದಟ್ಟಡಿ
ಯಿಡಿಸಿ ಗೂಡಿನ ತೊಟ್ಟಿಲೊಳು ಖಗ
ವಿಡಿದು ನಗಿಸಿಯೆ ಕುಮುದಿನಿಯ ತೂಕಡಿಸಿ ಕಮಲಿನಿಯ
ಕಡುತಮುವನಬುದೆಂದು ಕೋಕನ
ಬೆಡಗನಂಜಿಸಿ ಹಲವು ಮಕ್ಕಳ
ಹಡೆದ ತಾಯಂದದಲಿ ಸಂಧ್ಯಾಮಡದಿಯೊಪ್ಪಿದಳು ||

ಕವಿಯ ಕಲ್ಪನೆ ಹೃದ್ಯವಾಗಿದೆ.

ವಾದೀಭಸಿಂಹಸೂರಿ ಸಂಸ್ಕೃತದಲ್ಲಿ ರಚಿಸಿದ ಕಾವ್ಯವನ್ನು ಈತ ಕನ್ನಡಿಸಿರುವುದಾಗಿ ಹೇಳಿಕೊಂಡಿದ್ದಾನೆ. ಈತನು ಭಾವ ಭಾಷೆಗಳಲ್ಲಿ ಕುಮಾರವ್ಯಾಸನಿಗೆ ಸಾಕಷ್ಟು ಋಣಿಯಾಗಿದ್ದಾನೆ.

**ಕಲ್ಯಾಣಕೀರ್ತಿ :**

ಜ್ಞಾನಚಂದ್ರಾಭ್ಯುದಯ, ಕಾಮನಕಥೆ, ಅನುಪ್ರೇಕ್ಷೆ, ಜಿನಸ್ತುತಿ, ತತ್ವಭೇಧಾಷ್ಟಕ ಎಂಬ ಗ್ರಂಥಗಳ ಕರ್ತೃವಾದ ಕಲ್ಯಾಣಕೀರ್ತಿಯು 'ಶಕ ನೃಪನ ರತಿಲೋಕ ಸಂಖ್ಯೆಯಿಂ ವಿದಿತ ಸಿದ್ಧಾರ್ಥಿ' ಸಂವತ್ಸರದಲ್ಲಿ ಎಂದರೆ, ಕ್ರಿ. ಶ. ೧೪೩೯ರಲ್ಲಿ ತನ್ನ ಜ್ಞಾನಚಂದ್ರಾಭ್ಯುದಯವನ್ನು ಬರೆದಂತೆ ಹೇಳಿ ಕೊಂಡಿರುವುದರಿಂದ ಕವಿಯು ಹದಿನೈದನೆಯ ಶತಮಾನದ ಮಧ್ಯಭಾಗದಲ್ಲಿ ಇದ್ದವನೆಂದು ತಿಳಿಯಬಹುದು. ಈ ಕಾವ್ಯದಲ್ಲಿ ಜ್ಞಾನಚಂದ್ರನೆಂಬ ರಾಜನು ತಪಸ್ಸುಮಾಡಿ ಅಭ್ಯುದಯವನ್ನು ಪಡೆದ ಕಥೆ ಅಡಕವಾಗಿದೆ. ಸುಮಾರು ೯೦೦ ಪದ್ಯಗಳನ್ನು ಒಳಗೊಂಡ ಈ ಗ್ರಂಥ ವಾರ್ಧಿಕ ಭಾಮಿನಿ ಮತ್ತು ಪರಿವರ್ಧಿನಿ ಷಟ್ಪದಿಗಳ ಛಂದಸ್ಸಿನಲ್ಲಿದೆ. ಉನ್ನತ ಭಾವಗಳಾಗಲಿ, ಸ್ವತಂತ್ರ ವರ್ಣನಾ ವೈಖರಿಯಾಗಲೀ ಅಷ್ಟಾಗಿ ಇಲ್ಲ. ಕವಿಸಮಯಕ್ಕೆ

ಸಾಕಷ್ಟು ಪುರಸ್ಕಾರ ಕೊಟ್ಟಿದ್ದಾನೆ, ಕವಿ. ಉದಾಹರಣೆಗೆ ಈ ಸ್ತ್ರೀವರ್ಣನೆಯನ್ನು ನೋಡಿ—

ಅಡಿಗಳ ಚೆಲ್ವಿಂದಸುಕೆಯ ತಳಿರನು
ನಡೆಯಿಂ ವರಹಂಸಿಯ ನಡೆಯನು ಕಿರು
ದೊಡೆಯಿಂ ಕಾಮನ ಬಾಣಧಿಯನು ಮೇಣ್ ಕದಳಿಯ ಕಂಭನನು
ತೊಡೆಗಳ ಚೆಲ್ವಿಂ ಜರೆವಳು ಜಘನದ
ಕಡುಚೆಲ್ವಿಂ ಕರಿಕುಂಭಸ್ಥಳವನು
ನಡುವಿಂ ಪವಿಯಂ ಕುಚದಿಂ ಕಳಶವ ಗಳದಿಂ ಶಂಖವನು.

ಕವಿಸಮಯಕ್ಕೆ ಕೊಟ್ಟಿರುವ ಒಂದು ಉದಾಹರಣೆಯಂತಿದೆ ಈ ಪದ್ಯ. ಕವಿಯು ಬರೆದಿರುವ 'ಕಾಮನ ಕಥೆ' ಜೈನಧರ್ಮಕ್ಕನುಸಾರವಾದ ಕಾಮನ ಕಥೆ. ಸಾಂಗತ್ಯದ ಛಂದಸ್ಸಿನಲ್ಲಿರುವ ಈ ಗ್ರಂಥವನ್ನು ತುಳುವ ದೇಶದ ದೊರೆ ಭೈರವಸುತ ಪಾಂಡ್ಯರಾಯನ ಅಪೇಕ್ಷೆಯಂತೆ ಬರೆದನಂತೆ. ಸಾಂಗತ್ಯದ ಮಧ್ಯ ಮಧ್ಯದಲ್ಲಿ ಕಂದ ಷಟ್ಪದಿಗಳನ್ನೂ ಒಳಗೊಂಡು ಸುಮಾರು ೩೩೦ ಪದ್ಯಗಳಲ್ಲಿ ಹಬ್ಬಿರುವ ಈ ಪುಟ್ಟಗ್ರಂಥ ಛಂದಸ್ಸಿನ ಚೌ ಚೌ ಇದ್ದಂತಿದೆ. ಸಾಂಗತ್ಯದ ಓಟ ಸುಂದರವಾಗಿದೆ. ತನ್ನ ಮಗುವನ್ನು ರಕ್ಕಸನು ಕದ್ದೊಯ್ದಾಗ ರುಕ್ಮಿಣಿಯು—

ಪಕ್ಕವಿಲ್ಲದ ಪಕ್ಕಿಯಂದದಿ ನನ್ನನು । ದೊಕ್ಕನೆ ಮಾಡಿದೆ ಮಗನೆ
ದಿಕ್ಕಾವುದು ಪೇಳೆನಗಿನ್ನು ನಂದನ । ಅಕ್ಕಟ ತಾಯನು ತೊರೆದೈ

ಎಂದು ಮಾಡುವ ಪ್ರಲಾಪವು ಸ್ವಾಭಾವಿಕವಾಗಿದೆ. ಕವಿಯು ಬರೆದಿರುವ ಉಳಿದ ಮೂರು ಕಾವ್ಯಗಳೂ ಜೈನಧರ್ಮಪ್ರತಿಪಾದನೆಗೆ ಮೀಸಲಾಗಿವೆ. ಕವಿಯು ಸಿದ್ಧರಾಶಿ ಎಂಬ ಗ್ರಂಥವನ್ನೂ ಬರೆದಿರುವಂತೆ ತೋರುತ್ತದೆಯೆಂದು ಕವಿಚರಿತೆಕಾರರು ತಿಳಿಸುತ್ತಾರೆ. ಕಾವ್ಯಗಳಲ್ಲಿಯೇ ಕಾವ್ಯಾಂಶಗಳ ಅಭಾವವಿರುವಾಗ ಈತನ ಧರ್ಮಗ್ರಂಥಗಳಲ್ಲಿ ಕಾವ್ಯಾಂಶಗಳನ್ನು ಹುಡುಕುವ ಅಗತ್ಯವೇ ಇಲ್ಲ.

**ರತ್ನಾಕರ ವರ್ಣಿ :**

ಪಶ್ಚಿಮ ಕರಾವಳಿಗೆ ಸಮೀಪದಲ್ಲಿರುವ ಕಾರ್ಕಳದಲ್ಲಿ ಭೈರಸ ಒಡೆಯನೆಂಬ ರಾಜನು ಹದಿನಾರನೆಯ ಶತಮಾನದ ಮಧ್ಯಭಾಗದಲ್ಲಿ ಆಳು

ತ್ತಿದ್ದನು. ಸೂರ್ಯವಂಶಕ್ಕೆ ಸೇರಿದ ದೇವರಾಜನೆಂಬುವನ ಮಗನಾದ ರತ್ನಾಕರನು ಆತನ ಆಸ್ಥಾನ ಕವಿಯಾಗಿ 'ಶೃಂಗಾರಕವಿ'ಯೆಂಬ ಕೀರ್ತಿಗೆ ಭಾಜನನಾಗಿದ್ದನು. ಯೋಗಾಭ್ಯಾಸದಿಂದ ದಶವಾಯುಗಳನ್ನೂ ಸಾಧಿಸಿದ್ದ ಈ ರಸಿಕ ಕವಿಯಲ್ಲಿ ರಾಜನ ಮಗಳು ಮೋಹಗೊಂಡಳು. ಸುಂದರ ಯುವಕನಾದ ಕವಿಗೂ ಸುಂದರಿಯಾದ ರಾಜಕುಮಾರಿಗೂ ಸ್ನೇಹ ಬೆಳೆಯಿತು. ಇದು ರಾಜನಿಗೆ ತಿಳಿಯಿತು. ಆತನು ರತ್ನಾಕರನನ್ನು ಶಿಕ್ಷಿಸಬೇಕೆಂದು ಪ್ರಯತ್ನಿಸಿದನು. ಇದನ್ನು ಹೇಗೋ ತಿಳಿದುಕೊಂಡ ರತ್ನಾಕರನು ರಾಜಧಾನಿಯಿಂದ ಗುಟ್ಟಾಗಿ ತಪ್ಪಿಸಿಕೊಂಡು, ತನ್ನ ಗುರು ಮಹೇಂದ್ರಕೀರ್ತಿಯ ಬಳಿಗೆ ಓಡಿಹೋಗಿ, ಅಣುವ್ರತ ದೀಕ್ಷೆಯನ್ನು ಕೈಕೊಂಡು, ಅಧ್ಯಾತ್ಮತತ್ವದಲ್ಲಿ ತತ್ಪರನಾದ. ಆ ಗುರುಗಳ ಬಳಿಯಲ್ಲಿದ್ದ ವಿಜಯಣ್ಣನೆಂಬ ಕವಿ ಜೈನರ ದ್ವಾದಶಾನುಪ್ರೇಕ್ಷೆಗಳನ್ನು ಕನ್ನಡದಲ್ಲಿ ಬರೆದು ಪುರಸ್ಕೃತನಾದನು ; ಆ ಕಾವ್ಯವನ್ನು ಆನೆಯ ಮೇಲೆ ಇಟ್ಟು ಪ್ರಭಾವನೆಯನ್ನು ಮಾಡಿದರು. ರತ್ನಾಕರನ ಕವಿಚೇತನ ಸ್ಪರ್ಧೆಯಿಂದ ಎದ್ದು ನಿಂತಿತು. ಎಂಬತ್ತು ನಾಲ್ಕು ಸಂಧಿಗಳ 'ಭರತೇಶವೈಭವ'ವನ್ನು ಸಾಂಗತ್ಯದಲ್ಲಿ ಬರೆದು ತನ್ನ ಕಾವ್ಯಕ್ಕೂ ಪ್ರಭಾವನೆಯಾಗಲೆಂದ. ಆದರೆ ಪಟ್ಟಾಚಾರ್ಯರು ಆ ಕಾವ್ಯ ಪುರಾಣಕ್ಕೆ ವಿರೋಧವಾಗಿರುವುದೆಂದು ಹೇಳಿ, ಅವನ ಪ್ರಾರ್ಥನೆಯನ್ನು ನಿರಾಕರಿಸಿದರು. ಮಾತಿಗೆ ಮಾತು ಬೆಳೆದು, ಆಚಾರ್ಯರು ಕೋಪದಿಂದ ಅವನನ್ನು ಬಹಿಷ್ಕರಿಸಿ, ತಮ್ಮ ಶಿಷ್ಯರಾದ ಏಳು ನೂರು ಶ್ರಾವಕರಲ್ಲಿ ಅವನಿಗೆ ಭಿಕ್ಷೆ ದೊರೆಯದಂತೆ ಮಾಡಿದರು. ರತ್ನಾಕರ ಈ ಶಿಕ್ಷೆಗೆ ಹೆದರಲಿಲ್ಲ. ತನಗೆ ಆದ ಅನ್ಯಾಯಕ್ಕೆ ತನ್ನ ಮತವನ್ನೇ ಗುರಿಯಾಗಿ ಮಾಡಿ ವೀರಶೈವಮತಕ್ಕೆ ಸೇರಿದ ; ಆ ಮತದ ಶಾಸ್ತ್ರ ಪುರಾಣಗಳಲ್ಲಿ ಆಳವಾದ ಜ್ಞಾನವನ್ನು ಪಡೆದ. ಕೆಲವು ಕಾಲದಮೇಲೆ ಕೋಪ ಉಪಶಮನವಾಯಿತು, ಮತ್ತೆ ಜೈನಮತಕ್ಕೆ ಹಿಂದಿರುಗಿದ–ಇದು ರತ್ನಾಕರಕವಿಯನ್ನು ಕುರಿತು ದೇವಚಂದ್ರ (೧೮೩೮) ತನ್ನ 'ರಾಜಾವಳೀ ಕಥೆ'ಯಲ್ಲಿ ಕೊಟ್ಟಿರುವ ಕವಿಚರಿತ್ರೆ.

ಕವಿಯು ತನ್ನ ಕಾವ್ಯಗಳಲ್ಲಿ ತನ್ನ ವಿಚಾರವಾಗಿ ಹೆಚ್ಚಿಗೆ ಏನೂ ಹೇಳಿಕೊಂಡಿಲ್ಲ. ರತ್ನಾಕರವರ್ಣಿ, ರತ್ನಾಕರ ಅಣ್ಣ, ರತ್ನಾಕರಸಿದ್ಧ ಎಂಬ

ಪರ್ಯ್ಯಾಯನಾಮಗಳಲ್ಲಿ 'ಸಿದ್ಧಪದಕೆ ಸೋತೆನಾಗಿ ರತ್ನಾಕರ ಸಿದ್ಧನೆನ ಲೊಲ್ವೆ' ಎಂದು ಹೇಳಿ 'ರತ್ನಾಕರಸಿದ್ಧ'ನೆಂಬ ಹೆಸರು ತನಗೆ ಅತ್ಯಂತ ಮೆಚ್ಚುಗೆಯಾದುದೆಂದು ಸೂಚಿಸಿದ್ದಾನೆ. 'ಆಮಯ ಜನನ ಮರಣ'ಗಳುಳ್ಳ ತಾಯಿತಂದೆಗಳ ಹೆಸರನ್ನು ಹೇಳದೆ 'ಶ್ರೀ ಮಂದರಸ್ವಾಮಿ ನನ್ನಯ್ಯ'ಎಂದು ಹೇಳಿಕೊಂಡಿದ್ದಾನೆ. ತನ್ನ ನಾಡು ಕರ್ಣಾಟಕ, ವಂಶ ಕ್ಷತ್ರಿಯವಂಶ, ದೀಕ್ಷಾಗುರು ಚಾರುಕೀರ್ತ್ಯಾಚಾರ್ಯ, ಮೋಕ್ಷಗುರು ಹಂಸ ನಾಥ; ಈ ಮೋಕ್ಷಗುರುವಿನ ಆಜ್ಞೆಯಂತೆ, ಆತ್ಮಲೀಲಾರ್ಥವಾಗಿ ಭರತೇಶವೈಭವವನ್ನು ಬರೆದ. ಇಷ್ಟೇ ಆತನು ತನ್ನನ್ನು ಕುರಿತು ಹೇಳಿ ಕೊಂಡಿರುವುದು. ತನ್ನ ಕಾವ್ಯವು 'ವೃಷಭಮಾಸದಿ ತೊಡಗಿತು, ಕುಂಭ ಮಾಸ ಸಪ್ತಿಷಯದಿ ಕೃತಿಪೂರ್ಣವಾಯ್ತು'-ವೃಷಭಮಾಸದಲ್ಲಿ ಪ್ರಾರಂಭ ವಾಗಿ ಕುಂಭಮಾಸದಲ್ಲಿ ಎಂದರೆ ಒಂಬತ್ತು ತಿಂಗಳ ಅವಧಿಯಲ್ಲಿ ಹತ್ತು ಸಹಸ್ರ ಪದ್ಯಗಳ, ತನ್ನ 'ಭರತೇಶ ವೈಭವ'ದ ರಚನೆಯಾಯಿತೆಂಬ ಆತನ ಮಾತು ಒಂದು ಪವಾಡ ವರ್ಣನೆಯಂತೆ ಕಾಣುತ್ತದೆ. ಆದರೆ, ಕವಿ ಕುವೆಂಪುರವರು ‹ ಪಂಪನಲ್ಲಿ ಭವ್ಯತೆ' ಎಂಬ ತಮ್ಮ ಲೇಖನದಲ್ಲಿ ಆ ಮಹಾ ಕವಿ ಮೂರು ತಿಂಗಳಲ್ಲಿ ಒಂದು, ಆರು ತಿಂಗಳಲ್ಲಿ ಮತ್ತೊಂದು ಮಹಾ ಕಾವ್ಯ ರಚಿಸಿದ ವಿಷಯವನ್ನು ಕುರಿತು ‹ ರಚನಾ ಸಮಯದ ನಿಮಿಷ ಗಳನ್ನೂ ಗಂಟೆಗಳನ್ನೂ ಕೂಡಿಸಿ ಬಂದ ಹೊತ್ತಿನ ಮೊತ್ತವನ್ನು ತಿಂಗಳು ಗಳಾಗಿ ಭಾಗಿಸಿರುವನೆಂದುಕೊಂಡರೆ ನಮ್ಮ ಆಶ್ಚರ್ಯ ವಿಸ್ಮಯದ ಎಲ್ಲೆ ಯನ್ನು ಮುಟ್ಟದಿರಬಹುದು' ಎಂದು ಹೇಳಿರುವ ಮಾತು ರತ್ನಾಕರವರ್ಣಿಗೂ ಅನ್ವಯಿಸುತ್ತದೆಯೆಂದು ಹೇಳಬಹುದು.

ರತ್ನಾಕರನು ಭರತೇಶ ವೈಭವವನ್ನೂ ಅಪರಾಜಿತೇಶ್ವರಶತಕ, ತ್ರಿಲೋಕ ಶತಕ, ರತ್ನಾಕರಾಧೀಶ್ವರ ಶತಕ ಎಂಬ ಶತಕತ್ರಯವನ್ನೂ ಎರಡು ಸಹಸ್ರ ಗ್ರಂಥಗಳಷ್ಟು ಅಧ್ಯಾತ್ಮ ಗೀತೆಗಳನ್ನೂ ರಚಿಸಿದ್ದಾನೆಂದು ದೇವಚಂದ್ರನ 'ರಾಜಾವಳಿ ಕಥೆ' ಯಿಂದ ತಿಳಿದು ಬರುತ್ತದೆ. ತ್ರಿಲೋಕ ಶತಕದಲ್ಲಿ ಕವಿಯ ಸ್ಥಳ ಮೂಡಬಿದಿರೆಯೆಂದೂ, ಆ ಶತಕದ ಕಾಲ ಕ್ರಿ. ಶ. ೧೫೫೭ ಎಂದೂ ತಿಳಿದುಬರುತ್ತದೆ. ಇದು ಕವಿಯ ಪ್ರಥಮ ಕೃತಿಯೆಂದು ಪರಿಗಣಿಸಲು ಅವಕಾಶವಿರುವುದರಿಂದ ಕವಿಯು ಹದಿನೈದನೆಯ ಶತಮಾನದ

ಉತ್ತರಾರ್ಧವಲ್ಲಿ ಕೃತಿರಚನೆ ಮಾಡಿದ್ದಾನೆಂದು ಹೇಳಬಹುದು. ತನ್ನ ಕೃತಿಗಳಲ್ಲಿ ಆತನು ತನ್ನನ್ನು ಕುರಿತು ವಿಶೇಷವಾಗಿ ಹೇಳಿಕೊಂಡಿಲ್ಲವಾದರೂ ಆತನ ಭರತೇಶವೈಭವವನ್ನು ಆಮೂಲಾಗ್ರವಾಗಿ ಓದಿದಮೇಲೆ ದೇವಚಂದ್ರನ 'ರಾಜಾವಳಿ ಕಥೆ'ಯು ಬರಿಯ ಕಟ್ಟುಕಥೆಯಾಗಿರದೆ ಅದೊಂದು ಇತಿಹಾಸವೆನ್ನಿಸುತ್ತದೆ. 'ಭರತೇಶ ವೈಭವ'ವನ್ನು ಓದಿದವರಿಗೆ ಕವಿಯು ರಸಿಕರಸಜೀವಿಯಾಗಿದ್ದರಬೇಕೆಂಬುದರಲ್ಲಿ ಯಾವ ಸಂದೇಹವೂ ಬರುವುದಿಲ್ಲ. ಆತನ ಪ್ರಣಯ ಜೀವನವನ್ನು ಕುರಿತ ದಂತಕಥೆಗಳೆಲ್ಲವೂ ನಿಜವೆಂದು ಹೇಳಲಾಗದಿದ್ದರೂ ಆತನ ಹೆಸರ ಜೊತೆಗಿರುವ 'ವರ್ಣಿ,' 'ಸಿದ್ಧ' ಎಂಬ ಪದಗಳನ್ನು ತೆಗೆದುಕೊಂಡು ಆತನನ್ನು ಒಬ್ಬ ವಿರಕ್ತನೆಂದು, ಸನ್ಯಾಸಿಯೆಂದು ಪರಿಭಾವಿಸುವುದು ಸತ್ಯದೂರವಾದೀತು. ಆತನು ಮತಾಂತರ ಹೊಂದಿದ ಕಥೆಯಲ್ಲಿಯೂ ಹುರುಳಿದೆಯೆಂದು ತೋರುತ್ತದೆ. ಮೊದಲನೆಯದಾಗಿ ಜೈನಮತಸ್ಥನಾದ ದೇವಚಂದ್ರನೇ ಸ್ವಮತಸ್ಥನಾದ ಕವಿಯನ್ನು ಕುರಿತು ಬರೆಯುತ್ತಿರುವುದು. ಇದಕ್ಕೂ ಹೆಚ್ಚಾಗಿ ಕವಿಯು ತನ್ನ ಕಾವ್ಯವಾದ ಭರತೇಶ ವೈಭವದಲ್ಲಿ ಭೋಗಾಂಗ, ಯೋಗಾಂಗ, ತ್ಯಾಗಾಂಗಳೆಂಬ ಅಂಗ ತ್ರಯಗಳನ್ನೂ ಯೋಗ–ಭೋಗಗಳ ಸಾಮರಸ್ಯ ಸಿದ್ಧಾಂತವನ್ನೂ ತನ್ನ ಕಾವ್ಯದಲ್ಲಿ ಅಳವಡಿಸಿಕೊಂಡಿದ್ದಾನೆ; 'ಉಂಡುಪವಾಸಿ, ಬಳಸಿ ಬ್ರಹ್ಮಚಾರಿ' ಇತ್ಯಾದಿ ಸೂಕ್ತಿಗಳೂ 'ಮೊಲೆಯ ಮೇಲಿದ್ದ ಯೋಗಿಗಳುಂಟು!' (ನಂಬಿಯಣ್ಣನ ಕಥೆಯನ್ನು ಜ್ಞಾಪಿಸಿಕೊಳ್ಳಿ) ಎಂಬಂತಹ ವಾಕ್ಯಭಾಗಗಳೂ ಈ ಅಭಿಪ್ರಾಯಕ್ಕೆ ಪೋಷಕವಾಗಿವೆ. ಪಾಲ್ಕುರಿಕೆ ಸೋಮನಾಥ ರಚಿತವೆಂದು ಪ್ರಖ್ಯಾತವಾಗಿರುವ 'ಸೋಮೇಶ್ವರ ಶತಕ'ವು ರತ್ನಾಕರ ಕವಿಕೃತವೆಂಬ ಪ್ರತೀತಿ ಇದೆ. ಪುರಾತನ ತಾಳಪತ್ರವೊಂದರಲ್ಲಿ ಈ ಕೆಳಗಿನ ಪದ್ಯವಿರುವುದಾಗಿಯೂ ತಿಳಿದುಬರುತ್ತದೆ—

ವರಸಮ್ಯಕ್ತ್ವ ಸುಧರ್ಮ ಜೈನಮತದೊಳ್ ತಾಂ ಪುಟ್ಟಿಯಾ ದೀಕ್ಷೆಯಂ
ಧರಿಸೀ ಸನ್ನುತ ಕಾವ್ಯ ಶಾಸ್ತ್ರಗಳನುಂ ನಿರ್ಮಾಣಮಂ ಮಾಡುತಂ
ವರ ರತ್ನಾಕರ ಯೋಗಿಯೆಂದು ನಿರುತಂ ವೈರಾಗ್ಯ ಬಂದೇರಲಾಂ
ಹರದೀಕ್ಷಾವ್ರತನಾದೆನೈ ಹರ ಹರಾ ಶ್ರೀ ಚೆನ್ನ ಸೋಮೇಶ್ವರಾ ||

ಇದನ್ನು ನೋಡಿದರೆ ಕವಿಯು 'ಹರದೀಕ್ಷಾವ್ರತ'ನಾಗಿದ್ದನೆಂದು ಅನುಮಾನಿಸಲು ಆಸ್ಪದವಿದೆ. 'ಇದಮಿತ್ಥಂ' ಎಂದು ಹೇಳುವುನಕ್ಕೆ ನಾವು ಹೋಗುವುದಿಲ್ಲವಾದರೂ ದೇವಚಂದ್ರನ ಹೇಳಿಕೆಯನ್ನು ಪುಷ್ಟೀಕರಿಸುವ ಸಾಮಗ್ರಿಯೊಂದು ಇಲ್ಲಿ ಇದೆಯೆಂದು ಸೂಚಿಸಬಯಸುತ್ತೇವೆ.

ರತ್ನಾಕರನು ವಿಜಯಣ್ಣನ ಮೇಲಿನ ಸ್ಪರ್ಧೆಯಿಂದ ಈ ಕಾವ್ಯ ಬರದನೆಂಬುದೂ, ಈ ಕಾವ್ಯಕ್ಕೆ ಪುರಸ್ಕಾರ ದೊರೆಯಲಿಲ್ಲವೆಂಬುದೂ ನಿಜವಿರಬೇಕೆಂದು ತೋರುತ್ತದೆ. ಕವಿಯು ಸಂಪ್ರದಾಯಬದ್ಧವಾದ ಪುರಾಣದ ಕಥಾಕಟ್ಟಡದಲ್ಲಿ ಧೈರ್ಯದಿಂದ ಬದಲಾವಣೆಗಳನ್ನು ಮಾಡಿ ಕವಿನಿರಂಕುಶಮತಿಯನ್ನು ಮೆರೆದಿದ್ದಾನೆ, 'ಭರತೇಶ ವೈಭವ'ದಲ್ಲಿ. ಇದರಿಂದ ಇಂದಿಗೂ ಆ ಕಾವ್ಯ ಪಂಪ ರನ್ನರ ಧರ್ಮ ಗ್ರಂಥಗಳಂತೆ ಧರ್ಮದ ಗದ್ದುಗೆಗೆ ಏರಿಲ್ಲ. ಕಾವ್ಯದ ಕೊನೆಯಲ್ಲಿ ಕವಿಯು ನೊಂದು ನುಡಿಯುತ್ತಿದ್ದಾನೆ-"ಕೀರ್ತಿಯನ್ನು ನಾನು ಬಯಸಿಲ್ಲ. ಅದು ತಾನಾಗಿ ಬರುತ್ತಿದೆ. ಅದನ್ನು ಕಂಡು 'ಕೀರ್ತಿಯ ಬಯಸಿ ಕಣ್ಗುಸುರಾಗಿ ಕೆಲಬರು । ಧೂರ್ತರು ಸೇಚಾಡುತಿಹರು'. ಆ ಧೂರ್ತರು ಕವಿಕರ್ಮಕ್ಕೆ ಕೈಹಾಕುತ್ತಾರೆ ಅವರ ಕವಿತೆ ಸಾಗುವುದಿಲ್ಲ. ಕಿವಿಗೆ ಶೋಭಿಸುವುದೂ ಇಲ್ಲ. ಇದರಿಂದ ಕಸಿವಿಸಿಗೊಂಡು 'ಬಿಡು ಹೊಸಕವಿತೆಯನೆಂದು ಪೂರ್ವದ ಶಾಸ್ತ್ರ। ಗಡಬಡೆ ಮಾಡುವರೊಡನೆ.' ನಮ್ಮ ಪಾಡಿಗೆ ನಮ್ಮನ್ನು ಬಿಡುವುದಿಲ್ಲ. ಕಾಲ್ಕೆರೆದು ವ್ಯಾಜ್ಯ, ಆಟಾಟೋಪ ; 'ನೆರಪಿ ಜೊತ್ತಗೆಗಳ ಹೊರೆಗಟ್ಟಿ ಭವಸೇನ। ಗುರುಗಳಂತವರಾಡುತಿಹರು.' ನಾನು ಆತ್ಮನಿರೀಕ್ಷಣೆಯಲ್ಲಿದ್ದರೆ ಆ ಆಷಾಢಭೂತಿಗಳು 'ನ್ಯಾಯ ಬೆತ್ತಲೆ ಮಾಡಿ, ಮನವ ಕತ್ತಲೆಮಾಡಿ, ಹುಯ್ಯಲಿಡುತ ಸುತ್ತುತಿಹರು.' ಅವರು ಎಷ್ಟು ಬಿದ್ದು ಹೊರಳಾಡಿದರೂ ನನಗೆ ಕೀರ್ತಿ ಬರುತ್ತಿದೆ ; ಅವರಿಗೆ ಇಲ್ಲ. ಆದ್ದರಿಂದ ಅವರು ನನ್ನ ಕಾವ್ಯಗಳನ್ನೆಲ್ಲಾ ಹೊಲಸೆಂದು ಜರೆದರು. ನಾನು ಅವರನ್ನು ಪ್ರತಿಭಟಿಸಲಿಲ್ಲ. 'ಬುಧರು ರಾಜರ್ಕಳೆ ನೋಂಕಿದರವರ.' ನಾನೇನು ಸ್ಪರ್ಧೆಗೆ ಹೆದರುವವನಲ್ಲ. ಅವರು ಒಂದು ತಿಂಗಳಲ್ಲಿ ಓದುವುದು ನನಗೆ ಒಂದು ದಿನದಲ್ಲಿ ಹೃದ್ಗತವಾಗುತ್ತದೆ. ಆದರೂ ನನಗೆ ಸರ್ವಜ್ಞನೆಂಬ ಅಹಂಕಾರವೇನೂ ಇಲ್ಲ. ನನ್ನ ಮಾತೇ ಕಡೆಯ ಮಾತಲ್ಲ. ಪರಮ ರಹಸ್ಯ ಎಷ್ಟೋ ಇದೆ. 'ಆತ್ಮನ ಮಾಹಾತ್ಮ್ಯ ಪರಿಮಿತವಲ್ಲ.' ನಾನೇನೂ

ಮತ್ತೊಬ್ಬನ ಮೇಲಿನ ಮತ್ಸರಕ್ಕೆ ಬರೆಯುತ್ತಿಲ್ಲ. ನನ್ನ ಆತ್ಮಲೀಲಾರ್ಥವಾಗಿ ಬರೆಯುತ್ತಿದ್ದೇನೆ. ನಾಲ್ಕಾರು ಪೋಕರಿಗಳು ನನ್ನ ಕಾವ್ಯ ತೆಗಳಿದರೇನು ? ಸ್ವಲ್ಪ ಶೃಂಗಾರ ಇಲ್ಲಿ ಬಂದಿರಬಹುದು. ಬಂದರೇನು ? ‘ ಶೃಂಗಾರಕಾಗಿ ಕಷ್ಟರ ಕಥೆಗೇಳ್ದು ಜನಂಗಳು ಕೆಡಬೇಡವೆಂದು । ಅಂಗಸುಖಿಯು ಮೋಕ್ಷಸುಖಿಯು ,ಕಾವ್ಯವನಿಷ್ಟು ಶೃಂಗಾರಕಟ್ಟಿ ಪೇಳಿದೆನು,’ ಇದನ್ನೆ ದೊಡ್ಡದು ಮಾಡುವುದೆ? ಬೇಕಾದರೆ ಕೇಳಲಿ, ಬೇಡವಾದರೆ ‘ ಪರಾಕು ಮಾಡಬಹುದು.’ ನನಗೆ ಅದರಿಂದ ಸಂತೋಷವೂ ಇಲ್ಲ, ಸಂಕಟವೂ ಇಲ್ಲ.” ಈ ಮಾತುಗಳು ಕವಿಗಿದ್ದ ಪ್ರತಿಭಟನೆಯ ಸೂಚನೆಯಲ್ಲವೆ ?

ರತ್ನಾಕರನ ಶತಕತ್ರಯದಲ್ಲಿ ಒಂದೊಂದರಲ್ಲಿಯೂ ೧೨೮ ಪದ್ಯಗಳಿವೆ. ಇವುಗಳಲ್ಲಿ ಜೈನಮತಾನುಸಾರಿಯಾದ ಲೋಕಸ್ಥಿತಿಯನ್ನು ತಿಳಿಸುವ ತ್ರಿಲೋಕಶತಕವು ಕಂದಪದ್ಯಗಳಲ್ಲಿದೆ. ಉಳಿದುವೆರಡೂ ವೃತ್ತಗಳು. ಅವುಗಳಲ್ಲಿ ‘ರತ್ನಾಕರಶತಕ’ವು ಕವಿಯ ಪರಿಣತಮತಿಯನ್ನು ಪ್ರತಿಬಿಂಬಿಸುವ ಅತ್ಯುತ್ತಮ ಶತಕ. ಇಲ್ಲಿನ ಹೆಗ್ಗುರಿ ಇತರ ಶತಕಗಳಂತೆ ನೀತಿನಿರೂಪಣೆಯೇ ಆದರೂ ಮಾತುಗಳಲ್ಲಿ ಹೊಳಪಿದೆ. ಹರಿತವಿದೆ. ಬರಡು ಶಾಸ್ತ್ರಜ್ಞರನ್ನು ಕುರಿತು—

ಶಾಸ್ತ್ರಂ ಬಂದೊಡೆ ಶಾಂತಿ, ಸ್ಮರಣೆ, ನಿಗರ್ವಂ, ನೀತಿ, ಮೆಲ್ಮಾತು, ಮು
ಕ್ತಿ ಸ್ತ್ರೀಚಿಂತೆ, ನಿಜಾತ್ಮಚಿಂತೆ, ನಿಲವೇಳ್ಕುಂತಲ್ಲದಾ ಶಾಸ್ತ್ರದಿಂ
ದುಸ್ತ್ರೀಚಿಂತನೆ, ದುರ್ಮುಖಂ, ಕಲಹಮುದ್ಗರ್ವಂ, ಮನಂಗೊಂಡೊಡಾ
ಶಾಸ್ತ್ರಂ ಶಸ್ತ್ರಮೆ, ಶಾಸ್ತ್ರಿ ಶಸ್ತ್ರಿಕನಲಾ ರತ್ನಾಕರಾಧೀಶ್ವರಾ ॥

ಕಡೆಯ ಪಾದದಲ್ಲಿ ಕಾಣ ಬರುವ ಕಿಡಿಹೊತ್ತ ನುಡಿಗಳ ಬೆಡಗು ಗಮನಾರ್ಹವಾದುದು. ರತ್ನಾಕರನ ಮಾತುಗಳು ಹರಿತವಾದರೂ ಆತನ ಧರ್ಮಪ್ರತಿಪಾದನೆ ತತ್ವಜಿಜ್ಞಾಸೆಗಳಲ್ಲಿ ಔದಾರ್ಯವಿದೆ. ನಿರ್ದಾಕ್ಷಿಣ್ಯವಾಗಿ ನುಡಿಯಬಲ್ಲ ಕೆಚ್ಚೆದೆಯಲ್ಲದೆ ಮತ್ತಾವ ಜೈನಕವಿಯಲ್ಲಿಯೂ ಕಾಣಬರದ ಒಂದು ಸ್ವತಂತ್ರ ಮನೋವೃತ್ತಿಯಿದೆ. ಜೀವನವು ಕ್ಷಣಿಕವೆಂಬ ಜೈನತತ್ವವನ್ನು ಆತ ಒಪ್ಪುತ್ತಾನೆ; ಆದರೆ ಅದಕ್ಕಾಗಿ ಭೋಗವಿರತಿಯನ್ನು ಕೈಕೊಳ್ಳಬೇಕೆಂದುದನ್ನು ಆತ ಒಪ್ಪುವುದಿಲ್ಲ ಭೋಗವಿಮುಖನಾಗದೆಯೇ ಶಾಶ್ವತ ಸುಖವನ್ನು ಅರಸುತ್ತಾ ಹೋಗಬೇಕೆಂಬುದು ಆತನ ಸಂದೇಶ. ಇದೇ ಭರ

ಭರತೇಶವೈಭವಕಾವ್ಯದ ತಿರುಳು.

'ಭರತೇಶ ವೈಭವ'ವು ತ್ರಿಷಷ್ಟಿ ಶಲಾಕಾಪುರುಷರಲ್ಲಿ ಒಬ್ಬನಾದ ಭರತ ಚಕ್ರವರ್ತಿಯ ಚರಿತ್ರೆಯನ್ನು ಒಳಗೊಂಡಿದೆ. ಆತನ ಕಥೆ ಬಹಳ ಹಳೆಯದು. ಆತನು ಪ್ರಥಮ ತೀರ್ಥಂಕರನಾದ ವೃಷಭನಾಥನ ನೂರ್ವರು ಮಕ್ಕಳಲ್ಲಿ ಹಿರಿಯ, ಹದಿನಾರನೆಯ ಮನು, ಪ್ರಥಮಚಕ್ರಿ, ಚರಮಾಂಗ. ಆದಿ ತೀರ್ಥಂಕರನ ಜೀವನ ಚರಿತ್ರೆಯ ಜೊತೆಯಲ್ಲಿ ಈತನ ವೃತ್ತಾಂತವನ್ನೂ ತಿಳಿಸುವುದು ಸಂಪ್ರದಾಯ. ಇತರ ಎಲ್ಲ ಶಲಾಕಾ ಪುರುಷರ ಜೀವನದಂತೆ ಭರತನ ಜೀವನ ಕಥೆಗೂ ಜಿನಸೇನಕವಿಯ 'ಮಹಾಪುರಾಣ'ವೇ ಮೂಲ. ಆ ಪುರಾಣದ ಪ್ರಕಾರ ವೃಷಭನಾಥನು ತನ್ನ ಮಕ್ಕಳಿಗೆ ರಾಜ್ಯವನ್ನು ಒಪ್ಪಿಸಿ ತಾನು ತಪಸ್ಸಾಧನೆಗಾಗಿ ಹೊರಟುಹೋದನು. ಹಿರಿಯ ಹೆಂಡತಿಯ ಮಗ ಭರತನು ಅಯೋಧ್ಯೆಯಲ್ಲಿಯೂ ಕಿರಿಯ ಹೆಂಡತಿಯ ಮಗ ಬಾಹುಬಲಿಯು ಪೌದನಪುರದಲ್ಲಿಯೂ ರಾಜ್ಯವಾಳುತ್ತಿದ್ದರು. ಕೆಲವು ಕಾಲಾನಂತರ ಭರತಚಕ್ರಿಯ ಆಯುಧಾಗಾರದಲ್ಲಿ ಚಕ್ರರತ್ನ ಉದಿಸಿತು. ರಾಜನು ಅದನ್ನು ಮುಂದಿಟ್ಟುಕೊಂಡು ಜಗತ್ತನ್ನೆಲ್ಲಾ ಜಯಿಸಿದನು. ಆದರೆ ತಮ್ಮನಾದ ಬಾಹುಬಲಿ ಆತನಿಗೆ ವಶವಾಗಲು ಒಪ್ಪಲಿಲ್ಲ. ಆದ್ದರಿಂದ ಭರತನು ಆತನೊಡನೆ ಯುದ್ಧ ಮಾಡಬೇಕಾಯಿತು. ರಕ್ತಪಾತವನ್ನು ತಪ್ಪಿಸುವುದಕ್ಕಾಗಿ ದೇವತೆಗಳು ಅವರಿಗೆ ದೃಷ್ಟಿಯುದ್ಧ, ಜಲಯುದ್ಧ, ಬಾಹುಯುದ್ಧಗಳಾಗಲೆಂದು ನೇಮಿಸಿದರು. ಭರತನು ಅವುಗಳಲ್ಲೆಲ್ಲಾ ಸೋತು, ಅಪಮಾನದಿಂದ ಕಂಗೆಟ್ಟು ಅಧರ್ಮಕ್ಕೆ ಕೈಯಿಟ್ಟನು. ನಿರಾಯುಧನಾದ ಬಾಹುಬಲಿಯ ಮೇಲೆ ಆತನು ಚಕ್ರರತ್ನವನ್ನು ಪ್ರಯೋಗಿಸಿದನು. ಅವನ ಅಧರ್ಮವನ್ನು ಕಂಡು ಬಾಹುಬಲಿಗೆ ವೈರಾಗ್ಯ ಹುಟ್ಟಿತು, ಆತನು ಸನ್ಯಾಸಿಯಾಗಿ ತಪಸ್ಸಿಗೆ ಕುಳಿತನು. ಇತ್ತ ಭರತನು ಚಕ್ರವರ್ತಿಯಾಗಿ ರಾಜ್ಯವಾಳುತ್ತಾ ಒಮ್ಮೆ ಕನ್ನಡಿಯಲ್ಲಿ ತನ್ನ ನೆರೆಗೂದಲನ್ನು ಕಂಡು, ವೈರಾಗ್ಯದಿಂದ ತಪಸ್ಸಿಗೆ ಹೋಗುತ್ತಾನೆ.

ರತ್ನಾಕರನು ಭರತನ ಕಥೆಯ ಮೂಲರೇಖೆಗಳನ್ನು ಬಳಸಿಕೊಂಡಿರುವನಾದರೂ ಅದರ ವಿವರಣೆಗಳಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಪ್ರಥಮ ತೀರ್ಥಂಕರನ ಕಥೆಗೆ ಅಂಗವಾಗಿ ಬರಬೇಕಾಗಿದ್ದ

ಈ ಕಥೆಯನ್ನು ಸ್ವತಂತ್ರಕೃತಿಯಾಗಿ ರಚಿಸಹೊರಟುದೇ ರತ್ನಾಕರನ ವೈಶಿಷ್ಟ್ಯ. ಅದುವರೆಗೆ ಯಾವ ಕನ್ನಡ ಕವಿಯೂ ಅಂತಹ ಕಾರ್ಯಕ್ಕೆ ಕೈ ಹಾಕಿರಲಿಲ್ಲ. ರತ್ನಾಕರನು ಇದಕ್ಕೆ ಕೈ ಹಾಕಿದುದು ಮಾತ್ರವೇ ಅಲ್ಲ, ಇದ್ದುದನ್ನು ಬದಲಾಯಿಸಿಯೋ, ಹೊಸದನ್ನು ಸೇರಿಸಿಯೋ ತನ್ನ ನಾಯಕನ ಪಾತ್ರವನ್ನು ಮುಗಿಲಿಗೆತ್ತುವುದಕ್ಕೆ ಪ್ರಯತ್ನಿಸಿ, ಕೃತಕೃತ್ಯನಾಗಿದ್ದಾನೆ. ಜಿನನಾಗುವವನಿಗೆ ಮಾತ್ರವೇ ಮೀಸಲಾದ ಪಂಚಕಲ್ಯಾಣಗಳನ್ನು ತನ್ನ ನಾಯಕನಿಗೂ ಅಳವಡಿಸಿಕೊಡಲು ಹೊರಟಿದ್ದಾನೆ, ಕವಿ ಜಿನನ ಪಂಚಕಲ್ಯಾಣಗಳಿಗೆ ಬದಲಾಗಿ ಭೋಗವಿಜಯ, ದಿಗ್ವಿಜಯ, ಯೋಗವಿಜಯ, ಅರ್ಕಕೀರ್ತಿ ವಿಜಯ, ಮೋಕ್ಷ ವಿಜಯ ಎಂಬ ಐದು ವಿಜಯಗಳಲ್ಲಿ—ಕಲ್ಯಾಣಗಳ ಪರ್ಯಾಯವಾಗಿ—ಭರತನ ಕಥೆಯನ್ನು ಹಬ್ಬಿಸಿದ್ದಾನೆ. ಈ ಐದು ವಿಜಯಗಳ ನಿರೂಪಣೆಯಲ್ಲಿ ರತ್ನಾಕರನ ಕಲ್ಪನಾಶಕ್ತಿ ಹೇಗೆ ಅರಳಿ ಘಮಘಮಿಸುತ್ತದೆಯೆಂಬುದನ್ನು ನೋಡೋಣ.

ಭೋಗವಿಜಯವು ಕಥಾನಾಯಕನ ಭೋಗಸಾಮ್ರಾಜ್ಯದ ರಂಗುರಂಗಾದ ರಸಚಿತ್ರವನ್ನು ದಿಗ್ದರ್ಶಿಸುತ್ತದೆ. ತೀರ್ಥಂಕರನು ಗರ್ಭಾವತರಣ ಕಲ್ಯಾಣದಲ್ಲಿ ಅನುಭವಿಸಬಹುದಾದ ಸ್ವರ್ಗಸುಖದ ನೆತ್ತಿಯಮೇಲೆ ಬಡಿದಂತಿದೆ ಭೋಗ ವಿಜಯದಲ್ಲಿ ಭರತನು ಅನುಭವಿಸುವ ಭೂಲೋಕ ಸೌಖ್ಯ. 'ಗಣನೆಯಿಲ್ಲದ ಸುಖದೊಳೋಲಾಡಿ'ದವನು ಭರತಚಕ್ರಿ. ಜಿನಸೇನಾಚಾರ್ಯನ ಕಾವ್ಯದಲ್ಲಿಯೆ ಇದಕ್ಕೆ ಸೂಚನೆಗಳಿವೆ. ಆತನಿಗೆ ತೊಂಬತ್ತಾರು ಸಹಸ್ರ ಜನ ಹೆಂಡತಿಯರು. ಅವರೊಡನೆ ಜಲಕೇಳಿ ಚಂದ್ರಿಕಾವಿಹಾರವನ್ನು ನಡೆಸುತ್ತಾ ಆತ ಸುಖವಾಗಿದ್ದ. ಈ ಸೂಚನೆಯನ್ನು ಅಂಗೀಕರಿಸಿದ ಕವಿ ತನ್ನ ಸೃಷ್ಟಿಶಕ್ತಿಯೆಲ್ಲವನ್ನೂ ಭರತಚಕ್ರಿಯ ಶೃಂಗಾರ ಜೀವನ ಚಿತ್ರಣದಲ್ಲಿ ವಿನಿಯೋಗಿಸಿದ್ದಾನೆ. 'ಭೋಗಸಂಧಿ'ಯು ಒಂದು ಶೃಂಗಾರ ರಸದ ಸಾಗರ. ಆತನ ಹಂಡಿರು ಒಬ್ಬೊಬ್ಬರೂ ಅದರಲ್ಲಿನ ಸರಸ ಸಲ್ಲಾಪದ ಒಂದೊಂದು ಕಲ್ಲೋಲಮಾಲೆ. ಇದರಮೇಲೆ ತೇಲಿ ಹೋಗುತ್ತಿರುವ ದುಗರು ಲಾವಣ್ಯ ರಸಾನುಭೂತಿಯ ಚರಮಸೀಮೆಯನ್ನು ಸಂದರ್ಶಿಸಿ ಧನ್ಯರಾಗುತ್ತಾರೆ. ಭರತಚಕ್ರಿಯ ಶೃಂಗಾರಜೀವನದ ಹರಹೂ ಅನುಭವದ ಆಳವೂ ರೋಮಾಂಚಕರವಾಗಿದೆ.

ಭರತನ ತೊಂಬತ್ತಾರು ಸಹಸ್ರ ರಾಣಿಯರ ಮಾಲೆಯಲ್ಲಿ ಮಧ್ಯದ ಮುತ್ತು ಕುಸುಮಾಜಿ. ತನ್ನ ರೂಪು, ಕಲೆ, ಜಾಣ್ಮೆ, ಸೌಜನ್ಯಗಳಿಂದ ಆಕೆ ಗಂಡನ ಹೃದಯೇಶ್ವರಿಯಾಗಿದ್ದಾಳೆ. ಒಮ್ಮೆ ಆ ಕಲಾಸುಂದರಿ ಇನಿಯನ ಮೇಲೆ ಒಂದು ಕಾವ್ಯವನ್ನು ಕಟ್ಟಿದಳು. ಅದನ್ನು ಕೇಳಿ ಮೆಚ್ಚಿದ ಚಕ್ರಿ ಅವಳೊಡನೆ ಒಂದು ದಿನವನ್ನು ಕಳೆಯಲು ನಿಶ್ಚಯಿಸಿ, ಅವಳ ಮನೆಗೆ ಊಟಕ್ಕೆ ಬರುವುದಾಗಿ ತಿಳಿಸಿದನು. ಹೊತ್ತಿಗೆ ಸರಿಯಾಗಿ ಆತನನ್ನು ಭೋಜನಕ್ಕೆ ಆಹ್ವಾನಿಸಲೆಂದು ಕುಸುಮಾಜಿಯ ತಂಗಿಯಾದ ಮಕರಂದಾಜಿ ಬಂದಳು. ತೂಗುಯ್ಯಾಲೆಯಮೇಲೆ ಕುಳಿತಿದ್ದ ತನ್ನ ಭಾವನ ಮುಂದೆ ಗಂಧ ತಾಂಬೂಲ ಅಕ್ಷತೆಗಳ ಹೊಂದಟ್ಟೆಯನ್ನಿಟ್ಟು 'ಅನುಕೂಲವಾದುದಾರೋಗಣೆಗಿನ್ನೆಮ್ಮ ಮನೆಗೇಳು ಭಾವಾಜಿ' ಎಂದು ಆಹ್ವಾನಿಸಿದಳು. ಪ್ರಾಯದ ಹೊಸ್ತಿಲನ್ನು ಮೆಟ್ಟುತ್ತಿದ್ದ ಆ ಸುರಸುಂದರಿಯೊಡನೆ ಸ್ವಲ್ಪ ಸರಸವಾಡುವ ಚಪಲದಿಂದ ರಾಜನು 'ಇಂದಾನು ನಿನ್ನ ಮನೆಗೆ ಬಹುದುಚಿತವೆ? ಬಂದರೆ ವರುಷದಮೇಲೆ | ಬಂದು ನೀನೆನ್ನ ಕರೆದರಾನು ಬಹೆನು' ಎಂದು ಅವಳನ್ನು ಕೆಣಕಿದ ಹುಡುಗಿ ಗಂಭೀರವಾಗಿ 'ಅಕ್ಕಾಜಿಯರಮನೆಗೇಳೆಂದೆ' ಎಂದು ತನ್ನ ಮಾತನ್ನು ತಿದ್ದಿಕೊಂಡಳು. ಅವಳು ಅತ್ಯಂತ ಚದುರೆಯೆಂಬುದು ರಾಜನಿಗೆ ಗೊತ್ತು. ಅವಳನ್ನು ಸ್ವಲ್ಪ ಕೆಣಕಿದರೆ ಮಕರಂದ ಹರಿದು ಬರುವುದೆಂದೂ ಗೊತ್ತು. ಆದ್ದರಿಂದ 'ತಕ್ಕು ಕಾತಿಯೆ ನಿನ್ನ ಮನೆಗೆಂದೆಯ್ಯೆನೆ, ನಿನ್ನಕ್ಕನ ಹೆಸರ ಹೇಳದೆಯ?' ಎಂದು ಅವಳನ್ನು ರೇಗಿಸಿದ. ಮಕರಂದಾಜಿ ಅವನು ಎಣಿಸಿದ್ದಂತೆಯೇ ಮಾತಿನ ಮಲ್ಲಗಾಳಕ್ಕೆ ಸಿದ್ಧಳಾಗಿ ನಿಂತಳು—

ಮಕರಂದಾಜಿ: ಅಕ್ಕನ ಹೆಸರ ಹೇಳುವರಾಕೆ ಪಡೆವರೆ | ಮಕ್ಕಳು ಪೇಳ್ವವು ಮುಂದೆ | ದಿಕ್ಕಿನೊಳೆನಗೇನು ಸಂಬಂಧ ಸಾಕೇಳು | ಸಿಕ್ಕಿನ ಮಾತನಾಡದಿರು

ಭರತಚಕ್ರಿ: ಸಾಕೇಳು ಸಲಹೇಳು ನೀನೆಂದು ತಾನೆನ್ನ | ನಾಕರುಷಣ ಮಾಡುತಹಳೆ | ಈಕೆ ತಾನೇನು ಕಾತರೆಯೊ!

ಮಕರಂದಾಜಿ: ಕಾತರ ಗೀತರವನು ನೀವು ನಿಮ್ಮೆಂಬು | ಜಾತಾಕ್ಷಿಯರು ಬಲ್ಲರೈಸೆ

ಆ ತಳ್ಳಿ ಬಳ್ಳಿಯ ನಾವೇನ ಬಲ್ಲೆವು | ಮಾತು ಸಾಕಿನ್ನೇಳು ಭಾವ.

ರಾಜನು ನಾಲಿಗೆ ಕಟ್ಟಿದಂತವನಾಗಿ ಅವಳನ್ನು ಹಿಂಬಾಲಿಸಿದ. ಕುಸುಮಾಜಿಯ ಅರಮನೆಯನ್ನು ಪ್ರವೇಶಿಸುತ್ತಿದ್ದಂತೆಯೇ ಹೇಮಪಂಜರದಲ್ಲಿದ್ದ 'ಅಮೃತವಾಚಾಂಕ'ನೆಂಬ ಗಿಳಿ ರಾಜನಿಗೆ ಸುಖಾಗಮನವನ್ನು ಕೋರಿತು–

ಕ್ಷೇಮವೆ ಭಾವಾಜಿ, ಮತ್ತು ನಿಮಗೆ ಪರಿ | ಣಾಮವೆ ಹೇಳು ಭಾವಾಜಿ
ಈ ಮನೆಯತ್ತಲೇಕಡಿಗಡಿಗೈತರೆ ?
ಧರೆಯ ನಾಳಿದೆನೆಂಬ ಗರ್ವವೊ ? ನಮ್ಮಕ್ಕ | ನರಮನೆಗಡಿಗಡಿಗೇಕೆ
ಬರಲೊಲ್ಲೆ ? ಬಂದಿನ್ನು ಪೋಪೆಯ ? ನಿನ್ನ ಕಾ | ಲ್ಗುರುಲ ನಿಕ್ಕುವೆ.
ಸುಳಿಗುರುಳೆಂಬುರುಲುಂಟು ನಮ್ಮಕ್ಕನ | ನಳಿತೋಳ ಪಾಶಗಳುಂಟು
ಹೊಳೆದಿನ್ನು ಹೋಹ ಭಾವನ ಕಾಣ್ಬೆ .........
ಸೋಂಕಿ ನಮ್ಮಕ್ಕನೊತ್ತಿಳಿದ್ದರಿರು ಮೀರಿ| ಭೋಂಕನೆ ಪೋಪೆನೆಂಬಾಗ
ಪಂಕಜಾಕ್ಷಿಯ ಕಡೆಗಣ್ಣ ಕಾಂತಿಯ ಬೆಳ್ಳಿ | ಸಂಕಲೆಗಳನಿಕ್ಕಿಸುವೆನು

ಅಮೃತವಾಚಾಂಕನ ಅಮೃತವಾಣಿಗೆ ಶಿಕ್ಷಾಗುರು ಮಕರಂದಾಜಿ. ರಾಜನು ಅವಳನ್ನು ಬಿಗಿಯಪ್ಪಿ, ಮುತ್ತಿಕ್ಕಿ ಸನ್ಮಾನಿಸಿದನು. ವೈಯಾರಿ ಮಕರಂದೆ ಅದರಿಂದ ಕೋಪಗೊಂಡವಳಂತೆ ಸಿಡಿಮಿಡಿಗುಟ್ಟಿ. ಆತನೊಡನೆ ವಾಗ್ವಾದದ ಮಹಾಯುದ್ಧವನ್ನು ನಡೆಸಿ ಆತನನ್ನು ಮೆಚ್ಚಿಸುತ್ತಾಳೆ. 'ಸರಸಸಂಧಿ' ಯೆಂದು ಈ ಸಂಧಿಗೆ ಇಟ್ಟಿರುವ ಹೆಸರು ಸಾರ್ಥಕವಾಗಿದೆ.

ರಾಜನು ಕುಸುಮಾಜಿಗೆ ಸನ್ಮಾನ ನೀಡಿದ ಭಾಗ ಅತ್ಯಂತ ಸುಂದರವಾದ ಶೃಂಗಾರರಸಚಿತ್ರ. ಗಂಡಹೆಂಡಿರಿಬ್ಬರೇ ಇರುವಾಗ ಆತನು ತನ್ನ ಅಕ್ಕರೆಯ ಸಕ್ಕರೆಯನ್ನು ಬಾಯಿಂದ ಸುರಿಸುತ್ತಿರುವಂತೆ, ಮುದ್ದಾದ ಆ ಹೆಂಡತಿಯ ಮುದ್ದು ಹೆಸರನ್ನು ಮತ್ತಷ್ಟು ಮುದ್ದಾಗಿ ಮಾಡಿ, ಅವಳ ಮನೆಯ ಅಚ್ಚುಕಟ್ಟನ್ನು ಮೆಚ್ಚುವ ನೆಪದಲ್ಲಿ

ಸಾರಣೆ ಚೆನ್ನಾಯ್ತು ಕುಸುಮೆ ಕುಂಕುಮದೊಂದು | ಕಾರಣೆ
ಚೆನ್ನಾಯ್ತು ಕುಸುಮಿ| ತೋರಣ ಚೆನ್ನಾಯ್ತು ಕುಸುಮು............
ಚೆಳೆಯಗೊಟ್ಟುದು ಲೇಸು ಕುಸುಮಾಜಿ ಹೊಸರಂಗು | ವಲಿಲೇಸು
ಕುಸುಮಾಂಗಿ ನಿನ್ನ | ನಿಳಯದ ಸಿಂಗಾರ ಸೊಗಸಾಯ್ತು
ಕುಸುಮ ಕೋ| ಮಲೆ.....................

ಹೀಗೆ ಕುಸುಮ, ಕುಸುಮಿ, ಕುಸುಮಾಜಿ, ಕುಸುಮೆ, ಕುಸುಮಾಂಗಿ, ಕುಸುಮಾಲೆ, ಕುಸುಮಿತಿ, ಕುಸುಮಿನಿ—ಎಂದು ಅವಳ ಹಿಂದೆಯೇ ಓಡಾಡುತ್ತಿರುವನೊ ಎನ್ನಿಸುತ್ತದೆ. ಆತ ಅವಳ ತವರು ಮನೆಯವರನ್ನೆಲ್ಲಾ ಹೆಸರಿಸಿ ಅವಳನ್ನು ಸಂತೋಷಪಡಿಸುತ್ತಾನೆ—'ಈ ಝೂಲರಿ ಎಷ್ಟು ಚನ್ನಾಗಿದೆ, ಮಾವಾಜಿ ಕಳುಹಿಸಿದರೆ? ಈ ಮುತ್ತಿನ ಲಂಬಣ ಎಷ್ಟು ಚೆಲುವು; ಅತ್ತೆಯವರು ಕಳುಹಿಸಿದರೇನೊ!' ಇತ್ಯಾದಿ. ಕುಸುಮಾಜಿ 'ದೊಡ್ಡ ಜಾಣೆ,' 'ಜಿಡ್ಡುಬ್ಬಿ ಮಂಡೆಗೇರು'ವವಳಲ್ಲ; ಅವಳು ಗಂಡನನ್ನೆ ಹೊಗಳಿ ಊಟಕ್ಕೆಬ್ಬಿಸಿದಳು. ತಾನೆ ಕೈಯಾರ ಪೃಷ್ಟಾನ್ನ ವುಣ್ಣಿಸಿ, ಕೈತೊಳೆದು, ಉಪ್ಪರಿಗೆಯಲ್ಲಿನ ಗೂಢಗೃಹದಲ್ಲಿ ಶಕುನಿಮಂಚದ ಮೇಲೆ ಮಲಗಿಸಿ, ವೀಳೆಯವಿತ್ತು, ಗಂದಕರ್ಪೂರಗಳನ್ನು ಲೇಪಿಸಿ, ಗಾಳಿ ಹಾಕಿ, ಪಾದವೊತ್ತಿ—ರಾಜನ ಅಗ್ರಹದಮೇಲೆ ಹಿಂದಿರುಗಿ ಕ್ಷಣಮಾತ್ರದಲ್ಲಿ ತನ್ನ ಊಟವನ್ನು ಮುಗಿಸಿದಳು. ಅನಂತರ ಅಲಂಕಾರಗೃಹಕ್ಕೆ ಹೋಗಿ, ಕುಟಿಲ ಕುಂತಳವನ್ನು ಬಾಚಿ ಬಾಚಿ ಹೆರಳು ಹಾಕಿಕೊಂಡು, ತಿಲಕವನ್ನು ತಿದ್ದಿ ತನ್ನ ರೂಪಕ್ಕೆ ತಾನೆ ಮನಸೋತು ನಕ್ಕಳು. ಗಂಧ ತಾಂಬೂಲಗಳಾದ ಮೇಲೆ ಗಂಡನ ಬಳಿಗೆ ನಿಶ್ಶಬ್ದವಾಗಿ ನಡೆದುಬಂದು ಬಾಗಿಲ ಮರೆಯಲ್ಲಿ ನಿಂತಳು. ರಾಜ 'ಪ್ರಚಂಡೆ! ಬಾ' ಎಂದು ಕರೆದ. ಕುಸುಮಾಜಿ 'ನಸುನಗುವನ್ನು ಇಂಡೆಯಾಡು'ತ್ತಾ ಒಳಗೆ ಬಂದಳು. ಅವಳಿತ್ತ ಪನ್ನೀರಿನಿಂದ ಮಲಗಿಯೇ ಬಾಯ್ದೊಳೆದು, ಕೂರುಗುರಿನಿಂದ ಸೀಳಿದ ವೀಳೆಯವನ್ನು ಚಪ್ಪರಿಸುತ್ತಾ ಮುಸುಕಿಟ್ಟುಕೊಂಡು ರಾಜನು 'ಕುಸುಮಿ ತಾನೇಕೆ ಬಂದಳು' ಎಂದ. 'ಏಕೆ ಬಂದಳೊ! ದೇವರೆ ಬಲ್ಲರವಳಿಚ್ಛೆಯೇನೆಂದು' ಎಂದು ಉತ್ತರ ಬಂತು. 'ಏನೋ, ನಮ್ಮೊಡನೆ ಜಗಳಕ್ಕೆ ಬಂದಂತೆ ಕಾಣುತ್ತದೆಯಲ್ಲ' ಎಂದ ರಾಜ. 'ಜಗಳಕ್ಕಲ್ಲವಂತೆ, ಏನೋ ಗೂಢಾರ್ಥವಿದೆಯಂತೆ. ಆಳ್ದನ ಕೂಡೆ ಆಲೋಚಿಸಲು ಬಂದಿದ್ದಾಳೆ' ಎಂದಳು ರಾಣಿ. 'ಗೂಢಾರ್ಥವೇನಂತೆ?' ಎಂದ ರಸಿಕ ಚಕ್ರಿ. 'ಮೂಢರಿಗಾದರೆ ಬಾಯ್ಬಿಟ್ಟು ಹೇಳಬೇಕು, ಪ್ರೌಢರಿಗೆ ಬಂದೊಡನೆ ಅರಿವಾಗುತ್ತದೆ' ಎಂದಳು, "ಪ್ರಚಂಡೆ." ರಾಜನು ಮುಂದಕ್ಕೆ ಮಾತಿಗೆ ಅವಕಾಶವಿಲ್ಲದೆ, ನಗುತ್ತಾ ಮೇಲೆದ್ದು ಅವಳನ್ನು ಬಳಸೆಳೆದು ಬಿಗಿಯಪ್ಪಿದ.

ಸಂಸವಿನೋದ, ಭೋಗಭಾಗ್ಯಗಳಿಂದ ರಾಜನನ್ನು ತಣಿಸಿದ ಆ ಮೋಹನಾಂಗಿ ವೀಣೆಯನ್ನು ಕೈಲಿ ಹಿಡಿದು ಹಾಡಲು ಆರಂಭಿಸಿದಳು. ಆಕೆ ಸಾಹಿತ್ಯ ಸಂಗೀತಗಳ ಸರಸ್ವತಿ. ಕವಿಯು ಆ ಸರಸ್ವತಿಯ ವೀಣಾಗಾನವನ್ನು ಕಣ್ಣೆದುರಿಗೆ ತಂದು ನಿಲ್ಲಿಸಿದ್ದಾನೆ.

ಒಳಗುಣ್ಮಿದಾನಂದ ರಸ ತನ್ನ ತನುತುಂಬಿ | ತುಳುಕಿ ಹೊರಗೆ ಸೂಸುವಂತೆ
ತೆಳುವಸುರಿಂದ ಬಾಯ್ದೆರೆಯೊಳು ಸುಸ್ವರ | ಜೊಳೆದು ಮೋಹಿಸುತಿದ್ದುದಾಗ||
ಸುಳಿನಾಭಿಯೊಳು ಹುಟ್ಟಿ ಮೆಲ್ಲೆದೆಯೊಳು ಬೆಳ | ದೊಳಗೊರಳೊಳು ಪ್ರಾಯವಡೆದು
ಎಳೆಯಳ ಬ್ರಹ್ಮರಂಧ್ರವನೇರಿ ಬಾಯ್ದೆರೆ | ಗಿಳಿದು ಮೋಹಿಸಿದುದಾಳಾಪ||
ಬೆಳಗಿನೊಳೋಲಾಡುವಂತೆ ಸಂಗೀತದ | ಸುಳಿಯೊಳು ತೇಲಾಡುವಂತೆ
ತೆಳುಗಾಳಿಯೇರಿ ವೈಹಾಳಿಯ ಮಾಡುವಂ | ತೆಳವೆಂಗಳರಸಿ ಹಾಡಿದಳು||
ವೀಣೆಯ ನುಡಿಸುತ ಪಾಡಿದರವಳೀಗ | ವೀಣೆಗಳೆಡನೊಂದಾಗಿ| ಹೂಣಿ
ನುಡಿಸುತಿದ್ದಳೆಂಬೊಲಿಹುದು ಮಧು' ರಾಣಿಯ ದನಿಯ ಚೆಲ್ವಿಕೆಯೆ.

ರಾಣಿಯು 'ಕೆಂಬಾಯ ನಸುದೆರೆದಾಯೆಂದು ರಾಗವ | ನಂಬುಜಾನನೆ ತುಡಿಕಿದಳು' ರಾಜನಿಗೆ ಆಕೆಯ ಸಂಗೀತವನ್ನು ಕೇಳಿದಷ್ಟು ಕೇಳಬೇಕೆಂಬಾಸೆ. ಆತನ ಆಶೆಯನ್ನು ಮೀರಿಸಿ ರಾಗರಸಕ್ಕೆ ಕಳೆಯೇರುತ್ತಿದೆ. ಆತನಿಗೆ ಆಕೆಯನ್ನು ತಬ್ಬಿಕೊಳ್ಳಬೇಕೆಂಬಾಸೆ. ಮೆಲ್ಲನೆ ವೀಣೆಯನ್ನು ಸರಿಸುವನು. ಆದರೂ ಗಾನರಸಕ್ಕೆ ಸೋತು 'ಇರಲಿ. ಹಾಡು' ಎಂಬ ಭಾವದಿಂದ ಹಿಂದಕ್ಕೆ ಸರಿಯುವನು. ಆದರೆ ಎಷ್ಟು ಹೊತ್ತು ಮನಸ್ಸನ್ನು ಬಿಗಿಹಿಡಿಯುವುದು? 'ಮಡದಿ ಹಾಡುವುದೊಂದು ಗಮಕಕೆ ಗಾನದ | ಕಡುಸವಿಗೆದೆಯೊಳು ಹಿಗ್ಗಿ ಎಡದ ತೋಳಿಂದ ಕೊರಳನಪ್ಪಿ ಚೆಂದುಟಿ | ವಿಡಿದು ಚುಂಬಿಸಿ ನಕ್ಕು ಬಿಡುವ.

ರತ್ನಾಕರಕವಿಯು ಭರತಚಕ್ರಿಯನ್ನು ಅತ್ಯಂತ ಸುಖಿಯಾದ ಸಂಸಾರಿಯನ್ನಾಗಿ ಚಿತ್ರಿಸಿದ್ದಾನೆ. ಅವನಿಗೆ ತೊಂಬತ್ತಾರು ಸಹಸ್ರ ಹೆಂಡತಿಯರಿ

ದ್ದರೂ ಅವರಲ್ಲಿ ಸವತಿಮತ್ಸರವಿಲ್ಲ. ಅವರೆಲ್ಲರೂ ಸೋದರಿಯರಂತೆ ವ್ಯವಹರಿಸುತ್ತಾರೆ. ಈ ಆಹ್ಲಾದದ ತೊರೆಗಳೆಲ್ಲವೂ ಬಂದು ಸೇರುವ ಸಂಗಮಸ್ಥಾನದಂತಿದ್ದಾನೆ ಭರತ ಚಕ್ರಿ. ಆತನು ಏಕಕಾಲದಲ್ಲಿಯೇ ಎಲ್ಲರನ್ನೂ ಸಂತೋಷಪಡಿಸಬಲ್ಲ. 'ತವರೂರ ಮರೆಯಿಸಿ, ನಿದ್ರೆಯ ತೊರೆಯಿಸಿ, ಸವಿಗಳ ನರಿಯಿಸಿ....| ದಿವರಾತ್ರಿಯೆನ್ನದೆ ಸುಖದೊಳೋಲಾಡಿಸಿ' ತೃಪ್ತಿಬಡಿಸಬಲ್ಲ. ಆತ. ಸಂಸಾರವಂದಿಗನಾದವನು ಯಾವ ಯಾವ ಸೌಖ್ಯಗಳನ್ನು ಅನುಭವಿಸಬಹುದೋ ಆ ಯಾವ ಸೌಖ್ಯದಿಂದಲೂ ಭರತನು ವಂಚಿತನಾಗಿಲ್ಲ. ಶ್ರೀಮಂತನಾದ ಸಂಸಾರಸುಖಿ ಆತ. ಆತನನ್ನು ಅವಲಂಬಿಸಿರುವವರೆಲ್ಲರೂ ಚಂದ್ರನನ್ನು ಸುತ್ತುವರಿದ ನಕ್ಷತ್ರಗಳಂತಿದ್ದಾರೆ. ಕುಸುಮಾಜಿಯಂತೆಯೇ ಕಲಾಪ್ರವೀಣರಾದ ಸುರಸುಂದರಿಯರು ಭರತನ ರಾಣೀವಾಸದಲ್ಲಿ ಸಾಕಷ್ಟು ಮಂದಿಯಿದ್ದಾರೆ. ಅವರೆಲ್ಲರೂ ತಮ್ಮ ವ್ಯಕ್ತಿತ್ವವನ್ನು ಬದಿಗೊತ್ತಿ ಭರತನ ಸುಖದಲ್ಲಿ ತಮ್ಮ ಜನ್ಮಸಾಫಲ್ಯವನ್ನು ಕಂಡುಕೊಂಡಿದ್ದಾರೆ. ಭರತನ ಹೆಂಡಿರು ಮಾತ್ರವಲ್ಲ; ತಾಯಿ, ಭಾವಮೈದುಂದಿರು, ಅತ್ತೆಮಾವಂದಿರು, ಮಕ್ಕಳು— ಇತ್ಯಾದಿ ಗಣನಾತೀತರಾದ ಬಂಧುಬಾಂಧವರು ಭರತನ ಸೌಖ್ಯವನ್ನು ಪೂರ್ಣಗೊಳಿಸಲು ಸಹಾಯಕರಾಗಿದ್ದಾರೆ. ಕವಿಯ ಕೌಶಲ ಭರತನಿಗೆ ಸುಖಸಂಪತ್ತುಗಳ ಭಂಡಾರವನ್ನು ಒಪಗಿಸಿಕೊಟ್ಟಿದೆ.

ರತ್ನಾಕರನು 'ಭೋಗವಿಜಯ'ದಲ್ಲಿ ಮೂಲದ ಕಥೆಯಿಂದ ಹೆಚ್ಚು ಬದಲಾವಣೆಗಳನ್ನು ಮಾಡಿಕೊಂಡಿಲ್ಲ. ಮೂಲದಲ್ಲಿದ್ದ ಸೂಚನೆಗಳನ್ನು ಬಳಸಿಕೊಂಡು, ಭರತನನ್ನು ಭೋಗಸರಸಿಯಲ್ಲಿರುವ ಕಮಲವನ್ನಾಗಿ ಮಾಡಿದ್ದಾನೆ. ಆದರೆ 'ದಿಗ್ವಿಜಯಪರ್ವ'ದಲ್ಲಿ ಬರುವ ಭರತನ ದಿಗ್ವಿಜಯದಲ್ಲಿ ಕವಿಯು ಸ್ಪಷ್ಟವಾದ ವ್ಯತ್ಯಾಸಗಳನ್ನು ಮಾಡಿದ್ದಾನೆ. ಪುರಾಣದಲ್ಲಿ ಭರತನು ದಿಗ್ವಿಜಯಕ್ಕೆಂದು ಹೊರಟು ಮಹೀತಳವನ್ನೆಲ್ಲಾ ಕ್ಷೋಭೆಗೊಳಿಸುತ್ತಾ, ರಾಜರುಗಳನ್ನೆಲ್ಲಾ ಬಾಯ್ಕೋಳಿಸುತ್ತಾ. ಆಸಮುದ್ರಾಂತ ಭೂಮಂಡಲವನ್ನು ಗೆದ್ದು ರಾಜಧಾನಿಗೆ ಹಿಂದಿರುಗುತ್ತಾನೆ. ತನ್ನ ತಮ್ಮಂದಿರು—ಅದರಲ್ಲಿಯೂ ಬಾಹುಬಲಿ—ತನಗೆ ಇದಿರು ಬಿದ್ದಿರುವರೆಂಬುದನ್ನು ಕೇಳಿ ಕೋಪದಿಂದ ಕೆಂಗೆಂಡವಾಗುತ್ತಾನೆ. ತನ್ನ ಪಾದಕ್ಕೆರಗದವರು ತಪಸ್ಸಿಗೆ ನಡೆಯಲೆನ್ನುತ್ತಾನೆ. ಅದರಂತೆಯೇ ಬಾಹುಬಲಿಯೊಬ್ಬನನ್ನು

ಬಿಟ್ಟು ಉಳಿದವರೆಲ್ಲಾ ತಪ್ಪೋಸಿತರಾಗುತ್ತಾರೆ. ಭರತನು ಬಾಹುಬಲಿ ಯೊಡನೆ ಯುದ್ಧಮಾಡಿ, ಸೋತು. ಅಧರ್ಮಕ್ಕೆ ಕೈಯಿಡುತ್ತಾನೆ. ಆದರೆ ರತ್ನಾಕರನ ಭರತ, ಸಂಪ್ರದಾಯದ ಭರತನಿಂದ ಸಂಪೂರ್ಣ ಭಿನ್ನಸ್ವಭಾವ ದವನು. ಆತನ ಪಾತ್ರ ಭೂಮಿಯಲ್ಲಿ ಬೇರುಬಿಟ್ಟು ಅಂಬರದಲ್ಲಿ ಅರಳಿದೆ. ಆತನ ಮಾತೆಲ್ಲವೂ ಭೂಮಿತೂಕದ ಮಾತುಗಳು. ಆತನು ಮಹಾನುಭಾವ. ಆತನ ನಯವಿನಯಗಳನ್ನು ಲೆಕ್ಕಿಸದ ಅವನ ತಮ್ಮಂದಿರೇ ಧೂರ್ತರು, ಇಲ್ಲಿ. ಅವರೆಲ್ಲರೂ ತಪಸ್ಸಿಗೆ ಹೋದುದನ್ನು ಕೇಳಿ ನೊಂದ ಭರತನು ಬಾಹು ಬಲಿಯೊಬ್ಬನನ್ನಾದರೂ ಒಲಿಸಿ ಉಳಿಸಿಕೊಳ್ಳಬೇಕೆಂದು ಬಗೆದು ವಚನ ಚತುರನಾದ ದಕ್ಷಿಣನನ್ನು ಅವನ ಬಳಿಗೆ ಕಳುಹಿಸುತ್ತಾನೆ. ಆ ದೂತನ ಮಾತುಗಳು ಎಷ್ಟು ಸ್ನೇಹಸ್ನಿಗ್ಧವಾಗಿವೆ! ' ಅಣ್ಣನಾದ ಭರತನಿಗೆ ತಮ್ಮ ನನ್ನು ಕಣ್ತುಂಬ ನೋಡುವ ಅರ್ತಿಯಾಗಿದೆ. ನಿನ್ನನ್ನೂ ನಿನ್ನ ಅಣ್ಣ ನನ್ನೂ ಕಣ್ಣುತುಂಬ ನೋಡಬೇಕೆಂದು ಎಲ್ಲರ ಆಸೆ. ನಿನ್ನ ಬಾಗಿಲ ಬಳಿಯೇ ನಿಂತಿರುವ ನಿನ್ನ ಅಣ್ಣನ ಬಳಿಗೆ ಬಾ' ಎಂದು ಅವನು ಕೇಳಿ ಕೊಂಡರೆ, ಆ ಮಾತುಗಳನ್ನು ಗಾಳಿಗೆ ತೂರಿ ಆ ಕಲಿಯುಗ ಮದನ ಕಾಲ್ಕೆದರಿ ಯುದ್ಧಕ್ಕೆ ನಿಲ್ಲುತ್ತಾನೆ. ಅವನ ತಾಯಿ ಮತ್ತು ರಾಣಿಯರು ಭರತನಲ್ಲಿ ಪಕ್ಷಪಾತವುಳ್ಳವರು. ಅವರು ನಿವಾರಿಸಿದರೂ ಕೇಳದೆ ಬಾಹುಬಲಿ ಯುದ್ಧಕ್ಕೆ ನಿಲ್ಲುತ್ತಾನೆ.

ರತ್ನಾಕರನಿಗೆ ಭರತನ ಯುದ್ಧ ಪ್ರಸಕ್ತಿಯೇ ಅಸಹ್ಯಕರ. ' ಅಹಿಂಸಾ ಪರಮೋ ಧರ್ಮಃ' ಎಂದು ಜಗತ್ತಿಗೆ ಸಾರುವ ಜೈನರಲ್ಲಿ, ಶಲಾಕಾಪುರುಷ ನಾದ ಭರತನು ಯುದ್ಧಕ್ಕೆ ನಿಂತನೆಂಬುದು ಅವನಿಗೆ ಸರಿ ಬೀಳಲಿಲ್ಲ. ಯುದ್ಧವನ್ನು ನಿವಾರಿಸಿಯೇ ಬಿಟ್ಟಿದ್ದಾನೆ. ಅದಕ್ಕೆ ಕಾರಣವನ್ನೂ ಕೊಡು ತ್ತಾನೆ, ಕವಿ.

ಜಲದೃಷ್ಟಿ ಮುಷ್ಟಿಯುದ್ಧದಿ ಚಕ್ರಿ ತಮ್ಮಗೆ। ಗೆಲುದೋರಿ ನುಡಿದರಂತ ದನು
ಕೆಲರು ಕಾದಿಯೆ ಗೆಲ್ದನೆಂಬರು, ಚಕ್ರಿಯ। ಗೆಲ ಸಮರ್ಥನೆ ಪುಷ್ಪ ಬಾಣ ?
ಹಗಲಂತೆ ಬೆಳುದಿಂಗಳಹುದೆನೆ ಸೂರ್ಯ ರ। ಶ್ಮಿಗಳ ನೂಂಕುವ ಶಕ್ತಿ ಯುಂಟೆ ?

ಮದನನ ಅಪರಾವತಾರವಾದ ಬಾಹುಬಲಿ ತನ್ನ ಮೋಹಕಶಕ್ತಿಯನ್ನು ಜಗತ್ತಿನಲ್ಲೆಲ್ಲಾ ಹರಡಬಹುದು. ಆದರೆ ಭರತಚಕ್ರಿ ಮೋಹದ ಸಂಕಲೆಗೆ ಸಿಕ್ಕುವವನಲ್ಲ. ಭರತನು ತಮ್ಮನ ಮೇಲೆ ಚಕ್ರವನ್ನು ಪ್ರಯೋಗಿಸಿದನೆಂಬ ಮಾತೂ ಸುಳ್ಳಂತೆ! ಆತನು 'ರಣಭಂಗವಾಗಬಾರದು ತಮ್ಮಗೆಂದು ಸದ್ಗುಣವಚನದಿ ಜಯಿಸಿದನು; ಕ್ಷಣಕೆ ಮುಕ್ತಿಯ ಕೊಂಬ ಮೃದು ಹೃದಯಗೆ ಕ್ರೂರ ಗುಣವುಂಟೆ!' ಎಂದು ಕೇಳುತ್ತಾನೆ. ಕವಿ. ಯುದ್ಧಕ್ಕೆ ಸಿದ್ಧನಾಗಿ ನಿಂತಿರುವ ತಮ್ಮನನ್ನು ಕಂಡು ಭರತನು ಹೇಳುವ ಮಾತುಗಳನ್ನು ಕೇಳಿ—

'ಮನಸಿಜ ಕೇಳಣ್ಣ, ನಿನಗೆನಗಿಂದು ದು | ರ್ಮನದಿಂದೆ ಜಗಳವಪ್ಪುದಕೆ
ಘನವೇನು ಹೇಳು ನಿಷ್ಕಾರಣ ಕದನವ | ಜನಪರೆಸಗುವರೆಯೆಂದ
'ನುಡಿಯಲ್ಲಿ ನಾನಿನ್ನ ಬಿಟ್ಟಾಡಿದೆನೆ ನನ್ನ | ಪಡೆಯೊಳಗೊಬ್ಬರಾಡಿದರೆ ?
ಒಡಹುಟ್ಟಿದವನ ನೋಡುವೆನೆಂದು ಬರಹೇಳಿ ! ಘಡ ಹುಸಿಯೆಂಬರೆ, ಅಪ್ಪ !
'ನಾನಿಷ್ಟು ನಿನ್ನಿಂದ ಹಿರಿಯನಾದುದರಿಂದ | ಸೇನೆಗೆ ಬರವೇಳ್ದೆನೈಸೆ
ನೀನೆನಗಗ್ರಜನಾದರೆ ನೀನಿರ್ದ | ಸ್ಥಾನಕ್ಕೈದದೆ ತಡೆದಿಹೆನೆ ?
'ನನ್ನ ಗೆದ್ದುದರಿಂದ ನಿನಗೆ ಕೀರ್ತಿಯೆ ಹೇಳು | ನಿನ್ನ ಗೆಲ್ದೆನಗೊಂದು ಜಸವೆ ?
ಪನ್ನಗ ನರ ಸುರ ಲೋಕಮತ್ತಮರು ಛೀ | ಯೆನ್ನರೆ ಯೋಚಿಸಿಹೇಳು
ಅದಕೇನು ನೀನಿಂತು ಕದನ ಕೈದಿನೆಯ್ದೈಸೆ | ಕದನದೊಳ್ಗೆಲವೈಸೆ ಕಡೆಗೆ
ಬದಗರಂದದಿ ಹೋರಲೇತಕೆ ಗೆಲವು ನಿ | ನ್ನದು ಸೋಲವೆನಗೆ ಹೋಗೆಂದ.

ಇಷ್ಟೇ ಅಲ್ಲ ನಾನು ಈಗ ಗೆದ್ದು ತಂದಿರುವ ರಾಜ್ಯವನ್ನೆಲ್ಲಾ ನೀನೇ ತೆಗೆದುಕೊ. 'ನಸೆವಿಲ್ಲ, ನಿನ್ನ ಭಾಗ್ಯವ ಕಣ್ಣುತುಂಬ ನೋಳ್ಪೆನು' ಎಂದು ಹೇಳಿದ. ಅಣ್ಣ ತಮ್ಮಂದಿರು ಜಗಳವಾಡುವುದು ತಮ್ಮಂತಹರಿಗೆ ಸರಿಯಲ್ಲವೆಂದ. ಅಣ್ಣನ ಈ ಮಾತುಗಳನ್ನು ಕೇಳುತ್ತಾ ಹೋದಂತೆ 'ಗರುಡ ಮಂತ್ರಕೆ ವಿಷವಿಳಿವಂತೆ' ಭುಜಬಲಿಯ 'ಕೋಪ ಪೈಸರಿಸಿತು, ಹೃದಯ ತಂಪಾಯ್ತು!' ಆತನು ನಾಚಿಕೆಯಿಂದ ತಲೆತಗ್ಗಿಸಿದನು. 'ದೂಷಣವನ್ ತೊಡಗಿದೆ ನಾನು, ದೇವರು ಭೂಷಣ ಗೈದಿರಿ ನನ್ನ ದೋಷವನೆನ್ನದೆ ಪುದಿ

ದಲಿಪ್ಪುದು.' 'ದೇವರು ಕ್ಷಮಿಸುವುದೆನ್ನದು ತಪ್ಪೆಂದು | ಭಾವಶುದ್ಧದೊಳು ಕೈಮುಗಿ'ದ.

ಪುರಾಣಕಥೆಯಲ್ಲಿ ತನಗೆ ಸೂಕ್ತ ತೋರಿದಂತೆ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾದರೆ ಕವಿಗೆ ತನ್ನ 'ದರ್ಶನ'ದಲ್ಲಿ ತನಗೆ ನಿಸ್ಪಷ್ಟವಾದ ನಂಬಿಕೆ ಇರಬೇಕು. ನಿಜವಾಗಿ ರತ್ನಾಕರ 'ಎಂಟೆರ್ದೆ'ಯವನು. ಪಂಪ ಮಹಾಕವಿ ಕೂಡ ತನ್ನ ಪುರಾಣಕಾವ್ಯದಲ್ಲಿ ಬರಿಯ ಭಾಷಾಂತರಕಾರನಾಗಿದ್ದಾನೆ. ಆದರೆ ರತ್ನಾಕರ ಧೈರ್ಯದಿಂದ ತನಗೆ ಸರಿಯೆಂದು ತೋರಿದ ಬದಲಾವಣೆಯನ್ನು ಮಾಡಿದ. ಬಹುಶಃ ಇದರ ಫಲವಾಗಿ ಶ್ರಾವಕರಲ್ಲಿ ಭಿಕ್ಷೆ ತಪ್ಪಿತು ; 'ದ್ವಾದಶಾನುಪ್ರೇಕ್ಷೆ'ಗೆ ದೊರೆತ ಪುರಸ್ಕಾರ 'ಭರತೇಶವೈಭವ'ಕ್ಕೆ ತಪ್ಪಿತು. ಆದರೇನು? ಆ ತ್ಯಾಗವೇ ಇಂದು ಕವಿಯ ಮಹೋನ್ನತಿಗೆ ಸಾಧಕವಾಗಿದೆ.

ರತ್ನಾಕರನ ಉಳಿದ ಮೂರು ಭಾಗಗಳಲ್ಲಿ ಮೂಲದ ಕಥೆಯಿಂದ ಹೆಚ್ಚು ಬದಲಾವಣೆಗಳೇನೂ ಇಲ್ಲ.

'ಭರತೇಶವೈಭವ'ದ ಮಹೋನ್ನತಿಯಿರುವುದು ಅದರಲ್ಲಿ ಕಾಣಬರುವ ಕವಿಕಾವ್ಯದೃಷ್ಟಿಯಲ್ಲಿ. ರತ್ನಾಕರನಿಗೆ ಧರ್ಮವೀರನಾದ ಭರತನಲ್ಲಿ ಅಪಾರವಾದ ಭಕ್ತಿಗೌರವಗಳಿವೆ. ಆತನ ಕಥೆಯನ್ನು ಕೇಳಿ ಜನರ ಉದ್ಧಾರವಾಗಲೆಂಬುದು ಆತನ ಆಶಯ. ಆದರೆ ಶುಷ್ಕವಾದ ವೇದಾಂತ ನಿರೂಪಣೆಗಿಂತಲೂ ಭೋಗೋಪಭೋಗಗಳ ಅಡಿಗಲ್ಲಿನ ಮೇಲೆ ನಿರ್ಮಿಸಿದ ಆಧ್ಯಾತ್ಮಿಕ ಕಟ್ಟಡವೇ ಹೆಚ್ಚು ಸುಸ್ಥಿರವೆಂಬ ಆತನ ನಂಬಿಕೆ. ಅದ್ದರಿಂದ ತನ್ನ ಕಥೆಯನ್ನು ಇಹಲೋಕದ ಭೋಗಾನುಭವದಿಂದ ಆರಂಭಿಸುತ್ತಾನೆ. ಭರತನು ಅಗರ್ಭಶ್ರೀಮಂತ. ಷಟ್ಖಂಡಗಳ ಭಂಡಾರಕ್ಕೆ ಒಡೆಯ. ನವನಿಧಿಗಳ ಸ್ವಾಮಿ. ಭೋಗಸಾಧನವಾದ ಕಾಮಿನಿಗೂ ಕೊರತೆಯಿಲ್ಲ; ತೊಂಬತ್ತಾರು ಸಾವಿರ ಹೆಂಡಿರು. ಆತ ಬಯಸಿದುದೆಲ್ಲಾ ಹಸ್ತಗತವಾಗಿದೆ. ಇಂದ್ರಿಯಗಳು ಕುಡಿಕುಡಿದು ತೇಗುವಷ್ಟು ಪರಿಕರಗಳು ಸಿದ್ಧವಾಗಿವೆ. ಇವು ನಿರ್ದುಷ್ಟವಾದ, ಧರ್ಮಬದ್ಧವಾದ ಪರಿಕರಗಳು. ಕವಿಯು ಧರ್ಮವನ್ನು ಕಡೆಗಣಿಸಿಲ್ಲ. ಅರ್ಥಕಾಮಗಳು ಅಡಿಯಾಳಾಗಿದ್ದರೂ ಜೀವದಯೆಯ ಮಹಾಧರ್ಮವನ್ನೂ ಪಂಚಾಣುವ್ರತಗಳನ್ನೂ ನಡೆಸುತ್ತಿರುವ ಕಥಾನಾಯಕನು

ಲೋಕದ ಕೋಲಾಹಲಕ್ಕೆ ಒಳಗಾಗಿಲ್ಲ. ಧರ್ಮದ ಎಲ್ಲೆಕಟ್ಟಿಸೋಗೇ ಸುಖಾನುಭವ ಮಾಡುತ್ತಿರುವ ರಾಜರ್ಷಿ, ಭರತ. ರತ್ನಾಕರನ ಅಭಿಪ್ರಾಯ ದಲ್ಲಿ ರಾಜರ್ಷಿಯೆಂದರೆ, ಆತನ ರತ್ನಾಕರಾಧೀಶ್ವರ ಶತಕದಲ್ಲಿ ಹೇಳಿರುವಂತೆ ಹೀಗಿರಬೇಕು—

ರಾಜಶ್ರೀಯೊಳನೇಕ ಕಾಮಿನಿಯರುಂಟಾಳಾಪ ನೃತ್ಯಂಗಳುಂ
ಟಾ ಜಿಹ್ವಾರುಚಿಯುಂಟು ಕಾಮಿಸಿದುವೆಲ್ಲಾ ವುಂಟು ಉಂಟಾದೊಡಂ
ರಾಜೀವಂ ಕೆಸರಲ್ಲಿಯಲ್ಲದವೊಲಿದ್ದೂರ್ಧ್ವಕ್ಕೆ ಕಣ್ಣಿಟ್ಟೊಡಾ
ರಾಜಂ ರಾಜನೆ ತಾನೆ ರಾಜಋಷಿಯೈ ರತ್ನಾಕರಾಧೀಶ್ವರಾ

ಭರತನು ಆ ಬಗೆಯಾದ ಆದರ್ಶ ರಾಜಋಷಿ. ಶೃಂಗಾರ ಸರಸಿಯಲ್ಲಿ ತೇಲುತ್ತಿರುವ ಕಮಲದಂತಿರುವ ಭರತಚಕ್ರಿ ಅದಾವ ನಿಮಿಷದಲ್ಲಿಯೊ ಅವುಗಳ ಸ್ವರ್ಣಶೃಂಖಲೆಯಿಂದ ಮುಕ್ತನಾಗಿ ಬ್ರಹ್ಮಾನಂದದಲ್ಲಿ ತಲ್ಲೀನನಾಗುತ್ತಾನೆ. ಮಡದಿಯಾದ ಕುಸುಮಾಜಿಯ ಮನೆಯಲ್ಲಿ ಸುಖಭೋಜನ ಮಾಡಿ ವೀಳೆಯವನ್ನು ಸವಿಯುತ್ತಾ, ಸಂಗೀತವನ್ನು ಕೇಳುತ್ತಾ, ಭೋಗದಲ್ಲಿ ತಲ್ಲೀನನಾಗಿದ್ದನಲ್ಲವೆ? ಭರತನು ಭೋಗಪರಿಕರಗಳ ಸ್ವರ್ಣಶೃಂಖಲೆಯಲ್ಲಿ ಬದ್ಧನಾಗಿರುವಂತೆ ಕಾಣಿಸಿದ. ಆದರೆ ಮರುನಿಮಿಷದಲ್ಲಿಯೇ ಆತನು ಕಣ್ಮುಚ್ಚಿ ಚಿನ್ಮಯ ಮೂರ್ತಿಯನ್ನು ಒಳಗಣ್ಣಿನಿಂದ ಕಾಣುತ್ತಾ ಯೋಗಿಯಾದನು.

ಮರದನಾಗಳೆಯಿಪ್ಪ್ಪ ಹೊತ್ತು ನಲ್ಲಳಕೂಡೆ| ಮೆರೆದುದು ಹಳೆಮೆರಹಾಯ್ತು | ಅರಿದನಾಗಳೆ ಕಂಡನಾಗಳೆ ಹಂಸನ | ಕುರುಹನಾ ರಾಜಯೋಗೀಂದ್ರ |

ಸಂದು ಭೋಗದೊಳಿದ್ದು ಯೋಗಕೆ ಸಲುವಾಗ| ಹಿಂದಣ ವಾಸನೆಯಿಲ್ಲ| ಒಂದ ಬಿಟ್ಟೊಂದು ವಸ್ತ್ರವ ಹೊದೆವಂತಿಹು| ದೆಂದೆಂದು ಭಾವವಾ ನೃಪಗೆ

ತನುವೆ ಜಿನಾಲಯ, ಮನವೆ ಸಿಂಹಾಸನ| ವನುಪಮಾತ್ಮನೆ ಜಿನನೆಂದು| ತನಗಾಗಿ ತನ್ನಿಂದ ತಾ ನೋಡುತಿ| ರ್ದನು ಸರ್ವಚಿಂತೆಯ ನೀಗಿ.
ಭರತನ ಆಳವನ್ನು ಅರಿಯುವುದೇ ಯಾರಿಗೂ ಅಸಾಧ್ಯ. ಶ್ರೀಕೃಷ್ಣನಂತೆ ಈತನೂ ಪದ್ಮಪತ್ರಮಿವಾಂಭಸ. ಓದುವವರಿಗೆ ಶೃಂಗಾರ ಪೂರಿತವೆಂದು

ಕಾಣುವುದೂ ಕವಿಯ ದೃಷ್ಟಿಯಲ್ಲಿ ಅಂತಹುದಲ್ಲ. ಅವನ ಮಾತಿನಲ್ಲಿ ಹೇಳು ವುದಾದರೆ ಭರತನು 'ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ, ಭೂಮಂಡಲ ವಿದ್ದು ನಿಸ್ಸೀಮು'. ಕವಿಯು ತನ್ನ ಕಾವ್ಯಸಾಗರದಲ್ಲಿ ಭೋಗದ ಅಲೆಯೊಂ ದನ್ನು ಎಬ್ಬಿಸಿ, ಅದರ ಹಿಂದೆಯೇ ತ್ಯಾಗದ ಅಲೆಯನ್ನೂ ಕಳುಹಿಸಿ ಕೊಡುತ್ತಾನೆ. ಎರಡರ ರಭಸವೂ ಒಂದೇ ಬಗೆಯಾದುದು. ಕವಿ ತನ್ನ ನಾಯಕನನ್ನು ಕುರಿತು—

ಡೊರೆಯೆದ್ದು ಹೋಗೆನೆ ಹೋಗಿ, ಬಾರೆಂದರೆ | ಬರುತಿಹ ಸೇವಕನಂತೆ
ಕರಣ ನಾಲ್ಕಿಂದ್ರಿಯ ವೈದವನುಸುರಿದಂ | ತಿರುತಿಹವೇನ ಬಣ್ಣಿಪೆನು
ಬೇಕಾದರಾಡಿಸಿ ಗಾಳಿಪಟವನರ್ತಿ| ಸಾಕಾಗೆ ಸುರುಳುವನಂತೆ
ನೂಕಿ ಚಿತ್ತವ ಹೊರಗಾಡಿಸುವನು ತನ್ನೊ | ಳೇಕವಾಗಿರಿಸುವನೊಮ್ಮೆ.

ಎಂದು ಹೇಳಿರುವ ಮಾತು ಆತನ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ಶೃಂಗಾರ–ಚಿದಂಬರಧ್ಯಾನಗಳು ಭರತನ ಜೀವನದಲ್ಲಿ ಕಣ್ಣುಮುಚ್ಚಾಲೆ ಯಾಡುತ್ತಿವೆ. ಆತನ ಜೀವನದಲ್ಲೆಲ್ಲಾ ಭೋಗ ಯೋಗಗಳ ಸಮತೂಕ ಸ್ಪಷ್ಟವಾಗಿ ಕಂಡುಬರುತ್ತದೆ. ಭೋಗಮೂಲವಾದ ಶೃಂಗಾರವನ್ನೂ ಯೋಗ ಮೂಲವಾದ ತ್ಯಾಗವನ್ನೂ ಪರಸ್ಪರ ವಿರುದ್ಧವಾಗದಂತೆ ಪ್ರದರ್ಶಿಸಿ, ಭೋಗ ಯೋಗಗಳ ಸಮನ್ವಯ ತತ್ವವನ್ನು ಪ್ರತಿಪಾದಿಸುವುದೇ ರತ್ನಾಕರನ ಕಾವ್ಯ ಸಿದ್ಧಿ. ಕವಿ ಕುವೆಂಪುರವರು ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಭರತೇಶವೈಭವಕ್ಕೆ ಮುನ್ನುಡಿಯನ್ನು ಬರೆಯುತ್ತಾ 'ರತ್ನಾಕರವರ್ಣಿ ನಿಜ ವಾಗಿಯೂ ಮಹಾಕವಿ ಎಂಬ ಹೆಸರಿಗೆ ಅದರ ಸಂಪೂರ್ಣಾರ್ಥದಲ್ಲಿ ಅರ್ಹ ನಾಗುತ್ತಾನೆ; ಇದು ಔಪಚಾರಿಕವಲ್ಲ. ಭರತೇಶವೈಭವದಲ್ಲಿ ತ್ಯಾಗ ಭೋಗಗಳ ಸಮನ್ವಯದ ಯೋಗದರ್ಶನವನ್ನು ಕವಿ ಸುಂದರವಾಗಿ ಪ್ರತಿಮಿ ಸಿದ್ದಾನೆ. ಅಷ್ಟೇ ಅಲ್ಲ. ಕವಿ ಆದರ್ಶವನ್ನು ಭರತನ ಜೀವನದಲ್ಲಿ ಮಾತ್ರವೇ ಅಲ್ಲದೆ ಇಡೀ ಕಾವ್ಯದ ವಿವರವಿವರಗಳಲ್ಲೆಲ್ಲಾ ಬುದ್ಧಿಪೂರ್ವಕವಾಗಿ ಪ್ರತಿ ಮಿಸಿರುವುದನ್ನು ನೋಡಿದರಂತೂ ಇಂತಹ ಕಾವ್ಯಸೃಷ್ಟಿ ಜಗತ್ತಿನಲ್ಲಿ ಮತ್ತಾವ ಸಾಹಿತ್ಯದಲ್ಲೂ ಆಗಿರುವಂತೆ ಕಾಣುವುದಿಲ್ಲ. ಈ ದೃಷ್ಟಿಯಿಂದ ಈ ಕೃತಿ ಜಗತ್‌ಕೃತಿ' ಎಂದು ಹೇಳಿರುವುದು ಕವಿಯ ಹಿರಿತನಕ್ಕೆ ಹಿಡಿದ ಸೊಡರಿನಂತಿದೆ.

ನಮ್ಮ ಸಾಹಿತ್ಯದ ಬಹುಭಾಗ ಚರ್ವಿತ ಚರ್ವಣ, ಪಿಷ್ಟಪೇಷಣ. ಸಂಪ್ರದಾಯದ ಕಟ್ಟಿಗೆ ಸಿಕ್ಕಿ ಅದರ ಬಹುಭಾಗ ಕೊಳೆತು ನಾರುತ್ತಿದೆ. ಆ ಕವಿಸಮಯ, ಆ ಅಷ್ಟಾದಶವರ್ಣನೆ ಇತ್ಯಾದಿಗಳು ಒಮ್ಮೊಮ್ಮೆ ಮಹಾಕವಿಗಳಿಗೂ ಗ್ರಹಬಾಧೆ ಬಡಿದಂತೆ ಬಂದು ಕಾವ್ಯವನ್ನು ತುಂಬುತ್ತವೆ. ರತ್ನಾಕರ ಈ ಪೀಡೆಯಿಂದ ದೂರನಾಗಿದ್ದಾನೆ. ಆತನು ಕಾವ್ಯರಚನೆ ಮಾಡುತ್ತಿರುವುದು ಜನರು ಅವುಗಳನ್ನು ಓದಿ ರಸಾಸ್ವಾದನೆ ಮಾಡಲೆಂದೇ ಹೊರತು ವಿದ್ವಜ್ಜನಗೋಷ್ಠಿಯಲ್ಲಿ ಬಿರುದು ಬಾವಲಿಗಳನ್ನು ಪಡೆಯಲೆಂದಲ್ಲ. ಮನಸ್ಸು ಮಾಡಿದರೆ ತಾನೂ 'ಓದುಗಬ್ಬ' ಬರೆಯಬಲ್ಲ. ಆದರೆ ಆ ಹೆಪ್ಪುಗಟ್ಟಿದ ಪಾಂಡಿತ್ಯ ಆತನಿಗೆ ಬೇಡ. 'ಕಬ್ಬಿನಂತಿರಬೇಕು, ಬಿದಿರಂತೆ ರಚಿಸಲೇಕಬ್ಬೆ ಹೇಳಲೆ ಸರಸ್ವತಿಯೆ' ಎಂದು ಸರಸ್ವತಿಯನ್ನು ಪ್ರಾರ್ಥಿಸುತ್ತಾನೆ. ತನ್ನ ಕಾವ್ಯದ ಸ್ವರೂಪವನ್ನು ಓದುಗರಿಗೆ ತಿಳಿಸುತ್ತಾನೆ. ತನ್ನ ಕಾವ್ಯವನ್ನು ಓದಿದರೆ 'ಅಯ್ಯಯ್ಯ! ಚನ್ನಾದುದು' ಎಂದು ಕನ್ನಡಿಗರು ಮಾತ್ರವೇ ಅಲ್ಲ, 'ರಯ್ಯಾ ಮಂಚಿದಿ' ಎಂದು ತೆಲುಗರೂ, 'ಅಯ್ಯಯ್ಯ! ಎಂಚ ಪೊರ್ಲಾಂಡೆ'ದು ತುಳುವರೂ ಹೇಳುವಷ್ಟು ಸುಲಭವಾಗಿರಬೇಕು.

ರಳ ಕುಳ ಶಿಥಿಲ ಸಮಾಸ ಮುಂತಾದವ | ರೊಳಗಿಲ್ಲಿ ಕೆಲವುಳ್ಳದುಂಟು
ಕೆಲವಿಲ್ಲಾದರು ವಿಲ್ಲವೇಕೆಂದರವರ ಕೋ | ಟಲೆಯೇಕೆ ಹಾಡುಗಬ್ಬ ದೊಳು.

ಹಾಡುಗಬ್ಬವಿರುವುದು ಹೆಣ್ಣು ಮಕ್ಕಳಿಗೆ, ಮಕ್ಕಳಿಗೆ ಕೂಡ ಅರ್ಥ ಮಾಡಿಕೊಳ್ಳುವಂತಿರಬೇಕೆಂದು. ಆದ್ದರಿಂದ ಪಂಡಿತರಿಗೆ ಮಾತ್ರ ಮೆಚ್ಚಿಗೆಯಾಗಬಲ್ಲ ಕಾವ್ಯನಿಯಮಗಳನ್ನು ರತ್ನಾಕರ ನಿರ್ಲಕ್ಷಿಸಿದ್ದಾನೆ. ಆದ್ದರಿಂದಲೇ ಅಷ್ಟಾದಶ ವರ್ಣನೆಗಳನ್ನು ಕುರಿತು ಆತ

ಪ್ರಚುರದಿ ಪದಿನೆಂಟು ರಚನೆಯ ವಾಕ್ಯಕೆ | ರಚಿಸುವರಾನು ತು ಪೇಳೆ
ಉಚಿತಕೆ ತಕ್ಕಷ್ಟು ಪೇಳ್ವೆನಧ್ಯಾತ್ಮವೆ | ನಿಚತಪ್ರಯೋಜನವೆನಗೆ

ಎನ್ನುತ್ತಾನೆ. ಶಾಸ್ತ್ರಕಾರರ ನಿಯಮಗಳೇನಿದ್ದರೂ ವಸ್ತುಕಕ್ಕೇ ಹೊರತು ವರ್ಣಕಕ್ಕಲ್ಲವಂತೆ!

ಸಕಲ ಲಕ್ಷಣವು ವಸ್ತುಕಕೆ, ವರ್ಣಕಕೆಷ್ಟು | ವಿಕಳವಾದರೂ ದೋಷವಿಲ್ಲ

ಸಕಲ ಲಕ್ಷಣಕಾಗಿ ಬಿರುಸುಮಾಡಿದರೆ ಪು। ಸ್ತಕದ ಬದನೆಕಾಯ
ಹುದು

ಎನ್ನುತ್ತಾನೆ. ವೃಥಾ ಕಠಿಣಶೈಲಿಯಲ್ಲಿರುವ ಗ್ರಂಥಗಳು 'ಪುಸ್ತಕದ ಬದನೆಕಾಯ'ಲ್ಲದೆ ಮತ್ತೇನು? ಕೊನೆಗೆ ಶಬ್ದ ದೋಷಗಳು ಅಲ್ಲಲ್ಲಿ ಬಂದರೂ ಆತನು ಲಕ್ಷಿಸುವುದಿಲ್ಲವಂತೆ! ಆತ ಕೇಳುತ್ತಾನೆ

ಚಂದಿರನೊಳಗೆ ಕಪ್ಪುಂಟು ಬೆಳ್ದಿಂಗಳು। ಕಂದಿ ಕುಂದಿಹುದೋ
ನಿರ್ಮಲವೊ?
ಸಂಧಿಸಿ ಶಬ್ದದೋಷಗಳೊಮ್ಮೆ ಸುಕಥೆಗೆ, ಬಂದರೆ ಧರ್ಮ ಮಾಸು
ವುದೇ?

ಎಂದು. ತನ್ನ ಕಾವ್ಯದ ತಿರುಳು ಇದು—

ಆಗಮವಧ್ಯಾತ್ಮವಳವಟ್ಟು ಶೃಂಗಾರ। ತ್ಯಾಗಭೋಗದ ಮೋಡಿ
ಮೆರೆಯೆ
ಭೋಗಿ ಯೋಗಿಗಳಿದೆ ಜುಮ್ಮು ಜುಮ್ಮೆನೆ ನೇಮ। ದಾಗಿ ಸೊಲ್ಲಿಸು
ವೆನಾಲಿಸಿರೊ

ಎಂದು ಆತ ತನ್ನ ಓದುಗರಿಗೆ ತಿಳಿಸುತ್ತಾನೆ.

ರತ್ನಾಕರನ ಶೈಲಿ ಲಲಿತಮನೋಹರವಾಗಿದೆ; ಸುಲಭವಾಗಿದೆ. ಇದ್ದುದನ್ನು ಇದ್ದಂತೆ ವರ್ಣಿಸುವ ಚಾತುರ್ಯದಲ್ಲಿ ಆತನು ಸಿದ್ಧಹಸ್ತನಾಗಿದ್ದಾನೆ. ಜನರ ಅನುಭವದಲ್ಲಿರುವ ಹೋಲಿಕೆಗಳನ್ನು ತಂದು ನಮ್ಮ ಕಣ್ಣೆದುರಿಗೆ ನಿಲ್ಲಿಸುತ್ತಾನೆ. ಕುಂಭದ್ರೋಣದಂತೆ ಸುರಿವ ಮಳೆಯನ್ನು 'ಕಿರುಧಾರೆಯಿಲ್ಲ, ತೆಂಗಿನ ಮರಗಳ ತೋರ। ದುರುವ ಧಾರೆಗಳಿಡೆಬಿಡದೆ' ಸುರಿವುದೆಂದೂ ಹಾಗೆಯೇ ಪ್ಲವಗಳು ಹಬ್ಬವನ್ನು ಮಾಡಲು ಸೇವಗೆಯನ್ನು ಒತ್ತಲು ಇಳಿವ ಸೇವನೆಯಂತೆ ಇತ್ತೆಂದೂ ಗುಡುಗು 'ಕೊಡದ ಸಾಲಂದದ ಮುಗಿಲ ಕಾಮನಬಿಲ್ಲ ಬಡಿಗೆಯಿಂ ಬಡಿಯೆ' ಅವು ಒಡೆದ ಶಬ್ದದಂತಿತ್ತೆಂದೂ ವರ್ಣಿಸುತ್ತಾನೆ. ಕಣ್ಣಿಗೆ ಕಾಣದೆ ಕಿವಿಯಿಂದ ಮಾತ್ರ ಕೇಳಬಲ್ಲ ಸಂಗೀತವನ್ನಾಗಲಿ, ಅತ್ಯಂತ ಗಹನವಾದ ವೇದಾಂತ ವಿಚಾರಗಳನ್ನಾಗಲಿ ಕವಿಯು ಕಣ್ಣಿಗೆ ಕಟ್ಟುವಂತೆ ವರ್ಣಿಸಬಲ್ಲನೆಂಬುದನ್ನು ನಾವು ಈಗಾಗಲೇ ಕಂಡಿದ್ದೇವೆ. ಆತನ ಶೈಲಿಯಲ್ಲಿ ಕುಸುರಿಗೆಲಸ ಹೆಚ್ಚು. ವರ್ಣ

ನೀಯ ವಸ್ತುವಿನ ಪ್ರತಿಯೊಂದು ಪದರವನ್ನೂ ಜಕಣಾಚಾರಿಯಂತೆ ಬಿಚ್ಚಿ ತೋರಿಸುವ ಸ್ವಭಾವ. ಆದ್ದರಿಂದ ಒಂದೇ ಭಾವವನ್ನು ಎರಡೆರಡು ಸಲ ವಿವರಿಸಿ ಹೇಳುತ್ತಾನೆ. ಈತನ ಶೈಲಿಯಲ್ಲಿ ಒಂದು ಕುಂದೂ ಇದೆ. ಈತನಲ್ಲಿ ಉಗ್ರ ಭಾವಗಳಿಗೆ ಎಡೆಯಿಲ್ಲ. ಆದ್ದರಿಂದ ಒಂದು ಸತ್ವ ಕಡಮೆಯಾದಂತಾಗಿದೆ. ಕವಿಯ ಮನೋಭಾವ ಕೋಮಲವಾದುದು ಉಗ್ರಭಾವಗಳು ಆತನಲ್ಲಿ ಕಡಮೆ. ಆದರೆ ರತ್ನಾಕರನ ಕೈಲಿ ಸಾಂಗತ್ಯದ ಛಂದಸ್ಸು ತನ್ನ ಆದರ್ಶ ಸ್ಥಿತಿಯನ್ನು ಕಂಡುಕೊಂಡಿದೆ.

ಕನ್ನಡಮಾತೆಯ ಕೊರಳಲ್ಲಿ ದೇದಿಪ್ಯಮಾನವಾಗಿರುವ ಕವಿರತ್ನಗಳ ಮಾಲೆಯಲ್ಲಿ ರತ್ನಾಕರನು ಅತ್ಯಮೂಲ್ಯವಾದ ಒಂದು ನಾಯಕರತ್ನ.

**ವಿಜಯಣ್ಣ (ಸು. ೧೪೫೦) :**

ದೇವಚಂದ್ರನು ರಾಜಾವಳೀಕಥೆಯಲ್ಲಿ ವಿಜಯಣ್ಣನನ್ನು ರತ್ನಾಕರ ವರ್ಣಿಯ ಸಮಕಾಲಿಕನೆಂದು ಹೇಳಿರುವುದು ಭ್ರಾಂತಿಮೂಲವೆಂದು ಕವಿ ಚರಿತೆಕಾರರು ತೀರ್ಮಾನಿಸಿದ್ದಾರೆ. ಅದಕ್ಕೆ ಕಾರಣ ಅವರು ರತ್ನಾಕರನ ಕಾಲವನ್ನು ಕ್ರಿ. ಶ. ೧೫೫೭ಎಂಬ ತೀರ್ಮಾನಕ್ಕೆ ಬಂದಿರುವುದು. ಅವರ ತೀರ್ಮಾನ ಸರಿಯಲ್ಲವೆಂದು ತೋರುತ್ತದೆ ರತ್ನಾಕರನ ಕಾಲ ೧೪೫೭ ಎಂದು ಕವಿಯ ಗ್ರಂಥದಿಂದಲೆ ತಿಳಿದು ಬರುವುದರಿಂದ ಅವರಿಬ್ಬರೂ ಸಮ ಕಾಲೀನರಾಗಿದ್ದರೆಂಬುದೂ, ರತ್ನಾಕರನು ವಿಜಯಣ್ಣನ ದ್ವಾದಶಾನು ಪ್ರೇಕ್ಷೆಯ ಮೇಲಿನ ಸ್ಪರ್ಧೆಯಿಂದ ಕಾವ್ಯರಚನೆ ಮಾಡಿದನೆಂಬುದೂ ಅಸಂಭವವಲ್ಲವೆಂಬುದು ನಮ್ಮ ಮತ.

'ದ್ವಾದಶಾನುಪ್ರೇಕ್ಷೆ'ಯು ಅದರ ಹೆಸರೇ ಸೂಚಿಸುವಂತೆ ಹನ್ನೆರಡು ಅನುಪ್ರೇಕ್ಷೆ ಅಥವಾ ಚಿಂತನೆಗಳನ್ನು ನಿರೂಪಿಸುವ ಸಾಂಗತ್ಯರೂಪದ ಗ್ರಂಥ. ಅಲ್ಲಲ್ಲಿ ಕೆಲವು ಕಂದವೃತ್ತಗಳೂ ಇವೆ. ಜೈನಧರ್ಮವನ್ನು ಪ್ರತಿಪಾದಿಸುತ್ತಿರುವ ಈ ಗ್ರಂಥದಲ್ಲಿ ಮಹೋನ್ನತವಾದ ಸಾಹಿತ್ಯಗುಣಗಳೇನೂ ಇಲ್ಲ' ಆತನ ನಿರೂಪಣೆ ಸರಳವಾಗಿದೆ, ಸುಲಭವಾಗಿದೆ, ಹೃದ್ಯವಾಗಿದೆ.

ನಿನ್ನ ನೆಚ್ಚಿದ ದೇಹ ಹೆಂಡಿರು ಮಕ್ಕಳು । ನಿನ್ನ ಧನವ ತಿನ್ನುವರು
ನಿನ್ನನಂತಕ ಬಂದೆಳೆದೊಯ್ವ ವೇಳೆಯೊಳ್ । ನುಣ್ಣನೆ ಕೆಲಕೆ ಸಾರು
ವರು

ಜೀವನು ಪೋಗೆ ತಕ್ಷಣದಲ್ಲಿ ಹೆಣನೆಂದು | ಓವದೆ ಸುಡುವರು ಬೇಗ
ತೀವಿದ ಗುಣವಿಲ್ಲದಿರೆ ನಡೆವೆಣನೆಂಬ | ರೀ ವಿಧ ನೋಡಿರೆ ದೇಹ.

ರತ್ನಾಕರನಿಗೆ ಆಶ್ರಯದಾತನಾಗಿದ್ದ ದೇವಕವಿಯೇ ಈತನಿಗೂ ಆಶ್ರಯದಾತನಾಗಿದ್ದ. ಆತನ ಆಜ್ಞಾನುಸಾರವಾಗಿಯೇ ಈ ಕಾವ್ಯವನ್ನು ಬರೆದಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ಜೈನಧರ್ಮಕ್ಕೆ ಆಧಾರ ಗ್ರಂಥವಾಗಿರುವ 'ದ್ವಾದಶಾನುಪ್ರೇಕ್ಷೆ'ಯನ್ನು ಕನ್ನಡಕ್ಕೆ ತಂದುಕೊಟ್ಟ ಕೀರ್ತಿ ಈತನದು.

**ಶಿಶು ಮಾಯಣ ಅಥವಾ ತರಳ ಮಾಯಣ :**

ಹೊಯ್ಸಳದೇಶದಲ್ಲಿ ಕಾವೇರಿತೀರದ ನಯನಾಪುರದಲ್ಲಿದ್ದ ಮಾಯಣಸೆಟ್ಟಿ–ತಾಮರಸಿ ಎಂಬ ಜೈನ ದಂಪತಿಗಳಿಗೆ ಬೊಮ್ಮಿಸೆಟ್ಟಿ ಎಂಬ ಮಗನಿದ್ದನು. ವಣಿಗ್ವರನಾಗಿದ್ದ ಆತನು 'ಮಾನವಪತಿಗಳ ಸಭೆಯೊಳು ರತ್ನಸಮಾನ ದೀಪದವೊಲೊಪ್ಪುವನು.' ಆತನ ಮಡದಿಯಾದ ನೇಮಾಂಬಿಕೆಯ ಪುಣ್ಯಗರ್ಭದಲ್ಲಿ ತನ್ನ ತಾತನ ಹೆಸರಿಟ್ಟುಕೊಂಡು ಹುಟ್ಟಿದ ಶಿಶು ಮಾಯಣ. ಕಾಣೂರ್ಗಣದ ಭಾನುಮುನಿಯೆಂಬುವರಲ್ಲಿ ಶಿಷ್ಯನಾಗಿ ಜ್ಞಾನಾರ್ಜನೆ ಮಾಡಿದ ಮಾಯಣನು ಬೆಳುಕೆರೆಯ ಪುರದ ಅರಸನಾದ ಗುಮ್ಮಟ ದೇವನ ಅಪೇಕ್ಷೆಯಂತೆ 'ಅಂಜನಾಚರಿತೆ' ಯನ್ನು ಬರೆದನು. 'ತ್ರಿಪುರದಹನ ಸಾಂಗತ್ಯ' ಎಂಬ ಮತ್ತೊಂದು ಗ್ರಂಥವನ್ನೂ ಈತನು ಬರೆದಿದ್ದಾನೆ. ಈ ಗ್ರಂಥದಲ್ಲಿ ತಾನು ಕಾವ್ಯರಚನೆಮಾಡಿದ ಕಾಲವನ್ನು ಕವಿಯು ಕೊಟ್ಟಿದ್ದಾನೆ. ಆ ಪದ್ಯ ಹೀಗಿದೆ—

ಶಕವರ್ಷದ ಸಾವಿರದ ನಾನೂರರೊ | ಳ್ವಿಕಲವಾದಾರು ವತ್ಸರದ
ಪ್ರಕಟಿತ ಪುತ್ರವರ್ಷದ ಮಾಘ ಶುದ್ಧದಿ | ಯಕಳಂಕ ಪಾಡ್ಯದೊಳಾಯ್ತು

ಇದರ ಅರ್ಥ ೧೪೦೦ರಲ್ಲಿ ೬ ಕಡಿಮೆಯಾದ ಎಂದರೆ ೧೩೯೪ರ ನಂದನಸಂವತ್ಸರ ; ಎಂದರೆ ಕ್ರಿ. ಶ. ೧೪೭೨ ಆ ಗ್ರಂಥರಚನೆಯ ಕಾಲ ಎಂದಾಯಿತು. ಆದರೆ ಕವಿಚರಿತಕಾರರು 'ಶಕವರ್ಷದ ಸಾವಿರದ ನೂರರೊಳು | ತ್ಸಕಲವಾದಾರುವತ್ಸರದ' ಎಂದು ತಮ್ಮ ಗಮನಕ್ಕೆ ಬಂದ ಕೈಬರೆಹದ ಪಾಠಾಂತರವನ್ನಿಟ್ಟುಕೊಂಡು, ಅದರ ಅರ್ಥವಾಗದೆ, ಆತನ ಕಾಲ ಕ್ರಿ. ಶ. ೧೨೩೩ ಎಂಬುದಾಗಿ ಊಹಿಸಿದರು. ಇದರ ಫಲವಾಗಿ ಶಿಶುಮಾಯಣನ ಗ್ರಂಥಗಳೇ

ಸಾಂಗತ್ಯದ ಮೊಟ್ಟಮೊದಲ ಗ್ರಂಥಗಳೆಂಬ ಭಾವನೆ ಕೆಲವು ಕಾಲ ವಿದ್ವಾಂಸರ ಮನಸ್ಸಿನಲ್ಲಿತ್ತು. ಈಗ ಆತನ ಕಾಲ ಹದಿನೈದನೆಯ ಶತಮಾನದ ಉತ್ತರಾರ್ಧಕ್ಕೆ ಇಳಿದಿರುವುದರಿಂದ ಆತನಿಗೆ ಪ್ರಥಮ ಸಾಂಗತ್ಯಕಾರನ ಪಟ್ಟ ತಪ್ಪಿರುವುದಾದರೂ ಆತನ ಕಾವ್ಯಗಳಿಗಿರುವ ಮನ್ನಣೆಗೇನೂ ಅಪೋಹ ಬಂದಿಲ್ಲ. ಆತನ ಕಾವ್ಯಗಳೆರಡೂ ಸರಳವಾಗಿ ಸರಾಗವಾಗಿ ಹರಿದುಕೊಂಡು ಹೋಗುವ ಸಾಂಗತ್ಯದಲ್ಲಿವೆ. ಸಾಂಗತ್ಯಕಾರರ ಇತಿಹಾಸದಲ್ಲಿ, ಸಾಂಗತ್ಯದ ಬೆಳವಣಿಗೆಯಲ್ಲಿ ಶಿಶುಮಾಯಣನಿಗೆ ಶ್ರೇಷ್ಠವಾದ ಒಂದು ಸ್ಥಾನವಿದೆ.

ಶಿಶುಮಾಯಣನು ಬಹು ನಮ್ರ ಸ್ವಭಾವದ ಕವಿ. ತನ್ನ ಹೆಸರಿಗೆ ಕಾರಣ ಕೊಡುತ್ತಾ—

ವಸುಧೆಯೊಳುಳ್ಳ ಭವ್ಯರುಗಳಿಗೆಲ್ಲರ್ಗೆ । ಶಿಸುವಾಗಿಪ್ಪುದರಿಂದ
ಉಸುರುವ ಪದಪದ್ಯದೊಳು ತನ್ನ ಪೆಸರನು । ಶಿಸುಳೆ ಮಾಯಣನೆಂದು
ಇಡುವ

ಎಂದು ಕವಿ ಹೇಳಿಕೊಂಡಿದ್ದಾನೆ. ತಾನೇನೂ ದೊಡ್ಡ ಪಂಡಿತನಲ್ಲ;'ಅಕ್ಷರ ಭೇದವರಿಯದೆನಗೆ, ಮತ್ತೆ ಲಕ್ಷಣಗಳು ಗೋಚರವೆ?' 'ಕವಿತೆಯ ಮಾರ್ಗದ ಸುವಿಚಾರಂಗಳ ವಿವರಿಪಡೇನೆಂದರಿಯೆ'. 'ಕೋವಿದರು ಕಾಳು ಮಾಡಿ ನುಡಿಯದೆ ತಪ್ಪು ತಿದ್ದಿ ಲಾಲಿಪುದು.' 'ಬಾಲಕ ತೊದಲ್ನುಡಿಯನು ತಂದೆ ತಾಯಿಗಳಾಲಿಸಿ ಕೇಳ್ದು ತಪ್ಪಿರಲು, ಆಳೋಕಿಸರಂತೆ ಕೃತಿ ದೋಷವಿರೆ ತಿದ್ದಿ, ಬಾಲನಹೆನು ನಾ ನಿಮಗೆ' ಎಂದು ಹೇಳಿಕೊಳ್ಳುತ್ತಾನೆ. ಕವಿಯ ಈ ನಮ್ರತೆಯನ್ನು ನಾವು ಮೆಚ್ಚಬಹುದು. ಆತನು ಮಹಾಕವಿಯಲ್ಲದಿದ್ದರೂ ಜನಪ್ರಿಯನಾದ ಕವಿಯಾಗಿದ್ದಾನೆ.

ಶಿಶುಮಾಯಣನ 'ತ್ರಿಪುರದಹನ ಸಾಂಗತ್ಯ' ೨೮೦ ಪದ್ಯಗಳನ್ನು ಒಳಗೊಂಡ ಒಂದು ಪುಟ್ಟ ಗ್ರಂಥ. ಇದು ಸಂಸ್ಕೃತದಲ್ಲಿರುವ 'ಪ್ರಬೋಧ ಚಂದ್ರೋದಯ' ನಾಟಕದಂತೆ ಒಂದು ಲಕ್ಷ್ಯಕಾವ್ಯ. ಶೈವಪುರಾಣಗಳಲ್ಲಿ ಪ್ರಸಿದ್ಧವಾಗಿರುವ ತ್ರಿಪುರ ದಹನದ ಕಥೆಗೆ ಬದಲಾಗಿ ಜನನ ಜರಾಮರಣಗಳೆಂಬುವೇ ತ್ರಿಪುರಗಳೆಂದೂ ಜಿನೇಶ್ವರನು ಇವುಗಳ ಸಂಹಾರಕರ್ತನೆಂದೂ ಕವಿ ಸಂಭಾವಿಸಿಕೊಂಡಿದ್ದಾನೆ. ಇದಕ್ಕೆ ತಕ್ಕಂತೆ ಮಾಯಾಸುರನನ್ನು ತ್ರಿಪುರಗಳ ರಾಜನೆಂದೂ, ಮಾಯೆಯು ಅವನ ರಾಣಿಯೆಂದೂ, ನರ, ಸ.ರ

ನಾರಕ, ತಿರ್ಯಕ್‌ಗಳೆಂಬ ನಾಲ್ವರು ಪುತ್ರರೆಂದೂ ಕ್ರೋಧ, ಲೋಭ ಇತ್ಯಾದಿಗಳು ಮಂತ್ರಿಗಳೆಂದೂ ನಾನಾ ಕರ್ಮ ಪರಿವಾರವೆಂದೂ ಕವಿಯು ನಿರೂಪಿಸಿದ್ದಾನೆ. ಶೈವಪುರಾಣಾಂತರ್ಗತವಾದ ವಿವರಣೆಗಳೆಲ್ಲಕ್ಕೂ ಇಲ್ಲಿ ಸಾಂಕೇತಿಕವಾದ ಬೇರೆ ವಿವರಣೆಗಳು ಕಾಣಬರುತ್ತವೆ. ಜಿನನ ಹಣೆಯಲ್ಲಿ ಕೇವಲ ಬೋಧವೆಂಬ ಮೂರನೆಯ ಕಣ್ಣು ಹುಟ್ಟಿ ಅದರಿಂದ ತ್ರಿಪುರಗಳು ಮತ್ತೆ ಹುಟ್ಟದಂತೆ ಆತನು ಸುಟ್ಟು ಹಾಕಿದನು. ಜಿನನು ಪರಮದಯಾಳು. ಮೋಹಾಸುರನನ್ನು ಕೊಲ್ಲಲಿಲ್ಲ. ಹೆಡಗೈಕಟ್ಟಿ ತಂದು ತನ್ನ ಪಾದದಲ್ಲಿ ಕೆಡಹಿದ ಆ ರಕ್ಕಸನನ್ನು ಕಂಡು ಆತನು

‘ ಪದಕೆರಗಿದ ಮೋಹನನನಾದೀಶ್ವರ । ಬೆದರದಿರೆನುತಭಯವನು
ಮುದದೀವುತಘಟನು ಬಿಟ್ಟಾಳು ಬೆಸನದಿ । ಪದುಳದೊಳಿರು ಹೋಗು’

ಎಂದನಂತೆ! ಪರಶಿವನಿಗಿಂತಲೂ ಪುರುಪರಮೇಶ್ವರ ಹೆಚ್ಚು ಕರುಣಾಳು ಎಂದು ಸ್ಥಾಪಿಸಿ ಸಂತೋಷಪಟ್ಟುಕೊಂಡಿದ್ದಾನೆ, ಕವಿ.

ಶಿಶುಮಾಯಣನ ಅಂಜನಾಚರಿತವು ಆರು ಸಹಸ್ರ ಪದ್ಯಗಳ ಬೃಹದ್ಗ್ರಂಥ. ರವಿಷೇಣನು ಸಂಸ್ಕೃತದಲ್ಲಿ ಬರೆದಿರುವ ‘ ಪದ್ಮಚರಿತ್ರ’ ಎಂದರೆ ಜೈನರಾಮಾಯಣದಲ್ಲಿ ಬರುವ ಅಂಜನೆ ಮತ್ತು ಅವಳ ಮಗನಾದ ಆಂಜನೇಯ ಇವರ ಕಥೆಯನ್ನು ಇಲ್ಲಿ ಕವಿ ವಿಸ್ತರಿಸಿ ಬರೆದಿದ್ದಾನೆ. ಕವಿಯು ತನ್ನ ಕಾವ್ಯವನ್ನು ಕುರಿತು

ಅಂಜನಾ ಚರಿತವೆಂದೆಂಬ ನಾಮವು ಕೃತಿ । ಗೆಂಜಲಲ್ಲನ್ವರ್ಥಕವು
ಕಂಜಭವನ ರಾಣಿಯ ನಯನದೊಳಿಸೆ । ವಂಜನವಾದ ಕಾರಣದಿ

ಎಂದು ಹೇಳುತ್ತಾನೆ. ಈತನ ವರ್ಣನೆಗಳಲ್ಲಿ ಸಹಜತೆಯಿದೆ. ಇದು ಬಾಳೆಯ ವರ್ಣನೆ—

ಕಂದಿನೊಳಗೆ ಹುಟ್ಟಿ ಕಂದರೆಲ್ಲರ ಬಿಟ್ಟು । ಮುಂದಲೆಯನು ಕೊಟ್ಟುಜನದ
ನಿಂದೆಯೊಳೊಂದಿ ಬಾಳುವ ಬಾಳ ಸುಡಲೆಂದು । ನೊಂದೆರಗಿದ
ಬಾಳೆಯಿಹವು.

ಬಾಳೆಯ ಬಾಳು ಹಾಗಾದರೆ ಹುಣಿಸೆಯ ಹುಮ್ಮಸ್ಸನ್ನು ನೋಡಿ–

ಒಮ್ಮೆ ಫಲವನಿತ್ತು ಸುಮ್ಮನೆಯಿಹ ತರು । ವೆಮ್ಮೊಳು ಮಚ್ಚರಿಸಿದೊಡೆ
ಹಮ್ಮು ಮುರಿವೆನೆಂಬ ಹುಣಿಸೆಯ ಮರಗಳು । ಸುಮ್ಮಾನದಿ ಬೆಳೆದಿಹವು

ಕವಿಯಲ್ಲಿ ಮಹೋನ್ನತ ಭಾವಗಳಿಲ್ಲ. ಇವೆಯೆಂದು ಆತ ಹೇಳಿಕೊಂಡೂ ಇಲ್ಲ. ಆತನ ದೃಷ್ಟಿಯಿರುವುದು ಜನಸಾಮಾನ್ಯರ ಸಂತೋಷ. ಆತನ ಕಾವ್ಯಗಳು ಅದನ್ನು ನೀಡುತ್ತವೆ.

**ತೆರಕಣಾಂಬಿ ಬೊಮ್ಮರಸ**

ತಾನು 'ತೆರಕಣಾಂಬಿನಿವಾಸ ಪಾರ್ಶ್ವಜಿನೇಂದ್ರ ಚಂದ್ರಮನ ಚರಣಕಮಲ ಭ್ರಮರ'ನೆಂದು ಹೇಳಿಕೊಂಡಿರುವ ಬೊಮ್ಮರಸನು 'ಸನತ್ಕುಮಾರ ಚರಿತೆ,' 'ಜೀವಂಧರಸಾಂಗತ್ಯ'—ಎಂಬ ಎರಡು ಗ್ರಂಥಗಳ ಕರ್ತೃ. 'ಸನತ್ಕುಮಾರ ಚರಿತ್ರೆ'ಯಲ್ಲಿ ತನ್ನ ಮುತ್ತಾತನಾದ ನೇಮಿಚಂದ್ರನು ಪ್ರೌಢರಾಯನ (ಕ್ರಿ. ಶ. ೧೪೧೯) ಆಸ್ಥಾನದಲ್ಲಿ ವಿದ್ವಾಂಸರನ್ನು ವಾದದಲ್ಲಿ ಜಯಿಸಿದಂತೆ ಹೇಳಿಕೊಂಡಿರುವುದರಿಂದ ಕವಿಯು ಸು. ೧೪೮೫ರಲ್ಲಿ ಇದ್ದಿರಬಹುದೆಂದು ಊಹಿಸಲಾಗಿದೆ. ತಾನು 'ಬೊಮ್ಮರಸೋಪಾಧ್ಯಾಯ ಸುಕುಮಾರ'ನೆಂದು ಆ ಗ್ರಂಥದ ಕೊನೆಯಲ್ಲಿ ಕೊಟ್ಟಿರುವುದರಿಂದ ಈತನ ತಂದೆಯಾದ ಬೊಮ್ಮರಸನು ವಿದ್ವಾಂಸನಾಗಿದ್ದನೆಂದು ಊಹಿಸಬಹುದು. ಭಾಮಿನಿ ಷಟ್ಪದಿಯಲ್ಲಿರುವ 'ಸನತ್ಕುಮಾರ ಚರಿತ್ರೆ'ಯು ಎಂಟುನೂರ ಎಪ್ಪತ್ತು ಪದ್ಯಗಳನ್ನು ಒಳಗೊಂಡು, ಹಸ್ತಿನಾಪುರದ ರಾಜಕುಮಾರನಾದ ಸನತ್ಕುಮಾರನ ಕಥೆಯನ್ನು ತಿಳಿಸುತ್ತದೆ. ತನ್ನ ಕಾವ್ಯವು 'ಸೊಗಸುವಾತಿನ ಸೋನೆ', 'ಸದ್ಭಾವನೆಗಳ ಸರಿ' 'ನವರಸಗಳೊಸರುವ ಸಾರ' 'ಭೂಮಿಗೆ ಪೊಸತೆನಲು ರಂಜಿಪುದು' ಇತ್ಯಾದಿ ಧಾಟಿಯಲ್ಲಿ ಹೊಗಳಿಕೊಂಡಿದ್ದಾನೆ. ಇದು ಅತಿಶಯೋಕ್ತಿಯಾದರೂ ಕಥಾನಿರೂಪಣೆ ನೇರವಾಗಿದೆ, ಪದ್ಯಗಳ ಓಟ ಧಾರಾಳವಾಗಿದೆ, ವರ್ಣನೆಗಳಲ್ಲಿ ಸ್ವಲ್ಪಮಟ್ಟಿಗೆ ನೂತನತೆಯಿದೆ.

ಅರಗಿಳಿಗಳೋದುವ ಮಟವೊ ನು | ಣ್ಚರದ ಪಿಕಗಳ ಗಾನಶಾಲೆಯೊ
ಪಿರಿದು ನಟಿಸುವ ನವಿಲ ನಾಟಕ ಮಂಟಪವೊ ಬಿಡದೆ |
ಚರಿಸುವಂಚೆಗಳಾಡುವಂಗಣ | ಮೊರೆವ ಮಧುಪದ ಪ್ರೇಮದಾಲಯ
ವರ ವಸಂತನ ರಾಜಗೃಹವೆನೆ ವನವು ರಂಜಿಸಿತು ||

ಎಂಬ ವರ್ಣನೆ ಸರಳ ಸುಂದರವಾಗಿದೆ. ಕವಿಗೆ ಭಕ್ಷ್ಯ ಭೋಜ್ಯಗಳಲ್ಲಿ ಬಹು ಆದರ. ಉದ್ದಿನ ಕಡುಬನ್ನು ಕುರಿತು ಆತ ವರ್ಣಿಸಿರುವುದು ಬಾಯಲ್ಲಿ ನೀರೂರಿಸುತ್ತದೆ.

ಬಟ್ಟವೆರೆಯೊ, ಮಿಂಚಿನೊಬ್ಬುಳಿ | ಬಟ್ಟಿತಾದುದೊ, ಅಮೃತರಸಗಳ
ವಟ್ಟ ವೃತ್ತದ ಪಿಂಡವಾದುದೊ ಚಂದ್ರಿಕೆಯೆ ಬಂದು
ಘಟ್ಟಿಗೊಂಡಿತೊ ಎನಲು ನೋಳ್ಪರ| ದಿಟ್ಟಿಗೊಲವನು, ಮನಕೆ ಹರುಷವ
ಪುಟ್ಟಿ ಪುದ್ದಿನ ಕಡುಬ ಸವಿದರು........

ಹಾಗೆಯೆ ಬದನೆಯಕಾಯಿ ಬಜ್ಜಿ ಇತ್ಯಾದಿಗಳ ವರ್ಣನೆ ನಾಲಿಗೆ ಚಪ್ಪರಿಸುವಂತೆ ಮಾಡುತ್ತದೆ. ಕವಿಯ ಜೀವಂಧರಸಾಂಗತ್ಯ ಸುಮಾರು ೧೪೫೦ ಪದ್ಯಗಳನ್ನು ಒಳಗೊಂಡಿರುವ ಹಾಡುಗಬ್ಬ ; ರಾಜಪುರಿಯ ಸತ್ಯಂಧರ ರಾಜನ ಮಗನಾದ ಜೀವಂಧರನ ಕಥೆಯನ್ನು ನಿರೂಪಿಸುತ್ತದೆ. ಸಂಸಾರ ಸುಖ ಸ್ಥಿರವಲ್ಲವೆಂದು ಜಿನದೀಕ್ಷೆ ವಹಿಸಿ ಮುಕ್ತಿಗೆ ಸಂದವನು ಜೀವಂಧರ. ಆತನ ಕಥೆಯಿಂದ ಜನಸಾಮಾನ್ಯರು ಉದ್ಧಾರವಾಗಲೆಂಬುದು ಕವಿಯ ಆಶಯ. ಕಥೆಯು ಸರಳವಾದ ನಡಗೆಯಿಂದ ಜನಮೆಚ್ಚುಗೆಗೆ ಪಾತ್ರವಾಗಲು ಅರ್ಹವಾಗಿದೆ. ಕವಿಯ ವರ್ಣನೆಗಳು ಸುಂದರವಾಗಿವೆ. ಬೊಮ್ಮರಸನು ಮಹಾಕವಿಯಲ್ಲ ; ಒಳ್ಳೆಯ ಕವಿ.

ಕ್ರಿ. ಶ. ಸು. ೧೫೦೦ರಲ್ಲಿದ್ದ **ಕೋಟೀಶ್ವರನೂ** ಭಾಮಿನಿಷಟ್ಪದಿಯಲ್ಲಿ ಜೀವಂಧರಚರಿತ್ರೆ ಬರೆದಿದ್ದಾನೆ. ಅದು ಅಸಮಗ್ರವಾಗಿದೆ.

**ಮೂರನೆಯ ಮಂಗರಸ—**

ಮೊದಲನೆಯ ಮಂಗರಸ 'ಖಗೇಂದ್ರಮಣಿದರ್ಪಣ'ವೆಂಬ ವಿಷವೈದ್ಯಗ್ರಂಥವನ್ನು ಬರೆದವನು ; ಆತನ ವಿಚಾರವನ್ನು ಹಿಂದೆಯೇ ನೋಡಿದ್ದೇವೆ; ಎರಡನೆಯ ಮಂಗರಸನು ಕ್ರಿ. ಶ. ೧೩೯೮ ರಲ್ಲಿ ಮಂಗರಾಜನಿಘಂಟುವನ್ನು ಬರೆದವನು ; ಆತನಿಗೆ ಅಭಿನವ ಮಂಗರಾಜನೆಂದೂ ಹೆಸರಿದೆ. ಮೂರನೆಯ ಮಂಗರಾಜನು ಜಯನೃಪಕಾವ್ಯ, ನೇಮಿಜಿನೇಶ ಸಂಗತಿ, ಶ್ರೀಪಾಲ ಚರಿತ, ಪ್ರಭಂಜನ ಚರಿತ, ಸಂಯಕ್ತ್ವ ಕೌಮುದಿ, ಸೂಪಶಾಸ್ತ್ರ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಚೆಂಗಾಳ್ವಸಚಿವ ಕುಲೋದ್ಭವನಾದ ಕಲ್ಲಹಳ್ಳಿಯ ವಿಜಯ ಭೂಪಾಲನಿವನ ತಂದೆ ; ತಾಯಿ ದೇವಿಲೆ ; ಚಿಕ್ಕಪ್ರಭೇಂದು ಎಂಬುವನು ಈತನ ಗುರು. ಈತನಿಗೆ ಪ್ರಭುರಾಜ, ಪ್ರಭುಕುಲ ರತ್ನದೀಪ ಎಂಬ ಬಿರುದುಗಳಿವೆ. ತನ್ನ ತಂದೆಯು 'ರಣಕಭಿನವ ವಿಜಯಂ' ಎಂದು ಕರೆದುಕೊಂಡಿರುವುದರಿಂದ

ಆತನು ಯುದ್ಧವೀರನಾಗಿದ್ದನೆಂದು ಊಹಿಸಬಹುದು. ಈತನ ಕಾವ್ಯಗಳಲ್ಲಿ ಒಂದಾದ ಸಂಯುಕ್ತ್ವಕೌಮುದಿಯನ್ನು ಕ್ರಿ. ಶ. ೧೫೦೮ರಲ್ಲಿ ಬರೆದಿರುವುದಾಗಿ ಹೇಳಿಕೊಂಡಿರುವುದರಿಂದ ಈತನು ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿದ್ದವನೆಂದು ಹೇಳಬಹುದು.

ಮಂಗರಸನ ಗ್ರಂಥಗಳಲ್ಲಿ ಜಯನೃಪಕಾವ್ಯ ಪರಿವರ್ಧಿನೀ ಷಟ್ಪದಿಯಲ್ಲಿಯೂ ಸೂಪಶಾಸ್ತ್ರವು ವಾರ್ಧಕಷಟ್ಪದಿಯಲ್ಲಿಯೂ, ಸಂಯುಕ್ತ್ವಕೌಮುದಿಯು ಉದ್ದಂಡಷಟ್ಪದಿಯಲ್ಲಿಯೂ ಉಳಿದ ಮೂರು ಗ್ರಂಥಗಳೂ ಸಾಂಗತ್ಯದಲ್ಲಿಯೂ ಇವೆ. ಜಯನೃಪಕಾವ್ಯದಲ್ಲಿ ಕುರುಜಾಂಗಣದ ರಾಜಕುಮಾರ ಜಯನೃಪನ ಕಥೆ ಇದೆ. ಇದನ್ನು ಜಿನಸೇನನು ಸಂಸ್ಕೃತದಲ್ಲಿ ರಚಿಸಿದ್ದನಂತೆ. ಕವಿಯು ಹಾಲಲ್ಲಿ ಸಕ್ಕರೆ ಬೆರಸುವಂತೆ 'ಸಕ್ಕದದೊಳು ಕನ್ನಡವಾತಂ ಬೆರಸಿ' ರಚಿಸುತ್ತಿದ್ದಾನಂತೆ! ಕಥಾನಾಯಕನು ಪ್ರಥಮ ಚಕ್ರಿಯಾದ ಭರತನ ಸೇನಾಪತಿಯಾಗಿದ್ದವನು. ಇವನು ಮದುವೆಯ ಮೇಲೆ ಮದುವೆಮಾಡಿಕೊಂಡು ಶೃಂಗಾರ ಸರಿಸಿಯಲ್ಲಿ ತೇಲಾಡುವುದೇ ಇದರ ಕಥಾವಸ್ತು. ಸಾವಿರಕ್ಕಿಂತಲೂ ಹೆಚ್ಚು ಪದ್ಯಗಳನ್ನೊಳಗೊಂಡ ಈ ಗ್ರಂಥದಲ್ಲಿ ಹೆಚ್ಚು ಕಥೆಯೇನೂ ಇಲ್ಲ. ಆದರೆ ಮಂಗರಸನ ಪದಬಂಧ ಲಲಿತವಾಗಿದೆ. ಸ್ವಭಾವೋಕ್ತಿ ಹೃದಯಂಗಮವಾಗಿದೆ. ಈ ವಸಂತನ ಬರವನ್ನು ನೋಡಿ.

ಮೊತ್ತಮೊದಲ್ ಮೊಗಗಿಡಿಸಿದ ಹಿಮರುಜೆ
ಯೊತ್ತಂಬವ ನಳ್ಗಿಸುತಂ ಮೆಯ್ಯೊಳ್
ಪತ್ತಿದ ದರ್ದುರಮುಂ ಪರಿಪಡಿಸುತ್ತುದಿರ್ದೆಲೆದಲೆಗಳೊಳು
ಮತ್ತೆ ಚಿಗುರಸಿರದೊದವಿಸುತೂದುವ
ಮೆತ್ತನೆಲರನಮರ್ದೊತ್ತಿ ವನೌಷಧಿ
ಗುತ್ತಮ ವೈದ್ಯಂ ಬರ್ಪಂದದಿ ಬಂದೆಸೆದುದು ನವಚೈತ್ರಂ

ಹಿಮರೋಗದಿಂದ ತಲೆಬೋಳಾಗಿರುವ ಮರಗಳಿಗೆ ಹೊಸ ಎಲೆಗಳು ಮೂಡುವಂತೆ ವನೌಷಧಿ ಮಾಡುವ ಉತ್ತಮ ವೈದ್ಯನಂತೆ ನವಚೈತ್ರನು ಬಂದನಂತೆ! ತೆಂಗಾಳಿ ಅವನ ಗಾಯದಮೇಲೆ 'ಉಫ್' ಎಂದು ಮೆತ್ತಗೆ ಊದುವ ಉಸಿರು. ಕವಿಯ ಕಲ್ಪನೆ ನವೀನವಾಗಿರುವಂತೆ ಮನೋಹರವಾಗಿಯೂ

ಇದೆ. ಪರಿವರ್ಧಿನಿಯು ಇವನ ಕೈಲಿ ಕುಣಿಯುತ್ತಾ ಸಾಗುತ್ತಿದೆ.

ಮಂಗರಸನ 'ಸೂಪಶಾಸ್ತ್ರ'ವು ೩೫೬ ಪದ್ಯಗಳನ್ನೊಳಗೊಂಡ ಪಾಕ ಶಾಸ್ತ್ರದ ಗ್ರಂಥ. ಸಂಸ್ಕೃತದ ಸೂಪಶಾಸ್ತ್ರದಿಂದ ತನಗೆ ತಿಳಿದಷ್ಟನ್ನು ಎತ್ತಿ ಕೊಂಡು ಕನ್ನಡದಲ್ಲಿ ಬರೆಯುತ್ತಿದ್ದಾನಂತೆ! ನಳ, ಭೀಮ ಮೊದಲಾದ ಬಾಣಸವಿದ್ಯಾನಿಪುಣರ ಮತಾನುಸಾರವಾಗಿದೆಯಂತೆ, ಈತನ ಈ ಶಾಸ್ತ್ರ ಗ್ರಂಥ. 'ಪಿಷ್ಟಪಾಕ, ಪಾನಕ, ಕಳಮಾನ್ನಪಾಕ, ಶಾಕಪಾಕ' ಇತ್ಯಾದಿ ಷಡ್ರಸವಿಪಾಕ ಭೇದವನ್ನು ಪ್ರತಿಪಾದಿಸುತ್ತಿದ್ದಾನಂತೆ. ತನ್ನ ಕಾವ್ಯದಿಂದ ಇಹಪರಗಳು ಲಭಿಸುವುದೆಂದು ಕವಿಯ ಹೇಳಿಕೆ. ಜೀವಿಗಳ ದೇಹರಕ್ಷಣೆಗೆ ರೂಪ ರಸ ಗಂಧ ಸ್ಪರ್ಶಾದಿ ಭೋಗಗಳೇ ಮುಖ್ಯ ; ಆ ಭೋಗೋಪಭೋಗ ಗಳೊಳಗೆ, ರಸನೇಂದ್ರಿಯ ತುಷ್ಟಿಯಾದರೆ ಇಹಪರಸೌಖ್ಯವುಂಟಾಗುತ್ತದೆ ಯಂತೆ! ಆದ್ದರಿಂದಲೇ 'ಹಸನಾಗಿ ಪಾಕಮಂ ಮಾಳ್ಪ ವಿವರದ ಶಾಸ್ತ್ರಮಂ ಮನಂಗೊಂಡು ಪೇಳ್ವೆಂ' ಎನ್ನುತ್ತಾನೆ ಕವಿ. ಇದು ಹೆಣ್ಣುಮಕ್ಕಳಿಗೆ ಬಹು ಪ್ರಿಯವಾದ ಗ್ರಂಥವೆನ್ನುತ್ತಾನೆ ಆತ.

ಇದು ಹರುಷದಿಂದ ಲಾಲಿಸಿ ಕೇಳ್ವೆನೆಂದೆಂಬ
ಸುದತಿಯರ ಕಿವಿಗೆ ನವಮಾಣಿಕದ ಮಿಂಚೋಲೆ
ಯಿದು ಕಲಿವೆನೆಂದೋದುವಬಲೆಯರ ಬಾಯ್ದೆರೆಗೆ ನವಸುಧಾರಸದ ಪಿಂಡ
ಇದು ಪಾಕವಂ ಮಾಳ್ಪೆನೆಂದುಜ್ಜುಗಂ ಮಾಳ್ಪ
ಚದುರೆಯರ ಕೈಗೆ ನವರತ್ನಮುದ್ರಿಕೆ........

ಮಂಗರಸನು ಅನೇಕ ವಿಧವಾದ ತಿಂಡಿತೀರ್ಥಗಳನ್ನೂ ಅವುಗಳನ್ನು ತಯಾರಿಸುವ ವಿಧಾನವನ್ನೂ ಬಾಯಲ್ಲಿ ನೀರೂರುವಂತೆ ಬಣ್ಣಿಸಿ ಹೇಳು ತ್ತಾನೆ. ಪಾಕಶಾಸ್ತ್ರವನ್ನು ತನ್ನ ಪ್ರತಿಭೆಯಿಂದ ಕಲಾಕೃತಿಯಾಗಿ ಮಾಡಿ ದ್ದಾನೆ.

ಉದ್ದಂಡ ಷಟ್ಪದಿಯಲ್ಲಿರುವ **ಸಂಯುಕ್ತ್ವಕೌಮುದಿ** ೭೯೨ ಪದ್ಯ ಗಳನ್ನು ಒಳಗೊಂಡ ಒಂದು ಕಾವ್ಯ. ಅರ್ಹದ್ದಾಸನೆಂಬ ವೈಶ್ಯನ ಹೆಂಗಸರು ಹೇಳಿದ ಕಥೆಯನ್ನು ಉದಿತೋದಿತನೆಂಬ ರಾಜನು ಕೇಳಿ ಸಂಯುಕ್ತ್ವವನ್ನು ವಹಿಸಿ, ದೀಕ್ಷೆಯನ್ನು ಧರಿಸಿ ಸ್ವರ್ಗಲೋಕವನ್ನು ಪಡೆದನೆಂಬುದು ಇದರ ಕಥಾವಸ್ತು. ಕಾರ್ತಿಕಮಾಸದಲ್ಲಿ ನಡೆಯುವ ಕೌಮುದೀ ಉತ್ಸವದಲ್ಲಿ

ನಾಯಕನು ಸಂಯಕ್ತ್ವವನ್ನು ಪಡೆದನಾದುದರಿಂದ–ಉತ್ಸವದಲ್ಲಿ ವಿರಕ್ತಿ ಹೊಂದಿ ದೀಕ್ಷೆಯನ್ನು ವಹಿಸಿದುದರಿಂದ–ಇದಕ್ಕೆ 'ಸಂಯಕ್ತ್ವ ಕೌಮುದಿ' ಎಂಬ ಹೆಸರು ಬಂದಿದೆ. 'ಸುಗಮಮೆಂದೆನಿಪ ಷಟ್ಪದದೊಳು, ಸಕ್ಕದ ಗನ್ನಡವ ಬೆರಸಿ ಮೃದುಪಾಕಮಪ್ಪಂದದಿಂ ವಿರಚಿಸಿದೆಂ' ಎಂದು ಕವಿ ಹೇಳಿ ಕೊಂಡಿದ್ದಾನೆ. ತನ್ನ ಕಾವ್ಯದ ಮಾತುಗಳು 'ತರುಣಿಯರ ಬಿಂಬಾಧರಂ, ಇಂದುರುಚಿ, ಪೂವಿನ ತೊಡಂಬೆ, ಪೀಯೂಷಪಿಂಡಂ, ಜೇನಸೋನೆ, ಚೆಂದನದಣ್ಪು, ಕೋಗಿಲೆಯ ನುಣ್ಚರಂ' ಎಂದು ಹೇಳಿಕೊಂಡಿರುವುದು ತಕ್ಕ ಮಟ್ಟಿಗೆ ನಿಜ. ಈ ಕಥೆಯನ್ನು ಮಗಧದೇಶದ ಶ್ರೇಣಿಕಮಹಾರಾಜನಿಗೆ ಗೌತಮ ಗಣಧರರು ಹೇಳಿದರೆಂದು ಕಲ್ಪಿಸಲಾಗಿದೆ. ಕಥೆಯಲ್ಲಿ ಮತ್ತೆ ಕಥೆ ಗಳು ಬೆಳೆದುಕೊಂಡಿವೆ. ಸುಂದರವಾದ ಈ ಕಥೆಗಳು ಜಾನಪದ ಕಥೆಗಳ ಜಾತಿಗೆ ಸೇರಿದುವು. ಅವುಗಳ ತಿರುಳು ನೀತಿನಿರೂಪಣೆಯಾದರೂ ಹೊರಣ ಕ್ಕಿಂತ ಕಣಕ ಹೆಚ್ಚು ರುಚಿಕರವಾಗಿದೆ.

ಮಂಗರಸನ ಸಾಂಗತ್ಯಗ್ರಂಥಗಳಲ್ಲಿ ಪ್ರಭಂಜನಚರಿತೆ ಅಸಮಗ್ರವಾಗಿದೆ; ಸಮಗ್ರ ಗ್ರಂಥ ದೊರೆತಿಲ್ಲ. ಉಳಿದುವೆರಡೂ ಸಾವಿರದ ಐನೂರಕ್ಕಿಂತಲೂ ಹೆಚ್ಚು ಪದ್ಯಗಳನ್ನು ಒಳಗೊಂಡಿರುವ ಬೃಹದ್ಗ್ರಂಥಗಳು. ಅವುಗಳಲ್ಲಿ '**ಶ್ರೀಪಾಲಚರಿತೆ**' ಪುಂಡರೀಕಿಣೀಪುರದ ಗುಣಪಾಲರಾಜನ ಮಗ ಶ್ರೀ ಪಾಲನ ಕಥೆಯನ್ನು ಒಳಗೊಂಡಿದೆ. ತನ್ನ ಈ ಕಾವ್ಯವು.

ಇದು ಭಾವಕಜನ ಕರ್ಣವಿಭೂಷಣ। ಮಿದು ರಸಿಕರ ಚಿತ್ತದೆರಕ
ಇದು ವಾಣೀಮುಖ ಮಾಣಿಕ್ಯ ಮುಕುರ ಮ। ತ್ತಿದು ಶೃಂಗಾರಸುಧಾಬ್ಧಿ

ಎಂದು ಕವಿ ಹೇಳಿಕೊಂಡಿದ್ದಾನೆ. ಇರಬಹುದು. ಆತನ ವರ್ಣನೆಯಲ್ಲಿ ಇತರ ಕಡೆಗಳಂತೆ ಇಲ್ಲಿಯೂ ನಾವೀನ್ಯತೆ ಇದೆ, ರಮ್ಯತೆ ಇದೆ, ಸ್ವಾಭಾವಿ ಕತೆ ಇದೆ. ಇದೊಂದು ಕೊಳದ ವರ್ಣನೆ—

ಅಳಿಯೂಟಕೆ ವನದೊಡತಿ ಹೇಮಾಂಬುಜ। ದಲರ್ಗಳ ಕೆಲದಟ್ಟೆಸಹಿತ
ಒಲಿದಿಟ್ಟ ಬೆಳ್ಳಿಯ ಪರಿಯಾಣದಂತೆ ಪ। ಜ್ಜಳಿಸಿದುದಾ ಕಾಸಾರ.

**ಪ್ರಭಂಜನಚರಿತೆ**ಯಲ್ಲಿ ಶುಂಭದೇಶದ ಜಂಭಾಪುರದ ದೇವಸೇನ ರಾಜನ ಮಗ ಪ್ರಭಂಜನನ ಕಥೆ ಇದೆಯಂತೆ. ಕವಿಚರಿತೆಕಾರರು ಮಾದರಿ ಯಾಗಿ ಕೊಟ್ಟಿರುವ ಪದ್ಯಗಳನ್ನು ನೋಡಿದರೆ ಈ ಕಾವ್ಯವು ಸರಳಸುಂದರ

ವಾಗಿರುವಂತೆ ತೋರುತ್ತದೆ. ದುಷ್ಟ ಹೆಣ್ಣುಗಳ ಸ್ವಭಾವವನ್ನು ವರ್ಣಿಸುತ್ತಾ

ಮೊಲದ ಮಂಡೆಯಮೇಲೆ ಮೊಳೆಯಿಸುವರು ಕೊಂಬ |ನಲರನಾಗಸದೊ
ಳಾಗಿಪರು || ಹುಲಿಯ ಮೊಲೆಯ ಹಿಡಿದಾ ಹಾಲ ಕರೆವರು | ಲಲನಾಜನ
ಕದು ಸಹಜ.

ಎನ್ನುತ್ತಾನೆ. ಮೇರುಪರ್ವತದ ಈ ವರ್ಣನೆ ಭವ್ಯವಾಗಿದೆ.

ಅಂಬರವೆಸರ ಸುದತಿ ನರಲೋಕವೆಂ | ದೆಂಬ ಹಂಚಿನೊಳಂಜನವನು
ಇಂಬಿನೊಳಿಡಲೆಂದಿಟ್ಟ ಹಜ್ಜೊಡರೆಂ | ದೆಂಬಂತೆ ಮೇರುವೊಪ್ಪಿದುದು ||

ಕವಿಯ '**ನೇಮಿಜಿನೇಶ ಸಂಗತಿ**' ಅದರ ಹೆಸರೇ ಸೂಚಿಸುವಂತೆ ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿನಾಥನ ಕಥೆಯನ್ನು ಒಳಗೊಂಡ ಹಾಡುಗಬ್ಬ. ಇದು ಕವಿಯ ಪ್ರಥಮ ಕಾವ್ಯವಿರಬೇಕೆಂದು ಊಹಿಸುವುದುಂಟು. ಇದರ ಶೈಲಿಯನ್ನು ನೋಡಿದರೆ ಅದು ನಿಜವೆನ್ನಿಸುತ್ತದೆ. ಉಳಿದ ಕಾವ್ಯಗಳಲ್ಲಿ ಕಾಣಬರುವ ಓಟ ಧಾರಾಳಗಳು ಇಲ್ಲಿ ಇಲ್ಲ. ಆದರೂ ಇಲ್ಲಿನ ವರ್ಣನೆಗಳಲ್ಲಿ ಕವಿಹೃದಯವಿದೆ. ಇಲ್ಲಿನ ಯುದ್ಧವರ್ಣನೆಯಲ್ಲಿ ಸಹಜತೆ ಇದೆ; ಕವಿಯು ಕ್ಷತ್ರಿಯನೆಂಬುದಕ್ಕೆ, ಯುದ್ಧದಲ್ಲಿಭಾಗವಹಿಸಿದ್ದನೆಂಬುದಕ್ಕೆ ಸಾಕ್ಷಿ ದೊರೆಯುತ್ತದೆ. ಇಲ್ಲಿನ ಈ ಮಲ್ಲಿಗೆಯ ವರ್ಣನೆ ಸುಂದರವಾಗಿದೆ.

ಸ್ಮರನೆನ್ನ ಹೂವಿನ ಮಾರ್ಗಣದಿಂ ಹರಿ | ಹರ ವಿಧಿಗಳ ಗೆಲ್ದನೆಂದು
ಉರುಗಬ್ಬದಿಂ ಬಿಬ್ಬನೆ ಬಿರಿವಂದದಿ | ಬಿರಿದೊಪ್ಪಿದುವು ಮಲ್ಲಿಗೆಗಳು.

ಮಂಗರಸನು ತನ್ನ ಕಾವ್ಯಗಳಿಂದ ಕನ್ನಡದ ತುಷ್ಟಿಪುಷ್ಟಿಗಳಿಗೆ ತನ್ನ ಸೇವೆಯನ್ನು ಸಲ್ಲಿಸಿದ್ದಾನೆ. ಪ್ರಮಾಣದ ದೃಷ್ಟಿಯಿಂದ ಮಾತ್ರವೇ ಅಲ್ಲದೆ ಯೋಗ್ಯತೆಯಿಂದಲೂ ಆತನು ಆದರಣೀಯ.

**ಅಭಿನವ ವಾದಿವಿದ್ಯಾನಂದ :** ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ'ದಂತೆ 'ಕಾವ್ಯಸಾರ'ವೆಂಬ ಸಂಕಲನ ಗ್ರಂಥವೊಂದನ್ನು ಬರೆದ ಈ ಕವಿಯನ್ನು ನಗರದ ತಾಲ್ಲೋಕಿನಲ್ಲಿರುವ ಒಂದು ಶಾಸನದಲ್ಲಿ ವಿಶೇಷವಾಗಿ ಸ್ತುತಿಸಿರುವಂತೆ ಕಾಣಬರುತ್ತದೆ. ಈತನು ಪರವಾದಿಗಳನ್ನು ಸೋಲಿಸುವುದರಲ್ಲಿಯೂ ಉಪನ್ಯಾಸಮಾಡುವುದರಲ್ಲಿಯೂ ಅದ್ವಿತೀಯನಾದ ಜಾಣನಾಗಿದ್ದನಂತೆ ! ಆದ್ದರಿಂದಲೆ ಈತನಿಗೆ ವಾದಿ ವಿದ್ಯಾನಂದನೆಂಬ ಹೆಸರು ಬಂದಿರಬೇಕು. ಈತನನ್ನು ಸ್ತುತಿಸಿರುವ ಆ ಶಾಸನದಲ್ಲಿಯೇ ವಿಜಯನಗರದ

ಕೃಷ್ಣದೇವರಾಯ(೧೫೦೯-೧೫೨೯)ನ ಆಸ್ಥಾನದಲ್ಲಿಯೂ ಈತ ವಾದಿಗಳನ್ನು ಜಯಿಸಿದನೆಂದು ಹೇಳಿರುವುದರಿಂದ ಈತನ ಕಾಲ ಕ್ರಿ. ಶ. ಹದಿನಾರನೆಯ ಶತಮಾನದ ಆದಿಭಾಗವೆಂದು ಹೇಳಬೇಕಾಗುತ್ತದೆ. ಈತನು ಗೇರುಸೊಪ್ಪೆ ಪ್ರಾಂತದವನಾಗಿರಬೇಕು. ತನ್ನ ಕಾಲದವರೆಗೆ ಸುಪ್ರಸಿದ್ಧರಾದವರೆಂದು, ತನ್ನ ಗಮನಕ್ಕೆ ಬಂದ ಕವಿಗಳೆಲ್ಲರಿಂದಲೂ ಪದ್ಯಗಳನ್ನು ಆಯ್ದುಕೊಂಡು, ಬೇರೆಬೇರೆಯ ವರ್ಣನಾ ವಿಭಾಗಗಳಲ್ಲಿ ಉದ್ಧರಿಸಿದ್ದಾನೆ. ಮಲ್ಲಿಕಾರ್ಜುನನು ತನ್ನ ಸಂಕಲನದ ಪದ್ಯಗಳ ಕವಿ ಅಥವಾ ಕಾವ್ಯದ ಹೆಸರನ್ನು ಹೇಳಿರಲಿಲ್ಲ; ಅಭಿನವ ವಾದಿವಿದ್ಯಾನಂದನು ಕಾವ್ಯಗಳ ಹೆಸರನ್ನು ಹೇಳಿದ್ದಾನೆ. ಇದರಿಂದ ಆತನಿಗಿಂತಲೂ ಹಿಂದೆ ಇದ್ದ ಕವಿಕಾವ್ಯಗಳ ಕಾಲನಿರ್ಧಾರಕ್ಕೆ ಬಹಳ ಸಹಾಯಕವಾಗಿದೆ. ಅಜ್ಞಾತಕವಿಗಳ ಕೆಲವು ಚಾಟು ಪದ್ಯಗಳೂ ಮುಕ್ತಕಗಳೂ ಸಹ ಇರುವ ಈ ಸಂಗ್ರಹದಲ್ಲಿ ಸುಮಾರು ೧೧೪೦ ಪದ್ಯಗಳಿವೆ. ಅಭಿನವ ವಾದಿವಿದ್ಯಾನಂದನು ಬರಿಯ ಸಂಗ್ರಹಕಾರನಾಗಿರದೆ, ಕಾವ್ಯವೊಂದನ್ನು ರಚಿಸಿರುವುದಾಗಿಯೂ ಊಹಿಸಲು ಅವಕಾಶವಿದೆ.

**ಸಾಳ್ವಕವಿ :**

ಚಂದ್ರವಂಶದ ಬೈಯನೃಪ-ಶಂಕರಾಂಬಿಕೆಯರಿಗೆ ಮಲಿದೇವಿ ಎಂಬ ಮಗಳೂ ವಸುದಾನಮೇರು ಎಂಬ ಮಗನೂ ಜನಿಸಿದರು. ವಸುದಾನಮೇರು 'ಸಾಳ್ವಮಲ್ಲ'ನೆಂಬ ಹೆಸರಿನಿಂದ ರಾಜ್ಯಭಾರಮಾಡಿದನು. ಈತನಿಗೆ 'ಕವಿಸರೋವರ ರಾಜಹಂಸ' 'ಸಂಯಕ್ತ್ವ ಚೂಡಾಮಣಿ' ಇತ್ಯಾದಿ ಬಿರುದುಗಳಿದ್ದುವು. ಈ ಮಹಾರಾಜನೇ ಸಾಳ್ವಕವಿಯ ಪೋಷಕ. ರಾಜನ ಸೋದರಿಯಾದ ಮಲಿದೇವಿಗೆ ಸಾಳ್ವದೇವನೆಂಬ ಮಗನು ಹುಟ್ಟಿ, ಆತನೇ ಸಾಳ್ವಮಲ್ಲನ ನಂತರ ಪಟ್ಟಕ್ಕೆ ಬಂದನು. (ಬಹುಶಃ ಸಾಳ್ವಮಲ್ಲನಿಗೆ ಮಕ್ಕಳಿರಲಿಲ್ಲವೆಂದು ತೋರುತ್ತದೆ, ಸೋದರಿಯ ಮಗನನ್ನು ದತ್ತು ಮಾಡಿಕೊಂಡಿದ್ದನೋ ಏನೋ!) ಕವಿಯು ತನ್ನ ಪೋಷಕನಾದ ಸಾಳ್ವಮಲ್ಲ ಮತ್ತು ರಾಜನಾದ ಸಾಳ್ವದೇವ-ಇವರಿಬ್ಬರ ಅಪೇಕ್ಷೆಯಂತೆ ಭಾರತವೊಂದನ್ನು ಭಾಮಿನೀಷಟ್ಪದಿಯಲ್ಲಿ ಬರೆದನು—ಹೀಗೆಂದು ಸಾಳ್ವಕವಿ ತನ್ನ ಭಾರತದಲ್ಲಿ ಹೇಳಿಕೊಂಡಿದ್ದಾನೆ. ಈ ಭಾರತಕ್ಕೆ 'ಸಾಳ್ವಭಾರತ'ವೆಂದೇ ಹೆಸರಾಗಿದೆ. ಈ ಗ್ರಂಥವೇ ಅಲ್ಲದೆ 'ರಸರತ್ನಾಕರ' 'ವೈದ್ಯಸಾಂಗತ್ಯ' ಎಂಬ ಮತ್ತೆರಡು

ಗ್ರಂಥಗಳನ್ನೂ ಈತ ಬರೆದಿದ್ದಾನೆ. 'ಶಾರದಾವಿಲಾಸ'ವೆಂಬ ಗ್ರಂಥವೂ ಈತನದೇ ಇರಬಹುದೆಂದು ಊಹಿಸುತ್ತಾರೆ. ಕವಿಯ ತಂದೆ ಧರ್ಮಚಂದ್ರ, ಗುರು ದೇಶಿಗಣದ ಶ್ರುತಕೀರ್ತಿ. ಕವಿಯು ಕೀರ್ತಿಸಿರುವ ರಾಜರ ವಿಷಯ ಕ್ರಿ. ಶ. ೧೫೫೦ರ ಶಾಸನವೊಂದರಲ್ಲಿ ಕಂಡುಬರುವುದರಿಂದ ಕವಿಯು ಹದಿನಾರನೆಯ ಶತಮಾನದ ಮಧ್ಯಭಾಗ ಉತ್ತರಭಾಗಗಳಲ್ಲಿ ಇದ್ದವನೆಂದು ಊಹಿಸಬಹುದು.

ಸಾಳ್ವಭಾರತಕ್ಕೆ 'ನೇಮೀಶ್ವರ ಚರಿತೆ' ಎಂಬ ಹೆಸರೂ ಉಂಟು. ಇತರ ಜೈನಭಾರತಗಳಂತೆ ಇಲ್ಲಿಯೂ ಹರಿವಂಶ ಕುರುವಂಶಗಳ ಕಥೆ ಬರುತ್ತದೆ. ವೈದಿಕ ಭಾರತವನ್ನು ತೆಗಳುತ್ತಾ ಕವಿಯು—

ಕೊಲಿಸಿದಾತನೆ ದೇವ, ಕೊಂದ | ಗ್ಗಳಿಕೆಯಿಂದವೆ ಪುಣ್ಯ ಪುರುಷರು
ಪಲವುಮಾತೇನೈವರೊಡಹುಟ್ಟಿದರು ಸನ್ನುತರು
ಲಲನೆಯೊರ್ವಳನಾಳ್ದರೆಂಬೀ | ಪೊಲೆನುಡಿಗೆ ಕಿವಿಗುಡದೆ ಸಜ್ಜನ
ರೊಲಿದು ಚಿತ್ತೈಸುವುದು ಜಿನಪಾವನ ಚರಿತ್ರವನು

ಎಂದು ಹೇಳಿ, ಜೈನಭಾರತದ ಪಠಣದಿಂದ ಜನರು ಉದ್ಧಾರವಾಗಬೇಕೆಂದು ಬೋಧಿಸಿದ್ದಾನೆ. ತನ್ನ ಕಾವ್ಯವು

ನವರಸದ ನೆಲೆ, ಮಧುರಭಾವದ | ತವದಲಂಕಾರಂಗಳಿಂದೊ
ಪ್ಪುವ ವಿಮಲ ಲಲಿತಾಂಗ ಮೃದುಪದರಚನೆ ನೆರೆ ಮೆರೆವ
ವಿವಿಧ ಗುಣಗಣ ಸಿಳಯೆ ಸೊಬಗಿನ | ಸವಿಯು ಸೈವಳೆಗರೆವ ಮತ್ಕೃತಿ
ಯುವತಿ ಚದುರರ ಮನವನಿರ್ಕುಳಿಗೊಳ್ವುದಚ್ಚರಿಯೇ ?

ಎಂದು ತನ್ನ ಕಾವ್ಯದ ಹಿರಿಮೆಯನ್ನು ಘೋಷಿಸುತ್ತಾ ಪ್ರಶ್ನಿಸುತ್ತಾನೆ. ಆತನ ಭಾರತವನ್ನು ಓದಿ ಮನಸ್ಸು ರೋಮಾಂಚನಗೊಳ್ಳುವುದಾದರೆ ಅದು ಆಚ್ಚರಿಯೆಂದೇ ಹೇಳಬೇಕು. ಏಕೆಂದರೆ ಸಾಳ್ವಭಾರತದಲ್ಲಿ ಸಂಪ್ರದಾಯದ ಕಥೆಯಿದೆಯೇ ಹೊರತು ನಮ್ಮನ್ನು ರಸಲೋಕಕ್ಕೆ ಕರೆದೊಯ್ಯುವಂತಹ ಕಾವ್ಯಶಕ್ತಿಯನ್ನೇನೂ ಕವಿ ಪ್ರದರ್ಶಿಸಿಲ್ಲ. ಇದು ಹಾಡುಗವಿತೆಯಾದುದರಿಂದ ಇದರಲ್ಲಿ ರಳ ಕುಳ ಕ್ಷಳ ಪ್ರಾಸ ಶಿಥಿಲದ್ವಿತ್ವ ಇತ್ಯಾದಿ ಕೊರತೆಗಳನ್ನು ಗಮನಿಸಬಾರದೆಂದು ಕವಿ ಹೇಳಿದ್ದಾನೆ. ಕವಿಯ ಪಾಂಡಿತ್ಯದ ವಿಚಾರದಲ್ಲಿ ನಾವೇನೂ ಸಂದೇಹಪಡಬೇಕಾಗಿಲ್ಲ. ಆತನು ಪಂಡಿತಕವಿ.

ಆತನ ಹಿರಿತನವಿರುವುದು ಆತನ ಶಾಸ್ತ್ರಕಾವ್ಯಗಳಲ್ಲಿಯೇ. ಆತನ ಭಾರತವು ಒಂದು ಮಧ್ಯಮವರ್ಗಕ್ಕೆ ಸೇರಬಹುದಾದ ಕಾವ್ಯ, ಅಷ್ಟೆ.

ಸಾಳ್ವನ 'ರಸರತ್ನಾಕರ' ಅದರ ಹೆಸರಿಗೆ ತಕ್ಕಂತೆ ರಸಪ್ರಕ್ರಿಯೆಯನ್ನು ಪ್ರಮುಖವಾಗಿ ಪ್ರತಿಪಾದಿಸುವ ಒಂದು ಅಲಂಕಾರಶಾಸ್ತ್ರದ ಗ್ರಂಥ. ಇದರಲ್ಲಿ ಶೃಗಾರ ಪ್ರಪಂಚ, ರಸವಿವರಣೆ, ನಾಯಕ ನಾಯಿಕಾವಿವರಣೆ; ಭಾವಾಧಿಕರಣ ಎಂಬ ನಾಲ್ಕು ಆಶ್ವಾಸಗಳಿವೆ. ಅಮೃತಾನಂದಿ, ರುದ್ರಭಟ್ಟ, ಹೇಮಚಂದ್ರ, ನಾಗವರ್ಮ, ಕವಿಕಾಮ,-ಮೊದಲಾದವರ ಮಾರ್ಗದಿಂದ ರಸಭಾವಗಳನ್ನೆಲ್ಲಾ ಕನ್ನಡಿಸಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ರಸಪ್ರಕ್ರಿಯೆಯನ್ನು ಇದುವರೆಗೆ ಯಾರೂ ಹೇಳದಷ್ಟು ವಿಸ್ತಾರವಾಗಿ ತಾನು ಹೇಳುತ್ತಿರುವೆನೆಂದು ಕವಿ ಹೇಳಿಕೊಂಡಿರುವುದು ನಿಜವಾದ ಮಾತು. ಅಲ್ಲದೆ ಈ ಕವಿಯು ಪಂಪ, ರನ್ನ, ನೇಮಿಚಂದ್ರ ಇತ್ಯಾದಿ ಪ್ರಾಚೀನ ಕವಿಗಳಿಂದ ಎತ್ತಿಕೊಂಡ ನೂರಾರು ಉದಾಹರಣೆಗಳನ್ನು ತನ್ನ ಗ್ರಂಥದಲ್ಲಿ ಕೊಟ್ಟು, ಅದರ ಬೆಲೆಯನ್ನೂ ರಮ್ಯತೆಯನ್ನೂ ಹೆಚ್ಚಿಸಿದ್ದಾನೆ; ಶಾಸ್ತ್ರಗ್ರಂಥಕ್ಕೆ ಕಾವ್ಯದ ವಾತಾವರಣವನ್ನು ಕಲ್ಪಿಸಿಕೊಟ್ಟಿದ್ದಾನೆ. 'ರಸವಿಲ್ಲದಕಾವ್ಯಂ ನೀರಸಮದರಿಂ ಕೃತಿಗೆ ರಸಮೆ ಸಾರಂ' ಎಂದು ಹೇಳಿ ನವರಸಗಳ ಸ್ವರೂಪವನ್ನೂ ದಿಗ್ದರ್ಶಿಸಿದ್ದಾನೆ. ಆದರೂ ಶೃಂಗಾರರಸದಲ್ಲಿ ಆತನಿಗೆ ಇರುವ ವಿಶೇಷವಾದ ಆದರ ಈ ಗ್ರಂಥದಲ್ಲಿ ಸ್ಪಷ್ಟಪಡುತ್ತದೆ.

ಸಾಳ್ವಕವಿಯೇ ಬರೆದಿರಬಹುದಾದ ' ಶಾರದಾವಿಲಾಸ 'ವು ಕಾವ್ಯದ ಜೀವವೆಂದು ಹೇಳುವ ಧ್ವನಿಯನ್ನು ಪ್ರತಿಪಾದಿಸಹೊರಟಿದೆ. ಧ್ವನಿಯನ್ನು ಕುರಿತು ಹೇಳುವ ಗ್ರಂಥಗಳಲ್ಲಿ ಇದೇ ಮೊಟ್ಟ ಮೊದಲನೆಯದು. ಇದರ ಸಮಗ್ರಪ್ರತಿ ಸಿಕ್ಕಿಲ್ಲ; ಕೇವಲ ಎರಡನೆಯ ಆಶ್ವಾಸಮಾತ್ರ ಉಪಲಬ್ಧವಾಗಿದೆ. ಈ ಗ್ರಂಥದ ಉದಾಹರಣೆಯ ಪದ್ಯಗಳಲ್ಲಿ ಕವಿಯ ಪೋಷಕನ ಸ್ತುತಿರೂಪವಾದ ಪದ್ಯಗಳು ದೊರೆಯುವುದರಿಂದ ಇದನ್ನು ಆತನ ಕೀರ್ತಿ ವಿಸ್ತರಣೆಗಾಗಿ ಕವಿಯು ಬರೆದಿರಬಹುದೆಂದೂ, ಪ್ರಥಮಾಶ್ವಾಸವು ದೊರೆತಿದ್ದರೆ ಕವಿಯ ಮತ್ತು ಆತನ ಪೋಷಕನ ವಿವರಗಳೆಲ್ಲವೂ ದೊರೆಯುತ್ತಿದ್ದವೆಂದೂ ಕವಿಚರಿತೆಕಾರರು ಊಹಿಸುತ್ತಾರೆ. ಕವಿಯು 'ಕಾವ್ಯಪ್ರಕಾಶಿಕೆ' ' ಸಾಹಿತ್ಯ ಸುಧಾರ್ಣವ'ಗಳ ಹೆಸರನ್ನು ಹೇಳಿರುವುದರಿಂದ, ಅಲ್ಲಿಂದ ತನ್ನ

ಕಾವ್ಯಕ್ಕೆ ಸಾಮಗ್ರಿಯನ್ನು ಸಂಗ್ರಹಿಸಿರಬಹುದು.

ಸಾಳ್ವನ 'ವೈದ್ಯಸಾಂಗತ್ಯ'ವು ಆತನ ರೋಗನಿದಾನ ಚಿಕಿತ್ಸೆಗಳ ವೈದುಷ್ಯವನ್ನು ಪ್ರದರ್ಶಿಸುವ ವೈದ್ಯಶಾಸ್ತ್ರಗ್ರಂಥ. ಸಾಂಗತ್ಯದಲ್ಲಿದೆ. ವೈದ್ಯರು ಪರೀಕ್ಷಿಸಿ ಇದರ ಬೆಲೆ ಕಟ್ಟಬೇಕು.

ಹೀಗೆ ಸಾಳ್ವನು ತನ್ನ ಬಹುಮುಖವಾದ ಪ್ರತಿಭೆಯಿಂದ ಕನ್ನಡ ಭಾಷಾ ಸಾಹಿತ್ಯಗಳ ತುಷ್ಟಿಪುಷ್ಟಿಗೆ ಕಾರಣನಾಗಿದ್ದಾನೆ.

**ದೊಡ್ಡಯ್ಯ :**

ಈತನು ಎಂಟನೆಯ ತೀರ್ಥಂಕರನ ಚರಿತೆಯನ್ನು ಸಾಂಗತ್ಯದಲ್ಲಿ 'ಚಂದ್ರಪ್ರಭಚರಿತೆ' ಎಂಬ ಹೆಸರಿನಿಂದ ಬರೆದಿದ್ದಾನೆ. ಈತನ ಕಾಲವನ್ನು ನಿರ್ದಿಷ್ಟವಾಗಿ ಹೇಳಲು ಸಾಕಷ್ಟು ಸಾಧನಗಳಿಲ್ಲ. ಬಹುಶಃ ಹದಿನಾರನೆಯ ಶತಮಾನದ ಮಧ್ಯದಲ್ಲಿ (ಕ್ರಿ. ಶ. ೧೫೫೦) ಇದ್ದಿರಬೇಕೆಂದು ಊಹಿಸುತ್ತಾರೆ. ಪೂರ್ವದಲ್ಲಿ ಕವಿಪರಮೇಷ್ಠಿ ಗುಣಭದ್ರರು ಸಂಸ್ಕೃತದಲ್ಲಿ ಹೇಳಿರುವ ಕಥೆಯನ್ನು ತಾನು ಕನ್ನಡದಲ್ಲಿ ಹೇಳುತ್ತಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ಕನ್ನಡದಲ್ಲಿ ಈ ಮೊದಲೆ ಅಗ್ಗಳನು ಚಂದ್ರಪ್ರಭ ಪುರಾಣವನ್ನು ಕನ್ನಡಿಸಿರುವುದನ್ನು ನಾವು ಜ್ಞಾಪಿಸಿಕೊಳ್ಳಬಹುದು.

ದೊಡ್ಡಯ್ಯನು ತನ್ನ ಕಾವ್ಯ 'ಇದು ಪಂಡಿತಯತಿಹೃದಯ ಪಂಕಜ ಮಿತ್ರ! ಮಿದು ಭಾರತಿಯ ಭಾಳನೇತ್ರ! ಇದು ಭವ್ಯಚೇತೋರೋಲಂಬ ಶತಪತ್ರ! ಮಿದು ಚಂದ್ರಜಿನರ ಚರಿತ್ರ' ಎಂಬಲ್ಲಿ

'ಇದು ಭಾರತಿಯ ಭಾಳನೇತ್ರ' ಎಂಬುದನ್ನು ಬಿಟ್ಟು ಉಳಿದುದನ್ನು ಸ್ವೀಕರಿಸಬಹುದೆಂದು ತೋರುತ್ತದೆ. ಸುಮಾರು ೪೫೦೦ ಪದ್ಯಗಳನ್ನು ಒಳಗೊಂಡ ಈ ಬೃಹದ್ಗ್ರಂಥದ ಮಧ್ಯದಲ್ಲಿ ಅಲ್ಲಲ್ಲೆ ಷಟ್ಪದಿಗಳೂ ದೊರೆಯುತ್ತವೆ. ಸಾಹಿತ್ಯದ ದೃಷ್ಟಿಯಿಂದ ಮಾತ್ರವೇ ನೋಡುವುದಾದರೆ ಈ ಹಾಡುಗಬ್ಬ ಬಹು ಸಾಮಾನ್ಯವಾದುದು.

**ಬಾಹುಬಲಿ :**

ದಕ್ಷಿಣವಾರಣಾಸಿಯೆನಿಸಿಕೊಂಡ ಶೃಂಗೇರಿಯಲ್ಲಿದ್ದ ವಣಿಜಶಿರೋಮಣಿ ಸಣ್ಣಣ್ಣ ಮತ್ತು ಆತನ ಸತಿ ಬೊಮ್ಮಲದೇವಿಯರ ಮಗ ಬಾಹುಬಲಿ. ನರಸಿಂಹಭಾರತಿ ಯತಿಗಳು ಶೃಂಗೇರಿಯ ಶಾರದಾಪೀಠದ ಅಧ್ಯಕ್ಷರಾಗಿದ್ದ

ಕಾಲದಲ್ಲಿ ನೆಲವನೆಯ ರಾಜ ಭೈರವೇಂದ್ರನು ಅವರ ಧ್ಯಾನಕ್ಕೆ ರಕ್ಷಕನಾಗಿದ್ದನು. ಒಮ್ಮೆ ಆ ರಾಜನ ಆಸ್ಥಾನದಲ್ಲಿ ಲಲಿತಕೀರ್ತಿಯು ಪುರಾಣದ ಕಥೆ ಹೇಳುತ್ತಾ, ಶ್ರೀಪಂಚಮಿಯ ಮಹಾತ್ಮೆಯನ್ನು ಹೇಳಿದನು. ರಾಜನು ಅದನ್ನು ಬರೆಯುವಂತೆ ಬಾಹುಬಲಿಗೆ ಆಜ್ಞಾಪಿಸಿದನು. ಲಲಿತಕೀರ್ತಿಯೂ ಅದನ್ನು ಒಪ್ಪಿದನು. ಅವರಿಬ್ಬರ ಅಪೇಕ್ಷೆಯಂತೆ ಕವಿ ಶ್ರೀಪಂಚಮಿಯ ಮಹಿಮೆಯನ್ನು ಒಳಗೊಂಡ ನಾಗಕುಮಾರಚರಿತೆಯನ್ನು ಬರೆದನು, ಸು. ಕ್ರಿ. ಶ. ೧೫೬೦ರಲ್ಲಿ.

ನಾಗಕುಮಾರನ ಕಥೆ ಮನೋಹರವಾಗಿದೆ. ಕನಕಪುರದ ದೊರೆ ಜಯಂಧರನು ಪೃಥ್ವೀದೇವಿಯೆಂಬ ರಾಜಕುವರಿಯನ್ನು ಚಿತ್ರಪಟದಲ್ಲಿ ಕಂಡು ಮೋಹಿಸಿ, ಮದುವೆಯಾದ. ಆಕೆಯ ಹೊಟ್ಟೆಯಲ್ಲಿ ಹುಟ್ಟಿದವನೆ ನಾಗಕುಮಾರ. ಈತನು ವೀಣಾವಾದನದಲ್ಲಿ ಕಿನ್ನರಿ ಮನೋಹರಿಯರನ್ನು ಸೋಲಿಸಿ ಮದುವೆಯಾದ. 'ನೀಲಗಿರಿ' ಎಂಬ ಮದ್ದಾನೆಯನ್ನೂ ಘೋಟದೇಶದ ತುಂಟಕುದುರೆಯನ್ನೂ ಸೊಕ್ಕಿಳಿಸಿ ವಶಮಾಡಿಕೊಂಡ. ಅನೇಕ ರಾಜರನ್ನು ಗೆದ್ದು ವೈಭವದಿಂದ ರಾಜ್ಯವಾಳುತ್ತಾ, ಕಡೆಗೆ ವೈರಾಗ್ಯದಿಂದ ನಾಗಕುಮಾರ ಕೇವಲಿಯಾಗಿ ಮುಕ್ತಿಯನ್ನು ಪಡೆದ.

'ನಾಗಕುಮಾರಚರಿತೆ' ೩೬೦೦ ಸಾಂಗತ್ಯಪದ್ಯಗಳನ್ನು ಒಳಗೊಂಡ ಬೃಹತ್ಕಥೆ. ಪುಣ್ಯಪುರುಷನ ಈ ಚರಿತ್ರೆ 'ಭವವಾರ್ಧಿಗೆ ಭೈತ್ರ'ವೆಂದೂ, 'ಪುಣ್ಯಸತ್ಯಂಗಳಿಗೆ ಸುಕ್ಷೇತ್ರವೆಂದೂ ಕವಿ ಕರೆದಿದ್ದಾನೆ. 'ಕವಿರಾಜಹಂಸ' 'ಸಂಗೀತಸುಧಾಬ್ಧಿ ಚಂದ್ರಮ' ಎಂಬ ತನ್ನ ಬಿರುದುಗಳನ್ನು ಉಗ್ಘಡಿಸಿಕೊಂಡು, ಕವಿ ತನ್ನ ಕಾವ್ಯವು 'ಪೊಸದೇಸಿಯ ನೆಲೆವೀಡು', 'ರಸಿಕರ ಕರ್ಣರಸಾಯನ' ಎಂದು ಹೇಳಿಕೊಂಡಿದ್ದಾನೆ! ಇದರಲ್ಲಿ ಸ್ವಲ್ಪಮಟ್ಟಿಗೆ ತಥ್ಯವಿದೆ. ಸುಂದರವಾದ ಕಥೆಯನ್ನು ಒಳಗೊಂಡ ಈ ಹಾಡುಗಬ್ಬವನ್ನು ಜನ ಓದಿ ಮನರಂಜನೆಯನ್ನು ಪಡೆಯಬಹುದು. ಇದರಲ್ಲಿ ವ್ಯಂಗ್ಯ, ಧ್ವನಿ ಇತ್ಯಾದಿ ಕಾವ್ಯಗುಣಗಳನ್ನು ಹುಡುಕಬೇಕಾದ್ದಿಲ್ಲ. ಕವಿಯು ಅದನ್ನು ಸ್ಪಷ್ಟವಾಗಿಯೇ ಹೇಳಿದ್ದಾನೆ.

ಚಿಪ್ಪಿನೊಳಿಹ ಮುತ್ತು ವಸ್ತುಕ, ವರ್ಣಕ | ಚಿಪ್ಪುಕಳೆದು ಸರಗೆಯ್ದ
ಸುಪ್ಪಾಣಿಮುತ್ತಿನ ಹಾರವೆಂದೆನಿಪೊಂ| ದೊಪ್ಪದೋರದೊಡವ ಕವಿಯೆ?

ಹೀಗೆ ವರ್ಣಕದ ಶ್ರೇಷ್ಠತೆ ಅದರ ವಾಚ್ಯಾರ್ಥದಿಂದಲೆ ಎಂಬುದು ಕವಿಯ ಮತ. ಆತನನ್ನು ನಾವು ಒಪ್ಪದಿದ್ದರೂ ಆತನ ಕಾವ್ಯವಿರುವುದು ಹಾಗೆಯೆ. ಹೆಣ್ಣೊಬ್ಬಳ ಬೆನ್ನ ವರ್ಣನೆ ಇದು— .

ಚಿತ್ತಜ ರತಿದೇವಿಯರಾಡುವ ಪೊನ್ನ | ನೆತ್ತದ ಹಲಗೆಯೋ ಮೇಣು
ಎತ್ತಿ ಬಿಚ್ಚಿದ ಬೀಸಣಿಗೆಯೋ ತಾನೆನಿ| ಸಿತ್ತು ಸುಣ್ಬೆನ್ನು ಮಾನಿನಿಯ

ಕಥೆಯಾಗಲಿ, ವರ್ಣನೆಯಾಗಲಿ, ಕವಿಯ ಮಾತು ನೇರ, ಸ್ಪಷ್ಟ- ಅಲಂಕಾರಿಕವಾದ ಭಾಷೆ, ಗೂಢವಾದ ಭಾವ ಇಲ್ಲ.

ಹದಿನಾರನೆಯ ಶತಮಾನದಲ್ಲಿ ಕಾವ್ಯರಚನೆಗೆ ಕೈಹಾಕಿದ ಇತರ ಜೈನ ಕವಿಗಳೆಂದರೆ 'ವಿಜಿತೇಂದ್ರಿಯಳಾಗಿ ಕಾಮನ ಗೆಲಿದ' 'ವಿಜಯಕುಮಾರಿಯ ಚರಿತೆ' ಯನ್ನು ಸಾಂಗತ್ಯದಲ್ಲಿ ಬರೆದ **ಶ್ರುತಕೀರ್ತಿಯೂ** 'ಚಂದ್ರಪ್ರಭ ಷಟ್ಪದಿ'ಯನ್ನು ಭಾಮಿನಿಷಟ್ಪದಿಯಲ್ಲಿ ಬರೆದ **ದೊಡ್ಡಣಾಂಕನೂ**, ಸುಖನಿಲಯಪುರದ ರಾಜಕುಮಾರ ಸುಕುಮಾರನ ಕಥೆಯನ್ನೊಳಗೊಂಡ 'ಶೃಂಗಾರ ಕಥೆ'ಯನ್ನು ಶೃಂಗಾರರಸ ಪ್ರಧಾನವಾಗಿ ಬರೆದ **ಪದ್ಮರಸನೂ**, ವಜ್ರಕುಮಾರಚರಿತೆಯನ್ನು ಸಾಂಗತ್ಯದಲ್ಲಿ ಬರೆದ **ಬ್ರಹ್ಮಕವಿಯೂ** ಮುಖ್ಯರು. ಸುಮಾರು ಕ್ರಿ. ಶ. ೧೬೦೦ರಲ್ಲಿ **ದೇವೋತ್ತಮನು** 'ನಾನಾರ್ಥ ರತ್ನಾಕರ 'ಎಂಬ ಹೆಸರಿನಿಂದಲೂ **ಶೃಂಗಾರಕವಿ**ಯೆಂಬುವನು 'ಕರ್ಣಾಟಕ ಸಂಜೀವನ' ಎಂಬ ಹೆಸರಿನಿಂದಲೂ ನಿಘಂಟುಗಳನ್ನು ಬರೆದಿದ್ದಾರೆ. **ಶಾಂತರಸ**ನೆಂಬುವನು 'ಯೋಗರತ್ನಾಕರ' ವನ್ನು ಕಂದದಲ್ಲಿ ಬರೆದಿದ್ದಾನೆ.

ಹದಿನೇಳನೆಯ ಶತಮಾನದಿಂದ ಮುಂದೆ ಜೈನಕವಿಗಳು ಕಾವ್ಯಕರ್ಮಕ್ಕೆ ಕೈ ಹಾಕುವುದು ಬಹಳ ಕಡಮೆಯಾದಂತೆ ಕಾಣಬರುತ್ತದೆ. ಕೇವಲ ಸಂಖ್ಯೆಯಲ್ಲಿ ಮಾತ್ರವಲ್ಲ ; ಸಾರಸ್ವತ ಸಂಪತ್ತಿನಲ್ಲೂ ಇದು ಅವರ ಇಳಿಕೆಯ ಕಾಲ. ಕವಿಗಳೆಲ್ಲರನ್ನೂ ಲೆಕ್ಕಹಾಕಿದರೂ ಸುಮಾರು ಮೂವತ್ತು ಜನ ರಷ್ಟಾಗುತ್ತದೆ. ಇವರಲ್ಲಿ ಸಾಹಿತ್ಯದೃಷ್ಟಿಯಿಂದ ಗಮನಾರ್ಹರಾದವರು ಕೇವಲ ನಾಲ್ಕೈದು ಜನ, ಅಷ್ಟೆ- ಈ ಕೆಲವರಲ್ಲಿ ಭಾಷಾದೃಷ್ಟಿಯಿಂದ–ಕಾವ್ಯಗುಣದಿಂದ ಅಲ್ಲ–ಬಹು ಮುಖ್ಯನಾದವನು ಭಟ್ಟಾಕಳಂಕ.

**ಭಟ್ಟಾಕಳಂಕ :**

'ಕರ್ಣಾಟಕ ಶಬ್ದಾನುಶಾಸನ'ವನ್ನು ಬರೆದ ಭಟ್ಟಾಕಳಂಕನು ಹದಿನೇಳನೆಯ ಶತಮಾನದ ಆದಿಭಾಗದಲ್ಲಿ (ಕ್ರಿ. ಶ. ೧೬೦೪) ಇದ್ದವನು. ಈತನು ಮಹಾವಿದ್ವಾಂಸನೆಂದೂ ಷಡ್ಭಾಷಾಪಂಡಿತನೆಂದೂ ದೇವಚಂದ್ರನು ಈತನನ್ನು ಹೊಗಳಿದ್ದಾನೆ. ಕೆಲವು ಶಾಸನಗಳಲ್ಲಿಯೂ ಈತನನ್ನು ಅತಿಶಯವಾಗಿ ಹೊಗಳಲಾಗಿದೆ. ಈ ಹೊಗಳಿಕೆಗೆ ಭಟ್ಟಾಕಳಂಕನು ಸರ್ವವಿಧದಿಂದಲೂ ಅರ್ಹನೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಪ್ರಸಿದ್ಧ ವೈಯಾಕರಣಿಗಳಾದ ಎರಡನೆಯ ನಾಗವರ್ಮ, ಕೇಶಿರಾಜ—ಇವರನ್ನು ಮೀರಿಸಿದ ಮಹಾ ವೈಯಾಕರಣಿ, ಆತ. ಹದಿನೇಳನೆಯ ಶತಮಾನದ ವರೆಗೆ ಹರಿದುಬಂದಿರುವ ಕನ್ನಡಭಾಷಾ ಪ್ರವಾಹವನ್ನೆಲ್ಲಾ ತನ್ನ ೫೯೨ ಸೂತ್ರಗಳ ಅಣೆಕಟ್ಟಿನಲ್ಲಿ ಸಿಲ್ಲಿಸಿಕೊಂಡು, ಕವಿಕಾವ್ಯಗಳ ಬೆಳಗೆ ಭಾಷಾ ವಿಷಯಕವಾದ ನಿರೂಪಣೆಗಳನ್ನು ಹರಿಸಿದ್ದಾನೆ. ಕನ್ನಡ ವ್ಯಾಕರಣ ಸಂಸ್ಕೃತದಲ್ಲಿ ರಚಿತವಾಗಿರುವುದು ಮಾತ್ರವಲ್ಲ, ಆದಕ್ಕೆ 'ಭಾಷಾಮಂಜರಿ' ಎಂಬ ವೃತ್ತಿಯನ್ನೂ 'ಮಂಜರೀ ಮಕರಂದ' ವೆಂಬ ವ್ಯಾಖ್ಯೆಯನ್ನೂ ಸಂಸ್ಕೃತದಲ್ಲಿಯೇ ಬರೆದು ಸೇರಿಸಿದ್ದಾನೆ, ಭಟ್ಟಾಕಳಂಕ. ಕನ್ನಡ ಸಂಸ್ಕೃತ ಭಾಷೆಗಳೆರಡರ ವ್ಯಾಕರಣಗಳಲ್ಲಿಯೂ ತಾನು ಪ್ರವೀಣನೆಂದು ಕವಿ ಹೇಳಿಕೊಂಡಿರುವುದು 'ಮಂಜರಿ ಮಕರಂದ'ವನ್ನು ನೋಡಿದರೆ ಸರ್ವಸತ್ಯವೆನಿಸುತ್ತದೆ. ಈತನೊಬ್ಬ ಕನ್ನಡದ ಪಾಣಿನಿ. ಆತನ ಧೋರಣೆ ಅಧಿಕಾರವಾಣಿಗಳು ಆತನ ಅಗಾಧವಾದ, ಅಪಾರವಾದ ಪಾಂಡಿತ್ಯಕ್ಕೆ ತಕ್ಕಂತೆ ಇವೆ. ಇಷ್ಟಾದರೂ ಕೇಶಿರಾಜನ 'ಶಬ್ದಮಣಿದರ್ಪಣ'ದಲ್ಲಿ ಕಾಣಬರುವ ಪ್ರಾಮಾಣ್ಯ ಶಬ್ದಾನುಶಾಸನದಲ್ಲಿ ಕೆಲವು ವೇಳೆ ಕಂಡುಬರುವುದಿಲ್ಲ. ಅಲ್ಲಿಗಿಂತ ಇಲ್ಲಿ ಹೆಚ್ಚು ವಿಷಯಗಳಿವೆ, ನಿಜ. ಆದರೆ ಪ್ರಯೋಗಶರಣನಾಗಿರಬೇಕಾದ ವೈಯಾಕರಣಿಯ ಮುಖ್ಯಗುಣಕ್ಕೆ ಭಟ್ಟಾಕಳಂಕನು ಕೆಲವು ವೇಳೆ ಅಪೋಹ ತರುತ್ತಾನೆ: ತಾನೆ ಉದಾಹರಣೆಗಳನ್ನು ಸೃಷ್ಟಿಸಿ ಸೇರಿಸಿ ಬಿಡುತ್ತಾನೆ. ಇಂತಹ ಕೆಲವು ಸಂದರ್ಭಗಳನ್ನು ಬಿಟ್ಟರೆ, ಆತನು ಅದ್ವಿತೀಯ ವ್ಯಾಕರಣಕಾರ. ಆತನು ದಕ್ಷಿಣಕನ್ನಡ ಜಿಲ್ಲೆಯಲ್ಲಿರುವ ಅಕಳಂಕದೇವನ ಶಿಷ್ಯನೆಂದು ತಿಳಿದು ಬಂದಿರುವುದರಿಂದ, ಆ ಪ್ರಾಂತದವನಿರಬೇಕು.

**ಧರಣಿಪಂಡಿತ :**

ಹದಿನೇಳನೆ ಶತಮಾನದ ಮಧ್ಯಕಾಲದಲ್ಲಿದ್ದ ಧರಣಿಪಂಡಿತ (ಸು. ೧೬೫೦) ನು ವರಾಂಗನೃಪಚರಿತೆ, ಬಿಜ್ಜಳರಾಯಚರಿತೆ—ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. ವಿಷ್ಣುವರ್ಧನಪುರದ ಪದ್ಮಣಪಂಡಿತ ಈತನ ತಂದೆ. ಆ ಊರಿನ 'ಪಾರ್ಶ್ವಜಿನೇಂದ್ರಚಂದ್ರನ ಚರಣವಾರಿಜ ಭೃಂಗ,' ಕವಿ. ಹಿಂದಿನ ಪಂಪ, ರನ್ನ, ಪೊನ್ನ—ಇತ್ಯಾದಿ ಕವಿಗಳನ್ನು 'ಕವಿತಾ ವರವ ಕೊಡಲೆಂದು' ನುತಿಸಿದ್ದಾನೆ.

ವರಾಂಗನೃಪನ ಕಥೆ ಜೈನರಿಗೆ ಬಹಳ ಪ್ರಿಯವಾದುದು. ಇದನ್ನು ಜಟಾಸಿಂಹನಂದ್ಯಾಚಾರ್ಯನೆಂಬುವನು ಸಂಸ್ಕೃತದಲ್ಲಿ ರಚಿಸಿದ್ದ. ಬಂಧುವರ್ಮನು ತನ್ನ 'ಜೀವಸಂಬೋಧನೆ'ಯಲ್ಲಿ ಇದನ್ನು ಸಂಗ್ರಹವಾಗಿ ತಿಳಿಸಿದ್ದ. ಆ ಕಥೆಯನ್ನೇ ಧರಣಿಪಂಡಿತನು ಭಾಮಿನಿಷಟ್ಪದಿಯಲ್ಲಿ ವಿಸ್ತರಿಸಿ ಬರೆದಿದ್ದಾನೆ. ವರಾಂಗನೆಂಬ ರಾಜಕುಮಾರನು ತುಂಟಕುದುರೆಯೊಂದನ್ನು ಏರಿದುದರ ಫಲವಾಗಿ, ಕಾಡುಪಾಲಾಗಿ, ಕಿರಾತರ ಕೈಗೆ ಸಿಕ್ಕಿಬಿದ್ದು, ಪಡಬಾರದ ಸಂಕಟಗಳನ್ನೆಲ್ಲಾ ಅನುಭವಿಸಿ, ಕೊನೆಗೆ ಜೈನದೀಕ್ಷೆಯನ್ನು ವಹಿಸಿ ಸನ್ಯಾಸಿಯಾಗುತ್ತಾನೆ. ಇದು ಇದರ ಕಥೆ. ಈ ಗ್ರಂಥವು ಸಮಗ್ರವಾಗಿ ಸಿಕ್ಕಿಲ್ಲ. ಉಪಲಬ್ಧವಾಗಿರುವಷ್ಟರಲ್ಲಿ ಅಂತಹ ಕಾವ್ಯಗುಣಗಳೇನೂ ಇಲ್ಲ. ಕವಿಯ ಮತ್ತೊಂದು ಕೃತಿ 'ಬಿಜ್ಜಳರಾಯಚರಿತೆ' ಸಾಂಗತ್ಯದ ಸುಮಾರು ೧೩೫೦ ಪದ್ಯಗಳನ್ನು ಒಳಗೊಂಡಿದೆ. ಇದು ಬಸವಣ್ಣನ ಇತಿಹಾಸದೃಷ್ಟಿಯಿಂದ ಕುತೂಹಲಕರವಾಗಿದೆ. ಕಲ್ಯಾಣಪುರದ ದೊರೆಯಾದ ಬಿಜ್ಜಳನು 'ಜೈನಶಾಸನವಾರ್ಧಿವರ್ಧನ ಚಂದ್ರಮ', 'ಜೈನವಂಶಾನ್ವಯತಿಲಕ' ಇತ್ಯಾದಿಯಾಗಿ ಇಲ್ಲಿ ವರ್ಣಿತನಾಗಿದ್ದಾನೆ. ಬಸವಣ್ಣನ ತಂದೆಯಾದ ಮಾದಿರಾಜನು ಈ ಬಿಜ್ಜಳರಾಜನ ಜೋಯಿಸನಾಗಿದ್ದನಂತೆ! ಈತನ ಮಗಳಾದ ಪದ್ಮಿನಿಯನ್ನು ಮದುವೆಯಾದ ರಾಜನು ತನ್ನ ಭಾವನಾದ ಬಸವಣ್ಣನಿಗೆ ಸೇನಾಪತಿತ್ವವನ್ನು ಕೊಟ್ಟನಂತೆ! ಒಮ್ಮೆ ಬಸವಣ್ಣ ರಾಜನಿಗೆ ಇದಿರು ಬೀಳಲು ದೊರೆ ಅವನನ್ನು ಸೋಲಿಸಿದ. ಸೋತ ಬಸವಣ್ಣ ಮಡುವಿನಲ್ಲಿ ಬಿದ್ದ. ರಾಜ ಅವನನ್ನು ಹೊರಕ್ಕೆ ತೆಗೆಸಿ, ಕ್ಷಮಿಸಿ, ಪುನಃ ಪದವಿಯನ್ನು ಕೊಟ್ಟ. ಬಸವಣ್ಣನ ಪ್ರೇರಣೆಯಿಂದ ಕೆಲವರು ಜೈನವೇಷಧಾರಿ

ಗಳಾಗಿ ಬಿಜ್ಜಳನ ಹತ್ತಿರಕ್ಕೆ ಹೋಗಿ ವಿಷದ ಮಾವಿನಹಣ್ಣನ್ನು ಕೊಡಲು ಅತನು ಅವನ್ನು ಮೂಸಿ ಸತ್ತುಹೋದ. ರಾಜನ ಸೈನ್ಯ ಬಸವಣ್ಣನ ಮೇಲೆ ಏರಿ ಬಂತು. ಆತ ಹೆದರಿ ಓಡಿಹೋಗಿ ಕಡಲತಡಿಯ ವೃಷಭಪುರಿಯಲ್ಲಿಯ ಒಂದು ಭಾವಿಯಲ್ಲಿ ಬಿದ್ದು ಮುಳುಗಿ ಸತ್ತ. 'ಉಳಿವೆನೆಂದು ಪೊಕ್ಕು ಸತ್ತುದರಿಂ' ವೃಷಭಪುರಿಗೆ ಉಳಿವೆಯೆಂದು ಹೆಸರಾಯ್ತಂತೆ! ಸಂಪ್ರದಾಯದ ಕಥೆಯಿಂದ ಸಂಪೂರ್ಣ ಭಿನ್ನವಾಗಿರುವ ಈ ಕಥೆಯಲ್ಲಿ ಪರಮತದ ಅಸಹಿಷ್ಣುತೆಯು ಎದ್ದು ಕಾಣುತ್ತದೆ.

ಸು. ೧೬೫೦ ರಲ್ಲಿದ್ದ **ನೂತನಾಗಚಂದ್ರ**ನೆಂಬ ಕವಿ 'ಜಿನಮುನಿತನಯ'ವನ್ನೂ ಸು. ೧೬೮೦ರಲ್ಲಿದ್ದ **ಚಿದಾನಂದ**ನೆಂಬ ಕವಿ 'ಮುನಿವಂಶಾಭ್ಯುದಯ'ವನ್ನೂ ಬರೆದಿದ್ದಾರೆ. 'ಜಿನಮುನಿತನಯ'ವು ನೀತಿ ಮತ್ತು ಜಿನಧರ್ಮವನ್ನು ಬೋಧಿಸಲು ಹೊರಟ ಗ್ರಂಥ. ಇದರಲ್ಲಿ ಪ್ರತಿಯೊಂದು ಪದ್ಯವೂ 'ಜಿನಮುನಿತನಯ' ಎಂದು ಕೊನೆಯಾಗುವ ೧೧೯ ಕಂದ ಪದ್ಯಗಳಿವೆ. ಆದ್ದರಿಂದಲೆ ಅದಕ್ಕೆ ಆ ಹೆಸರು. 'ಮುನಿವಂಶಾಭ್ಯುದಯ'ವು ಸಾಂಗತ್ಯದಲ್ಲಿದೆ. ಜೈನಮುನಿಗಳ ಪರಂಪರೆಯನ್ನು ತಿಳಿಸುವ ಈ ಗ್ರಂಥದಲ್ಲಿ ಭದ್ರಬಾಹು ಮತ್ತು ಚಂದ್ರಗುಪ್ತರು ಬೆಳುಗೊಳಕ್ಕೆ ಬಂದ ವಿಚಾರವಿದೆ.

**ದೇವಚಂದ್ರ** (೧೭೭೦-೧೮೪೧) :

ಕನ್ನಡ ಸಾಹಿತ್ಯಚರಿತ್ರೆಯನ್ನು ಬರೆಯಲು ತುಂಬ ಸಹಾಯಕಾರಿಯಾದ 'ರಾಜಾವಳೀಕಥೆ'ಯನ್ನು ಮಾತ್ರವೇ ಅಲ್ಲದೆ 'ರಾಮಕಥಾವತಾರ'ವೆಂಬ ಮತ್ತೊಂದು ಗ್ರಂಥವನ್ನೂ ಬರೆದಿರುವ ದೇವಚಂದ್ರನು ಮೈಸೂರು ಅರಸರಾದ ಮುಮ್ಮಡಿ ಕೃಷ್ಣರಾಜಒಡೆಯರ ಕಾಲದಲ್ಲಿದ್ದವನು. ರಾಜರ ಆಶ್ರಿತನಾದ ವೈದ್ಯಸೂರಿ ಪಂಡಿತನ ಪ್ರೋತ್ಸಾಹದಿಂದ ಈತ ರಾಜಾವಳೀ ಕಥೆಯನ್ನು ಬರೆದನಂತೆ! ಇದರಲ್ಲಿ ಜೈನಮತಕ್ಕೆ ಸಂಬಂಧಿಸಿದ ಹಲವು ಇತಿಹಾಸಗಳೂ ಹಲವು ರಾಜರ ಮತ್ತು ಕವಿಗಳ ಚರಿತ್ರೆಗಳೂ ಇವೆ. ಮೈಸೂರು ರಾಜರ ವಂಶಾವಳಿಯೂ ಇದರಲ್ಲಿ ಸಂಗ್ರಹವಾಗಿ ಬಂದಿದೆ. ಕವಿಯ 'ರಾಮಕಥಾವತಾರ'ವು ಚಂಪೂ ಗ್ರಂಥ. ನಾಗಚಂದ್ರಕವಿಯಿಂದ ಕಥೆ, ಭಾವಗಳನ್ನು ಪರಿಗ್ರಹಿಸಿರುವುದಲ್ಲದೆ, ಅಲ್ಲಿನ ಅನೇಕ ಪದ್ಯಗಳು ಇಲ್ಲಿ ಅನುವಾದವಾಗಿವೆ.

# ಕುಮಾರವ್ಯಾಸ ಯುಗದ ವೀರಶೈವ ಸಾಹಿತ್ಯ

ಕುಮಾರವ್ಯಾಸಯುಗದಲ್ಲಿ ವೀರಶೈವ ಸಾಹಿತ್ಯವು ಸರ್ವತೋಮುಖ ವಾಗಿ ಬೆಳೆದು, ಕನ್ನಡ ಸಾಹಿತ್ಯಜಗತ್ತಿನ ತುಷ್ಟಿ ಪುಷ್ಟಿಗಳಿಗೆ ಸಹಾಯಕ ವಾಯಿತು. ಹನ್ನೆರಡನೆಯ ಶತಮಾನದಲ್ಲಿ ಪೂರ್ಣಪ್ರವಾಹವಾಗಿ ಹರಿಯ ಹೊರಟು, ಇದ್ದಕ್ಕಿದ್ದಂತೆಯೆ ಇಂಗಿಹೋಗಿದ್ದ ವಚನವಾಙ್ಮಯದ ಹೊಳೆ ಈ ಯುಗದಲ್ಲಿ ಮತ್ತೆ ಪುಟಿದು ಮೇಲೇಳುತ್ತದೆ; ವಿಜಯನಗರದ ಪ್ರೌಢ ದೇವರಾಯ ಮತ್ತು ತೋಂಟದ ಸಿದ್ಧಲಿಂಗಯತಿ—ಈ ಅರಮನೆ ಗುರು ಮನೆಗಳ ದಂಡೆಯನ್ನು ಆಶ್ರಯಿಸಿ ಹರಿಯತೊಡಗುತ್ತದೆ. ಹೊಸ ವಚನ ಗಳ ಸೃಷ್ಟಿಗಿಂತಲೂ ಹಳೆಯ ವಚನಗಳ ಸಂಕಲನ ಸಂಪಾದನೆಗಳೂ ಅವು ಗಳ ಟೀಕೆ ಟಿಪ್ಪಣಿ ವ್ಯಾಖ್ಯಾನಗಳೂ ಹುಟ್ಟಿಕೊಂಡದ್ದು ಈ ಕಾಲದ ವೈಶಿಷ್ಟ್ಯ. ಪ್ರೌಢರಾಯನ ಸೇನಾನಿಯಾದ ಭಕ್ತಿಭಂಡಾರಿ ಜಕ್ಕಣಾರ್ಯನೂ ತೋಂಟದ ಸಿದ್ಧಲಿಂಗಯತಿಯ ಶಿಷ್ಯರಾದ ನೂರೊಂದು ವಿರಕ್ತರೂ ಈ ವಚನವಾಙ್ಮಯದ ಪ್ರಚಾರ ಪ್ರಸಾರಗಳ ಅಧ್ವರ್ಯುಗಳಾದರು.

ಕುಮಾರವ್ಯಾಸ ಯುಗವು ವೀರಶೈವ ಪುರಾಣಗಳ ಬೆಳೆಗೂ ಸುಗ್ಗಿಯ ಕಾಲ. ಪುರಾಣಗಳನ್ನು ಕನ್ನಡದಲ್ಲಿ ನಟ್ಟ ಕೀರ್ತಿ ಜೈನಕವಿಗಳಿಗೆ ಸಲ್ಲುವು ದಾದರೂ, ಕಾಲ ಬದಲಾಯಿಸಿದಂತೆ ಅದಕ್ಕೆ ಹೊಂದಿಕೊಂಡು ಹೋಗಬಲ್ಲ ಚಾಕಚಕ್ಯತೆ ಅವರಲ್ಲಿ ಇಲ್ಲದೆಹೋಯಿತು. ಸಾಹಿತ್ಯದಲ್ಲಿ ದೇಶೀಯ ಛಂದ ಸ್ಸಿನ ಬಳಕೆ ಮತಪ್ರಚಾರಕ್ಕೆ ಪ್ರಬಲವಾದ ಸಾಧನವಾಗಬಲ್ಲುದೆಂಬುದನ್ನು ಅವರು ಅರ್ಥಮಾಡಿಕೊಳ್ಳುವ ವೇಳೆಗೆ ವೈದಿಕ ಮತ್ತು ವೀರಶೈವ ಮತಗಳ ವಿಜಯವೈಜಯಂತಿಗಳು ಗಗನಚುಂಬಿಯಾಗಿದ್ದವು. ವೈದಿಕಮತಾವ ಲಂಬಿಗಳು ತಮ್ಮ ದಾಸರ ಕೀರ್ತನೆಗಳಿಂದಲೂ, ರಾಮಾಯಣ ಭಾರತ ಭಾಗವತಾದಿ ಪುರಾಣಗಳಿಂದಲೂ ಜನರನ್ನು ತಮ್ಮ ಮತದ ಕಡೆಗೆ ಆಕರ್ಷಿಸಿ ದರು; ವೀರಶೈವ ಮತಾನುಯಾಯಿಗಳು ವಚನವಾಙ್ಮಯದ ಜೊತೆಗೆ ವೀರಶೈವ ಪುರಾಣಗಳನ್ನೂ ರಚಿಸಿ, ಜನರ ಮನಸ್ಸನ್ನು ಸೂರೆಗೊಂಡರು. ಇಷ್ಟೇ ಅಲ್ಲ, ಶಿವಪುರಾಣದ ಅನೇಕ ಕಥೆಗಳು, ವೀರಶೈವಕ್ಕೆ ವಿಶ್ವಕೋಶ

ದಂತಿರುವ ಹಲವು ಧರ್ಮ ಗ್ರಂಥಗಳು, ನೀತಿಬೋಧಕವಾದ ಅಥವಾ ಭಕ್ತಿ ಭರಿತವಾದ ಪದ್ಯ, ಹಾಡು, ಶತಕ ಇತ್ಯಾದಿಗಳು ಈ ಯುಗದಲ್ಲಿ ಅಸಂಖ್ಯಾತ ವಾಗಿ ಹುಟ್ಟಿಕೊಂಡವು.

ಈ ಯುಗದ ಗ್ರಂಥರಾಶಿಯಲ್ಲಿ ವೀರಶೈವ ಪುರಾಣಗಳು ಸಂಖ್ಯೆಯಲ್ಲಿ ಮಾತ್ರವೇ ಅಲ್ಲದೆ ಕಾವ್ಯಗುಣದಿಂದಲೂ ಬಹು ಶ್ರೀಮಂತವಾಗಿವೆ. ಆದ್ದ ರಿಂದ ಅವುಗಳನ್ನು ಕುರಿತು ಇಲ್ಲಿ ಸ್ಥೂಲವಾಗಿ ವಿವೇಚಿಸುವುದು ಅಗತ್ಯ ವೆಂದು ತೋರುತ್ತದೆ. 'ಬಸವೇಶ್ವರಾದಿಗಳ ಜೀವನ ಚರಿತ್ರೆಯನ್ನು ವೀರ ಶೈವ ತತ್ತ್ವಗಳೊಂದಿಗೆ ತಿಳಿಸುವ ಕಾವ್ಯಗಳನ್ನು ವೀರಶೈವ ಪುರಾಣಗಳೆಂದು ಕರೆಯುಬಹುದು' ಎನ್ನುತ್ತಾರೆ ದಿವಂಗತ ಶ್ರೀ. ಎಂ. ಆರ್. ಶ್ರೀಯವರು[1] ಮೊದ ಮೊದಲು ಬಸವಣ್ಣ, ಸಿದ್ಧರಾಮ ಮೊದಲಾದ ಪುರಾತನ ಶರಣ ರನ್ನು ಕಥಾನಾಯಕರಾಗಿ ಆಯ್ದುಕೊಳ್ಳುವುದು ವಾಡಿಕೆಯಾಗಿತ್ತು. ಕಾಲಕ್ರಮದಲ್ಲಿ ವೀರಶೈವರಲ್ಲಿ ಮಹಿಮಾಪುರುಷರ,—ಅವರು ಪುರಾತನ ರಾಗಿರಲಿ, ಆಧುನಿಕರಾಗಿರಲಿ—ಜೀವನ ಚರಿತ್ರೆಯನ್ನು ಬರೆದು, ಅವನ್ನು ಪುರಾಣಗಳೆಂದು ಕರೆಯುವುದು ರೂಢಿಗೆ ಬಂದಿತೆಂದು ತೋರುತ್ತದೆ. ತಮಿಳು ನಾಡಿನ ಅರವತ್ತುಮೂವರು ಪುರಾತನರ ಜೀವನವೂ ಪುರಾಣಗಳಿಗೆ ವಸ್ತು ವನ್ನು ಒದಗಿಸಿದವು. ಶಿವತತ್ತ್ವ ಚಿಂತಾಮಣಿ, ವೀರಶೈವಾಮೃತ ಪುರಾಣ- ಇತ್ಯಾದಿ ಪುರಾಣಗಳಲ್ಲಿ ಜೀವನ ಚರಿತ್ರೆಗಿಂತಲೂ ಮತ ವಿಷಯವೇ ಹೆಚ್ಚಾಗಿ ಕಂಡುಬರುವುದೂ ಉಂಟು. ಶಂಕರದಾಸಿಮಯ್ಯ ಚರಿತೆ, ಆರಾಧ್ಯ ಚಾರಿತ್ರ ಇತ್ಯಾದಿ ಹೆಸರುಗಳಲ್ಲಿ 'ಚರಿತೆ' ಎಂಬ ಮಾತು ಬಂದಿದ್ದರೂ ಅವು ಪುರಾಣಗಳೇ. ಪವಾಡ ಪುರುಷರಾದ ಸಂತರ ಜೀವನವನ್ನು ಆಧಾರ ವಾಗಿಟ್ಟುಕೊಂಡು ಮತ ತತ್ತ್ವಗಳನ್ನು ಪ್ರಚಾರಮಾಡುವುದೇ ಇವುಗಳ ಹೆಗ್ಗುರಿ. ಕನ್ನಡ ಸಂಸ್ಕೃತಗಳೆರಡರಲ್ಲೂ ಉದ್ದಾಮ ಪಂಡಿತರಾಗಿದ್ದವರು, ಪ್ರೌಢಕಾವ್ಯರಚನಾಸಮರ್ಥರಾದವರು ಒಮ್ಮೊಮ್ಮೆ ಚಂಪುವಿನಲ್ಲಿ ಇವುಗಳ

---

[1] ಕನ್ನಡಸಾಹಿತ್ಯ ಪರಿಷತ್ ಪತ್ರಿಕೆ: ಜುಲೈ ೧೯೩೩–'ವೀರಶೈವ ಪುರಾಣಗಳು.'—[ಇಲ್ಲಿನ ವಿಚಾರಸರಣಿ ಅವರ ಈ ಲೇಖನದಿಂದಲೆ ಎತ್ತಿ ಕೊಂಡುದು.]

ರಚನೆಗೆ ಕೈಹಾಕಿರುವುದುಂಟು. ಆದರೆ ಇವು ಹೆಚ್ಚಾಗಿ ಹುಟ್ಟಿ ಜನಪ್ರಿಯ ವಾಗಿರುವುದು ದೇಶೀಯ ಶೈಲಿಯಲ್ಲಿಯೇ.

ವೀರಶೈವ ಪುರಾಣಗಳಿಗೆಲ್ಲಾ ಸಾಮಾನ್ಯವಾದ ಕೆಲವು ಲಕ್ಷಣ ಗಳನ್ನು ಗುರುತಿಸಬಹುದು—ಮರ್ತ್ಯದಲ್ಲಿ ವೀರಶೈವ ಮತವು ಖಿಲವಾಗುವು ದೆಂಬುದನ್ನು ಕೇಳಿ, ಪರಶಿವನು ತನ್ನ ಗಣಸಮೂಹದಲ್ಲಿ ಒಬ್ಬನನ್ನು ಭೂಲೋಕಕ್ಕೆ ಕಳುಹಿಸುತ್ತಾನೆ; ಮರ್ತ್ಯಕ್ಕೆ ಹೋಗುವವನ ಆತಂಕವು ನಿವಾರಣೆಯಾಗುವಂತೆ, ತಾನೇ ಅವನ ಬಳಿಗೆ ಸ್ವಸ್ವರೂಪದಿಂದ ಹೋಗಿ ಉದ್ಧರಿಸುವುದಾಗಿ ಅಭಯವನ್ನು ನೀಡುತ್ತಾನೆ. ಶಿವನಿಂದ ಆಜ್ಞಪ್ತನಾದ ಗಣಧರನು ಭೂಮಿಯಲ್ಲಿ ಹುಟ್ಟಿ, ಹಲವು ಪವಾಡಗಳನ್ನು ಮೆರೆದು, ಪರ ಮತ ಖಂಡನೆಯಿಂದ ಸ್ವಮತ ಸ್ಥಾಪನೆಯನ್ನು ನೆರವೇರಿಸುತ್ತಾನೆ. 'ಪರಿ ತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ | ಧರ್ಮ ಸಂಸ್ಥಾಪ ನಾರ್ಥಾಯ ಸಂಭವಾಮಿ ಯುಗೇ ಯುಗೇ' ಎಂಬ ಭಗವದ್ಗೀತೆಯಲ್ಲಿ ಉಕ್ತವಾದ ತತ್ವವೇ ಇಲ್ಲಿನ ತಿರುಳೂ ಆಗಿರುವುದಾದರೂ ಸಾಕ್ಷಾತ್ ಜಗ ದೀಶ್ವರನೇ ಅವತರಿಸುವುದಕ್ಕೆ ಬದಲಾಗಿ, ತನ್ನ ಅಂಶವೊಂದರ ಅಥವಾ ಗಣ ನೊಬ್ಬನ ಮೂಲಕ ಆ ಕಾರ್ಯ ನಡೆಯುತ್ತದೆ. ಈ ಪುರಾಣಗಳಲ್ಲಿ ಈಶ್ವರನ ಪಂಚವಿಂಶತಿಲೀಲೆಗಳು, ವಿಭೂತಿ ಪ್ರಸಾದ ಪಾದೋದಕಾದಿಗಳ ಮಹಿಮೆ, ಬ್ರಹ್ಮಾಂಡಸೃಷ್ಟಿಯ ವಿಚಾರ ಇತ್ಯಾದಿಗಳೂ ಸೇರಿರಬಹುದು. ಗ್ರಂಥದ ಆದಿ ಅಂತ್ಯಗಳಲ್ಲಿ ಪರಶಿವನ ಮತ್ತು ಶಿವಶರಣರ ಸ್ತೋತ್ರಗಳು ಕಂಡುಬರುತ್ತವೆ. ಸಾಮಾನ್ಯವಾಗಿ ಗ್ರಂಥದ ಕೊನೆಯಲ್ಲಿ ಪರಮೇಶ್ವರನು ಪ್ರತ್ಯಕ್ಷನಾಗಿ, ಕಥಾನಾಯಕನನ್ನು ಕೈಲಾಸಕ್ಕೆ ಕರೆದೊಯ್ಯುತ್ತಾನೆ. ಒಮ್ಮೊಮ್ಮೆ ಭಕ್ತನೇ ತನ್ನ ಮಹಿಮೆಯಿಂದ ಕೈಲಾಸಕ್ಕೆ ಹೋಗಿ ಸೇರು ವುದೂ ಉಂಟು.

ವೀರಶೈವ ಪುರಾಣಕರ್ತರಲ್ಲಿ ರಾಘವಾಂಕನೇ ಆದಿಕವಿ. ಆತನಿ ಗಿಂತಲೂ ಮುಂಚೆ ಹರಿಹರಕವಿ ಶಿವಶರಣರ ರಗಳೆಗಳನ್ನು ಬರೆದಿರುವ ನಾದರೂ ಆತನ ಕಾವ್ಯಗಳಲ್ಲಿ ವೀರಶೈವ ಪುರಾಣದ ಲಕ್ಷಣಗಳಿಲ್ಲ. ಆತನು ಕವಿ, ಪುರಾಣಕರ್ತೃವಲ್ಲ. ರಾಘವಾಂಕನಿಂದ ಮುಂದೆ ಪದ್ಮಣಾಂಕನು 'ಪದ್ಮರಾಜ ಪುರಾಣ'ವನ್ನು ಬರೆದ. ಆತನಿಂದ ಮುಂದೆ ಕಾಣಬರುವ

ಹಿರಿಯ ಹೆಸರೆಂದರೆ ಭೀಮಕವಿ. ಆತನ 'ಬಸವ ಪುರಾಣ' ವೀರಶೈವ ಪುರಾಣಗಳಲ್ಲೆಲ್ಲ ಬಹು ಮುಖ್ಯವಾದುದು, ಅಲ್ಲಿಂದ ಮುಂದಿನವರಿಗೆಲ್ಲ ಮಾರ್ಗದರ್ಶಕವಾದುದು. ಆ ಗ್ರಂಥವನ್ನು ಒಂದು 'ಕವಿಕಾವ್ಯ ವಿಭಾಗ ಸ್ಥಾನ' ಎಂದು ಕರೆಯಬಹುದು. ಆದರ ಹಿಂದೆ ನೋಡಿದಾಗ ಬಹುಮಟ್ಟಿಗೆ ಜೈನ ಕವಿಗಳು, ಚಂಪು ಕಾವ್ಯಗಳು ; ಮುಂದೆ ನೋಡಿದಾಗ ಬಹುಮಟ್ಟಿಗೆ ವೈದಿಕ ಮತ್ತು ವೀರಶೈವ ಕವಿಗಳು, ದೇಶೀಯ ಛಂದಸ್ಸಿನ ಕಾವ್ಯಗಳು. ಬಸವಪುರಾಣಕ್ಕಿಂತ ಹಿಂದಿನ ಷಟ್ಪದಿ ಕಾವ್ಯಗಳು—ರಾಘವಾಂಕನನ್ನು ಬಿಟ್ಟರೆ—ಕಸುಗಾಯಿಗಳು, ಚಂಪು ಶೈಲಿಯನ್ನು ಅನುಕರಿಸುವ ವಿಕೃತಿಗಳು ; ಬಸವ ಪುರಾಣದಿಂದ ಮುಂದಕ್ಕೆ ಷಟ್ಪದಿಯ ಯುಗವೇ ಪ್ರಾರಂಭವಾಗುತ್ತದೆ.

ವೀರಶೈವ ಪುರಾಣಗಳಿಂದ ಕನ್ನಡ ಸಾಹಿತ್ಯಕ್ಕೆ ಆಗಿರುವ ಉಪಕಾರ ಅಲ್ಪವಾದುದೇನೂ ಅಲ್ಲ ; ಈ ಪುರಾಣಗಳೆಲ್ಲವೂ ಸಾಮಾನ್ಯವಾಗಿ ಸರಳ ಸುಲಭವಾದ ಹಾಡುಗಬ್ಬ—ಷಟ್ಪದಿ, ಸಾಂಗತ್ಯ—ಗಳಲ್ಲಿರುವುದರಿಂದ ಆ ಬಾಲ ಗೋಪಾಲರಿಗೆ, ಹೆಂಗಸರು ಮಕ್ಕಳಿಗೆ, ಅರ್ಥವಾಗುತ್ತವೆ. ಹೀಗೆ ಅವು ಪಾಮರರಂಜಕವಾಗಿರುವಂತೆ ಪಂಡಿತರಿಗೂ ಮೆಚ್ಚಿಗೆಯಾಗಿವೆ. ಪುರಾಣಕರ್ತರಿಂದ ಷಟ್ಪದಿ ಚೆನ್ನಾಗಿ ಪಳಗಿ ಸಂಪದ್ಯುಕ್ತವಾಯಿತು, ಎಂತಹ ಉನ್ನತ ಭಾವಗಳನ್ನಾದರೂ ಲೀಲಾಜಾಲವಾಗಿ ಹೇಳುವಷ್ಟು ಶ್ರೀಮಂತವಾಯಿತು. ಭಾವೌನ್ನತ್ಯದೊಡನೆ ಭಾಷಾಪ್ರೌಢಿಮೆಯನ್ನೂ ಒಳಗೊಂಡ ಪುರಾಣಗಳೂ ಉಂಟು. ಇದಕ್ಕೂ ಹೆಚ್ಚಾಗಿ, ವೀರಶೈವ ಪುರಾಣಗಳ ಪ್ರಾಚುರ್ಯದಿಂದ ಸಾಕಷ್ಟು ಜೀವನ ಚರಿತ್ರೆಗಳು ಕನ್ನಡ ಸಾಹಿತ್ಯಕ್ಕೆ ಇಳಿದು ಬಂದಂತಾಯಿತು.

ಈಗ ಕುಮಾರವ್ಯಾಸಯುಗದ ವೀರಶೈವ ಕಾವ್ಯಕರ್ತೃಗಳಲ್ಲಿ ಮುಖ್ಯರಾದವರನ್ನು ಕುರಿತು ವಿವೇಚಿಸೋಣ.

### ಕುಮಾರವ್ಯಾಸ ಯುಗದ ವಚನಕಾರರು :

ವಿಜಯನಗರದ ದೊರೆ ಪ್ರೌಢದೇವರಾಯನ ಕಾಲದಲ್ಲಿ ಆತನ ದಂಡನಾಯಕನಾದ ಜಕ್ಕಣಾರ್ಯನೂ ೧೦೧ ವಿರಕ್ತರೂ ವೀರಶೈವದ ಪ್ರಚಾರದಲ್ಲಿ

ಪ್ರವೃತ್ತರಾಗಿ, ವಚನವಾಙ್ಮಯದ ಪುನರುಜ್ಜೀವನ ಕಾರ್ಯದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು. ಜಕ್ಕಣನು ವಚನವಾಙ್ಮಯವನ್ನು ವ್ಯಾಸಂಗ ಮಾಡಬೇಕೆಂದು ಬಯಸಲು, ಆತನ ಗುರುವಾದ ಕುಮಾರ ಬಂಕನಾಥನು ಆತನನ್ನು ತನ್ನ ಗುರುವಾದ **ಮಹಾಲಿಂಗದೇವ** (೧೪೨೫)ನ ಬಳಿಗೆ ಕರೆದೊಯ್ದನು. ಆತನು ಜಕ್ಕಣನ ಉಪಯೋಗಕ್ಕಾಗಿ 'ಏಕೋತ್ತರ ಶತಸ್ಥಲ', 'ಪ್ರಭುದೇವರ ಷಟ್‌ಸ್ಥಲಜ್ಞಾನ ಚಾರಿತ್ರ ವಚನದ ಟೀಕೆ'—ಎಂಬ ಎರಡು ವಚನ ಸಂಕಲನಗಳನ್ನು ಸಂಪಾದಿಸಿ, ನಿಂತುಹೋಗಿದ್ದ ವಚನ ವಾಙ್ಮಯದ ಚಕ್ರವನ್ನು ಮತ್ತೆ ಹರಿಯಬಿಟ್ಟನು. ಈತನ ಗ್ರಂಥಗಳೆರಡೂ ಪುರಾತನ ಸಂಗ್ರಹಗಳು. ಬಸವಣ್ಣ, ಚೆನ್ನ ಬಸವಣ್ಣ, ಪ್ರಭುದೇವ ಮೊದಲಾದ ಶರಣರ ಸುಮಾರು ೧೫೦೦ ವಚನಗಳನ್ನು ಆಯ್ದುಕೊಂಡು ಅವುಗಳನ್ನು ಅಂಗಸ್ಥಲ ೪೪, ಲಿಂಗಸ್ಥಲ ೫೭–ಒಟ್ಟು ೧೦೧ ಸ್ಥಲಗಳ ಅನುಕ್ರಮದಲ್ಲಿ ವಿಭಾಗಿಸಿ ರಚಿಸಿದ ಗ್ರಂಥವೇ 'ಏಕೋತ್ತರ ಶತಸ್ಥಲ.' ಈತನ ಎರಡನೆಯ ಗ್ರಂಥವು 'ಪ್ರಭುದೇವರ ವಚನದಾಖ್ಯಾನ.' 'ಇದನು ಎನ್ನಲ್ಲಿ ತೋರಿದ ಅಲ್ಪಮತಿಯಿಂದ ನಾನು ಅನ್ವಯ ಮಾಡಿದೆನು' ಎಂದು ಮಹಾಲಿಂಗದೇವನ ಗ್ರಂಥಾಂತ್ಯದ ಹೇಳಿಕೆ. ಪ್ರಭುದೇವನ ಒಗಟಿಯಂತಿರುವ ವಚನಗಳು ವ್ಯಾಖ್ಯಾನ ಸಾಪೇಕ್ಷವಾದುವು. ಇವುಗಳಿಗೆ ಟೀಕೆಯನ್ನು ಬರೆದು, ವಚನಗಳನ್ನು ಅರ್ಥೈಸುವ ಸಂಪ್ರದಾಯವನ್ನು ಪ್ರಾರಂಭಿಸಿದ ಕೀರ್ತಿ ಮಹಾಲಿಂಗದೇವನಿಗೆ ಸಲ್ಲಬೇಕು. ಈತನಿಂದ ವಚನಗಳನ್ನು ರಕ್ಷಿಸಿಕೊಂಡು ಪ್ರಚಾರಮಾಡುವ ಕಾರ್ಯವೂ ಆರಂಭವಾದಂತಾಯಿತು.

ಮಹಾಲಿಂಗದೇವನ ಶಿಷ್ಯರಾದ **ಕುಮಾರ ಬಂಕನಾಥ** (೧೪೩೦) ಮತ್ತು **ಜಕ್ಕಣಾರ್ಯ** (೧೪೩೦)–ಈ ಇಬ್ಬರೂ ವಚನ ವಾಙ್ಮಯ ಜಗತ್ತಿನಲ್ಲಿ ಪ್ರಸಿದ್ಧರಾದವರೇ. ಕುಮಾರ ಬಂಕನಾಥನು 'ಷಟ್‌ಸ್ಥಲೋಪದೇಶ' 'ಪ್ರಭುದೇವನ ಟೀಕಿನ ವಚನ' ಗಳ ಕರ್ತೃವಾಗಿ, ತನ್ನ ಗುರುವಿನ ಕಾರ್ಯವನ್ನು ಮುಂದುವರಿಸಿದ. ಈತನ ಗ್ರಂಥಗಳು ಗುರುವಿನ ಗ್ರಂಥಗಳಂತೆಯೇ ಇವೆ ; ವಿಶೇಷವೇನೂ ಇಲ್ಲ. ಈತನ ಶಿಷ್ಯನಾದ ಜಕ್ಕಣಾರ್ಯನು ಉನ್ನತಾಧಿಕಾರಿಯಾಗಿದ್ದುದಲ್ಲದೆ 'ಭಕ್ತಿ ಭಂಡಾರಿ' ಯೂ ಆಗಿದ್ದನು. ಈತನು ವೀರಶೈವ ಗ್ರಂಥಗಳ ರಚನೆಗಾಗಿ ಅಪಾರವಾಗಿ ಹಣವನ್ನು ನೀಡಿದುದಲ್ಲದೆ,

ತಾನೇ ಗ್ರಂಥರಚನೆಗೆ ಕೈಹಾಕಿ 'ಏಕೋತ್ತರ ಶತಸ್ಥಲ' ವನ್ನು ಬರೆದಿದ್ದಾನೆ. 'ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ' ದಲ್ಲಿ ಈ ಗ್ರಂಥರಚನೆಯನ್ನು ಕುರಿತ ಒಂದು ಕಥೆ ಇದೆ. ಪ್ರೌಢರಾಯನ ಗುರುವಾದ ಮುಕುಂದಪೆದ್ದಿಯೆಂಬ ವೈಷ್ಣವನು ಭಾರತ ರಾಮಾಯಣಗಳನ್ನು ಒಂಭತ್ತು ತಿಂಗಳು ಬೋಧಿಸಿ, ಅವುಗಳಿಗೆ ಮೆರವಣಿಗೆ ಮಾಡಿಸಿದನಂತೆ! ಇದನ್ನು ಕಂಡ ಜಕ್ಕಣಾರ್ಯನು ತನ್ನ ಗುರು ಬಂಕನಾಥನ ನಿರೂಪಣೆಯಂತೆ ತನ್ನ 'ಏಕೋತ್ತರ ಶತಸ್ಥಲ' ವನ್ನು ಬರೆದು. ಕಲ್ಲಮಠದ ಪ್ರಭುದೇವ, ಚಾಮರಸ, ಕಾಸ್ಥಲದ ನಾಗಿದೇವ, ವೀರಣ್ಣೊಡೆಯ ಮೊದಲಾದ ೧೦೧ ವಿರಕ್ತರೊಡನೆ ಆ ಗ್ರಂಥವನ್ನು ಪುಷ್ಪಕದಲ್ಲಿಟ್ಟು ಸಂಭ್ರಮದಿಂದ ಮೆರವಣಿಗೆ ಮಾಡಿಸಿದನಂತೆ: 'ಏಕೋತ್ತರ ಶತಸ್ಥಲ' ವು ಪುರಾತನರ ೫೫೦ ವಚನಗಳನ್ನು ೧೦೧ ಸ್ಥಲಗಳ ಅನುಕ್ರಮದಲ್ಲಿ ವಿಭಾಗಿಸಿದೆ.

ಜಕ್ಕಣಾರ್ಯನ ಸಮಕಾಲೀನನಾದ **ಕಲ್ಲಮಠದ ಪ್ರಭುದೇವ** (೧೪೩೦) ನು 'ಲಿಂಗಲೀಲಾ ವಿಲಾಸ ಚಾರಿತ್ರ', 'ಪ್ರಭುದೇವರ ಮಂತ್ರಗೋಪ್ಯದ ಟೀಕೆ' ಗಳನ್ನು ಬರೆದಿದ್ದಾನೆ. ಲಿಂಗಲೀಲಾ ವಿಲಾಸವು ಷಟ್‌ಸ್ಥಲವನ್ನು ಬೋಧಿಸುವ ವಚನಗಂಥ್ರ. ಅದರ ಆರಂಭದಲ್ಲಿ 'ಭಕ್ತಿ ಕಾಂಡವೆ ಷಟ್‌ಸ್ಥಲ ಮಾರ್ಗ. ಈ ಮಾರ್ಗವೆ ಲಿಂಗಲೀಲಾವಿಲಾಸ ಚಾರಿತ್ರ' ಎಂದು ಹೇಳಿದೆ. ಪ್ರಭುದೇವ, ಬಸವಣ್ಣ, ಚೆನ್ನಬಸವಣ್ಣ, ಮಹಾದೇವಿಯಕ್ಕ ಮೊದಲಾದ ಪುರಾತನ ಶರಣರ ೭೩೦ ವಚನಗಳನ್ನು ಆಯ್ದುಕೊಂಡು, ಷೋಡಶಸ್ಥಲ ಪರಿಕ್ರಮದಿಂದ ಅವುಗಳನ್ನು ಸೇರಿಸಿ ವ್ಯಾಖ್ಯಾನ ಮಾಡಲಾಗಿದೆ, ಈ ಗ್ರಂಥದಲ್ಲಿ. ಸ್ಥಲಗಳ ಅಡಿಯಲ್ಲಿ ಕೆಲವು ಸಂಸ್ಕೃತ ಶ್ಲೋಕಗಳೂ ಅವುಗಳ ಟೀಕೆಯೂ ಕಂಡುಬರುತ್ತದೆ.

'ಪ್ರಭುದೇವನ ಮಂತ್ರಗೋಪ್ಯದ ಟೀಕೆಯಲ್ಲಿ ಷಟ್ಪದಿಯಂತಿರುವ ೨೭ ಪದ್ಯಗಳಿವೆ; ಆ ಒಂದೊಂದು ಪದ್ಯಕ್ಕೂ ವಿಸ್ತಾರವಾದ ಟೀಕೆ ಇದೆ. ಪ್ರಭುದೇವನ ಸಂಕೇತಾರ್ಥದ ವಚನಗಳಿಗೆ ಇಂತಹ ವಿವರಣೆ ಅತ್ಯಗತ್ಯ. ಮಂತ್ರಗೋಪ್ಯದ ಈ ಒಂದು ಪದ್ಯವನ್ನು ನೋಡಿ—

ಎಂಟೆಸಳ ಕಮಲದಾ ನವಬ್ರಹ್ಮ ಪುರದೊಳಗೆ
ಎಂಟು ಬೀದಿಯೊಳೆಂಟು ಕರಿಗಳುಂಟು

ಎಂಟು ಕರಿಗಳ ಸುಟ್ಟು ಕಂಟಕಂಗಳ ಗೆಲಿದು
ದಾಂಟಿದೆನು ಸಂಸಾರ ಸಾಗರವನು ||

ಇಲ್ಲಿನ ಒಂದೊಂದು ಶಬ್ದಕ್ಕೂ ಟೀಕೆಯಲ್ಲಿ ವಿವರಣೆಯನ್ನು ಕೊಟ್ಟು ಅದರ ಕೆಳಗೆ ಒಟ್ಟು ತಾತ್ಪರ್ಯವನ್ನು ಕೊಡುತ್ತಾನೆ—'ಜ್ಞಾನದಿಂದ ದೇಹವಾಸನೆಯಳಿದು, ಆ ಶಿವಜ್ಞಾನದಿಂದವೆ ಭವವಿರಹಿತವಹುದಲ್ಲದೆ, ಮಿಕ್ಕಿನ ಅಷ್ಟಾಂಗಯೋಗಗಳ ತನುದಂಡನೆಯ ಕರ್ಮಗಳಿಂದ ದೇಹವಾಸನೆಯಳಿಯದೆಂದು ಪ್ರಭುದೇವರು ಸಿದ್ಧರಾಮಯ್ಯ ದೇವರಿಗೆ ಉಪದೇಶಿಸಿದರೆಂಬುದೀ ವಚನಾರ್ಥ'. ಕಲ್ಲಮಠದ ಪ್ರಭುದೇವನು ತನ್ನ ಗ್ರಂಥ 'ಶಿವಜ್ಞಾನ ದರ್ಪಣವಾಗಿರ್ಪುದು' ಎಂದು ಹೇಳಿಕೊಂಡಿದ್ದಾನೆ.

ಮಗ್ಗೆಯ ಮಾಯಿದೇವನು 'ಮಗ್ಗೆಯ ಮಾಯಿದೇವ ವಚನ' ಬರೆದಿರುವುದಾಗಿ ಪ್ರತೀತಿ ಇದೆ. ಆದರೆ ಆತನ ಈ ಗ್ರಂಥ ಸಿಕ್ಕಿಲ್ಲ. ತೋಂಟದ ಸಿದ್ಧಲಿಂಗಯತಿಯ ಶಿಷ್ಯನಾದ ಗುಬ್ಬಿಯ ಮಲ್ಲಣ್ಣ (೧೫೭೫) ನು ತನ್ನ 'ಗಣಭಾಷ್ಯ ರತ್ನಮಾಲೆ' ಅಥವಾ 'ಗಣಭಾಷಿತ ರತ್ನಮಾಲೆ' ಯಲ್ಲಿ ಹಿಂದಿನ ೯೭೫ ವಚನಗಳನ್ನು ಸಂಗ್ರಹಿಸಿದ್ದಾನೆ. ತನ್ನ ಗ್ರಂಥವನ್ನು ವೀರಶೈವ ಪ್ರತಿಷ್ಠಾಪನಾಚಾರ್ಯ, ದಿವ್ಯವೇದಾಂತ ಶಿರೋಮಣಿ ಇತ್ಯಾದಿಯಾಗಿ ಹೊಗಳಿಕೊಂಡು 'ಬಸವರಾಜರು, ಚೆನ್ನಬಸವದೇವರು, ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳು ನೂರೊಂದರಲ್ಲಿ ನಡೆದು ನುಡಿದ ವಚನಗಳು ಸ್ಥಲಭಿನ್ನವಾಗಿರ್ದೊಡೆ ಚಂದವಲ್ಲೆಂದು ಕಂಠಮಾಲೆಯ ಕೋಲು ಹೆಣಿಗೆಯರಿದು ಸೇರಿಸಿದೆನು' ಎಂದು ತನ್ನ ಗ್ರಂಥದ ಸ್ವರೂಪವನ್ನು ಆತ ಹೇಳಿಕೊಂಡಿದ್ದಾನೆ. ಈತನು ಉಳಿದ ಟೀಕಾಕಾರರಿಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ ವೇದಾಗಮ ಪುರಾಣ ಇತಿಹಾಸಾದಿ ಗ್ರಂಥಗಳಿಂದ ಪ್ರಮಾಣಗಳನ್ನು ಕೊಟ್ಟು ಪುರಾತನರ ವಚನಗಳನ್ನು ವಿವರಿಸಹೊರಟಿದ್ದಾನೆ. ಪುರಾತನರ ವಚನಗಳು ಅವರ ನಡೆನುಡಿಗಳನ್ನು ಪ್ರತಿಬಿಂಬಿಸುತ್ತವೆಯಷ್ಟೆ? ಆದ್ದರಿಂದ ಆ ವಚನಗಳಲ್ಲಿ ವೀರಶೈವರು ಆಚರಿಸಬೇಕಾದ ಆಚರಣೆಗಳನ್ನೂ ವೀರಶೈವ ಸಿದ್ಧಾಂತವನ್ನೂ ಏಕ ಕಾಲದಲ್ಲಿಯೇ ಕಾಣಿಸುವಂತಹ ವಚನಗಳನ್ನು ಈತ ಆಯ್ದುಕೊಂಡಿದ್ದಾನೆ.

ವಚನಸಂಗ್ರಹ ಕಾರ್ಯದ ಅತ್ಯಂತ ಶ್ರೇಷ್ಠವಾದ ಮಾದರಿ 'ಶೂನ್ಯ ಸಂಪಾದನೆ' ಯಲ್ಲಿ ಕಂಡು ಬರುತ್ತದೆ. ಆ ಗ್ರಂಥ ಮತ್ತು ಅದರ ಸಂಕಲನ ಕಾರರನ್ನು ಕುರಿತು ಹಿಂದೆಯೇ ಹೇಳಿವೆ. ಉಳಿದ ಸಂಕಲನಕಾರರಲ್ಲಿ 'ಪದ್ಮೆಕೋತ್ತರ ಶತಸ್ಥಲ' ವನ್ನು ಬರೆದ ಬಸವೇಶ (೧೬೦೦) ಪ್ರಮುಖ ನಾದವನು. ಶರಣರ ವಚನಗಳನ್ನು ವಾರ್ಧಕಷಟ್ಪದಿಯ ಪದ್ಯರೂಪಕ್ಕೆ ತಿರುಗಿಸಿರುವುದು ಈತನ ವೈಶಿಷ್ಟ್ಯ.

ಇನ್ನು ಕುಮಾರವ್ಯಾಸ ಯುಗದಲ್ಲಿ ಸ್ವತಂತ್ರ ಕೃತಿರಚನೆಗೆ ಕೈಯಿಟ್ಟ ವಚನಕಾರರನ್ನು ಸ್ವಲ್ಪ ನೋಡೋಣ. ಅವರಲ್ಲಿ ಅಗ್ರಗಣ್ಯನಾದವನು **ತೋಂಟದ ಸಿದ್ಧೇಶ್ವರ** (೧೪೭೦). ಈತನನ್ನು ನಿರಂಜನಗಣೇಶ್ವರನ ಅವ ತಾರವೆಂದು ಚೆನ್ನಬಸವ ಪುರಾಣದಲ್ಲಿ ವರ್ಣಿಸಿದೆ. ಪರಮೇಶ್ವರನ ಅಪ್ಪಣೆ ಯಂತೆ ಆತನು ಷಟ್‌ಸ್ಥಲದ ಉದ್ಧಾರಕ್ಕಾಗಿ ೭೦೦ ಗಣಗಳೊಂದಿಗೆ ಕೈಲಾಸದಿಂದ ಭೂಲೋಕಕ್ಕೆ ಅವತರಿಸಿದ. ಹರದನಹಳ್ಳಿಯ ಗೋಸಲ ಚೆನ್ನಬಸವೇಶ್ವರನ ಕರಸಂಜಾತ (ಶಿಷ್ಯ)ನಾದ ಸಿದ್ಧೇಶ್ವರನು, ಗುರುವಿನಿಂದ ದೀಕ್ಷೆಯನ್ನು ಪಡೆದು ದೇಶಸಂಚಾರ ಮಾಡುತ್ತಾ, ಕಗ್ಗೆರೆಯೆಂಬ ಹಳ್ಳಿಯ ಸಮೀಪಕ್ಕೆ ಬಂದು, ಅಲ್ಲಿದ್ದ ಒಂದು ತೋಟದಲ್ಲಿ ಇಳಿದುಕೊಂಡನು. ನಂಬಿ ಯಣ್ಣನೆಂಬ ಒಬ್ಬ ಭಕ್ತನು ಈತನನ್ನು ಕಂಡು, ಭಕ್ತಿಯಿಂದ ವಂದಿಸಿ, ಭಿಕ್ಷಕ್ಕೆ ಆಹ್ವಾನಿಸಿದನು. ಗುರುವು ಅದಕ್ಕೆ ಒಪ್ಪಿದನು. ಇದನ್ನು ಮನೆಯಲ್ಲಿ ತಿಳಿಸಿಬಂದು ಕರೆದೊಯ್ಯುವುದಾಗಿ ಹೇಳಿ ಹೋದ ನಂಬಿಯಣ್ಣ ಊರನ್ನು ಸೇರುತ್ತಲೆ, ಅಲ್ಲಿನ ಯಾವುದೋ ಒಂದು ಜಗಳದಲ್ಲಿ ಮಗ್ನನಾಗಿ ಗುರುವನ್ನು ಮರತೇ ಬಿಟ್ಟ. ದಿನಗಳ ಮೇಲೆ ದಿನಗಳು ಉರುಳಿದವು. ಧ್ಯಾನದಲ್ಲಿ ಕುಳಿತು ಸಮಾಧಿಸ್ಥನಾದ ಸಿದ್ಧೇಶ್ವರನ ಮೇಲೆ ಹುತ್ತ ಬೆಳೆಯಿತು. ಹಲವು ಕಾಲದ ಮೇಲೆ ಆಕಸ್ಮಾತ್ತಾಗಿ ಆತನ ಇರವನ್ನು ಅರಿತ ಭಕ್ತಜನರು ಹುತ್ತವನ್ನು ಅಗೆದು, ಆತನನ್ನು ಉಪಚರಿಸಿದರು. ಆತನ ಕೀರ್ತಿ ಎಲ್ಲೆ ಲ್ಲಿಯೂ ಹರಡಿತು. ತೋಟದಲ್ಲಿಯೇ ಬಹುಕಾಲ ವಸತಿಮಾಡಿದ ಆತನನ್ನು 'ತೋಂಟದ ಸಿದ್ಧಲಿಂಗಯತಿ' ಎಂದು ಜನ ಕರೆದರು. ಆತನ ನಡತೆಯಿಂದ, ಉಪದೇಶದಿಂದ ಆಕರ್ಷಿತರಾದ ಜನ ಅಮಿತ ಸಂಖ್ಯೆಯಲ್ಲಿ ಆತನ ಸುತ್ತಲೂ ನೆರೆದರು. ಆತನು ಅವರ ಆರಾಧ್ಯ ದೈವವಾದ. ಬಸವಾದಿ ಪ್ರಮಥರ ಕಾಲ

ದಲ್ಲಿ ಕಾಣಬರುತ್ತಿದ್ದ ಧಾರ್ಮಿಕವಾತಾವರಣ ಮತ್ತೆ ಮೂಡುವಂತೆ ಮಾಡಿ ಜನರಲ್ಲಿ ಧರ್ಮಶ್ರದ್ಧೆ ಸಾತ್ವಿಕೋತ್ಸಾಹಗಳನ್ನು ಕೆರಳಿಸಿ, ಜನಜಾಗ್ರತಿಯನ್ನು ಸಾಧಿಸಿದ ಸಿದ್ಧೇಶ್ವರನು ಬರಿಯ ವ್ಯಕ್ತಿಮಾತ್ರನಾಗದೆ ಒಂದು ಹಿರಿಯ ಸಂಸ್ಥೆಯಂತಾದನು. ಆತ ನೆಲಸಿದ ನೆಲ ಭೂಕೈಲಾಸವಾಯಿತು. ಆತನ ಸುತ್ತಲೂ ನೆರೆದ ಭಕ್ತಸಮೂಹ ವೀರಶೈವದ ಪ್ರಚಾರ ಪ್ರಸಾರಗಳಲ್ಲಿ ಕಂಕಣಬದ್ಧರಾದರು. ಜನಜೀವನದ ಮೇಲೆ ಅದ್ಭುತವಾದ ಪ್ರಭಾವವನ್ನು ಬೀರಿ, ಅವರ ಇಹಪರಗಳ ಶ್ರೇಯಸ್ಸನ್ನು ಸಾಧಿಸಿಕೊಟ್ಟ ಈ ಕಾರಣ ಪುರುಷನನ್ನು ಜನರು ದೇವರ ಅವತಾರವೆಂದು ಕರೆದು, ಹಲವು ಪವಾಡಗಳನ್ನು ಈತನಲ್ಲಿ ಆರೋಪಿಸಿರುವುದು ಸಹಜವಾಗಿಯೇ ಇದೆ. ತುಮುಕೂರು ಜಿಲ್ಲೆಯ ಎಡೆಯೂರೆಂಬಲ್ಲಿ ನೆಲಸಿದ ತೋಂಟದ ಸಿದ್ಧೇಶ್ವರನು ಲೋಕಪೂಜಿತನಾಗಿ ಬಾಳಿ, ಹಲವು ವಚನಗಳನ್ನು ಹಾಡಿ, ಕಡೆಗೆ ಸಮಾಧಿಯನ್ನು ಪ್ರವೇಶಿಸಿ, ಅಲ್ಲಿಯೇ ನೆಲಸಿದನು. ಆತನ ಕಾಲದಲ್ಲಿ ಹಂಪೆಯಂತೆ ಎಡೆಯೂರೂ ವೀರಶೈವ ಧರ್ಮದ ಕೇಂದ್ರವಾಯಿತು. ಆತನು ಸಮಾಧಿಯನ್ನು ಪ್ರವೇಶಿಸಿದಮೇಲೆ, ಆತನ ಜ್ಞಾಪಕಾರ್ಥವಾಗಿ ಭಕ್ತರು ಎಡೆಯೂರಲ್ಲಿ ಒಂದು ಶಿವಾಲಯವನ್ನು ಕಟ್ಟಿಸಿ, ಶಾಸನವನ್ನು ನೆಡಿಸಿದರು. ಆತನ ಮಹಿಮೆಯನ್ನು ಸಾರುವ ಮತ್ತು ಆತನಿಗಾಗಿ ಕಲ್ಲು ಮಠವನ್ನು ಕಟ್ಟಿಸಿದ ಭಕ್ತನನ್ನು ಹೆಸರಿಸುವ ಆ ಶಾಸನವೂ, ಸಿದ್ಧಲಿಂಗೇಶ್ವರನ ಗುಡಿಯೂ ಇಂದಿಗೂ ಎಡೆಯೂರಲ್ಲಿ ಇವೆ. ಇಂದಿಗೂ ಆ ಊರು ಶಿವಭಕ್ತರ ಪುಣ್ಯಭೂಮಿಯಾಗಿದೆ; ಜಾಗ್ರತ ಸ್ಥಳವೆಂದು ಪ್ರಸಿದ್ಧಿಯಾಗಿದೆ. ವಿರಕ್ತ ತೋಂಟದಾರ್ಯ. ಶಾಂತೇಶ ಮೊದಲಾದ ಕವಿಗಳು ಆತನ ಚರಿತ್ರೆಯನ್ನು ವಸ್ತುವಾಗಿ ಬಳಸಿಕೊಂಡು ಕಾವ್ಯರಚನೆ ಮಾಡಿದ್ದಾರೆ. ಅನೇಕ ಕವಿಗಳು ತಮ್ಮ ಕಾವ್ಯಕರ್ಮಕ್ಕೆ ಕೈ ಇಕ್ಕುವ ಮುನ್ನ ಆತನಿಗೆ ಸ್ತುತಿರೂಪದ ಪುಷ್ಪಾಂಜಲಿಯನ್ನು ಅರ್ಪಿಸುತ್ತಾರೆ.

ತೋಂಟದ ಸಿದ್ಧೇಶ್ವರನ ವಚನಗ್ರಂಥಕ್ಕೆ 'ಷಟ್‌ಸ್ಥಲಜ್ಞಾನ ಸಾರಾಮೃತ'ವೆಂದು ಹೆಸರು. ಅಲ್ಲಿನ ಪ್ರತಿಯೊಂದು ವಚನವೂ 'ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ' ಎಂದು ಮುಕ್ತಾಯವಾಗುತ್ತದೆ. ಈ ವಚನಗಳಲ್ಲಿ ಬಸವಣ್ಣ ಅಕ್ಕಮಹಾದೇವಿ ಮೊದಲಾದ ಪುರಾತನ ವಚನಕಾರರ

ಪ್ರಭಾವ ಕಂಡುಬರುವದು ಸ್ವಾಭಾವಿಕ. ಅಲ್ಲಿನ ಮಹೋನ್ನತವಾದ ಕಾವ್ಯ ಗುಣ ಇಲ್ಲಿ ಕಾಣಬರುವುದಿಲ್ಲವಾದರೂ ಭಕ್ತನ ನಿಷ್ಠೆ, ಶ್ರದ್ಧೆ, ಆರ್ತಭಾವ ಗಳಿಗೆ ಕೊರತೆಯೇನೂ ಇಲ್ಲ. ಸ್ವಾನುಭಾವಜ್ಞಾನವುಳ್ಳವರೇ ಲಿಂಗಾಂಗ ಸಮರಸೈಕ್ಯರೆಂದು ಹೇಳುತ್ತಾ 'ಸೂರ್ಯನ ಬೆಳಗಿಂಗೆ ಕೋಳ್ಗಿಯ ಬೆಳಗ ಹಿಡಿಯಲುಂಟೆ ಮರುಳೆ? ತನ್ನ ಮುಖದ ತಾ ಬಲ್ಲಂಗೆ ಕನ್ನಡಿಯ ಹಿಡಿದು ನೋಡಲುಂಟೆ ಹೇಳಾ? ತನ್ನ ಸುಖಃದ ಸೂಕ್ಷ್ಮವ ತಾನರಿದ ಸ್ವಯಜ್ಞಾನಿಗೆ ಇನ್ನಾವ ಆಗಮದ ಬೋಧೆ ಏಕೆ ಹೇಳಾ? ಆಗಮಶಿಕ್ಷೆ ಎಂಬುದು ಲೋಗರಿಗಲ್ಲದೆ ಆದಿಯಲ್ಲಿ ಶಿವಬೀಜವಾದ ಮಹಾಮಹಿಮರಿ ಗುಂಟೆ?....' ಎಂದು ಹೇಳುತ್ತಾನೆ. ಮಹಾ ಜ್ಞಾನಸ್ವರೂಪಿಗಳಾದ ಶರ ಣರೇ ಲಿಂಗವೆಂದು ತಿಳಿದ ಮಹಾತ್ಮರಿಗೆ ಸಂಕಲ್ಪ ಭ್ರಮೆಯಿಲ್ಲವಂತೆ— 'ಸುಧೆಯೊಳಗೆ ವಿಷವುಂಟೆ? ಮಧುರದೊಳಗೆ ಕಹಿಯುಂಟೆ? ದಿನಮಣಿ ಯೊಳಗೆ ಕಪ್ಪುಂಟೆ? ಬೆಳದಿಂಗಳೊಳಗೆ ಕಿಚ್ಚುಂಟೆ? ಅಮೃತ ಸಾಗರದೊ ಳಗೆ ಬೇವಿನ ಬಿಂದುವುಂಟೆ?' ಎಂದು ಅದನ್ನು ಸಮರ್ಥಿಸುತ್ತಾನೆ. 'ನಿತ್ಯ ತೃಪ್ತಂಗೆ ಹಸಿವಿನ ಭಯವುಂಟೆ? ಸತ್ಯಜ್ಞಾನಿಗೆ ಅಜ್ಞಾನದ ಭಯವುಂಟೆ? ನಿಜದಿಂದ ತನ್ನ ತಾನರಿದು ತಾನೇ ತಾನಾದಾತನು ಮಾಯೆಯ ಗಜಬಜೆಯ ಹುಸಿಗೆ ಬೆದರುವನೆ ಮಹಾಶರಣನು?'— ಈ ಮಾತುಗಳಲ್ಲಿ ಅನುಭಾವದ ಆಳಕ್ಕಿಂತಲೂ ಮನಸ್ಸಿನ ಸ್ಥೈರ್ಯ ಹೆಚ್ಚಾಗಿದೆ. ಸಿದ್ಧೇಶ್ವರನಲ್ಲಿ ಸಾಧಕನ ಕಳವಳ ಆತ್ಮರೋದನಗಳಿಗಿಂತಲೂ ಸಿದ್ಧಪುರುಷನ ಪ್ರಶಾಂತತೆಯೇ ಹೆಚ್ಚು 'ಉದಯಕಾಲದೊಳೆದ್ದು ಹೂ ಪತ್ರೆಗಳ ಕೊಯ್ಯೆಂದು ಹೊರ ಉಪಚಾರ ಮಾಡುವುದೆಲ್ಲ ಬರಿಯ ಭಾವದ ಬಳಲಿಕೆ ನೋಡಾ. ಅಳಲದೆ ಬಳಲದೆ ಆಯಾಸಬಡದೆ ಒಳಗಿನ ಜ್ಯೋತಿಯ ಬೆಳಗಿನ ಕಳೆಯ ಕಮಲವ ಪೂಜಿಸಬಲ್ಲ ಶರಣಂಗೆ ಬೆಳಗಾಗಿ ಎದ್ದು ಪೂಜಿಸಿಹೆನೆಂಬ ಕಳವಳವೇನು ಹೇಳಾ!' ಎಂದು ಆತನು ಕೇಳುತ್ತಾನೆ. ತಾನು ಸಿದ್ಧಿಯನ್ನು ಪಡೆದವ ನೆಂದೇ ಆತನ ಹೇಳಿಕೆ. 'ಜಲಧಿಯ ಸಾಗರವ ದಾಂಟಿ, ಅಮೃತ ಸಾಗರವ ಬೆರಸಿ ಅನುಪಮ ಸುಖಿಯಾನಪ್ಪೆ!' ಈ ಮಾತನ್ನು ಕೇಳಿದಾಗ ಆತನು ತನ್ನ ಹೆಸರಿಗೆ ತಕ್ಕಂತೆ ಆತ್ಮಸಿದ್ಧಿಯನ್ನು ಪಡೆದ ಸಿದ್ಧಪುರುಷನೇ ಸರಿ ಯೆನ್ನಿಸುತ್ತದೆ.

ತೋಂಟದ ಸಿದ್ಧೇಶ್ವರನ ಶಿಷ್ಯರಾದ **ಸ್ವತಂತ್ರ ಸಿದ್ಧಲಿಂಗೇಶ್ವರ** (೧೪೮೦) ಮತ್ತು ಗುಮ್ಮಳಾಪುರದ ಸಿದ್ಧಲಿಂಗೇಶ್ವರ (೧೪೮೦) ಈ ಇಬ್ಬರೂ ಸ್ವತಂತ್ರವಾಗಿ ವಚನರಚನೆ ಮಾಡಿದ್ದಾರೆ. 'ನಿಜಗುರು ಸ್ವತಂತ್ರ ಸಿದ್ಧ ಲಿಂಗೇಶ್ವರ'-ಎಂಬ ಅಂಕಿತದಿಂದ 'ಸ್ವತಂತ್ರ ಸಿದ್ಧಲಿಂಗೇಶ್ವರ ವಚನ' ಗಳನ್ನು ಬರೆದ ಸ್ವತಂತ್ರ ಸಿದ್ಧಲಿಂಗೇಶ್ವರನು 'ಮುಕ್ತ್ಯಂಗನೆಯ ಕಂಠಹಾರ' ಮತ್ತು 'ಜಂಗಮುರಗಳೆ' ಎಂಬ ಮತ್ತೆರಡು ಗ್ರಂಥ ಗಳನ್ನೂ ಬರೆದಿದ್ದಾನೆ. ಸಾಹಿತ್ಯ ದೃಷ್ಟಿಯಿಂದ ಈತನ ಯಾವ ಗ್ರಂಥವೂ ಗಮನಾರ್ಹವಾಗಿಲ್ಲ. ವಚನಗಳಲ್ಲಿ ಇರಬೇಕಾದ ಸರಳತೆಯೇನೋ ಇದೆ; ಆದರೆ ಸಂಗ್ರಹಗುಣ ನಿಶಿತತೆಗಳು ಇಲ್ಲ. ಬರವಣಿಗೆ ವಿಷಯಗರ್ಭಿತ ವಾಗಿದ್ದರೂ ಸಾರವತ್ತಾಗಿಲ್ಲ. 'ಕಣ್ಣು ಕಾಲು ಎರಡುಳ್ಳವನು ದೂರ ವೆಯ್ದುವನಲ್ಲದೆ ಕಣ್ಣು ಕಾಲು ಎರಡರೊಳಗೊಂದಿಲ್ಲದವನು ದೂರವೆಯ್ದು ಲರಿಯನೆಂಬಂತೆ ಜ್ಞಾನರಹಿತವಾಗಿ ಕ್ರಿಯೆಯನೆಷ್ಟು ಮಾಡಿದರೇನು? ಅದು ಕಣ್ಣಿಲ್ಲದವನ ನಡೆಯಂತೆ. ಕ್ರಿಯೆರಹಿತನಾಗಿ ಜ್ಞಾನಿಯಾ ದೊಡೇನು? ಅದು ಕಾಲಿಲ್ಲದವನ ಇರವಿನಂತೆ'—ಎಂಬುದು ಎಷ್ಟು ವಾಚ್ಯವಾಗಿದೆ! ಅನೇಕ ವಚನಗಳಲ್ಲಿ ವಿವೇಕಬೋಧನೆ ಕಂಡು ಬಂದರೂ ಭಾವ ಬಂಧುರತೆಯಾಗಲಿ, ಕೊನೆಗೆ ಮಾತಿನ ಚತುರತೆಯಾಗಲಿ ಕಾಣಬರು ವುದಿಲ್ಲ. ಒಮ್ಮೊಮ್ಮೆ 'ವೇಷವ ಧರಿಸಿ, ಭಾಷೆಯ ಕಲಿತು, ದೇಶವ ಸುತ್ತಿ ಬಳಲಬೇಡ; ಜಗದೀಶನ ಪಾದವನೊಲಿದು ಪೂಜಿಸಿರಣ್ಣ' ಎಂಬಂತಹ ಮಾತಿನ ಜೋಡಣೆಯಲ್ಲಿ ಪ್ರಾಸಬದ್ಧತೆಯ ಬೆಡಗು ಕಾಣಬಹುದು. ಆದರೆ ಬುದ್ಧಿಗೆ ಬೆಳಕನ್ನಾಗಲಿ ಹೃದಯಕ್ಕೆ ಆನಂದವನ್ನಾಗಲಿ ಕೊಡುವ ಸಾಮಗ್ರಿ ಆತನ ವಚನಗಳಲ್ಲಿ ಬಹು ಅಪೂರ್ವ. ಹನ್ನೆರಡನೆಯ ಶತಮಾನದ ವಚನ ಗಳನ್ನು ಓದಿದವರಿಗೆ ಇವು ನೀರನ್ನು ಚಪ್ಪರಿಸಿದಂತೆ ಬಹು ಸಪ್ಪೆಯಾಗಿ ತೋರುತ್ತವೆ. ಸ್ವತಂತ್ರ ವಚನರಚನೆ ಬಹುಕಾಲ ನಿಂತು ಹೋಗಿದ್ದುದರಿಂದ ಇವುಗಳಿಗೆ ಒಂದು ಸ್ಥಾನ ನೀಡಬೇಕಾಗಿದೆ.

ಗುಮ್ಮಳಾಪುರದ ಸಿದ್ಧಲಿಂಗೇಶ್ವರನು ತೋಂಟದ ಸಿದ್ಧಲಿಂಗ ಯತಿಗೆ ಶಿಷ್ಯನೂ ಅಹುದು, ಪ್ರಶಿಷ್ಯನೂ ಅಹುದು. ಯತಿಯ ಶಿಷ್ಯ ನಾದ ಬೋಳಬಸವನು ಆತನ ವಿದ್ಯಾಗುರುವಾಗಿದ್ದಿರಬೇಕು. ಆತನನ್ನು

ಪ್ರತಿವಚನದಲ್ಲಿಯೂ 'ಬೋಳ ಬಸವೇಶ್ವರಾ, ನಿಮ್ಮ ಧರ್ಮ ನಿಮ್ಮ ಧರ್ಮ' ಎಂದು ಸ್ತುತಿಸಿದ್ದಾನೆ. ಆತನ ಮೂಲಕವಾಗಿಯೇ ತೋಂಟದ ಯತಿವರ್ಯನ ಅನುಗ್ರಹ ತನಗೆ ದೊರೆಯಿತೆಂದು ಸಿದ್ಧಲಿಂಗೇಶ್ವರ ಹೇಳಿಕೊಂಡಿದ್ದಾನೆ. ಈತನ 'ಷಟ್‌ಸ್ಥಲವ ಲಿಂಗಾಂಗ ಸಂಬಂಧದ ನಿರ್ವಚನ'ದಲ್ಲಿ ಹದಿನೈದು ವಚನಗಳು ಮಾತ್ರ ಇವೆ. ಬಸವಣ್ಣ, ಚೆನ್ನಬಸವಣ್ಣ, ಮಡಿವಾಳಯ್ಯ, ಪ್ರಭುದೇವ ಇತ್ಯಾದಿ ಪುರಾತನರ ಸ್ತೋತ್ರವನ್ನು ಅಲ್ಲಲ್ಲಿಯೇ ಒಳಕೊಂಡ ಈ ವಚನಗಳು ಸುದೀರ್ಘವಾಗಿವೆ. ಕಾವ್ಯದೃಷ್ಟಿಯಿಂದಲೂ ಇವು ಸಾಮಾನ್ಯವೆಂದೇ ಹೇಳಬೇಕು.

ತೋಂಟದ ಸಿದ್ಧೇಶ್ವರನ ಮತ್ತೊಬ್ಬ ಶಿಷ್ಯನಾದ **ಘನಲಿಂಗ** (೧೪೮೦)ನು 'ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ' ಎಂಬ ಅಂಕಿತವನ್ನು ಬಳಸಿಕೊಂಡು ವಚನಗಳನ್ನು ಬರೆದಿದ್ದಾನೆ. 'ಎನ್ನ ಗುರುವಿನ ಗುರು ಪರಮಗುರು ಪರಮಾರಾಧ್ಯ ತೊಂಟದಾರ್ಯನಿಗೆ ಗುರುಭಕ್ತಿಯಿಂದ ಎನ್ನ ಶರಣುಮಾಡಿದರು. ಆ ತೋಟದಾರ್ಯನು ತನ್ನ ಕೃಪೆಯೆಂಬ ತೊಟ್ಟಿಲೊಳಗೆನ್ನ ಮಲಗಿಸಿ, ಪ್ರಮಥಗಣಂಗಳ ವಚನಸ್ವರೂಪಾರ್ಥವೆಂಬ ಹಾಲು ತುಪ್ಪಮಂ ಸದಾ ದಣಿಯಲೆರೆದು, ಅಕ್ಕರಿಂದ ರಕ್ಷಣ್ಯಮಂ ಮಾಡಿ, ಘನಲಿಂಗಿಯೆಂಬ ನಾಮಕರಣಮಂ ಕೊಟ್ಟು, ಪ್ರಾಯಸಮರ್ಥೆಯಂ ಮಾಡಿ ....' ಎಂದು ಆತ ತನ್ನ ಆತ್ಮಕಥೆಯನ್ನು ಹೇಳಿಕೊಂಡಿದ್ದಾನೆ. ಅದೇ ವಚನದ ಆರಂಭದಲ್ಲಿ 'ಎಲೆ ತಂಗಿ, ಶರಣಸತಿ ಲಿಂಗಪತಿಯಾದ ಪತಿವ್ರತಾಭಾವದ ಚಿಹ್ನೆ ನಿನ್ನ ನಡೆ ನುಡಿಯಲ್ಲಿ ಹೊಗರುದೋರುತ್ತಿದೆ. ನಿನ್ನ ಪೂರ್ವಾಪರವಾವುದಮ್ಮಾ?' ಎಂದು ಪ್ರಶ್ನೆಹಾಕಿಕೊಂಡು, 'ಸುತ್ತೂರು ಸಿಂಹಾಸನದ ಪರ್ವತದೇವರ ಶಿಷ್ಯರು ಕೂಗುಲೂರ ನಂಜಯ್ಯದೇವರು. ಆ ನಂಜಯ್ಯದೇವರ ಕರಕಮಲದಲ್ಲಿ ಉದಯವಾದ ಶರಣುವೆಣ್ಣಯ್ಯ ನಾನು' ಎಂದು ಹೇಳಿಕೊಂಡಿದ್ದಾನೆ. ಇದರಿಂದ ಈತನು ಮೈಸೂರು ಜಿಲ್ಲೆಯ ಸುತ್ತೂರು ಸ್ಥಳದವನಾಗಿರಬೇಕು. ಈತನ ವಚನಗಳು ಸುದೀರ್ಘವಾಗಿ ಬೆಳೆದುಕೊಂಡು ಹೋಗುತ್ತವೆ; ಆನೆಯನ್ನು ಕಂಡ ಕುರುಡರ ಒಂದು ಇಡೀ ಕಥೆಯೇ ಒಂದು ವಚನವಾಗಿ ಕೂತಿದೆ. ಆದರೂ ಈತನ ವಚನಗಳು ಸಾರವತ್ತಾಗಿವೆ. ಅವುಗಳಲ್ಲಿ ಸಾಧಕನ ಆರ್ತತೆಯಿಂದೆ, ನಿಷ್ಠೆಯಿದೆ, ಭಕ್ತಿಯಿದೆ. 'ಎನ್ನ

ಕೇಡಿಂಗೆ ಕಡೆಯಿಲ್ಲ. ಕಾಯವಿಕಾರವೆಂಬ ಕತ್ತಲೆಗವಿಯಿತ್ತು. ಮನೋವಿಕಾರವೆಂಬ ಮಾಯೆ ಸೆರೆವಿಡಿದಳು. ಇಂದ್ರಿಯ ವಿಕಾರವೆಂಬ ಹುಚ್ಚುನಾಯಿಗಳು ಕಚ್ಚಿ ಕಚ್ಚಿ ಒದರುತ್ತಿವೆ. ಸಾವನ್ನಬರ ಸರಸ ಉಂಟೆ ಲಿಂಗವೆ?' ಎಂದು ಆತನು ತನ್ನ ಹೃದಯ ವೇದನೆಯನ್ನು ತೋಡಿಕೊಳ್ಳುತ್ತಾನೆ. ತನ್ನ ತಪ್ಪುಗಳನ್ನು ಮನ್ನಿಸಿ ಉದ್ಧರಿಸೆಂದು ಬೇಡುತ್ತಾ 'ನಾನು ಮುಂದನರಿಯದ ಅಂಧಕನಯ್ಯ, ನಿನ್ನ ಬಾಗಿಲಕಾಯ್ವ ಗೊಲ್ಲನಯ್ಯ, ನಿನ್ನ ಕುದುರೆಗಳ ಕಾಯ್ವ ಗೋಪನಯ್ಯ, ನಿನ್ನ ಚಮ್ಮಾವುಗೆಯ ಹೊತ್ತು ಬದುಕುವ ಬೋವರ ಲೆಂಕನಯ್ಯ, ನಿನ್ನ ಪಡಿಗವ ಹಿಡಿವ ದಿಂಡೆಯಯ್ಯ, ನೀನುಗುಳ್ದ ತಾಂಬೂಲವನುಂಬ ನಿನ್ನಾದಿಯ ಹಳೆಯನಯ್ಯ, ನಿನ್ನಂಗಳದಲ್ಲಿ ಬೊಗಳುವ ಶ್ವಾನನಯ್ಯ, ನಿನ್ನ ಮನೆಯ ನಡೆಸೊಡರಯ್ಯ, ಎನ್ನ ತಪ್ಪ ಕಾಯಯ್ಯ' ಎಂಬ ಆತನ ಕರುಳ ರೋದನ ಹೃದಯಸ್ಪರ್ಶಿಯಾಗಿದೆ. 'ನಿನ್ನ ನೆನೆ ನೆನೆದು ಎನ್ನ ಮನ ಬೀಗಿ ಬೆಳೆದು ತಳಿರಾಗಿ ಹೂ ವಿಡಿಗೊಂಬುದಯ್ಯ. ನಿನ್ನ ಹಾಡಿ ಹಾಡಿ ಎನ್ನ ಜಿಹ್ವೆ ಅಮೃತ ಸಾಗರದೊಳೋಲಾಡುತಿಪ್ಪುದಯ್ಯ'; 'ದೇವಾ, ಕಂಬಳಕ್ಕೆ ಹೋಗಿ ಕನಕದ ಕೊಡನ ಕಂಡಂತೆ ಮರ್ತ್ಯಲೋಕಕ್ಕೆ ಬಂದು ಮಾನವಜನ್ಮವ ಕಂಡೆ' 'ಕತ್ತಲೆ ಸತ್ತು ಬೆಳಗು ಬೀದಿವರಿದಿತ್ತು ನೋಡಾ' ಇತ್ಯಾದಿಯಾದ ಆತನ ವಚನಗಳಲ್ಲಿ ಆತನ ಕಾವ್ಯಮಯವಾದ ಶೈಲಿ ಮಿನುಗುತ್ತಿರುವುದನ್ನು ನಾವು ಕಾಣುತ್ತೇವೆ. ಒಮ್ಮೊಮ್ಮೆ ಆತನು ಒಂದು ರೂಪಕ ಪರಂಪರೆಯನ್ನೇ ಬೆಳಸಿ, ಒಂದು ವಚನವನ್ನು ಅರಳಿಸಬಹುದು. ವಚನ ವಾಙ್ಮಯದಲ್ಲಿ ಘನಲಿಂಗನಿಗೆ ಒಂದು ಉಚ್ಚ ಸ್ಥಾನವನ್ನು ಕೊಡುವಷ್ಟು ಆತನ ವ್ಯಕ್ತಿತ್ವ ಅವುಗಳಲ್ಲಿ ಅಡಕವಾಗಿದೆ.

ಕುಮಾರವ್ಯಾಸಯುಗದ ಸ್ವತಂತ್ರ ವಚನಕಾರರಲ್ಲಿ ಮತ್ತೊಂದು ಹಿರಿಯ ಹೆಸರೆಂದರೆ ಷಣ್ಮುಖಸ್ವಾಮಿ (೧೭೦೦). ಈತನು ಗುಲ್ಬರ್ಗ ಜಿಲ್ಲೆಯ ದೇವರಗಿ ಗ್ರಾಮದ ಒಂದು ವಿರಕ್ತ ಮಠದ ಗುರು. ಈತನು ತನ್ನ ಗುರುಗಳಾದ ಅಖಂಡೇಶ್ವರಸ್ವಾಮಿಗಳ ಅಂಕಿತದಲ್ಲಿ ೭೧೭ ವಚನಗಳನ್ನು ಬರೆದಿದ್ದಾನೆ. ಈತನ ವಚನಗಳಲ್ಲಿ ಬಸವಣ್ಣ ಮತ್ತು ಅಕ್ಕಮಹಾದೇವಿಯರ ಪ್ರಭಾವ ಸ್ಪಷ್ಟವಾಗಿ ಮೂಡಿದೆ. ಭಾವ ಭಾಷೆಗಳೆರಡರಲ್ಲಿಯೂ ಆತನು ಆ ಪುರಾತನರಿಗೆ ಋಣಿಯಾಗಿದ್ದಾನೆ. 'ನೂದಾರ ಚೆನ್ನಯ್ಯನ ಬಾಯ

ತಾಂಬೂಲವ ಮೆಲುವೆ, ಡೋಹರ ಕಕ್ಕಯ್ಯನ ಒಕ್ಕು ಮಿಕ್ಕುದನುಂಬೆ, ಚೋಳಿಯಕ್ಕನ ಊಳಿಗದವನಾಗುವೆ, ಶ್ವಪಚಯ್ಯನ ಆಳಾಗುವೆ. ಇನ್ನುಳಿದ ಸಕಲ ಗಣಂಗಳ ರಾಜಾಂಗಣವ ಬಳಿಯುವೆನಯ್ಯಾ'ಎಂಬ ವಚನ ಬಸವಣ್ಣನ ಇಂತಹುದೇ ವಚನವನ್ನು ನೆನಪಿಗೆ ತರುತ್ತದೆ; 'ಅರಳಿಯ ಮರದೊಳಗಿರುವ ಅರಗಿಳಿಗಳಿರಾ, ನಮ್ಮ ಅಖಂಡೇಶ್ವರನ ಕಂಡರೆ ಹೇಳಿರೇ; ಮಾವಿನ ಮರದೊಳಗೆ ಕೂಗುವ ಕೋಗಿಲೆ ಹಿಂಡುಗಳಿರಾ, ನಮ್ಮ ನಾಗಭೂಷಣದ ಕಂಡರೆ ಹೇಳಿರೇ; ಕೊಳನ ತೀರದೊಳಾಡುವ ಗಳ ಹಂಸಗಳಿರಾ, ನಮ್ಮ ಎಳೆಯ ಚಂದ್ರಧರನ ಕಂಡರೆ ಹೇಳಿರೆ ; ಮೇಘಘ್ವನಿಗೆ ಕುಣಿವ ನವಿಲುಗಳಿರಾ, ನಮ್ಮ ಅಖಂಡೇಶ್ವರನೆಂಬ ಅವಿರಳ ಪರಶಿವನ ಕಂಡರೆ ಹೇಳಿರೆ' ಎಂಬ ವಚನ ಅಕ್ಕಮಹಾದೇವಿಯಿಂದ ಎತ್ತಿಕೊಂಡುದು. ಇಂತಹ ಅನುಕರಣ ಈತನ ವಚನಗಳಲ್ಲಿ ಉದ್ದಕ್ಕೂ ಕಂಡು ಬರುವುದಾದರೂ ಶ್ರೇಷ್ಠವಾದುವರ ಅನುಕರಣ ಉತ್ತಮ ಫಲವನ್ನೆ ನೀಡಿದೆ. ಈತನ ವಚನಗಳು ಬಹಳ ಸುಂದರವಾಗಿ ಪ್ರಸಾದಗುಣಯುಕ್ತವಾಗಿವೆ. ಕವಿಯ ಒಲವು ತತ್ವನಿರೂಪಣೆಗಿಂತಲೂ ಆಚಾರಧರ್ಮದ ಕಡೆ ಹೆಚ್ಚು ಬಾಗಿದೆ.

ಷಣ್ಮುಖಸ್ವಾಮಿ ಳಗ ಜೋಗುಳದ ಪದಗಳನ್ನು ಬರೆದಿದ್ದಾನೆ. ಲಿಂಗ ಶಿಶು, ತಾನು ತಾಯಿ ಎಂದು ಪರಿಭಾವಿಸಿ 'ಲಿಂಗವೆಂಬ ಮಗನ ಹಡೆದು, ಅಂಗೈಯೆಂಬ ತೊಟ್ಟಿಲಲ್ಲಿಕ್ಕಿ. ಮಂಗಳಸೂತ್ರವೆಂಬ ಜೋಗುಳ ಹಾಡಿ, ಅಖಂಡೇಶ್ವರನೆಂಬ ಹೆಸರಿಟ್ಟರು ನೋಡಾ' ಎಂಬ ಈತನ ಹಾಡು ಹೃದಯಂಗಮವಾಗಿದೆ. ಶಿಷ್ಯನೆಂಬ ಹೆಂಡತಿಗೆ ಗುರುವೆಂಬ ಗಂಡನಿಂದ ಜನಿಸಿದ ಲಿಂಗವೆಂಬ ಶಿಶು ಈತನ ಅಂಗೈತೊಟ್ಟಿಲಲ್ಲಿ ನಲಿಯುವಷ್ಟು ಭಕ್ತಿಭಾವವನ್ನು ಬೆಳಸಿಕೊಂಡಿದ್ದ ಷಣ್ಮುಖಸ್ವಾಮಿ ಧನ್ಯನೇ ಸರಿ.

ಕವಿಚರಿತೆಕಾರರು ಕರ್ಣಾಟಕ ಕವಿಚರಿತ್ರೆ ಭಾಗ III ರ ಕೊನೆಯಲ್ಲಿ ಇನ್ನೂ ಅನೇಕ ವಚನಕಾರರನ್ನು ಹೆಸರಿಸಿರುವರಾದರೂ, ಅಪ್ರಕಟಿತವಾದ ಆ ವಚನಗಳನ್ನು ಸಮಗ್ರವಾಗಿ ಕಾಣದ ಹೊರತು ಅವುಗಳನ್ನು ಕುರಿತು ಬರೆಯುವಂತಿಲ್ಲ. ಇವರಲ್ಲಿ ಮಸಣಮ್ಮ, ರೇಕಮ್ಮ, ಕಾಲುಕಣ್ಣಿಯ ಕಾಯಮ್ಮ ಇತ್ಯಾದಿ ವಚಾನಕಾರ್ತಿಯರ ಹೆಸರುಗಳೂ ಕಂಡುಬರುತ್ತವೆ. ಹೆಸರು ಗೊತ್ತಿಲ್ಲದ ಸುಮಾರು ಐವತ್ತು ವಚನಕಾರರ ಅಂಕಿತಗಳೊಡನೆ

ಸಿಕ್ಕಿರುವ ವಚನಗಳನ್ನೂ ಅಲ್ಲಿ ಉದಾಹರಿಸಲಾಗಿದೆ. ಹೆಸರು ಮತ್ತು ಅಂಕಿತಗಳಿರುವ ವಚನಕಾರರು ತಿಳಿದು ಬಂದಿದ್ದರೂ ಅವರ ವಚನಗಳು ದೊರೆಯದ ಸಂದರ್ಭಗಳೂ ಇವೆ. ಈ ನಿಟ್ಟಿನಲ್ಲಿ ಸಂಶೋಧನೆ ಮಾಡುವುದು ಅತ್ಯಗತ್ಯವೆಂದು ಮಾತ್ರ ಇಲ್ಲಿ ಸೂಚಿಸ ಬಹುದು.

# ಕುಮಾರವ್ಯಾಸಯುಗದ ವೀರಶೈವ ಕವಿಗಳು

**ದೇಪರಾಜ (೧೪೧೦):**

'ಸೊಬಗಿನ ಸೋನೆ', 'ಅಮರುಕ ಶತಕ' ಗಳನ್ನು ಬರೆದ ದೇಪರಾಜನು ವಿಜಯನಗರದ ರಾಜಮನೆತನಕ್ಕೆ ಸೇರಿದವನು. ಆ ವಂಶದ ಮೂಲಪುರುಷ ಸಂಗಮ; ಆ 'ಸಂಗಮನೆಂಬ ಕುಲದ ಇಂಗಡಲಿಗೆ ನೆರೆದಿಂಗಳೆನಿಸಿದ ಕಂಪ': ಈ ಕಂಪನ ತಮ್ಮ ಬುಕ್ಕರಾಯ; ಈ ಬುಕ್ಕರಾಯನ ಮಗ ಎರಡನೆಯ ಕಂಪ; ಈತನೇ ಪ್ರಸ್ತುತ ಕವಿ. ಈತನು ಹದಿನೈದನೆಯ ಶತಮಾನದ ಆರಂಭದೆಶೆ (ಸು. ೧೪೧೦) ಯಲ್ಲಿ ಇದ್ದವನು. ತಾನು ತ್ರ್ಯಂಬಕದೇವನೆಂಬುವನಿಂದ ಕನ್ನಡ ಚಿತ್ರಾಶುಕವಿತ್ವವನ್ನು ಕಲಿತುಕೊಂಡುದಾಗಿ ಕವಿ ಹೇಳಿಕೊಂಡಿದ್ದಾನೆ. ಈತನ 'ಸೊಬಗಿನ ಸೋನೆ' ಸಾಂಗತ್ಯದಲ್ಲಿದೆ. ಇದರಲ್ಲಿ ಸುರಭಾವತಿ, ಕಂಜರೆ, ವಸಂತೆ ಇತ್ಯಾದಿ ಏಳು ಜನರ ಶೃಂಗಾರ ಕಥೆಗಳನ್ನು ಹೇಳಿದ್ದಾನೆ. ತನ್ನ ಹೆಂಡತಿ ಬಯಸಿದುದರಿಂದ ಕವಿ ಈ ಕಥೆಗಳನ್ನು ಹೇಳಿದನಂತೆ. ತನ್ನ ಕಾವ್ಯವು 'ಜಾಣರ ಮೆಚ್ಚು, ರಸಿಕರ ರಸಾಯನ' ಇತ್ಯಾದಿಯಾಗಿ ಆತ ಹೇಳಿಕೊಂಡಿದ್ದಾನೆ. ಆದರೆ ಆತನು ಬಳಸಿರುವ ಭಾಷೆ ಪ್ರೌಢವಾದುದರಿಂದ ಸಾಂಗತ್ಯಕ್ಕೆ ಹೊಂದಿಕೊಳ್ಳುತ್ತಿಲ್ಲ. ಇದರಮೇಲೆ, ಕವಿಗೆ ಹದಿನೆಂಟು ವರ್ಣನೆಗಳಲ್ಲಿ ಆದಷ್ಟನ್ನು ತರಬೇಕೆಂಬ ಆಶೆ ಬೇರೆ. ಇದರಿಂದ ಓಡಿಹೋಗಬೇಕೆಂಬುವನ ಕಾಲಿಗೆ ಬೀಸೇಕಲ್ಲು ಕಟ್ಟಿದಂತಾಗಿದೆ. 'ಕುಮುದ ಕುಮುದ ಕುಮುದೇಶ ಜನನ ವಾರ್ಧಿ! ಕಮಲ ಕಮಲ ಕಮಲಾಲಯ' ಎಂಬಂತಹ ಈತನ ಪದ್ಯಗಳಲ್ಲಿ ಈತನ ಪ್ರತಿಭೆಗಿಂತಲೂ ಪಾಂಡಿತ್ಯವೇ ಹೆಚ್ಚಾಗಿ ಪ್ರದರ್ಶಿತವಾಗಿದೆ. ವರ್ಣನಾ ಭಾಗಗಳಲ್ಲಿ ಕೆಲವು ಕಡೆ ಆತನ ಕಲ್ಪನಾ ವಿಲಾಸವೂ ಸ್ವಲ್ಪ ಮಟ್ಟಿಗೆ ಕಂಡುಬರುತ್ತದೆ. ಆದರೂ ಈತನ ಹಿರಿತನಕ್ಕೆ ಈತನ ಕಾವ್ಯಗುಣಗಳಿಗಿಂತಲೂ ಈತನೇ ಮೊದಲ ಸಾಂಗತ್ಯಕಾರನಾಗಿರುವುದು ಕಾರಣವೆಂದು ಹೇಳಬೇಕಾಗುತ್ತದೆ. 'ಶೈಲಿ-ಛಂದಸ್ಸುಗಳ ದೃಷ್ಟಿಯಿಂದ ಬಹುಶಃ ಇವನೇ ಮೊದಲನೆಯ ಸಾಂಗತ್ಯಕಾರನೆಂದೂ ಶಿಶುಮಾಯಣನು ತರುವಾಯ

ದವನೆಂದೂ ತಿಳಿಯಬಹುದು. ಕಾಲದೃಷ್ಟಿಯಿಂದಲೂ ಇವನು ಹದಿನೈದ ನೆಯ ಶತಮಾನದ ಪೂರ್ವಾರ್ಧದವನಾದರೆ, ಶಿಶುಮಾಯಣನು ಉತ್ತ ರಾರ್ಧದಲ್ಲಿದ್ದವನೆಂದು ಊಹಿಸಲು ಅವಕಾಶವಿದೆ 'ಎಂದು ಶ್ರೀ ಆರ್.ಎಸ್. ಮುಗುಳಿಯವರು ಹೇಳುವುದನ್ನು[1] ಗಮನಿಸಬಹುದು.

ದೇವರಾಜನ 'ಅಮರುಕ' ವು ಸಂಸ್ಕೃತ 'ಅಮರುಕ ಶತಕ' ದ ಭಾಷಾಂತರ. ಇದು ಪರಿವರ್ಧಿನೀ ಷಟ್ಪದಿಯಲ್ಲಿದೆ. 'ಸ್ಮರರಾಜ್ಯದ ಪೈರಿಸಿರಿ, ಶೃಂಗಾರದ ಶರನಿಧಿ' ಯಾದ 'ಅಮರುಕ ಶತಕ' ವನ್ನು ಕನ್ನಡಕ್ಕೆ ಮೊಟ್ಟಮೊದಲು ತಂದುಕೊಟ್ಟುದು ಮಾತ್ರವೇ ಅಲ್ಲ, ಪರಿ ವರ್ಧಿನೀ ಷಟ್ಪದಿಯಲ್ಲಿ ಅಖಂಡ ಕಾವ್ಯವನ್ನು ಮೊಟ್ಟಮೊದಲು ಬರೆದ ಕೀರ್ತಿಯೂ ಈತನಿಗೆ ಸಲ್ಲುತ್ತದೆ.

**ಲಕ್ಕಣ್ಣ ದಂಡೇಶ (೧೪೨೮):**

ಏಕಕಾಲದಲ್ಲಿಯೇ ಕವಿಯೂ ಕಲಿಯೂ ಆಗಿದ್ದ ಲಕ್ಕಣ್ಣ ದಂಡೇಶನು ವಿಜಯನಗರದ ಸಾಮ್ರಾಟನಾದ ಪ್ರೌಢದೇವರಾಯನ (ಕ್ರಿ. ಶ. ೧೪೧೬–೧೪೪೬) ಮಹಾದಂಡನಾಯಕನಾಗಿ, ಮಂತ್ರಿಮುಖ್ಯನಾಗಿ, ಅಷ್ಟಸಚಿವ ನಾಗಿ ಅದ್ವಿತೀಯವಾದ ಅಧಿಕಾರಕ್ಕೂ ಕೀರ್ತಿಗೂ ಗೌರವಕ್ಕೂ ಒಡೆಯ ನಾಗಿದ್ದವನು. ಪರಾಕ್ರಮಕ್ಕೆ ತಕ್ಕ ಔದಾರ್ಯ, ಅಧಿಕಾರಕ್ಕೆ ತಕ್ಕ ಲೋಕೋಪ ಕಾರಬುದ್ಧಿ, ಭಾಗ್ಯಕ್ಕೆ ತಕ್ಕ ದೈವಭಕ್ತಿ ಜೊತೆಗೂಡಿದುದರಿಂದ ಆತನು ಅನೇಕ ಕೆರೆಕಟ್ಟೆಗಳನ್ನೂ ದೇವಾಲಯಗಳನ್ನೂ ನಿರ್ಮಿಸಿ, ಪ್ರಜೆಗಳ ಇಹ ಪರಗಳ ಸಾಧನೆಗೆ ಸಹಾಯಕನಾದನು. ಸಾಧುಸಂತರಿಗೂ ಕವಿಗಳಿಗೂ ಆಶ್ರಯದಾತನಾಗಿ ತನ್ನ ಬಾಳನ್ನು ಸಾರ್ಥಕಗೊಳಿಸಿಕೊಂಡನು. ಇದಕ್ಕೂ ಹೆಚ್ಚಾಗಿ, ಬೇಡಿದ ವೀರಶೈವ ತತ್ವಗಳನ್ನು ಬೇಡಿದೊಡನೆಯೇ ನೀಡಬಲ್ಲ ಚಿಂತಾಮಣಿಯಂತಿರುವ 'ಶಿವತತ್ವ ಚಿಂತಾಮಣಿ'ಯನ್ನು ಚಿರಶಾಶ್ವತವಾದ ಒಂದು ಕೊಡುಗೆಯಾಗಿ ಕನ್ನಡಕ್ಕೆ ನೀಡಿದನು. ಎರಡುಸಾವಿರದ ಇನ್ನೂ ರಕ್ಕೂ ಹೆಚ್ಚು ಪದ್ಯಗಳನ್ನು ಒಳಗೊಂಡಿರುವ ಈ ಬೃಹತ್ಕಾವ್ಯವು ಒಂದು 'ಪಂಚಾಮೃತ' ವಂತೆ!

---

[1] ಕನ್ನಡ ಸಾಹಿತ್ಯ ಚರಿತ್ರೆ—ಪುಟ ೩೩೪.

ಗುರುವಚನದಮೃತಮಂ, ಶ್ರುತಿಪುರಾಣಾಗಮದ
ಪರಮಾರ್ಥದಮೃತಮಂ, ವರ ಪುರಾತನ ವಚನ
ಪರಿಯಾಯದಮೃತಮಂ, ಶಿವತಾಂತ್ರಿಕರು ಪೇಳ್ದ ಸಿದ್ಧಾಂತವೆಸಿಪ ವೃತಮಂ
ಪರಮಾನುಭಾವದನುಭವಗೋಷ್ಠಿಯಮೃತದೊಳು
ಬೆರಸಿ ಮಥಸಿಸಿ ಪಡೆದ ಲಕ್ಕಣ್ಣ ದಂಡೇಶ
ಧರಿಸಿರ್ಪ ತತ್ವ ಚಿಂತಾಮಣಿ...........

ಇದರ ಗುರಿ ಲಿಂಗಾಂಗಸಾಮರಸ್ಯರೂಪವಾದ ಶಿವಾದ್ವೈತ ನಿರೂಪಣೆ. 'ತತ್ವಪಟಲ,' ಶಿವನ ಪಂಚವಿಂಶತಿಲೀಲೆಗಳು, ಪುರಾತನ ಮತ್ತು ನೂತನ ಶರಣರ ಕಥೆಗಳು, ಪಂಚಾಕ್ಷರಿ ವಿಭೂತಿ ರುದ್ರಾಕ್ಷಿಗಳ ಮಹಿಮೆ, ದೀಕ್ಷಾ ಕ್ರಮ, ಇತ್ಯಾದಿ ಇತ್ಯಾದಿಗಳನ್ನು ಒಳಗೊಂಡ ಈ ಗ್ರಂಥ ವೀರಶೈವಧರ್ಮದ ಒಂದು ಕೈಪಿಡಿಯಂತಿದೆ. ಸಿದ್ಧನಂಜೇಶಕವಿಯು ಇದನ್ನು 'ಶಿವತತ್ವ ಚಿಂತಾಮಣಿ ಶಾಸ್ತ್ರ' ಎಂದು ಕರೆದಿರುವುದು ಸಾರ್ಥಕವಾಗಿದೆ.

ಈ ಗ್ರಂಥದಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾಗಿರುವುದು ಇದರಲ್ಲಿ ಉದಾಹೃತರಾಗಿರುವ ಅಸಂಖ್ಯಾತ ಶಿವಶರಣರು. ಇದೊಂದು ವೀರಶೈವ ಶರಣರ ಅಮರಕೋಶ. ಅರವತ್ತುಮೂವರು ಪುರಾತನರ ಕಥೆಗಳಿಗೇನೋ ಕವಿಗೆ ಆಧಾರಗ್ರಂಥಗಳಿದ್ದುವೆಂದುಕೊಳ್ಳೋಣ. ಆದರೆ ನೂರಾರುಜನ ನೂತನರ—ಅವರಲ್ಲಿ ಕನ್ನಡಿಗರು, ಆಂಧ್ರರು, ತಮಿಳರು, ಕೇರಳರು, ಮಹಾರಾಷ್ಟ್ರೀಯರು, ಗುಜರಾತಿಗಳು ಇತ್ಯಾದಿಗಳೆಲ್ಲಾ ಇದ್ದಾರೆಯಂತೆ!—ಕಥೆಗಳನ್ನೆಲ್ಲಾ ಸಂಗ್ರಹಿಸಿ ಒಂದೆಡೆ ಕೊಟ್ಟಿರುವುದು ಸಂತೋಷಕರವಾಗಿರುವಷ್ಟೆ ಆಶ್ಚರ್ಯಕರವಾಗಿದೆ. ಆ ಕಥೆಗಳನ್ನು ಸಂಗ್ರಹವಾಗಿ ಸಾರವತ್ತಾಗಿ ಹೇಳಬಲ್ಲ ಕಲೆ ಲಕ್ಕಣ್ಣನಲ್ಲಿ ವ್ಯೈವೆತ್ತಿದೆ. ಒಂದೇ ಪದ್ಯದಲ್ಲಿಯೇ ಮೂರು, ನಾಲ್ಕು ಶರಣರ ಹೆಸರು ಊರುಗಳ ಜೊತೆಗೆ ಅವರ ಭಕ್ತಿವೈಶಿಷ್ಟ್ಯವನ್ನೂ ಹುದುಗಿಸುತ್ತಾನೆ. ಈ ಸಂಗ್ರಹಶಕ್ತಿಗಾಗಿಯೇ ಆತನು ಸ್ತುತ್ಯನಾಗಿದ್ದಾನೆ. ಇದರ ಜೊತೆಗೆ ಆದೆಂತಹ ನಮ್ರತೆ ಆತನಲ್ಲಿ! ಪ್ರತಿಯೊಂದು ಪದ್ಯವೂ ಕೊನೆಯಾಗುವುದು 'ಚರಣಾಂಬುಜಕ್ಕೆ ಶರಣು' ಎಂಬ ದಾಸಭಾವದೊಡನೆ. ಮೈಸೂರು ಪ್ರಾಚ್ಯಸಂಶೋಧನಾಲಯದ ಮುಖ್ಯಾಧಿಕಾರಿಗಳಾದ

ಶ್ರೀಮಾನ್ ಎಚ್. ದೇವೀರಪ್ಪನವರು ಹೇಳುವಂತೆ ‘ ಬಿದುರಿನ ಕಾಯಕದವನಾದರೇನು ಚರ್ಮದ ಕಾಯಕದವನಾದರೇನು, ಗೆಜ್ಜೆಯ ಕಾಯಕದವನಾದರೇನು, ಅವನಲ್ಲಿ ಲಿಂಗಾಂಗ ಸಾಮರಸ್ಯದ ಸುಂದರ ಕುಸುಮ ಅರಳಿದ್ದರೆ ಆಯಿತು, ಆತನಿಗೆ ಮನಸಾರ ಮಣಿಯುತ್ತಾನೆ.’ ಈ ‘ ಮಹಾನುಭಾವ “ಸಣ್ಣವ”ರಲ್ಲಿಯೂ ದೊಡ್ಡತನವನ್ನು ಕಂಡು ಕೊಂಡಾಡಬಲ್ಲ ಆದರ್ಶ ಕವಿ.’

ವೀರಶೈವ ಧರ್ಮವನ್ನು ಒಳಗೊಂಡ, ಶರಣರ ಕಥೆಗಳನ್ನು ಸಂಗ್ರಹವಾಗಿ, ನಿಬಿಡವಾಗಿ ನಿರೂಪಿಸಬೇಕಾಗಿರುವ ‘ ಶಿವತತ್ವ ಚಿಂತಾಮಣಿ’ಯಲ್ಲಿ ಕಾವ್ಯಗುಣಪ್ರದರ್ಶನಕ್ಕೆ ಅವಕಾಶವೇ ಇಲ್ಲ. ಆದರೂ ಹಂಪೆಯನ್ನು, ತುಂಗ್ರಭದ್ರೆಯನ್ನು ವರ್ಣಿಸುವಲ್ಲಿ ಆತನ ಪ್ರತಿಭೆ ತನ್ನ ಅಸ್ತಿತ್ವಕ್ಕೆ ಸ್ವಲ್ಪ ಅವಕಾಶವನ್ನು ಕಲ್ಪಿಸಿಕೊಂಡಿದೆ. ಇದು ತುಂಗಭದ್ರಾನದಿಯ ಮಹಿಮೆಯನ್ನು ಸಾರುವ ಪದ್ಯ.

ಕಂಗೊಳಿಪ ಸಕಲ ತೀರ್ಥದ ಮಹಿಮೆಯಂ ತನ್ನೊ
ಳಂಗೀಕರಿಸಿ ಧರಾತಳದ ಜೀವರ್ಗೆಲ್ಲ
ಮಂಗಳಪ್ರದ ನಿಖಿಳ ಪುರುಷಾರ್ಥಸಿದ್ಧಿಗಳನೀವತಿ ಕೃಪಾರಸದೊಳು
ತುಂಗೆಯೆಂದೆನಿಸುತಂ ಭದ್ರಲಕ್ಷಣವಿಡಿದು
ತುಂಗಭದ್ರಾನಾಮಮಂ ಧರಿಸಿದತಿ ನಿರ್ಮ
ಳಾಂಗಿ ಗಂಗೆಯ........

ಜಗತ್ರಿನಲ್ಲಿರುವ ಎಲ್ಲ ತೀರ್ಥಗಳ ಮಹಿಮೆಯನ್ನೂ ಒಳಗೊಂಡ ಈ [illegible] ಜಗತ್ತಿನ ಜೀವಜಾಲಕ್ಕೆಲ್ಲ ಮಂಗಳಪ್ರದವಾದ ಪುರುಷಾರ್ಥ ಸಿದ್ಧಿಗಳನ್ನು ನೀಡುವ ಕೃಪಾಗುಣದಲ್ಲಿ ಈಕೆ ತುಂಗೆ—ದೊಡ್ಡವಳು. ಆದ್ದರಿಂದ ಆ ಹೆಸರಿನ ಪೂರ್ವಾರ್ಧದ ಸಾರ್ಥಕತೆ; ಮಂಗಳಕರವಾದ ಲಕ್ಷಣವುಳ್ಳವಳು, ಭದ್ರೆ. ಎರಡೂ ಸೇರಿ ತುಂಗಭದ್ರೆ. ಕವಿಯು ಕಲ್ಯಾಣ ನಗರಿಯನ್ನು ವರ್ಣಿಸಿರುವುದೂ ಅರ್ಥವತ್ತಾಗಿದೆ.

ಕಲ್ಯಾಣಪುರವಿಳಾತಳಕೆ ಶುಭ ಕಲ್ಯಾಣ
ಕಲ್ಯಾಣಪ್ರರ ಮನುಜ ಮಂಗಳದ ಕಲ್ಯಾಣ
ಕಲ್ಯಾಣ ಪಾಪೌಘ ರದನಿ ಬಿದುವಿದಳನದ ಪಂಚಾಸ್ಯ ಕಲ್ಯಾಣವು

ಕಲ್ಯಾಣ ಭಕ್ತಿಸತಿಯ ವಿವಾಹ ಕಲ್ಯಾಣ
ಕಲ್ಯಾಣ ಪರಮ ಕೈವಲ್ಯಪದ ಕಲ್ಯಾಣ
ಕಲ್ಯಾಣದೊಳ್ ಬಸವನಂತಿರ್ಪ ಭಕ್ತರ ಸುಚರಣಾಂಬುಜಕ್ಕೆ ಶರಣು.

ಕಲ್ಯಾಣ ಪದ ಪುನರಾವರ್ತನೆಯು ಮನಸ್ಸಿಗೆ ಹಿತವನ್ನು ಕೊಡುತ್ತದೆ; ಜೀವಕ್ಕೆ ತಂಪೆರೆಯುತ್ತದೆ; ಭಾವುಕ ಚೇತನಕ್ಕೆ ಶಾಂತಿಯೆರೆಯುತ್ತದೆ. ಇನ್ನೇನು ಬೇಕು?

**ಚಾಮರಸ** (೧೪೩೦) :

ವೀರಶೈವ ಪುರಾಣಕರ್ತರಲ್ಲಿ ಅಸಾಧಾರಣವಾದ ಗೌರವಕ್ಕೂ ಕೀರ್ತಿಗೂ ಪಾತ್ರನಾದ ಚಾಮರಸನು ದೇವಮಾನವನಾದ ಅಲ್ಲಮಮಹಾ ಪ್ರಭುವಿನ ಜೀವನ ಚರಿತ್ರೆಯನ್ನು 'ಪ್ರಭುಲಿಂಗಲೀಲೆ' ಎಂಬ ಹೆಸರಿನಿಂದ ಭಾಮಿನೀಷಟ್ಪದಿಯಲ್ಲಿ ರಚಿಸಿದ್ದಾನೆ. ಪ್ರೌಢದೇವರಾಯ (ಕ್ರಿ.ಶ. ೧೪೧೯-೧೪೪೬)ನ ಕಾಲದ ನೂರೊಂದು ಜನ ವಿರಕ್ತರಲ್ಲಿ ಈತನೂ ಒಬ್ಬನೆಂದು ತಿಳಿದು ಬರುವುದರಿಂದ ಈತನು ಹದಿನೈದನೆಯ ಶತಮಾನದ ಪೂರ್ವಾರ್ಧ ದಲ್ಲಿ ಎಂದರೆ ಸು. ೧೪೩೦ರಲ್ಲಿ ಇದ್ದನೆಂದು ಕವಿಚರಿತೆಕಾರರ ಅಭಿಪ್ರಾಯ. ಈತನು ವಿರಕ್ತನಾಗಿದ್ದುದಕ್ಕೆ ತಕ್ಕಂತೆ ತನ್ನ ಕಾವ್ಯದಲ್ಲಿ ತನ್ನ ಅಥವಾ ತನ್ನ ತಾಯಿ ತಂದೆಗಳ ಪ್ರಸಕ್ತಿಯನ್ನೇ ಎತ್ತಿಲ್ಲ. 'ಪ್ರಭುಲಿಂಗಲೀಲೆ' ಯನ್ನು ಈತನೇ ಬರೆದನೆಂದು ಹೇಳುವುದು ಕೂಡ ಅದೃಶ್ಯಕವಿ, ಸಿದ್ಧ ನಂಜೇಶ ಮುಂತಾದ ಕವಿಗಳ ಹೇಳಿಕೆಯಿಂದ. ಕವಿಯು ಸ್ವವಿಷಯ ದಲ್ಲಿ ಮೌನವನ್ನು ತಾಳಿದ್ದರೂ ಇತರ ಕವಿಗಳಿಂದ ಈತನ ವಿಚಾರವಾಗಿ ಹಲವಾರು ಸಂಗತಿಗಳು ವ್ಯಕ್ತಪಡುತ್ತವೆ:—ಕುಮಾರ ವ್ಯಾಸನೆಂದು ಖ್ಯಾತನಾಮನಾಗಿರುವ ಗದುಗಿನ ನಾರಣಪ್ಪನು ಚಾಮರಸನ ತಂಗಿಯ ಗಂಡನೆಂದೂ, ಗದುಗಿನ ದೊರೆಯಿಂದ ಆಜ್ಞಪ್ತರಾಗಿ ಭಾವ-ಮೈದುನರು ಮಹಾಭಾರತವನ್ನು ರಚಿಸಿದರೆಂದೂ, ನಾರಣಪ್ಪನ ಆದಿ ಪಂಚಕ ಕ್ಕಿಂತಲೂ ಚಾಮರಸನ ಯುದ್ಧಪಂಚಕ ಹೆಚ್ಚು ರಸವತ್ತಾಗಿದ್ದುದರಿಂದ ನಾರಣಪ್ಪನು ವ್ಯಥೆಗೊಳ್ಳಲು, ಆತನ ಹೆಂಡತಿ ಅಣ್ಣನ ಕಾವ್ಯವನ್ನು ಸುಟ್ಟು ಹಾಕಿದಳೆಂದೂ, ಚಾಮರಸನು ವಿರಕ್ತನಾಗಿ ವೀರಶೈವ ದೀಕ್ಷೆಯನ್ನು ವಹಿಸಿ ಹಂಪೆಯಲ್ಲಿ ನೆಲಸಿದನೆಂದೂ, ನಾರಣಪ್ಪನ ಕಾವ್ಯಕ್ಕೆ ಮನ್ನಣೆ

ದೊರೆತು ರಾಜನಿಂದ ಆತನಿಗೆ ಕನಕಾಭಿಷೇಕವಾಗುತ್ತಿರಲು ಜಕ್ಕಣಾರ್ಯನೇ ಮೊದಲಾದ ವಿರಕ್ತರು ಅದನ್ನು ಪ್ರತಿಭಟಿಸಿ ಹನ್ನೊಂದು ದಿನಗಳಲ್ಲಿ ಒಂದು ಸಾವಿರದ ನೂರಹನ್ನೊಂದು ಪದ್ಯಗಳನ್ನು ಒಳಗೊಂಡ 'ಪ್ರಭುಲಿಂಗ ಲೀಲೆ'ಯನ್ನು ಚಾಮರಸನಿಂದ ಬರೆಸಿ ಅದಕ್ಕೆ ಮನ್ನಣೆಯನ್ನು ಪಡೆದ ರೆಂದೂ ಅವರ ಹೇಳಿಕೆ. ಒಬ್ಬ ಕವಿಗಿಂತಲೂ ಮತ್ತೊಬ್ಬನು ದೊಡ್ಡವನೆಂದು ಹೇಳ ಹೊರಡುವ ಇಂಥ ದಂತಕಥೆಗಳಲ್ಲಿ ಹೆಚ್ಚು ಹುರುಳನ್ನು ನಿರೀಕ್ಷಿಸು ವುದು ಉತ್ತಮ ಅಭಿರುಚಿಯಾಗಲಾರದು. ಇಬ್ಬರು ಕವಿಗಳ ಶೈಲಿ ಯಲ್ಲಿಯೂ ಕಾಣಬರುವ ಹೋಲಿಕೆಯಿಂದ ಇಂತಹ ಪ್ರಚೋದನೆ ಬಂದಿದೆಯೆಂದು ತೋರುತ್ತದೆ.

ಕುಮಾರವ್ಯಾಸನ ಎತ್ತರ ಬಿತ್ತರಗಳು ಚಾಮರಸನಲ್ಲಿ ಇಲ್ಲವಾದರೂ ಆತನು ಬಹು ದೊಡ್ಡ ಕವಿಯೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಆತನ ಕಾವ್ಯವು ತೆಲುಗು, ತಮಿಳುಗಳಿಗೆ ಮಾತ್ರವೇ ಅಲ್ಲದೆ ಮರಾಠಿ, ಸಂಸ್ಕೃತಗಳಿಗೂ, ಭಾಷಾಂತರವಾಗಿರುವುದೆಂಬುದನ್ನು ಗಮನಿಸಿದರೆ ಆತನ ಕಾವ್ಯಶಕ್ತಿಯೂ ಜನಪ್ರಿಯತೆಯೂ ಅರ್ಥವಾಗುತ್ತದೆ. ತೆಲುಗಿನಲ್ಲಿ ಇಬ್ಬರು ಕವಿಗಳು—ಪಿಡುಪರ್ತಿ ಸೋಮನಾಥನೆಂಬ ಕವಿ ದ್ವಿಪದಿಯಲ್ಲಿಯೂ ಪಿಡು ಪರ್ತಿ ಬಸವನೆಂಬ ಕವಿ ಚಂಪೂರೂಪದಲ್ಲಿಯೂ—ಇದನ್ನು ಭಾಷಾಂತರಿ ಸಿದ್ದಾರೆ. ತಿರುವಣ್ಣಾಮಲೆಯ ಶಿವಪ್ರಕಾಶ ಸ್ವಾಮಿಯೆಂಬ ಕವಿ ಇದನ್ನು ತಮಿಳಿಗೆ ಭಾಷಾಂತರಿಸಿದ್ದಾನೆ. ತೆಲುಗಿನ ಭಾಷಾಂತರಕಾರನಾದ, ಪಿಡು ಪರ್ತಿ ಸೋಮನಾಥ ಕವಿಯೇ ಸಂಸ್ಕೃತ ಭಾಷಾಂತರದ ಕರ್ತನೂ ಇರ ಬಹುದೆಂದು ಪಂಡಿತರು ಊಹಿಸುತ್ತಾರೆ. ಬ್ರಹ್ಮದಾಸನೆಂಬ ಕವಿ ಇದನ್ನು 'ಲೀಲಾ ವಿಶ್ವಂಭರ' ಎಂಬ ಹೆಸರಿನಿಂದ ಮರಾಠಿಗೆ ಭಾಷಾಂತರಮಾಡಿರು ವುದಾಗಿ ತಿಳಿದುಬರುತ್ತದೆ. ಈ ವಿವಿಧ ಭಾಷಾಂತರಗಳಲ್ಲಿ ತಮಿಳಿನದು ಅತ್ಯಂತ ಶ್ರೇಷ್ಠವಾದುದೆಂದು ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು ತಮ್ಮ 'ಪ್ರಭುಲಿಂಗಲೀಲೆಯ ಸಂಗ್ರಹ'ದ ಮುನ್ನುಡಿಯಲ್ಲಿ ಸೋದಾ ಹರಣವಾಗಿ ವಿವರಿಸಿದ್ದಾರೆ. ತುಲನಾತ್ಮಕವಾಗಿ ಅವುಗಳ ಬೆಲೆಯನ್ನು ಕಟ್ಟುವುದು ಹಾಗಿರಲಿ, ಕನ್ನಡದ ಕಾವ್ಯವೊಂದು ಬೇರೆಯ ನಾಲ್ಕು ಭಾಷೆಗಳಿಗೆ ಭಾಷಾಂತರವಾಗಿದೆಯೆಂಬುದೇ ರೋಮಾಂಚಕಾರಕವಾಗಿದೆ.

ದಿವ್ಯಜ್ಞಾನಿಯಾದ ಅಲ್ಲಮನ ಜೀವನ ಚರಿತ್ರೆಯನ್ನು ಕಾವ್ಯರೂಪದಲ್ಲಿ ನಿರೂಪಿಸುವವರಲ್ಲಿ ಮಹಾಕವಿ ಹರಿಹರನೆ ಮೊಟ್ಟಮೊದಲನೆಯವನು. ಆದರೆ ಚಾಮರಸನ ಕಾವ್ಯ ಅದಕ್ಕಿಂತಲೂ ಹೆಚ್ಚು ಜನಪ್ರಿಯವಾಗಿದೆಯೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಇದಕ್ಕೆ ಮುಖ್ಯ ಕಾರಣ ಆ ಇಬ್ಬರು ಕವಿಗಳೂ ತಮ್ಮ ಕಥಾನಾಯಕನನ್ನು ಚಿತ್ರಿಸುತ್ತಿರುವುದರಲ್ಲಿ ಇರುವ ದೃಷ್ಟಿಭೇದ. ಹರಿಹರನು ತಾನು ಕಂಡ ಅಥವಾ ಕೇಳಿದ ಪ್ರಭುದೇವನ ಚರಿತ್ರೆಯನ್ನು ಕಾವ್ಯರೂಪದಲ್ಲಿ ಬರೆಯಹೋರಟಿದ್ದಾನೆ. ಚಾಮರಸನು ಪ್ರಭುದೇವನ ವ್ಯಕ್ತಿತ್ವಕ್ಕೆ ಆದರ್ಶದ ಮೆರುಗನ್ನು ಕೊಡುತ್ತಿದ್ದಾನೆ. ಹರಿಹರನ ಪ್ರಭುದೇವನು ಶಿವನ ಒಡ್ಡೋಲಗದಲ್ಲಿದ್ದ ನಿರ್ಮಾಯನೆಂಬ ಗಣಾಧೀಶ. ಒಮ್ಮೆ ಆತ 'ಸುರಸತಿಯರೊಳಗೊರ್ಬಳಂ ನೋಡಲಳುಪಿಂದೆ, ಹರನವರನೀಕ್ಷಿಸುತ್ತಂ ದಯಾಪರದಿಂದೆ, ನೀವಿರ್ವರುಂ ಪೋಗಿ ವಸುಮತಿಯೊಳಗೆ ಪುಟ್ಟಿ, ಕಾಮಂಗೆ ವಶವಾಗಿ ಸಕಲಸುಖವಂ ಮುಟ್ಟಿ. ಹರುಷದಿಂದಿರ್ಬರುಂ ಬಪ್ಪುದು' ಎಂದು ಅಪ್ಪಣೆ ಮಾಡಲು, ನಿರ್ಮಾಯನು ಪ್ರಭುದೇವನಾಗಿಯೂ, ಸುರಸತಿ ಕಾಮಲತೆಯಾಗಿಯೂ ಬಳ್ಳಿಗಾವೆಯಲ್ಲಿ ಹುಟ್ಟಿದರು. ಪ್ರಾಪ್ತವಯಸ್ಕರಾದಮೇಲೆ ಅವರಿಬ್ಬರೂ ಸತಿಪತಿಗಳಾಗಿ ಸುಖಭೋಗಗಳನ್ನು ಅನುಭವಿಸಿದರು. ಕೆಲ ಕಾಲದಮೇಲೆ 'ಕಾಮಲತೆಯಂ ಬಂದು ಹತ್ತಿತು ಮಹಾಜ್ವರಂ', ಅವಳು ಕಾಲವಾದಳು ; ಈ ದುಃಖದಿಂದ ಪ್ರಭುದೇವನು ವೈರಾಗ್ಯಪರನಾದ. ಈ ಕಥೆಯಲ್ಲಿ ನಿರೂಪಿತವಾಗಿರುವ ಮಾನವ ಸಹಜವಾದ ದೌರ್ಬಲ್ಯಕ್ಕೆ ಪರಮ ಜ್ಞಾನಿಯಾದ ಅಲ್ಲಮನು ಒಳಗಾದನೆಂಬುದು ಮತಾಭಿಮಾನಗಳಲ್ಲಿ ಕೆಲವರಿಗೆ ಹಿಡಿಸಲಿಲ್ಲವೆಂದು ತೋರುತ್ತದೆ. ಚಾಮರಸನು ಅಂತಹವರ ಪ್ರತಿನಿಧಿಯಾಗಿ ನಿಂತು ತನ್ನ ಕಾವ್ಯವನ್ನು ಬರೆಯಹೊರಟಿರುವಂತೆ ತೋರುತ್ತದೆ. ಆದ್ದರಿಂದ ಆತನ ಕಾವ್ಯದಲ್ಲಿ ಕಾಮಲತೆಯ ಪ್ರಸಕ್ತಿ ಇಲ್ಲ. ಆತನ ಕಾವ್ಯದ ಸ್ವರೂಪವನ್ನು ನೋಡೋಣ—

ಚಾಮರಸನ ಪ್ರಭುದೇವನು ಶಿವನ ಶಾಪದಿಂದ ಇಳೆಯಲ್ಲಿ ಅವತರಿಸಿದ ಗಣಾಧೀಶನಲ್ಲ; ಆತನು ಸಾಕ್ಷಾತ್ ಪರಶಿವನ ಪ್ರತಿರೂಪನೇ. ಪರಶಿವನು ಶಿವೆಗೆ ಆತನ ವಿಚಾರವನ್ನು ತಿಳಿಸುತ್ತಾ

ಏನ ಹೇಳುವೆನಾದಿಯಲಿ ಸು। ಜ್ಞಾನಿ ನಿರಹಂಕಾರರೆಂಬರ
ನೂನ ತಪವನು ಮಾಡಲೆನ್ನ ನಿಜಸ್ವರೂಪವರ
ಸೂನುವೆಂಬಂದದಲಿ ಸುಳಿದನು। ತಾನೆ ಅಲ್ಲಮನೆಂಬ ಪೆಸರಲಿ
ಮಾನಿನಿಯೆ ಕೇಳಾ ಮಹಾತ್ಮನಲರಿವುದರಿವುಗಳ

ಎಂದು ಹೇಳುತ್ತಾನೆ. ಮಾನವ ಶರೀರದಲ್ಲಿ ಜನಿಸಿ, ಸಾಧನೆಯಿಂದ ನಾಮ ರೂಪಕ್ರಿಯೆಗಳನ್ನು ಗೆದ್ದವರು ಮಾತ್ರ ನಿತ್ಯಸುಖಕ್ಕೆ ಭಾಗಿಗಳೆಂದೂ, ಇಂತಹ ಸಾಧನೆಯನ್ನು ಬೋಧಿಸಬಲ್ಲ ಗುರುವೆಂದರೆ ಅಲ್ಲಮನೊಬ್ಬನೇ ಎಂದೂ ಪರಮೇಶ್ವರನು ಹೇಳಲು, ಶಿವೆಯು ಅದನ್ನು ಪ್ರತಿಭಟಿಸಿ, ತನ್ನ ಮಾಯೆಗೆ ಅವನನ್ನು ಒಳಪಡಿಸುವುದಾಗಿ ಪ್ರತಿಜ್ಞೆಮಾಡಿ, ಆ ಕಾರ್ಯಸಾಧನೆ ಗಾಗಿ ತನ್ನ ತಾಮಸ ಕಳೆಯನ್ನು ಭೂಲೋಕಕ್ಕೆ ಕಳುಹಿಸುತ್ತಾಳೆ. ಆ ತಾಮಸ ಕಳೆಯು ಮೂರ್ತಿರೂಪಳಾದ ಮಾಯೆಯು ಬನವಸೆಯ ರಾಜ ನಾದ ಮಮಕಾರನಿಗೂ ಅವನ ರಾಣಿ ಮೋಹಿನಿಗೂ ಮಗಳಾಗಿ ಜನಿಸಿ ದಳು. ಅವಳ ರೂಪಸಂಪತ್ತು 'ದೇವ ದಾನವ ಮಾನವರುಗಳ ಡಾವಣಿಯು ದನ ಮಾಡಿ ಕಟ್ಟು'ವಂತೆ ಅಸದೃಶವಾದುದು. ಅವಳು ಹುಟ್ಟುತ್ತಿದ್ದಂತೆಯೇ ಆದ ಈ ವಿಪರೀತಗಳನ್ನು ನೋಡಿ—

ಇತ್ತಲಿಂತೀ ಮಾಯೆ ಹುಟ್ಟಿದ। ಡತ್ತಲಖಿಳ ಬುಧವ್ರಜಂಗಳ
ಚಿತ್ತಗಳು ಪಲ್ಲಟಿಸಿ ಆಶಾಪಾಶ ವೆಗ್ಗಳಿಸಿ।
ಮುತ್ತಿ ನೆರೆತಿಹ ಜೀವ ಜಾಳರಿ। ಗೆತ್ತಿ ಕಾಮುಗ್ರಹ ವಿಕಾರತೆ
ಮುತ್ತಿ ಮುರುಟಿಸುತಿರ್ದುದೇನೆಂದೆಂಬೆನಚ್ಚರಿಯ॥
ಊರ ತೊರೆದಡವಿಯೊಳು ಗಂಗಾ। ತೀರದೊಳು ಗಿರಿಗಹ್ವರಂಗಳ
ಘೋರತರ ಗುಹೆಗಳೊಳು ಜಲಪಂಚಾಗ್ನಿ ಮಧ್ಯದೊಳು।
ಧೀರಮುನಿಗಳು ದಿಟ್ಟಸಿದ್ಧರು। ದಾರ ಯೋಗೀಶ್ವರರು ಭಯದಲಿ
ಘೋರನೆದೆ ಗುಂದಿದರು ಮಾಯೆಯ ಜನನ ಕಾಲದಲಿ॥
ಚಿತ್ತ ಬೆದರಿಡಿದಿರ್ದ ತರುಲತೆ। ಹುತ್ತ ಬೆಳೆದ ಸಮಾಧಿವಂತರ
ಚಿತ್ತ ಸಂಚಲವಾಗಿ ನೆನಹಿನ ನೇಮ ನೆಲೆಗೆಡಲು।

ಅವರೆಲ್ಲರೂ ಚಿಂತಾಕ್ರಾಂತರಾಗಿರಲು, ದುರ್ವಾಸಋಷಿಗಳು ಅವರ ಬಳಿಗೆ ಬಂದು, ಮಾಯೆಯ ಜನನ ವೃತ್ತಾಂತವನ್ನು ತಿಳಿಸಿ, ಅಲ್ಲಮಪ್ರಭುವಿನ

ನಾಮಸ್ಮರಣೆಯಿಂದ ಅವರ ಭಯ ನಿವಾರಣೆಯಾಗುವುದೆಂದು ಉಪದೇಶಿಸಿದನು. ಅವರು ಅಂತೆಯೇ ಆಚರಿಸಿ ಬದುಕಿಕೊಂಡರು.

ಮನೋಜ್ಞವಾದ ಬಾಲಲೀಲೆಗಳೊಡನೆ ಮಾಯೆ ಬೆಳೆದಳು. ಹಾಗೆ ಬೆಳೆಯುತ್ತಾ

ಬೀರುತಿರ್ದಳು ಮುದ್ದುತನವನು । ಹೇರುತಿರ್ದಳು ಸಕಲ ಚೆಲುವನು
ತೋರುತಿರ್ದಳು ಜಗದ ಜಂಗುಳಿಗಾಡುವೊಲನಾಗಿ ।
ಸಾರುತಿರ್ದಳು ಸಕಲ ಸೊಬಗನು । ಮೀರುತಿರ್ದಳು ದಿನದಿನಕೆ ಕಳೆ
ಯೇರುತಿರ್ದಳು ಮಾಯೆ ವಿವಿಧ ವಿಲಾಸವೃತ್ತಿಯಲಿ ॥

ಅವಳ ನಡೆ ನುಡಿಗಳು ಎಷ್ಟು ಮನೋಹರವಾಗಿದ್ದುವೆಂದರೆ—

ನಡೆಯ ಕಲಿಸಿದಳಂಚೆವಿಂಡಿಗೆ । ನುಡಿಯ ಕಲಿಸಿದಳರಗಿಳಿಗೆ ಸರ
ವಿಡಲು ಕಲಿಸಿದಳಾಕೆ ತನ್ನರಮನೆಯ ಕೋಗಿಲೆಗೆ ॥

ಮಾಯೆ ಬೆಳೆದು ಹರೆಯದವಳಾದಳು, ಮಮಕಾರರಾಜನು, ಆಕೆಯ ಮದುವೆಗಾಗಿ ಚಿಂತಿಸುತ್ತಿರಲು ಆತನ ಗುರುವಾದ ಅಹಂಕಾರಾಚಾರ್ಯನು ಪರಶಿವನೆ ಆಕೆಯ ಪತಿಯೆಂದು ಹೇಳಿ, ಆ ಪರಶಿವನನ್ನು ಮೆಚ್ಚಿಸುವ ಮಂತ್ರವನ್ನು ಮಾಯೆಗೆ ಉಪದೇಶಿಸಿದನು. ಮಾಯೆಯು ದಿನದಿನವೂ ಮಧುಕೇಶ್ವರಾಲಯಕ್ಕೆ ಹೋಗಿ ಶಿವನನ್ನು ಅರ್ಚಿಸುತ್ತಿರಲು, ಅಲ್ಲಿ ಆಕೆಗೆ ಅಲ್ಲಮನ ದರ್ಶನವಾಯಿತು. ಆತನು ದಿವ್ಯಸುಂದರಾಕಾರವನ್ನು ತಳೆದು, ಕೇಳುವವರೆಲ್ಲ ಬೆರಗಾಗುವಂತೆ ಮದ್ದಲೆ ಬಾರಿಸುತ್ತಿದ್ದ. ಅದನ್ನು ಕೇಳಿದ ಮಾಯೆಗೆ 'ಕಾರ ಮುಗಿಲಿನ ಗರ್ಜನೆಯ ಕಿವಿಯಾರ ಕೇಳಿದ ನೋಗೆಯಂ' ತಾಯತು; ಅವನ ಸುಂದರ ರೂಪವನ್ನು ಕಂಡು 'ಮೊಳೆತುವಾ ಕ್ಷಣ ಕಾಮಬಾಣದ ಹಿಳುಕುಗಳು.' ಸಖಿಯರ ಜಾಣ್ಮೆಯಿಂದ ಅಲ್ಲಮನಿಗೆ ಅರಮನೆಯ ವಾಸ ದೊರೆಯಿತು. ಆದರೆ ಮಾಯೆ ಬಯಸಿದ ಸುಖ ಅವಳಿಗೆ ದಕ್ಕಲಿಲ್ಲ. ಅಲ್ಲಮನ ಯೋಗ್ಯತೆ ಅವಳಿಗೆ ಹೇಗೆ ತಿಳಿಯಬೇಕು ?

ಸುಧೆಯ ಸೋನೆಯ ಸುರಿವುತಿಹ ಕಾ । ಲದಲಿ ತೃಪ್ತಿಯನೆಯ್ದಲರಿಯದೆ
ಕ್ಷುಧೆಗೆ ಕೃಷಿಗಳ ಮಾಡಿ ಕೋಟಲೆಗೊಂಬ ಮರುಳಂತೆ ।
ಮುದದಲಲ್ಲಮ ಕರುಣಿಸುವ ಕಾ । ಲದಲಿ ನಿತ್ಯವನರಿಯಲರಿಯದೆ
ಕುದಿದು ಕೋಟಲೆಗೊಳುತಲಿರ್ದಳು ಮಾಯೆ ಬೇಟದಲಿ ॥

ಮಾಯೆಯ ಸಖಿಯರು 'ತಮವ ತರಣಿಯನೊಂದುಗೂಡುವೆವೆಂಬ ಭಾವಭ್ರಮಿತ ಬುದ್ಧಿಯಲಿ' ಅವರಿಬ್ಬರನ್ನು ಒಂದು ಗೂಡಿಸಲು ಪ್ರಯತ್ನಿಸಿದರು. ಆದರೇನು ?

ಮಳೆಗೆ ನೆನೆವುದೆ ಗಾಳಿ, ಬೀಸಿದ | ಡೊಲೆವುದೇ ಬಲುಗಿಚ್ಚಿನುರಿಯಿಂ
ದಳಿವುದೇ ನಭವಾ ಪರಿಯ ಬಯಲಿಗನು ತಾನಾಗಿ
ಕಳವಳದ ವಿಷಯಗಳ ವೆಸನಗ | ಳೊಳಗೆ ಸಿಕ್ಕುವನಲ್ಲವಾತನ
ಹೊಲಬು ತಾ ಬೇರೊಂದು ಪರಿ ಏನೆಂಬೆನಲ್ಲಮನ ||

ರಾಜಕುಮಾರಿ ಅಲ್ಲಮನ ವಿರಹದಲ್ಲಿ ಸಿಕ್ಕಿರುವಳೆಂಬ ಸುದ್ದಿ ಊರಿನಲ್ಲೆಲ್ಲ ಹಬ್ಬಿತು. ಸಕಳೆಯೆಂಬ ಸಖಿ ಇದನ್ನು ಅಲ್ಲಮನಿಗೆ ತಿಳಿಸಿ ಹೇಳಿದಳು—

ಅಣ್ಣ ಕೇಳುದಕದಲಿ ಮುಳುಗಿದ | ಸುಣ್ಣ ಕಲ್ಲಂತಾಗಿ ಕುದಿವುತ
ಬನ್ನ ಬಟ್ಟಳು ಮಾಯೆ ಕಾಣುತ ನಿನ್ನ ಬೇಟದಲಿ
ಕಣ್ಣು ಕಾಣದೆ ಕಾಮನೇರಿನ | ಹುಣ್ಣಿನಲಿ ಹೊರಳಿದಡೆ ಆ ಸ್ಥಿತಿ
ಹಣ್ಣಿ ಹಬ್ಬಿತು ಪುರದೊಳೆಂದಳು ಸಕಳೆಯಲ್ಲಮಗೆ ||

ಇತ್ತ ಇವಳು ಅಲ್ಲಮನ ವಿರಹದಲ್ಲಿ ಮುಳುಗಿರಲು ಅತ್ತ ಪಾರ್ವತಿ ಅವಳಲ್ಲಿ ಕರ್ತವ್ಯ ಜಾಗ್ರತಿಯನ್ನುಂಟುಮಾಡಲು ವಿಮಲೆಯೆಂಬುವಳನ್ನು ಅಟ್ಟಿದಳು. ಅವಳಿಂದ ಮಾಯೆಗೆ ವಿವೇಕೋದಯವಾಯಿತು. ಆದರೆ ಅಲ್ಲಮನು 'ಸ್ವಸ್ವರೂಪವ ಕಾಕರಿಗೆ ಕಾಣಿಸುವುದನುಚಿತ' ಎಂದುಕೊಂಡು ಅವನು ತನ್ನ ಮದ್ದಲೆಯನ್ನು ಬಿಸುಟು ಮಾಯವಾದನು. ಮಾಯೆ ಮುಂದೋರದೆ ಮಿಡುಕುತ್ತಿರಲು, ವಿಮಲೆಯು 'ಅಲ್ಲಮನನೀರೇಳು ಲೋಕದಲರಸಿ ನೋಡುವ' ಎಂದು ಹೇಳಿ ಅವಳನ್ನು ಸಮಾಧಾನಪಡಿಸಿದಳು. ಇಬ್ಬರೂ ಸಖಿಯರೊಡನೆ ಅವನನ್ನು ಅರಸುತ್ತಾ ಬಿಸಿಲು ಬಿರುಗಾಳಿಯೆನ್ನದೆ, ಕಲ್ಲು ಮುಳ್ಳುಗಳನ್ನು ತುಳಿಯುತ್ತಾ ಅರಣ್ಯವನ್ನು ಹೊಕ್ಕರು. ಮಾಯೆಯನ್ನು ಕಾಣುತ್ತಲೆ ಅಲ್ಲಿದ್ದ ಋಷಿಗಳೆಲ್ಲರೂ 'ಹುಲಿಗಂಡ ಹುಲ್ಲೆಗಳಂತೆ' ದೆಸೆದೆಸೆಗೆ ಎದ್ದೋಡಿದರಂತೆ!

ಮಾಯೆಯ ಸಂಕಟವನ್ನೂ ಋಷಿಗಳ ದುರವಸ್ಥೆಯನ್ನೂ ಕಂಡ ಅಲ್ಲಮ ಕನಿಕರದಿಂದ ಋಷಿಗಳಿಗೆ ಋಷಿಗಳಂತೆ ಕಾಣಿಸಿಕೊಂಡು ಸಮಾ

ಧಾನ ಮಾಡಿದ ಮೇಲೆ, ಮಾಯೆಗೆ ತನ್ನ ಮುನ್ನಿನ ರೂಪದಲ್ಲಿಯೇ ಪ್ರತ್ಯಕ್ಷನಾದ. ಅವನನ್ನು ಕಾಣುತ್ತಲೆ ಆ ಹೆಣ್ಣುಗಳಿಗೆ ಹಸಿವು, ನೀರಡಿಕೆ, ಬಳಲಿಕೆಗಳೆಲ್ಲಾ ಹಿಂಗಿದವಂತೆ!

ತೃಷೆಗಳರತವು ಕಾಣುತಲಿ ಕಡು | ಹಸುಗಳಡಗಿದವಡವಿಯಲಿ ಕಂ
ಪಿಸುತ ಮುಗ್ಗುತ ಕೆಡೆವುತಲಿ ಮಿಗೆ ಬಂದ ಬಳಲಿಕೆಯು
ಮಸಕ ಮಾದುದು ವಿಶ್ರಮಿಸಿದರು | ಶಶಿಮುಖಿಯರೆಯ್ತಂದು ಕಾಣುತ
ಮಾಪುರಿ ಮುಕ್ತಿಪರಲ್ಲಮನ ಶ್ರೀಪಾದ ಪಂಕಜವ ||

ಮಾಯೆಯು ಅವನ ವರ್ತನೆಯನ್ನು ಕಟುವಾಗಿ ಟೀಕಿಸಿ, ತಾನೇನೂ ಸಾಮಾನ್ಯಳಲ್ಲವೆಂದು ತನ್ನ ಪ್ರತಾಪವನ್ನು ಹೊಗಳಿಕೊಂಡಳು–

ಹರಿಯನಿದೆಯನು ಮೆಟ್ಟಿದೆನು ಶಂ | ಕರನನರ್ಧಾಂಗದೊಳು ನೆಟ್ಟನೆ
ಹರಿಸುಟಿಗೆಯಾಡಿದೆನು ಬ್ರಹ್ಮನ ಬಾಯ ಮುದ್ರಿಸಿದೆ
ಸುರನರೋರಗರೆಂಬ ಮರವೆಯು | ಮರುಳು ತಂಡವನೆನ್ನ ತೊತ್ತಿರ
ಶರಣವೊಗಿಸಿದೆನೇನ ಕೇಳುವೆ ಎಂದಳಾ ಮಾಯೆ ||
ಜಿನಗು ಮತಿಗಳ ಸಿದ್ಧ ಸಾಧಕ | ಮುನಿಗಳೆಂಬವದಿರುಗಳನು ನಾ
ಮುನಿದು ಕಚ್ಚುಟ ಕಂಥೆ ಬತ್ತಲೆ ಬೋಳು ಜಡೆ ಲೋಚು
ಅನಶನವ್ರತ ನಾರು ಬೇರೆಂಬನಿತರಲಿ ದಂಡಿಸುವೆನಾ ಕಾ
ನನವ ಮರುಳರನೇನ ಕೇಳುವೆ ಎಂದಳಾ ಮಾಯೆ.

ಅವಳ ಅಹಂಕಾರದ ನುಡಿಗಳಿಗೆ ಮರುಸವಾಲೆಂಬಂತೆ ಅಲ್ಲಮ ಕೇಳಿದ ‘ಮರುಳೆ, ನಿನ್ನನದಾರು ನಾನಾ ಪರಿಯಲಾಡಿಸುವವರು, ನೀನದ ಪರಿಕಿಸದೆ ಗರ್ವವಲಿ ನುಡಿವರೆ?’ ಎಂದು. ಮಾಯೆಗೆ ಈ ವಿಚಾರಮಂಥನ ಬೇಕಿಲ್ಲ. ಬರಿಯ ಮಾತಿನಿಂದ ತನ್ನ ಮನೋರಥ ಸಿದ್ಧಿಸುವಂತಿಲ್ಲ. ಆದ್ದರಿಂದ ‘ನಿನ್ನ ಧೂರ್ತವಿಕಾರವೆಲ್ಲವ ಬಿಟ್ಟು ಕೃಪೆಮಾಡು’ ಎಂದು ಅವನನ್ನು ಬೇಡಿಕೊಂಡಳು. ತನ್ನ ಸ್ಥಿತಿಯನ್ನು ಅಲ್ಲಮನ ಮನಕರಗುವಂತೆ ಹೇಳಿಕೊಂಡಳು–

ಭಾಷೆ ಸಲ್ಲದೆ ಹೋಯಿತೆನ್ನಯ | ವಾಸಿ ವರ್ಧಿಸಿ ಬತ್ತುತಿದೆ ಕೈ
ಲಾಸದವರಿದ ಕೇಳಿ ನಗುವಂತಾಯಿತೇ ನನಗೆ |
ಈಸು ಧಾವತಿಯಿಂದ ನಾ ಕಡು | ಘಾಸಿಯಾದೆನು ಬೆಂದ ಹುಣ್ಣನು
ಕೀಸುವರೆ ಕಂಬಿಯಲಿ ಕೇಳಕಟೆಂದಳಾ ಮಾಯೆ ||

ಆಕೆಯ ದುಸ್ಥಿತಿಗೆ ತಾನು ಕಾರಣನಲ್ಲವೆಂದು ಅಲ್ಲಮನ ಉತ್ತರ–

ತರಳೆ ತನ್ನಯ ಹೊನ್ನು ಸಲ್ಲದೆ। ತಿರುಗಿ ಬಂದಡೆ ಅಕ್ಕಸಾಲೆಯ
ದುರುಳತನದಲಿ ಬಯ್ಯಲಹುದೇ? ನೀನು ಮತಿಗೆಟ್ಟು।
ಹರನನರ್ಚಿಸುವಂಗ ಭೇದಾಂ। ತರವನರಿಯದೆ ಸಟೆಯ ಭಕ್ತಿಯ
ಭರದಲೀತಕೆ ಫಲವ ಬಯಸುವೆ ಮಾಯೆ ಕೇಳೆಂದ॥

ಅವರಿಬ್ಬರಿಗೂ ಸಂಧಾನ ಮಾಡಲು ಬಯಸಿದ ವಿಮಳೆ ಅಲ್ಲಮನನ್ನು ಬಾಯ್ತುಂಬ ಹೊಗಳುತ್ತಾ

ಶರಣಜನ ರಕ್ಷಾಮಣಿಯೆ ಕಿಂ। ಕರ ಚಕೋರ ಸುಧಾಕರನೆ ಭಾ
ಸುರ ದಯಾಂಭೋನಿಧಿಯೆ ನೀನೀ ಸ್ತ್ರೀಯ ತನು ಮನವ।
ಒರೆದು ನೋಡಿದಡಲ್ಲಿ ಭಾವಿಸೆ। ಹುರುಳು ಬಳಿಕೇನುಂಟು? ನಿನ್ನಯ
ಕರುಣವಾಕೆಯ ಹರಣವೆಂದಳು ವಿಮಲೆ ವಿನಯದಲಿ॥

ವಿಮಲೆಯ ಮಾತನ್ನು ಅಲ್ಲಮ ಅಂಗೀಕರಿಸಲಿಲ್ಲ. 'ನೀರಿಗೆ ಹೆಪ್ಪನೆರೆದಡೆ' ಹಾಲಿನಂತೆ ಅದು ಹೆಪ್ಪುಗಟ್ಟಬಲ್ಲುದೆ? ಕಾಳುಮತಿಗಳಿಗೆ ಬುದ್ಧಿ ಹೇಳಿ ಏನು ಪ್ರಯೋಜನ? ಎಂದ. 'ಕೀಳು ಕಬ್ಬಿಣವನ್ನು ಸ್ಪರ್ಶಮಣಿಯು ಕಾಲಲ್ಲಿ ಒದೆಯಲಿ, ಕೈಯಲ್ಲಿ ಅಪ್ಪಲಿ ಅದು ಸ್ವರ್ಣವಾಗುವುದಿಲ್ಲವೆ?' ಎಂದು ವಿಮಲೆ ಕೇಳಲು 'ಇದು ಕಬ್ಬಿಣವಲ್ಲ; ಬರಿಯ ಹೆಂಚಿನ ತುಂಡು' ಎಂದ, ಅಲ್ಲಮ, ಮಾಯೆಯನ್ನು ಕುರಿತು ಸ್ಪಷ್ಟವಾಗಿ ಒಡನುಡಿದ

ಕಡಲ ನೀರುಗಳೆಲ್ಲಪನ್ನೃತದ। ಮಡುಗಳಾದಡೆಯಹವು, ಸುರಗಿರಿ
ಕುಡಿವರಿದು ಹಬ್ಬಿದಡೆ ಹಬ್ಬುವುದವನಿ ಮಂಡಲವ
ಗಿಡುಗಳೆಲ್ಲವು ಕಲ್ಪತರುವಾ। ದಡೆಯಹವು ಎತ್ತಾನು ಕಾಲಕೆ
ಮಡದಿ ಮಾಯೆಗೆ ಪರಮ ತತ್ವಜ್ಞಾನವಿಲ್ಲೆಂದ

ತಾನು ಬಂದ ದಾರಿಗೆ ಸುಂಕವಿಲ್ಲವೆಂದು ಹೇಳಿಕೊಳ್ಳುತ್ತಾ ಮಾಯೆ ವಿಮಲೆಯೊಡನೆ ಕೈಲಾಸಕ್ಕೆ ಹಿಂದಿರುಗಿದಳು.

ಸುಜ್ಞಾನಿ—ನಿರಹಂಕಾರರಿಂದ ಉದಿಸಿದ ಅಲ್ಲಮ, ಮಮಕಾರ—ಮೋಹಿನಿಯರಿಗೆ ಜನಿಸಿದ ಮಾಯೆಯನ್ನು ಸೋಲಿಸಿದುದು ಸಹಜವಾಗಿಯೇ ಇದೆ. ಜ್ಞಾನವಿದ್ದೆಡೆ ನಿರಹಂಕಾರವಿರುವುದು ಸ್ವಾಭಾವಿಕ. ಇವು ಇದ್ದ ಕಡೆ ಮಾಯೆಗೆ ಎಡೆಯಿಲ್ಲ. ಆದ್ದರಿಂದಲೇ ಸುಜ್ಞಾನ ನಿರಹಂ

ಕಾರಗಳ ಸುಮಧುರಫಲವಾಗಿ ಅಲ್ಲಮ ಅಥವಾ ನಿರ್ಮಾಯ ಉದಿಸಿದುದು. ಮಮಕಾರ-ಮೋಹಗಳಿಂದ ಮಾಯೆ ಜನಿಸುವುದು ಅಷ್ಟೇ ಸ್ವಾಭಾವಿಕವಾದುದು. ಇವುಗಳಿಗೆ ಗುರುವಾಗಿ ಅಹಂಕಾರ ಬೇರೆ. ಇವು, ನಾಲ್ಕೂ ಒಂದೆಡೆ ಸೇರಿದ ಮೇಲೆ ನಿರ್ಮಾಯ ಸ್ಥಿತಿಯನ್ನು ಮುಟ್ಟುವುದೆಂತು? ಅದನ್ನು ಮುಟ್ಟಬೇಕಾದರೆ ಸುಮತಿ, ನಿರ್ಮಲ ಮನಸ್ಸುಗಳು ಅಗತ್ಯ. ಈ ತತ್ತ್ವವನ್ನು ಅನುಸರಿಸಿಯೆ ಚಾಮರಸನು ಮಹದೇವಿಯಕ್ಕನ ಪಾತ್ರವನ್ನು ಕಟೆದು ನಿಲ್ಲಿಸಿದ್ದಾನೆ. ಆಕೆ ಪಾರ್ವತೀ ದೇವಿಯ ಸಾತ್ವಿಕ ಕಳೆ, ತನ್ನ ತಾಮಸ ಕಳೆಯಾದ ಮಾಯೆಯಿಂದ ಪ್ರಭುದೇವನನ್ನು ಒಲಿಸಿಕೊಳ್ಳಲಾರದೆ ವ್ಯಥೆಗೊಂಡ ಪಾರ್ವತಿ, ಶಿವನ ಬುದ್ಧಿವಾದದಂತೆ ತನ್ನ ಸಾತ್ವಿಕ ಕಳೆಯನ್ನು ಭೂಮಿಗೆ ಕಳುಹಿಸಿದಳು. ಅದು ಉಡುತಡಿಯಲ್ಲಿದ್ದ ನಿರ್ಮಳ-ಸುಮತಿಯರ ಮಗಳಾಗಿ ಮಹದೇವಿಯಕ್ಕನೆಂಬ ಹೆಸರಿನಿಂದ ಜನಿಸಿತು. ವೈವೆತ್ತ ಶಿವಭಕ್ತಿಯಂತೆ ಬೆಳೆದು ಯೌವನವತಿಯಾದ ಆ ಹೆಣ್ಣನ್ನು ದೊರೆಯಾದ ಕೌಶಿಕನು ಮೋಹಿಸಿದ. ಆದರೆ ತಂದೆ ತಾಯಿಗಳು ಅವಳನ್ನು ನೃಪಕುಲದವನಿಗೆ ಕೊಡಲು ಒಪ್ಪಲಿಲ್ಲ; ಆದರೂ ರಾಜನಿಗೆ ಹೆದರಿ 'ಆಕೆ ತಾನಹುದೆಂದಳಾದಡೆ' ತಮಗೇನೂ ಅಡ್ಡಿಯಿಲ್ಲವೆಂದರು. ಅಕ್ಕನನ್ನು ವಿಚಾರಿಸಿದಾಗ ಆಕೆ ತನ್ನಲ್ಲಿ ತಾನೇ ಆಲೋಚಿಸಿದಳಂತೆ!

ಪರಿಮಳವನಾರಿಕ್ಕಿದರು ಕ| ರ್ಪುರಕೆ, ಕೋಗಿಲೆಗಾರು ಸೊಗಸಿನ
ಸ್ವರವ ಕಲಿಸಿದರಂಚೆಗಾರಡಿಯಿಡಲು ಕಲಿಸಿದರು?

ಹಾಗೆಯೇ ಮಹದೇವಿಗೂ ಮತ್ತೊಬ್ಬರು ಕಲಿಸಬೇಕಾಗಿರಲಿಲ್ಲ. 'ತಾನೇ ನೆನೆದವಳೊಂದನುವ'. ರಾಜನನ್ನು ಕರೆಸಿ 'ನೀನು ಸಲೆ ಶಿವಭಕ್ತನಾದಡೆ ಕೂಡುವೆನು ನಿನ್ನ; ನೀನು ಭವಿಯಾಗಿರ್ದೊಡೊಲ್ಲೆನು' ಎಂದಳು. ರಾಜನು 'ನಮಗೆ ಶಿವಭಕ್ತಿಯನು ಮಾಡುವ ಸಮಯವಳವಡದು' ಎಂದಳು. ಮಹದೇವಿ 'ನಮಗೆ ನಿಮ್ಮಯ ಸಂಗವಳವಡದು' ಎಂದಳು. ರಾಜನು ನಿರಾಸೆಯಿಂದ ಹಿಂದಿರುಗಿದನು. ಅಕ್ಕ ಮಹಾದೇವಿ ವಿರಕ್ತಳಾದಳು.

ಹಿಡಿದ ಲಿಂಗದ, ವರ ವಿಭೂತಿಯ | ತೊಡಹದಂಗದ, ಮೆಯ್ಯ ಮುಸುಕಿದ
ಬಿಡು ಮುಡಿಯ ಹೊದಕೆಯ ವಿಳಾಸತೆ ರಾಹು ಚಂದ್ರಮನ

ಹಿಡಿದು ನೆಟ್ಟನೆ ನಿಂದು ನಿಗುರುತ | ಪ್ರೌಡವಿಯಲಿ ಬಂದಿರ್ದುದೊ ಎನೆ
ಕಡುವಿರಕ್ತಿಯ ವೇಷ ಕಾಣಿಸಿತಿಂದುವದನೆಯಲಿ ||

ಆಕೆಯು 'ಎಲ್ಲಿ ಸಜ್ಜನ, ಎಲ್ಲಿ ನಿರ್ಜನ, ಎಲ್ಲಿ ಗಿಡು, ಮಡು, ಎಲ್ಲಿ ತರುಗಿರಿ. ಎಲ್ಲಿ ಹೂಗೊಳ, ಎಲ್ಲಿ ಗಹ್ವರ, ಎಲ್ಲಿ ಲತೆ, ಪುಳಿನ' ಅಲ್ಲೆಲ್ಲಾ ಗುರುವನ್ನು ಅರಸುತ್ತಾ ಹೊರಟಳು.

ಮಹದೇವಿಯಕ್ಕನ ಕಥೆಯಲ್ಲಿಯೂ ಚಾಮರಸನು ಹರಿಹರಕವಿಯಿಂದ ಭಿನ್ನವಾದ ಕಥಾಸರಣಿಯನ್ನು ಕೈಕೊಂಡಿದ್ದಾನೆ. ಮಹದೇವಿಯಕ್ಕ ಮತ್ತು ಉಡುತಡಿಯ ಅರಸ ಕೌಶಿಕ–ಇವರ ವಿವಾಹವಾಗಿತ್ತೆಂದೂ ಕೌಶಿಕನು ತನ್ನ ಮಾತು ತಪ್ಪಲು ಮಹದೇವಿಯಕ್ಕ ಅವನನ್ನು ನಿರಾಕರಿಸಿ ದಿಗಂಬರೆಯಾಗಿ ಹೊರಟು ಹೋದಳೆಂದೂ ಹರಿಹರ ವರ್ಣಿಸಿದ್ದರೆ, ಚಾಮರಸನು ಮದುವೆಯ ಪ್ರಸ್ತಾಪವನ್ನು ಎತ್ತಿಲ್ಲ. ಪರಮ ಭಕ್ತಳಾದ ಅಕ್ಕನು ಪರಸಮಯಿಯೊಬ್ಬನನ್ನು ಮದುವೆಯಾಗಿದ್ದಳೆಂಬುದನ್ನು ಚಾಮರಸನ ಚೇತನ ಒಪ್ಪಲಿಲ್ಲವೆಂದು ತೋರುತ್ತದೆ.

ಅಲ್ಲಮ 'ಕರಣ ಕಾಯದಲಿ ಸುಳಿ' ದಾಡುತ್ತಾ ಗೊಗ್ಗಯ್ಯನೆಂಬ ಭಕ್ತನನ್ನು ಉದ್ಧರಿಸಿ, ಅಣ್ಣನ ಸಾವಿನಿಂದ ಸಂಕಟ ಪಡುತ್ತಿದ್ದ ಮುಕ್ತಾಯಕ್ಕನಿಗೆ ಧರ್ಮೋಪದೇಶ ಮಾಡಿ, ಸೊನ್ನಲಿಗೆಯಲ್ಲಿದ್ದ ಸಿದ್ಧರಾಮನ ಬಳಿಗೆ ಬರುತ್ತಾನೆ. ಆ ಕರ್ಮಯೋಗಿಯ ಕಾರ್ಯರಂಗ ಅಲ್ಲಮನಿಗೆ ಹಿಡಿಸಲಿಲ್ಲ.

ನೂಲ ಸಂಕಲೆಗಡಿದು ಕನಕದ | ಕೋಳವನು ಕಾಲಿಂಗೆ ಕೀಲಿಪ
ಕಾಳುಮತಿಯವನಂತೆ ಸತಿ ಸುತ ಕೂಟ ಭಯವೆಂದು |
ಬಾಳಕೆಯನತಿಗಳೆದು ಮರಳಿಯು | ಬೋಳುಮಂಡೆಯ ಕೀರ್ತಿಗೋಸುಗ
ಕೋಳುಹೋದನೆ ರಾಮನೆನುತಲ್ಲಮನು ಜರೆಗಾದ ||

ಅವನನ್ನು ಉದ್ಧಾರ ಮಾಡಲೆಂದು ಬಗೆದು ಅವನ ಶಿಷ್ಯರೆದುರಿಗೆ 'ಒಡ್ಡ' ನೆಂದು ಅವನನ್ನು ಬಯ್ದು ಅವರನ್ನು ಕೆರಳಿಸಿದನು. ಅವರು ಕವಣೆಗಲ್ಲುಗಳಿಂದ ಅಲ್ಲಮನನ್ನು ಹೊಡೆದರು. 'ಅಲ್ಲಮ ಹೂಳಿಹೋದನು ಕವಣೆಗಲ್ಲಲಿ'. ಆದರೆ ಆತನ ಕೂದಲು ಕೊಂಕಲಿಲ್ಲ. 'ತನ್ನಯ ಲೀಲೆಯಲಿ ನಿರ್ಲೇಪಸಿದ್ಧನು ನಗುತ.' ಈ ಸುದ್ದಿ ಸಿದ್ಧರಾಮನನ್ನು ಮುಟ್ಟಿತು. ರೋಷಾವೇಶದಿಂದ

ಆರು ನಮ್ಮನು ಜರೆದವನು ಜಂ| ಭಾರಿಯೋ ದನುಜಾರಿಯೋ ಕಾ
ಮಾರಿಯೋ ತೋರವನ ಹೆಡತಲೆಗುಗಿವೆ ನಾಲಿಗೆಯ
ಬೇರು ಸಹಿತವೆ ಕೀಳುವೆನು

ಎಂದು ಗರ್ಜಿಸಿದನು. ಆದರೆ ಅಲ್ಲಮನು ಅವನನ್ನೂ 'ಸುಡು ಸುಡು ಯತಿತ್ವವನು' ಎಂದು ಛೀಗುಟ್ಟಿದನು. ಸಿದ್ಧರಾಮನು ಸಮತೆಯನ್ನು ಕಳೆದುಕೊಂಡು ತನ್ನ 'ಹಣೆಯ ಕಣ್ಣಿನ ಕಿಡಿಯ ಕೆದರಿದ'. ಆದರೇನು? 'ಸಿಡಿಲುಗಿಡಿಗಳು ಸೂಸುತಲ್ಲಮ ನಡಿಗಳೆಡೆಯನು ಹೊದ್ದಲಮ್ಮದೆ ಸಿಡಿದು ಸೀಕರಿಗೊಳಿಸುತಿರ್ದುವು ಸಕಲ ಜೀವರನು'. ಇದನ್ನು ಕಂಡ ಅಲ್ಲಮನು ಹಾಲಾಹಲದ ಹಾವಳಿಯನ್ನು ನಿಲ್ಲಿಸಿದ ಶಿವನಂತೆ, ಹಣೆಗಣ್ಣಿನ ಬೆಂಕಿಯಿಂದ ಎಲ್ಲರನ್ನೂ ರಕ್ಷಿಸಿದನು. ಇದನ್ನು ಕಂಡು ಸಿದ್ಧರಾಮನ ಕಣ್ಣು ತೆರೆಯಿತು. ಅತನಿಗೆ ಶರಣಾಗತನಾಗಿ 'ಹೊಲಬುಗೆಟ್ಟೆನು ನಿನ್ನ ಪಾದದ ನೆಲೆಯ ಕಾಣದೆ, ದೇವನೀನೇ ಸಲಹು' ಎಂದು ಬೇಡಿಕೊಂಡನು. ಅಲ್ಲಮನು ಆತನನ್ನು ಹೆತ್ತ ತಂದೆ ಮಗನನ್ನು ಸಮಾಧಾನಮಾಡುವಂತೆ ಸಮಾಧಾನ ಮಾಡಿ, ಅವನಿಗೆ ಜ್ಞಾನೋಪದೇಶ ಮಾಡಿದನು. ಅನಂತರ ಆತನನ್ನೂ ಕರೆದುಕೊಂಡು ಅಲ್ಲಮನು ಕಲ್ಯಾಣದಲ್ಲಿದ್ದ ಬಸವಣ್ಣನ ಬಳಿಗೆ ಬಂದನು. ಆತನು ಅಲ್ಲಮನನ್ನು ಭಕ್ತಿಯಿಂದ ಸ್ತುತಿಸಿ 'ಮನ್ಮನದ ಮಧ್ಯದ ಕತ್ತಲೆಯ ಕಳೆದರಿವಿನರ್ಕನ ತೆತ್ತಿಸೆನ್ನೊಳಗೆ' ಎಂದು ಬೇಡಿಕೊಳ್ಳಲು, ಅಲ್ಲಮನು ಬಹಳ ಸಂತೋಷದಿಂದ

ಹಾಲು ಹಯನುಳ್ಳಲ್ಲಿ ಹೇಳವೆ | ಕೇಳವೇ ಹಬ್ಬವನು ಸವಿವುದು
ಗಾಳಿಬೀಸುವ ದಿನದಲೇ ತೂರುವುದು ಹೊಟ್ಟುಗಳ |
ಕಾಲು ಕೈ ಕಣ್ಣುಗಳು ತನುವಿಹ | ಕಾಲದಲಿ ಕಾಲನ ನಿವಾರಿಸಿ
ಮೇಲುಗತಿಯರಸುವನೆ ಜಾಣನು ಬಸವ ಕೇಳೆಂದ ||

ಹೀಗೆ ಹೇಳಿ ಇಷ್ಟಲಿಂಗೋಪದೇಶವನ್ನು ಮಾಡಿದ. ಆತನು ಶಿವಾನುಭವ ಮಂಟಪದಲ್ಲಿ ಬೋಧಿಸುತ್ತಿರುವಾಗ ಮಹದೇವಿಯಕ್ಕನು ಗುರುವನ್ನು ಅರಸುತ್ತಾ ಅಲ್ಲಿಗೆ ಬಂದಳು. ಅಲ್ಲಮನು ಆಕೆಯ ನಿಲವನ್ನು ಅರಿತು, ಆಕೆಗೆ ಐಕ್ಯವನ್ನು ಉಪದೇಶಿಸಿ, ಶ್ರೀಗಿರಿಯ ಕದಳೀವನಕ್ಕೆ ಆಕೆಯನ್ನು ಕಳುಹಿಸಿದನು.

ಅಲ್ಲಮನು ಮತ್ತೆ ದೇಶಪರ್ಯಟನೆಯನ್ನು ಕೈಕೊಂಡು, ಶ್ರೀ ಪರ್ವತಕ್ಕೆ ಬಂದನು. ಅಲ್ಲಿ, ಗೋರಕ್ಷನೆಂಬ ಸಿದ್ಧನು ತನ್ನ ಸಾಧನೆಯಿಂದ ವಜ್ರದೇಹಿಯಾಗಿರಲು ಅವನಿಗೆ ಅದರ ಪೊಳ್ಳನ್ನು ಮನದಟ್ಟು ಮಾಡಿಕೊಟ್ಟು ವೀರಶೈವೋಪದೇಶವನ್ನು ಮಾಡಿದನು. ಮುಂದೆ ಆತನು ಅಡವಿಯಲ್ಲಿ ಬೇಟೆಯಾಡುತ್ತಿದ್ದ ಕಿರಾತನೊಬ್ಬನಿಗೆ ಧರ್ಮೋಪದೇಶಮಾಡಿದನು. ಹೀಗೆಯೇ ದೇಶದೇಶಗಳನ್ನು ತಿರುಗಿ, ಭಕ್ತರನ್ನು ಉದ್ಧರಿಸಿ ಕಲ್ಯಾಣಕ್ಕೆ ಹಿಂದಿರುಗಿದನು. ಆ ವೇಳೆಗೆ ಅಲ್ಲಿ ಅಲ್ಲಮನಿಗಾಗಿ ಶೂನ್ಯಸಿಂಹಾಸನ ಸಿದ್ಧವಾಗಿತ್ತು. ಅಲ್ಲಮನು ಬಸವಣ್ಣನನ್ನು ಪರೀಕ್ಷಿಸುವುದಕ್ಕಾಗಿ ಕೀವು ನೆತ್ತರು ಸುರಿಯುತ್ತಿರುವ ಹುಣ್ಣುಗಳಿಂದ ತುಂಬಿದ ವಿಕೃತ ದೇಹದಲ್ಲಿ ಕಾಣಿಸಿಕೊಂಡನು. ಆದರೇನು ? 'ಸೆಲನ ಮರೆಗೊಂಡಿಹ ನಿಧಾನದ ಹೊಲಬನಂಜನವಿಡಿದು ಕಣ್ಣಿನ ಬಲುಹನುಳ್ಳವ ಕಾಬವೊಲು' ಬಸವಣ್ಣ ಆತನನ್ನು ಗುರುತಿಸಿದನು. ಆಗ ಆತನಿಗೆ.

ಉಕ್ಕಿದುದು ಮನವರಿದು ಕಂಗಳು । ಮುಕ್ಕುಳಿಸಿದವು ಮೂರ್ತಿಯನು ಕವಿ
ದುಕ್ಕುವಾನಂದಾಶ್ರು ತಲೆದೋರಿದವು ತನು ಪುಳಕ ।
ಮಿಕ್ಕು ಮೀಗೆ ಮತಿ ಮರೆದು ಹರುಷವ । ಹಕ್ಕೆಗೊಂಡುದು ನಲವಿನಲಿ ಮೈ
ಯಿಕ್ಕಿದನು ಬಸವಣ್ಣನಲ್ಲಮ ಲಿಂಗಲೀಲೆಯಲಿ ॥

ಅನಂತರ ಆತನನ್ನು ಶೂನ್ಯಸಿಂಹಾಸನಕ್ಕೆ ಕರೆದೊಯ್ದು ಅದರಮೇಲೆ ಕೂಡಿಸಿದನು. ಆ ವೇಳೆಗೆ ಆರೋಗಣೆಯ ಸಮಯವಾಯಿತು. ಎಂದಿನಂತೆ ಜಂಗಮರು ಬಸವಣ್ಣನ ಮನೆಗೆ ಆರೋಗಣೆಗೆ ಬಂದರು. ಬಸವಣ್ಣನಿಗೆ ಅದರ ಪರಿವೆ ಇಲ್ಲ. ಅವರು ಕೋಪಿಸಿಕೊಂಡು ಹೊರಟು ಹೋದರು. ಇದನ್ನು ತಿಳಿದು ಬಸವಣ್ಣ ವ್ಯಥೆಗೊಂಡ. ಇದನ್ನು ತಿಳಿದ ಅಲ್ಲಮ ತನಗೆ ಊಟಕ್ಕಿಕ್ಕಿದರೆ 'ಲಕ್ಷದಮೇಲೆ ತೊಂಬತ್ತಾರುಸಾವಿರ ಜಂಗಮವು ಸಂತುಷ್ಟಿ ಪಡುವಂತೆ ತೋರುವೆನು' ಎಂದು ಹೇಳಿ ಊಟಕ್ಕೆ ಕುಳಿತನು. ಅಷ್ಟು ಜನಕ್ಕೆ ಮಾಡಿದ್ದ ಅಡಿಗೆಯೆಲ್ಲಾ ಮುಗಿಯಿತು ; ಆತನ ಹಸಿವು ಹಿಂಗಲಿಲ್ಲ. ಕಣಜದಲ್ಲಿದ್ದ ಧಾನ್ಯವನ್ನೆಲ್ಲಾ ತೆಗೆಸಿ ಅಡಿಗೆ ಮಾಡಿ ಹಾಕಿದರೂ ಊಟ ಮುಗಿಯಲಿಲ್ಲ. ಭಕ್ತರ ಮನೆಗಳಲ್ಲಿದ್ದ ಜೋನವೂ ಮುಗಿಯಿತು.

ಅಂಬರವೆ ಬಾಯ್ದೆರೆದು ಜೀರ್ಣಿಸಿ । ಕೊಂಬಡದಕಿನ್ನಾರು ದಿಟ ಸಾ

ಕೆಂಬ ತೆರದಲಿ ತೇಗುವಂತುಣಲಿಕ್ಕ ಬಲ್ಲವರು ?।

ಬಸವಣ್ಣ ತಲ್ಲಣಿಸಿ ಹೋದ. 'ಹೊತ್ತು ಹೋಗದ ಮುನ್ನ ತನುವಿನ ತುತ್ತ ನೀಡುವೆ' ಎಂದುಕೊಳ್ಳುತ್ತಿರಲು, ಅಲ್ಲಮನು

ಹಸಿದು ಬಂದವನಲ್ಲವರ್ಥದ। ದೆಸೆಗೆ ಬಂದವನಲ್ಲ ಕಾಮದ
ಮಸೆಗೆ ಮನದಲಿ ನೊಂದು ಬಂದವನಲ್ಲ ನಾ ನಿನ್ನ
ಹಸರಿಸಿದ ದಾಸೋಹತನವನು। ಸಸಿನೆ ಮಾಡಲು ಬಂದೆನಲ್ಲದೆ
ಅಶನದಾಸೆಗಳೆನ್ನಲುಂಟೆ ಬಸವ........

ಎಂದು ಹೇಳಿ ಸಮಾಧಾನಮಾಡಿದನು. 'ಬಸುರ ಹೆಂಗಸಿನೂಟ ಹೊಟ್ಟೆಯ ಶಿಶುವ ದಣಿಸುವವೋಲು' ಬ್ರಹ್ಮಾಂಡ ಗರ್ಭಸ್ವರೂಪಿಯಾದ ಅಲ್ಲಮನು ಊಟಮಾಡುತ್ತಲೆ ಜಂಗಮರೆಲ್ಲರೂ ತೃಪ್ತರಾದರು. ಲಿಂಗ ತೃಪ್ತಿಯೇ ಜಂಗಮತೃಪ್ತಿ; ಜಂಗಮತೃಪ್ತಿಯೇ ಜಗತ್ತಿನ ತೃಪ್ತಿ—ಎಂಬ ಸತ್ಯ ಬಸವಣ್ಣನಿಗೆ ಅರಿವಾಯಿತು. ಆತನೂ ಉಳಿದ ಶರಣರೂ ಉದ್ಧಾರವಾದರು.

ಮೇಲಿನ ಕಥೆಯೆಲ್ಲವನ್ನೂ ಶಿವನಿಂದ ಕೇಳಿದ ಶಿವೆ ಅಲ್ಲಮನು 'ಘನ ಮಹಿಮಾವಲಂಬನು' ಎಂಬುದನ್ನು ಅರ್ಥಮಾಡಿಕೊಂಡಳು. ನಿತ್ಯಸತ್ಯ ಸ್ವರೂಪಿ ಅಲ್ಲಮ 'ಸಂತಸದಲಿರುತಿರ್ದನೆಲ್ಲರ ಹೃದಯಕಮಲದಲಿ.'

ಚಾಮರಸನು ಕಾವ್ಯಧರ್ಮ, ಧರ್ಮಗಳನ್ನು ಹೇಗೆ ಸಮರಸವಾಗಿ ಬೆರಸಿ, ತನ್ನ ಕೃತಿರಚನೆ ಮಾಡಿರುವನೆಂಬುದು ನಮಗೀಗ ಸ್ಪಷ್ಟವಾಗುತ್ತದೆ. ಕಥೆಯು ನೇರವಾಗಿ ಸಾಗಿ ತನ್ನ ಹೆಗ್ಗುರಿಯನ್ನು ಮುಟ್ಟುತ್ತದೆ. ಇತರ ವೀರಶೈವ ಪುರಾಣಕರ್ತರಂತೆ ಚಾಮರಸನು ಇದನ್ನು ಶರಣರ ಕಥಾಕೋಶವನ್ನಾಗಿ ಮಾಡಿಲ್ಲ. ಅನಾವಶ್ಯಕವಾದ ಶರಣರ ಕಥೆಗಳಾಗಲಿ, ವಿಭೂತಿ ರುದ್ರಾಕ್ಷಿ ಇತ್ಯಾದಿಗಳ ಮಹತ್ತಾಗಲಿ ಬಂದು ಇಲ್ಲಿನ ಕಥೆಗೆ ಕಂಟಕವನ್ನು ತಂದೊಡ್ಡಿಲ್ಲ. ಇದಕ್ಕೂ ಹೆಚ್ಚಾಗಿ ಅಷ್ಟಾದಶವರ್ಣನೆಗಳನ್ನು ತರಬೇಕೆಂಬ ಹಟ ಕವಿಯಲ್ಲಿ ಹುಟ್ಟಿಲ್ಲ. ಅಗತ್ಯವಾದ ಕಡೆ ಹಿತಮಿತವಾದ ವರ್ಣನೆ ಇದೆ. ಅಲ್ಲಲ್ಲಿ ವೇದಾಂತ ನಿರೂಪಣೆ—ಇಷ್ಟಲಿಂಗ ಪ್ರಾಣಲಿಂಗದ ಸ್ವರೂಪ ವಿವರಣೆ ಇತ್ಯಾದಿ—ಬರುವುದಾದರೂ ಸಂಭಾಷಣಾರೂಪದ ಆ ನಿರೂಪಣೆ ಕಾಂತಾಸಮ್ಮಿತದ ಬಣ್ಣವನ್ನು ತಳೆಯುತ್ತದೆ. ಇಲ್ಲಿ ಬರುವ ಪಾತ್ರಗಳು ಸಜೀವವಾಗಿವೆ. ಹೀಗೆ ಹೇಳುವಾಗ ಅಲ್ಲಮ, ಮಾಯೆ

ಮೊದಲಾದ ಹಲವು ಪಾತ್ರಗಳು ಅಲೌಕಿಕ ಪಾತ್ರಗಳೆಂಬುದನ್ನು ನಾವು ಮರೆಯುವಂತಿಲ್ಲ. ಚಾಮರಸನು ಸನ್ನಿವೇಶರಚನೆಯಲ್ಲಿಯೂ ತನ್ನ ಕೌಶಲವನ್ನು ಪ್ರದರ್ಶಿಸಿದ್ದಾನೆ. ಮಾಯಾದೇವಿಯ ಪ್ರಣಯ ಪ್ರಸಂಗ, ಆಕೆಯು ಅಲ್ಲಮನನ್ನು ಸಂಧಿಸುವ ಸನ್ನಿವೇಶ, ಬಸವಣ್ಣನು ಅಲ್ಲಮನಿಗೆ ಆರೋಗಣೆ ಮಾಡಿಸುವ ಸಂದರ್ಭ–ಇತ್ಯಾದಿಗಳು ಅಲ್ಲಮನ ವ್ಯಕ್ತಿತ್ವವನ್ನು ಮಹೋನ್ನತಿಗೆ ಏರಿಸುವುದರ ಜೊತೆಗೆ ಅತ್ಯಂತ ರಸವತ್ತಾಗಿವೆ. ಶಾಂತಮೂರ್ತಿಯಾದ ಅಲ್ಲಮನ ಜೀವನ ಚರಿತ್ರೆಯಾದ ಇದರಲ್ಲಿ ಬೇರೆ ಬೇರೆ ರಸಗಳು ಅಭಿವ್ಯಕ್ತವಾಗಲು ಅವಕಾಶವೇ ಇಲ್ಲ. ಆದರೂ ಕವಿಯು ಇದನ್ನು 'ಶುಷ್ಕೋ ವೃಕ್ಷಸ್ತಿಷ್ಠತ್ಯಗ್ರೇ' ಮಾಡದೆ ಆದಷ್ಟು ಸರಸವಾಗಿ ಮಾಡಿದ್ದಾನೆ. ಇಲ್ಲಿನ ಉಪಮಾನಗಳೂ ಮನೋಹರವಾಗಿವೆ; ಅನೇಕ ವೇಳೆ ಕುಮಾರವ್ಯಾಸನನ್ನು ಜ್ಞಾಪಕಕ್ಕೆ ತರುತ್ತವೆ. ಸರಳವಾದರೂ ಶಿಥಿಲವಲ್ಲದ ಶೈಲಿಯಲ್ಲಿ ಭಾಮಿನಿಷಟ್ಪದಿ ತುಂಬು ಹೊಳೆಯಂತೆ ಗಂಭೀರವಾಗಿ ಪ್ರವಹಿಸುವುದನ್ನು ನಾವಿಲ್ಲಿ ಕಾಣುತ್ತೇವೆ. ಇಷ್ಟೆಲ್ಲಾ ಶ್ರೇಷ್ಠವಾದ ಕಾವ್ಯಗುಣಗಳು ಇಲ್ಲಿ ಕಂಡುಬಂದರೂ, ಕವಿಯ ಗುರಿ ಕೇವಲ ಕಥಾನಿರೂಪಣೆಯಲ್ಲ; 'ತಮ್ಮ ತನುಮನ ಧನವನೆಲ್ಲವನು ಬೀಯಮಾಡಿಯೆ, ಲಿಂಗದಲಿ ನಿಜಕಾಯ ನಿಲುವಡೆ ನಿತ್ಯರಪ್ಪಡೆ ದಾಯಿಗರು ಲಾಲಿಸುವುದೀ ಪ್ರಭುಲಿಂಗ ಲೀಲೆಯನು.' 'ಅಲ್ಪ ಸುಖಕ್ಕೆ ಸೋಲದೆ, ಕಬ್ಬಿನೊಳು ರಸವ ನೆರೆ ಸವಿವ ಗಜದಂತೆ ಭಕ್ತಿಯ ತೆರನ ತಿಳಿದಾಚರಿಸಬೇಕೆಂದರಿವವರು ಲಾಲಿಸುವುದೀ ಪ್ರಭುಲಿಂಗ ಲೀಲೆಯನು.' ಎಂದು ಕವಿ ಹೇಳುತ್ತಾನೆ. ಈ ಹಿಂದೆಯೇ ಸೂಕ್ಷ್ಮವಾಗಿ ಹೇಳಿರುವಂತೆ ಇದರಲ್ಲಿ ಬರುವ ಮೂರು ಸಂಸಾರ ಚಿತ್ರಗಳು ಮೋಕ್ಷ ಸಾಧನೆಯ ಲಕ್ಷಣವನ್ನು ನಿರೂಪಿಸುವ ಸಾಧನಗಳಾಗಿವೆ. ಆದ್ದರಿಂದಲೆ ಶ್ರೀ. ಎಂ. ಆರ್. ಶ್ರೀಯವರು 'ಪ್ರಭುಲಿಂಗಲೀಲೆ' ಯನ್ನು ಕನ್ನಡದ 'Pilgrimis Progress' ಎಂದು ಕರೆದು ಗೌರವಿಸಿದ್ದಾರೆ.

**ಮಗ್ಗೆಯ ಮಾಯಿದೇವ (೧೪೩೦):**

ಕುಮಾರವ್ಯಾಸಯುಗದ ವೀರಶೈವ ಕವಿಗಳಲ್ಲಿ ಹಲವರು ಶತಕ ಸಾಹಿತ್ಯಸೃಷ್ಟಿಗೆ ಕೈಹಾಕಿ ವೀರಶೈವ ಧರ್ಮ ಕಾವ್ಯಧರ್ಮಗಳನ್ನು ಏಕಕಾಲದಲ್ಲಿಯೇ ಸಾಧಿಸಿದ್ದಾರೆ. ಅವರ ಸಾಲಿನಲ್ಲಿ ಅಗ್ರಗಣ್ಯ ಮಗ್ಗೆಯ

ಮಾಯಿದೇವ. ಈತ ಹುಟ್ಟಿದುದು ಮಲಪ್ರಹಾರೀ ನದಿಯ ತೀರದಲ್ಲಿರುವ ಐಪುರಕ್ಷೇತ್ರ. ಆ ಕ್ಷೇತ್ರದ ಸೋಮೇಶ್ವರದೇವರು ಕವಿಯ ವಂಶದವರಿಗೆ ಆರಾಧ್ಯದೈವ. ಆ ಭಕ್ತರ ಪೀಳಿಗೆಯಲ್ಲಿ ಉದಿಸಿದ ಸಂಗಮೇಶ್ವರ ಮಾಯಿ ದೇವನ ತಂದೆ. ಹುಟ್ಟಿದ ವಂಶ ಮತ್ತು ಬೆಳೆದ ವಾತಾವರಣ ಮಾಯಿದೇವ ನನ್ನು ಸಂತ ಜೀವಿಯನ್ನಾಗಿ ರೂಪಿಸಿದುವೆಂದು ತೋರುತ್ತದೆ. ಕನ್ನಡ ಸಂಸ್ಕೃತಗಳಲ್ಲಿ ಈತನು ಅಪಾರವಾದ ಪಾಂಡಿತ್ಯವನ್ನು ಗಳಿಸಿದನು. ಈತನ ಕಾವ್ಯ ಸೃಷ್ಟಿ ಎರಡು ಭಾಷೆಗಳಲ್ಲೂ ನಡೆದಿದೆ. ವೀರಶೈವ ಸಿದ್ಧಾಂತವನ್ನು ಅಧಿಕಾರವಾಣಿಯಿಂದ ಪ್ರತಿಪಾದಿಸುವ ಈತನ 'ಅನುಭವ ಸೂತ್ರ' ಅಥವಾ 'ಶಿವಾನುಭವ ಸೂತ್ರ' ಸಂಸ್ಕೃತದಲ್ಲಿದೆ. ಕನ್ನಡದಲ್ಲಿ ಈತನು 'ಪ್ರಭು ನೀತಿ,' 'ಏಕೋತ್ತರ ಶತಸ್ಥಲ ಷಟ್ಪದಿ,' 'ಷಟ್‌ಸ್ಥಲಗದ್ಯ,' 'ಶತಕ ತ್ರಯ,' 'ಮಗ್ಗೆಯ ಮಾಯಿದೇವ ವಚನ' ಎಂಬ ಗ್ರಂಥಗಳನ್ನು ಬರೆ ದಿರುವುದಾಗಿ ತಿಳಿಯಬರುತ್ತದೆ. ಆದರೆ ಈಗ 'ಶತಕತ್ರಯ' ವೊಂದೆ ಉಪ ಲಬ್ಧವಾಗಿರುವುದು.

ಮಗ್ಗೆಯ ಮಾಯಿದೇವನನ್ನು ವೀರಶೈವ ಕವಿಗಳು ಪ್ರಭು, ವಿಭು— ಎಂದು ಗೌರವಿಸುವುದನ್ನು ನೋಡಿದರೆ ಈತನು ಧಾರ್ಮಿಕ ಪ್ರಪಂಚದಲ್ಲಿ ಬಹು ಉನ್ನತವಾದ ಸ್ಥಾನವನ್ನು ಗಳಿಸಿದ್ದನೆಂದು ತೋರುತ್ತದೆ. ಸಿದ್ಧ ನಂಜೇಶನು ತನ್ನ 'ಗುರುರಾಜ ಚಾರಿತ್ರ'ದಲ್ಲಿ, ಮಗ್ಗೆಯ ಮಾಯಿದೇವನು ಲಿಂಗವಂತರಿಗೆ ನರಕವಿಲ್ಲೆಂದು ಹೇಳಿ, ನೆರಳಿಲ್ಲದ ಜಯಸ್ತಂಭವನ್ನು ವಿದ್ಯಾ ನಗರದಲ್ಲಿ ನಿಲ್ಲಿಸುವುದರ ಮೂಲಕ ತನ್ನ ಹೇಳಿಕೆಯನ್ನು ಸ್ಥಾಪಿಸಿದುದಾಗಿ ತಿಳಿಸುತ್ತಾನೆ. ಶಾಂತಲಿಂಗದೇಶಿಕನು ತನ್ನ 'ಭೈರವೇಶ್ವರ ಕಥಾಸೂತ್ರ ರತ್ನಾಕರ'ದಲ್ಲಿಯೂ ವಿರಕ್ತ ತೋಂಟದಾರ್ಯನು ತನ್ನ 'ಪಾಲ್ಕುರಿಕೆ ಸೋಮೇಶ್ವರ ಪುರಾಣ' ದಲ್ಲಿಯೂ ಈ ಪವಾಡವನ್ನು ಪ್ರಸ್ತಾಪಿಸಿದ್ದಾರೆ. ವಿರೂಪಾಕ್ಷಪಂಡಿತನು ತನ್ನ ಚೆನ್ನಬಸವಪುರಾಣದಲ್ಲಿ "ಸಕಲಾಗಮಂಗಳಿಗೆ ನೆಲೆಯೆನಿಸಿ ಪ್ರೌಢನಿಂ ಪೂಜೆಯಂ ಕೊಂಡ" ನೆಂದು ತಿಳಿಸುತ್ತಾನೆ. ಇದ ರಿಂದ ಈತನು ಪ್ರೌಢರಾಯನ ಕಾಲದಲ್ಲಿದ್ದ ವೀರಶೈವ ಶರಣರಲ್ಲಿ ಬಹು ಪ್ರಮುಖನಾಗಿದ್ದವನೆಂದು ಊಹಿಸಬಹುದು.

ಮಾಯಿದೇವನ ಷಟ್‌ಸ್ಥಲಾತ್ಮಕವಾದ ಮೂರು ಶತಕಗಳು ಕ್ರಮ

ವಾಗಿ (೧) 'ಶಿವಾಧವ ಶತಕ'— ಇಲ್ಲಿನ ೧೦೧ ವೃತ್ತಗಳಲ್ಲಿ ಒಂದೊಂದೂ 'ಶಿವಾಧವಾ 'ಎಂದು ಮುಕ್ತಾಯವಾಗುತ್ತವೆ. (೨) 'ಶಿವಾವಲ್ಲಭ ಶತಕ' —ಇಲ್ಲಿನ ೧೦೩ ವೃತ್ತಗಳೂ 'ಶಿವಾವಲ್ಲಭ' ಎಂದು ಕೊನೆಯಾಗುತ್ತವೆ. (೩) 'ಐಪುರೀಶ್ವರ ಶತಕ'— ಇದರ ೧೧೩ ವೃತ್ತಗಳೂ 'ಐಪುರೀಶ್ವರಾ' ಎಂದು ಮುಗಿಯುತ್ತವೆ. ಇವು ಅನುಕ್ರಮವಾಗಿ ಜ್ಞಾನ, ಭಕ್ತಿ, ವೈರಾಗ್ಯ ಗಳನ್ನು ಮುಖ್ಯವಾಗಿ ಪ್ರತಿಪಾದಿಸುತ್ತವೆ. ಈ ಪ್ರತಿಪಾದನೆ ನಿರರ್ಗಳ ವಾಗಿ, ಭಾವಭರಿತವಾಗಿ, ಹೃದಯಸ್ಪರ್ಶಿಯಾಗಿದೆ. ತತ್ವಸಾಕ್ಷಾತ್ಕಾರ ವಾದ ಮೇಲೆ ಮಾಯೆಗೆ ಎಡೆಯಿಲ್ಲವೆಂದು ಹೇಳುವ ಈ ಬೆಡಗನ್ನು ನೋಡಿ—

ನೋಡದ ಮುನ್ನ ದರ್ಪಣದ ಭಾವಮದುಂಟು ವಿಭ್ರಮಂ
ಗೂಡಿ ವಿರಾಜಿಸುತ್ತಭಿಮುಖಾಸ್ಪದಮಾದ ನಿಜಸ್ವರೂಪಮಂ
ನೋಡಿದ ನಂತರಂ ಮರಳಿ ದರ್ಪಣಭಾವಮದುಂಟೆ ತತ್ವಮಂ
ನೋಡದ ಮುನ್ನ ಮಾಯೆ: ಬಳಿಕೆಲ್ಲಿಯ ಮಾಯೆ, ಬಿಡಾ, ಶಿವಾಧವಾ

ಕನ್ನಡಿಯಲ್ಲಿ ನೋಡಿಕೊಳ್ಳುವುದಕ್ಕೂ ಮುಂಚೆ ಕನ್ನಡಿಯ ಭಾವ ಇರು ತ್ತದೆ. ಕನ್ನಡಿಯಲ್ಲಿ ಪ್ರತಿಬಿಂಬವನ್ನು ನೋಡಿಕೊಂಡ ಮೇಲೆ ಕನ್ನಡಿಯ ಜ್ಞಾನವಿರುತ್ತದೆಯೆ? ಅದರಂತೆಯೇ, ತತ್ವಜ್ಞಾನವನ್ನು ಕಾಣುವವರೆಗೆ ಮಾಯೆ, ಆ ಜ್ಞಾನವಾದಮೇಲೆ ಮಾಯೆ ಎಲ್ಲಿಯದು? ಕವಿಯು ಬಳ ಸಿರುವ 'ಬಿಡಾ' ಎಂಬ ಮಾತಿನ ಸ್ವಾರಸ್ಯವನ್ನು ಗಮನಿಸಬೇಕು. ಜ್ಞಾನಿ ಯಾದವನಿಗೆ ಮಾಯೆಯಲ್ಲಿ ಇರಬಹುದಾದ ನಿರ್ಭಯ, ಉದಾಸೀನ ಎಷ್ಟು ಸೊಗಸಾಗಿ ವ್ಯಕ್ತವಾಗುತ್ತದೆ! ದೃಷ್ಟಾಂತ ಅಥವಾ ಹೋಲಿಕೆಗಳನ್ನು ಕೊಟ್ಟು ಗಹನವಾದ ವೇದಾಂತ ತತ್ವಗಳು ಹೃದ್ಗೋಚರವಾಗುವಂತೆ ಮಾಡುವ ಕವಿಪ್ರತಿಭೆ ಅದ್ಭುತವಾದುದು. ಇಷ್ಟಲಿಂಗದ ಧಾರಣ ಪೂಜಾ ಸ್ಮರಣಾದಿಗಳಿಂದ ಸುಖಿಸುತ್ತಿರುವವನು ಆ ಸಂಸ್ಕಾರ ಬಲದಿಂದ ಪ್ರಾಣ ಲಿಂಗ ಜ್ಞಾನಿಯಾಗಲೂ ಶಕ್ತನಾಗುತ್ತಾನಂತೆ! ಕವಿವಾಣಿಯಲ್ಲೇ ಅದನ್ನು ಆಲಿಸೋಣ—

ಚಿರಸುಖಿ ಜಾಗ್ರದೊಳ್ ನೆರೆ ಮನೋರಮೆಯಪ್ಪ ನಿಜಪ್ರಿಯಾಂಗನಾ
ಸರಸ ರತಿಪ್ರಸಂಗ ಪರಿಣಾಮದೊಳರ್ಪನೆಗಂ ತದೀಯ ನಿ

ರ್ಭರ ಸುಖ ತೃಪ್ತಿ ಸುಪ್ತಿಯೆಡೆಗೊಂಡಿರಲಲ್ಲಿಯು ವೇಧೆಯಿಂದ ಮಾ
ಪರಿಯೆ ದಿಟಂ. ಪ್ರಬುದ್ಧತೆಯೊಳಂತುಮದೇ ಸಹಜಂ ಶಿವಾಧವಾ

ಜಾಗ್ರತನಾಗಿದ್ದಾಗ ಮಡದಿಯೊಡನೆ ಸರಸಸುಖವನ್ನು ಅನುಭವಿಸುವ ನಾವರೆ ನಿದ್ರೆಯಲ್ಲಿಯೂ ಆ ಸುಖದ ಪರಿಣಾಮವನ್ನು ಹೊಂದಿಯೇ ಇರುತ್ತಾನೆ. ಎಚ್ಚರಗೊಂಡಾಗಲೂ ಸುಪ್ತಸ್ಥಿತಿಯ ಪರಿಣಾಮವನ್ನೇ ಸಹಜವಾಗಿ ಪಡೆಯುತ್ತಾನೆ—ಹಾಗೆಯೇ ಇಷ್ಟಲಿಂಗಸುಖಿ ಪ್ರಾಣಲಿಂಗಜ್ಞಾನಿಯಾಗಲೂ ಶಕ್ತನಾಗುತ್ತಾನೆ.

ಕವಿಯು ಭಕ್ತಿಭರಿತನಾಗಿ ಆರ್ತತೆಯಿಂದ ಭಗವಂತನನ್ನು ಭವಬಂಧವಿಮೋಚನೆಗಾಗಿ ಪ್ರಾರ್ಥಿಸುತ್ತಿದ್ದಾನೆ—

ಆರಿಗೆ ಪೇಳ್ವೆನಾರಿಗೆ ಪಲುಂಬುವೆನಾರಿಗೆ ತೋರ್ಪೆನೆನ್ನ ಸಂ
ಸಾರ ದುರಾಪ್ತ ದುಃಖಭಯಮಂ ನಿನಗಲ್ಲದೆ ಭಕ್ತಲೋಕ ಮಂ
ದಾರ ವರಾಭಯಪ್ರದ ಭವಚ್ಚರಣಾಂಬುಜ ಭಕ್ತಿಯೆತ್ತ ಸಂ
ಸಾರದ ಭೀತಿಯೆತ್ತ ಪರಮಪ್ರಭುವೇ ಮಹದೈಪುರೀಶ್ವರಾ

ಹೇ ಭಕ್ತರ ಕಲ್ಪವೃಕ್ಷನೇ, ನನ್ನ ಸಂಸಾರದ ದುಸ್ಸಹ ದುಃಖವನ್ನೂ ಭಯವನ್ನೂ ನಿನಗಲ್ಲದೆ ಮತ್ತಾರಿಗೆ ಹೇಳಲಿ; ಯಾರಲ್ಲಿ ಹಂಬಲಿಸಲಿ, ಯಾರಿಗೆ ತೋರಿಸಲಿ? ಬೇಡಿದ ವರವನ್ನು ನೀಡಬಲ್ಲ ಹೇ ಅಭಯಪ್ರದ, ನಿನ್ನ ಚರಣಕಮಲದ ಭಕ್ತಿಯೆಲ್ಲಿ, ಸಂಸಾರದ ಭೀತಿಯೆಲ್ಲಿ? ಹೇ ದೇವಾಧಿದೇವ—ಎಂದು ಪ್ರಾರ್ಥಿಸುವಲ್ಲಿ ಕವಿಯ ಆರ್ತಭಾವ ಮಾತುಮಾತಿನಲ್ಲಿಯೂ ಮಿಡಿಯುತ್ತಿದೆ.

ಕವಿಯ ಮನಃಪರಿಪಾಕ ಎಷ್ಟು ಸಾತ್ವಿಕವಾಗಿದೆ!

ಅಳದಿರು ಕಂದ ನಿನ್ನಭಿಮತೈಕ ಫಲೋದಯ ಸೌಖ್ಯಸಿದ್ಧಿಯಂ
ಸಲೆ ನಿನಗಿತ್ತೆನಂಜದಿರು ಚಿಂತಿಸದಿರ್ ಮನಗುಂದದಿರ್ ವೃಥಾ
ಕಳವಳವೇತಕಾನಿರಲು ಬೇಡ ಮನೋವ್ಯಥೆಯೆಂದು ನೇಹದಿಂ
ತಲೆದಡವುತ್ತೆ ನೋಡು ಪರಮಪ್ರಭುವೇ ಮಹದೈಪುರೀಶ್ವರಾ

ಹೇ ಪ್ರಭು, ಪರಮೇಶ್ವರ, ‘ಮಗು ಅಳಬೇಡ, ನಿನಗೆ ಬೇಕಾದ ಫಲವನ್ನು ಅನುಭವಿಸುವ ಸುಖಪ್ರಾಪ್ತಿಯನ್ನು ನಿನಗೆ ಕರುಣಿಸಿದ್ದೇನೆ; ನೀನಿನ್ನು ಹೆದರಬೇಡ, ಚಿಂತಿಸಬೇಡ, ದುಗುಡಗೊಳ್ಳಬೇಡ; ನಾನಿರುವಾಗ ನಿನಗೆ

ವೃಥಾ ಕಳವಳವೇಕೆ? ಇನ್ನು ನಿನ್ನ ಮನೋರಥವನ್ನು ನಿಲ್ಲಿಸು'—ಎಂದು ಪ್ರೇಮಮಯವಾಗಿ ನುಡಿದು, ನನ್ನ ತಲೆಯನ್ನು ಸವರುತ್ತ ನನ್ನನ್ನು ಕೃಪಾದೃಷ್ಟಿಯಿಂದ ನೋಡು—ಎಂದು ಹೇಳುವ ಕವಿಯ ಮಾತು ಎಷ್ಟು ಹೃದಯಸ್ಪರ್ಶಿಯಾಗಿದೆ. ಈ ಲೋಕದ ಸಂಕಷ್ಟಗಳನ್ನು ಅಥವಾ ಅಧರ್ಮದ ಪರಿಣಾಮಗಳನ್ನು ವರ್ಣಿಸುವಲ್ಲಿ ಆತನ ವಾಣಿ ಜೀವಪೂರ್ಣವಾಗುತ್ತದೆ. ಭವರೋಗಕ್ಕೆ ಭೇಷಜವಾದ ಶಿವಸ್ತೋತ್ರ, ಶೈವಾಚಾರನಿಷ್ಠೆ, ಶಿವಶರಣರ ಸೇವೆ ಇತ್ಯಾದಿಗಳ ವರ್ಣನೆಗಳಲ್ಲಿ ಕವಿಯ ಆತ್ಮಾನುಭವವೇ ಆಕಾರತಾಳಿದಷ್ಟು ತನ್ಮಯತೆ ಕಂಡುಬರುತ್ತದೆ. ಶರಣನು 'ನಾಹಂ,' 'ಕೋಹಂ,' 'ಸೋಹಂ,' 'ದಾಸೋಹಂ'—ಎಂದು ಹೇಳಿಕೊಳ್ಳುವವನಲ್ಲ—ಎಂದು ಹೇಳಿ, 'ದಾಸೋಹಂ' ಭಾವದ ಸ್ವರೂಪವನ್ನು ವಿವರಿಸುವಲ್ಲಿ ಕವಿಯ ಆಳವಾದ ಆಲೋಚನೆ, ಪಾಂಡಿತ್ಯ, ಜ್ಞಾನಗಳು ವ್ಯಕ್ತವಾಗುತ್ತವೆ. ವೀರಶೈವ ಶತಕಕಾರರಲ್ಲಿ ಹರಿಹರನನ್ನು ಬಿಟ್ಟರೆ ಈತನೇ ಅತ್ಯಂತ ಶ್ರೇಷ್ಠನಾದವನು.

ಮಾಯಿದೇವನ ಭಾಷೆ ಸಂಸ್ಕೃತಮಯವಾಗಿರುವುದು ಮಾತ್ರವೇ ಅಲ್ಲ, ಆತನ ಭಾವಗಳೂ ಬಹು ಉನ್ನತವಾದುವು. ಆದ್ದರಿಂದಲೇ ವಿರಕ್ತ ತೋಂಟದಾರ್ಯನು ಈತನ ಶತಕತ್ರಯಕ್ಕೆ ಒಂದು ವ್ಯಾಖ್ಯಾನವನ್ನು ಬರೆದಿದ್ದಾನೆ.

ಕುಮಾರವ್ಯಾಸಯುಗದ ಇತರ ಶತಕಕಾರರಲ್ಲಿ **ಚಂದ್ರ ಕವಿ**(೧೪೩೦) **ವೀರಭದ್ರ ಕವಿ** (೧೫೩೦)–ಇವರಿಬ್ಬರೂ ಸುಪ್ರಸಿದ್ಧ ಕನ್ನಡ ಕವಿಗಳಾದುದರಿಂದ ಅವರು ಬರೆದ 'ಗುರುಮೂರ್ತಿ ಶಂಕರ ಶತಕ' ಮತ್ತು 'ಪಂಚಶತಕ'ಗಳನ್ನು ಕುರಿತು ಆಯಾ ಕವಿಕಾವ್ಯ ವಿಮರ್ಶೆಯ ಸಂದರ್ಭದಲ್ಲಿ ಹೇಳಲಾಗಿದೆ. ಸುಮಾರು ೧೫೫೦ ರಲ್ಲಿದ್ದ **ಸಿರಿನಾಮಧೇಯ ಕವಿ** 'ಮಲ್ಲೇಶ್ವರ ಶತಕ' ವನ್ನು ಬರೆದಿದ್ದಾನೆ. ೧೧೧ ವೃತ್ತಗಳನ್ನು ಒಳಗೊಂಡ ಈ ಶತಕದ ಪ್ರತಿಯೊಂದು ಪದ್ಯವೂ 'ಶ್ರೀ ಶೈಲ ಮಲ್ಲೇಶ್ವರಾ' ಎಂದೊ 'ಗಿರಿಮಲ್ಲಿಕಾರ್ಜುನಾ' ಎಂದೊ ಮುಕ್ತಾಯವಾಗುತ್ತದೆ. ತನ್ನನ್ನು ವೀರಮಾಹೇಶ್ವರನೆಂದು ವಿಶೇಷಿಸಿಕೊಂಡಿರುವ ಕವಿ ತನ್ನ ಶತಕದಲ್ಲಿ ಈಶ್ವರಸ್ತುತಿ ಮತ್ತು ವೀರಶೈವ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತಿದ್ದಾನೆ. ಅಷ್ಟಾ

ವರಣಗಳ ಮಹಿಮೆಯನ್ನು ಒಳಗೊಂಡಿರುವುದರಿಂದ ಇದಕ್ಕೆ 'ಅಷ್ಟಾವರಣ ಸ್ತವ' ಎಂಬ ಅನ್ವರ್ಥನಾಮವೂ ಉಂಟು. ಸಿರಿನಾಮಧೇಯನು ಶಿವನನ್ನು ಕುರಿತು

ಬಿಡುವೆನೆ ದೇವ ನಿಮ್ಮ ಪದಮಂ ತರಿಯಲ್ ಕೊರೆಯಲ್ ಸಮಂತು
ಕೇಳ್
ನುಡಿ ಜಡಿ ತಿಂದು ತೇಗು ಪತಿನೀಂ ಸತಿಯಾಂ, ಪೆರತುಂಟೆ ಶಂಭು ನೀಂ
ಪಿಡಿ, ಬಿಡು, ಕೊಲ್ ಕರಂ ಪೊರೆ ವಲಂ ಚಲದಿಂ ಬಲದಿಂದೆ ನಿನ್ನನಾ
ನೆಡೆವಿಡದೀಗಳೆನ್ನ ಮನದೊಳ್ ನೆರೆವೆಂ ಗಿರಿಮಲ್ಲಿಕಾರ್ಜುನಾ

ಎಂದು ಹೇಳುವುದು ಹಂಪೆಯ ಹರಿಹರದೇವನಿಂದ ಎತ್ತಿಕೊಂಡುದೊ ಎನ್ನುವಷ್ಟು ಅನುಕರಣಶೀಲವಾಗಿದೆ. **ಚೆನ್ನಮಲ್ಲಿಕಾರ್ಜುನ ಕವಿ (೧೫೬೦)**— ೧೧೩ ವೃತ್ತ ಮತ್ತು ೨ ಕಂದಗಳನ್ನು ಒಳಗೊಂಡ 'ಶಿವ ಮಹಿಮಾ ಶತಕ' ವನ್ನು ಬರೆದು ಶಿವಪಾರಮ್ಯವನ್ನು ಪ್ರತಿಪಾದಿಸಿದ್ದಾನೆ. 'ವೈಷ್ಣವ ವಾಗದ್ವೈತಿ ಕರ್ಮಿಗಳ ಹೃಚ್ಛಲ್ಯಂ' ಎಂದು ಕವಿ ತನ್ನ ಕಾವ್ಯವನ್ನು ಹೊಗಳಿಕೊಂಡಿರುವುದಕ್ಕೆ ತಕ್ಕಂತೆ ಪರಮತ ವಿಡಂಬನೆಯನ್ನು ನಡೆಸಿದ್ದಾನೆ.

ಅನಲಂ ತಮ್ಮಯ ದೇವರೆಂದು ಭಜಿಪರ್ ನಿಚ್ಚಂ ದ್ವಿಜರ್ಕಳ್ ನಿಕೇ
ತನಮಂ ತಾನದು ದಳ್ಳಿಸುತ್ತೆ ಸುಡಲಯ್ಯೋ ಕೆಟ್ಟೆವೆಂದಂತದಂ
ಕನಲುತ್ತಾಗಳೆ ಕೂಡೆ ನಂದಿಸುತೆ ದೈವದ್ರೋಹಮಂ ಮಾಳ್ಪರಾ
ಬಿನುಗರ್ಗೆತ್ತಣ ಭಕ್ತಿಭಾವನೆಯುಮಂ ಶ್ರೀ ಚೆನ್ನಮಲ್ಲೇಶ್ವರಾ

ಎಂಬ ಕವಿಯ ವಾದ ಲೌಕಿಕ ಪ್ರಸ್ತಾರದಲ್ಲಿ ನಿಂತು, ಹಾಸ್ಯದ ಚಟಾಕಿಯನ್ನು ಹಾರಿಸುತ್ತಿರುವಂತಿದೆ. ಕವಿಯ ಭಾಷಾಶೈಲಿಗಳು ಹೃದಯಂಗಮವಾಗಿವೆ ಯಾದರೂ ಆತನ ಕಲ್ಪನೆಯ ಹಕ್ಕಿ ದಿವ್ಯತೆಗೆ ಏರುವುದಿಲ್ಲ. **ಶಂಕರದೇವ** (ಸು. ೧೬೭೦)ನ 'ಶಂಕರ ಶತಕ' ಗುರು ಶಂಕರೇಶ್ವರ —ಎಂದು ಮುಕ್ತಾಯವಾಗುವ ವೃತ್ತಗಳನ್ನು ಒಳಗೊಂಡಿದೆ. ಈ ಜಾತಿಯ ಇತರ ಶತಕಗಳಂತೆ ಶಂಕರ ಶತಕವೂ ವೀರಶೈವ ವೇದಾಂತವನ್ನು ಬೋಧಿಸುತ್ತದೆ. ಶಂಕರದೇವನು ಒಳ್ಳೆಯ ಕವಿತಾಶಕ್ತಿಯುಳ್ಳವನು. ಆತನು ಶಂಕರ ಶತಕವನ್ನು ಅಲ್ಲದೆ ಭಕ್ತಿರಸಪ್ರಧಾನವಾದ 'ಶಂಕರದೇವರ ಕಂದ',

'ಷಡಕ್ಷರ ರಗಳೆ' 'ಭಕ್ತಿ ಬಿನ್ನಹದ ರಗಳೆ', 'ವೀರಶೈವ ರಗಳೆ', 'ಮೈದುನ ರಾಮಯ್ಯನರಗಳೆ'—ಎಂಬ ಪುಟ್ಟ ಗ್ರಂಥಗಳನ್ನು ಬರೆದಿದ್ದಾನೆ. ಆತನ ಶಂಕರ ಶತಕಕ್ಕೆ ಶತಕ ಸಾಹಿತ್ಯದಲ್ಲಿ ಒಂದು ಪ್ರಮುಖವಾದ ಸ್ಥಾನವುಂಟು. ಚರಾಚರ ಜಗತ್ತನ್ನೆಲ್ಲಾ ವ್ಯಾಪಿಸಿರುವ ಪರಶಿವನನ್ನು ಪೂಜಿಸಿದ ಮೇಲೆ ಬೇರೆ ದೇವತೆಗಳನ್ನು ಏಕೆ ಪೂಜಿಸಬೇಕು? ಎಂದು ಆತನ ಪ್ರಶ್ನೆ. 'ಮರದ ಮೊದಲ್ಗೆ ನೀರೆರೆವರಲ್ಲದೆ ಶಾಖೆಗೆ ಬೇರೆ ಕಟ್ಟೆಯುಂ ವಿರಚಿಸಿ ಮತ್ತೆ ನೀರೆರೆವರೆ?" ಎಂಬ ಪ್ರಶ್ನೆಯೊಡನೆ ತನ್ನ ನಿಲವನ್ನು ಸಮರ್ಥಿಸಿಕೊಳ್ಳುತ್ತಾನೆ. ಅರಿಷಡ್ವರ್ಗಗಳಿಂದ ಆಗುವ ಆತ್ಮಘಾತವನ್ನು

ಕಾಮದ ಗಾಳಿ ಬೀಸಿ, ನೆರೆ ಕೋಪದ ಮೋಡ ಮುಸುಂಕೆ, ಲೋಭ ಲೋ
ಭಾಮಿಷ ಮಿಂಚು ಸಂಚರಿಸಿ. ಮೋಹದ ಮೆರ್ಮಳೆ ಪೊಯ್ಯೆ, ಮೀರಿ ನಾ
ನಾ ಮದಧಾರೆ ಕಲ್ಸರಿದು ಮತ್ಸರ ಮೇಘರವಂ ತೊಡರ್ದ
ಯೆನ್ನೀ ಮಿಗೆ ಜೀವಹಂಸಿಗೆರವಿಲ್ಲ ಕಣಾ ಗುರು ಶಂಕರೇಶ್ವರಾ.

ಎಂದು ಕಾವ್ಯಮಯವಾಗಿ ಹೇಳುತ್ತಾನೆ. **ಶಾಂತ ವೃಷಭೇಶ** (೧೫೦೦)ನ 'ಅನುಭವಶತಕ' ವೀರಶೈವ ಮತ ನಿರೂಪಣೆಯ ೧೧೫ ಕಂದಪದ್ಯಗಳನ್ನು ಒಳಗೊಂಡಿದೆ. ಧರ್ಮದ ದೃಷ್ಟಿಯಿಂದಾಗಲಿ, ಸಾಹಿತ್ಯದ ದೃಷ್ಟಿಯಿಂದಾಗಲಿ ಈತನಲ್ಲಿ ವೈಶಿಷ್ಟ್ಯವೇನೂ ಕಂಡುಬರುವುದಿಲ್ಲ.

ಈ ಎಲ್ಲ ಶತಕಕಾರರೆಂಬ ನಕ್ಷತ್ರಗಳ ಮಧ್ಯದ ಪೂರ್ಣಚಂದ್ರ, **ಮಗ್ಗೆಯ ಮಾಯಿದೇವ.**

**ಗುರುಬಸವ (೧೪೩೦) :**

ಸಪ್ತಕಾವ್ಯಗಳೆಂದು ಪ್ರಸಿದ್ಧವಾಗಿರುವ 'ಶಿವಯೋಗಾಂಗ ಭೂಷಣ,' 'ಸದ್ಗುರು ರಹಸ್ಯ,' 'ಕಲ್ಯಾಣೇಶ್ವರ,' 'ಸ್ವರೂಪಾಮೃತ,' 'ವೃಷಭಗೀತೆ,' 'ಅವಧೂತಗೀತೆ,' ಮತ್ತು 'ಮನೋವಿಜಯ ಕಾವ್ಯ'–ಎಂಬ ಏಳು ಗ್ರಂಥಗಳನ್ನು ಬರೆದಿರುವ ಗುರುಬಸವ ಕವಿ ವಿಜಯನಗರದ ಪ್ರೌಢದೇವರಾಯನ ಕಾಲದವನೆಂದು ಚೆನ್ನಬಸವ ಪುರಾಣದಿಂದ ತಿಳಿದು ಬರುತ್ತದೆ. 'ಮನೋವಿಜಯ ಕಾವ್ಯ'ದ ಕೊನೆಯ ಗದ್ಯದಲ್ಲಿ ಈತನು ತನ್ನನ್ನು 'ಶಿವಯೋಗಿ

ಜನಸೇವಿತ ಚರಣಾರವಿಂದ,' 'ಷಟ್‌ಸ್ಥಲಜ್ಞಾನ ಪ್ರಭಾ ಪುಂಜ ರಂಜಿತಾಂತರಂಗ,' 'ವೀರಶೈವ ಮತಸ್ಥಾಪನಾಚಾರ್ಯ' ಎಂದು ಕರೆದುಕೊಂಡಿರುವುದರಿಂದ ಈತನು ಬಹಳ ಪ್ರಸಿದ್ಧನಾದ ವೀರಶೈವ ಗುರುವಾಗಿದ್ದಿರಬಹುದೆಂದು ಕವಿಚರಿತೆಕಾರರು ಊಹಿಸುತ್ತಾರೆ. ಪರಿವರ್ಧಿನೀ ಷಟ್ಪದಿಯಲ್ಲಿರುವ ಈತನ 'ಶಿವಯೋಗಾಂಗ ಭೂಷಣ' ವು

ಶ್ರುತಿವನಿತೆಯ ಮುಖಗನ್ನಡಿ ಶಾಸ್ತ್ರ। ಪ್ರತತಿಯ ನಿಲುಕಡೆ, ತರ್ಕಂಗಳ ಸ।
ನ್ಮತ ನಿಖಿಲಾಗಮ ತತ್ವ ರಹಸ್ಯಂಗಳ ಘನ ಚೇತನವು

ಎಂದು ಕವಿಯ ಹೇಳಿಕೆ. ೨೭೮ ಪದ್ಯಗಳನ್ನು ಒಳಗೊಂಡ ಈ ಗ್ರಂಥದ ವಸ್ತು ಯೋಗಾಭ್ಯಾಸಕ್ರಮ ಮತ್ತು ಯೋಗಾಸನ ಇತ್ಯಾದಿಗಳು. ೨೩೭ ಭಾಮಿನೀ ಷಟ್ಪದಿಗಳನ್ನು ಒಳಗೊಂಡ ಸದ್ಗುರು ರಹಸ್ಯ' ವು

ವೇದದಂತುಟದಲ್ಲ ಶಾಸ್ತ್ರದ। ಹೋದ ಹೊಲಬಲ್ಲೆಲೆ ಪುರಾಣದ
ಗಾದೆಗಳ ಜಂಜಡದ ಜಾಡ್ಯದ ಜಿನುಗು ತಾನಲ್ಲ
ಆದರಿಸಿ ಕೇಳುವಡೆ ಪರಮ ಸ। ಮಾಧಿ ಶಾಂಭವ ಸತ್ಯ ಸಮ್ಯ
ಗ್ಬೋಧ ಲೀಲಾಲೋಲ ಶೀಲಾನ್ವಯ ರಹಸ್ಯವಿದು

ಎಂದು ಕವಿ ಕೀರ್ತಿಸಿದ್ದಾನೆ. ಗುರುಬಸವ ಕವಿಯ 'ಕಲ್ಯಾಣೇಶ್ವರ' ವು ಪರಿವರ್ಧಿನೀ ಷಟ್ಪದಿಯ ೧೦೨ ಪದ್ಯಗಳನ್ನು ಒಳಗೊಂಡಿದೆ. ಕಲ್ಯಾಣೇಶ್ವರನಾದ ಬಸವಣ್ಣನನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಈ ಗ್ರಂಥಕ್ಕೆ ಈ ನಾಮಕರಣವಾಗಿರಬೇಕು. ಬಸವಣ್ಣನ ಸಹಚರಿಯಾದ ನಂದಿಸಿಯು ತನ್ನ ಸೇವಕನಾದ ವಿಚಿತ್ರಕನೆಂಬ ಗಣೇಶ್ವರನಿಗೆ ಮಾಡಿದ ಜ್ಞಾನಬೋಧೆ ಇದರ ತಿರುಳು. ಗುರುಬಸವ ದೇಶಿಕನು ಅದನ್ನು ತನ್ನ ಶಿಷ್ಯನಿಗೆ ಬೋಧಿಸಿದ್ದಾನೆ. 'ಸ್ವರೂಪಾಮೃತ' ವು ಅದರ ಹೆಸರೇ ಸೂಚಿಸುವಂತೆ ಆತ್ಮನ ಸ್ವಸ್ವರೂಪಜ್ಞಾನವನ್ನು ಬೋಧಿಸುವ ೭೭ ಭಾಮಿನೀ ಷಟ್ಪದಿಗಳ ಗ್ರಂಥ. 'ವೃಷಭಗೀತ' ವು ಭೋಗ ಷಟ್ಪದಿಯ ೧೦೧ ಪದ್ಯಗಳನ್ನು ಒಳಗೊಂಡಿವೆ; ಬಸವಣ್ಣನ ಸ್ತುತಿರೂಪವಾದ ಈ ಗ್ರಂಥವು ವೀರಶೈವ ವೇದಾಂತವನ್ನೂ ಪ್ರತಿಪಾದಿಸುತ್ತದೆ. 'ಮನೋವಿಜಯ ಕಾವ್ಯ' ಕುಸುಮ ಷಟ್ಪದಿಯಲ್ಲಿದೆ, ೩೫೫ ಪದ್ಯಗಳನ್ನು ಒಳಗೊಂಡಿದೆ; ಸುವಿವೇಕನೆಂಬ ಜ್ಞಾನಿ ಸಂಸಾರಕ್ಕೆ

ಬೇಸತ್ತು ಗುರುವಿನ ಅನುಗ್ರಹದಿಂದ ತನ್ನ ನಿಜ ತಾನಾದ ಸಂಗತಿ ಈ ಗ್ರಂಥದ ವಸ್ತು. ಕವಿಯ 'ಅವಧೂತಗೀತೆ' ಯು ವೈರಾಗ್ಯಬೋಧಕವಾದ ಸುಮಾರು ಒಂದು ನೂರು ಹಾಡುಗಳನ್ನು ಒಳಗೊಂಡಿದೆ. 'ಹಸುಗರಿಯದ ಸೊಣಗನು ಮತಿಗೆಟ್ಟು। ಮುಸುರೆಯ ಮೊಡಕೆಯೊಳಗೆ ಮೊಗವಿಟ್ಟು। ದೆಸೆಗಾಣದೆ ಬಾಧೆಗೆ ತನುಗೊಟ್ಟು। ಪೆಸಗೊಳಲಿದು ಸಂಸಾರದ ಗುಟ್ಟು' ಎಂದು ಹೇಳುವಲ್ಲಿ ಕವಿಯು ಸಂಸಾರಿಯ ಸ್ವರೂಪವನ್ನು ಮಾರ್ಮಿಕವಾಗಿ ಚಿತ್ರಿಸುತ್ತಾನೆ.

ಗುರುಬಸವ ಕವಿಯ ಗ್ರಂಥಗಳೆಲ್ಲವೂ ಗುರುಶಿಷ್ಯ ಸಂವಾದರೂಪ ದಿಂದ ವೀರಶೈವ ವೇದಾಂತದ ಪ್ರತಿಪಾದನೆಗೆ ಹೊರಟವುಗಳು. ಆತನ ಪದ್ಯ ರಚನೆ ಸರಳವಾಗಿದೆ, ಲಲಿತವಾಗಿದೆ. ಮಹೋನ್ನತವಾದ ಕಾವ್ಯಗುಣ ಗಳನ್ನು ಈ ವೇದಾಂತ ಗ್ರಂಥಗಳಲ್ಲಿ ಕಾಣಬಯಸುವುದು ನ್ಯಾಯವಲ್ಲ. ಬೇರೆ ಬೇರೆ ಷಟ್ಪದಿಗಳನ್ನು ಬಳಸಿ ಕಾವ್ಯರಚನೆ ಮಾಡುವುದರ ಮೂಲಕ ಆತನು, ಆ ಛಂದಸ್ಸು ಕಾವ್ಯ ರಚನೆಗೆ ಪಳಗುವಂತೆ ಮಾಡಲು ಸಹಾಯಕ ನಾಗಿದ್ದಾನೆ.

**ಚಂದ್ರಕವಿ (೧೪೩೦):**

'ವಿರೂಪಾಕ್ಷಾಸ್ಥಾನ,' 'ಗುರುಮೂರ್ತಿ ಶಂಕರ ಶತಕ'-ಇವುಗಳ ಕರ್ತೃವಾದ ಚಂದ್ರಕವಿ ಅಷ್ಟಭಾಷಾ ಪ್ರವೀಣನಾಗಿದ್ದನಂತೆ! ಗಜವೇಂಟೆ ಕಾರ.ಪ್ರೌಢದೇವರಾಯನ ಮಹಾಪ್ರಧಾನನಾದ ಗುರುರಾಯನ ಅಪ್ಪಣೆ ಯಂತೆ ತಾನು ಕಾವ್ಯರಚನೆಯನ್ನು ಮಾಡಿದುದಾಗಿ ಕವಿಯ ಹೇಳಿಕೆ. ತನ್ನ ಕನ್ನಡ ಗಬ್ಬವು 'ಅಲರ್ಗಣೆಯಿಂದಿರ್ಮಡಿ, ತಂಬೆಲರಿಂ ಮೂವಡಿ, ವಸಂ ತನಿಂ ನಾಲ್ವಡಿ, ಕಾದಲರಿಂದಯ್ವಡಿ' ಮೋಹಕವಾಗಿದೆಯಂತೆ! ಕವಿಯ ಹೇಳಿಕೆ ಅತಿಶಯೋಕ್ತಿಯೇ ಆದರೂ ಅಸತ್ಯವೇನೂ ಅಲ್ಲ. ಹಂಪೆಯ ವಿರೂಪಾಕ್ಷನ ಆಸ್ಥಾನ ವರ್ಣನೆಯನ್ನು ಕಾವ್ಯ ವಸ್ತುವಾಗಿ ಒಳಕೊಂಡ 'ವಿರೂಪಾಕ್ಷಸ್ಥಾನ' ವು ಚಂಪೂಧಾಟಿಯಲ್ಲಿದ್ದು, ಪ್ರೌಢವಾಗಿದ್ದರೂ ಮನೋಹರವಾಗಿದೆ. ಕಾವ್ಯದಲ್ಲಿ ಬಂದಿರುವ ಈ ಸಂಗೀತದ ವರ್ಣನೆ ಯನ್ನು ನೋಡಿ—

ತಿಂಗಳ ಬಿಂಬಮಂ ಹಿಡಿದು ಹಿಂಡೆ ಪಳಚ್ಚನೆ ಸೋರ್ವ ಸೋನೆಯುಂ
ತಿಂಗಡಲಿಂ ಪೊದಳ್ದಮರ್ದನೆತ್ತಿದೊಡೊಯ್ಯನೆ ಸೋರ್ವ ಸೋನೆಯುಂ
ತಂಗಜನಿಕ್ಷು ಕಾರ್ಮುಕವನೇರಿಸೆ ಜುಮ್ಮನೆ ಸೋರ್ವ ಸೋನೆಯುಂ
ತೇಂ ಗಡ ಸೀಯನುಣ್ಮಿದುದೊ ಗೇಯದ ಮೆಲ್ಲುಲಿ ಜಾಣಗಾಣನ

ಚಂದ್ರ ಬಿಂಬವನ್ನು ಹಿಡಿದು ಹಿಂಡಿದರೆ ಛಿಲ್ ಎಂದು ಸೋರುವ ಧಾರೆಯಂತೆ, ಕ್ಷೀರಸಮುದ್ರದಿಂದ ಉದಿಸಿದ ಅಮೃತವನ್ನು (ಬೊಗಸೆಯಲ್ಲಿ) ಎತ್ತಿಕೊಂಡರೆ ಸೋರುವ ಧಾರೆಯಂತೆ, ಮನ್ಮಥನು ತನ್ನ ಕಬ್ಬಿನ ಬಿಲ್ಲನ್ನು ಹೆದೆಯೇರಿಸಿದಾಗ ರೋಮಾಂಚಕರವಾದ ರೀತಿಯಲ್ಲಿ ಸೋರುವ ಇಕ್ಷು ಧಾರೆಯಂತೆ ಜಾಣನಾದ ಗಾಯಕನ ಗಾನದ ಇನಿದನಿ ಏನು ಮಧುರವಾಗಿತ್ತೋ! ಕವಿಯ ವರ್ಣನೆ ಹೃದಯಂಗಮವಾಗಿದೆ.

ಚಂದ್ರಕವಿಯ 'ಗುರಮೂರ್ತಿ ಶಂಕರ ಶತಕ'ವು 'ಭಕ್ತಿಗೆ ವಿರಕ್ತಿಗೆ ಮುಕ್ತಿಗೆ ಬೀಜಮಾಗೆ' ಹೇಳಿದ ವೃತ್ತಗಳನ್ನು ಒಳಗೊಂಡಿದೆ. ಪ್ರತಿಯೊಂದು ವೃತ್ತವೂ 'ಗುರುಮೂರ್ತಿಶಂಕರಾ' ಎಂದು ಕೊನೆಯಾಗುತ್ತದೆ. ಭಗವಂತನ ಪೂಜೆಗೆ ಮುಪ್ಪು ಬರುವಂತೆ ಕಾಯುವುದು ಬೇಡ ಎನ್ನುತ್ತಾನೆ, ಕವಿ.

ಒಡಲ ಪೊಡರ್ಪು ತುಟ್ಟಿಸದ ಮುನ್ನ, ನಿಜೇಂದ್ರಿಯವರ್ಗದೇಳ್ಗೆಯೊ
ಗ್ಗುಡಿಸದ ಮುನ್ನ. ಮುಪ್ಪು ಮುರಿದೊತ್ತದ ಮುನ್ನ. ಲಲಾಟದಕ್ಕರಂ
ತೊಡೆಯದ ಮುನ್ನ, ನಿಮ್ಮ ಪದಮಂ ನೆರೆ ಪೂಜಿಸವೇಳ್ಕು ಮೃದೆ ನೀ
ರಡಸೆ ಬಳಿಕ್ಕೆ ಬಾವಿಯ ನಗಳ್ದಪರೇ ಗುರುಮೂರ್ತಿಶಂಕರಾ

ದೇಹಶಕ್ತಿ ಕುಗ್ಗುವ ಮುನ್ನ, ಇಂದ್ರಿಯ ವರ್ಗಗಳು ಶಿಥಿಲವಾಗುವುದಕ್ಕೆ ಮೊದಲೇ. ಮುಪ್ಪು ಆವರಿಸಿ ಶರೀರ ದುರ್ಬಲವಾಗುವುದಕ್ಕೆ ಮುಂಚೆಯೇ. ಹಣೆಯ ಬರೆಹ ತೊಡೆದು ಹೋಗುವುದಕ್ಕೂ ಪೂರ್ವದಲ್ಲಿಯೇ ನಿನ್ನ ಪಾದಗಳನ್ನು ಪೂಜಿಸಬೇಕು. [ಸಾವು ಹತ್ತಿರ ಬಂದಾಗ ಅಲ್ಲ.] ನೀರಡಿಕೆಯಾದ ಮೇಲೆ ಭಾವಿಯನ್ನು ತೋಡಲು ಹೊರಡುತ್ತಾರೆಯೆ?—ಕವಿಯ ನುಡಿ ಹೃದಯಸ್ಪರ್ಶಿಯಾಗಿದೆ.

ಚಂದ್ರಕವಿಯ ಪದ್ಯಗಳನ್ನು ಅಭಿನವ ವಾದಿ ವಿದ್ಯಾನಂದನು ತನ್ನ 'ಕಾವ್ಯಸಾರ'ದಲ್ಲಿ ಬಳಸಿಕೊಂಡು ಅತನನ್ನು ಸತ್ಕವಿಯೆಂದು ಪುರಸ್ಕರಿಸಿದ್ದಾನೆ.

**ಬೊಮ್ಮರಸ** (ಕ್ರಿ.ಶ. ಸು. ೧೪೫೦) :

ಡೆಂಕಣಿಕೋಟೆಯ ದೊರೆ ಕಾಮಭೂಪಾಲನ ಪುತ್ರ 'ಕವಿಕಮಲ ಭಾಸ್ಕರ' ತಿಪ್ಪರಸನು ರಾಜ್ಯಭಾರ ಮಾಡುತ್ತಿರುವಾಗ ಚಿಕ್ಕವೀರಣಾರ್ಯರೇ ಮೊದಲಾದ ಶರಣರು ತಮಿಳಿನಲ್ಲಿದ್ದ ಸೌಂದರ ಪುರಾಣವನ್ನು ಕನ್ನಡದಲ್ಲಿ ಬರೆಸಬೇಕೆಂದು ಬೇಡಿಕೊಳ್ಳಲು, ದೊರೆಯು ತನ್ನ ಆಸ್ಥಾನಕವಿ ಬೊಮ್ಮರಸನಿಂದ ಅದನ್ನು ಬರೆಸಿದನಂತೆ! ಸುಂದರನಂಬಿಯು ಅರವತ್ತು ಮೂವರು ಪುರಾತನರಲ್ಲಿ ಒಬ್ಬ. ಸಖ್ಯಭಾವದ ಭಕ್ತಿಯಿಂದ ಶಿವನ ಪರಮಮಿತ್ರನಾಗಿ ಶಿವಾನುಗ್ರಹದಿಂದ ಶಿವಪದವಿಯನ್ನು ಪಡೆದ ಪರಮ ಶಿವಭಕ್ತ ಈತ. ಈತನು ದ್ರಾವಿಡದೇಶದಲ್ಲಿ ಜನಿಸಿದವನು; ತಮಿಳು 'ಪೆರಿಯಪುರಾಣದಲ್ಲಿದ್ದ ಈತನ ಕಥೆಯನ್ನು ಕನ್ನಡಕ್ಕೆ ತಂದುಕೊಟ್ಟವನು ಮಹಾಕವಿ ಹರಿಹರ. ಅದನ್ನು ಷಟ್ಪದಿಯಲ್ಲಿ ವಿಸ್ತರಿಸಿ ಬರೆದ ಕೀರ್ತಿ ಬೊಮ್ಮರಸನದು. ಸಾಮಾನ್ಯವಾಗಿ ಎಲ್ಲಿ ವೀರಶೈವ ಪುರಾಣಗಳಲ್ಲಿಯೂ ಸುಂದರ ನಂಬಿಯ ಕಥೆ ಬಂದೇ ಬರುತ್ತದೆ. ಗಿರಿಜೆಯ ವಿವಾಹಕಾಲದಲ್ಲಿ ಪರಮೇಶ್ವರನು ಸರ್ವಾಲಂಕಾರಭೂಷಿತನಾಗಿ ಕನ್ನಡಿಯಲ್ಲಿ ನೋಡಿಕೊಂಡನಂತೆ: ಆಗ ಕಾಣಿಸಿದ ಸುಂದರ ಪ್ರತಿಬಿಂಬವೇ ಈತನಾದುದರಿಂದ ಈತನಿಗೆ 'ಸುಂದರ'ನೆಂದೂ, ಶಿವನು ಈತನಿಗೆ ನೀಡಿದ ಭರವಸೆಗಳನ್ನೆಲ್ಲಾ ಈತನು ನಂಬಿದುದರಿಂದ ಈತನಿಗೆ 'ನಂಬಿ'ಯೆಂದೂ ಹೆಸರಾಯಿತಂತೆ! ಇವೆರಡೂ ಸೇರಿ ಈತ 'ಸುಂದರನಂಬಿ'ಯಾಗಿದ್ದಾನೆ

'ಸೌಂದರ ಪುರಾಣವು' ವಾರ್ಧಕ ಷಟ್ಪದಿಯ ಸುಮಾರು ೧೨೦೦ ಪದ್ಯಗಳನ್ನು ಒಳಗೊಂಡಿದೆ. ತನ್ನ ಕಾವ್ಯವು

ಕಣ್ಗೆ ಚೆಲ್ವಾಗಿ ಸಸು ಬಿರಿದ ಜಾಜಿಯ ನನೆಯ
ತಣ್ಗಂಪನುಂಡು ತಣ್ಣನೆ ತಣಿದು ಕಡು ಸೊಕ್ಕಿ
ನುಣ್ಗೊರಲಿನಿಂಚರಂ ಪೊರಪೊಣ್ಮೆ ಸುಳಿವ ಮರಿದುಂಬಿಯ ವಿಲಾಸದಂತೆ!
ಬೆಣ್ಗೊನರ ಪೇರಿದಿಂಮಾವುರದ ಪೊದರ ಮೇ
ಗಣ್ಗೆ ನೆಗೆದೆಳೆದಳಿರ ಕರ್ಮುಕಿ ಮೆಲ್ಲುಲಿದೋರ್ಪ
ಪೆಣ್ಗೋಗಿಲೆಯ ಲೀಲೆಯಂತೆ ರಸಿಕರ್ಗೆ ನಲವೀವುದೀ ದಿವ್ಯಕಾವ್ಯಂ ||

ಎಂದು ಹೇಳಿಕೊಂಡಿದ್ದಾನೆ. ಈ ಹೇಳಿಕೆ ಕವಿಸಹಜವಾದ ಅತಿಶಯೋಕ್ತಿ

ಯಿಂದ ಕೂಡಿರಬಹುದಾದರೂ ಅಸತ್ಯವೇನೂ ಅಲ್ಲ. ಬೊಮ್ಮರಸನು ಒಳ್ಳೆಯ ಕವಿ. ಆತನ ಪದಬಂಧ ಲಲಿತವಾಗಿದೆ; ಶೈಲಿ ಸರಳವಾಗಿ ನಿರರ್ಗಳವಾಗಿದೆ. ತನ್ನ ಕಾವ್ಯದ ಕಥೆಯನ್ನು ಕವಿ ಈ ಪದ್ಯದಲ್ಲಿ ಸೂಚಿಸಿದ್ದಾನೆ—

ಬಲವಂದು ಮತ್ತಗಜ ವಂದಿಸಿದುದಾವಂಗೆ
ನೆಲೆವೊಲೆಯೊಳಿರ್ದ ಶಂಕರನುಹಿರ್ದನಾವನೊಳು
ಬಲುಹಿಂದೆ ಮೊಸಳೆ ನುಂಗಿದ ಶಿಶುವದಾವವನ ದೆಸೆಯಿಂದೆ ಮಗುಳ್ದುದಿಳೆಗೆ
ಸುಲಭನಾವವನಾನತರ್ಗಾವನಿಂ ದಿಷ್ಟ
ಫಲ ಚೇರಮಂಗಾದುದಾವವನ ಭಜಿಸಿ ನಿ
ರ್ಮಳ ಕೈವಸಭವಪುರಿಯಂ ಸಾರ್ದನಾ ಸೌಂದರೇಂದ್ರನಂ ಪೊಗಳ್ವೆನೊಲಿದು

ಕವಿಯು ಸಂಪ್ರದಾಯಕ್ಕೆ ಸಿಕ್ಕಿ ಅಷ್ಟಾದಶವರ್ಣನೆಗಳನ್ನು ತನ್ನ ಕಾವ್ಯದಲ್ಲಿ ತರಹೊರಟಿರುವನಾದರೂ ಅವುಗಳಲ್ಲಿ ಮಿತಿಯಿದೆ; ಆ ವರ್ಣನೆಗಳಲ್ಲಿ ಕವಿ-ಸಮಯದ ನೆರವನ್ನು ಪಡೆದ್ದರೂ, ಅವು ಚರ್ವಿತಚರ್ವಣಗಳೇನೂ ಅಲ್ಲ. ಕಥಾನಾಯಕನ ಮಡದಿಯಾದ ಪರವೆಯ ಸೌಂದರ್ಯವರ್ಣನೆಯನ್ನು ನೋಡಿ—

ಎಳೆವಿದಿರ ಕೋಮಲತ್ವವನಾಂತು ನಳನಳಿಪ
ನಳಿತೋಳು ರಂಜಿಸಿತು ಮುಕ್ಕೊಲೆಗಳಿಡಿಕಿರಿದು
ಬಳೆದು ನೆಳೆನಡುವಿಂಗೆ ಬಿಣ್ಪಾಯ್ತು; ತನು ಕನಕ ಚಂಪಕದ ಪುಷ್ಪದಂತೆ
ಪೊಳೆದು ನರುಗಂಪ ಬೀರಿದುದಿಂದ್ರನೀಲಮಣಿ
ಯೊಳಗಣ ತಿರುಳ್ಗೆ ತೊಣೆಯಾದುವಾ ಕುರುಳ್ಗಳು
ಜ್ವಲಿಸಿದುವು ಕದಪು, ಕಣ್ಗೊನೆ ಧವಳಕಾಂತಿಯಂ ಪಡೆದುದಂದಾ ಪರವೆಗೆ

ಆತನ ಪ್ರಕೃತಿ ವರ್ಣನೆಯೂ ಸುಂದರವಾಗಿದೆ. ಭತ್ತದ ಗದ್ದೆಯನ್ನು ವರ್ಣಿಸುತ್ತಾ

ಮಿಸುಪ ಬೆಳುದಿಂಗಳಿಂದೊಸರುತಿಹ ಶಶಿಕಾಂತ
ವಿಸರದ್ರವಾಂಬುವೇ ಕಾಲುವೆಗಳಾಗಿ ದೆಸೆ
ದೆಸೆಗೆ ಪರಿಯಲು ತೀಡುತಿರ್ಪ ಮಂದಾನಿಲನ ಸಂಚಾರದಿಂಡಲುಗುವ
ಕುಸುಮದ ಪರಾಗವೇ ಗೊಬ್ಬರಮದಾಗೆ ತವೆ
ಪಸುರೇರಿ ಪಾಲ್ವಿಡಿದುವೆನಲು ಕಳಮ ಕ್ಷೇತ್ರ
ವೆಸೆವುವಾ ದೇಶದೊಳು ಭೂಮಾತೆ ಧರಿಯಿಸಿದ ಪಸುರ್ವರಲ ತೊಡಿಗೆಯಂತೆ.

ಪ್ರಾಸಾನುಪ್ರಾಸಗಳ ಅಥವಾ ವಿರೋಧಾಭಾಸಾಲಂಕಾರದ ಗರುಡಿಯ ಸಾಮೂ ಅಲ್ಲಲ್ಲಿಯೇ ಕಂಡು ಬರುತ್ತದೆ. ಆದರೆ ಅಲ್ಲಿಯೂ ನಾವು ಒಂದು ಮಿತಿಯನ್ನು ಕಾಣುತ್ತೇವೆ. ಬೊಮ್ಮರಸನು ಮಹಾಕವಿಯೇನೂ ಅಲ್ಲ. ನಿಜ. ಆತನು ಮಧ್ಯಮ ವರ್ಗಕ್ಕೆ ಸೇರಬಲ್ಲ ಒಳ್ಳೆಯ ಕವಿ.

**ನೀಲಕಂಠಾಚಾರ್ಯ (೧೪೮೮) :**

ಪರಂಪರೆಯಾಗಿ ಶಿವಭಕ್ತಿ ಹರಿದುಬಂದ ಸುಪ್ರಸಿದ್ಧ ಶರಣರ ಮನೆತನಕ್ಕೆ ಸೇರಿದ ನೀಲಕಂಠಾಚಾರ್ಯನು ವೀರಶೈವ ಪಂಡಿತತ್ರಯರಲ್ಲಿ ಒಬ್ಬನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಕಥೆಯನ್ನು 'ಆರಾಧ್ಯಚಾರಿತ್ರ' ಎಂಬ ಹೆಸರಿನಿಂದ ವಾರ್ಧಕಷಟ್ಪದಿಯಲ್ಲಿ ಬರೆದಿದ್ದಾನೆ. ಕರ್ಣಾಟಕ ಸಂಸ್ಕೃತಗಳಲ್ಲಿ ಪ್ರವೀಣನಾಗಿ, ಭಕ್ತರಿಗೆ ಶಿವಾಗಮಗಳನ್ನು ಬೋಧಿಸುತ್ತಿದ್ದ ಗಂಗಾಧರಾಚಾರ್ಯನು ಕವಿಯ ಗುರು. ಉಮ್ಮತ್ತೂರಿನ ದೊರೆಯಾದ ಗಜವೇಂಟೆಕಾರ ವೀರನಂಜೇಂದ್ರನಿಂದ ಪೂಜಿತನಾದ ನೀಲಕಂಠಾಚಾರ್ಯಕವಿ 'ವಿತತ ಕರ್ಣಾಟ ಲಕ್ಷಣ ಕಮಲಭವ' ಎಂದು ತನ್ನನ್ನು ಹೊಗಳಿಕೊಂಡಿದ್ದಾನೆ.

'ಆರಾಧ್ಯ ಚಾರಿತ್ರ'ವು ಮೂರು ಸಹಸ್ರಕ್ಕೂ ಹೆಚ್ಚು ಪದ್ಯಗಳನ್ನು ಒಳಗೊಂಡ ಬೃಹದ್ಗ್ರಂಥ. ಶ್ರೀ ಗಿರಿಯ ಶಿವಭಕ್ತರು ಪಾಲ್ಕುರಿಕೆಯ ಸೋಮನಾಥನಿಂದ ಪಂಡಿತಾರಾಧ್ಯಚರಿತವನ್ನು ಬರೆಸಿದಂತೆಯೂ, ಆಂಧ್ರದಲ್ಲಿ ಆತ ಬರೆದುದನ್ನು ತಾನು ಕನ್ನಡದಲ್ಲಿ ರಚಿಸಿರುವುದಾಗಿಯೂ ಕವಿ ಹೇಳಿಕೊಂಡಿದ್ದಾನೆ. ಪಂಡಿತಾರಾಧ್ಯನಿಗೆ ಬಸವಣ್ಣನಲ್ಲಿದ್ದ ವಿಶ್ವಾಸ, ಆದರ ಗೌರವಗಳನ್ನು ಕವಿ ಭಕ್ತಿಯಿಂದ ಬಿತ್ತರಿಸುತ್ತಾನೆ. ಆಂಧ್ರನಾದ ಪಂಡಿತಾ

ರಾಧ್ಯನಿಗೆ ಬಸವಣ್ಣನ ಮಹಾತ್ಮೆಯನ್ನು ಸ್ಮರಿಸುತ್ತಾ, ಬಸವಣ್ಣನ ಹಸ್ತದಿಂದ ಬಂದುದೆಂದು ಹೇಳಲಾದ ವಿಭೂತಿಯನ್ನು ಧರಿಸಲು, ಒಡನೆಯೆ ಆತನಿಗೆ ಕನ್ನಡದ ಭಾಷೆ ಕರತಲಾಮಲಕವಾಯಿತಂತೆ. ಆತನು ಕನ್ನಡದಲ್ಲಿ 'ಇಷ್ಟಲಿಂಗಸ್ತೋತ್ರ' ವನ್ನೂ 'ಬಸವ ಮಾಹಾತ್ಮ್ಯಗೀತ 'ಗಳನ್ನೂ ರಚಿಸಿ ಹಾಡಿದನು. ಬಸವಣ್ಣನನ್ನು ಕಣ್ಣಾರ ಕಾಣಬೇಕೆಂದು ಹೊರಟ ಆರಾಧ್ಯನಿಗೆ ಮಾರ್ಗಮಧ್ಯದಲ್ಲಿಯೇ ಬಸವಣ್ಣನು ಬಯಲಾದ ಸುದ್ಧಿ ತಿಳಿಯಿತು. ಆತನು ವ್ಯಥೆಯಿಂದ 'ಬಸವ ಬಯಲಾದೆಯಾ' ಎಂದು ಗೀತೆಯನ್ನು ಹಾಡಿದನು. ಅನಂತರ ಆತನು ಶ್ರೀಗಿರಿಗೆಹೋಗಿ ಶಿವೈಕ್ಯನಾದನು. ನೀಲಕಂಠಾಚಾರ್ಯನು ಪಂಡಿತಾರಾಧ್ಯನ ಸಂತತಿಯ ವಿಚಾರವನ್ನೂ ತನ್ನ ಗ್ರಂಥದಲ್ಲಿ ನಿರೂಪಿಸಿದ್ದಾನೆ. ಚಾರ್ವಾಕಾದಿ ಮತಗಳನ್ನು ತನ್ನ ಕಥಾನಾಯಕನು ಖಂಡಿಸಿ, ವೀರಶೈವವನ್ನು ಉದ್ಧರಿಸಿದುದನ್ನೂ ಕವಿ ಮುಕ್ತಕಂಠನಾಗಿ ಹೊಗಳಿದ್ದಾನೆ.

'ಆರಾಧ್ಯ ಚಾರಿತ್ರ'ವು ಸುಪ್ರಸಿದ್ಧವಾದ ವೀರಶೈವ ಪುರಾಣ. ಇದು ಪಂಡಿತಾರಾಧ್ಯನ ಚರಿತ್ರೆಗೆ ಆಧಾರಗ್ರಂಥವಿದ್ದಂತಿದೆ. ಇದರ ಬಂಧ ಲಕ್ಷಣಬದ್ಧವಾಗಿದೆ. ಕವಿಯು ಚಮತ್ಕಾರಯುಕ್ತವಾಗಿ ಬರೆಯಬಲ್ಲ. ರಸಸ್ಥಾನಗಳಿಗಿಂತಲೂ ರಚನಾ ಚಾತುರ್ಯಕ್ಕೇ ಇಲ್ಲಿ ಹೆಚ್ಚು ಪುರಸ್ಕಾರ.

**ಚತುರ್ಮುಖ ಬೊಮ್ಮರಸ** (೧೫೦೦) :

ನೀಲಕಂಠಾಚಾರ್ಯನಂತೆ ಈತನೂ ವೀರಶೈವ ಪುರಾಣ ಕರ್ತೃ. ಈತನ ಕಾವ್ಯ 'ರೇವಣ ಸಿದ್ಧೇಶ್ವರ ಪುರಾಣ.' ಇದನ್ನು ಈಶಾನ್ಯ ಶಿವಗುರು ಸಂಸ್ಕೃತವಲ್ಲಿಯೂ ಹರೀಶ್ವರನು ರಗಳೆಯ ರೂಪದಲ್ಲಿ ಕನ್ನಡದಲ್ಲಿಯೂ ಬರೆದಿರುವುದನ್ನು ಸಮನ್ವಯಗೊಳಿಸಿಕೊಂಡು ತಾನು ಬರೆಯುತ್ತಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ಈತನ ಕಾವ್ಯದ ಆದಿಭಾಗವನ್ನು ನೋಡಿದರೆ ಈತನು 'ಸೌಂದರಪುರಾಣ' ವನ್ನು ಬರೆದ ಬೊಮ್ಮರಸನೆ ಇರಬಹುದೆ? ಎಂಬ ಸಂದೇಹ ಬರುತ್ತದೆ. ಆದರೆ ಎರಡರಲ್ಲಿಯೂ ಕಂಡುಬರುವ ಗುರು ಮತ್ತು ಅಂಕಿತಗಳಲ್ಲಿ ವ್ಯತ್ಯಾಸವಿದೆ. ಬೊಮ್ಮರಸನ ಗುರು ವಿಶ್ವನಾಥಾಚಾರ್ಯ, ಅಂಕಿತ ನೀಲಕಂಠ; ಚತುರ್ಮುಖ ಬೊಮ್ಮರಸನ ಗುರು ಬಾಲಸಿದ್ಧೇಶ್ವರ (?), ಅಂಕಿತ ಶಾಂತಮಲ್ಲೇಶ್ವರ. 'ಈ ಕವಿ ಆ ಕವಿಯ ಮೊಮ್ಮಗನಾ

ಗಿದ್ದರೂ ಇರಬಹುದು. ಹಾಗಿದ್ದ ಪಕ್ಷದಲ್ಲಿ ಇವನ ಕಾಲ ೧೫೦೦ ಆಗ ಬಹುದು 'ಎಂದು ಕವಿಚರಿತೆಕಾರರು ತಿಳಿಸುತ್ತಾರೆ. ಚತುರ್ಮುಖ ಬೊಮ್ಮ ರಸನ ತಂದೆ ಮಾಯಣ್ಣ. ತಾನು ಕಾಶ್ಯಪಗೋತ್ರದವನು, ಬೋಧಾಯನ ಸೂತ್ರದವನು ಯಜುರ್ವೇದಿ—ಎಂದು ಕವಿ ಹೇಳಿಕೊಂಡಿದ್ದಾನೆ. ತನ್ನ ಕಾವ್ಯದ ಕಥಾ ನಾಯಕನಾದ ರೇವಣ ಸಿದ್ಧನ ವಂಶದಲ್ಲಿ ಹುಟ್ಟಿದವನಾದ ಬಾಲಸಿದ್ಧೇಶ್ವರನಲ್ಲಿ ಈತನಿಗೆ ಅಪಾರ ಭಕ್ತಿ. ಆತನನ್ನೆ ತನ್ನ ಗುರುವಾಗಿ ಸ್ವೀಕರಿಸಿರಬೇಕು. ಆತನ ಅಪ್ಪಣೆಗೆ ಅನುಸಾರವಾಗಿಯೇ ಕವಿ ತನ್ನ ಕಾವ್ಯ ವನ್ನು ರಚಿಸಹೊರಟುದು. ತನ್ನನ್ನು 'ಸರಸಗೀರ್ವಾಣ ಭಾಷಾಯುಕ್ತ ಕರ್ಣಾಟ ವರ ವಚಶ್ರೀ ಲಸಿತ ವದನ ತಾಮರಸ', 'ವರ್ಣಕ ಕವೀಂದ್ರ ಚತುರಾಸ್ಯ', 'ಕವಿ ಸಭಾ ಮಾಣಿಕ್ಯದೀಪ' ಎಂದು ತನ್ನನ್ನು ಹೊಗಳಿ ಕೊಂಡಿದ್ದಾನೆ. ತನ್ನ ಕಾವ್ಯದಲ್ಲಿ ರಾಘವಾಂಕಾದಿ ಪೂರ್ವಕವಿಗಳನ್ನು ಅನು ಸರಿಸಿ ಶ ಷ ಸ ರ ಱ ಲ ಳಗಳನ್ನು ಪ್ರಾಸಕ್ಕೆ ಸೇರಿಸುವುದಾಗಿ ಹೇಳಿಕೊಂ ಡಿದ್ದಾನೆ.

'ರೇವಣ ಸಿದ್ಧೇಶ್ವರ ಪುರಾಣ' ವಾರ್ಧಕಷಟ್ಪದಿಯ ೫೬೫ ಪದ್ಯ ಗಳನ್ನು ಒಳಗೊಂಡಿದೆ. ಇದು ಕಥಾಸಾರ—

ಶ್ರೀಶನನು ಕಾಂಚಿಯೊಳು ನುಡಿಸಿ ಚೋಳಂಗೆ ಕ
ನ್ಯಾಸಮೂಹದ ಬಂಧನವ ಬಿಡಿಸಿ ಬಿಜ್ಜಳ ಮ
ಹೀಶನಿಂ ಪೂಜೆಗೊಂಡಾದಿ ಶೈವಾಚಾರ್ಯನಾಗಿ ಲಂಕಾಪುರದೊಳು
ಈಶಕೋಟಿತ್ರಯದ ಹದಿಟೆಗೆಯ್ದೊಲವಿಂ ವಿ
ಭೀಷಣನ ಪಾಲಿಸಿದ ವೀರಶೈವ ಪ್ರಥಮ
ದೇಶಿಕಂ..............................

ಕವಿಯು 'ಪೇಳ್ವೆನೀ ಕಾವ್ಯಮಂ ಬೆಡಂಗಿಂ ನಿಖಿಲ ವಿದ್ವಜ್ಜನಂ ಮೆಚ್ಚೆ, ಶಿವಶರಣ ಕರ್ಣಮಂಡನವೆನಿಸಲು' ಎಂದು ಹೇಳಿಕೊಂಡಿದ್ದಾನೆ. ಈ ಮಾತು ಬಹುಮಟ್ಟಿಗೆ ನಿಜ. ಕವಿಯು ಆಯ್ದುಕೊಂಡಿರುವ ವಸ್ತು ನವರಸ ಗಳನ್ನೂ ಅಭಿವ್ಯಕ್ತಗೊಳಿಸುವಷ್ಟು ಸಾಧನ ಸಂಪದ್ಯುಕ್ತವಾದುದಲ್ಲ. ಬೊಮ್ಮರಸನ ಕೈಲಿ ವಾರ್ಧಕಷಟ್ಪದಿ ನಿರರ್ಗಳವಾಗಿ ಸಾಗುತ್ತದೆ. ಉಚಿತ ಪದಪ್ರಯೋಗದಿಂದ ಕೂಡಿದ ಆತನ ರಚನೆ ಸಾಮಾನ್ಯವಾಗಿದೆ.

## ನಿಜಗುಣ ಶಿವಯೋಗಿ (೧೫೦೦):

ಸರ್ವಸಂಗ ಪರಿತ್ಯಾಗಮಾಡಿದ ಸನ್ಯಾಸಿಯಾದರೂ ಲೋಕ ಕಲ್ಯಾಣದಲ್ಲಿ ತತ್ಪರನಾಗಿದ್ದು, ಕವಿಯಾಗಿ ದಾರ್ಶನಿಕನಾಗಿ ನಾಡು ನುಡಿಗಳಿಗೆ ಅಪಾರ ಸೇವೆಯನ್ನು ಸಲ್ಲಿಸಿದ ಹಿರಿಯಚೇತನ, ನಿಜಗುಣ ಶಿವಯೋಗಿಯು. ಕನ್ನಡದಲ್ಲಿ ಮೂವರು ನಿಜಗುಣ ಶಿವಯೋಗಿಗಳಿದ್ದು, ಮೊದಲನೆಯವನು ಹನ್ನೆರಡನೆಯ ಶತಮಾನದಲ್ಲಿ 'ನಿಜಗುಣಯೋಗಿ' ವೆಂಬ ಅಂಕಿತದಿಂದ ವಚನಗಳನ್ನು ರಚಿಸಿದ ವಚನಕಾರ. ಮೂರನೆಯವನು ಹದಿನೇಳನೆಯ ಶತಮಾನದ ಮಧ್ಯಕಾಲದಲ್ಲಿದ್ದು ಅದ್ವೈತ ರಾಮಾಯಣವನ್ನು ರಚಿಸಿದವನು. ಪ್ರಸ್ತುತನಾದ ಎರಡನೆಯ ನಿಜಗುಣ ಶಿವಯೋಗಿಯ ಕಾಲವಾಗಲಿ, ಜೀವನ ವೃತ್ತಾಂತವಾಗಲಿ ನಿಸ್ಪಷ್ಟವಾಗಿ ತಿಳಿದು ಬರುವಂತಿಲ್ಲ. ಈತನು ಅನುಭವಸಾರ, ಅರವತ್ತು ಮೂವರ ತ್ರಿಪದಿ, ಕೈವಲ್ಯ ಪದ್ಧತಿ, ಪರಮಾನುಭವ ಬೋಧೆ, ಪರಮಾರ್ಥಗೀತೆ, ಪರಮಾರ್ಥಪ್ರಕಾಶಿಕೆ, ವಿವೇಕ ಚಿಂತಾಮಣಿ–ಎಂಬ ಏಳು ಗ್ರಂಥಗಳನ್ನು ಕನ್ನಡದಲ್ಲಿ ಬರೆದಿದ್ದಾನೆ. (ದರ್ಶನಸಾರಂ, ತರ್ಕಚಿಂತಾಮಣಿ, ಎಂಬೆರಡು ಸಂಸ್ಕೃತ ಗ್ರಂಥಗಳನ್ನೂ ಬರೆದಿರುವನಂತೆ; ಆದರೆ ಅವು ಉಪಲಬ್ಧವಾಗಿಲ್ಲ) ಆದರೆ ಈ ವಿರಕ್ತ, ಎಲ್ಲಿಯೂ ತನ್ನ ವಿಚಾರವನ್ನಾಗಲಿ, ತಾನು ಕಾವ್ಯಗಳನ್ನು ಬರೆದ ಕಾಲವನ್ನಾಗಲಿ ಹೇಳಿಕೊಂಡಿಲ್ಲ. 'ನಿಜಗುಣ ಶಿವಯೋಗಿ' ಎಂದು ತನ್ನನ್ನು ಕರೆದುಕೊಂಡಿರುವುದು ಕೂಡ ಆತನ ಅಂಕಿತನಾಮ ಅಹುದೋ ಅಲ್ಲವೊ! ಅದೇನು ಅನ್ವರ್ಥನಾಮವೋ, ಸನ್ಯಾಸಾಶ್ರಮದಲ್ಲಿ ಆತನು ಸ್ವೀಕರಿಸಿದ ನಾಮಧೇಯವೊ! ಈತನು ಮೈಸೂರು ದೇಶದ ದಕ್ಷಿಣ ಭಾಗದಲ್ಲಿರುವ ಕಾವೇರಿ ತೀರದ ಸಣ್ಣರಾಜ್ಯವೊಂದಕ್ಕೆ ದೊರೆಯಾಗಿದ್ದನೆಂದೂ, ವೈರಾಗ್ಯಪರನಾಗಿ ಶಂಭುಲಿಂಗನ ಬೆಟ್ಟದಲ್ಲಿ ಶಿವಯೋಗ ತತ್ಪರನಾದನೆಂದೂ ತಿಳಿದು ಬರುತ್ತದೆ. ಈತನ ಕಾವ್ಯಗಳಲ್ಲಿ ಶಂಭುಲಿಂಗನ ಅಂಕಿತವಿರುವುದರಿಂದಲೂ, ಶಂಭುಲಿಂಗನ ಬೆಟ್ಟದಲ್ಲಿ ಶಂಭುಲಿಂಗನ ದೇವಾಲಯವಿರುವುದರಿಂದಲೂ, ಆ ಬೆಟ್ಟದಲ್ಲಿ ನಿಜಗುಣ ಶಿವಯೋಗಿಯು ತಪಸ್ಸು ಮಾಡಿದ ಗವಿ ಮತ್ತು ಮುಪ್ಪಿನ ಷಡಕ್ಷರಿ ಕವಿಯು ವಾಸ ಮಾಡಿದ ಗವಿ—ಎಂದು ಎರಡು ಗವಿಗಳನ್ನು ಈಗಲೂ ಜನರು ನಿರ್ದೇಶಿಸಿ ತೋರಿಸುವುದರಿಂದಲೂ ಕವಿಯು

ಆ ಪ್ರಾಂತದವನೆಂಬುದು ನಿರ್ವಿವಾದವೆಂದು ತೋರುತ್ತದೆ. ಮುಪ್ಪಿನ ಷಡಕ್ಷರಿಯೂ ಅದೇ ಪ್ರಾಂತದವನೆಂದು ಹೇಳುತ್ತಾರೆ. ನಿಜಗುಣ ಶಿವ ಯೋಗಿಯ ಕಾಲವನ್ನು ನಿರ್ಧರಿಸುವುನಕ್ಕೆ ಯಾವ ಸಾಧನವೂ ಇಲ್ಲ. ಸುಮಾರು ೧೫೦೦ ಎಂದು ಕವಿಚರಿತೆಕಾರರು ಹೇಳಿರುವುದನ್ನೇ ನಾವೂ ಸಧ್ಯಕ್ಕೆ ಸ್ವೀಕರಿಸಿ, ನಿಜಗುಣ ಶಿವಯೋಗಿಯೂ ಮುಪ್ಪಿನ ಷಡಕ್ಷರಿಯೂ ಏಕಕಾಲದಲ್ಲಿ ಶಂಭುಲಿಂಗನ ಬೆಟ್ಟದಲ್ಲಿ ವಾಸಿಸುತ್ತಿದ್ದರೆಂದು ಭಾವಿಸುತ್ತೇವೆ.

ನಿಜಗುಣ ಶಿವಯೋಗಿಯ ಗ್ರಂಥಗಳು ವಸ್ತು ರೀತಿಗಳೆರಡರಲ್ಲಿಯೂ ವೈವಿಧ್ಯಮಯವಾಗಿವೆ. ಆತನ 'ಅನುಭವಸಾರ' 'ಸಕಲವೇದಾಂತಸಾರ ವನೆ, ತಿಳಿವಂತೆ ಸಾಧಕರಿಗೆ' ನಿರೂಪಿಸುವ ಗ್ರಂಥ. ಗುರುಶಿಷ್ಯ ಸಂವಾದ ರೂಪದಲ್ಲಿರುವ ಈ ಗ್ರಂಥ ತ್ರಿಪದಿಯ ೫೩೫ ಪದ್ಯಗಳನ್ನು ಒಳಗೊಂಡಿದೆ. 'ಕೈವಲ್ಯ ಪದ್ಧತಿ' ಯು ಶಂಭುಲಿಂಗನ ಅಂಕಿತವನ್ನು ಒಳಗೊಂಡ ೬೪೪ ಹಾಡುಗಳನ್ನು ಒಳಗೊಂಡಿದೆ. ಬಹುಶಃ ಆ ವೇಳೆಗಾಗಲೆ ಜನರಲ್ಲಿ ಬಳಕೆಗೆ ಬಂದಿದ್ದ ದಾಸರ ಪದಗಳು ನಿಜಗುಣ ಶಿವಯೋಗಿಗೆ ಪ್ರೇರಣೆಯನ್ನು ಕೊಟ್ಟಿರಬಹುದು. 'ಆಬಾಲ ಯವ್ವನ ವೃದ್ಧರಿಗೆ ಆಯಾಸವಿನಿತಿಲ್ಲದಂತೆ ಸಕಲವೇದಾಂತಾಗಮ ಸ್ಮೃತಿ ಪುರಾಣೇತಿಹಾಸ ಸೂತ್ರಾದಿ ಶಾಸ್ತ್ರ ಸಮ್ಮ ತದಿಂ ಪುರಾತನ ಗೀತಾನುಗುಣ್ಯವೆನಿಸಿ ಮೃದು ಮಧುರ ಲಕ್ಷಣ ಯುಕ್ತ ಮಾಗಿ' ಈ ಹಾಡುಗಳು ರಚಿತವಾಗಿವೆಯೆಂದು ಕವಿ ಹೇಳಿಕೊಂಡಿರುವುದು ಸತ್ಯಯುಕ್ತವಾಗಿದೆ. ಸಂಗೀತದ ಸಕ್ಕರೆಯನ್ನು ಬಳಿದುಕೊಂಡಿರುವ ಭಕ್ತಿ ಜ್ಞಾನ ವೈರಾಗ್ಯದ ಈ ಕಹಿ ಗುಳಿಗೆಗಳು ಜನರ ಹಿತಸಾಧನೆಯನ್ನು ನಿರ್ವಹಿ ಸುವುದರಲ್ಲಿ ಪ್ರಮುಖಪಾತ್ರವನ್ನು ವಹಿಸಿವೆ. ಈ ಹಾಡುಗಳಲ್ಲಿ ಹಲವು ಬಹು ಜನಪ್ರಿಯವಾಗಿಯೂ ಇವೆ. ನಿಜಗುಣನ 'ಪರಮಾರ್ಥ ಗೀತೆ' ಯೂ 'ಅನುಭವಸಾರ' ದಂತೆ ಗುರು-ಶಿಷ್ಯ ಸಂವಾದರೂಪವಾಗಿದೆ. ಅದ ರಂತೆ ಇದೂ ವೇದಾಂತ ಗ್ರಂಥ; ಶೃತಿ, ಪುರಾಣ, ಇತಿಹಾಸ, ಸ್ಮೃತಿಗಳ ಅರ್ಥವನ್ನು ಕನ್ನಡದಲ್ಲಿ ನಿರೂಪಿಸುತ್ತಿದೆ. ಸುಮಾರು ೧೫೦೦ ಚರಣ ಗಳನ್ನು ಒಳಗೊಂಡ ಈ ಲಲಿತ ರಗಳೆಯ ಗ್ರಂಥದಲ್ಲಿ ಕೆಲವು ಕಂದಪದ್ಯ ಗಳೂ ಇವೆ. ಹೊನ್ನುಳ್ಳವನು ಗುಣವಿಲ್ಲದಿದ್ದರೂ ಗುಣಿಯೆಂದು ಪರಿಗಣಿತ ನಾಗುವಂತೆ ಈ ಗ್ರಂಥ ಪದಲಕ್ಷಣವಿಲ್ಲದಿದ್ದರೂ ವಿಶೇಷ ಅರ್ಥವನ್ನು ಒಳ

ಗೊಂಡಿರುವುದರಿಂದ ಆದರಣೀಯವೆಂದು ಕವಿ ಹೇಳಿಕೊಂಡಿದ್ದಾನೆ. 'ಪರಮಾನು ಬೋಧೆ' ಅದ್ವೈತ ತತ್ವವನ್ನು ಬೋಧಿಸುವ ಸುಮಾರು ಸಹಸ್ರ ಪದ್ಯಗಳನ್ನು ಒಳಗೊಂಡ ಸಾಂಗತ್ಯ ಛಂದಸ್ಸಿನ ಗ್ರಂಥ. ಯಾಜ್ಞವಲ್ಕ್ಯ—ಮೈತ್ರೇಯಿಗಳ ಸಂವಾದರೂಪವಾಗಿರುವ ಈ ಗ್ರಂಥವು

ಇದು ವೇದ ವೇದಾಂತದೊಳು ಗೋಪ್ಯವಾದರ್ಥ | ವಿದು
ಪುರಾಣಾಗಮಸ್ಮೃತಿ ಸಾರ
ಇದು ಪರಮಾರ್ಥದ ತಿರುಳು ತತ್ವರಹಸ್ಯ | ವಿದು ಪ್ರಾಕೃತವೆ
ಎಲ್ಲರರಿಯಲ್ಕೆ ?

ಎಂದು ಕವಿ ಕೇಳುತ್ತಾನೆ. ಉಳಿದ ಗ್ರಂಥಗಳಿಗಿಂತಲೂ ಇದರಲ್ಲಿ ಕಾವ್ಯಾಂಶ ಹೆಚ್ಚಾಗಿದೆಯೆಂದು ಹೇಳಬಹುದು. ಕಠಿಣವಾದ ವೇದಾಂತ ತತ್ವಗಳನ್ನು ಕವಿಯು ಅತ್ಯಂತ ಸುಲಭವಾಗಿ ಮಾಡಿದ್ದಾನೆ.

ಕಾದ ಕಬ್ಬುನದೊಂದು ಗಟ್ಟಿಯೊಳಗಣಿತ | ಮಾದ ಕಿಡಿಗಳು
ದಯಿಸುವಂತೆ
ಭೇದರೂಪಿನ ಜಗಜ್ಜೀವರ ಕಲ್ಪಿತ | ನಾದೊರ್ವನಲ್ಲಿ
ಮಸಗಿ ತೋರ್ಕು

ಭಾಷೆಯೇನೊ ಸುಲಭವೆ. ಆದರೆ ಭಾವಗಳು ಗಹನ. 'ಎಲ್ಲರರಿಯಲ್ಕೆ ಇದು ಪ್ರಾಕೃತವೆ?' ಎಂದು ಕವಿ ಶಂಕಿಸಿರುವುದು ನ್ಯಾಯವಾಗಿಯೇ ಇದೆ. 'ಅರವತ್ತುಮೂವರ ತ್ರಿಪದಿ' ಅಥವಾ 'ಪುರಾತನರ ತ್ರಿವಿಧಿ' ಅರವತ್ತು ಮೂರು ಪುರಾತನ ಶರಣರ ಸ್ತೋತ್ರರೂಪವಾದ ಎಪ್ಪತ್ತೇಳು ಪದ್ಯಗಳನ್ನು ಒಳಗೊಂಡಿದೆ. 'ವಿವೇಕ ಚಿಂತಾಮಣಿ' ಯೂ ಏಳುನೂರ ಅರವತ್ತೈದು ವಿವಿಧ ವಿಷಯಗಳನ್ನು ಒಳಗೊಂಡ ಆರು ಸಹಸ್ರ ಗ್ರಂಥ ಸಂಖ್ಯೆಯುಳ್ಳ ಬೃಹತ್ಕೃತಿ, ಗದ್ಯದಲ್ಲಿದೆ. 'ಮುಮುಕ್ಷು ಜನಂಗಳ್ ಈ ಜಗತ್ತಿನ ಸ್ಥಿತಿಗತಿಗಳಾವ ಪ್ರಕಾರದಿಂದಹುವೆಂದರಸಿ ಬಳಲದೆ, ಅಭಿವ್ಯಕ್ತಮಾಗಿಲ್ಲಿಯೆ ಸಲ್ಲೀಲೆಯಿಂದರಿತು ಕೃತಾರ್ಥರಾಗಲೆಂದು ಬೆಳುಗನ್ನಡಮಾದ ವಚನ ರಚನೆಗಳಿಂ' ಕವಿ ಇದನ್ನು ರಚಿಸಿದ್ದಾನಂತೆ. "ಈ ಸತ್ಕೃತಿಯನಾಲಿಸಿದರ್ಗೆ ಎಡೆಗೊಂಡ ಸಂಶಯಸ್ತೋಮವಡಂಗಿ, ಬೇರೆ ಬಹು ಶಾಸ್ತ್ರವನೋದುವ

ಬಾಧೆ ಪಿಂಗಿ ' ಹೋಗುತ್ತದೆಯೆಂಬ ಕವಿಯ ಮಾತು ಬಹುಮಟ್ಟಿಗೆ ನಿಜ. ಇದರಲ್ಲಿ ಪುರಾಣ, ಇತಿಹಾಸ, ವೇದಾಂತ, ವೈದ್ಯ—ಇತ್ಯಾದಿ ಇತ್ಯಾದಿ ಅಸಂಖ್ಯಾತ ಸಂಗತಿಗಳನ್ನು ಒಳಗೊಂಡು, ಇದೊಂದು ವಿಶ್ವಕೋಶದಂತಿದೆ. ಇದರ ನಾಲ್ಕನೆಯ ಪ್ರಕರಣದಲ್ಲಿ ಕವಿಯು ನಾದೋತ್ಪತ್ತಿ, ಶ್ರುತಿ, ಸ್ವರ, ಗಮಕ, ರಾಗಪ್ರಭೇದಗಳು, ವಾದ್ಯಗಳು, ತಾಳಗಳು, ನೃತ್ಯ—ಇವುಗಳನ್ನು ಕುರಿತು ಹೇಳಿದ್ದಾನೆ. ಕನ್ನಡ ದೇಶದಲ್ಲಿ ಸಂಗೀತ ಹೇಗೆ ಬೆಳೆಯಿತು, ರೂಢಿಯಲ್ಲಿತ್ತು ಎಂಬುದಕ್ಕೆ ಇಲ್ಲಿ ಕೆಲವು ಸ್ವಾರಸ್ಯವಾದ ಸಾಕ್ಷ್ಯಗಳು ದೊರೆಯುತ್ತವೆ. ನಮ್ಮವರು ಸಂಗೀತ ಶಾಸ್ತ್ರದಲ್ಲಿ ತಮ್ಮದೇ ಆದ ಪರಿಭಾಷೆ, ತಂತ್ರಗಳನ್ನು ಬಳಸಿಕೊಂಡಿದ್ದರು; ಇದು ನೆರೆಹೊರೆಯ ಪ್ರಾಂತ್ಯಗಳ ಸಂಗೀತದ ಮೇಲೆ ಶಕ್ತಿಯುತ ಪ್ರಭಾವವನ್ನು ಬೀರಿತ್ತು. ಅದರ ಛಾಯೆ ಈ ಗ್ರಂಥದಲ್ಲಿ ಕಂಡುಬರುತ್ತದೆ. ಇದರಲ್ಲಿನ ಶ್ರುತಿಗಳ ಹೆಸರು, ಶ್ರುತಿ ಗಮಕಗಳು, ತಾಳಗಳ ಹೆಸರುಗಳು—ಇವುಗಳಲ್ಲಿ ಕರ್ನಾಟಕದ ವೈಶಿಷ್ಟ್ಯವಿದೆ. ಅನೇಕ ಬಗೆಯ ವೀಣೆಗಳನ್ನೂ ವೀಣೆಗಳ ಭಾಗಗಳ ಕನ್ನಡ ಹೆಸರುಗಳನ್ನೂ ನಾವು ಇಲ್ಲಿ ಕಾಣುತ್ತೇವೆ. ಭಾರತೀಯ ಸಂಗೀತಕ್ಕೆ ವಿಶಿಷ್ಟ ಕೊಡುಗೆಯಾದ ಸುಳಾದಿ ತಾಳಗಳ ಹೆಸರನ್ನು ಶಾಸ್ತ್ರೀಯ ವಾತಾವರಣದಲ್ಲಿ ಇಲ್ಲಿ ಕಾಣುತ್ತೇವೆ. ಹಿಂದೂಸ್ಥಾನಿ ಸಂಗೀತ ಪದ್ಧತಿಯದೆಂದು ಸಾಮಾನ್ಯವಾಗಿ ನಂಬಲಾಗಿರುವ ಸ್ತ್ರೀಪುರುಷ ರಾಗಗಳನ್ನು ಕನ್ನಡ ನಾಡಿನ ಸಂಗೀತದಲ್ಲಿ ನಿಜಗುಣ ಹೇಳಿದ್ದಾನೆ. ಅಷ್ಟೇ ಅಲ್ಲ, ನಪುಂಸಕ ಮಿಶ್ರರಾಗಗಳನ್ನೂ ಹೇಳಿದ್ದಾನೆ.[1] ' ಪರಮಾರ್ಥ ಪ್ರಕಾಶಿಕೆ 'ಯು ಚೆನ್ನ ಸದಾಶಿವಯೋಗಿಕೃತ ' ಶಿವಯೋಗ ಪ್ರದೀಪಕೆ ' ಎಂಬ ಸಂಸ್ಕೃತದ ಗ್ರಂಥದ ಕನ್ನಡ ವ್ಯಾಖ್ಯಾನ.

ನಿಜಗುಣ ಶಿವಯೋಗಿಯನ್ನು ನಾವು ಮೆಚ್ಚುವುದು ಆತನ ಕಾವ್ಯಗುಣಕ್ಕಾಗಿ ಅಲ್ಲ; ಆತನ ಅಪಾರವಾದ ಅಧ್ಯಾತ್ಮ ಜ್ಞಾನಕ್ಕಾಗಿ; ಆ ಅಧ್ಯಾತ್ಮ ಜ್ಞಾನವನ್ನು ಕನ್ನಡಕ್ಕೆ ತಂದುಕೊಡಲು ಆತನು ತೋರಿರುವ ಕಳಕಳಿಗಾಗಿ. ಸಂಸ್ಕೃತಜ್ಞಾನವಿಲ್ಲದವರು ವೇದಾಂತ ತತ್ವಗಳನ್ನು ಅರಿತು

---

[1] ಇದನ್ನು ನಮಗೆ ತಿಳಿಸಿಕೊಟ್ಟವರು ನಮ್ಮ ಮಿತ್ರರಾದ ಶ್ರೀ ಆರ್. ಸತ್ಯನಾರಾಯಣ ಎಂ.ಎಸ್‌ಸಿ. ಅವರು

ಕೊಳ್ಳಲು ಅಪಾರವಾದ ಸಹಾಯವನ್ನು ನೀಡಿದ್ದಾನೆ, ನಿಜಗುಣ ಶಿವಯೋಗಿ. ಈತನ 'ವಿವೇಕ ಚಿಂತಾಮಣಿ' ಯು ತಮಿಳು ಮರಾಠಿಗಳಿಗೂ ಸಂಸ್ಕೃತಕ್ಕೂ ಭಾಷಾಂತರಿತವಾಗಿದೆಯೆಂದು ಕೇಳಿದಾಗ ಯಾವ ಕನ್ನಡಿಗನ ಹೃದಯ ತಾನೆ ಹಿಗ್ಗಿ ನಲಿಯದು ? ಕನ್ನಡದ ಆಧ್ಯಾತ್ಮ ಸಾಹಿತ್ಯದ ಇತಿಹಾಸದಲ್ಲಿ 'ನಿಜಗುಣ ಶಿವಯೋಗಿ' ಯ ಹೆಸರು ನಿಸ್ಸಂದೇಹವಾಗಿಯೂ ಅದ್ವಿತೀಯವಾದುದು.

## ಮುಪ್ಪಿನ ಷಡಕ್ಷರಿ

ಈತನು ನಿಜಗುಣಶಿವಯೋಗಿಯ ಸಮಕಾಲಿಕನೆಂದೂ ಶಂಭುಲಿಂಗದ ಬೆಟ್ಟದಲ್ಲಿ ಈತನ ಗವಿಯಿದೆಯೆಂದೂ ಶ್ರೀಮಾನ್ ಬಿ. ಶಿವಮೂರ್ತಿಶಾಸ್ತ್ರಿಗಳು ತಿಳಿಸುತ್ತಾರೆ. ಜೀವನ ಚರಿತ್ರೆ ಏನೂ ಗೊತ್ತಿಲ್ಲ. 'ಷಡಕ್ಷರಿ' ಎಂಬ ಅಂಕಿತದಿಂದ ಈತನು ಬರೆದಿರುವ ಹಲವು ಹಾಡುಗಳನ್ನು ಒಳಗೊಂಡ 'ಸುಬೋಧಸಾರ' ವೆಂಬ ಗ್ರಂಥ ಪ್ರಕಟವಾಗಿದೆ. ಇದನ್ನು ನೋಡಿದರೆ ಈತನು ಸಹಜಾನಂದಸ್ಥಿತಿಯಲ್ಲಿ ತನ್ಮಯನಾದ ವೈರಾಗ್ಯ ಮೂರ್ತಿಯೆಂಬುದು ಸ್ಪಷ್ಟವಾಗುತ್ತದೆ. ಈತನ ಕವಿತೆಗಳು ಮನೋಹರವಾದ ಭಾವಗೀತೆಗಳು. ಈತನ ಆಧ್ಯಾತ್ಮ ಚೇತನದ ಅಂತರಂಗದ ಹಂಬಲ ಸರಳ ಸುಂದರವಾದ ಕಾವ್ಯಗಂಗೆಯಾಗಿ ಹರಿದುಬಂದಿದೆ.

ಅವರವರ ದರುಶನಕೆ। ಅವರವರ ವೇಷದಲಿ।
ಅವರವರಿಗೆಲ್ಲ ಗುರುವು ನೀನೊಬ್ಬನೆ
ಅವರವರ ಭಾವಕ್ಕೆ। ಅವರವರ ಭಕ್ತಿಗೆ।
ಅವರವರಿಗೆಲ್ಲ ದೇವ ನೀನೊಬ್ಬನೆ
ಹೋರಾಟವಿಕ್ಕಿಸಲು ಬೇರಾದೆಯಲ್ಲದೆ।
ಬೇರುಂಟೆ ಜಗದೊಳಗೆ ಎಲೆ ದೇವನೆ ?

ಬುದ್ಧಿಗೆ ಬೆಳಕನ್ನೂ ಹೃದಯಕ್ಕೆ ಶಾಂತಿಯನ್ನೂ ನೀಡಬಲ್ಲ ಇಂತಹ ಹೃದಯ ವೈಶಾಲ್ಯ, ಸಮನ್ವಯ ಬುದ್ಧಿ ಜನರಲ್ಲಿ ಪ್ರಚಾರವಾದರೆ ನಮ್ಮ ಜನರ ಬಾಳು ಬಂಗಾರವಾದೀತು ! 'ಹುಲಿಯ, ಕರಡಿ ಕರಿಯ ಫಣಿಯ। ಬಲುಹಿನಿಂದಲಾಳ್ವರುಂಟು, ಚಲಿಸದಂತೆ ಮನವನಾಳ್ವರಾರ ಕಾಣೆನು' ಎಂಬ ಮಾತು ಎಷ್ಟು ಸರಳ, ಆದರೆ ಎಷ್ಟು ಸಾರವತ್ತಾಗಿದೆ, ಪ್ರಭಾವ

ಯುತವಾಗಿದೆ! 'ಸಿರಿಯು ಕನಸಿನಂತೆ' ಎಂದು ಹೇಳಿಕೊಂಡು, ಕನ್ನಡದ ಆಬಾಲವೃದ್ಧರಿಗೂ ಪರಿಚಿತವಾಗಿರುವ 'ತಿರುಕನೊರ್ವನೂರಮುಂದೆ' ಎಂಬ ತಿರುಕನ ಕಥೆಯನ್ನು ಸಂಗ್ರಹವಾಗಿ ಸಾರವತ್ತಾಗಿ ಭಾವಭಾಷೆಗಳ ಸಮರಸ ಜೋಡಣೆಯಿಂದ ಈತ ಹಾಡಿದ್ದಾನೆ. 'ಕೋಪವೆನಗೆ ಲೋಪವಾಗದು' ಎಂಬ ಕವನದಲ್ಲಿ ಆತನ ವೀರಭಕ್ತಿ ಸಿಡಿಲಿನ ಆವೇಗದೊಡನೆ ಪುಟಿದು ಬಂದಿದೆ. ಇಂದ್ರಿಯಗಳೆಲ್ಲವೂ ತನಗೆ ವಿಧೇಯವಾಗದತನಕ ಆತನ ಕೋಪ ಲೋಪವಾಗದಂತೆ! ಒಂದೊಂದು ಇಂದ್ರಿಯವನ್ನೂ ನಿರ್ದಯೆಯಿಂದ ಶಿಕ್ಷಿಸ ಬೇಕೆನ್ನುತ್ತದೆ, ಆತನ ಕೋಪ. ಅದು ಶಾಂತಿಯಾಗಬೇಕಾದರೆ, ಮೊದಲು

ದುಷ್ಟನುಡಿಯ ಬಿಡದೆ ಒಲಿದು | ಮುಟ್ಟಿಕೊಳ್ಳ ಹಾಗೆ ಶಿವನ
ಶ್ರೇಷ್ಠವಾದ ಶಾಸ್ತ್ರ ಕೇಳದಿರ್ಪ ಕಿವಿಯೊಳು
ಇಟ್ಟು ಮೊಳೆಯ ಕೊಡತಿಯಿಂದ | ತಟ್ಟಿ ಆಚೆ ಈಚೆಗಾಗು
ವಷ್ಟು ಬಡಿಯದನಕ ನನ್ನ ಸಿಟ್ಟು ಹೋಗದು

ಹೀಗೆಯೆ ಕಣ್ಣು, ಚರ್ಮ, ನಾಲಗೆ, ಮೂಗುಗಳಿಗೂ. 'ಹಿಂದುಳಿಯಿತವು ವಾಸ್ಯೆ | ಮುಂದೆ ಹುಣ್ಣಿಮೆ ಬಂತು, ಎಂದಿಗೆ ಎನ್ನವನು ಕರೆಯ ಬಹರೋ!' 'ಒಡಲೆ ದೇವಾಲಯು' 'ಹಳ್ಳ ಹರಿದಮೇಲೆ ನೀರ | ಗುಳ್ಳೆಯುರುಳಿ ಹೋದ ತೆರದಿ ಸುಳ್ಳುರೂಪು' ಇಂತಹ ಧ್ವನಿಪೂರ್ಣವಾದ ವಾಕ್ಯಗಳು ಪ್ರತಿ ಪದ್ಯದಲ್ಲಿಯೂ ಮಿನುಗುತ್ತವೆ. ಒಟ್ಟಿನಲ್ಲಿ 'ಅವರವರ ಭಾವಕ್ಕೆ, ಅವರವರ ಭಕ್ತಿಗೆ ಅವರವರಿಗೆಲ್ಲ' ತಕ್ಕ ಚಿಂತನ ಸಾಮಗ್ರಿ ಇದೆ, ಇಲ್ಲಿ, ವಯಸ್ಸು, ಕುಲ, ಲಿಂಗಗಳ ಭೇದವಿಲ್ಲದೆ.

ಮುಪ್ಪಿನ ಷಡಕ್ಷರಿಯಂತೆ **ಸಪ್ಪಣ್ಣ ಅಥವಾ ಸರ್ಪಭೂಷಣ ಕವಿ (೧೭೦೦)ಯೂ** ಹಲವು ಆಧ್ಯಾತ್ಮಿಕವಾದ ಹಾಡುಗಳನ್ನು 'ಶ್ರೀ ಗುರುಸಿದ್ಧ' ಎಂಬ ಅಂಕಿತದಿಂದ ಬರೆದಿದ್ದಾನೆ. ಈ ಹಾಡುಗಳ ಸಂಕಲನಕ್ಕೆ 'ಕೈವಲ್ಯ ಕಲ್ಪವಲ್ಲರಿ' ಎಂದು ಹೆಸರು. ಈತನೂ ಜಾತಿ ಮತ ಪಂಥ ಗಳನ್ನು ಮೆಟ್ಟಿ ಮೇಲೇರಿರುವ ಕವಿ. ತನ್ನ ಮನಸ್ಸನ್ನು ಕುರಿತು 'ಬೆರೆಯ ಬಾರದೆ ತಿಳಿದು ಬೆರೆಯ ಬಾರದೆ | ಮರೆದು ಬಾಹ್ಯವನ್ನು ತನ್ನ ಕರದಖಂಡ ತೇಜದೊಡನೆ,' ಎಂದು ಈತನು ಬೇಡುವಲ್ಲಿ, ಅಥವಾ 'ದಯಪಾಲಿಸೆಲೊ

ದೇವ ನೀನೆ ನಿಶ್ಚಲಪದವಿಯನಿನ್ನಾವ ವರವ ನಾನೊಲ್ಲೆನು' ಎಂದು ಹೇಳು ವಲ್ಲಿ ಈತನ ಭಕ್ತಿಯ ನಿಲವು ನಮಗೆ ಅರ್ಥವಾಗುತ್ತದೆ.

ಹಾಡುಗಳಲ್ಲಿ ವೇದಾಂತವಿಚಾರವನ್ನು ಪ್ರಚಾರಮಾಡುವ ಜಾನಪದ ಕವಿಗಳು ಎಷ್ಟೋ ಜನ ಇನ್ನೂ ಅಜ್ಞಾತರಾಗಿರುವರೆಂದು ತೋರುತ್ತದೆ.

**ಸಿಂಗಿರಾಜ (೧೫೦೦) :**

'ಅಮಲ ಬಸವ ಚಾರಿತ್ರ'ಅಥವಾ 'ಸಿಂಗಿ ಪುರಾಣ'ವನ್ನು ವಾರ್ಧಕ ಷಟ್ಪದಿಯಲ್ಲಿ ಬರೆದ ಕವಿ ಸಿಂಗಿರಾಜ ತನ್ನ ವಿಚಾರವನ್ನು ಕುರಿತು ವಿಸ್ತೃತ ವಿವರಣೆಗಳೇನನ್ನೂ ಕೊಟ್ಟಿಲ್ಲ; ತಾನು ಕಾಶಿಯ ವಿಶ್ವನಾಥನ 'ಪದ ಕಮಳ ಷಟ್ಚರಣ,' ವೀರಭದ್ರನ ಭಕ್ತ, ದೇಮಿದೇವನೆಂಬುವನ ಶಿಷ್ಯ— ಎಂದಿಷ್ಟು ಮಾತ್ರ ತಿಳಿಸುತ್ತಾನೆ. ಈತನು ಕ್ರಿ.ಶ.ಸು. ೧೫೦೦ ರಲ್ಲಿ ಇದ್ದಿರ ಬಹುದೆಂದು ಪಂಡಿತರು ಊಹಿಸುತ್ತಾರೆ.

ಕಾರಣಿಕ ಪುರುಷನಾದ ಬಸವಣ್ಣನ ದಿವ್ಯಜೀವನವನ್ನು ಕೃತಿರೂಪದ ಪುಷ್ಪಾಂಜಲಿಯಿಂದ ಪೂಜಿಸಿರುವವರಲ್ಲಿ ಸಿಂಗಿರಾಜನೂ ಒಬ್ಬ. ಈ ಕವಿಯ ದೃಷ್ಟಿಯಲ್ಲಿ ಬಸವಣ್ಣನು 'ಮಾನವ ಮಹಾದೇವ'; ಶಿವನ ಅಪ್ಪಣೆಯಂತೆ ಮರ್ತ್ಯದ ಮಣಿಹವನ್ನು ನೆರವೇರಿಸುವುದಕಾಗಿ ಅವತರಿಸಿ ಬಂದಿರುವ ಸಾಕ್ಷಾತ್ ವೃಷಭದೇವ. ಆತನು ಮರ್ತ್ಯದಲ್ಲಿ ಮೆರೆದ ಎಂಬತ್ತೆಂಟು ಪವಾಡ ಗಳನ್ನು—ಇವುಗಳಲ್ಲಿ 'ಪ್ರತಿವಾದ ಮುಖದಿಂ ನೆಗಳ್ದ ಪವಾಡಂಗಳು ೬೪. ಭಕ್ತಿ ಚಾರಿತ್ರ ಭಾವನಿಷ್ಠಾ ಪವಾಡಂಗಳು ೨೪'—ವರ್ಣಿಸುವುದೇ ಈ ಕಾವ್ಯ ನಿರೂಪಣೆಯ ಉದ್ದೇಶ. ಈ ನಿರೂಪಣೆಗೆ ಹರಿಹರ ಕವಿಯ 'ಬಸವ ರಾಜದೇವರ ರಗಳೆ,' ಭೀಮಕವಿಯ 'ಬಸವಪುರಾಣ', ಲಕ್ಕಣ್ಣ ದಂಡೇಶನ 'ಶಿವ ತತ್ವ ಚಿಂತಾಮಣಿ'—ಇವು ಸಾಮಗ್ರಿಯನ್ನು ಒದಗಿಸಿವೆ. ಉಳಿದೆರಡ ಕ್ಕಿಂತಲೂ 'ಶಿವ ತತ್ವ ಚಿಂತಾಮಣಿ'ಯನ್ನೇ ಹೆಚ್ಚಾಗಿ ಅನುಸರಿಸಿದ್ದಾನೆ. ಸಿಂಗಿರಾಜ. ಬಸವಣ್ಣನ ಜೀವನಕ್ಕೆ ನೇರವಾಗಿ ಸಂಬಂಧಿಸಿದ ಕಥೆಗಳನ್ನು ಹಿಂದಿನ ಕಾವ್ಯಗಳಿಂದ ಆಯ್ದುಕೊಂಡು ಅವುಗಳನ್ನು ಸಂಗ್ರಹಿಸಿ ಅಥವ ಹಿಗ್ಗಲಿಸಿ, ತನ್ನವಾಗಿ ಮಾಡಿಕೊಂಡು, ಅವನ್ನು ಮೆರುಗು ಗೊಳಿಸಲು ಪ್ರಯತ್ನಿಸಿದ್ದಾನೆ, ತಕ್ಕಮಟ್ಟಿಗೆ ಆ ಕಾರ್ಯದಲ್ಲಿ ಕೃತಕೃತ್ಯನಾಗಿದ್ದಾನೆ.

(ಮೈಸೂರು ಪ್ರಾಚ್ಯಸಂಶೋಧನಾಲಯದ ಪ್ರಕಟಣೆ: ಸಿಂಗಿರಾಜಪುರಾಣ —ಎಚ್. ದೇವೀರಪ್ಪ (ಸಂಪಾದಕರು) ಅದರ ಮುನ್ನುಡಿಯನ್ನು ನೋಡಿ.)

ಸಿಂಗಿರಾಜ ಪುರಾಣದಲ್ಲಿ ಕಾವ್ಯಾಂಶ ಕಡಮೆ. ಕವಿಯ ದೃಷ್ಟಿ ಬಸವಣ್ಣನ ಪವಾಡಗಳ ನಿರೂಪಣೆ, ಪುರಾಣ ಸೃಷ್ಟಿ; ಅದಕ್ಕೆ ಅಪೋಹ ಬರದಂತೆ ಆತನ ಗ್ರಂಥ ಸೃಷ್ಟಿಯಾಗಿದೆ. ಇತರ ಪುರಾಣಗಳಲ್ಲಿ ಬರುವಂತೆ ಎಲ್ಲ ವಿಚಾರಗಳನ್ನೂ, ಎಲ್ಲ ನೂತನ ಪುರಾತನರ ಕಥೆಗಳನ್ನೂ ಇಲ್ಲಿ ತಂದು ತುಂಬಿಲ್ಲ. ಈ ವಿವೇಚನೆಗಾಗಿ ಸಿಂಗಿರಾಜನು ಅಭಿವಂದ್ಯ. ಕೈಲಾಸದಲ್ಲಿ ಕ್ರಿಯೆ ಭಾವಗಳಿಗೆ ವಾದ ಹುಟ್ಟಿ ಭಾವವು ವೃಷಭನನ್ನೂ ಕ್ರಿಯೆ ದೇವತೆಗಳನ್ನೂ ಆಶ್ರಯಿಸಿದವು. ದೇವತೆಗಳು ವೃಷಭನನ್ನು ಅಪಮಾನಿಸಲು ಆತನು ಶಿವನ ಸಭೆಯಿಂದ ಹೊರಟು, ಭೂದೇವಿಯ ಪ್ರಾರ್ಥನೆಯಂತೆ ಭೂಲೋಕದಲ್ಲಿ ಸಂಚರಿಸುತ್ತಾ ಲಿಂಗ ಪ್ರಾಣಿಯಾದ ಅನಿಮಿಷನಿಗೆ ತನ್ನ ಲಿಂಗವನ್ನು ಕೊಟ್ಟು ಕೈಲಾಸಕ್ಕೆ ಹಿಂದಿರುಗಿದನು. ಆದರೆ ದ್ವಾರಪಾಲಕರು ಲಿಂಗವಿಲ್ಲದ ಆತನಿಗೆ ಕೈಲಾಸ ಪ್ರವೇಶವಾಗದೆಂದು ತಡೆದರು. ಶಿವನು ಆತನನ್ನು ಪುನಃ ಲಿಂಗವನ್ನು ಪಡೆದು ಬರುವಂತೆ ಹೇಳಿ ಕಳುಹಿಸಲು ಆತನ ಅಪ್ಪಣೆಯಂತೆ ಭೂಲೋಕಕ್ಕೆ ಬಂದು ಮಾದಿರಾಜ—ಮಾದಾಂಬಿಕೆಯರ ಮಗನಾಗಿ ಹುಟ್ಟಿದನು. ವೃಷಭನನ್ನು ಅಪಮಾನಮಾಡಿದ ದ್ವಾರಪಾಲಕರು ಶಿವನಿಂದ ಶಾಪಗ್ರಸ್ತರಾಗಿ ಬಿಜ್ಜಳ, ಕರ್ಣದೇವರಾಗಿ ಹುಟ್ಟಬೇಕಾಯಿತು. ಮಾದಿರಾಜನ ಮಗನಾದ ಬಸವಣ್ಣ ತನ್ನ ಎಂಟನೆಯ ವಯಸ್ಸಿನಲ್ಲಿ ಒಬ್ಬ ಬ್ರಾಹ್ಮಣ ಬಾಲಕನನ್ನು ಬಾವಿಯಲ್ಲಿ ತಳ್ಳಿದನೆಂಬ ಅಪವಾದವನ್ನು ಹೊತ್ತು, ತನ್ನ ಸೋದರಿಯೊಡನೆ ಕಪ್ಪಡಿ ಸಂಗಮಕ್ಕೆ ಹೋದನು. ಅಲ್ಲಿಂದ ಕಲ್ಯಾಣದ ಸೊಡ್ಡಳ ಬಾಚರಸನ ಆಶ್ರಯದಲ್ಲಿದ್ದು, ಬಿಜ್ಜಳನ ಭಂಡಾರದ ಕರಣಿಕನಾಗಿ, ದೇವಲೋಕದಿಂದ ಬಂದ ದೇವಲಿಪಿಯ ಪತ್ರವನ್ನು ಓದಿದುದರಿಂದ ಬಿಜ್ಜಳನ ಮಂತ್ರಿಯಾದನು. ಬಸವಣ್ಣನಿಗೆ ಬಾಲಸಂಗನೆಂಬ ಒಬ್ಬ ಮಗ ಹುಟ್ಟಿದ. ಕೊನೆಯಲ್ಲಿ ಬಸವಣ್ಣ ಶೂನ್ಯಸಿಂಹಾಸನವನ್ನು ಏರಿ ಮಾಯವಾದ. ಈತನ ತರುವಾಯ ಚನ್ನಬಸವಣ್ಣ ಬಿಜ್ಜಳನ ಮಂತ್ರಿಯಾದ.—ಬಸವಣ್ಣನ ಜೀವನ ಚರಿತ್ರೆಯಲ್ಲಿ ಕಾಣಬರುತ್ತಿರುವ ಈ ರೂಪಾಂತರಗಳು ಸಿಂಗಿರಾಜ ಪುರಾಣಕ್ಕೆ ಪ್ರಾಶಸ್ತ್ಯವನ್ನು ನೀಡಿವೆ.

**ಸುರಂಗ ಕವಿ** (ಸು. ೧೫೦೦) :

ಪುಲಿಗೆರೆಯ ಸಂಗಮವಿಭು-ಮಹದೇವಿಯರ ಮಗನಾದ ಸುರಂಗ ಕವಿ 'ತ್ರಿಷಷ್ಟಿ ಪುರಾತನರ ಚರಿತ್ರೆ'ಯ ಕರ್ತೃ. ಈತನು ಪುಲಿಗೆರೆಯ ಸೋಮನಾಥನ ಭಕ್ತ; ತನ್ನ ಇಷ್ಟ ದೇವತೆಯ ಅಂಕಿತವಲ್ಲಿ ತನ್ನ ಕಾವ್ಯ ವನ್ನು ರಚಿಸಿದ್ದಾನೆ. ಹರಿಹರ ಕವಿಯಂತೆ 'ಮನುಜಸ್ತುತಿಯಂ ಬಿಟ್ಟು ಸುರಂಗಕವಿ ನಾಲಗೆಯಂ ಗಿರೀಶಂಗೆ ಮಾರಿದಂ' ಎಂಬುದು ಈತನ ಧೋರಣೆ. ಈತನು ಹಿಂದಿನ ಹಲವು ಸಂಸ್ಕೃತ ಕವಿಗಳ ಕಾವ್ಯಸೌಂದರ್ಯ ತನ್ನ ಗ್ರಂಥ ದಲ್ಲಿಯೂ ಬಂದು ನೆಲಸಲೆಂದು ಹಾರೈಸಿದ್ದಾನೆ; ಆದರೆ ತನ್ನ ಹಿಂದಿನ ಕನ್ನಡ ಕವಿಯೊಬ್ಬನನ್ನೂ ಸ್ಮರಿಸಿಲ್ಲ. ಮಾರ್ಗೀ ಶೈಲಿಯಲ್ಲಿ ಬರೆಯ ಹೊರಟಿರುವ ಈ ಪಂಡಿತ ಕವಿಗೆ ದೇಶೀಶೈಲಿಯ ಹರಿಹರ ರಾಘವಾಂಕರು ಕೂಡ ಗಮನಾರ್ಹರಲ್ಲವಾದರೇನೊ! 'ಕರ್ಣಾಟಕ ಕವಿ ಚಕ್ರವರ್ತಿ' ಎಂಬ ಬಿರುದನ್ನು ಧರಿಸಿರುವ ಸುರಂಗ ಕವಿಯನ್ನು ಈಚಿನ ಕನ್ನಡ ಕವಿ ಗಳಾರೂ ಸ್ತುತಿಸುವ ಗೋಜಿಗೆ ಹೋಗಿಲ್ಲ. ಹೀಗಾಗಿ, ಕವಿಯ ಕಾಲವನ್ನು ನಿರ್ಧರಿಸುವುದೇ ಕಷ್ಟವಾಗಿದೆ. ಕವಿಚರಿತೆಕಾರರು ಈತನ ಕಾಲವನ್ನು ಸುಮಾರು ೧೫೦೦ ಇದ್ದಿರಬಹುದೆಂದು ಊಹಿಸಿದ್ದಾರೆ. ಕವಿಯು ತನ್ನನ್ನು 'ವರ್ಣಕ ವಸ್ತುಕ ಕವಿಜನ| ಕರ್ಣಾಭರಣಂ ಶಿವೈಕ ಸಮುದಯ ಪೀಯೂ ಷಾರ್ಣವಚಂದ್ರಂ' ಎಂದೂ 'ಸರಸಕವಿತಾನರ್ತಕೀ ನೃತ್ಯರಂಗಂ' ಎಂದೂ 'ಪ್ರತಿಭಟಕವಿವೇಶ್ಯಾ ಭುಜಂಗಂ' ಎಂದೂ ಕರೆದುಕೊಂಡಿದ್ದಾನೆ. ಬ್ರಹ್ಮನು ಜಗತ್ತನ್ನು ಸೃಷ್ಟಿಸಿ, ಸುಖ ದೊರೆಯದೆ ಚೈತ್ರ ಸುಧಾಕರ ನೀರದಗಳ ಜೊತೆಗೆ ಸುರಂಗಕವಿಯನ್ನೂ ಸೃಷ್ಟಿಸಿ ಸುಖವನ್ನು ಪಡೆದನಂತೆ!

'ತ್ರಿಷಷ್ಟಿ ಪುರಾತನರ ಚರಿತ್ರೆ' ಅದರ ಹೆಸರೇ ಸೂಚಿಸುವಂತೆ ತಮಿಳು ನಾಡಿನ ಅರವತ್ತುಮೂವರು ಶಿವಭಕ್ತರ ಕಥೆಗಳನ್ನು ಒಳಗೊಂಡಿದೆ. ಒಬ್ಬೊಬ್ಬ ಭಕ್ತನಿಗೆ ಒಂದು ಅಧ್ಯಾಯದಂತೆ ಇದರಲ್ಲಿ ಅರವತ್ತುಮೂರು ಅಧ್ಯಾಯಗಳಿವೆ. ಇಲ್ಲಿನ ಪುರಾಣಪುರುಷರ ಕಥೆಯನ್ನು ಉಪಮನ್ಯುಮುನಿ ಕಣಾದನಿಗೆ ಹೇಳಿದನಂತೆ! ಲೈಂಗ್ಯ ಪುರಾಣದಲ್ಲಿ ಉಕ್ತವಾಗಿರುವ ಈ ಕಥೆ ಯನ್ನು ಅನುಸರಿಸಿ ತಾನು ಬರೆಯುತ್ತಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ತನ್ನ ಕಾವ್ಯವು

ಅಲರ್ಗಳ ಕಂಪಿನಂತೆ, ಮಿಳಿರ್ದಾಡುವ ತುಂಬಿಯ ಬಂಬಲಂತೆ ತಂ
ಬೆಲರಿನ ಪೆರ್ಮೆಯಂತೆ, ತನಿವಣ್ಗಳಿನೊಪ್ಪುವ ಮಾವಿನಂತೆ ಪಂ
ಬಲಿಸುತೆ ಕಳ್ದುನೋಡುವೆಳೆವೆಂಡಿರ ಕಣ್ಮಲರಂತೆ ಬಲ್ಲರಂ
ನಲವಿನೊಳಿಯ್ದೆ ಸೋಲಿಪುದು ಕಬ್ಬಿಗರಾಳ್ದನ ಕಬ್ಬದೆಳ್ತರಂ

ಎನ್ನುತ್ತಾನೆ, ಕವಿ. ತನ್ನ ಕಾವ್ಯದಲ್ಲಿ ಹದಿನೆಂಟು ಕಾವ್ಯಾಂಗಗಳನ್ನೂ ವರ್ಣಿಸುವುದಾಗಿ ಹೇಳಿಕೊಂಡು, ಅಷ್ಟಕ್ಕೂ ಅವಕಾಶ ಕಲ್ಪಿಸಿದ್ದಾನೆ. ಚಂಪೂ ಮಾರ್ಗದಲ್ಲಿ ಕಾವ್ಯಸೃಷ್ಟಿಗೆ ಕೈಹಾಕಿರುವ ಕವಿ ಇದನ್ನು ನಿರ್ವಹಿಸ ಹೊರಟಿರುವುದು ಸಹಜವಾಗಿಯೇ ಇದೆ. ಸುರಂಗ ಕವಿ ಒಳ್ಳೆಯ ಕಥೆಗಾರ; ಹಿತಮಿತವಾಗಿ, ಮನೋಹರವಾಗಿ ಕಥೆಯನ್ನು ಹೇಳಬಲ್ಲ. ಅಪೂರ್ವವಾದ ಕೆಲವು ವೃತ್ತಗಳನ್ನೂ ಗುಣಿತಾಕ್ಷರಿಯೇ ಮೊದಲಾದ ಕೆಲವು ಶಬ್ದಾಲಂಕಾರಗಳ ಗಾರುಡಿಗತನವನ್ನೂ ತನ್ನ ಕಾವ್ಯದಲ್ಲಿ ಪ್ರದರ್ಶಿಸ ಹೊರಟಿರುವನಾದರೂ ಆತನಿಗೆ ಪಾಂಡಿತ್ಯಪ್ರದರ್ಶನದ ಗೀಳು ಹೆಚ್ಚಾಗಿಲ್ಲ; ನಿರಾಡಂಬರವಾದ ಸರಳ ಸುಂದರ ಶೈಲಿಯಲ್ಲಿ ಕಥೆಯನ್ನು ಹೃದಯಂಗಮವಾಗಿ ಹೇಳುವುದರಲ್ಲಿ ಆತನಿಗೆ ಆಸಕ್ತಿ ಹೆಚ್ಚು. ಅಪೂರ್ವವಾದ ಹಲವು ಶಬ್ದಗಳನ್ನು ತನ್ನ ಕಾವ್ಯದಲ್ಲಿ ಪ್ರಯೋಗಿಸಿರುವುದನ್ನು ನೋಡಿದರೆ ಆತನ ಶಬ್ದ ಸಂಪತ್ತೂ ಬಹು ದೊಡ್ಡದಿರಬೇಕೆನ್ನಿಸುತ್ತದೆ. ಸುರಂಗಕವಿ ತನ್ನ ಹಿಂದಿನ ಕನ್ನಡಕವಿಗಳಾರನ್ನೂ ಸ್ಮರಿಸಿಲ್ಲವಾದರೂ ಆತನು ಹರಿಹರದೇವನಿಗೆ ಸಾಕಷ್ಟು ಋಣಿಯಾಗಿದ್ದಾನೆ. ಅನೇಕ ಕಡೆ ಆತನು ಹರಿಹರಕವಿಯ ಭಾವ ಭಾಷೆಗಳನ್ನು, ವರ್ಣನಾ ವಿಧಾನವನ್ನು ಅನುಕರಿಸಿದ್ದಾನೆ, ಅನುಸರಿಸಿದ್ದಾನೆ; ಆದರೆ ಹರಿಹರನ ರಸಜ್ಞತೆ ಈತನಲ್ಲಿ ಇಲ್ಲ. ಹರಿಹರ ಕವಿಯನ್ನು ಸುರಂಗಕವಿ ಹೇಗೆ ಅನುಕರಿಸಿರುವನೆಂಬುದಕ್ಕೆ ಒಂದು ಸಣ್ಣ ಉದಾಹರಣೆ—ಹರಿಹರನು ತನ್ನ ಕಂದಪದ್ಯಗಳ ಸೊಗಸನ್ನು ಹೇಳುತ್ತಾ

ಕಂದಂಗಳಮೃತಲತಿಕಾ | ಕಂದಂಗಳನೂನವಾಕ್ಯ ಫಲ ವಿಲಸನ್ಮಾ
ಕಂದಂಗಳ್ ತನಿರಸದು | ಕ್ಕಂದಂಗಳ್ ಸೊಗಯಿಸಿರ್ಪುವೀ ನುತ
ಕೃತಿಯೊಳ್

ಎಂದು ಹೇಳಿದ್ದಾನೆ. ಸುರಂಗಕವಿ ತನ್ನ ಕಂದಪದ್ಯಗಳನ್ನು ಕುರಿತು

ಕಂದಂಗಳ್ ವಾಗ್ವನಿತೆಯ | ಕಂದಂಗಳ್ ಸಭ್ಯನವ್ಯಕಾವ್ಯಲಸನ್ನಾ
ಕಂದಂಗಳ್ ನವರಸದು | ಕ್ಕಂದಗಳೆನಲ್ಕೆ ಕವಿಸುರಂಗಂ ಪೇಳ್ದಂ ||

ಎಂದು ಹೇಳುತ್ತಾನೆ. ಈತನ ಕಾವ್ಯದ ಅನೇಕ ಭಾಗಗಳಲ್ಲಿ ಇಂತಹ ಅನುಕರಣ ಕಂಡುಬರುವುದಾದರೂ ಕವಿ ಹರಿಹರನ ಹೆಸರನ್ನೆ ಎತ್ತದಿರುವುದು ಆಶ್ಚರ್ಯ, ಅನ್ಯಾಯ.

**ಗುಬ್ಬಿಯ ಮಲ್ಲಣಾರ್ಯ (೧೫೧೩) :**

'ಭಾವಚಿಂತಾರತ್ನ', 'ವೀರಶೈವಾಮೃತ ಪುರಾಣ', 'ಪುರಾತನ ರಗಳೆ'—ಎಂಬ ಗ್ರಂಥತ್ರಯದಿಂದ ಸುಪ್ರಸಿದ್ಧನಾಗಿರುವ ಮಲ್ಲಣಾರ್ಯನು ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿದ್ದವನು. ಈತನ ಸ್ಥಳ ತುಮಕೂರು ಜಿಲ್ಲೆಯಲ್ಲಿರುವ ಗುಬ್ಬಿ; ಇದಕ್ಕೆ ಪುರಾಣಗಳಲ್ಲಿ ಅಮರಗುಂಡವೆಂಬ ಹೆಸರಿದೆ. ವೀರಶೈವ ಶರಣರಲ್ಲಿ ಪ್ರಖ್ಯಾತನಾದ ಅಮರಗುಂಡದ ಮಲ್ಲಿಕಾರ್ಜುನನಿದ್ದ ಸ್ಥಳವಂತೆ ಅದು ! ಆ ಶರಣನು ತನ್ನ ಭಕ್ತರಿಗೆ ಹೇಳುತ್ತಿದ್ದ ಶಿವಪುರಾಣವನ್ನು ಕೇಳಲು ದಿನವೂ ಎರಡು ಗುಬ್ಬಿಗಳು ಬರುತ್ತಿದ್ದವಂತೆ! ಕೆಲವು ದಿನಗಳಾದ ಮೇಲೆ ಪುರಾಣವು ಮುಗಿದುಹೋಗಲು, ಅವೆರಡೂ ಅಲ್ಲಿಯೇ ಮಲಗಿ, ತಮ್ಮ ಪ್ರಾಣವನ್ನು ಬಿಟ್ಟವಂತೆ! ಅಂದಿನಿಂದ ಆವೂರಿಗೆ 'ಗುಬ್ಬಿ'ಯೆಂದು ಹೆಸರಾಯಿತಂತೆ! ಇದು ಸ್ಥಳಪುರಾಣ. ಮಲ್ಲಿಕಾರ್ಜುನನ ಶಿಷ್ಯಕೋಟಿಯಲ್ಲಿ ಗುರಭಕ್ತನೆಂಬುವನು ಬಹು ಪ್ರಸಿದ್ಧ. ಈತನು ಶಿವಸಾಯುಜ್ಯವನ್ನು ಪಡೆಯಲು ಶೂಲವನ್ನು ಏರಿದನಂತೆ! ಇವನ ವಂಶದವರೆಲ್ಲರೂ ಪರಮ ಭಗವದ್ಭಕ್ತರೇ. ಅವರಲ್ಲಿ ಒಬ್ಬನಾದ ನಾಗನಾಥಾಚಾರ್ಯನು ತನ್ನ ಭಕ್ತಿಯಿಂದ ಶಿವನೊಡನೆ ಸಂಭಾಷಿಸುತ್ತಿದ್ದನಂತೆ! ಮತ್ತೊಬ್ಬ ಕಾಳಸರ್ಪವನ್ನು ಶಿವನಿಗೆ ಕೊಡೆಯಾಗಿ ಹಿಡಿದಿದ್ದನಂತೆ! ಇಂತಹ ಶರಣ ಪರಂಪರೆಯನ್ನು ಪಡೆದ ವಂಶದಲ್ಲಿ ಮಲ್ಲಣ್ಣನೆಂಬುವನು ಜನಿಸಿ, ಪರಮ ಭಕ್ತನಾಗಿದ್ದುದಲ್ಲದೆ 'ಗಣ ಭಾಷ್ಯ ರತ್ನಮಾಲೆ', 'ವಾತೂಲ ತಂತ್ರಟೀಕೆ'—ಎಂಬ ಎರಡು ಉದ್ಗ್ರಂಥಗಳನ್ನು ರಚಿಸಿ, ಅದ್ಭುತಮೇಧಾವಿಯೆಂಬ ಕೀರ್ತಿಗೆ ಪಾತ್ರನಾಗಿದ್ದನು. ಆತನ 'ಗಣ ಭಾಷ್ಯ ರತ್ನಮಾಲೆ' ಯೆಂಬುದು ಪುರಾತನ ವಚನಗಳ ಸಂಗ್ರಹ; ಸುಮಾರು ಒಂದು ಸಹಸ್ರ ವಚನಗಳನ್ನು ತೆಗೆದುಕೊಂಡು, ಆ ವಚನಗಳನ್ನು ಇಲ್ಲಿ ಸ್ಥಲಗಳಾಗಿ ವಿಂಗ

ಡಿಸಲಾಗಿದೆ. ಪ್ರತಿಯೊಂದು ಸ್ಥಲದ ಆರಂಭದಲ್ಲಿಯೂ ಆಯಾ ಸ್ಥಲದ ಲಕ್ಷಣಗಳನ್ನು ವೇದಾಗಮಾದಿ ಆಧಾರಗಳನ್ನು ಉದ್ಧರಿಸಿ ಸಂಸ್ಥಾಪಿಸಿದಮೇಲೆ ಪುರಾತನರ ವಚನವನ್ನು ಉದಾಹರಣೆಯಾಗಿ ಕೊಡುತ್ತಾನೆ. ತಿಳಿಯಾದ, ಸರಳವಾದ ಆತನ ಭಾಷೆ ವಚನ ವಾಙ್ಮಯದ ಸೇವೆಯನ್ನು ಮಾಡಿ ಸಾರ್ಥಕಗೊಂಡಿದೆ. ಆತನ 'ವಾತೂಲ ತಂತ್ರ ಟೀಕೆ'ಯು 'ವಾತೂಲ'ವೆಂಬ ಶೈವಾಗಮಕ್ಕೆ ಬರೆದ ಟೀಕೆ. ಈ ಎರಡು ಗ್ರಂಥಗಳಿಂದ ಮಲ್ಲಣನಿಗೆ ಶಾಸ್ತ್ರಾಗಮಗಳಲ್ಲಿದ್ದ ಅಪಾರವಾದ ಪಾಂಡಿತ್ಯ ವ್ಯಕ್ತವಾಗುವುದಲ್ಲದೆ, ವೀರಶೈವದ ತತ್ವಗಳು ಶಾಸ್ತ್ರೀಯವಾಗಿ, ಆಧಾರಸಹಿತ ಪ್ರತಿಪಾದಿತವಾದಂತಾಗಿದೆ. ಈ ಮೇಧಾವಿಯಾದ ಮಲ್ಲಣನ ಮೊಮ್ಮಗನೇ ಗುಬ್ಬಿಯ ಮಲ್ಲಣಾರ್ಯ.

ಮಲ್ಲಣಾರ್ಯನ ತಂದೆ ಗುರುಭಕ್ತ, ತಾಯಿ ಸಪ್ಪೆಯಮ್ಮ. ಈ ಶರಣ ದಂಪತಿಗಳಿಂದ ಸದ್ಭಕ್ತಿ ಈತನಲ್ಲಿ ಸ್ವಾಭಾವಿಕವಾಗಿಯೇ ಅಂಕುರಿಸಿತ್ತು; ಅದಕ್ಕೆ ನೀರೆರೆದು, ಬೆಳಸಿ, ಫಲಭರಿತವಾಗುವಂತೆ ಮಾಡಿದ ಕೀರ್ತಿ ಗುರುಸಿದ್ಧಮಲ್ಲೇಶನಿಗೆ ಸಲ್ಲಬೇಕು. ಈತನು ಬಹುಶಃ ತೋಂಟದ ಸಿದ್ಧಲಿಂಗಯತಿಯ ಶಿಷ್ಯನಾದ ಸಿದ್ಧಮಲ್ಲೇಶನೇ ಇರಬೇಕು. ಆಧ್ಯಾತ್ಮಿಕಕ್ಕೆ ಈತನು ಗುರುವಾಗಿ ದೊರೆತಂತೆ ಲೌಕಿಕವಿದ್ಯೆಗೆ ಗುಮ್ಮಳಾಪುರದ ಶಾಂತಮಲ್ಲೇಶನು ದೊರೆತನು. ಇದರ ಫಲವಾಗಿ ಕವಿಯ ಸುಪ್ತಶಕ್ತಿಗಳು ಅರಳಿ ಆತನ ಕಾವ್ಯತ್ರಯದ ರೂಪದಲ್ಲಿ ಕಾಣಿಸಿಕೊಂಡವು. ಈ ಗ್ರಂಥಗಳಲ್ಲಿ ಕೊನೆಯದಾಗಿ ಹೆಸರಿಸಿರುವ 'ಪುರಾತನ ರಗಳೆ' ಈಗ ಉಪಲಬ್ಧವಾಗಿಲ್ಲ. ಉಳಿದೆರಡು ಕಾವ್ಯಗಳಲ್ಲಿಯೇ ಆತನ ದೈವಭಕ್ತಿ, ಅಧ್ಯಾತ್ಮಜ್ಞಾನಗಳು ಸ್ಪಷ್ಟವಾಗಿ ವ್ಯಕ್ತಗೊಂಡಿರುವುದನ್ನು ನಾವು ಕಾಣಬಹುದು. ಕವಿಯು ಬಹುಮಟ್ಟಿಗೆ ಆಧ್ಯಾತ್ಮಿಕವಾತಾವರಣದಲ್ಲಿಯೇ ಉಸಿರಾಡುತ್ತಿದ್ದನೆಂದು ತೋರುತ್ತದೆ. ಬಸವಪುರಾಣವನ್ನು ಓದಿ ಜನರಿಗೆ ಅರ್ಥಹೇಳುವುದೇ ಆತನ ಕಾಯಕವಾಗಿತ್ತೊ ಏನೋ! ಆತನು 'ಬಸವಪುರಾಣದ ಮಲ್ಲಣಾರ್ಯ'ನೆಂದೇ ಪ್ರಸಿದ್ಧನಾಗಿದ್ದನು. ಆತನ ವಾಗ್ವೈಖರಿಯನ್ನು ಕಂಡು, ಶಿವಪೂಜೆಯಾರ್ಯನೆಂಬುವನು ಕಾವ್ಯರಚನೆಗೆ ಪ್ರೇರಣೆಯನ್ನು ನೀಡಿದನೆಂದು ತೋರುತ್ತದೆ. ಆತನು ಮಲ್ಲಣಾರ್ಯನನ್ನು ಕುರಿತು—ಎಲೆ ಮಲ್ಲಣಾರ್ಯ,

ನಿನ್ನ ಪಿತಾಮಹ ಗಣಭಾಷ್ಯ ರತ್ನಮಾಲೆಯನ್ನು ರಚಿಸಿದ; ನೀನು 'ಸತ್ಯೇಂದ್ರಚೋಳ ಭೂಲಲನಾಧಿಪನ ಕೃತಿಯನೊರೆ' ಎಂದು ಹೇಳಿದ ನಂತೆ. ಆತನ ಅಪ್ಪಣೆಯಂತೆ ಕವಿಯು 'ಪ್ರಣವ ಪಂಚಾಕ್ಷರಿಯ ಮಹಿಮೆ ಯಂ ತಿಳಿಪೆ, ಸದ್ಗುಣಿಯಪ್ಪ ಸತ್ಯೇಂದ್ರಚೋಳ ಭೂಪನ ಕಥಾಭಣಿತೆಯಂ ದ್ರಾವಿಡದೊಳೊರೆದುದಂ ಕನ್ನಡದಿ' ಹೇಳಹೊರಟ. ಅದೇ ಭಾವಚಿಂತಾ ರತ್ನ. ಇದನ್ನು ಕ್ರಿ. ಶ. ೧೫೧೩ರಲ್ಲಿ ಬರೆದುದಾಗಿ ಕವಿಯ ಹೇಳಿಕೆಯಿಂದ ಗೊತ್ತಾಗುತ್ತದೆ. ತನ್ನ ಕಾವ್ಯವು ಜನಪ್ರಿಯವಾದುದನ್ನು ಕಂಡ ಕವಿ ಹುರಿ ಗೊಂಡು ತನ್ನ ಎರಡನೆಯ ಗ್ರಂಥ 'ವೀರಶೈವಾಮೃತ ಪುರಾಣ'ವನ್ನು ಕ್ರಿ. ಶ. ೧೫೩೦ರ ವೇಳೆಗೆ ಬರೆದು ಮುಗಿಸಿದನು.

'**ಭಾವ ಚಿಂತಾರತ್ನ**' ವಾರ್ಧಕಷಟ್ಪದಿಯ ೩೭೧ ಪದ್ಯಗಳನ್ನು ಒಳಗೊಂಡಿದೆ. "ಕೃತಿಯ ಪಲ್ಲವ ತೊಡಗಿ ಪೂರ್ಣಮಪ್ಪನ್ನಮೀ | ಕೃತಿ ಯೊಳುತ್ಪ್ರೇಕ್ಷೆಯಿಲ್ಲದುದೊಂದು ಪದನಿಲ್ಲ | ಕೃತಿಗದು ನಿಮಿತ್ತದಿಂ 'ಭಾವ ಚಿಂತಾರತ್ನ'ಮೆಂಬ ಪೆಸರು" ಎಂಬುದು ಕವಿಯ ಹೇಳಿಕೆ. ಇದಕ್ಕೆ 'ಸತ್ಯೇಂದ್ರ ಚೋಳನ ಕಥೆ'ಎಂಬ ಮತ್ತೊಂದು ಹೆಸರೂ ಇದೆ. ಇದು ಚೋಳದೇಶ ಅಥವಾ ತಮಿಳು ನಾಡಿಗೆ ಸಂಬಂಧಿಸಿದ ಕಥೆ. ಆ ದೇಶದ ರಾಜಕುಮಾರನು ವೈಹಾಳಿಗೆಂದು ಹೊರಟವನು, ಆಕಸ್ಮಾತ್ತಾಗಿ ಶಂಕರ ನೆಂಬ ಶಿವಭಕ್ತ ಬಾಲಕನ ಮೇಲೆ ಕುದುರೆಯನ್ನು ಹರಿಸಿ, ಅವನ ಸಾವಿಗೆ ಕಾರಣನಾಗುತ್ತಾನೆ. ಆ ಮಗುವಿನ ತಾಯಿಯಾದ ತಿರುಕೊಳವಿನಾಚಿ ಎಂಬ ಶರಣೆಯು ರಾಜನಲ್ಲಿ ದೂರು ಕೊಡುತ್ತಾಳೆ. 'ತಲೆಗೆ ತಲೆ' ಎಂಬ ತತ್ವವನ್ನು ಸ್ವೀಕರಿಸಿದ ರಾಜನು ತನ್ನ ಮಗನನ್ನು ಕೊಲ್ಲುವಂತೆ ಸಂಪಾಯಿ ಯೆಂಬ ಸೇವಕನನ್ನು ನೇಮಿಸುತ್ತಾನೆ. ಅವನು ರಾಜಾಜ್ಞೆಯನ್ನು ನೆರ ವೇರಿಸಿ, ತನ್ನ ತಲೆಯನ್ನೂ ಕತ್ತರಿಸಿಕೊಳ್ಳುತ್ತಾನೆ. ಪಂಚಾಕ್ಷರಿಯನ್ನು ಉಚ್ಚರಿಸುತ್ತಾ ಕೆಳಗುರುಳಿದ ಅವನ ತಲೆಯೊಡನೆ ರಾಜಕುಮಾರ ಮತ್ತು ಶಿವಭಕ್ತಕುಮಾರ ಶಂಕರರ ತಲೆಗಳೂ ಪಂಚಾಕ್ಷರಿಯನ್ನು ಜಪಿಸುತ್ತವೆ. ಇದನ್ನು ಕಂಡು ತಿರುಕೊಳವಿನಾಚಿ, ತನ್ನ ತಲೆಯನ್ನು ಕತ್ತರಿಸಿಕೊಳ್ಳು ತ್ತಾಳೆ. ಹೀಗೆಯೇ ಒಟ್ಟು ಏಳು ತಲೆಗಳು ನೆಲಕ್ಕುರುಳಿ ಪಂಚಾಕ್ಷರಿಯನ್ನು ಜಪಿಸುತ್ತಿರುತ್ತವೆ. ಕಡೆಗೆ ರಾಣಿಯ ಸರದಿ ಬಂದಾಗ ಶಿವನು ಪ್ರತ್ಯಕ್ಷನಾಗಿ

ಎಲ್ಲರಿಗೂ ಕೈಲಾಸಪದವಿಯನ್ನು ನೀಡುತ್ತಾನೆ. ತಿರುಜ್ಞಾನ ಸಂಬಂಧೀಶನೆಂಬ ಶಿವಶರಣನು ಜಿನಮತ ವಿದಾರಣಂಗೈದು, ಹದಿನೈದು ಸಹಸ್ರ ತಿರುಪಾಡುಗಳನ್ನು ಹಾಡುತ್ತಾ ಕುಲಚ್ಚರೆ ಎಂಬ ಶಿವಭಕ್ತಳಿಗೆ ಈ ಕಥೆಯನ್ನು **ಹೇಳಿದನಂತೆ.**

ಪಂಚಾಕ್ಷರಿಯ ಮಹಿಮೆಯನ್ನು ಸಾರಲೆಂದು ಹೊರಟಿರುವ ಈ ಕಾವ್ಯದಲ್ಲಿ ಕವಿಯು ಉತ್ಪ್ರೇಕ್ಷೆಯಿಲ್ಲದ ಒಂದು ಪದ್ಯವನ್ನೂ ಬರೆಯುವುದಿಲ್ಲವೆಂದು ಪ್ರತಿಜ್ಞೆಮಾಡಿ ಹೊರಟಿರುವುದು, ಶಿವಪೂಜೆಗೆ ಹೊರಟವನು ಕಿರೀಟ ಭುಜಕೀರ್ತಿಗಳನ್ನು ಧರಿಸಿದಂತಾಗಿದೆ. ಭಕ್ತಿರಸ ಪ್ರಧಾನವಾದ ಈ ಕಥನಕಾವ್ಯವು ಅನೇಕವೇಳೆ ಜನಸಾಮಾನ್ಯನಿಗೆ ಎಟುಕದಷ್ಟು ಪ್ರೌಢವಾಗಿದೆ. ಇದರ ಜೊತೆಗೆ ಕಥಾಸಂವಿಧಾನದಲ್ಲಿ ಸ್ವಲ್ಪ ಮಟ್ಟಿಗೆ ಒರಟುತನವೂ ಕಂಡುಬರುತ್ತದೆ. ಶಿವನಿಂದ ಆಜ್ಞಪ್ತನಾದ ಬ್ರಹ್ಮನು ಷಣ್ಮುಖನಿಗೆ ಪಾಠಹೇಳ ಹೊರಟು, ಪ್ರಣವಕ್ಕೆ ಅರ್ಥವನ್ನು ಹೇಳಲಾರದೆ ಶಿಷ್ಯನಿಂದ ಭಂಗಿತನಾದನು. ಇದನ್ನು ಅರಿತ ಪರಶಿವನು ಮಗನನ್ನು ಕುರಿತು—ಪ್ರಣವಕ್ಕೆ ಅರ್ಥವೆಷ್ಟಯ್ಯ? ಎಂದು ಕೇಳಿ, ಹನ್ನೆರಡು ಕೋಟಿ—ಎಂಬ ಉತ್ತರವನ್ನು ಪಡೆದು 'ಚಪಲ, ಪೇಳ್' ಎಂದನಂತೆ. ಆಗ ಆ ಮಗ 'ಗದ್ದುಗೆಯನಿಳಿ ತಂದೆ, ಆಂ ಮೇಲಿರ್ದು ಪೇಳ್ವೆನ್' ಎಂದನಂತೆ! ಆಗ ಪರಶಿವನು 'ಕಡು ಮುಳಿಸಿನಿಂದೆ, ಹದಿನಾರು ಸಾಹಿರ ಜನ್ಮದಲ್ಲಿ ಪುಟ್ಟೆಂದು ಗುಹನಂ ಶಪಿಸಿದಂ.' ಮುಳಿಸು ತಿಳಿದಮೇಲೆ ಶಿವನು 'ಶಾಪವೆನ್ನವರಿಗುಂಟೆ?' ಎಂದು ಸಮಾಧಾನ ಮಾಡುವನಾದರೂ, ಈ ತಂದೆ ಮಕ್ಕಳ ಚಿತ್ರಣ ಒರಟುತನದ ಅಂಚಿನಲ್ಲಿಯೇ ನಿಂತಿದೆ. ರಾಜಾಜ್ಞೆಯನ್ನು ನೆರವೇರಿಸ ಹೊರಟ ಸುಂದಾಯಿಯ ಚಿತ್ರವೂ ಹಾಗೆಯೇ. ಇದೇ ಕಥೆಯನ್ನು, ಮಲ್ಲಣಾರ್ಯನಿಂದಲೇ ಎತ್ತಿಕೊಂಡಿರುವ ಷಡಕ್ಷರ ಕವಿಯು ತನ್ನ 'ರಾಜಶೇಖರ ವಿಲಾಸ'ದಲ್ಲಿ ಕವಿಸಹಜವಾದ ನಿರಂಕುಶ ಮತಿಯನ್ನು ಮೆರೆದು, ಇಲ್ಲಿನ ಓರೆಕೋರೆಗಳನ್ನೆಲ್ಲಾ ತಿದ್ದಿ ಹೇಗೆ ನೇರ್ಪುಗೊಳಿಸಿರುವನೆಂಬುವುದನ್ನು ನೋಡಬಹುದು. ಮಲ್ಲಣಾರ್ಯನು ಹಿಂದಿನ ಇತಿಹಾಸದಲ್ಲಿ ಸ್ವಾತಂತ್ರ್ಯ ವಹಿಸಲು ಹಿಂಜೆಗೆದನೆಂದು ತೋರುತ್ತದೆ.

ಮಲ್ಲಣಾರ್ಯನು ಒಳ್ಳೆಯ ಕತೆಗಾರ. ಆತನು ಕಥನಕಾವ್ಯದ ಸ್ವರೂಪ

ವನ್ನು ಬಲ್ಲವನು. ಆದ್ದರಿಂದಲೇ ವರ್ಣನೆಗಳಿಂದ ಕಥೆಯ ಓಟಕ್ಕೆ ಕುಂದನ್ನು ತಂದಿಲ್ಲ. ತಾನು ಹೇಳಹೊರಟಿರುವ ಕಥೆಯ ಮೇಲೆಯೇ ದೃಷ್ಟಿಯಿಟ್ಟು, ಅದನ್ನು ನೇರವಾಗಿ ಅದರ ಗುರಿಯತ್ತ ಕೊಂಡೊಯ್ದಿದ್ದಾನೆ. ಆತನ ವರ್ಣನೆಗಳು ಔಚಿತ್ಯಕ್ಕೆ ಅಪಚಾರವಾಗದಂತೆ ಹಿತಮಿತವಾಗಿ ಕಾಣಿಸಿಕೊಂಡಿವೆ. ಭಾವಚಿಂತಾರತ್ನದಲ್ಲಿ ಭಕ್ತಿರಸವೇ ಪ್ರಧಾನವಾದುದು. ಅದಕ್ಕೆ ಪೋಷಕವಾಗಿಯೇ ಶೃಂಗಾರ ಕರುಣ ಹಾಸ್ಯಗಳು ಸ್ವಲ್ಪಮಟ್ಟಿಗೆ ಪ್ರತಿಪಾದಿತವಾಗಿವೆ. ತಿರುಕೊಳವಿನಾಚಿಯ ಪುತ್ರಶೋಕದ ಪ್ರಲಾಪವು ಕಲ್ಲು ಕರಗುವಷ್ಟು ಕರುಣಾಮಯವಾಗಿದೆ. ಅಂಗಳದಲ್ಲಿ ಆಡುತ್ತಿದ್ದ ತನ್ನ ಮಗ ಎಲ್ಲಿ ಹೋದನೆಂದು ಕಳವಳಗೊಳ್ಳುತ್ತಿದ್ದ ಆಕೆ, ರಾಜಕುಮಾರನ ಖುರಪುಟಕ್ಕೆ ಸಿಕ್ಕಿ ಕೂಸೊಂದು ಮಡಿಯಿತೆಂದು ಕೇಳಿದಾಗ

ಮುತ್ತಿರ್ದ ಜನವ ಬಗಿದೊಳಪೊಕ್ಕು ಪರಿವುತಿಹ
ನೇತ್ರರಂ ರುಂಡಮಂ ಮುಂಡಮಂ ಕಂಡು ಹಾ
ಮತ್ತನುಜ! ಹಾ ಕಂದ! ಹಾ ಮುದ್ದುಮಗನೆ! ಹಾ! ಹಾ!
ಕೆಟ್ಟೆನೆಂದೊರಲುತೆ
ಎತ್ತಿಕೊಂಡಾ ತಲೆಯನೆರ್ದೆಯ ಗುಂಡಿಗೆಯೊಳವು
ದೊತ್ತಿ ಶಿವಧೊ ಎಂದು ತನುವನಿಳೆಗೀಡಾಡಿ
ಮತ್ತೆದ್ದು ಬಿದ್ದು ಹೊರಳುತ್ತ ದುಃಖದ ಕಡಲನೀಸಾಡುವಂತಿರ್ದಳು||

ಆಕೆಯ ಹಂಬಲ, ರೋದನ ಹೃದಯವಿದ್ರಾವಕವಾಗಿದೆ. ತಾಯಿಯ ಪಾತ್ರದ ಚಿತ್ರಣದಲ್ಲಿ ಕವಿ ಕೃತಕೃತ್ಯನಾಗಿದ್ದಾನೆ.

ಮಲ್ಲಣಾರ್ಯನ ಎರಡನೆಯ ಗ್ರಂಥ 'ವೀರಶೈವಾಮೃತ ಪುರಾಣ'ವೂ ವಾರ್ಧಕಷಟ್ಪದಿಯಲ್ಲಿದೆ. ಸುಮಾರು ೭೧೦೦ ಪದ್ಯಗಳನ್ನು ಒಳಗೊಂಡ ಈ ಬೃಹದ್ಗ್ರಂಥವು ವೀರಶೈವ ಸಿದ್ಧಾಂತದ ಒಂದು ವಿಶ್ವಕೋಶದಂತಿದೆ. ವೀರಶೈವ ಪುರಾಣಗಳಲ್ಲಿ ಸಾಮಾನ್ಯವಾಗಿ ಕಾಣಬರುವ ಶಿವನ ಪಂಚವಿಂಶತಿ ಲೀಲೆಗಳೂ ನೂತನಪುರಾತನ ಶಿವಶರಣರ ಕಥೆಗಳೂ ಅಷ್ಟಾವರಣ ಮಹಿಮೆ, ಷಟ್‌ಸ್ಥಲ ಸಿದ್ಧಾಂತ ಇತ್ಯಾದಿ ವೀರಶೈವ ಮತತತ್ವಗಳೂ ಇಲ್ಲಿ ಪ್ರತಿಪಾದಿತವಾಗಿವೆ. ತತ್ವಪ್ರದಿಪಾದನೆಗೆ ವೇದ ಪುರಾಣ ಶಾಸ್ತ್ರಾಗಮಾದಿಗಳ ಆಧಾರಗಳು ಉಧೃತವಾಗಿವೆ. ಇಲ್ಲಿನ ನೂತನ ಪುರಾತನರ ಕಥೆಗಳನ್ನು ಲಕ್ಕಣ್ಣ

ದಂಡೇಶನ 'ಶಿವತತ್ವ ಚಿಂತಾಮಣಿ'ಯಿಂದ ತೆಗೆದು ಸಂಗ್ರಹಿಸಿರುವುದಾಗ್ನಿ ಕವಿ ಹೇಳಿಕೊಂಡಿದ್ದಾನೆ. ಭಾವಚಿಂತಾರತ್ನವನ್ನು ಬರೆಯಲು ಶಿವಪೂಜೆ ಯಾರ‍್ಯನು ಪ್ರೇರಕನಾಗಿರುವಂತೆ ವೀರಶೈವಾಮೃತ ಪುರಾಣವನ್ನು ರಚಿಸಲ ಹಲಗೆಯಾಚಾರ‍್ಯನೆಂಬ ಮಹಾಪುರುಷನು ಪ್ರೇರಕನಾದನು. ಆತನು ತನ ಶಿಷ್ಯನಾದ ಕೆಂಚವೀರನೆಂಬುವನಿಗೆ ಬೋಧಿಸಿದ ಉಪದೇಶವನ್ನು ಪದ್ಯ ರೂಪವಾಗಿ ರಚಿಸುವಂತೆ ಮಲ್ಲಣಾರ‍್ಯನಿಗೆ ಹೇಳಿದನಂತೆ. ಆತನ ಆಜ್ಞಾನು ಸಾರವಾಗಿ ಕವಿ ಈ ಗ್ರಂಥವನ್ನು ರಚಿಸುತ್ತಿರುವುದಾಗಿ ಹೇಳಿಕೊಂಡಿದ್ದಾನೆ. ಈ ಕಾವ್ಯರಚನೆಯ ಕಾಲದಲ್ಲಿ ಶಿವಗಂಗೆಯ ಶಾಂತನಂಜೇಶನು ಕವಿಯ ಗುರುವಾಗಿದ್ದನೆಂದು ಕಂಡುಬರುತ್ತದೆ.

ವೀರಶೈವಾಮೃತ ಪುರಾಣವು ಧರ್ಮಗ್ರಂಥವಾದರೂ ಕಾವ್ಯಧರ್ಮ ದಿಂದ ವಂಚಿತವಾಗಿಲ್ಲ. ಧರ್ಮಾನುರಾಗದೊಡನೆ ಕಾವ್ಯದೃಷ್ಟಿಯೂ ಸೇರಿರು ವುದರಿಂದ ಇದು ತತ್ವಾನ್ವೇಷಕರಂತೆ ಕಾವ್ಯಪ್ರೇಮಿಗಳಿಗೂ ಪ್ರಿಯವಾಗಿದೆ. ಸಾವು ಸಮನಿಸಿದಾಗ ಮಾನವನ ಮನದಳಲನ್ನು ಎಷ್ಟು ಕವಿ ಮಾರ್ಮಿಕ ವಾಗಿ ಚಿತ್ರಿಸಿದ್ದಾನೆ ನೋಡಿ

ನೆಲದಲಿರ್ದಾತನಾ ಮಂಚಮಂ ಬಯಸುವಂ
ಸಲೆ ಖಟ್ಟದಿಂದಿಳೆಯ ನೆಳಸುವಂ ಪುದಿದಿರ್ದ
ಮಲ ಮೂತ್ರದಿಂ ವಿವಸ್ತ್ರದೆ ಲಜ್ಜೆಯಂ ತೊರೆಯುತಿರ್ದೆಕೊರಲ್ಗಳ್ಳ ಮೊಣಗುತ
ಸಲಿಲಮಂ ಬಯಸುತ್ತಲಂತಪ್ಪ ಬಾಧೆಯೊಳು
ಸಲೆ ಗಳಿಸಿದರ್ಥಮಂ ನೆನೆನೆನೆದು ದುಃಖದಿಂ
ಮಲಮಲಂ ಮರುಗುತಜ್ಞಾನದಿಂ ತನ್ನ ಗೃಹರಕ್ಷಣೆಗೆ ಚಿಂತಿಸುವನು

ಈ ವೇದಾಂತಿ ಹೆಣ್ಣನ್ನು ವರ್ಣಿಸುತ್ತಿರುವ ರೀತಿ ಇದು–

ಇವರ ನುಡಿ ಯತಿವರರ ಬಾಯುಹುಡಿ, ಭಾವಿಸ
ಲ್ಕಿವರ ಬಾಹುಗಳು ಸಜ್ಜನರ ಬೇಹುಗಳು, ಬಳಿ
ಕಿವರ ಚಲ್ಪಿಸತುರುಬು ಸದಾಚಾರಿಗಳ ಮನದ ಬಿರುಬು

ಇವರ ಚೆಲ್ವಿನದೇಹ ಉತ್ತಮರ ದಾಹವಿಂ
ಶಿವರ ನಡೆಯನಘರಸಗಳಿಗಿವೇ ಕಡೆಯೆಂಬ
ಯುವತಿಯರು ಬಂದರಾ ದೇವದೇವೇಶನಂ ನೋಡೆ ತಮತಮಗೆ ಕೂಡೆ.

ಗುಬ್ಬಿಯ ಮಲ್ಲಣಾರ್ಯನು ಮಹಾಕವಿಯಲ್ಲದಿದ್ದರೂ ಶಕ್ತನಾದ ಒಳ್ಳೆಯ ಕವಿ. ವಂಶ ಪರಂಪರೆಯಾಗಿ ಬಂದ ಕವಿತಾಶಕ್ತಿ ಈತನಿಂದ ಈತನ ಮಗನಾದ **ಶಾಂತೇಶ**ನಲ್ಲಿಯೂ ಕಾಣಬಂದಿದೆ. ಈತನು 'ತೋಂಟದ ಸಿದ್ಧೇಶ್ವರ ಪುರಾಣ'ವನ್ನು ಭಾಮಿನಿಷಟ್ಪದಿಯಲ್ಲಿ ರಚಿಸಿದ್ದಾನೆ. ಇದರಲ್ಲಿ ೯೭೧ ಪದ್ಯಗಳೂ ೪೨೦ ಗ್ರಂಥಗಳೂ ಇವೆ. ಈ ಕಾವ್ಯವು ಕ್ರಿ. ಶ. ೧೫೬೧ ರಲ್ಲಿ ರಚಿತವಾದಂತೆ ಕವಿಯ ಹೇಳಿಕೆಯಿಂದ ಅರ್ಥವಾಗುತ್ತದೆ. ತೊಂಟದ ಸಿದ್ಧಲಿಂಗ ಯತಿಯು ಶಿವಗಂಗೆಗೆ ಬಂದು, ಕಗ್ಗೆರೆಯ ಸಮೀಪದಲ್ಲಿರುವ ನಾಗಿಣೀ ನದಿಯ ತೀರದ ತೋಟದಲ್ಲಿ ಶಿವಯೋಗದಲ್ಲಿದ್ದಾಗ, ತನ್ನ ಶಿಷ್ಯನಾದ ಚಂದ್ರಶೇಖರನಿಗೆ ಭುವನಕೋಶ, ಧರ್ಮಾಧರ್ಮ ವಿಚಾರ, ಶಿವನ ಪಂಚವಿಂಶತಿ ಲೀಲೆಗಳು, ಷಟ್‌ಸ್ಥಲಕ್ರಮ ಇತ್ಯಾದಿಗಳನ್ನು ಬೋಧಿಸಿದನಂತೆ; ಚಂದ್ರಶೇಖರನು ಆ ಬೋಧನೆಯನ್ನು ಕಾವ್ಯರೂಪದಲ್ಲಿ ಹೇಳುವಂತೆ ಶಾಂತೇಶನನ್ನು ಕೇಳಿಕೊಂಡನಂತೆ; ಕವಿ ಆತನ ಅಪೇಕ್ಷೆಯಂತೆ ಈ ಕಾವ್ಯವನ್ನು ರಚಿಸಿದನಂತೆ. ಹೀಗೆ ಕಾವ್ಯರಚಗೆ ಪ್ರೇರಣೆ ತಂದೆಯಂತೆ ಮಗನಿಗೂ ಹೊರಗಿನಿಂದಲೇ ಬಂದುದು. ವೀರಶೈವಾಮೃತ ಪುರಾಣದಂತೆ ಇಲ್ಲಿಯೂ ವೇದ ಆಗಮ ಪುರಾಣಗಳಿಂದ ಆಧಾರಶ್ಲೋಕಗಳು ಉಧೃತವಾಗಿವೆ. ವೀರಶೈವ ಧರ್ಮದ ವಿಚಾರದಲ್ಲಿ ಈತನು ತನ್ನ ತಂದೆಗಿಂತಲೂ ಹೆಚ್ಚಾಗಿ ಏನೂ ಹೇಳಿಲ್ಲ. ಕಾವ್ಯ ನಿರೂಪಣಾ ವಿಧಾನದಲ್ಲಿ ತಂದೆಯ ಮನೋಭಾವ ಈತನಿಗೂ ತಕ್ಕಮಟ್ಟಿಗೆ ಉಂಟು. ಅಲ್ಲಲ್ಲಿ ಯಮಕ, ನಿರೋಷ್ಠ–ಇತ್ಯಾದಿ ಅಲಂಕಾರಗಳು ಕಾಣಿಸಿಕೊಂಡು, ಕವಿಯ ಪಾಂಡಿತ್ಯವನ್ನು ದಿಗ್ದರ್ಶಿಸುತ್ತವೆ. ಈತನ ಷಟ್ಪದಿಗಳು ನಾದಮಯವಾಗಿ, ನಿರರ್ಗಳವಾಗಿ ಹರಿಯುತ್ತವೆ.

ತಿಳಿಗೊಳಂಗಳ ನಡುವೆ ಮೂಡಿದ | ನಳಿನ ಕೈರವಕೆರಗಿ ಝುಂಕರಿ
ಪಳಿಗಳಿಂದಂ ಜಕ್ಕವಕ್ಕಿಯ ತೆಕ್ಕೆಯಿಂ ಮತ್ತೆ

ಬಳಸಿ ತೋರುವ ಮಾಮರಂಗಳೊ | ಳೆಳಸಿ ಕೂಗುವ ಪಿಕನಿಕರದಿಂ
ಗಿಳಿಯ ಸವಿನುಡಿಯಿಂದ ವನವಂತಲ್ಲಿ ರಾಜಿಪುದು ||

ಇದು ಈತನ ಶೈಲಿಗೆ ಒಂದು ಉದಾಹರಣೆ. ಈತನ ಕವಿತೆ ಸಮಭೂಮಿಯಲ್ಲಿ ಹರಿಯುತ್ತಿರುವ ಒಂದು ಸುಂದರ ಕಿರುದೊರೆ.

**ನಂಜುಂಡ ಕವಿ** (೧೫೨೫) :

ಕನ್ನಡದ ಅನುಪಮ ಕಲಿಯೆಂದು, ಪರದಾರ ಸೋದರನೆಂದು ಶತ ಶತಮಾನಗಳವರೆಗೆ ನಮ್ಮ ಜನ ಕೀರ್ತಿಸಿ ಹಾಡುತ್ತಿದ್ದ ಕುಮಾರರಾಮನೆಂಬ ರಾಜಕುಮಾರನ ಕಥೆಯನ್ನು ಒಳಗೊಂಡಿದೆ, ನಂಜುಂಡಕವಿಯ 'ರಾಮನಾಥ ಚರಿತೆ' ಅಥವಾ 'ಕುಮಾರ ರಾಮನ ಸಾಂಗತ್ಯ'. ಈ ಕಥೆ ನಡೆದುದು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗಿಂತಲೂ ಸುಮಾರು ಹತ್ತು ಹದಿನೈದು ವರ್ಷಗಳ ಮುಂಚೆ, ಎಂದು ಕಾಣುತ್ತದೆ. ಬಹುಶಃ ಆಗ ಮಹಮ್ಮದ್ ಬಿನ್ ತೊಗಲಕನು ದಿಲ್ಲಿಯ ಸುಲ್ತಾನನಾಗಿದ್ದಿರಬೇಕು. ಆ ಕಾಲ ಳಲ್ಲಿ ಹಂಪೆಯ ಬಳಿ ಕುಂತಳವೆಂಬ ಪುಟ್ಟ ರಾಜ್ಯದಲ್ಲಿ ಕಂಪಿಲನೆಂಬ ದೊರೆ ರಾಜ್ಯಭಾರ ಮಾಡುತ್ತಿದ್ದ. ಆತನ ಮಗನೇ ಶೂರನೂ ಧರ್ಮವೀರನೂ ಆದ ಕುಮಾರರಾಮ. ಆತನ ಧೈರ್ಯಸಾಹಸಗಳ ಕೀರ್ತಿ ದೆಹಲಿಯವರೆಗೆ ಹಬ್ಬಿ, ಅಲ್ಲಿನ ಸುಲ್ತಾನನ ಮಗಳು ಆತನಲ್ಲಿ ಮೋಹಗೊಂಡಳು. ಆಕೆಯ ಅಪೇಕ್ಷೆಯನ್ನು ಸಲ್ಲಿಸಲೆಂದು ಸುಲ್ತಾನನು ರಾಮನಾಥನನ್ನು ದೆಹಲಿಗೆ ಆಹ್ವಾನಿಸಿದನು. ಆದರೆ ಕಂಪಿಲನು ಆ ಆಹ್ವಾನವನ್ನು ತಿರಸ್ಕರಿಸಿದ. ಅಷ್ಟೇ ಅಲ್ಲ, ಸುಲ್ತಾನನ ಕೋಪಕ್ಕೆ ಪಾತ್ರನಾಗಿದ್ದ ಬಾದರ (ಆ ಕಾಲದ ಇತಿಹಾಸದಲ್ಲಿ ವರ್ಣಿತನಾಗಿರುವ ಬಹದ್ದೂರ್ ಷಹನಿರಬೇಕು,) ನಿಗೆ ಆತನು ಆಶ್ರಯವಿತ್ತ. ಇದರ ಫಲವಾಗಿ ದೊಡ್ಡ ಯುದ್ಧ ನಡೆದು ಕುಮಾರರಾಮನ ಪರಾಕ್ರಮದಿಂದ ಸುಲ್ತಾನನ ಸೇನೆ ಸೋತು ಹಿಮ್ಮೆಟ್ಟಿತು. ಹೀಗೆ ಉದಿತೋದಿತನಾಗುತ್ತಿದ್ದ ರಾಮನು ಒಮ್ಮೆ ಗೆಳೆಯರೊಡನೆ ಆಡುತ್ತಿರುವಾಗ ಆತನ ಚಂಡು ಕಂಪಲಿರಾಜನ ಕಿರಿಯ ಹೆಂಡತಿಯಾದ ರತ್ನಾಜಿಯ ಅಂಗಳದಲ್ಲಿ ಬಿತ್ತು. ಅದನ್ನು ತರಲೆಂದು ಹೋದ ರಾಮನನ್ನು ರಾಣಿ ಮೋಹಿಸಿದಳು. ಧರ್ಮಭೀರುವಾದ ರಾಜಕುಮಾರ ಆಕೆಗೆ ದಕ್ಕಲಿಲ್ಲ. ರೋಷಗೊಂಡ ರಾಣಿ, ಅವನು ತನ್ನನ್ನು ಕೆಣಕಿದನೆಂದು ರಾಜನಲ್ಲಿ ದೂರಿದಳು.

ರಾಜನು ಕೋಪದಿಂದ ಕುರುಡನಾಗಿ ಮಗನನ್ನು ಕೊಂದು ಅವನ ತಲೆಯನ್ನು ತರುವಂತೆ ಮಂತ್ರಿಗೆ ಅಪ್ಪಣೆ ಕೊಟ್ಟನು. ವಸ್ತುಸ್ಥಿತಿಯನ್ನು ಅರಿತ ಮಂತ್ರಿ ರಾಜಕುಮಾರನನ್ನು ನೆಲಮಾಳಿಗೆಯಲ್ಲಿ ಬೈಚಿಟ್ಟು, ದೊರೆಯ ಆಜ್ಞೆಯನ್ನು ನಡೆಸಿದವನಂತೆ ನಟಿಸಿದ. ರಾಜಕುಮಾರ ಸತ್ತನೆಂಬ ಸುದ್ದಿಯನ್ನು ಕೇಳಿ, ದೆಹಲಿಯ ಸೇನೆ ಮತ್ತೆ ಕುಂತಳದ ಮೇಲೆ ದಾಳಿಯಿಟ್ಟಿತು. ಆದರೆ ಸಕಾಲದಲ್ಲಿ ಕುಮಾರರಾಮನು ಹೊರಗೆ ಕಾಣಿಸಿಕೊಂಡು ಸುಲ್ತಾನನ ಸೇನೆಯನ್ನು ಒಕ್ಕಲಿಕ್ಕಿದ. ಮತ್ತೆ ತನ್ನ ಸೈನ್ಯ ಸೋತುಬಂದುದನ್ನು ಕಂಡು ಸುಲ್ತಾನನು ಕಡುಕೋಪಗೊಂಡ. ಆಗ ಅರಮನೆಯ ಬಾಗಿಲು ಕಾಯುವ ಮಾತಂಗಿ ತಾನು ಕುಮಾರರಾಮನ ತಲೆಯನ್ನು ತರುವುದಾಗಿ ಪ್ರತಿಜ್ಞೆಮಾಡಿ ಸೈನ್ಯದೊಡನೆ ದಕ್ಷಿಣಕ್ಕೆ ಬಂದಳು. ಅವಳ ಪ್ರತಿಜ್ಞೆ ನೆರವೇರಿತು. ಗಾಯಗೊಂಡು ಬಂಡೆಯೊಂದನ್ನು ಒರಗಿ ನಿಂತಿದ್ದ ರಾಮನ ತಲೆಯನ್ನು ಆ ಮಾತಂಗಿ ಕತ್ತರಿಸಿಕೊಂಡು ದಿಲ್ಲಿಗೆ ಹೊರಟಳು. ಯುದ್ಧದಲ್ಲಿ ಸೋತ ಕಂಪಿಲರಾಜನೂ ಅವನ ಪರಿವಾರದವರೂ ಆತ್ಮಹತ್ಯಮಾಡಿಕೊಂಡರು. ಕುಂತಳರಾಜ್ಯ ಮಣ್ಣುಗೂಡಿಹೋಯಿತು. ಆ ರಾಜ್ಯದಲ್ಲಿ ಭಂಡಾರದ ಅಧಿಕಾರಿಗಳಾಗಿದ್ದ ಹಕ್ಕ ಬುಕ್ಕರು ಮುಂದೆ ವಿದ್ಯಾರಣ್ಯರ ಸಹಾಯದಿಂದ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದುದು ಇತಿಹಾಸದಲ್ಲಿ ಕಾಣಬರುವ ಮುಂದಿನ ಹೆಜ್ಜೆ.

ಕಥಾಘಟನೆ ನಡೆದುದು ಹದಿನಾಲ್ಕನೆಯ ಶತಮಾನದ ಆದಿಭಾಗದಲ್ಲಿ. ಕವಿಯು ಬರೆಯುತ್ತಿರುವುದು ಸುಮಾರು ಇನ್ನೂರು ವರ್ಷಗಳಾದ ಮೇಲೆ, ಹದಿನಾರನೆಯ ಶತಮಾನದ ಆರಂಭದಲ್ಲಿ. ಆ ವೇಳೆಗೆ ಕಥಾನಾಯಕನು ಜನರ ಬಾಯಲ್ಲಿ ಬೆಳೆದು ಪುರಾಣಪುರುಷನಾಗಿ ಹೋಗಿದ್ದನೆಂದು ತೋರುತ್ತದೆ. ಹದಿಮೂರನೆಯ ಶತಮಾನದ ಕಡೆಯಭಾಗದಲ್ಲಿ ಆರಂಭವಾದ ಮುಹಮ್ಮದೀಯರ ದಾಳಿಯಿಂದ ಮೇಲಿಂದ ಮೇಲೆ ಸಂಕಟಗಳನ್ನು ಅನುಭವಿಸಿ,ಮಾನ ಪ್ರಾಣಗಳಿಗೂ ಧರ್ಮಕ್ಕೂ ಎರವಾಗಿದ್ದ ಹಿಂದುಗಳಿಗೆ, ಪುನಃ ಪುನಃ ಸುಲ್ತಾನನನ್ನು ಯುದ್ಧದಲ್ಲಿ ಸೋಲಿಸಿದ ಕುಮಾರರಾಮನು ಅವತಾರ ಪುರುಷನಂತೆ ಭಾಸವಾಯಿತು. ಇದರ ಜೊತೆಗೆ ಆತನ ಶೀಲಶುದ್ಧಿಯೂ ಆತನ ವ್ಯಕ್ತಿತ್ವವನ್ನು ಉನ್ನತಿಗೇರಿಸಿತು. ಹೀಗೆ ಜನರಲ್ಲಿ ಬೆಳೆದುಕೊಂಡು

ಹೋಗಿದ್ದ ಪುರಾಣಕಥೆಯನ್ನೆ ನಂಜುಂಡಕವಿ ತನ್ನ ಕಾವ್ಯದಲ್ಲಿ ವಿಸ್ತರಿಸಿದ್ದಾನೆ. ಈ ಕಾವ್ಯದಂತೆ ಕುಮಾರರಾಮನು ಭಾರತ ವೀರನಾದ ಅರ್ಜುನನ ಅವತಾರ. ಹಿಂದೆ ಸ್ವರ್ಗದಲ್ಲಿ ಆತನಿಂದ ತಿರಸ್ಕೃತಳಾಗಿದ್ದ ಊರ್ವಶಿಯೇ ಮತ್ತೆ ಆತನ ಸತ್ವಪರೀಕ್ಷೆಗೆಂದು ರತ್ನಾಜಿಯಾಗಿ ಹುಟ್ಟಿದಳು. ಆತನ ಶತ್ರುಗಳಾದ ರಾಕ್ಷಸರು ತುರುಕರಾಗಿ ಹುಟ್ಟಿದರು. ಆ ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಕಾಪಾಡಿ, ಧರ್ಮರಕ್ಷಣೆಯನ್ನು ಮಾಡುವುದಕ್ಕಾಗಿಯೇ ಈತನು ಅವತರಿಸಿರುವುದು. ಆದ್ದರಿಂದಲೇ ಈತನಿಗೆ ಸಂಪೂರ್ಣ ದೈವಬಲ ಬೆಂಗಾವಲಾಗಿ ನಿಂತಿದೆ. ಈತನ ಕುದುರೆ ಇಂದ್ರನ ಉಚ್ಚೈಶ್ರವಸ್ಸಿನ ಅಂಶದಿಂದ ಹುಟ್ಟಿದುದು. ಈತನ ಆಯುಧಗಳೂ ಅಪ್ರಾಕೃತವಾದುವೇ. ಕಾವ್ಯದ ಉದ್ದಕ್ಕೂ ಕಾಣಬರುವ ಅಲೌಕಿಕವಾತಾವರಣವು ಇದಕ್ಕೆ ಪುರಾಣದ ಬಣ್ಣವನ್ನು ಕೊಟ್ಟಿದೆ. ಕುಮಾರರಾಮನ ತಲೆಯನ್ನು ತರುವಂತೆ ಕಂಪಿಲ ರಾಜನು ಮಂತ್ರಿಗೆ ಆಜ್ಞೆಮಾಡಿದಾಗ ದೇವೇಂದ್ರನಿಂದ ಆಜ್ಞಪ್ತನಾದ ದೂತನು ಬಂದು, ರಾಮನ ಪ್ರತಿರೂಪವನ್ನು ಕಲ್ಪಿಸಿಕೊಡುತ್ತಾನೆ. ಅವನ ಮಾಯಾಶಿರದೊಡನೆ ಸಹಗಮನಮಾಡುವ ಅವನ ರಾಣಿಯರೂ ಅವರ ಪ್ರತಿರೂಪಗಳೇ. ಅವನು ಸತ್ತುಹೋದನೆಂದು ಜನ ತಿಳಿದಿರುವಾಗ ಅವನು ತನ್ನ ತಾಯಿ ಮತ್ತು ಪತ್ನಿಯರೊಡನೆ ಸುಖವಾಗಿರುತ್ತಾನೆ. ಅವನ ತಲೆಯನ್ನು ತರುವುದಾಗಿ ಪ್ರತಿಜ್ಞೆಮಾಡಿದ ಮಾತಂಗಿ ಪೂರ್ವಜನ್ಮದ ಗಾಂಧಾರಿ. ತುರುಕರನ್ನು ಮೂರು ಸಲ ಧ್ವಂಸಮಾಡಿದ ಮೇಲೆ ಅವನಿಗೆ ತನ್ನ ಅವತಾರಕಾರ್ಯ ಮುಗಿಯಿತೆಂದು ಅರ್ಥವಾಗುತ್ತದೆ. ಆತನು ಅದನ್ನು ತನ್ನ ಆಪ್ತವರ್ಗದವರಿಗೆಲ್ಲಾ ಸ್ಪಷ್ಟವಾಗಿ ತಿಳಿಸಿಯೇ ಯುದ್ಧರಂಗಕ್ಕೆ ಬರುತ್ತಾನೆ. ಅವನು ಬಳಲಿಕೆ ತಲೆದೋರಿದೊಡನೆಯೇ ಧ್ಯಾನಾಸಕ್ತನಾಗಿ ಸಮಾಧಿಗೇರುತ್ತಾನೆ. ಆತನ ಜೀವವನ್ನು ಕೊಂಡೊಯ್ಯಲು ಕೈಲಾಸದಿಂದ ವಿಮಾನ ಬರುತ್ತದೆ. ಅದರಲ್ಲಿ ಕುಳಿತು ತನ್ನ ಬಳಿಗೆ ಬಂದ ರಾಮನನ್ನು ಶಿವನು ಹೊಗಳಿ ಗಣಪದವಿಯನ್ನು ಕೊಡುತ್ತಾನೆ. ಅವನ ಹಸಿತಲೆಯನ್ನು ಕಂಡು ದೆಹಲಿಯ ಸುಲ್ತಾನನ ಮಗಳು ಮೂರ್ಛೆಹೋಗಿ ಮರಣವನ್ನಪ್ಪುತ್ತಾಳೆ. ಆ ತಲೆಯು ದೆಹಲಿಯಲ್ಲಿರುವುದು ಶುಭಕರವಲ್ಲವೆಂದು ಪಂಡಿತರು ಹೇಳಿದುದರಿಂದ ಸುಲ್ತಾನನು

ಅದನ್ನು ಹಿಂದಕ್ಕೆ ಕಳುಹಿಸುತ್ತಾನೆ. ಅದು ಗಂಗೆಯನ್ನು ಸೋಕುತ್ತಲಿ ಲಿಂಗವಾಯಿತು.

ನಂಜುಂಡಕವಿ ಜನಜನಿತವಾಗಿದ್ದ ಈ ಪುಣ್ಯಕಥೆಯನ್ನು ಬರೆಯಲು ತಾನೇ ತಕ್ಕವನೆಂದು ಕೋವಿದರು ಹೇಳಿದುದರಿಂದ ಕಾವ್ಯರಚನೆಗೆ ಕೈ ಹಾಕಿದನಂತೆ! ಕವಿಯನ್ನು ಕುರಿತು ಅವರು 'ನಿನ್ನ ನುಡಿ ಸಕ್ಕರೆಯಂತೆ, ಎಳೆ ಜವ್ವನೆಯರ ತೋಳ್ತೆಕ್ಕೆಯಂತೆ, ಮಕ್ಕಳ ತೊದಲು ನುಡಿಯ ನುಣ್ಪಿನಂತೆ ಮಧುರ;

ಮೂಡು ಚುಂಬನವ, ಮದನರೂಪ, ಮೆಯ್ಯೊಡ। ಗೂಡು, ಕರ್ಪೂರ ವೀಟಿಕೆಯ

ನೀಡು ನಾಲಿಗೆಗೈಯಿಂದೆಂಬ ನೀರೆಯ । ಗಾಡಿಯಂತಿದೆ ನುಡಿ ನಿನ್ನ

ಎಂದು ಕೊಂಡಾಡಿದರು. ಮಧುರವಾಗಿ ಕಾವ್ಯ ಹೇಳುವ ಶಕ್ತಿ ಮಾತ್ರವೇ ಅಲ್ಲ. ಆತನ ವಂಶವೂ ವೀರ, ಧರ್ಮವೀರಗಳಿಗೆ ಹೆಸರಾದುದು. ಅವನ ದೊಡ್ಡಪ್ಪ ಬಹು ಶೂರ; ಚಿಕ್ಕಪ್ಪನಾದ ವಿಜಯನೆಂಬುವನು ತನ್ನ ಸ್ವಾಮಿಯಾದ ನಂಜರಾಜನಿಗಾಗಿ ತನ್ನ ಪ್ರಾಣವನ್ನೆ ಬಲಿದಾನವಾಗಿ ಕೊಟ್ಟವನು. ಆದ್ದರಿಂದಲೇ ಕೋವಿದರಾದವರು 'ನಿನಗೀ ರಾಮನಾಥನ ಚರಿತವ ಪೇಳ್ವು । ದನುಚಿತವಲ್ಲ' ಎಂದು ಹೇಳಿದರು. ಕವಿಯ ತಂದೆಯೂ ಶೂರನೇ. 'ಚಂಗಳನಾಡ ನಾಲ್ವತ್ತು ನಾಯಕ ಗಜಸಿಂಹ' ಎಂದು ಕೀರ್ತಿವೆತ್ತ ಆ 'ಚದುರ ಮಾಧವ' 'ಯದುಕುಲಾಮಾತ್ಯ' ನೆಂಬ ಕುಲಕ್ರಮಾಗತವಾದ ಬಿರುದನ್ನೂ ಪಡೆದಿದ್ದ. ಕವಿಯ ತಾತ—ಮಾಧವನ ತಂದೆ—'ಪ್ರಭುಕುಲಾಗ್ರಗಣ್ಯ ವಿಜಯ ನೃಪಾಲ.' ಹೀಗೆ ಕ್ಷತ್ರಿಯಕುಲೋತ್ಪನ್ನನಾಗಿ, ಕಥಾನಾಯಕನ ಮುಖ್ಯ ಗುಣಗಳುಳ್ಳ ವಂಶಕ್ಕೆ ಸೇರಿದವನಾದ ತಾನು ಕವಿತಾ ಶಕ್ತಿಯಲ್ಲಿಯೂ ಸಾಮಾನ್ಯನೇನೂ ಅಲ್ಲ. 'ಪದವಾಕ್ಯ ಪ್ರಮಾಣಜ್ಞ.'

ಉಭಯ ವಸ್ತುಕ ಕವಿತೆಯ ನೊರೆವೆನು ನೃಪ । ಸಭೆ ತಲೆದೂಗುವಂದದಲಿ

ವಿಭುಗಳು ಪೇಳಿನಲೀ ಪದ ಕವಿತೆಯ । ನಭಿಮಾನಿಸಿ ಹೇಳಿದೆನು.

ಇತರ ಚಂಪೂ ಕವಿಗಳಂತೆ ನಾನೂ ರಾಜಸಭೆ ಮೆಚ್ಚುವಂತೆ ವಸ್ತುಕ ಕಾವ್ಯ

ವನ್ನು ಹೇಳಬಲ್ಲೆ. ಆದರೆ ಮಹಾಜನರು ಕೇಳಿಕೊಂಡುದರಿಂದ, ಅವರ ಮೇಲಿನ ಅಭಿಮಾನಕ್ಕಾಗಿ ಈ ವರ್ಣಕ ಅಥವಾ ಪದಕವಿತೆಯನ್ನು ಬರೆಯುತ್ತಿದ್ದೇನೆ—ಎನ್ನುತ್ತಾನೆ, ಕವಿ. ಚಂಪೂಕಾವ್ಯಕ್ಕಿತ ತನ್ನ ಕಾವ್ಯವೇನೂ ಕಡಮೆಯಲ್ಲವೆಂದು ತೋರುವುದಕ್ಕೊ ಏನೊ, ಸಂಪ್ರದಾಯದ ವರ್ಣನೆಗಳನ್ನೆಲ್ಲಾ ತನ್ನ ಕಾವ್ಯದಲ್ಲಿ ಪುರಸ್ಕರಿಸಿದ್ದಾನೆ.—ಕಡಲ ವರ್ಣನೆಯಿಂದ ಪ್ರಾರಂಭಿಸಿ, ಕನಕಾಚಲ, ಅದರ ದಕ್ಷಿಣಕ್ಕಿರುದ ಕರ್ಣಾಟ ರಾಜ್ಯ, ಅಲ್ಲಿನ ನದಿಗಳು, ಉದ್ಯಾನಗಳು, ಭತ್ತದ ಗದ್ದೆಗಳು, ಪಾಮರಿಯರು, ಪ್ರಪಾವನಿತೆಯರು, ಮಾಲೆಗಾತಿಯರು, ಗಾಡಿಕಾತಿಯರು, ರಾಜಧಾನಿ—ಇತ್ಯಾದಿ ನೂರಾರು ಪದ್ಯಗಳು ಸಂಪ್ರದಾಯದ ಸಂರಕ್ಷಕರೆಂಬಂತೆ ಇಲ್ಲಿ ಕಾಣಿಸಿಕೊಂಡಿವೆ. ನೃಪತುಂಗ ಕವಿಯು ಕನ್ನಡನಾಡಿಗೆ ಹಾಕಿಕೊಟ್ಟ ಬಾಂದುಗಲ್ಲುಗಳೇ ಈತನ ಕಾಲಕ್ಕೂ ಉಳಿದುಕೊಂಡು ಬಂದಿವೆ—'ಕಾವೇರಿಯಿಂದ ಗೋದಾವರಿವರೆಗೆಮಿ | ರ್ದಾ ವಸುಧಾತಳ ವಳಯ || ಭಾವಿಸೆ ಕರ್ಣಾಟಕ ಜನಪದ.' ಇಲ್ಲಿನ ನದಿಗಳು ಭೂದೇವಿಯು ಉಟ್ಟು ಬಿಸುಟಿರುವ ಸೀರೆಗಳಂತೆ! ತೊರೆವೆಣ್ಣು ಸಮುದ್ರನನ್ನು ಅಪ್ಪಲು ಚಾಚಿದ ಕೈಗಳಂತಿವೆ ಕಾಲುವೆಗಳು! ಪಾಮರಿಯರ ಕಣ್ಣಕಾಂತಿಯನ್ನು ಬಿಳಿಯ ಬಲೆಗಳೆಂದು ಹೆದರಿ ಗಿಳಿಗಳು ಗದ್ದೆಗೆ ಇಳಿಯುವುದಿಲ್ಲವಂತೆ! ನದಿಗಳಲ್ಲಿ ಮೇಲಕ್ಕೆ ಹಾರುತ್ತಿರುವ ಮೀನುಗಳು ನದಿಯೆಂಬ ರಮಣಿ ಆಡುತ್ತಿರುವ ಆಣೆಕಲ್ಲಿನಂತಿವೆ! ಬ್ರಹ್ಮನು ಅಮರಾವತಿಯನ್ನೂ ಪಂಪಾಪುರಿಯನ್ನೂ ತಕ್ಕಡಿಯಲ್ಲಿಟ್ಟು ತೂಗಲು, ಅಮರಾವತಿಯು ತೂಕ ತಗ್ಗಿ ಅದು ಮೇಲಕ್ಕೆ ಹೋಯಿತಂತೆ! ಕವಿಯು ದೇಶಾಭಿಮಾನ ಹೊಗಳತಕ್ಕುದು. ಆತನ ವರ್ಣನೆಗಳಲ್ಲಿ ನೂತನತೆಯೂ ಇದೆ. ಆದರೆ ಔಚಿತ್ಯ ಮೀರಿದಷ್ಟು ವಿಸ್ತಾರವಾಯಿತೇನೊ ಎನ್ನಿಸುತ್ತದೆ. ಆರುಸಹಸ್ರ ಸಾಂಗತ್ಯ ಪದ್ಯಗಳನ್ನು ಒಳಗೊಂಡ ಈ ಬೃಹದ್ ಗ್ರಂಥವು ತನ್ನ ಮಹತ್ತಿಗೆ ಸ್ವಲ್ಪವೂ ಲೋಪವಾಗದಂತೆ ಅದರ ಆರ್ಥಕ್ಕೆ ಭಟ್ಟ ಇಳಿಯುಬಹುದಾಗಿತ್ತೆಂದು ತೋರುತ್ತದೆ.

'ಕುಮಾರರಾಮ ಸಾಂಗತ್ಯ'ವು ಧಾರುಣಿಗೆ ಮೆಚ್ಚಿಗೆಯಾದುದು 'ವೀರತೆ, ಶುಚಿತೆಯೆಂಬೆರಡು ಗುಣಂಗಳ | ಮೇರೆಯ ಮೀರದೆ ನಡೆದ' 'ವೀರರಾಮನ ಚಾರುಚರಿತೆ' ಯಾದುದರಿಂದ. ಕಥಾನಾಯಕನಲ್ಲಿರುವ

ವೀರತೆಗಾಗಿ ಕಾವ್ಯದ ಅರ್ಧಕ್ಕೂ ಹೆಚ್ಚಾದ ಭಾಗ ಮೀಸಲಾಗಿದೆ. ಸಾಂಗತ್ಯದ ಛಂದಸ್ಸು ವೀರರಸ ಪ್ರತಿಪಾದನೆಗೆ ಅಷ್ಟೇನೂ ಹೊಂದಿಕೆಯಾದುದಲ್ಲ. ಆದರೂ ಕವಿಯು ಓದುಗರ ಹೃದಯದಲ್ಲಿ ಖಚಿತವಾಗಿ ನಿಲ್ಲುವಂತೆ, ವರ್ಣಿಸಬಲ್ಲ ಜಾಣ್ಮೆಯುಳ್ಳವನು. ಕಾಕತಿ ರುದ್ರನು ದಂಡೆತ್ತಿ ಬಂದನೆಂದು ಕೇಳಿದ ಕಂಪರಾಜನು

ಮೀಸೆ ಕುಣಿಯೆ, ಮೈಯ್ಯ ರೋಮ ಕಾರಿಡೆ, ಕಣ್ಣು। ಸೂಸೆ ಕಿಡಿಯು,
ಮೊಗ ಹೊಗೆಯೆ।

ಘಾಸಿಯಾಗಲು ಗಂಟಿಸಿ ಹುಬ್ಬ ನೃಪ ಕ। ಟ್ಟಾಸುರವನು ತಾಳಿದನು. ಆದರೂ ಶತ್ರುವಿನ ಸೇನಾ ಶರಧಿಯನ್ನು ಕಂಡು ಆತನಿಗೆ ಚಿಂತೆ ಹುಟ್ಟಿತು. ಆಗ ಕುಮಾರರಾಮನು 'ಅಡವಿಯೆಷ್ಟು ಕಿಡಿಯೆಷ್ಟು? ಆನೆಯೆಷ್ಟು ಸಿಂಹವೆಷ್ಟು? ಕಡಲೆಷ್ಟು ಬಡಬಾಸಿಲನೆಷ್ಟು?

ಹದ್ದು ಕಾಗೆಗಳಿಗೀ ಬಲವನೆಲ್ಲವ, ರಾಯ। ಬಿರ್ದಿಕ್ಕುವೆನು
ಮುಂಡಗಳನು
ಎದ್ದಾಡಿಸುವೆನು ರಣದೊಳೀ ರುದ್ರನ। ಗೆದ್ದು ತೋರುವೆನು
ಚಿತ್ತೈಸು

ಎಂದು ಹೇಳಿ 'ಹೊಕ್ಕನು ರಾಯನ ಪಾಜನು', 'ಪಗೆವಡೆಯ ಒಕ್ಕಲಿಕ್ಕಿದನು'.

ಇರಿವುತ, ತರಿವುತ, ಕೊರೆವುತ, ಜರಿವುತ, ನೆರೆಗಲಿಗಳು ಬೆಂಬತ್ತಿ
ಸೆರೆವಿಡಿದುದ್ಧುಮಂದಿ ಕುದುರೆಯೆಲ್ಲವ ತೀರ ಮುರಿದುದು ರುದ್ರನ ಸೇನೆ

ಕವಿಯು ಯುದ್ಧ ವಿಜ್ಞಾನದಲ್ಲಿ ಪರಿಣತನಾಗಿದ್ದನೊ ಏನೊ! ಆದೆಷ್ಟು ಆಯುಧಗಳ ಹೆಸರನ್ನು ಹೇಳುತ್ತಾನೆ, ಅದೆಷ್ಟು ಬಗೆಯಾದ ಯುದ್ಧೋಪಕರಣಗಳನ್ನು ಹೆಸರಿಸುತ್ತಾನೆ, ಅದೆಷ್ಟು ಮೈದುಂಬಿ ಯುದ್ಧವನ್ನು ವರ್ಣಿಸುತ್ತಾನೆ! ಪ್ರಾಚೀನ ಕಾಲದ ನಮ್ಮ ಯುದ್ಧದ ರುದ್ರಚಿತ್ರವೊಂದನ್ನು ದಿಗ್ದರ್ಶಿಸಿದ್ದಾನೆ, ಕವಿ, ಇಲ್ಲಿ. ಇದು ಕಥೆಯ ಒಂದು ಮುಖವಾದರೆ ಮತ್ತೊಂದು ಮುಖವಾದ ಶೌಚಗುಣವೂ ಅದಕ್ಕೆ ಉಪಷ್ಟಂಭಕವಾದ ರತ್ನಾಜಿಯ ಪ್ರಣಯ ಪ್ರಸಂಗವೂ ಮತ್ತೂ ಮನೋಹರವಾಗಿವೆ. ಕಥಾನಾಯಕನ ಶೌರ್ಯಕ್ಕಿಂತಲೂ ಶೌಚಗುಣದಲ್ಲಿಯೇ ಕವಿಗೆ ಅತಿಶಯವಾದ

ಗೌರವ. ಕಾವ್ಯದ ಆರಂಭದಲ್ಲಿಯೇ ಇದನ್ನು ಆತ ಸ್ಪಷ್ಟಪಡಿಸಿದ್ದಾನೆ; ಹತ್ತಾರು ವಿಧದಲ್ಲಿ ತನ್ನ ನಾಯಕನ ಈ ಗುಣವನ್ನು ಹಾಡಿ ಹರಿಸಿದ್ದಾನೆ- 'ಇದು ಪುಣ್ಯ ಕಥೆಯಲ್ಲಿದು ಪೂರ್ವ ಚರಿತವಲ್ಲಿದು ಪುರಾಣದೊಳುಕ್ತವಲ್ಲ, ಇದನೆಂತಾಲಿಪೆನೆಂಬ ಸಜ್ಜನ ಕೇಳಿದಕುತ್ತರವ ಪೇಳುವೆನು' ಎಂದು ಹೇಳಿ,

ಕಥೆಯ ವಿಚಾರಿಸಿ ನೋಡಿದಡಿದು ಪುಣ್ಯ | ಕಥೆಯಲ್ಲದಲ್ಲ, ಬೇರೊಂದು
ಪೃಥುಜಘನೆಯ ಸೀರೆ ಪಿಡಿಯಲೊಲ್ಲದನ ಸ | ತ್ಕಥನವಿದರೊಳದರಿಂದ
ಆವ ಕುಲದಲಿ ಪುಟ್ಟಲಿ ಪರವೆಣ್ಗಳ | ಭಾವಿಸನಾವನವನಿಗೆ
ದೇವರು ಸರಿಯಲ್ಲ, ನರಪಶುಗಳ ಬಲು | ದಾವಣಿಯವನೆ ಕೇಳವನು.

ಎನ್ನುತ್ತಾನೆ. ನಿಜ. ಕುಮಾರರಾಮನನ್ನು ಕಾಮಿಸಿದ ರತ್ನಾಜಿ ದಿವ್ಯ ಸುಂದರಿ. ವಸಂತಕಾಲದಲ್ಲಿ ಪ್ರಾಪ್ತವಾದ ಶೂಲದ ಹಬ್ಬವನ್ನು ನೋಡಲೆಂದು ಮಹಡಿಯನ್ನೇರಿ ಬಂದ ಆ 'ಮರಾಳ ಮದಾಲಸಯಾನೆ' ಅಂಗಜನ ಕೈಯ ನನೆಗಣೆಯಂತೆ ಮೆರೆಯುತ್ತಿದ್ದಳಂತೆ! ಅವಳನ್ನು ಕಂಡವರು,

ಆರಿವಳಿಂದ್ರನ ರಾಣಿಯೋ ರಂಭೆಯೊ | ಮಾರನರಸಿಯೊ ಗಂಧರ್ವ
ನಾರಿಯೋ ನಾಗಾಂಗನೆಯೊ ಎಂದವಳ ಕ | ಣ್ಣಾರೆ ನೋಡಿದರು
ಕಾಮುಕರು

ಆ ಲಲಿತಾಂಗಿಯಂಗದೊಳೆಸೆದವು ಜನ | ದಾಲಿಗಳಾಕೆಯ ಮೇಲೆ
ಲೀಲೆ ಕೈಮಿಗೆ ಸೂಸಿದ ಕುಸುಮಾಂಜಲಿ | ಜಾಲದಂತೇನ ಬಣ್ಣಿಪೆನು

ಎಂದು ಹೇಳುತ್ತಾನೆ. ಕವಿಜನರ ಕಣ್ಣುಗಳು ಅವಳ ಲಾವಣ್ಯದಲ್ಲಿ ಓಲಾಡಿದವಂತೆ! ಅವಳನ್ನು 'ಬೆದರಿದ ಹುಲ್ಲೆಗಣ್ಣ ಬೆಡಂಗಿ'. 'ಮೀಟಿನ ಪೆಣ್ಗಳ ಬೈತಲೆ ಯೊಳೆ ಮುತ್ತೆ', 'ಎಳೆವಳ್ಳಿಯಂತೆಸೆವ ಮೆಯ್ಯವಳ' ಎಂದು ಮುಂತಾಗಿ ಸಮಿಯರು ಸಂಬೋಧಿಸುವುದು ಅವಳ ಸೌಂದರ್ಯಕ್ಕೆ ಹಿಡಿದ ಸೊಡರಿಸಂತಿವೆ. ಶೂಲದ ಹಬ್ಬಕ್ಕೆಂದು ಬಂದ ಶೂರರಲ್ಲಿ ಕುಮಾರರಾಮನು ರತ್ನಾಜಿಯ ಕಣ್ಣಿಗೆ

ಅಲರ್ವಿಲ್ಲಿಲ್ಲದಂಗಜನಂತೆ ಬಜ್ಜರ (ವಜ್ರ) | ದಲಗಿಲ್ಲದಮರೇಂದ್ರನಂತೆ
ಕಲೆಯಿಲ್ಲದಿಂದುವಿನಂತೆ....

ಕಾಣಿಸಿದ. ಆಕೆ

ಶಿವ ಶಿವ ನರಜನ್ಮದೊಳಗಿಂತಪ್ಪರು। ಧ್ರುವಿಸಿದರುಂಟೆ ಲೋಕದೊಳು
ದಿವಿಜರೊಳಿವನಾವನೋ ಯೆಂದವನನು।ಯುವತಿ ಕಣ್ಣಿಟ್ಟು ನೋಡಿದಳು.

ಒಡನೆಯೇ ಅವಳಿಗೆ

ಅರಿವರತುದು, ಲಜ್ಜೆ ನೆರೆ ತಗ್ಗಿದುದು ಧೈರ್ಯ। ಬಿರುತೋಡಿತಂಗಭವಾಗ್ನಿ
ಗರಿಗಟ್ಟಿ ತಂದೆರ್ದೆಯೊಳಗವಳಿಗೆ ಕಣ್ಗೆ। ಗುರಿಯಾಗಲಾ ರಾಯಕುವರ
ಬೆರಗು ವಟ್ಟಂಗ, ಬೆದರುವೆದೆ ಬೆಮರಿಂದ। ತುರುಗಿದ ಮೊಗ ಕಣ್ಗಳೊಳಗೆ
ಒರೆವ ನೀರೆಸದಿರಲಂದಾ ಕುವರಗೆ। ಸೆರೆಯಾದಳಾ ಮೃಗನೇತ್ರೆ.
ನಡನಡ ನಡುಗೆ ಮೈ ಸುಡಿ ತಡಬಡಿಸೆ ಮೆ। ಲ್ಲಡಿ ದಡವಡಿಸಿ ಕೈಯ್ಯೊಳಗೆ
ಪಿಡಿದ ಬೆಳ್ಳೆಲೆ ಬೀಯೆ, ಪುಡಿಯೇಳೆ ತಂಬುಲ। ಬಿಡದವಳವನ ನೋಡಿದಳು.
ತೆಗೆದ ಕಣ್ಗಳ ಬಾಗಿಲಿಂದವನನು ತಂದು। ಪುಗಿಸಿ ಮರಳಿ ಪೋಗದಂತೆ
ಮಿಗೆ ತುರುಗೆವೆವಡಿಗೆತ್ತಳೆಂಬಂತಾಗ। ಮುಗಿದವು ಕಣ್ಗಳವಳಿಗೆ.

ನಿಜ; ಕಣ್ಣುಗಳಿಂದ ಅವನನ್ನು ಹೊಗಿಸಿಕೊಂಡವಳು, ಮತ್ತೆ ಹೊರಗೆ ಹೋಗದಂತೆ ದಟ್ಟವಾದ ಎವೆಗಳೆಂಬ ಬಾಗಿಲನ್ನು ಮುಚ್ಚಿದಳು. ಧರ್ಮಾಧರ್ಮವೆಂಬ ವಿಚೇಚನಾಬುದ್ಧಿಗೂ ಅವಳು ಕಣ್ಣು ಮುಚ್ಚಿದಳು. ಇದರಿಂದ ಮುಂದಿನ ದುರಂತಕ್ಕೆಲ್ಲಾ ಆಹ್ವಾನವನ್ನಿತ್ತಳು. ಕುಮಾರರಾಮನು ಕೈಲಾಸಕ್ಕೆ ಏರಿಹೋಗುವ ದೃಶ್ಯವೂ ಸುಂದರವಾಗಿದೆ.

ಕುಮಾರರಾಮನ ಸಾಂಗತ್ಯವು ವಸ್ತು, ಪಾತ್ರ ರಸ–ಈ ಮೂರು ದೃಷ್ಟಿಗಳಿಂದಲೂ ಮನೋಹರವಾಗಿದೆ.

ರಸದಿಂದ ಪುಟ್ಟಿಸಿ ಭಾವದಿಂ ಬಲಿಯಿಸಿ। ಪೊಸ ಬಗೆವೆತ್ತಲಂಕೃತಿಯು
ಎಸಕದಿಂ ಬೆಳೆಯಿಸಿ ಕೃತಿಯೆನಿಸುವೆನಿದ। ರಸಿಕರು ಮೆಚ್ಚುವಂದದಲಿ

ಎಂದು ಕವಿ ಹೇಳಿಕೊಂಡಿರುವುದು ಬಹುಮಟ್ಟಿಗೆ ಸಾರ್ಥಕವಾಗಿವೆ. ಇದಕ್ಕೂ ಹೆಚ್ಚಾಗಿ ಇದು ಒಂದು ಐತಿಹಾಸಿಕ ಕಾವ್ಯವಾಗಿದೆ. ಇಂತಹ ಕಾವ್ಯಗಳು ಕನ್ನಡದಲ್ಲಿ ಬಹು ವಿರಳ. ಕಾವ್ಯದ ಮೊದಲ ಇಪ್ಪತ್ತೆರಡು ಆಶ್ವಾಸಗಳಲ್ಲಿ ಹೊಯ್ಸಳ ಬಲ್ಲಾಳರು, ಕಾಕತೀಯರು ಮೊದಲಾದ

ರಾಜರಿಗೂ ಕಂಪರಾಜನಿಗೂ ನಡೆಯುವ ಯುದ್ಧಗಳೂ, ಅಲ್ಲಿಂದ ಮುಂದೆ ದಿಲ್ಲಿಯ ಸುಲ್ತಾನನಿಗೂ ಕುಮಾರರಾಮನಿಗೂ ನಡೆವ ಯುದ್ಧಗಳೂ ಆ ಕಾಲದ ಇತಿಹಾಸದ ಮೇಲೆ ಅಮೂಲ್ಯವಾದ ಬೆಳಕನ್ನು ಚೆಲ್ಲುತ್ತವೆ. ಅಂದಿನ ಜನಜೀವನ ಚಿತ್ರಣವೂ ಕಾವ್ಯದಲ್ಲಿ ಮಿಂಚಿ, ಈ ಕಾವ್ಯದ ಬೆಲೆಯನ್ನು ಹೆಚ್ಚಿಸುತ್ತದೆ.

ಕನ್ನಡದಲ್ಲಿ 'ಜಯನೃಪಕಾವ್ಯ', 'ಶ್ರೀಪಾಲ ಚರಿತೆ', 'ನೇಮಿಜಿನೇಶ ಸಂಗತಿ' ಇತ್ಯಾದಿ ಹಲವು ಕವ್ಯಗಳನ್ನು ಬರೆದ ಮೂರನೆಯ ಮಂಗರಸ ಕವಿಯ ತಂದೆಯ ಹೆಸರೂ ಬಿರುದುಗಳೂ ನಂಜುಂಡಕವಿಯ ತಾತನವೇ ಆಗಿರುವುದರಿಂದ ಆತನು ನಂಜುಂಡಕವಿಯ ಚಿಕ್ಕಪ್ಪನಿರಬೇಕೆಂದು ಊಹಿಸಲು ಅವಕಾಶವಿದೆ. ಮಂಗರಸನ ಕಾವ್ಯಗಳಲ್ಲಿ ಒಂದಾದ ಸಂಯುಕ್ತ ಕೌಮುದಿಯಲ್ಲಿ ಅದರ ಕಾಲ ಕ್ರಿ. ಶ. ೧೫೦೮ ಎಂದು ಸ್ಪಷ್ಟವಾಗಿ ತಿಳಿದು ಬರುವುದರಿಂದ ನಂಜುಂಡಕವಿಯ ಕಾಲ, ಸು. ೧೫೨೫ ಇರಬಹುದು. ಆದರೆ ಈ ಚಿಕ್ಕಪ್ಪ, ಮಗ ಒಬ್ಬರನ್ನೊಬ್ಬರು ಸ್ಮರಿಸಿಲ್ಲ. ಅಷ್ಟೆ ಅಲ್ಲ; ಚಿಕ್ಕಪ್ಪ ಜೈನ, ಮಗ ಶೈವ. ನಂಜುಂಡಕವಿಯು ಮತಾಂತರವಾಗಿರಬಹುದು. ಅಥವಾ ಆ ಕಾಲದಲ್ಲಿ ಒಂದೇ ಸಂಸಾರದವರು ಬೇರೆ ಬೇರೆಯ ಧರ್ಮವನ್ನು ಅವಲಂಬಿಸಿ ಬಾಳಿದ್ದರೂ ಅದೇನೂ ಅಷ್ಟು ಅತಿಶಯದ ಸಂಗತಿಯಾಗಿರಲಿಕ್ಕಿಲ್ಲ.

ಶ್ರೀಮಾನ್ ಎನ್. ಅನಂತರ‍್ಯಂಗಚಾರ‍್ಯರು ತಮ್ಮ 'ಕುಮಾರರಾಮ ಸಾಂಗತ್ಯ ಸಂಗ್ರಹದ' ಮುನ್ನುಡಿಯಲ್ಲಿ ಜನಪ್ರಿಯವಾದ ಕುಮಾರರಾಮನ ಕಥೆಯನ್ನು ಬಳಸಿಕೊಂಡು ಕಾವ್ಯರಚನೆ ಮಾಡಿರುವ ಕವಿಗಳದೊಂದು ದೊಡ್ಡ ಪಟ್ಟಿಯನ್ನೇ ಕೊಟ್ಟಿದ್ದಾರೆ. ನಂಜುಂಡಕವಿಯಲ್ಲದೆ, ಪಾಂಚಾಳ ಗಂಗನೆಂಬುವನು 'ಕುಮಾರರಾಮ ಸಾಂಗತ್ಯ', ನಾಗ ಸಂಗಯ್ಯ 'ಪರದಾರ ಸೋದರರಾಮನ ಸಾಂಗತ್ಯ', ಮಹಲಿಂಗಸ್ವಾಮಿ 'ಬಾಲಕುಮಾರರಾಮನ ಸಾಂಗತ್ಯ' ಕವಿಜಾಣಗಂಗಯ್ಯ 'ಚೆನ್ನರಾಮನ ಸಾಂಗತ್ಯ' ಮತ್ತೊಬ್ಬ ಗಂಗ 'ಕುಮಾರ ರಾಮನ ಚರಿತ್ರೆ' ಬರೆದಿರುವುದಲ್ಲದೆ ಅಜ್ಞಾತ ಕವಿಕೃತ ಕುಮಾರರಾಮ ಸಾಂಗತ್ಯಗಳೂ ಯಕ್ಷಗಾನಗಳೂ ಹೇರಳವಾಗಿ ಪ್ರಚಾರದಲ್ಲಿವೆಯಂತೆ! ಈ ಕಥೆ ತೆಲುಗು ತಮಿಳುಗಳಲ್ಲಿಯೂ ಗ್ರಂಥರೂಪವನ್ನು

ಪಡೆದಿದೆಯಂತೆ! ಕಾಲದ ದೃಷ್ಟಿಯಿಂದ ಮಾತ್ರವಲ್ಲದೆ ಕಾವ್ಯದ ದೃಷ್ಟಿಯಿಂದಲೂ ನಂಜುಂಡಕವಿಯ ಕಾವ್ಯ ಅಗ್ರಗಣ್ಯವೆಂದು ತೋರುತ್ತದೆ. ಆದರೆ ಐತಿಹಾಸಿಕ ದೃಷ್ಟಿಯಿಂದ ಗಂಗ ಮತ್ತು ನಾಗಸಂಗಯ್ಯ ಇವರ ಕೃತಿಗಳು ಹೆಚ್ಚು ವಾಸ್ತವಿಕವಾಗಿಯೂ ಆತ್ಮೀಯವಾಗಿಯೂ ಇರುವುದಾಗಿ ತಿಳಿಸಿ, ಹಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ, ಶ್ರೀಮಾನ್ ಅನಂತರಂಗಾಚಾರ್ಯರು. ಅವುಗಳಲ್ಲಿ ಕುಮಾರ ರಾಮನ ಕುದುರೆಯ ವಿಚಾರವೂ ಒಂದು. ಅದು ದೈವದತ್ತವೆಂದು ಹೇಳುವುದಕ್ಕೆ ಬದಲಾಗಿ, ಹೀಗೆ ಹೇಳುತ್ತಾನೆ. ಓರೆಗಲ್ಲಿನ ಎಪ್ಪಟಿರಾಜನಲ್ಲಿದ್ದ 'ಬೊಲ್ಲ'ನೆಂಬ ಒಂದು ಕುದುರೆ ಏರುವುದಕ್ಕೆ ಸಾಧ್ಯವಿಲ್ಲದಷ್ಟು ಪ್ರಚಂಡವಾಗಿತ್ತಂತೆ! ಒಮ್ಮೆ ಚಾರಾಮರಾಜನಲ್ಲಿದ್ದ ಆ ಕುದುರೆ ಹತೋಟಿಗೆ ಮೀರಿದ್ದುದರಿಂದ ಮುಂಗುಲಿರಾಯ, ಮತ್ತು ದೆಹಲಿಯ ಸುಲ್ತಾನನಬಳಿಗೆ ಹೋಗಿ ಓರುಗಲ್ಲಿನ ಪ್ರತಾಪರುದ್ರನ ಹತ್ತಿರಕ್ಕೆ ಬಂದಿತ್ತಂತೆ! ಆತನ ಮಂತ್ರಿ ಲಿಂಗಣ್ಣ ಕುದುರೆಯನ್ನು ಹಿಡಿದು ತಂದು ದಳವಾಯಿ ಪದವಿಯನ್ನು ಪಡೆದಿದ್ದನಂತೆ! ಅದನ್ನು ಕುಮಾರರಾಮನು ಹತ್ತಿ ಪಳಗಿಸಿದನು. ಅದನ್ನು ಕಂಡು ಮೆಚ್ಚಿದ ಲಿಂಗಣ್ಣ ಕುದುರೆಯ ಹಿಂದೆಯೇ ತಾನೂ ಕುಮ್ಮಟಕ್ಕೆ ಬಂದನಂತೆ! ಇನ್ನು ರತ್ನಾಜಿಯ ಮೋಹದಿಂದ ಪಾರಾದುದು ಅರ್ಜುನಾಂಶದ ಪ್ರಭಾವದಿಂದ ಎಂದು ನಂಜುಂಡ ಹೇಳಿದ್ದರೆ, ಗಂಗನು ಅದಕ್ಕೆ ಕುಮಾರರಾಮನ ಸಹಜಚಿತ್ತಸ್ಥೈರ್ಯದ ಫಲವಾಗಿ ಎನ್ನುತ್ತಾನಂತೆ. ಕಂಪರಾಜನು ಮಗನ ತಲೆಯನ್ನು ಕತ್ತರಿಸಹೇಳಿದಾಗ ಇಂದ್ರದೂತನು ಪಡಿರೂಪಗಳನ್ನು ನಿರ್ಮಿಸಿಕೊಡುವುದಕ್ಕೆ ಬದಲಾಗಿ ಕಳ್ಳಬಂಟ ರಾಮನೆಂಬುವನು ಕುಮಾರರಾಮನಿಗೆ ಬದಲಾಗಿ ತನ್ನ ತಲೆಯನ್ನು ತೆತ್ತನೆಂದು ಹೇಳಿದ್ದಾನಂತೆ! ಇದರಿಂದ ಬಂಟನಿಗಿದ್ದ ಸ್ವಾಮಿಭಕ್ತಿ ಪ್ರದರ್ಶಿತವಾದಂತಾಗಿದೆ. ರಾಮನತಲೆಯನ್ನು ಮಾತಂಗಿ ಕತ್ತರಿಸಿದಾಗ ಅವನು ಸಮಾಧಿಯಲ್ಲಿದ್ದನೆಂದು ಹೇಳುವುದಕ್ಕೆ ಬದಲಾಗಿ, ಗಂಗಕವಿಯು ಆತನು ತೆಲುಗು ಮನ್ನೆಯರ ಮೋಸದಿಂದ ಸೋತುಹೋದನೆಂದೂ, ಶತ್ರುಗಳು ಕೇಳಿದಾಗ ತನ್ನ ತಲೆಯನ್ನು ತಾನೆ ಕತ್ತರಿಸಿಕೊಟ್ಟನೆಂದೂ ತಿಳಿಸಿದ್ದಾನಂತೆ!

ಕವಿ ಗಂಗನ ಕಾಲ ಕವಿಚರಿತೆಕಾರರಂತೆ ಕ್ರಿ. ಶ. ೧೬೫೦. ಆ ವೇಳೆಗೆ ಪುರಾಣದಲ್ಲಿ ಇತಿಹಾಸವನ್ನು ಹುಡುಕುವ ಕಾರ್ಯ ನಡೆಯಿತೋ ಏನೊ!

ಅಥವಾ ಬೇರೆಬೇರೆ ಕಡೆಗಳಲ್ಲಿ ಪ್ರಚಲಿತವಾಗಿದ್ದ ಕಥೆಗಳನ್ನು ಅವರಿಬ್ಬರೂ ಬೇರೆಬೇರೆಯಾಗಿಯೇ ಬರೆದರೊ!

**ಚೇರಮಾಂಕ ೧೫೨೬ :**

ವಾರ್ಧಕಷಟ್ಪದಿಯಲ್ಲಿ 'ಚೇರಮ ಕಾವ್ಯ'ವನ್ನು ಬರೆದ ಚೇರಮಾಂಕನು ರಾಜಪೂಜ್ಯನಾದ ಗಂಗಪ್ಪ ಸೆಟ್ಟಿಯ ಮಗ, ಚೆನ್ನವೀರೇಶನ ಶಿಷ್ಯ. ಗುಬ್ಬಿಯ ಮಲ್ಲಣಾರ್ಯನ ಕೃಪೆಯಿಂದ ಈತನು ಕಾವ್ಯರಚನೆ ಮಾಡಿದನಂತೆ! ಪೂರ್ವಕವಿಗಳಲ್ಲಿ ಇತರ ಶಿವಕವಿಗಳ ಜೊತೆಗೆ ವಾಲ್ಮೀಕಿಯನ್ನೂ ಸ್ತೋತ್ರಮಾಡುತ್ತಾನೆ. ೫೫೫ ಪದ್ಯಗಳನ್ನು ಒಳಗೊಂಡ ಈತನ ಕಾವ್ಯದಲ್ಲಿ ಸೌಂದರನಂಬಿಯ ಸಮಕಾಲೀನನಾದ ಚೇರಮನು ಆತನೊಡನೆ ಕೈಲಾಸಕ್ಕೆ ಹೋಗುವುದು ಕಥಾವಸ್ತು.

ಚೇರಮಾಂಕನು ಬಹು ಒಳ್ಳೆಯ ಕವಿ. ತನ್ನನ್ನು 'ನವರಸಭಾವ ಲಕ್ಷಣ ನಿಪುಣ'ನೆಂದು ಆತನು ಸಂಭಾವಿಸಿಕೊಂಡಿರುವುದು ಉಚಿತವಾಗಿದೆ. ಆತನ ಈ ಮಳೆಯ ವರ್ಣನೆಯನ್ನು ನೋಡಿ :

ಬೇಸಗೆಯ ಬಿಸಿಲುರಿಗೆ ಬಾಯಾರಿ ಮೇಘವಂ
ದಾ ಸಮುದ್ರೋದಕವನತಿ ತೃಷ್ಣೆಯಿಂ ಕೊಂಡ
ದೋಸದಿ ಜಲೋದರದ ರೋಗವಾಗಲ್ಕೊಂದು ಮೊಳಗೆಂಬ ಮೊರೆಯ
ನಿಡಲು
ಆಸುರದೆ ಕಾರೆಂಬ ವೈದ್ಯನಾ ಮಿಂಚೆಂಬ
ಭಾಸುರದ ಶಸ್ತ್ರಮಂ ಮನಲ್ಲಲ್ಲಿಗಿಡೆ ಪೋಳೆದು
ಸೂಸುತಿಹ ರಕ್ತಕಣವೊಗುವ ನೀರೆನಲಿಂದ್ರಗೋಪದೊಳ್ ಮಳೆ
ಕರೆದುವು

ಈತನ ಪದ್ಯಗಳನ್ನು ಓದುತ್ತಿದ್ದರೆ ಲಕ್ಷ್ಮೀಶ ಕವಿಯ ನೆನಪು ಬರುತ್ತದೆ. ಕುವಲಯಾನಂದದ ಕರ್ತೃವಾದ ಜಾಯೇಂದ್ರನು ಈತನ ಪದ್ಯಗಳನ್ನು ಉದಾಹರಿಸಿರುವುದು ಈತನ ಹಿರಿತನಕ್ಕೆ ಒಂದು ಸಾಕ್ಷಿ.

**ವೀರಭದ್ರ ಕವಿ (೧೫೩೦) :**

'ತ್ರಿಭುವನ ತಿಲಕ'ವೆಂಬ ಹೆಸರಿನಿಂದ ಶಿವಭಕ್ತ ಚೇರಮಾಂಕನ

ಕಥೆಯನ್ನು ಸಾಂಗತ್ಯದಲ್ಲಿ ಬರೆದ ವಿರುಪರಾಜನ ಮಗ ವೀರಭದ್ರಕವಿ. ರಾಜವಂಶಕ್ಕೆ ಸೇರಿದ ಈ ಕವಿ 'ವೀರಭದ್ರ ವಿಜಯ'ವೆಂಬ ಚಂಪೂಕಾವ್ಯವನ್ನೂ 'ಪಾರ್ವತೀವಲ್ಲಭ ಶತಕ', 'ಉಮಾಮಹೇಶ್ವರ ಶತಕ', 'ಪ್ರಾಣನಾಥ ಶತಕ', 'ಶ್ರೀಕಂಠ ಸೋಮೇಶ್ವರ ಶತಕ', 'ಕಂದ ಶತಕ' ಎಂಬ ಐದು ಶತಕಗಳನ್ನೂ ಬರೆದಿದ್ದಾನೆ. ದಕ್ಷನ ಯಜ್ಞವನ್ನು ಧ್ವಂಸಮಾಡಿದ ವೀರಭದ್ರನ ಕಥೆಯೇ ಇಲ್ಲಿಯ ಕಾವ್ಯವಸ್ತು. ಇದರ ಜೊತೆಗೆ ಶಿವನು ಶರಭಾವತಾರವನ್ನು ತಾಳಿ ನರಸಿಂಹನನ್ನು ನಿಗ್ರಹಿಸಿದ ಕಥೆಯೂ ಇದೆ. ಇದು 'ನವರಸಭರಿತ ನವ್ಯ ಕಾವ್ಯಂ ದಿವ್ಯಂ' ಎಂದು ಕವಿಯ ಹೇಳಿಕೆ. ಪೂರ್ವಕವಿಸ್ತವಾವಸರದಲ್ಲಿ ಹಂಪೆಯ ಹರಿಹರನನ್ನೂ ಕೇಶಿರಾಜನನ್ನೂ ಸ್ತುತಿಸಿದ್ದಾನೆ. ಈತನ 'ವೀರಭದ್ರ ವಿಜಯ'ದ ಮೊದಲ ಆರು ಸಂಧಿಗಳಲ್ಲಿಯೂ ಸಂಪ್ರದಾಯದ ವರ್ಣನೆಗಳು ತುಂಬಿವೆ. ಅಂತಹ ಮಹತ್ತರವಾದ ಕಾವ್ಯಗುಣಗಳೇನೂ ಇಲ್ಲಿ ಇಲ್ಲ. ಈತನ ಕಾವ್ಯ ಶೈಲಿ ಲಲಿತವಾಗಿದೆ, ನಿರರ್ಗಳವಾಗಿದೆ. ವರ್ಣನೆಗಳಲ್ಲಿ ವಿನೂತನತೆಯೇನೂ ಇಲ್ಲ, ಕವಿಸಮಯಾನುಸಾರಿಯಾಗಿವೆ. ಇದೊಂದು ಕಿರಾತಸ್ತ್ರೀಯ ವರ್ಣನೆ–

ನಡೆಗರಸಂಚೆಯುಂ, ಸರಕೆ ಕೋಕಿಲನುಂ, ಬಗೆವೆತ್ತು ತೋರ್ಪ ಮೆ
ಲ್ನುಡಿಗೆ ಶುಕಂಗಳಂ ಕುಚಯುಗಂಗಳ ಪೆರ್ಮೆಗೆ ಜಕ್ಕವಕ್ಕಿಯುಂ
ಮುಡಿಗೆ ನವಿಲ್ಗಳಂದಮನೆ ಪೋಲ್ತು ಕಿರಾತ ನಿತಂಬಿನೀ ಜನಂ
ಬಿಡದೆ ವಿಜಾತಿಯೆಂಬುದದು ಸಾರ್ಥಕಮಾಗೆಸೆದಿರ್ಪುದಾವಗಂ

ಅಲ್ಲಲ್ಲಿ ಸಾಕಷ್ಟು ಶ್ಲೇಷೆಯೂ ಇದೆ. ಸಮುದ್ರವರ್ಣನೆ ಮಾಡುವಂದು ಕವಿ 'ಅನಿಮಿಷವೃಂದದಿಂ ಸುರನಿವಾಸದವೊಲ್, ವಿದ್ರುಮಂಗಳಿಂ ವನದವೊಲ್' ಇತ್ಯಾದಿಯಾಗಿ ವರ್ಣನೆ ಮಾಡುತ್ತಾ ಹೋಗುವುದು ಹಳಗನ್ನಡ ಸಾಹಿತ್ಯವನ್ನು ಓದಿದವರಿಗೆ ಚರ್ವಿತಚರ್ವಣವಾಗುತ್ತದೆ. ವೀರಭದ್ರಕವಿ ತನ್ನ ತಂದೆಯಿಂದಲೂ, ಪೂರ್ವಕವಿಗಳಿಂದಲೂ ಸಾಕಷ್ಟು ಪ್ರಭಾವಿತನಾಗಿದ್ದಾನೆ.

ಕುಮಾರವ್ಯಾಸ ಯುಗದಲ್ಲಿ ವೀರಶೈವ ಪುರಾಣಗಳನ್ನು ಚಂಪೂವಿನಲ್ಲಿ ಬರೆದ ಮತ್ತೆ ಮೂವರು ಕವಿಗಳನ್ನೂ ನಾವಿಲ್ಲಿ ನೆನೆಯಬಹುದು. ಸದಾನಂದ ಶಿವಯೋಗಿ (೧೫೫೪) 'ರಾಮನಾಥ ವಿಲಾಸ'ವನ್ನೂ, ಮುರುಗಿ ದೇಶಿಕೇಂದ್ರ (೧೫೬೦) 'ರಾಜೇಂದ್ರ ವಿಜಯ'ವನ್ನೂ, ಸಿದ್ಧಲಿಂಗ ಶಿವಯೋಗಿ

(೧೬೦೦) 'ಭೈರವೇಶ್ವರ ಪುರಾಣ'ವನ್ನೂ ಬರೆದಿದ್ದಾರೆ. ಈ ಮೂವರೂ ವಿರಕ್ತರಾದ ಸನ್ಯಾಸಿಗಳೆಂದು ತೋರುತ್ತದೆ. ಸದಾಶಿವಯೋಗಿಗೆ 'ನವಬಾಣ ಕವಿ', 'ವಿಚಿತ್ರ ವಿದ್ವತ್ಕವಿಕುಲ ಸಾರ್ವಭೌಮ' ಎಂಬ ಬಿರುದುಗಳಿದ್ದ ವೆಂದೂ, ಈತನ ಕಾವ್ಯಕ್ಕೆ 'ರಾಮನಾಥ ಗುರುಚರಿತೆ' ಎಂಬ ಹೆಸರೂ ಇದ್ದಿತೆಂದೂ ಆತನ ಕಾವ್ಯದಿಂದ ತಿಳಿದು ಬರುತ್ತದೆ. ಈತನ ಚಂಪೂ ಗ್ರಂಥದ ಮಧ್ಯ ಮಧ್ಯದಲ್ಲಿ ಷಟ್ಪದಿಗಳೂ ಇರುವುದು ಇದರ ವೈಶಿಷ್ಟ್ಯ. ಮುದ್ರಾಪುರದ ರಾಮಲಿಂಗಮೂರ್ತಿಯಿಂದ ದೀಕ್ಷೆಯನ್ನು ಪಡೆದು, ಅದು ಸುಳ್ಳೆಂದು ಶಂಕಿಸಿದವರಿಗೆ ಲಿಂಗದಿಂದಲೇ ಸಾಕ್ಷಿ ಹೇಳಿಸಿ, ವೀರಶೈವಮತ ವನ್ನು ಪ್ರಸಾರಮಾಡಿದ ರಾಮನಾಥಾಚಾರ್ಯನ ಚರಿತೆ ಈತನ ಕಾವ್ಯವಸ್ತು. ಮುರುಗಿ ದೇಶಿಕೇಂದ್ರನು ಬರೆದ 'ರಾಜೇಂದ್ರ ವಿಜಯ' ಅಥವಾ 'ಹಮ್ಮೀರ ಕಾವ್ಯ'ಕ್ಕೆ 'ಸಿಂಗಿರಾಜಪುರಾಣ'ವು ಮೂಲ. ಅಲ್ಲಿ ಬಂದಿರುವ ಅಸಿಮಿ ಷಯ್ಯನ ಕಥೆಯನ್ನು ಅಲ್ಪ ಸ್ವಲ್ಪ ಬದಲಾವಣೆಗಳೊಡನೆ ಸ್ವೀಕರಿಸಿ ಬರೆದ ಕಾವ್ಯವೇ 'ಹಮ್ಮೀರ ಕಾವ್ಯ'. ಮೂಲದಲ್ಲಿ ಬರುವ ಮನುರಾಜನು ಹಮ್ಮೀರ ರಾಜ. ಈ ಹೆಸರು ಗುಜರಾಥ ದೇಶದ ರಾಜರ ಹೆಸರೆಂದೂ, ಕನ್ನಡದಲ್ಲಿ ಅದರ ಬಳಕೆ ಗುಜರಾಥ ಕರ್ಣಾಟಕಗಳ ಸಂಬಂಧದ ಸೂಚಕವೆಂದೂ, ಚಾಕುಲ್ಯವಂಶದ ರಾಜರು ಗುಜರಾಥಿನಲ್ಲಿ ರಾಜ್ಯವಾಳುತ್ತಿದ್ದರೆಂದೂ 'ಹಮ್ಮೀರ ಕಾವ್ಯ'ದ ಸಂಪಾದಕರಾದ ಶ್ರೀ ಎಂ. ಎಸ್. ಸುಂಕಾಪುರ ತಿಳಿಸುತ್ತಾರೆ. ಈ ವಿಚಾರದಲ್ಲಿ ಹೆಚ್ಚು ಸಂಶೋಧನೆ ಅಗತ್ಯವೆಂದು ತೋರು ತ್ತದೆ. ಹಮ್ಮೀರ ಕಾವ್ಯವು ಪಾಂಡಿತ್ಯ ಪ್ರಚುರವಾಗಿ ಕಬ್ಬಿಣದ ಕಡಲೆ ಯಂತಿದೆ. ಸಿದ್ಧಲಿಂಗ ಶಿವಯೋಗಿಯು ಭೈರವೇಶ್ವರ ಪುರಾಣಕ್ಕೆ 'ರಾಜೇಂದ್ರ ಪುರಾಣ'ವೆಂಬ ಹೆಸರೂ ಇದೆ. ಕಿಕ್ಕೇರಿಯಾರಾಧ್ಯ ನಂಜುಂಡನ ಸಾಂಗತ್ಯ ಗ್ರಂಥದಿಂದ ಈ ಕಾವ್ಯ ಉದಿಸಿದೆಯೆಂಬುದು ಗಮನಾರ್ಹವಾಗಿದೆ.

## ಗುರುಲಿಂಗ ವಿಭು (೧೫೫೦):

'ಕವಿರಾಯ.' 'ವಸ್ತುಕ ಕವೀಂದ್ರರ ವರ್ಣಕ ಕವೀಶ್ವರರ ಕರ್ಣಾ ಭರಣ' ಎಂದು ತನ್ನನ್ನು ಸಂಮಾನಿಸಿಕೊಂಡಿರುವ ಗುರುಲಿಂಗ ವಿಭು 'ಭಿಕ್ಷಾಟನ ಚರಿತೆ'ಯನ್ನು ಬರೆದಿದ್ದಾನೆ. ಶಿವನು ದ್ವಾರಕೆಗೆ ಹೋಗಿ,

ತನ್ನ ಅಜಕಪಾಲವನ್ನು ತುಂಬುವಂತೆ ಶ್ರೀ ಕೃಷ್ಣನಲ್ಲಿ ಭಿಕ್ಷೆಯನ್ನು ಬೇಡಲು, ಆತನು ತನ್ನ ತಲೆಯ ರಕ್ತದಿಂದ ಅದನ್ನು ತುಂಬಲಾರದೆ, ಮಹಾಭಾರತ ಯುದ್ಧವನ್ನು ನಡೆಸಿ ಅಲ್ಲಿನ ರಕ್ತಪ್ರವಾಹದಿಂದ ಶಿವನ ಭಿಕ್ಷಾಪಾತ್ರೆಯನ್ನು ತುಂಬಿದುದು ಈ ಕಾವ್ಯದ ಕಥಾವಸ್ತು. ಹಿಂದೆ ಸೂತ ಮುನಿಯು ನೈಮಿಶಾರಣ್ಯದಲ್ಲಿದ್ದ ಸನಕಾದಿಗಳಿಗೆ ಈ ಕಥೆಯನ್ನು ಹೇಳಿದ್ದನಂತೆ! ಅದನ್ನೆ ಶಾಸ್ತ್ರೀಗ ಹೇಳುತ್ತಿರುವುದಾಗಿ ಕವಿ ತಿಳಿಸಿದ್ದಾನೆ. ಆಶು, ಮಧುಕ, ಚಿತ್ರ, ವಿಸ್ತಾರ ಎಂಬ ನಾಲ್ಕು ಬಗೆಯ ಕಾವ್ಯಸೃಷ್ಟಿಯಲ್ಲಿ ಕವಿ ಪ್ರವೀಣನಾಗಿದ್ದ ನೆಂದು ತಿಳಿದು ಬರುತ್ತದೆ. 'ರಸಿಕರ ಹೃದಯವೆಂಬ ರಂಗಮಧ್ಯದೊಳು ನರ್ತಿಸುವ ನಚ್ಚಣಿಯಂತೆ' ತನ್ನ ಕೃತಿ ಮೋಹನವನೀವುದೆಂದು ಕವಿ ಆಶ್ವಾಸನ ನೀಡಿದ್ದಾನೆ. ತನ್ನ 'ಈ ಮೋಹಕೃತಿ ರಸಿಕರಾಭರಣ'ವಂತೆ! 'ಹೆಸರು ಹಾಲಯ್ಯ, ನೆರೆಮುಂಬುಡಂಬಿಲವೆಂದು ಉಸಿರುವರ ಗಾದೆಯಂತಲ್ಲ ವೆನ್ನೀ ಕೃತಿಯ ಹೆಸರು' ಎಂದು ಹೇಳುವಲ್ಲಿ ಕವಿಯು ಹೆಸರಿಗೆ ಅನುರೂಪವಲ್ಲದ ಕೃತಿಗಳನ್ನು ಮನೋಹರವಾಗಿ ಟೀಕಿಸಿದ್ದಾನೆ. ಆ ಟೀಕೆಯೂ, ತನ್ನ ಕೃತಿಯು ಹೆಸರಿಗೆ ಅನುರೂಪವಾಗಿದೆಯೆಂಬುದೂ ಸರ್ವ ಸತ್ಯ.

ಭಿಕ್ಷಾಟನ ಚರಿತೆ' ವಾರ್ಧಕ ಷಟ್ಪದಿಯ ೧೫೫ ಪದ್ಯಗಳನ್ನು ಒಳಗೊಂಡ ಪುಟ್ಟಕಾವ್ಯ; ಚಮತ್ಕಾರಯುಕ್ತವಾಗಿ, ಅಲಂಕಾರಮಯವಾಗಿ ಇರುವ ಲಘುಕಾವ್ಯ. ಕವಿಯು ನೇರವಾಗಿ ಕಥೆಯನ್ನು ಹೇಳಿಕೊಂಡು ಹೋಗಿದ್ದಾನೆ; ಎಲ್ಲಿಯೂ ಕಥೆಯನ್ನು ಅನಾವಶ್ಯಕವಾಗಿ ಲಂಬಿಸುವ, ಅಥವಾ ಉಚಿತವಲ್ಲದ ವರ್ಣನೆಗಳಿಂದ ಭಾರಗೊಳಿಸುವ ಅವಿವೇಕಕ್ಕೆ ಕೈ ಇಟ್ಟಿಲ್ಲ. ಹಾಗೆಂದು ಕಾವ್ಯ ನೀರಸವಾಗಿಯೇನೂ ಇಲ್ಲ. ಕವಿಯು ಬಹು ದೊಡ್ಡ ಪಂಡಿತ, ಅಲಂಕಾರಪ್ರಿಯ. ಸಾಕಷ್ಟು ಶ್ಲೇಷಾದಿ ಶಬ್ದಾಲಂಕಾರಗಳನ್ನು ಕಾವ್ಯದಲ್ಲಿ ತಂದಿದ್ದಾನೆ. ಆದರೆ ಅವು ಕ್ಲಿಷ್ಟವಾಗಿ ಇಲ್ಲ. ಶಿವನಿಗೆ ಭಿಕ್ಷೆಯನ್ನು ನೀಡಿದ ಸ್ತ್ರೀಯರನ್ನು ವರ್ಣಿಸುತ್ತಾ

ನಕ್ಷತ್ರ ಮಂಟಪದೊಳೊರ್ವ ಗೋಪಾಲಸತಿ
ನಕ್ಷತ್ರ ರಮಣನನುಜನ ತೊಡೆಯ ಮೇಲಿರ್ದು
ನಕ್ಷತ್ರಮಂ ಪಿಡಿದು ನಕ್ಷತ್ರದಿಂ ಹಿಮುವ ತುಂಬುತಿರಲಾ ಕ್ಷಣದೊಳು

ನಕ್ಷತ್ರ ರಿಪುಜನಕ ದನಿದೋರೆ ಬಾಗಿಲೊಳು
ನಕ್ಷತ್ರದಿಂ ಕೇಳುತೆಮ್ದು ಭಿಕ್ಷವ ನೀಡಿ
ನಕ್ಷತ್ರ ಪತಿಧರಗೆ ವಂದಿಸಿ ಮರಳಿ ಮನೆಯ ನಕ್ಷತ್ರವಂ ಸಾರ್ದಳು

ಇಲ್ಲಿಯು ಸ್ತ್ರೀವರ್ಣನಾ ಭಾಗದಲ್ಲಿ ಕವಿಯು ಸ್ವಲ್ಪ ಮಟ್ಟಿಗೆ ಅತಿಯೆಂಬಂತೆ ಲಘು ಶೃಂಗಾರವನ್ನು ತಂದಿರಬಹುದು. ಆದರೆ ಇತರ ಅನೇಕ ಕವಿಗಳ ಶೃಂಗಾರವ ರೊಚ್ಚೆಯೊಡನೆ ಹೋಲಿಸಿದಾಗ ಇದು ಅಕ್ಷಮ್ಯ ಅಪರಾಧವೆನಿಸುವುದಿಲ್ಲ. ಇಲ್ಲಿನ ಶ್ಲೇಷೆ ಪಂಡಿತರಾದವರಿಗೆ ಅಷ್ಟೇನೂ ಕಷ್ಟಕರವಾಗಿ ತೋರದಿದ್ದರೂ ಜನಸಾಮಾನ್ಯರಿಗೆ ಕಷ್ಟವಾಗಬಹುದೇನೊ! ಆದ್ದರಿಂದಲೆ ಈ ಗ್ರಂಥಕ್ಕೆ ಒಂದು ಕನ್ನಡ ವ್ಯಾಖ್ಯಾನವೂ ಹುಟ್ಟಿಕೊಂಡಿದೆ. ಗುರುಲಿಂಗ ವಿಭು ಲಘುಕಾವ್ಯಕರ್ತರಲ್ಲಿ ಶ್ರೇಷ್ಠನಾದವನು.

**ಕಿಕ್ಕೇರಿಯಾರಾಧ್ಯ ನಂಜುಂಡ** (೧೫೫೦) :

'ಭೈರವೇಶ್ವರ ಕಾವ್ಯ'ದ ಕರ್ತೃವಾದ ಕಿಕ್ಕೇರಿಯಾರಾಧ್ಯ ನಂಜುಂಡನು ವೀರಶೈವ ಪುರಾಣವೊಂದನ್ನು ಸಾಂಗತ್ಯದಲ್ಲಿ ಬರೆದ ಕವಿಗಳಲ್ಲಿ ಅಗ್ರಗಣ್ಯ. ಈತನ ಸ್ಥಳ ಕಿಕ್ಕೇರಿಯಾದ್ದರಿಂದ ಈತನಿಗೆ ಈ ಹೆಸರು ಬಂದಿದೆ. ತನ್ನ ಕಾವ್ಯವು

ಭಕ್ತಿಯ ತಾಣ, ಸನ್ಮುಕ್ತಿಯ ಸದನ, ವಿ। ರಕ್ತಿಯ ಸೀಮೆ, ಮೋಹನದ
ಸೂಕ್ತಿಯ ಸಿರಿ, ಸರಸೋಕ್ತಿಯ ನೆಲೆಯಾಗಿ ವ್ಯಕ್ತವಾಗಿರ್ಪುದೀ ಕಾವ್ಯ

ಎಂದು ಕವಿ ಹೇಳಿಕೊಂಡಿದ್ದಾನೆ. ಐದು ಸಂಧಿಗಳಲ್ಲಿ ಹಬ್ಬಿರುವ ಈ ೧೨೭ ಸಾಂಗತ್ಯ ಪದ್ಯಗಳ ಪುಟ್ಟಕಾವ್ಯ ಕಾವ್ಯದೃಷ್ಟಿಗಿಂತಲೂ ಹೆಚ್ಚಾಗಿ ಪುರಾಣ ದೃಷ್ಟಿಯಿಂದ ಮಹತ್ವವನ್ನು ಪಡೆದಿದೆ. ಪುರಾತನರಾದ ಬಸವಾದಿ ಪ್ರಮಥರು ವೀರಶೈವವನ್ನು ಉದ್ಧರಿಸಿ ಮುಕ್ತರಾದ ಮೇಲೆ, ವೀರಶೈವವು ಕಾಲ ಕ್ರಮದಲ್ಲಿ ಖಿಲವಾಯಿತು. ಆಗ ಅದನ್ನು ಉದ್ಧರಿಸಲೆಂದು ಪರಶಿವನು ಕಾಲಸಂಹಾರನೆಂಬ ಗಣೇಶ್ವರನನ್ನು ಮರ್ತ್ಯಕ್ಕೆ ಕಳುಹಿಸಿದನು. ಆತನು ಆಂಧ್ರದೇಶದಲ್ಲಿ ಸಂಗಮರಾಜ–ಹೈಮವತಿಯೆಂಬ ರಾಜದಂಪತಿಗಳ ಮಗನಾಗಿ ಭೈರವರಾಜನೆಂಬ ಹೆಸರಿನಿಂದ ಹುಟ್ಟಿ, ಪೌರಾಣಿಕನಿಂದ ಶಿವಶರಣರ ಕಥೆಗಳನ್ನು ಕೇಳಿ ತಾನೂ ಅದ್ವಿತೀಯನಾದ ಶಿವಭಕ್ತನಾದನು. ಒಂದು

ಕವಿ ರಾಘವಾಂಕನ ಪೊಗಳಿ ಕವಿತಾನುಭವ ಪಡೆವೆನು' ಎಂದುಕೊಂಡ ಸಿದ್ಧನಂಜೇಶ ಆ ಶಿವಕವಿಯ ಜೀವನ ಚರಿತೆಯನ್ನು ಒಳಗೊಂಡ ತನ್ನ ಕಾವ್ಯವು

ಇದುವೆ ರಸಿಕರ ರಸಾಯನ ಕಬ್ಬಿಗರ ಹಬ್ಬ
ವಿದು ಪ್ರೇಮದಿಂ ಕೇಳ್ವ ಜನದ ಕರ್ಣಾಭರಣ
ವಿದುವೆ ಸೊಬಗರ ಸೊಬಗು ಕೋವಿದರ ಕೊರಲ ಹಾರಂ ಗಮಕಿಗಳ
ಗಮಕವು

ಇದುವೆ ಭಾವದ ಪಕ್ಕೆಯಿದುವೆ ನವರಸದಿಕ್ಕೆ
ಯಿದು ಸದಾಚಾರ ಸುಖಸದನ ಮೋಹನದ ಧನ
ವಿದನೋದಿ ಕೇಳಿ ಲಾಲಿಸದರಾರ್ ಧರೆಯೊಳಗೆ ದಿವ್ಯ
ಕಾವ್ಯಾಮೃತವನು

ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಮಹದೇವ ಭಟ್ಟ-- ರುದ್ರಾಣಿಯರ ಮಗನಾಗಿ ರಾಘವಾಂಕ ಹಂಪೆಯಲ್ಲಿ ಹುಟ್ಟಿದುದು. ಸೋದರಮಾವನಾದ ಹರಿಹರ ಕವಿಯಿಂದ ದೀಕ್ಷೆಯನ್ನೂ ಶಿಕ್ಷಣವನ್ನೂ ಪಡೆದದ್ದು, ದೇವರಾಜನ ಸಭೆಯಲ್ಲಿ ಹರಿಶ್ಚಂದ್ರ ಕಾವ್ಯವನ್ನು ಓದಿದ್ದು, ಆ ಕಾವ್ಯದ ವಿಚಾರದಲ್ಲಿ ಹರಿಹರನೊಡನೆ ವಾದಮಾಡಿ ಹಲ್ಲು ಕಳೆದುಕೊಂಡು ಮತ್ತೆ ಆತನ ಅನುಗ್ರಹದಿಂದ ಹಲ್ಲುಗಳನ್ನು ಪಡೆದದ್ದು, ಅಷ್ಟಾವರಣದ ಮಹಿಮೆಯನ್ನು ಗುರುವಿನಿಂದ ಕೇಳಿದ್ದು, ಸೋಮನಾಥ ಚಾರಿತ್ರ ಶರಭ ಚಾರಿತ್ರಗಳನ್ನು ಬರೆದದ್ದು, ಕುಮಾರವ್ಯಾಸನ ಗರ್ವಭಂಗಮಾಡಿ ಆತನಿಗೆ ಹರಿಹರಮಹತ್ವವನ್ನು ಹೇಳಿದ್ದು, ತನ್ನ ಸಿದ್ಧರಾಮ ಚಾರಿತ್ರದೊಡನೆ ಹೋಗಿ ಕೆರೆಯ ಪದ್ಮರಸನನ್ನು ಕಂಡದ್ದು, ರುದ್ರಪ್ರತಾಪನ ಸಭೆಯಲ್ಲಿದ್ದ ಕವಿಗಳನ್ನು ವೀರೇಶಚರಿತೆಯೆಂಬ ಮೀಸಲುಗವಿತೆಯ ಮೂಲಕ ಭಂಗಿಸಿ ಹಂಪೆಗೆ ಹಿಂದಿರುಗಿದ್ದು, ಗುರುವಿನ ಅಪ್ಪಣೆಯಂತೆ ಬೇಲೂರಿನಲ್ಲಿ ಸಮಾಧಿ ಹೊಂದಿದ್ದು ಇಲ್ಲಿ ವಿಸ್ತಾರವಾಗಿ ಪ್ರತಿಪಾದಿತವಾಗಿದೆ. ರಾಘವಾಂಕನು ಬರೆದ 'ಹರಿಹರ ಮಹತ್ವ'ದ ಕಥೆಯನ್ನು ಹೇಳುವಾಗ ಹರಿಹರನಿಂದ ರಚಿತವಾದ ಕಾವ್ಯಗಳು, ಅವನ್ನು ಬರೆದ ಸಂದರ್ಭಗಳು ವರ್ಣಿತವಾಗಿರುವುವಲ್ಲದೆ ಅನೇಕ ಶರಣರ ಕಥೆಗಳೂ ಇದರಲ್ಲಿ ಪ್ರತಿಪಾದಿತವಾಗಿವೆ.

ಸಿದ್ಧನಂಜೇಶನ ' ಗುರುರಾಜ ಚಾರಿತ್ರ'ವು ಶಿವಶರಣರ ಒಂದು ಕಥಾ ಕೋಶ. ನೂರಾರು ಜನ ನೂತನ ಮತ್ತು ಪುರಾತನರ ಕಥೆಗಳಿಂದ ಇದು ನಿಬಿಡವಾಗಿದೆ. ಕವಿಯು ತನ್ನ ಗುರು ಸಿದ್ಧನಂಜೇಶನು ತನ್ನ ಮಡದಿ ಚೆನ್ನ ವೀರಾಂಬೆಗೆ ಹೇಳಿದುದನ್ನೇ ತನ್ನ ಗುರುವಿನ ಅಪ್ಪಣೆಯಂತೆ ಕಾವ್ಯರೂಪ ವಾಗಿ ಬರೆದಿರುವುದಾಗಿ ಹೇಳಿಕೊಂಡಿದ್ದಾನೆ. ಕಾವ್ಯವು ಉದ್ದಕ್ಕೂ ಆ ಗುರುದಂಪತಿಗಳ ಸಂಭಾಷಣೆಯಿಂದಲೇ ಪ್ರಾರಂಭವಾಗಿ ಮುಂದುವರಿಯು ತ್ತದೆ. ಪ್ರತಿಯೊಂದು ಸಂಧಿಯ ಆರಂಭದಲ್ಲಿಯೂ ಚೆನ್ನವೀರಾಂಬೆ ವಿಷಯ ವನ್ನು ಸೂಚಿಸಿ ವಿವರಗಳನ್ನು ಬೇಡುತ್ತಾಳೆ, ಸಿದ್ಧನಂಜೇಶ ಗುರ ಆಕೆಯ ಪ್ರಾರ್ಥನೆಯನ್ನು ಸಲ್ಲಿಸುತ್ತಾನೆ. ಇದರ ಫಲವಾಗಿ ಪಂಚಾಚಾರ್ಯ ಚರಿತೆ, ಶಿವನ ಪಂಚವಿಂಶತಿ ಲೀಲೆಗಳು, ಲಿಂಗಾರ್ಚನಾವಿಧಿ, ಷೋಡಶೋಪಚಾರ ವಿಧಾನ, ಬಸವ ಪುರಾಣದ ಕಥೆಗಳು, ಗಣಸಾಹಸ್ರನಾಮ, ನೂತನ ಶರಣರು, ' ಶಿವತತ್ವಚಿಂತಾಮಣಿ'ಯ ನೂತನ ಪುರಾತನರು, ಮಲ್ಲಣಾರ್ಯನ ಕಾವ್ಯದಲ್ಲಿ ಬರುವ ಶರಣರು, ವರ್ತಮಾನ ಕಾಲದ ಭಕ್ತರು—ಇತ್ಯಾದಿ ಗಳನ್ನು ಗುರುಸತಿ ತಿಳಿಯಬಯಸುತ್ತಾಳೆ, ಗುರುವು ತಿಳಿಸುತ್ತಾನೆ. ಹೀಗಾಗಿ ವೈವಿಧ್ಯ ಮಯವಾದ ಈ ಕಾವ್ಯಕ್ಕೆ ಈ ದಂಪತಿಗಳು ಒಂದು ಏಕತೆಯನ್ನು ಒದಗಿಸಿದ್ದಾರೆ—' ಸೂತ್ರೇ ಮಣಿಗಣಾ ಇವ.'

ಕವಿ ಸಿದ್ಧನಂಜೇಶನು ತನ್ನ ಒಂದು ಕಾವ್ಯದಲ್ಲಿ ಕಾವ್ಯಧರ್ಮವನ್ನೂ ಮತ್ತೊಂದರಲ್ಲಿ ಧರ್ಮವನ್ನೂ ನೀಡುವೆನೆಂಬ ನಿಲುವಿನಲ್ಲಿ—ರಾಘವಾಂಕ ಚಾರಿತ್ರದಲ್ಲಿ ಕಾವ್ಯ ರಮಣೀಯತೆಯನ್ನೂ, ಗುರುರಾಜ ಚಾರಿತ್ರದಲ್ಲಿ ಮಾಹೇಶ್ವರರ ಮೆಚ್ಚುಗೆಗೆ ತಕ್ಕ ಧರ್ಮವನ್ನೂ—ನೀಡಿದ್ದಾನೆ. ಸ್ವಲ್ಪ ಮಟ್ಟಿಗೆ ಆತನ ನಿಲವು ಸರಿ. ಯವ್ವನದಲ್ಲಿ ಬರೆದ ರಾಘವಾಂಕ ಚಾರಿತ್ರ ಕ್ಕಿಂತ ಇಳಿವಯಸ್ಸಿನಲ್ಲಿ ಬರೆದಿರಬಹುದಾದ ಗುರುರಾಜ ಚಾರಿತ್ರದಲ್ಲಿ ವೀರಶೈವಧರ್ಮ ಹೆಚ್ಚು ವಿಸ್ತಾರವಾಗಿದೆ. ಮೂಲತಃ ಎರಡರಲ್ಲಿಯೂ ಶ್ರೇಷ್ಠವಾದ ಕಾವ್ಯಾಂಶಗಳು ಕಡಮೆ. ಆದರೆ ಕವಿಯ ಎರಡು ಗ್ರಂಥಗಳೂ ಸಾಹಿತ್ಯ ಚರಿತ್ರೆಗೆ ತುಂಬ ಸಹಾಯಕವಾಗಿವೆ ; ಎರಡು ಕಾವ್ಯಗಳಲ್ಲಿಯೂ ಹಲವಾರು ಕವಿಗಳು ಸ್ತುತ್ಯರಾಗಿದ್ದಾರೆ. ಆದ್ದರಿಂದ ಆ ಕವಿಗಳ ಕಾಲ ವನ್ನು ನಿರ್ಧರಿಸುವುದಕ್ಕೆ ಸಿದ್ಧನಂಜೇಶನ ಕಾವ್ಯಗಳು ಒಂದು ಗಡಿಯ

ಇಲ್ಲಿ ಇತರ ನೂರಾರು ಶಿವಶರಣರ ಕಥೆಗಳೇ ಹೆಚ್ಚಾಗಿವೆ. ಇದೊಂದು ಶಿವ ಶರಣರ ಕಥಾಕೋಶ. ಇದನ್ನು ಗುಳೂರು ಸಿದ್ಧವೀರೇಶ್ವರನ ಅಪ್ಪಣೆಯಂತೆ ಬರೆದಿರುವುದಾಗಿ ಕವಿಯ ಹೇಳಿಕೆ. 'ಕರ್ಣಾಟಕ ಶಬ್ದಮಂಜರಿ' ಹಳಗನ್ನಡ ಪದಗಳ ಅರ್ಥವನ್ನು ತಿಳಿಸುವ ಒಂದು ನಿಘಂಟು. ಅಚ್ಚಗನ್ನಡ, ಗೂಢ ಪದ, ತತ್ಸಮ, ತದ್ಭವ ಪದಗಳಿಗೆಲ್ಲ 'ಕವೀಶ್ವರರುದಾಹರಣ ಮಾರ್ಗ ವಿಡಿದು' ಅರ್ಥವನ್ನು ಕೊಟ್ಟಿರುವುದರಿಂದ ಕನ್ನಡ ವಿದ್ಯಾರ್ಥಿಗಳಿಗೆ ಇದು ಬಹು ಉಪಯುಕ್ತವಾದ ಗ್ರಂಥ. ಕವಿಯ 'ಮನೋವಿಜಯ ತಾತ್ಪರ್ಯ'ವು ಗುರುಬಸವಕವಿಯ 'ಮನೋವಿಜಯ ಕಾವ್ಯ'ದ ವ್ಯಾಖ್ಯಾನ. 'ಮಗ್ಗೆಯ ಮಾಯಿದೇವ ಶತಕತ್ರಯ ಟೀಕೆ' ಅದರ ಹೆಸರೇ ಸೂಚಿಸುವಂತೆ ಮಗ್ಗೆಯ ಮಾಯಿದೇವನ ಮೂರು ಶತಕಗಳ—ಐಪುರೀಶ್ವರ ಶತಕ, ಶಿವಾಧವ ಶತಕ, ಶಿವಾವಲ್ಲಭ ಶತಕ—ವ್ಯಾಖ್ಯಾನ. ತಾನು 'ಚಿದಾನಂದ ಸಿಂಧು' ಎಂಬ ಚಂಪೂ ಗ್ರಂಥವನ್ನು ಬರೆದಿರುವುದಾಗಿ 'ಪಾಲ್ಕುರಿಕೆ ಸೋಮೇಶ್ವರ ಪುರಾಣ' ದಲ್ಲಿ ಕವಿ ಹೇಳಿಕೊಂಡಿದ್ದಾನೆ. ಈತನು 'ಸಿದ್ಧಲಿಂಗೇಶ್ವರ ಶತಕ' 'ಪಾಲ್ಕುರಿಕೆ ಸೋಮನಾಥನ ಪಂಚಗದ್ಯಗಳ ಟೀಕೆ' ಎಂಬ ಗ್ರಂಥಗಳನ್ನೂ ಬರೆದಿರುವುದಾಗಿ ಗೊತ್ತಾಗುತ್ತದೆ. ಆದರೆ ಇವಾವುವೂ ಉಪಲಬ್ಧವಾಗಿಲ್ಲ.

'ಸಿದ್ಧೇಶ್ವರ ಪುರಾಣ'ದಲ್ಲಿ ಕವಿಯು ತನ್ನ ಕವಿತೆಯ ಶ್ರೇಷ್ಠತೆಯನ್ನು ಸ್ಥಾಪಿಸ ಹೊರಟು, ತನ್ನ ಕಾವ್ಯರಸ ಮಲ್ಲಿಗೆಯ ಗೊಂಚಲು, ಕೋಗಿಲೆಯ ಕೂಜನ, 'ಪೊಸಜವ್ವನದ ಚಲ್ಲೆಗಂಗಳ ಕಾಂತೆಯರ ಲಲ್ಲೆವಾತು'–ಇವೆಲ್ಲ ವನ್ನೂ ಮೀರಿಸಿದೆಯೆಂದು ಹೇಳಿಕೊಂಡಿದ್ದಾನೆ. ಆದರೆ ಕಾವ್ಯದೃಷ್ಟಿಯಿಂದ ವಿರಕ್ತತೋಂಟದಾರ್ಯನಿಗೆ ಅಷ್ಟೇನೂ ಪುರಸ್ಕಾರ ನೀಡುವಂತಿಲ್ಲ. ಆತನು ಒಳ್ಳೆಯ ಪುರಾಣಕರ್ತ ; ಅಷ್ಟೆ.

**ಶಾಂತೇಶ (೧೫೬೧) :**

ಅಮರಗುಂಡದ ಮಲ್ಲಿಕಾರ್ಜುನನ ಅಪ್ಪಣೆಯಂತೆ ಶೂಲವನ್ನೇರಿದ ಗುರುಭಕ್ತನ ವಂಶದಲ್ಲಿ ಹುಟ್ಟಿದವನು ಶಾಂತೇಶ. ಈತನಿಗೆ ಶಾಂತ ದೇಶಿಕ ನೆಂದೂ ಹೆಸರಿದೆ. ವಿರಕ್ತ ತೋಂಟದಾರ್ಯನು ವಾರ್ಧಕಷಟ್ಪದಿಯಲ್ಲಿ ಬರೆದ ತೋಂಟದ ಸಿದ್ಧೇಶ್ವರ ಚರಿತೆಯನ್ನು ಈತ ಭಾಮಿನೀ ಷಟ್ಪದಿಯ ಒಂದು

ಸಾವಿರ ಪದ್ಯಗಳಲ್ಲಿ ಬರೆದಿದ್ದಾನೆ. ತೋಂಟದ ಸಿದ್ಧಲಿಂಗಯತಿಯು ತನ್ನ ಶಿಷ್ಯನಾದ ಚಂದ್ರಶೇಖರನಿಗೆ ಭುವನಕೋಶ, ಧರ್ಮಾಧರ್ಮವಿಚಾರ, ಶಿವನ ಪಂಚವಿಂಶತಿ ಲೀಲೆಗಳು, ಷಟ್‌ಸ್ಥಲಕ್ರಮ- ಇವುಗಳನ್ನು ಬೋಧಿಸಿದ ನಂತೆ. ಇದನ್ನೆಲ್ಲ ಕಾವ್ಯರೂಪದಲ್ಲಿ ಬರೆಯುವಂತೆ ಆತನು ಶಾಂತೇಶನಿಗೆ ಆಜ್ಞಾಪಿಸಿದನಂತೆ. ಆತನ ಅಪ್ಪಣೆಯಂತೆ ಕವಿಯು ತನ್ನ ಕಾವ್ಯವನ್ನು ಬರೆದಿರುವುದಾಗಿ ಹೇಳಿಕೊಂಡಿದ್ದಾನೆ. ಕವಿಗೆ ಯಮಕ, ಶ್ಲೇಷೆ, ನಿರೋಷ್ಠ ಇತ್ಯಾದಿ ಪಾಂಡಿತ್ಯ ಪ್ರದರ್ಶನದಲ್ಲಿ ಅಭಿರುಚಿ ಕಂಡುಬರುತ್ತದೆ. ಶಾಂತೇಶನ ಕೃತಿಯಲ್ಲಿ ರಸಸ್ಯಂದಿಯಾದ ಸನ್ನಿವೇಶಗಳು ಅಷ್ಟಾಗಿಲ್ಲ; ಆದರೆ ಆತನ ಷಟ್ಪದಿಗಳ ಓಟ ನಿರರ್ಗಳವಾಗಿದೆ, ನಾದಮಯವಾಗಿದೆ. ಆತನ ಈ ವನದ ವರ್ಣನೆಯನ್ನು ನೋಡಿ.

ತಿಳಿಗೊಳಂಗಳ ನಡುವೆ ಮೂಡಿದ | ನಳಿನ ಕೈರವಕೆರಗಿ ಝುಂಕರಿ
ಪಳಿಗಳಿಂದಂ ಜಕ್ಕವಕ್ಕಿಯ ತೆಕ್ಕೆಯಿಂ ಮತ್ತೆ
ಬಳಸಿ ತೋರುವ ಮಾಮರಂಗಳೊ | ಳೆಳಸಿ ಕೂಗುವ ಪಿಕನಿಕರದಿಂ
ಗಿಳಿಯ ಸವಿನುಡಿಯಿಂದ ವನಮಂತಲ್ಲಿ ರಾಜಿಪುದು

ಕಲ್ಪನಾವಿಲಾಸದ ಮೆರುಗೇನೂ ಇಲ್ಲದಿದ್ದರೂ ಅಕ್ಷರ ಜೋಡಣೆಯಲ್ಲಿ, ಮಾತುಗಳ ಸಿರಿಗೆಯಲ್ಲಿ ರಮ್ಯತೆ ಇದೆ.

**ಅದೃಶ್ಯಕವಿ (೧೫೮೦):**

ವಿದ್ಯಾನಗರದ ರಾಜನಾದ ಪ್ರೌಢರಾಯನಿಗೆ ಆತನ ಮಂತ್ರಿಯಾದ ಜಕ್ಕಣಾಚಾರ್ಯನು ಹೇಳಿದ ಅನೇಕ ಶಿವಶರಣರ ಕಥೆಗಳನ್ನು ಕೇಳಿದ ಅದೃಶ್ಯಕವಿ ಅಥವಾ ಅದ್ರೀಶಕವಿ ಆ ಕಥೆಗಳ ಸಾರವನ್ನು ಕಾವ್ಯರೂಪ ವಾಗಿ ಬರೆದು ಅದಕ್ಕೆ 'ಪ್ರೌಢರಾಯನ ಕಾವ್ಯ' ಎಂದು ನಾಮಕರಣ ಮಾಡಿದನು. ಹೇಳಿಕೊಳ್ಳುವಂತಹ ಕಾವ್ಯಗುಣಗಳೇನೂ ಇಲ್ಲಿ ಇಲ್ಲವಾದರೂ ವೀರಶೈವ ಶರಣರ ಕಥೆಗಳನ್ನು ಕಾಣಹೊರಡುವವರಿಗೆ ಇಲ್ಲಿ ವಸ್ತುವಿದೆ. ಪ್ರೌಢರಾಯನ ಕಾಲದ ಸಾಹಿತ್ಯೇತಿಹಾಸದ ಮೇಲೂ ಇಲ್ಲಿ ಸ್ವಲ್ಪ ಬೆಳಕು ಬಿದ್ದಿದೆ. ರಾಜನ ಬಳಿ ಇದ್ದ ಕಂದಾಳ ಸಿದ್ದಯಾಚಾರ್ಯನು ಭಾರತವನ್ನು ಓದಿ ಅದಕ್ಕೆ ಮೆರವಣಿಗೆ ಮಾಡಿಸಿದನು. ಅದನ್ನು ಕಂಡ ಜಕ್ಕಣಾಚಾರ್ಯನು

ಪ್ರಭುದೇವನ ವಚನಗಳಿಗೆ ಏಕೋತ್ತರ ಶತಸ್ಥಲದ ಸೂತ್ರಗಳ ವ್ಯಾಖ್ಯಾನವನ್ನು ಮಾಡಿ, ಅದನ್ನು ೧೦೧ ವಿರಕ್ತರು ಮತ್ತು ಕರಸ್ಥಲದ ನಾಗಯ್ಯ. ಕಲ್ಲು ಮಠದ ಪ್ರಭುದೇವ ಮೊದಲಾದವರಿಂದ ಮೆರವಣಿಗೆ ಮಾಡಿಸಿದನು. ಮುಕುಂದಪೆದ್ದಿಗೂ ಜಕ್ಕಣಸಿಗೂ ವಾಗ್ವಾದವಾಯಿತು. ಚಾಮರಸನು ದಿನಕ್ಕೆ ೧೧ ಪದ್ಯದಂತೆ ಪ್ರಭುಲಿಂಗಲೀಲೆಯನ್ನು ಬರೆದು, ರಾಜನಲ್ಲಿ ಅದನ್ನು ಓದಿದನು. ಜಕ್ಕಣಾಚಾರ್ಯನು ಅದಕ್ಕೆ ವ್ಯಾಖ್ಯಾನ ಮಾಡಿದನು. ಸಂತೋಷಗೊಂಡ ರಾಜನು ಆತನಿಗೆ ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟನು. ಆತನು ಚಾಮರಸನನ್ನು ರಾಜನ ಮಂತ್ರಿಯಾಗಿ ನೇಮಿಸಿ. ತಾನು ಬಯಲಾದನು. ಈ ಇತಿಹಾಸಾಂಶವನ್ನು ಬಿಟ್ಟರೆ ಪ್ರೌಢರಾಯನ ಕಾವ್ಯವೆಲ್ಲವೂ ವೀರಶೈವಕ್ಕೆ ಸಂಬಂಧಿಸಿದ ಧಾರ್ಮಿಕಾಂಶಗಳಿಂದ ತುಂಬಿದೆ.

**ವಿರೂಪಾಕ್ಷಪಂಡಿತ** (೧೫೮೪):

ಪ್ರತ್ಯಕ್ಷ ಪರಮೇಶ್ವರನೇ ಮಲ್ಲಯ್ಯನೆಂಬ ಹೆಸರಿನಿಂದ ಭೂಮಿಯಲ್ಲಿ ಅವತರಿಸಿ, ಧರೆಯನ್ನೆಲ್ಲಾ ಸಂಚರಿಸುತ್ತಾ ಮೆಕ್ಕಕ್ಕೆ ಹೋಗಿ ಅಲ್ಲಿನ ಏಳು ನೂರುಜನ ಖಲಿಂದರರಿಗೆ ಗುರುವಾಗಿ, ಆ ದೇಶದಲ್ಲಿ ಪ್ರಾಪ್ತವಾಗಿದ್ದ ಅನಾವೃಷ್ಟಿಯನ್ನು ಹೋಗಲಾಡಿಸಿ, ಅಲ್ಲಿನ ಸುರತಾಳನಿಂದ ಪೂಜೆಯನ್ನೂ 'ಮಳೆಯ ಮಲ್ಲೇಶ' ನೆಂಬ ಕೀರ್ತಿಯನ್ನೂ ಪಡೆದನು. ಈ ಮಳೆಯ ಮಲ್ಲೇಶನ ಪರಂಪರೆಯಲ್ಲಿ ಬಂದ ಸಿದ್ಧವೀರೇಶನು ಷಟ್‌ಸ್ಥಲಜ್ಞಾನಿಯಾಗಿ ವಿಜಯನಗರದ ಹಿರಿಯ ಮಠದಲ್ಲಿ ಗುರುವಾಗಿದ್ದನು. ಈತನ ಶಿಷ್ಯನೇ ವಿರೂಪಾಕ್ಷಪಂಡಿತ. ಈತನು

ಸರಸಕರ್ಣಾಟಾದಿ ಭಾಷಾವಿಶಾರದಂ
ವರಕವಿಪ್ರಕರ ಮಾನಸರಾಜ ಹಂಸನ
ತ್ಯುರುತರ ಶಿವಾಚಾರ ಸಂಪನ್ನನಸುಹೃತ್ಕವಿಪ್ರತತಿ ವಾರ್ಧಿ
ವಡಬಂ

ಈತನ ಬಳಿಗೆ ಸಕಲಶಿವಭಕ್ತ ಸಂಕುಲವೂ ಬಂದು, ನಮಸ್ಕರಿಸಿ

ಧರೆಯೊಳಗೆ ಸಕಲ ಶರಣರ ಕಥೆಗಳಂ ಕವೀ
ಶ್ವರರೊಲ್ದು ಪೇಳ್ದರೀ ಚೆನ್ನ ಬಸವೇಶ್ವರನ
ಚರಿತೆಯನದೊರ್ವರುಂ ಪೇಳ್ದುದಿಲ್ಲೆಮಗದಂ ನಿರವಿಸು....

ಎಂದು ಕೇಳಿಕೊಂಡರು. ಅದಕ್ಕೆ ವಿರೂಪಾಕ್ಷಕವಿ ಒಪ್ಪಿ 'ವರ್ಣಕಕ್ಕಿಲ್ಲ ಲಕ್ಷಣವೆಂಬ ಜನರ ನಾಣ್ಣುಡಿಯನಲ್ಲೆನಿಸಿ' ಜಗತ್ಸೇವ್ಯವಾದ ವಿನೂತನ ಕಾವ್ಯ 'ಚೆನ್ನಬಸವ ಪುರಾಣ'ವನ್ನು ರಚಿಸಿದ. ತನ್ನ 'ಹೃತ್ಕಮಲ ಕರ್ಣಿಕಾ ಮಧ್ಯದಲ್ಲಿ ಎಡೆವಿಡದೊಲಾವಗಮಿರ್ಪ ಪಂಪಾಕ್ಷೇತ್ರದೊಡೆಯಂ ವಿರೂಪಾಕ್ಷನೇ ಪೇಳಿಸಿ'ದ, ತನ್ನಿಂದ, ಈ ಕಾವ್ಯವನ್ನು. ಆದ್ದರಿಂದ ಭಕ್ತರು ಈ ಕಥೆಯನ್ನು ಒಲಿದು ಕೇಳಬೇಕು. 'ಎತ್ತಾನುವೊಂದು ತಪ್ಪಿರಲದಂ ತಿರ್ದಿ....ಲೇಸವೆುರೆವುದು ಎಂದು ಹೇಳಿಕೊಂಡು ಕವಿ ಕಾವ್ಯವನ್ನು ಆರಂಭಿಸಿದ್ದಾನೆ. ಸುಮಾರು ೨೯೦೦ ಪದ್ಯಗಳಷ್ಟು ವಾರ್ಧಕ ಷಟ್ಪದಿಗಳಲ್ಲಿ ಹಬ್ಬಿರುವ ಈ ಬೃಹತ್ ಕಾವ್ಯದಲ್ಲಿ ೬೩ ಸಂಧಿಗಳಿವೆ. ಈ ಗ್ರಂಥ ೫ ಕಾಂಡಗಳಾಗಿ ವಿಭಾಗವಾಗಿದೆ. ಕಾವ್ಯದ ಕೊನೆಯಲ್ಲಿ ಕವಿಯು ತನ್ನ ಗ್ರಂಥವು ಮುಗಿದ ತೇದಿಯನ್ನು ಕೊಟ್ಟಿದ್ದಾನೆ. ಶಾಲಿವಾಹನ ಶಕ ೧೫೦೬ ತಾರಣ ಸಂವತ್ಸರ ಎಂದರೆ ಕ್ರಿ. ಶ. ೧೫೮೪ರಲ್ಲಿ 'ಚನ್ನ ಬಸವ ಪುರಾಣ'ದ ರಚನೆ ಮುಗಿದಂತಾಯಿತು. ಇದರಿಂದ ಕವಿಯು ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿದ್ದನೆಂದು ನಿಶ್ಚಿತವಾದಂತಾಗುತ್ತದೆ. ಬಹುಶಃ ಕವಿಯು ವಿರಕ್ತನಾಗಿ ತನ್ನ ಗುರುವಿನ ಸ್ಥಾನದಲ್ಲಿ ಪಟ್ಟಾಧಿಕಾರಿಯಾದನೊ ಏನೊ! ತನ್ನ ತಂದೆ ತಾಯಿ ಇತ್ಯಾದಿ ಸಾಂಸಾರಿಕ ಸಂಬಂಧಗಳನ್ನೊ ಪ್ರಸ್ತಾಪಿಸಿಲ್ಲ.

ಕಾವ್ಯಕ್ಕೆ 'ಚನ್ನಬಸವ ಪುರಾಣ'ವೆಂಬ ನಾಮಕರಣವಾಗಿದ್ದರೂ ಇದು ಚನ್ನಬಸವಣ್ಣನ ಸಮಗ್ರ ಜೀವನಚರಿತ್ರೆಯೆಂದಾಗಲಿ, ಅಥವಾ ಇದರಲ್ಲಿ ಚನ್ನಬಸವಣ್ಣನಿಗೆ ಸಂಬಂಧಪಟ್ಟ ವಿಷಯಗಳು ಮಾತ್ರವೇ ಇವೆಯೆಂದಾಗಲಿ ಹೇಳುವಂತಿಲ್ಲ, ಮೊದಲನೆಯ ಖಂಡದಲ್ಲಿ ಚನ್ನಬಸವಣ್ಣನ ಅವತಾರ, ಮಹತ್ವ, ಪವಾಡಗಳು, ವ್ಯಕ್ತಿತ್ವ-ಇತ್ಯಾದಿಗಳ ವಿವರಗಳು ದೊರೆಯುತ್ತವೆ. ಮುಂದಿನ ಮೂರು ಖಂಡಗಳಲ್ಲಿಯೂ ಈಶ್ವರನ ಲೀಲೆಗಳು ವರ್ಣಿತವಾಗಿವೆ. ಐದನೆಯ ಕಾಂಡದಲ್ಲಿ ವೀರಶೈವದ ಮಹತ್ವ, ಷಟ್‌ಸ್ಥಲವಿವೇಚನೆ, ಪುರಾತನರು, ವಿರಕ್ತರು, ಅಮರಗಣಗಳು, ಕಾಲಜ್ಞಾನ ಇತ್ಯಾದಿ ಇತ್ಯಾದಿಗಳು ತುಂಬಿವೆ. ಕಾಲಜ್ಞಾನವನ್ನು ಹೇಳುವಾಗ ಚನ್ನಬಸವಣ್ಣನ ಪ್ರಸ್ತಾಪವೂ ಬರುತ್ತದೆ. ಇದರಿಂದ ಇಲ್ಲಿ ಕಾವ್ಯಾಂಶಕ್ಕಿಂತಲೂ

ಧರ್ಮನಿರೂಪಣೆಯ ಕಡೆಗೇ ಕವಿಯ ದೃಷ್ಟಿ ಹೆಚ್ಚು. 'ವೀರಶೈವ ಪುರಾತನರ ಮತ್ತು ಕವಿಗಳ ಕಾಲವನ್ನು ನಿರ್ಣಯಿಸುವುದಕ್ಕೆ' ಗ್ರಂಥವು ಬಹಳ ಉಪಯುಕ್ತವಾಗಿದೆಯೆಂಬ ಕವಿಚರಿತೆಕಾರರ ಅಭಿಪ್ರಾಯ ಗಮನಾರ್ಹವಾದುದು. ವಿಜಯನಗರಕ್ಕೆ ಸಂಬಂಧಿಸಿದಂತೆ ಅನೇಕ ಐತಿಹಾಸಿಕ ಘಟನೆಗಳೂ ಇಲ್ಲಿ ಪ್ರಸ್ತಾಪಿತವಾಗಿವೆ.

ಧರ್ಮವೀರನೊಬ್ಬನ ಜೀವಿತವೃತ್ತಾಂತವನ್ನು ಕಥಾವಸ್ತುವನ್ನಾಗಿ ಬಳಸಿಕೊಂಡಾಗ, ನವರಸಗಳನ್ನೂ ಅದರಲ್ಲಿ ಅಡಕಮಾಡ ಹೊರಡುವುದಾಗಲಿ, ಅಷ್ಟಾದಶವರ್ಣನೆಗಳನ್ನು ತರಲೇಬೇಕೆಂಬ ಹಟವಾಗಲಿ ಸಾಮಾನ್ಯವಾಗಿ ಸಲ್ಲದು. ಆದರೆ ಕವಿಗೆ ತನ್ನ ಕಾವ್ಯವನ್ನು ಎಲ್ಲರೂ ಓದಿ ಉದ್ಧಾರವಾಗಬೇಕು, 'ವರ್ಣಕಕ್ಕಿಲ್ಲ ಲಕ್ಷಣ' ಎಂಬ ಲಘುಟೀಕೆಯನ್ನು ಇದಿರಿಸಬೇಕು–ಎಂಬ ಕಳಕಳಿ, ಕೆಚ್ಚು. ಆದ್ದರಿಂದ ಇಲ್ಲಿ ಅಷ್ಟಾದಶವರ್ಣನೆಗಳೂ ಬಂದಿವೆ; ನವರಸಗಳ ನಿರೂಪಣೆಯೂ ನಡೆದಿದೆ. ಆದರೆ ಇವರಿಂದ ಕಥೆಯ ಏಕಮುಖತೆಗೆ ಭಂಗ ಬಂದಿದೆ. ಕಾವ್ಯದೃಷ್ಟಿಯಿಂದ ಆಗಿರುವ ಈ ನಷ್ಟವನ್ನು ಧರ್ಮದೃಷ್ಟಿಯಿಂದ ನಡೆದಿರುವ ನಿರೂಪಣೆ ತುಂಬಿಕೊಟ್ಟಿದೆ. ಬರಿಯ ರಸವತ್ಕಾವ್ಯವನ್ನು ಕೇಳುವುದಕ್ಕಿಂತಲೂ ಹೆಚ್ಚು ಶ್ರದ್ಧೆಯಿಂದ ಭಕ್ತಿಯಿಂದ ಜನ ಇದನ್ನು ಕೇಳುತ್ತಾರೆ. ಇದು ನಿಜ; ಆದರೆ ಹಾಗೆ ಕೇಳುವವರು ಇಲ್ಲಿನ ಧರ್ಮದೃಷ್ಟಿಯುಳ್ಳವರು. 'ಚನ್ನಬಸವ ಪುರಾಣ' ವನ್ನು ಸಂಪಾದಿಸಿರುವ ದಿ|| ಶಿ. ಶಿ. ಬಸವನಾಳರು ಚನ್ನ ಬಸವಪುರಾಣ ಜೈಮಿನಿ ಭಾರತಗಳ ಜನಪ್ರಿಯತೆಯನ್ನು ತುಲನ ಮಾಡುತ್ತಾ ಜೈಮಿನಿ ಭಾರತವು ಜನಪ್ರಿಯವಾಗಿರುವುದಕ್ಕೆ ಇದೇ ಕಾರಣವನ್ನೇ ಪ್ರಕಾರಾಂತವಾಗಿ ಸೂಚಿಸಿದ್ದಾರೆ.

ಲಕ್ಷ್ಮೀಶನ ಜೈಮಿನಿ ಭಾರತದಷ್ಟು ಜನಪ್ರಿಯವಾಗಿಲ್ಲದಿದ್ದರೂ ಅದರೊಡನೆ ಹೊಯ್‌ಕಯ್ಯಾಗಿ ನಿಲ್ಲಬಲ್ಲ ಕಾವ್ಯ ಗುಣಗಳಿವೆ, ಚೆನ್ನಬಸವ ಪುರಾಣದಲ್ಲಿ. ಲಕ್ಷ್ಮೀಶನಂತೆ ವಿರೂಪಾಕ್ಷ ಪಂಡಿತನೂ ಕನ್ನಡ ಸಂಸ್ಕೃತಗಳಲ್ಲಿ ಅಸಾಧಾರಣವಾದ ಪಾಂಡಿತ್ಯವುಳ್ಳವನು. ಪಾಂಡಿತ್ಯ, ಪ್ರತಿಭೆ, ಕಲ್ಪನಾಶಕ್ತಿಗಳಲ್ಲಿ ಇಬ್ಬರೂ ಸಮಾನಸ್ಕಂಧರು. ಯಾರಿಂದ ಯಾರು ಸ್ವೀಕರಿಸಿದರೆಂಬ ವಾಗ್ವಾದಕ್ಕೆ ತೊಡಗದೆ ತೆರೆದ ಮನಸ್ಸಿನಿಂದ ಅವೆರಡರ

ಹೋಲಿಕೆಯನ್ನು ನೋಡಿ ಆನಂದಿಸಬಹುದು. ನುಡಿ ನಿರಿಗೆ, ಮಾತಿನ ಧೋರಣೆ, ಲಾಲಿತ್ಯಗಳಲ್ಲಿ ಇಬ್ಬರ ಕಾವ್ಯಗಳೂ ಹೃದಯಂಗಮವಾಗಿವೆ. ಅವರ ವರ್ಣನಾವೈಖರಿ ಮನೋಜ್ಞವಾಗಿದೆ. ಇದೊಂದು ಚನ್ನಬಸವ ಪುರಾಣದಲ್ಲಿನ ಸೂರ್ಯೋದಯದ ವರ್ಣನೆ—ಇದರ ಶಬ್ದಗಾರುಡಿಗತವನ್ನು ನೋಡಿ—

ಇಂದಿರನ ದೆಸೆಗೆಂಪು ಮೂಡೆ, ಕತ್ತಲೆಯೋಡೆ,
ಮಂದಾನಿಲಂ ತಂಪು ತೀಡೆ, ಭ್ರಮರಂ ಪಾಡೆ,
ಬಂದು ಚಕ್ರಂ ಕೂಡೆ, ಕೈರವಂ ಬಾಡೆ, ಕಮಲಂ ಬಿರಿದು ನಗೆಯೊಳಾಡೆ
ಮುಂದೊರ್ವ ಶೈವಾಚಾರ್ಯನೀ ಧರೆಗೆ
ಬಂದಿದಕೆ ನೂರು ಮಡಿಯಾಗಿ ಬೆಳಗಂ ತೋರ್ಪ
ನೆಂದು ಸೂಚಿಸುವಂದದುದಯ ಶೈಲಾಗ್ರದೊಳ್ ದಿನಪನುದಯಿಸಿದನು ||

ಪೂರ್ವಾರ್ಧ ಲಕ್ಷ್ಮೀಶ ವಿರೂಪಾಕ್ಷರ ಮಾರ್ಗವಾದರೆ ಉತ್ತರಾರ್ಧ ಪಂಪನಮಾರ್ಗ. ಪೂರ್ವಾರ್ಧದಲ್ಲಿ ಅಚ್ಚ ಪ್ರಕೃತಿಸೌಂದರ್ಯದ ವರ್ಣನೆಯಿದ್ದರೆ. ಉತ್ತರಾರ್ಧದಲ್ಲಿ ಆ ವರ್ಣನೆ ಕಥಾಸಂದರ್ಭದೊಡನೆ ಸಂಗಮಗೊಂಡು ಹೋಗಿದೆ. ವಿರೂಪಾಕ್ಷ ಪಂಡಿತನ ಪ್ರಕೃತಿವರ್ಣನೆ ಮನೋಹರವಾಗಿದೆ, ಹೃದಯಂಗಮವಾಗಿದೆ. ಇಡೀ ಒಂಬತ್ತನೆಯ ಸಂಧಿಯೆಲ್ಲವೂ ಸೂರ್ಯಾಸ್ತ, ಚಂದ್ರೋದಯ, ಬೆಳುದಿಂಗಳ ವರ್ಣನೆಗಾಗಿ ಮೀಸಲಾಗಿದೆ. ಇದು ಸೂರ್ಯಾಸ್ತದ ವರ್ಣನೆ—

ಅನ್ನೆಗಂ ಪಶ್ಚಿಮಾಂಗನೆ ಲೀಲೆಯಿಂ ಪಿಡಿದ
ರನ್ನದಿ ಮೃಗನ್ನಡಿಯೊ, ವಾರುಣಿಯ ಮಸ್ತ
ಕೋನ್ನತ ನವೀನ ಮಾಣಿಕ್ಯವೋ ವಡಬಾಗ್ನಿಯಿಂದ ಪಿಡಿದ ಪೆರ್ಗಿಡಿಯಿದೊ
ಮುನ್ನೀರ ಸತಿ ಪತಿಗೆಯಾರತಿಯನೆತ್ತಿ ಜವ
ದಿನ್ನೆಗಪಿ ಚೆಲ್ಲಲಾಕೆಯ ಕೆಯ್ಯೊಳಿರ್ಪ ಪೊಸ
ಪೊನ್ನ ಪರಿಯಾಣವೆನಸಲಸ್ತಗಿರಿ ಮಸ್ತಕದೊಳಿನ ಬಿಂಬಮೆಸೆದಿರ್ದುದು ||

ಇದು ಕತ್ತಲಿನ ವರ್ಣನೆ—

ಧರೆಯೊಳಗೆ ಕರಿದು ಕೃಷ್ಣಂ, ಕೃಷ್ಣನಿಂ ಕಾಳಿ
ಕರಿದು, ತತ್‌ಕೃಷ್ಣನಿಂ ಕಾಳಿಯಿಂ ನೀಲಗಿರಿ
ಕರಿದು, ತತ್‌ಕೃಷ್ಣನಿಂ ಕಾಳಿಯಿಂ ನೀಲಗಿರಿಯಿಂ ಕರಿದು
ಕಾಳಮೇಘಂ।
ಪರಿಕಿಸಲ್ ಕೃಷ್ಣನಿಂ ಕಾಳಿಯಿಂದಂ ನೀಲ
ಗಿರಿಯಿನಾ ಕಾಳಮೇಘದಿನಂಧಕಾರಮೇ
ಕರಿದೆನಿಸಿ ಪಿರಿದೆನಿಸಿದುದೆಲ್ಲಿಯುಂ ತಿಮಿರಮತಿ ನಿಬಿಡಮಾಗೆ

ಆ ಕತ್ತಲೆ ಕೊನಗೊಳ್ಳದಿರಲೆಂದು ಕುಲಟೆಯೊಬ್ಬಳು ಹರಕೆ ಹೊತ್ತಳಂತೆ! ಆ ಕಾಮುಕಳ ಅಪೇಕ್ಷೆಯನ್ನು ಕೇಳಿ—

ಪಡುವಣಂಬುಧಿಯೊಳ್ ಮುಳುಂಗಿದಿನನಂ ನೆಗಳ್
ವಿಡಿದು ನುಂಗುಗೆ, ಮೂಡುವಿಂದುವಂ ರಾಹು ಬಂ
ದಡಸಿ ಮುಕ್ಕುಗೆ, ಪತಿಗೆ ಕೇಡಕ್ಕೆ, ಕತ್ತಲೆಗೆ ಕಡೆಗಾಲ
ಮಾಗದಿರ್ಕೆ।
ಕಡುನೇಹದುಪಪತಿಗೆ ಜಯಮಕ್ಕೆ, ತನ್ನ ಸಂ
ಗಡತಿಯುರ್ಗೊಲವಕ್ಕೆನುತ್ತೆ ಮಾರಿಗೆ ಪರಕೆ
ವಿಡಿದೆತ್ತಿದಳ್..................

ಅಷ್ಟಾದಶವರ್ಣನೆಗೆಂದು ಹೊರಟ ಕವಿ ಮಾಲೆಗಾರ್ತಿಯರನ್ನು, ವೇಶ್ಯೆಯರನ್ನು ತನ್ನ ಕಾವ್ಯದಲ್ಲಿ ಹರಿಯಬಿಟ್ಟು, ಸಾಕಷ್ಟು ಶೃಂಗಾರ ನಿರೂಪಣೆಗೆ ಅವಕಾಶ ಕಲ್ಪಿಸಿಕೊಂಡಿದ್ದಾನೆ. ಈ ಭಾಗಗಳ್ಲೆಲ್ಲಾ ಕವಿಯ ಪ್ರತಿಭೆಗಿಂತಲೂ ಉಕ್ತಿಚಾತುರ್ಯಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆತಿದೆ. ಕವಿಯು ಕಲ್ಯಾಣವನ್ನು ವರ್ಣಿಸಿರುವ ವೈಖರಿಯೂ ಹೃದಯಂಗಮವಾಗಿಯೇ ಇವೆ. ವಿರುಪಾಕ್ಷಪಂಡಿತನ ದೇಶಪ್ರೇಮ ತುಂಬು ಹೊಳೆಯಾಗಿ ಹರಿದಿದೆ—

ಅಲ್ಲಿಗಲ್ಲಿಗೆ ಬೆಳೆದ ಬೆಳೆಗಳಿಂ ಮೆಳೆಗಳಿಂ
ದಲ್ಲಿಗಲ್ಲಿಗೆ ವನಸ್ಥಳಗಳಿಂ ಕೊಳಗಳಿಂ
ದಲ್ಲಿಗಲ್ಲಿಗೆ ರನ್ನದರೆಗಳಿಂ ಕೆರೆಗಳಿಂ ಪರಿವ ಪರಿಕಾಲ್ಗಳಿಂದೆ

ಅಲ್ಲಿಗಲ್ಲಿಗೆ ತೋರ್ಪ ಗಿರಿಗಳಿಂ ಕರಿಗಳಿಂ
ದಲ್ಲಿಗಲ್ಲಿಗೆ ನೆರೆದ ಶುಕಗಳಿಂ ಪಿಕಗಳಿಂ
ದಲ್ಲಿಗಲ್ಲಿಗೆ ಗವಾಸ್ಪದಗಳಿಂ ನದಗಳಿಂದಾ ದೇಶವೊಪ್ಪಿರ್ದುದು ||

ಅಲ್ಲಿ ಬತ್ತದ ಗದ್ದೆ ಬೆಳೆಯುತ್ತಿದ್ದ ರೀತಿಯನ್ನು ಕೇಳಿ—

ದೇವಮಾತೃಕ ನದೀಮಾತೃಕದೊಳಿಂ ಬೆಳೆವು
ದಾವ ಚೋದ್ಯಂ ಗಿಳಿ ಕರ್ದುಂಕಿದೊಡೆ ಬೀಳ್ವಿನಿದು
ಮಾವಣ್ಣ ತನಿರಸದ ಕಾಲ್ಗಳಿಂ ಬೆಳೆವುವಾ ಗಾಳಿಗಲೆದೋಸರಿಸುವ
ತೀವಿದೆಳಸೀರ ಕಬ್ಬಿನ ಸಾರದಿಂ ಬೆಳೆವು
ವಾವಗಂ ಪಾಮರೀಮುಖಶಿಶುಗೊಸರ್ವಿಂದು
ಗ್ರಾಮನಿರ್ಮಳ ಜಲವ ಪೂರದಿಂ ಬೆಳೆವುತಿಹ ಶಾಳಿಗಳ್
ಕಣ್ಗೆಸೆದುವು ||

ವಿರುಪಾಕ್ಷ ಪಂಡಿತನು, ಪ್ರತಿಭೆ ಪಾಂಡಿತ್ಯಗಳನ್ನು ಸಮರಸವಾಗಿ ಬೆರಸಿ, ತನ್ನ ಕಾವ್ಯಕರ್ಮಕ್ಕೆ ಅದನ್ನು ಸಾಧನವಾಗಿ ಬಳಸುತ್ತಾನೆ. ಇದರಿಂದ ಆತನ ಕಾವ್ಯಕ್ಕೆ ಒಂದು ಹೊಳಪು ಬರುತ್ತದೆ. ಇಂತಹ ಮತ್ತೊಬ್ಬ ಕುಶಲಕಲಾನಿಪುಣನೆಂದರೆ ಲಕ್ಷ್ಮೀಶ. ಇವರಿಬ್ಬರಲ್ಲಿ ಯಾರಿಂದ ಯಾರು ಉಪಕೃತರೆಂದು ಚರ್ಚಿಸುವುದು ರಸಿಕರ ರಸಾನುಭವಕ್ಕೆ ಅತ್ಯಗತ್ಯವಾದ ಸಾಮಗ್ರಿಯೇನೂ ಅಲ್ಲ. ಯಾರು ಯಾರಿಂದ ಉಪಕೃತರಾಗಿದ್ದರೂ ಒಂದೇ. ರಸಿಕರಾದ ಓದುಗರು ಅವರಿಬ್ಬರಿಂದಲೂ ಉಪಕೃತರಾಗುತ್ತಾರೆ.

**ಸಿದ್ಧ ನಂಜೇಶ** (೧೬೫೦) :

ಹದಿನೇಳನೆಯ ಶತಮಾನದ ಮಧ್ಯಕಾಲದಲ್ಲಿದ್ದ (ಸು. ೧೬೫೦) ಈ ಕವಿಯು ರಾಘವಾಂಕ ಚಾರಿತ್ರ, ಭಾವರತ್ನಾಭರಣ, ಬಸವ ಶತಕ, ಗುರುರಾಜ ಚಾರಿತ್ರ—ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಮೊದಲ ಮತ್ತು ಕಡೆಯ ಗ್ರಂಥಗಳು ಮಾತ್ರ ಉಪಲಬ್ಧವಾಗಿವೆ. ಆತನು ತನ್ನ 'ಗುರುರಾಜ ಚಾರಿತ್ರ'ದಲ್ಲಿ ಹೇಳಿಕೊಂಡಿರುವಂತೆ 'ಭಾವಜ್ಞ ಸತ್ಕವಿಗಳಹುದೆನಲು' ರಾಘವಾಂಕ ಚಾರಿತ್ರವನ್ನೂ, 'ವೀರ ಮಾಹೇಶ್ವರರ ಬಗೆಗೆ ಬರ್ಪಂತೆ' ಗುರುರಾಜ ಚಾರಿತ್ರವನ್ನೂ ಬರೆಯ ಹೊರಟಿದ್ದಾನೆ. 'ಮಹಾ

ಕವಿ ರಾಘವಾಂಕನ ಪೊಗಳಿ ಕವಿತಾನುಭವ ಪಡೆವೆನು' ಎಂದುಕೊಂಡ ಸಿದ್ಧನಂಜೇಶ ಆ ಶಿವಕವಿಯ ಜೀವನ ಚರಿತೆಯನ್ನು ಒಳಗೊಂಡ ತನ್ನ ಕಾವ್ಯವು

ಇದುವೆ ರಸಿಕರ ರಸಾಯನ ಕಬ್ಬಿಗರ ಹಬ್ಬ
ವಿದು ಪ್ರೇಮದಿಂ ಕೇಳ್ವ ಜನದ ಕರ್ಣಾಭರಣ
ವಿದುವೆ ಸೊಬಗರ ಸೊಬಗು ಕೋವಿದರ ಕೊರಲ ಹಾರಂ ಗಮಕಿಗಳ ಗಮಕವು
ಇದುವೆ ಭಾವದ ಪಕ್ಕೆಯಿದುವೆ ನವರಸದಿಕ್ಕೆ
ಯಿದು ಸದಾಚಾರ ಸುಖಸದನ ಮೋಹನದ ಘನ
ವಿದನೋದಿ ಕೇಳಿ ಲಾಲಿಸದರಾರ್ ಧರೆಯೊಳಗೆ ದಿವ್ಯ ಕಾವ್ಯಾಮೃತವನು

ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಮಹದೇವ ಭಟ್ಟ-- ರುದ್ರಾಣಿಯರ ಮಗನಾಗಿ ರಾಘವಾಂಕ ಹಂಪೆಯಲ್ಲಿ ಹುಟ್ಟಿದುದು. ಸೋದರಮಾವನಾದ ಹರಿಹರ ಕವಿಯಿಂದ ದೀಕ್ಷೆಯನ್ನೂ ಶಿಕ್ಷಣವನ್ನೂ ಪಡೆದದ್ದು, ದೇವರಾಜನ ಸಭೆಯಲ್ಲಿ ಹರಿಶ್ಚಂದ್ರ ಕಾವ್ಯವನ್ನು ಓದಿದ್ದು, ಆ ಕಾವ್ಯದ ವಿಚಾರದಲ್ಲಿ ಹರಿಹರನೊಡನೆ ವಾದಮಾಡಿ ಹಲ್ಲು ಕಳೆದುಕೊಂಡು ಮತ್ತೆ ಆತನ ಅನುಗ್ರಹದಿಂದ ಹಲ್ಲುಗಳನ್ನು ಪಡೆದದ್ದು, ಅಷ್ಟಾವರಣದ ಮಹಿಮೆಯನ್ನು ಗುರುವಿನಿಂದ ಕೇಳಿದ್ದು, ಸೋಮನಾಥ ಚಾರಿತ್ರ ಶರಭ ಚಾರಿತ್ರಗಳನ್ನು ಬರೆದದ್ದು, ಕುಮಾರವ್ಯಾಸನ ಗರ್ವಭಂಗಮಾಡಿ ಆತನಿಗೆ ಹರಿಹರಮಹತ್ವವನ್ನು ಹೇಳಿದ್ದು, ತನ್ನ ಸಿದ್ಧರಾಮ ಚಾರಿತ್ರದೊಡನೆ ಹೋಗಿ ಕೆರೆಯ ಪದ್ಮರಸನನ್ನು ಕಂಡದ್ದು, ರುದ್ರಪ್ರತಾಪನ ಸಭೆಯಲ್ಲಿದ್ದ ಕವಿಗಳನ್ನು ವೀರೇಶಚರಿತೆಯೆಂಬ ಮೀಸಲುಗವಿತೆಯ ಮೂಲಕ ಭಂಗಿಸಿ ಹಂಪೆಗೆ ಹಿಂದಿರುಗಿದ್ದು. ಗುರುವಿನ ಅಪ್ಪಣೆಯಂತೆ ಬೇಲೂರಿನಲ್ಲಿ ಸಮಾಧಿ ಹೊಂದಿದ್ದು ಇಲ್ಲಿ ವಿಸ್ತಾರವಾಗಿ ಪ್ರತಿಪಾದಿತವಾಗಿದೆ. ರಾಘವಾಂಕನು ಬರೆದ 'ಹರಿಹರ ಮಹತ್ವ'ದ ಕಥೆಯನ್ನು ಹೇಳುವಾಗ ಹರಿಹರನಿಂದ ರಚಿತವಾದ ಕಾವ್ಯಗಳು, ಅವನ್ನು ಬರೆದ ಸಂದರ್ಭಗಳು ವರ್ಣಿತವಾಗಿರುವುವಲ್ಲದೆ ಅನೇಕ ಶರಣರ ಕಥೆಗಳೂ ಇದರಲ್ಲಿ ಪ್ರತಿಪಾದಿತವಾಗಿವೆ.

ಸಿದ್ಧನಂಜೇಶನ 'ಗುರುರಾಜ ಚಾರಿತ್ರ'ವು ಶಿವಶರಣರ ಒಂದು ಕಥಾ ಕೋಶ. ನೂರಾರು ಜನ ನೂತನ ಮತ್ತು ಪುರಾತನರ ಕಥೆಗಳಿಂದ ಇದು ನಿಬಿಡವಾಗಿದೆ. ಕವಿಯು ತನ್ನ ಗುರು ಸಿದ್ಧನಂಜೇಶನು ತನ್ನ ಮಡದಿ ಚೆನ್ನ ವೀರಾಂಬೆಗೆ ಹೇಳಿದುದನ್ನೇ ತನ್ನ ಗುರುವಿನ ಅಪ್ಪಣೆಯಂತೆ ಕಾವ್ಯರೂಪ ವಾಗಿ ಬರೆದಿರುವುದಾಗಿ ಹೇಳಿಕೊಂಡಿದ್ದಾನೆ. ಕಾವ್ಯವು ಉದ್ದಕ್ಕೂ ಆ ಗುರುದಂಪತಿಗಳ ಸಂಭಾಷಣೆಯಿಂದಲೇ ಪ್ರಾರಂಭವಾಗಿ ಮುಂದುವರಿಯು ತ್ತದೆ. ಪ್ರತಿಯೊಂದು ಸಂಧಿಯ ಆರಂಭದಲ್ಲಿಯೂ ಚೆನ್ನವೀರಾಂಬೆ ವಿಷಯ ವನ್ನು ಸೂಚಿಸಿ ವಿವರಗಳನ್ನು ಬೇಡುತ್ತಾಳೆ, ಸಿದ್ಧನಂಜೇಶ ಗುರ ಆಕೆಯ ಪ್ರಾರ್ಥನೆಯನ್ನು ಸಲ್ಲಿಸುತ್ತಾನೆ. ಇದರ ಫಲವಾಗಿ ಪಂಚಾಚಾರ್ಯ ಚರಿತೆ, ಶಿವನ ಪಂಚವಿಂಶತಿ ಲೀಲೆಗಳು, ಲಿಂಗಾರ್ಚನಾವಿಧಿ, ಷೋಡಶೋಪಚಾರ ವಿಧಾನ, ಬಸವ ಪುರಾಣದ ಕಥೆಗಳು, ಗಣಸಾಹಸ್ರನಾಮ, ನೂತನ ಶರಣರು, 'ಶಿವತತ್ವಚಿಂತಾಮಣಿ'ಯ ನೂತನ ಪುರಾತನರು, ಮಲ್ಲಣಾರ್ಯನ ಕಾವ್ಯದಲ್ಲಿ ಬರುವ ಶರಣರು, ವರ್ತಮಾನ ಕಾಲದ ಭಕ್ತರು—ಇತ್ಯಾದಿ ಗಳನ್ನು ಗುರುಸತಿ ತಿಳಿಯಬಯಸುತ್ತಾಳೆ, ಗುರುವು ತಿಳಿಸುತ್ತಾನೆ. ಹೀಗಾಗಿ ವೈವಿಧ್ಯ ಮಯವಾದ ಈ ಕಾವ್ಯಕ್ಕೆ ಈ ದಂಪತಿಗಳು ಒಂದು ಏಕತೆಯನ್ನು ಒದಗಿಸಿದ್ದಾರೆ—'ಸೂತ್ರೇ ಮಣಿಗಣಾ ಇವ.'

ಕವಿ ಸಿದ್ಧನಂಜೇಶನು ತನ್ನ ಒಂದು ಕಾವ್ಯದಲ್ಲಿ ಕಾವ್ಯಧರ್ಮವನ್ನೂ ಮತ್ತೊಂದರಲ್ಲಿ ಧರ್ಮವನ್ನೂ ನೀಡುವೆನೆಂಬ ನಿಲುವಿನಲ್ಲಿ—ರಾಘವಾಂಕ ಚಾರಿತ್ರದಲ್ಲಿ ಕಾವ್ಯ ರಮಣೀಯತೆಯನ್ನೂ, ಗುರುರಾಜ ಚಾರಿತ್ರದಲ್ಲಿ ಮಾಹೇಶ್ವರರ ಮೆಚ್ಚುಗೆಗೆ ತಕ್ಕ ಧರ್ಮವನ್ನೂ—ನೀಡಿದ್ದಾನೆ. ಸ್ವಲ್ಪ ಮಟ್ಟಿಗೆ ಆತನ ನಿಲವು ಸರಿ. ಯವ್ವನದಲ್ಲಿ ಬರೆದ ರಾಘವಾಂಕ ಚಾರಿತ್ರ ಕ್ಕಿಂತ ಇಳಿವಯಸ್ಸಿನಲ್ಲಿ ಬರೆದಿರಬಹುದಾದ ಗುರುರಾಜ ಚಾರಿತ್ರದಲ್ಲಿ ವೀರಶೈವಧರ್ಮ ಹೆಚ್ಚು ವಿಸ್ತಾರವಾಗಿದೆ. ಮೂಲತಃ ಎರಡರಲ್ಲಿಯೂ ಶ್ರೇಷ್ಠವಾದ ಕಾವ್ಯಾಂಶಗಳು ಕಡಮೆ. ಆದರೆ ಕವಿಯ ಎರಡು ಗ್ರಂಥಗಳೂ ಸಾಹಿತ್ಯ ಚರಿತ್ರೆಗೆ ತುಂಬ ಸಹಾಯಕವಾಗಿವೆ ; ಎರಡು ಕಾವ್ಯಗಳಲ್ಲಿಯೂ ಹಲವಾರು ಕವಿಗಳು ಸ್ತುತ್ಯರಾಗಿದ್ದಾರೆ. ಆದ್ದರಿಂದ ಆ ಕವಿಗಳ ಕಾಲ ವನ್ನು ನಿರ್ಧರಿಸುವುದಕ್ಕೆ ಸಿದ್ಧನಂಜೇಶನ ಕಾವ್ಯಗಳು ಒಂದು ಗಡಿಯು

ಕಲ್ಲನ್ನು ಒದಗಿಸಿಕೊಟ್ಟಿವೆ. ಕವಿಚರಿತಕಾರರು 'ಗುರುರಾಜ ಚಾರಿತ್ರ' ವನ್ನು ಕುರಿತು ಬರೆಯುತ್ತಾ 'ಈ ಗ್ರಂಥವು ಅನೇಕ ವೀರಶೈವ ಗುರುಗಳ ಮತ್ತು ಕವಿಗಳ ಚರಿತ್ರವನ್ನು ಒಳಕೊಂಡಿರುವುದರಿಂದ ನಮಗೆ ಬಹಳ ಮಟ್ಟಿಗೆ ಸಹಕಾರಿಯಾಯಿತು. ಇದರಿಂದ ಅನೇಕ ಸ್ಥಳಗಳಲ್ಲಿ ಅನುವಾದ ಮಾಡಿ ಕವಿಚರಿತೆಯಲ್ಲಿ ಸೇರಿಸಿದ್ದೇವೆ. ಕೆಲವು ಕವಿಗಳ ಕಾಲವನ್ನು ನಿರ್ಣಯಿಸುವುದಕ್ಕೂ ಈ ಗ್ರಂಥವು ಪ್ರಯೋಜನಕಾರಿಯಾಯಿತು' ಎಂದು ಹೇಳಿದ್ದಾರೆ.

**ಸರ್ವಜ್ಞ :**

ಧಾರವಾಡ ಜಿಲ್ಲೆಯಲ್ಲಿ 'ಮಾಸೂರು' ಎಂಬ ಒಂದು ಸಣ್ಣ ಗ್ರಾಮ. ಅಲ್ಲಿ ಬಸವರಸ-ಮಲ್ಲಮ್ಮ ಎಂಬ ದೈವಭಕ್ತರಾದ ಆರಾಧ್ಯ ಬ್ರಾಹ್ಮಣ ದಂಪತಿಗಳು. ಅವರಿಗೆ ಬಹು ಕಾಲವಾದರೂ ಮಕ್ಕಳಾಗಲಿಲ್ಲ. ಈ ಕೊರತೆಯಿಂದ ನೊಂದ ಬಸವರಸನು ಪುತ್ರಾಪೇಕ್ಷೆಯಿಂದ ಕಾಶಿಗೆ ಹೋಗಿ ವಿಶ್ವೇಶ್ವರನನ್ನು ಅನನ್ಯಭಕ್ತಿಯಿಂದ ಪೂಜಿಸಿ, ಆತನ ಅನುಗ್ರಹವನ್ನು ಪಡೆದು, ಊರಿಗೆ ಹಿಂದಿರುಗಿದ. ದಾರಿಯಲ್ಲಿ, ಅಂಬಲೂರೆಂಬ ಹಳ್ಳಿಯ ಕುಂಬಾರನೊಬ್ಬನ ಮನೆಯಲ್ಲಿ ಆತನು ತಂಗಿರುವಾಗ, ಆ ಮನೆಯಲ್ಲಿದ್ದ ಮಾಳಿ-ಎಂಬ ವಿಧವೆಯಲ್ಲಿ ಆತನಿಗೆ ಮೋಹ ಹುಟ್ಟಿತು. ಅವರಿಬ್ಬರ ಪ್ರಣಯದ ಫಲವಾಗಿ ಒಬ್ಬ ಸುಪುತ್ರ ಜನಿಸಿದ. ಹುಟ್ಟಾ ದೈವಭಕ್ತನಾಗಿದ್ದ ಆ ಮಗ ಬೆಳೆಯುತ್ತಾ ಹೋದಂತೆ ಆತನ ಕುಶಾಗ್ರಬುದ್ಧಿ, ಸೂಕ್ಷ್ಮದೃಷ್ಟಿಗಳೂ, ಸತ್ಯಪ್ರೇಮ ನ್ಯಾಯನಿಷ್ಠುರ ಗುಣಗಳೂ ಬೆಳೆದವು-ಎಂದು ತೋರುತ್ತದೆ. ಬಹುಶಃ ತನ್ನ ಜನನವೃತ್ತಾಂತ ಗೊತ್ತಾದಾಗ ಆತನ ಸತ್ವಪೂರ್ಣವಾದ ಆತ್ಮಾಭಿಮಾನ ಹೆಡೆಬಿಚ್ಚಿ ಬುಸುಗುಟ್ಟಿತು. ಲೌಕಿಕ ತಾಯ್ತಂದೆಗಳನ್ನು ನಿರಾಕರಿಸಿ,

ತಂದೆ ವಿಪ್ರನು ಅಲ್ಲ। ತಾಯಿ ಮಾಳಿಯು ಅಲ್ಲ।
ಚಂದ್ರಶೇಖರನ ವರದಿಂದ ಪುಟ್ಟಿದಾ। ಕಂದ ನಾನೆಂದೆ ಸರ್ವಜ್ಞ

ಎಂದು ಹೇಳಿಕೊಂಡ. ತಾಯಿಯ ವಿಚಾರದಲ್ಲಿ ಆತನ ವಿಚಾರಧಾರೆ ಮತ್ತಷ್ಟು ಕಟುವಾಗಿಯೇ ಹೊರಬಿತ್ತು-

ತಾ, ಎಂಬೆನಲ್ಲದೆ। ತಾಯಿ ನಾನೆಂಬೆನೆ।

ತಾಯಿಯೆಂದಾನು–ನುಡಿದೇನು ಪರಸ್ತ್ರೀಯ। ತಾಯಿಯೆಂದೆಂಬೆ....

ಪರಸ್ತ್ರೀಯರನ್ನೆಲ್ಲಾ ತಾಯಿಯೆಂದು ಸಂಬೋಧಿಸುವ ಅರ್ಥದಲ್ಲಿ ಮಾತ್ರ ಆಕೆ ನನಗೆ ತಾಯಿ–ಎಂದು ಆತ ಹೇಳಿದಮೇಲೆ ಹುಟ್ಟಿದ ಮನೆಯಲ್ಲಿ ಆತ ಸ್ವಸ್ಥಚಿತ್ತವಾಗಿ ಬಾಳುವುದು ಸಾಧ್ಯವೆ? 'ಖಂಡಿತವಾದಿ, ಲೋಕವಿರೋಧಿ'. ಆತನಿಗೆ ಮನೆಯಿಂದ ಉಚ್ಚಾಟನೆಯಾಗಿರಬೇಕು.

ನೂಕಿದರು ಅವರಾಗ। ಕುಹಕತನದೊಳು ಬೇಗ।

ಲೋಕದೊಳಗೆಲ್ಲ—ಕಂಡುದನು ನುಡಿದು ತಾ। ನೇಕವಾಗಿಹನು....

ಹೀಗೆ ಏಕಾಂಗಿಯಾಗಿ ಹೊರಟ ಆತನಿಗೆ 'ಹಂಗಿನರಮನೆಯಿಂದ ವಿಂಗಡದ ಗುಡಿಲೇಸು। ಭಂಗಪಟ್ಟುಂಬ ಬಿಸಿಯನ್ನಕಿಂತಲು ತಂಗುಳವೆ ಲೇಸು' ಎನ್ನಿಸಿತು. ವೈರಾಗ್ಯಪರನಾದ ಆತನಿಗೆ ಯಾರಿಂದ ಏನಾಗಬೇಕಾಗಿದೆ? ಮನಸ್ಸಿನಲ್ಲಿಯೇ

ಕರದಿ ಕಪ್ಪರವುಂಟು। ಹಿರಿದೊಂದು ನಾಡುಂಟು

ಹರನೆಂಬ ದೈವ ಸಮುಗುಂಟು ತಿರಿವರಿಂ। ಸಿರಿವಂತರಾರು?

ಎಂದುಕೊಂಡ. ಹೀಗೆಂದುಕೊಂಡು ಊರೂರು ಅಲೆಯುತ್ತಾ ಪವಿತ್ರಕ್ಷೇತ್ರಗಳನ್ನು ಗುರುಮಠ ಜ್ಞಾನಕೇಂದ್ರಗಳನ್ನೂ ಸಂದರ್ಶಿಸುತ್ತಾ, ತನ್ನ ಜ್ಞಾನ ಭಂಡಾರವನ್ನು ತುಂಬಿಕೊಳ್ಳುತ್ತಾ ನಡೆದ. ಇಂತಹರೇ ತನ್ನ ಗುರುವಾಗಬೇಕೆಂಬ ಸಂಕುಚಿತ ಭಾವನೆಯೇನೂ ಆತನಲ್ಲಿ ಇರಲಿಲ್ಲ. 'ಊರಿಂಗೆ ದಾರಿಯನು ಯಾರು ತೋರಿದೊಡೇನು?' ಸತ್ಯಸಾಕ್ಷಾತಾರವಾಗುವುದು ತನ್ನ ಹೆಗ್ಗುರಿ. ಸಾರಸತ್ಯವನ್ನು ಅರಿತ ಗುರುವಾದರೆ ಆತನನ್ನು ಆಶ್ರಯಿಸಿದವನು 'ಮೊಸರು ಕಡೆಯಲು ಬೆಣ್ಣೆ। ಯೊಸೆದು ತೋರುವ ತೆರದಿ' ಮುಕ್ತಿಮಾರ್ಗ ದೊರೆಯುತ್ತದೆ. ಗುರುಕರುಣವಾಯಿತೆಂದರೆ 'ಬೊಮ್ಮನೆಂಬುದು ತಾನು ಒಮ್ಮಾರು ದೂರ.' ಆದ್ದರಿಂದ ಆತನು ಅವರಿವರೆನ್ನದೆ ಜ್ಞಾನಿಗಳೆನಿಸಿಕೊಂಡವರನ್ನೆಲ್ಲಾ ಆಶ್ರಯಿಸಿ ಸತ್ಯಸಾಕ್ಷಾತ್ಕಾರ ಮಾಡಿಕೊಂಡ. 'ಕರ್ಪುರದ ಗಿರಿಯು ಬೆಂದಂತೆ' ಆತನ ಅಜ್ಞಾನವೆಲ್ಲಾ ತೊಲಗಿತು. ಅಧ್ಯಾತ್ಮಜ್ಞಾನ ಕರತಲಾಮಲಕವಾದ ಮೇಲೆ

ಸತ್ಯವೆಂಬುದು ತಾನು ಹಿತ್ತಲದ ಗಿಡ ನೋಡ

ಮತ್ತಲ್ಲಿ ನೋಡಿಯರಸದೆ ತಾಸಿರ್ದ। ಹತ್ತಿಲೇ ನೋಡ ಸರ್ವಜ್ಞ

ಎಂಬ ನಿಲವನ್ನು ಮುಟ್ಟಿದ. ಆ ವೇಳೆಗೆ ಆತನ ಜ್ಞಾನಭಂಡಾರದಷ್ಟೇ ಲೋಕಾನುಭವವೂ ಶ್ರೀಮಂತವಾಗಿತ್ತು. ತನ್ನ ಅನುಭವವೇದ್ಯವಾಗಿದ್ದ ನಿತ್ಯಸತ್ಯವನ್ನು ಸರ್ವಜನಗ್ರಾಹ್ಯವಾಗುವಂತೆ ತಿಳಿಯಾದ, ಸರಳವಾದ, ಸ್ಪಷ್ಟವಾದ ಭಾಷೆಯಲ್ಲಿ ಹಾಡಿದನು. ಆತನು ಬೋಧನೆಗಾಗಿ ಆಯ್ದು ಕೊಂಡ ತ್ರಿಪದಿಯ ಛಂದಸ್ಸಿನಂತೆ ಆತನು ಬಳಸಿದ ಭಾಷೆಯೂ ಜನ ಸಾಮಾನ್ಯರದು. ಆತನ ವಾಗ್ಧಾರೆ, ಅಪಾರಜ್ಞಾನ, ನಿಶಿತಮತಿಗಳನ್ನು ಕಂಡು ಆತನನ್ನು ಜನ ಅಪಾರವಾಗಿ ಗೌರವಿಸಿರಬೇಕು. ವೇಶ್ಯೆಯರಿಂದ ಹಿಡಿದು ವೇದಾಂತದವರೆಗೆ, ಅಜ್ಞಾನದಿಂದ ಹಿಡಿದು ಬ್ರಹ್ಮಜ್ಞಾನದವರೆಗೆ, ರಾಜನೀತಿಯಿಂದ ಹಿಡಿದು ರಸವಾದದವರೆಗೆ ಜ್ಞಾನದ ಎಲ್ಲ ಮುಖ ಗಳನ್ನೂ ಕರತಲಾಮಲಕವಾಗಿ ಮಾಡಿಕೊಂಡವನಂತೆ, ಜಂಗಮ ವಿಶ್ವ ಕೋಶದಂತೆ, ಇದ್ದ ಆತನನ್ನು ಜನ 'ಸರ್ವಜ್ಞ'ನೆಂದು, ಅವತಾರಪುರುಷ ನೆಂದು ಭಾವಿಸಿರಬೇಕು. ಜನರಿತ್ತ ಮನ್ನಣೆಯಿಂದ ಆತನ ತಲೆ ತಿರುಗಲಿಲ್ಲ.

ಸರ್ವಜ್ಞನೆಂಬವನು ಗರ್ವದಿಂದಾದವನೆ?

ಸರ್ವರೊಳೊಂದೊಂದು-ನುಡಿಗಲಿತು ವಿದ್ಯೆಯಾ | ಪರ್ವತವೆ ಆದ. ತಾನು ಅವತಾರಪುರುಷನೂ ನಿಜ. 'ಮುನ್ನ ಕೈಲಾಸದಲಿ ಪನ್ನಗಧರನಾಳು ಎನ್ನಯಾ ಪೆಸರು ಪುಷ್ಪದತ್ತನು ಎಂಬು' ಆ ಪುಷ್ಪದತ್ತನೇ ಈಗ 'ಸಾಲೆ ಸರ್ವಜ್ಞ.' ಎಂದು ಜನರಿಗೆ ತಿಳಿಸಿದ.

'ಸರ್ವಜ್ಞ' ಎಂಬ ಅಂಕಿತದಿಂದ 'ಸವಜ್ಞ ವಚನಗಳು' ಎಂದು ನಾವು ನಾಮಕರಣ ಮಾಡಿರುವ ಈ ನೀತಿಕಾವ್ಯವನ್ನು ಒರೆದಿರುವ ಸಂತ ಕವಿಯ ನಿಜವಾದ ಹೆಸರೇನೆಂಬುದು ನಮಗೆ ಗೊತ್ತಿಲ್ಲ. ಮೇಲೆ ಹೇಳಿರುವ ಆತನ ಬಾಳ ಕಥೆಯನ್ನು ಆತನ ಪದ್ಯಗಳ ಆಧಾರದಿಂದಲೆ ಬರೆದಿದ್ದರೂ, ಆ ಪದ್ಯಗಳು ಆತನೇ ಬರೆದುವೋ, ಇನ್ನಾರಾದರೂ ಅವುಗಳನ್ನು ಬರೆದು ಸರ್ವಜ್ಞನೆಂಬ ಅಂಕಿತವನ್ನು ಹಾಕಿರುವರೊ! ಆತನ ಕಾವ್ಯದಿಂದ ಒಡ ಮೂಡಿರುವ ಆತನ ಪಾತ್ರವನ್ನು ನೋಡಿದರೆ ತನ್ನನ್ನು ಕುರಿತು ಆತ ಹೇಳಿ ಕೊಂಡಿರುವುದು ಸ್ವಾಭಾವಿಕವಾಗಿರುವಂತೆಯೇ ತೋರುತ್ತದೆ. ಆತನಿಗೆ ತನ್ನದು ಪರರದೆಂಬ ವ್ಯತ್ಯಾಸ ಕಾಣಬರುವುದಕ್ಕೆ ಸಾಧ್ಯವಿಲ್ಲ. ತಾನು ತಪ್ಪುಮಾಡಿದಾಗ ತನ್ನ ಕೆನ್ನೆಗೆ ಹೊಡೆದುಕೊಳ್ಳಲು ಹಿಂದುಮುಂದು

ನೋಡುವ ಸ್ವಭಾವವಲ್ಲ, ಆತನದು. ತನ್ನ ಜನನ ವೃತ್ತಾಂತವನ್ನು ಸಂಕೋಚವಿಲ್ಲದೆ ನಿರ್ಭಯವಾಗಿ ಹೇಳಿಕೊಂಡಿರುವುದಕ್ಕಾಗಿ ಆತನಲ್ಲಿ ನಮಗಿರುವ ಗೌರವ ಶತಾಧಿಕವಾಗುತ್ತದೆ, ಆತನ ವ್ಯಕ್ತಿತ್ವ ಮುಗಿಲೆತ್ತರಕ್ಕೆ ಏರುತ್ತದೆ. ಅದು ಹಾಗಿರಲಿ. ಆತನ ಅಂಕಿತವನ್ನು ಬಳಸಿಕೊಂಡು ಇತರರು ತಮ್ಮ ತ್ರಿಪದಿಗಳನ್ನು ಈತನ ತ್ರಿಪದಿಗಳೊಡನೆ ಸೇರಿಸಿರುವರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಹಾಗೆ ಸೇರಿಸುವುದು ಕಷ್ಟವೂ ಅಲ್ಲ. ಇತರ ಕವಿಕಾವ್ಯಗಳಂತೆ ಆತನ ಕಾವ್ಯ ನಿರ್ದಿಷ್ಟವಾದ ವಸ್ತುವನ್ನು ಒಳಗೊಂಡು, ಕ್ರಮಬದ್ಧವಾಗಿ ವಿಷಯನಿರೂಪಣೆ ಮಾಡುತ್ತಾ, ಬೇರೆ ಬೇರೆ ಪರಿಚ್ಛೇದ ಗಳಾಗಿ ವಿಂಗಡಣೆಯಾದುದೇನೂ ಅಲ್ಲ. ಒಂದೊಂದು ಪದ್ಯವೂ ಬಿಡಿ ಬಿಡಿಯಾಗಿ ಸ್ವಸಂಪೂರ್ಣವಾಗಿದೆ. ಆತನು ಪರಿವ್ರಾಜಕನಾಗಿ ದೇಶಪರ್ಯಟನೆ ಮಾಡುತ್ತಾ ಮಾನವರ ಕಷ್ಟಗಳನ್ನು ಕಂಡು ಮನಕರಗಿಯೋ, ಅನ್ಯಾಯ ವನ್ನು ಕಂಡು ಕೆರಳಿಯೋ 'ಕುಂತಲ್ಲಿ ನಿಂತಲ್ಲಿ ಪದಗಳ ಹೇಳುವ' ಆಶುಕವಿ. ಆತನ ಎಷ್ಟೋ ಪದ್ಯಗಳಿಗೆ ಉಚಿತವಾದ ಹಿನ್ನೆಲೆಯನ್ನು ಕಲ್ಪಿಸಿಕೊಂಡು ಅವುಗಳನ್ನು ಓದುವುದಾದರೆ ಅವುಗಳ ಸವಿ ದ್ವಿಗುಣವಾಗುತ್ತದೆ. ಈತನ ಪದ್ಯಗಳಲ್ಲಿ ಕಾಣಬರುವ ವಸ್ತುವಿಪುಲತೆ, ಸರಳತೆ, ಸೌಲಭ್ಯಗಳನ್ನೂ ಜನಪ್ರಿಯತೆಯನ್ನೂ ಕಂಡು ಇತರರೂ ತಮ್ಮ ಕವಿತೆಗಳನ್ನು ಆತನ ಗ್ರಂಥ ರಾಶಿಯಲ್ಲಿ ಬೆರೆಸಿ ಕೃತಕೃತ್ಯರಾದೆವೆಂದುಕೊಂಡಿರುವುದು ಸಾಧ್ಯ, ಸ್ವಾಭಾ ವಿಕ. ಹೀಗೆ ಸೇರಿರುವ ಪ್ರಕ್ಷಿಪ್ತಗಳಲ್ಲಿ 'ಕಾಲಜ್ಞಾನ'ದ ತ್ರಿಪದಿಗಳು ಮುಖ್ಯ. ಈ ತ್ರಿಪದಿಗಳಲ್ಲಿ ಇತ್ತೀಚೆಗೆ ನಡೆದ ಶ್ರೀರಂಗಪಟ್ಟಣದ ಪತನದಂತಹ ಆಧುನಿಕ ವಿಷಯಗಳು ಸೇರಿರುವುದರಿಂದ ಹದಿನಾರನೆಯ ಶತಮಾನದಲ್ಲಿದ್ದ ಕವಿ ಇದನ್ನು ಬರೆದನೆಂದು ಹೇಳುವುದು ಅಬದ್ಧವಾಗುತ್ತದೆ. ಶ್ರೀ ಚನ್ನಪ್ಪ ಉತ್ತಂಗಿಯವರು ಸಂಪಾದಿಸಿರುವ 'ಸರ್ವಜ್ಞ ವಚನಗಳು'ಗೆ ಪ್ರಸ್ತಾವನೆ ಯನ್ನು ಬರೆಯುತ್ತಾ ಶ್ರೀ ಶಿವಮೂರ್ತಿಶಾಸ್ತ್ರಿ ಹುಲ್ಕುಂಟೆ ಮಠ-ಅವರು ಮೂವರು ಬೇರೆ ಬೇರೆ ಸರ್ವಜ್ಞರನ್ನು ಗುರುತಿಸುತ್ತಾರೆ–ಸಂತಕವಿ ಸರ್ವಜ್ಞ ನಲ್ಲದೆ 'ಕಾಲಜ್ಞಾನ'ದ ಸರ್ವಜ್ಞ, ಚೌಪದಿಗಳನ್ನೂ ಹಾಡುಗಳನ್ನೂ ಬರೆದಿರುವ ಸರ್ವಜ್ಞರಿದ್ದಾರೆ, ಎಂದು. ಕಡೆಯವರಿಬ್ಬರು ಹಾಗಿರಲಿ, ಮೊದಲ ಸರ್ವಜ್ಞನ ಕವಿತೆಗಳನ್ನು ಮಾತ್ರ ಇಲ್ಲಿ ವಿವೇಚಿಸೋಣ.

ಸರ್ವಜ್ಞನ ತ್ರಿಪದಿಗಳು ಭಾವದಲ್ಲಿ, ಭಾಷೆಯಲ್ಲಿ, ಶೈಲಿಯಲ್ಲಿ ವಚನ ವಾಙ್ಮಯವನ್ನು ಹೋಲುತ್ತವೆ. ಅಷ್ಟೇ ಅಲ್ಲ, ಅಲ್ಲಿನ ಷಟ್‌ಸ್ಥಲ, ಅಷ್ಟಾವರಣ, ಜಾತಿಭೇದನಿರಾಕರಣ ಇತ್ಯಾದಿ ವೀರಶೈವ ಧರ್ಮದ ನಿರೂಪಣೆ ವಚನಗಳಷ್ಟೆ ಸಾರವತ್ತಾಗಿ ಭಾವಗರ್ಭಿತವಾಗಿ, ಪ್ರಭಾವಯುತವಾಗಿ, ಸತ್ಯನಿಷ್ಠುರವಾಗಿ ಇಲ್ಲಿಯೂ ಕಾಣಬರುತ್ತವೆ. ಆದ್ದರಿಂದಲೆ ಈ ತ್ರಿಪದಿಗಳನ್ನು ವಚನಗಳೆಂದೇ ಕರೆಯುವ ವಾಡಿಕೆ. ಆದರೆ ಸರ್ವಜ್ಞನ ತ್ರಿಪದಿಗಳು ವಚನಗಳಿಗಿಂತಲೂ ಹೆಚ್ಚು ಸರಸವಾಗಿವೆ; ಇಲ್ಲಿನ ದೃಷ್ಟಿಯೂ ಹೆಚ್ಚು ಉದಾರವಾದುದು. ವಚನಗಳು ಶಾಸ್ತ್ರಗ್ರಂಥಗಳು; ಸರ್ವಜ್ಞನದು ಕವಿತೆ. ಇದು ಧರ್ಮದ ಪ್ರತಿಪಾದನೆಗೆ ಆಧಾರಗ್ರಂಥವಾಗದೆ ಇರಬಹುದು ; ಆದರೆ ಈತನ ಮಾತಿನ ಜಾಣ್ಮೆ, ಭಾಷೆಯ ಬೆಡಗು, ಅವರಿಗಿಂತಲೂ ಹೆಚ್ಚು ಮೋಹಕವಾಗಿದೆ. ವಚನಕಾರರಲ್ಲಿನ ಅನ್ಯಮತ ತಿರಸ್ಕಾರ ಇಲ್ಲಿಲ್ಲ. ಈತನ ಲೋಕಾನುಭವವೂ ಅವರಿಗಿಂತ ಹಿರಿದಾದುದು. ದೈವವನ್ನು ಕುರಿತ ಆತನ ನಿಲವು ಇದು—

ಆ ದೇವ ಈ ದೇವ ಮಾದೇವನೆನಬೇಡ ।
ಆ ದೇವರ ದೇವ—ಭುವನ ಪ್ರಾಣಿಗಳಿಗಾವವನೆ ದೇವ ಸರ್ವಜ್ಞ ।

ಆ ದೇವ ಈ ದೇವ ಮಹದೇವ ಎಂಬ ಬೇರೆ ಬೇರೆ ಹೆಸರಿನ ದೈವಗಳಿಗಿಂತಲೂ ಜಗತ್ತಿಗೆಲ್ಲಾ ಅಧಿದೈವವಾಗಿ ಜಗತ್ತಿನ ಚೈತನ್ಯಸ್ವರೂಪಿಯಾದುದೇ ನಿಜವಾದ ದೈವ. ದೈವಸಾಕ್ಷಾತ್ಕಾರವಾದವನು ಮೌನಿಯಾಗಬೇಕಂತೆ. 'ಬೊಮ್ಮವನು ಅರಿದು ಉಸುರಿದರೆ ಕಳಹೋಗಿ ಕೆಮ್ಮಿದಂತಕ್ಕು.' ಸತ್ಯಸಾಕ್ಷಾತ್ಕಾರವಾದ ಮೇಲೆ ಸತ್ತಂತಿರಬೇಕು; ಅದನ್ನು ವಿವರಿಸ ಹೊರಟರೆ 'ಸತ್ತವರಿಗತ್ತ ಹಾಗಕ್ಕು'.

ವಚನ ವಾಙ್ಮಯದಂತೆ ಸರ್ವಜ್ಞನ ತ್ರಿಪ್ರದಿಗಳೂ 'ಸದಾಚಾರ ಸ್ಮೃತಿ'ಗಳೇ. 'ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು' ಎಂಬ ಮರ್ಮವನ್ನು ಸರ್ವಜ್ಞನೂ ಬಲ್ಲ. ಚಿತ್ತಶುದ್ಧಿಯಿಲ್ಲದ ಬಹಿರಾಡಂಬರವನ್ನು ಆತನೂ ಕಟುವಾಗಿ ಟೀಕಿಸುತ್ತಾನೆ—

ಎಣಿಸುತಿರ್ಪುದು ಬೆರಳು ಗುಣಿಸುತಿರ್ಪುದು ಜಿಹ್ವೆ
ಮನಹೋಗಿ—ಹಲವ ನೆನೆದರೆ ಹಾಳೂರ ಶುನಕನಂತಕ್ಕು....

ನಿಶ್ಚಲ ಭಕ್ತಿಯಿಲ್ಲದವನು ಗುಡಿಯ ಪ್ರದಕ್ಷಿಣೆ ಹಾಕುವುದು 'ಎತ್ತು ಗಾಣವನ್ನು ಹೊತ್ತು ತಾ ಸುತ್ತಿ ಬಂದಂತೆ' ವ್ಯರ್ಥ. ಸ್ನಾನ, ಗಂಧ, ವಿಭೂತಿಗಳ ಧಾರಣೆಯಿಂದಲೆ ಸದ್ಗತಿ ದೊರೆಯುವಂತಿದ್ದರೆ 'ಜಲದಿಪ್ಪ ಕಪ್ಪೆ' 'ಸಾಣೆ ಕಲ್ಲು', 'ಕತ್ತೆಗಳು' ಸ್ವರ್ಗಕ್ಕೆ ಏರಬಾರದೇಕೆ? ಎಂಬುದು ಆತನ ಸವಾಲು. ಸದ್ಗತಿಯೆಂಬುದು ಅಷ್ಟು ಅಗ್ಗವಲ್ಲ—

ಖಂಡಿಸದೆ ಕರಣವನು, ದಂಡಿಸದೆ ದೇಹವನು!
ಉಂಡುಂಡು ಸ್ವರ್ಗಕಯ್ದುಲ್ಕೆ ಅದನೇನು | ರಂಡೆಯಾಳುವಳೆ?

ಸದ್ಗತಿ ದೊರೆಯಬೇಕಾದರೆ ದೇಹ ಮನಸ್ಸುಗಳನ್ನು ದಂಡಿಸಬೇಕು. ಕಾಮ ಕ್ರೋಧಾದಿ ಅರಿಷಡ್ವರ್ಗಗಳನ್ನು ಗೆಲ್ಲಬೇಕು. ಕೋಪವುಳ್ಳವನ ದೇಹ ಹಾವಿನ ಹುತ್ತವಿದ್ದಂತೆ. ಅವನ

ಒಡಲೆಂಬ ಹುತ್ತಕ್ಕೆ ನುಡಿವ ನಾಲಗೆ ಸರ್ಪ
ಕಡುಕೋಪವೆಂಬ ವಿಷವೇರೆ, ಸಮತೆ ಗಾರುಡಿಗನಂತಕ್ಕು

ಆದ್ದರಿಂದ ಮನುಷ್ಯ ಸಮತೆಯನ್ನು ಗಳಿಸಿಕೊಳ್ಳಬೇಕು. ಇದನ್ನು ಹಾಳು ಮಾಡುವುದರಲ್ಲಿ ಕಣ್ಣು ಮನ, ನಾಲಗೆಗಳ ಪಾತ್ರ ಬಹುಮುಖ್ಯ. 'ಕಣ್ಣು ಮನ ನಾಲಗೆಯು ತನ್ನವೆಂದೆನಬೇಡ' ಸಮಯ ಬಂದಾಗ ಅವು ನಿನ್ನ ಕೈ ಮೀರುತ್ತವೆ, ಅಕಾರ್ಯವನ್ನು ಮಾಡಿಸುತ್ತವೆ. ಆದ್ದರಿಂದ ಇನ್ನೊಬ್ಬರಿಂದ ನಾನು ಹಾಳಾದೆ ಎಂಬುದು ತಪ್ಪು 'ಅನ್ಯರುಂ ಕೊಂದರೆನಬೇಡ'. ನಿನಗೆ ಮೃತ್ಯು ನೀನೆ. ಕಣ್ಣು ಮನ ನಾಲಗೆ 'ಇವು ಮೂರು ತನ್ನ ಕೊಲ್ಲುವವು' ಎನ್ನುತ್ತಾನೆ, ಈ ಸರ್ವಜ್ಞ.

ಸರ್ವಜ್ಞ ಜಾತಿಭೇದವನ್ನು ಒಪ್ಪುವುದಿಲ್ಲ. 'ಜಾತಿಹೀನರ ಮನೆಯ ಜ್ಯೋತಿ ತಾ ಹೀನವೆ?' ಎಂದು ಪ್ರಶ್ನಿಸಿ 'ದೇವನೊಲಿದಾತನೇ ಜಾತ' ಎನುತ್ತಾನೆ. ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ಆತನಿಗೆ ಜಾತಿಭೇದವೇನೂ ಇಲ್ಲ.

ಎಲುವಿಲ್ಲ ನಾಲಗೆಗೆ, ಬಲವಿಲ್ಲ ಒಡವಂಗೆ |
ತೊಲೆಗಂಬವಿಲ್ಲ—ಗಗನಕ್ಕೆ, ದೇವರಲಿ ಕುಲಭೇದವಿಲ್ಲ.

ಆದ್ದರಿಂದ ಕುಲ ಮುಖ್ಯವಲ್ಲ, ಸಜ್ಜನಿಕೆ ಮುಖ್ಯ. ಜನರು ಸತ್ಯವಂತರಾಗಿ ರಬೇಕು.

ಸತ್ಯರಾ ನುಡಿ ತೀರ್ಥ, ನಿತ್ಯರಾನಡೆ ತೀರ್ಥ
ಉತ್ತಮರ ಸಂಗವದು ತೀರ್ಥ 'ಹರಿವ ನೀರೆ' ತ್ತಣದು ತೀರ್ಥ ?

ಅಂತಹ ಸಜ್ಜನರ ಸಹವಾಸದಿಂದ 'ಕಳ್ಳನೊಳ್ಳಿದನಕ್ಕು'. ಆದರೆ ಅಂತಹವರ ಸಹವಾಸ ಜನಕ್ಕೆ ಬೇಡ

ಗಂಧವನು ತೇವಲ್ಲಿ ಒಂದು ನೊಣವನು ಕಾಣೆ
ಸಂಧಿಸಿ ಮಲವ ಬಿಡುವಲ್ಲಿ ನೊಣ ಮುತ್ತು | ವಂದವನು ನೋಡು.

ಮನುಷ್ಯರು ಕೆಟ್ಟ ಕೆಲಸಕ್ಕೆ ಮುತ್ತಿಕೊಳ್ಳುತ್ತಾರೆ, ಒಳ್ಳೆಯದು ಬೇಡ. ಹಾಗಾದರೆ ಸಜ್ಜನರ ಗತಿ? ದುರ್ಜನರ ಮಧ್ಯದಲ್ಲಿ ಅವರು 'ದಂತಪಂಗ್ತಿಯ ನಡುವೆ ಎಂತಿರ್ಪುದದು ಜಿಹ್ವೆ' ಅಂತಿರಬೇಕು. 'ದಯವೇ ಧರ್ಮದ ಮೂಲ' ಆದ್ದರಿಂದ ಪ್ರಾಣಿಮಾತ್ರದಲ್ಲಿ ದಯೆ ತೋರುತ್ತಾ ಬಡಬಗ್ಗರಿಗೆ ದಾನಮಾಡಬೇಕು.

ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಂಗೆ
ಕೊಟ್ಟದ್ದು ಕೆಟ್ಟಿತೆನಬೇಡ. ಮುಂದಕೆ | ಕಟ್ಟಿಹುದು ಬುತ್ತಿ.

ಹಾಗೆ ದಾನಮಾಡುವಾಗಲೂ 'ಆಗ ಬಾ, ಈಗ ಬಾ, ಹೋಗಿ ಬಾ ಎನ್ನದೆ ಆಗಲೆ ಕರೆದು ಕೊಡ ಬೇಕು.' ನಿನ್ನ ಯೋಗ್ಯತೆ ಇದ್ದಷ್ಟು ದಾನ ಮಾಡಿದರೆ ಸಾಕು. 'ಸೊಡರೆಣ್ಣೆ ತೀರಿದರೆ ಕೊಡನೆತ್ತಿ ಹೊಯ್ಯುವರೆ?' ದೀಪಕ್ಕೆ ಒಂದು ಮಿಳ್ಳೆ ಎಣ್ಣೆ ಹಾಕುವಂತೆ ನಿನ್ನ ಸಂಪತ್ತಿನಲ್ಲಿ ಅತ್ಯಲ್ಪವನ್ನು ಕೊಟ್ಟರೂ ಸಾಕು. 'ಅನ್ನದೇವರ ಮುಂದೆ ಇನ್ನು ದೇವರು ಉಂಟೆ? ಆದ್ದರಿಂದ ಹೊಟ್ಟೆಗಿಲ್ಲದವನಿಗೆ ಅನ್ನದಾನ ಮಾಡಬೇಕು. ಅಂತಹ ದಾನಿ ದೇವರಿಗೆ ಸಮಾನ. 'ಕೈಯಾರೆ ಈವನೇ ದೇವ'. ಸರ್ವಜ್ಞನು ವಿರಕ್ತನಾದರೂ ಆತನು ಸಂಸಾರಜೀವನವನ್ನು ತೆಗಳುವುದಿಲ್ಲ.

ಬೆಚ್ಚನಾ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ
ಇಚ್ಛೆಯನ್ನರಿವ—ಸತಿಯಾಗೆ ಸ್ವರ್ಗಕ್ಕೆ | ಕಿಚ್ಚು ಹಚ್ಚೆಂದ ಸರ್ವಜ್ಞ||

ಸಂಸಾರಜೀವನದ ಸಾರಸರ್ವಸ್ವವಾದ ಹೆಣ್ಣು ಸಜ್ಜನಳಾದರೆ ಆಗ

ಹೆಣ್ಣಿನಿಂದಲಿ ಇಹವು, ಹೆಣ್ಣಿನಿಂದಲಿ ಪರವು |
ಹೆಣ್ಣಿಂದ ಸಕಲ—ಸಂಪದವು ಹೆಣ್ಣೊಲ್ಲ | ದಣ್ಣಗಳು ಯಾರು ?

ಹೆಣ್ಣಿಲ್ಲದ ಸಂಸಾರ 'ಮಳಲೊಳಗೆ ಎಣ್ಣೆ ಹೊಯಿದಂತೆ', ಆದರೆ ಗುಣವಂತಳಾದ ಹೆಣ್ಣು ದೊರೆಯುವುದು ಮಾತ್ರ ಅವನ ಅದೃಷ್ಟ.

ಅಂಗನೆಯು ಒಲಿಯುವುದು, ಬಂಗಾರ ದೊರೆಯುವುದು ।
ಸಂಗ್ರಾಮದೊಳಗೆ ಗೆಲ್ಲುವುದು ಇವು ಮೂರು । ಸಂಗಯ್ಯನೊಲುಮೆ.

ಹೆಣ್ಣು ಗುಣವಂತಳಾಗಿ ಒಲಿದರೆ ಆಗ 'ನಾರಿ ಪರರುಪಕಾರಿ. ನಾರಿ ಸ್ವರ್ಗಕೆ ದಾರಿ । ಸಕಲರಿಗೆ ಹಿತಕಾರಿ' ಹಾಗಲ್ಲದೆ ಅವಳು ಮುನಿದರೆ 'ನಾರಿಯೇ ಮಾರಿ'.

ಸರ್ವಜ್ಞನು ತನ್ನ ಕವನಕ್ಕೆ ವಸ್ತುವನ್ನು ಹುಡುಕುವವನಲ್ಲ. ಕಣ್ಣಿಗೆ ಬಿದ್ದುದೆಲ್ಲ ಅವನ ಕಾವ್ಯವಸ್ತು. ಸಾಲಗಾರನ ದುರವಸ್ಥೆ ಇದು

ಸಾಲವನು ಕೊಂಬಾಗ ಹಾಲೋಗರುಂಡಂತೆ ।
ಸಾಲಿಗನು ಬಂದು ಎಳೆವಾಗ ಕಿಬ್ಬದಿಯ ಕೀಲು ಮುರಿದಂತೆ...

ಕವಿಗೆ ನವಣೆಅಕ್ಕಿ ಅನ್ನದಲ್ಲಿ ಬಹು ಪ್ರೀತಿಯೇನೊ !

ನವಣೆಯೂ ಬೋನಕ್ಕೆ ಹವಣುಳ್ಳ ತೊಗೆಯಾಗಿ
ಕವಣೆಗಲ್ಲಷ್ಟು-ಬೆಣ್ಣೆ ದರೂಟದ । ಹವಣ ನೋಡೆಂದ....

ಶಕುನಗಳಲ್ಲಿ ಸೀನಿಗೆ ಬಹು ಪ್ರಾಮುಖ್ಯತೆ—

ಏನ ಮನ್ನಿಸದಿರಲು ಸೀನ ಮನ್ನಿಸಬೇಕು.
ಸೀನ ಮನ್ನಿಸದೆ-ಹೋದರೆ ಹೋದಲ್ಲಿ । ಹಾನಿಯೇ ಬಕ್ಕು.

ಹೀಗೆಯೇ ವೈದ್ಯ, ರಸವಿದ್ಯೆ, ಜ್ಯೋತಿಷ, ವೇಶ್ಯಾಪದ್ಧತಿ, ರಾಜನೀತಿ, ಯೋಗ ಇತ್ಯಾದಿ ಇತ್ಯಾದಿಗಳನ್ನು ಕುರಿತು ಆತ ಬರೆದಿದ್ದಾನೆ. ಯಾವುದನ್ನೆ ಬರೆಯಲಿ, ಆತನ ದೃಷ್ಟಿ ಜನಸಾಮಾನ್ಯರ ಉದ್ಧಾರ. ಅವರು ತಮ್ಮ ಲೋಪದೋಷಗಳನ್ನು ತಿದ್ದಿಕೊಂಡು ಬಾಳನ್ನು ಹಸನಾಗಿ ಮಾಡಿಕೊಳ್ಳಲೆಂಬುದು ಆತನ ಗುರಿ. ಆದ್ದರಿಂದ ಅವರ ಭಾಷೆಯಲ್ಲಿಯೇ, ಅವರಿಗೆ ಚಿರಪರಿಚಿತವಾದ ಹೋಲಿಕೆಗಳನ್ನು ಕೊಟ್ಟೇ ಆತನು ಬೋಧಿಸುತ್ತಾನೆ. 'ಸಜ್ಜನರ ಸಂಗವದು ಹೆಜ್ಜೇನು ಉಂಡಂತೆ', ದುರ್ಜನರ ಸಂಗ ಬಚ್ಚಲ ರೊಚ್ಚಿನಂತೆ. 'ಕೊಡದ ಲೋಭಿಯ ಮಾತು ಕೊಡಲಿಯಾ ಗಾಯ,' 'ದೌರ್ಜನ್ಯಕಾರಿ ಸತ್ತರೆ ಹತ್ತಿರ್ದ ಕಜ್ಜಿ ಹೋದಂತೆ', 'ನೀಚರಾ ನೆರೆ

ಯಿಂದ ಈಚಲದ ಮರ ಲೇಸು', 'ಹಂದಿ ಗಂದಣವೇಕೆ', 'ಬಾಡ ತಿಂಬಾತಂಗೆ ಆಡೇನು? ಆವೇನು?'. 'ಸ್ವರ್ಗದಲಿ ಹೊಲೆಗೇರಿಯಿಲ್ಲ', 'ದಾರದಿಂದಲೆ ಮುತ್ತು ಹಾರವೆಂದೆನಿಸಿಹುದು', 'ಹಂಗಿನಾ ಹಾಲಿಗಿಂದಂಬಲಿಯ ತಿಳಿ ಲೇಸು'. 'ಕಳ್ಳನಾ ಮಾತು ಕೆಸರೊಳಗೆ ಮುಳ್ಳು ತುಳಿದಂತೆ.' 'ಓದಿದಾ ಓದು ತಾ ಮೇದ ಕಬ್ಬಿನ ಸಿಪ್ಪೆ', ಹೊತ್ತಿಗೊದಗಿದ ಮಾತು ಸತ್ತವನು ಎದ್ದಂತೆ', 'ಮಾತ ಬಲ್ಲಾತಂಗೆ ಯಾತವದು ಸುರಿದಂತೆ'. 'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೆ ಮೇಲು,' 'ಮಕ್ಕಳಿಲ್ಲದ ಮನೆಯು ಪಕ್ಕಿಯಿಲ್ಲದ ವನ'— ಇಂತಹ ಸುಲಭವಾದ ಉಪಮಾನಗಳನ್ನು ಬಳಸಿ ತನ್ನ ಅಭಿಪ್ರಾಯ ಕೇಳುವವರ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾನೆ. ಆತನ ಉಪದೇಶದಲ್ಲಿ ಎಷ್ಟೋ ಭಾಗ ಹಿಂದಿನ ವಚನಕಾರರಲ್ಲಿ ಇದ್ದುದೇ. ಆದರೆ ಆತನು ಹೇಳುವ ರೀತಿ ಹೊಸದು. ಬಳಕೆಯ ಮಾತುಗಳಿಗೆ ಆತನು ಜೀವ ತುಂಬುತ್ತಾನೆ. ಆತನ ಮಾತುಗಳು ಅರ್ಥವತ್ತಾಗಿರುವಷ್ಟೇ ಭಾವಪೂರ್ಣವಾಗಿವೆ, ಧ್ವನಿಪೂರ್ಣವಾಗಿವೆ; ಗಾದೆಯಂತೆ ಸಾರವತ್ತಾಗಿವೆ. ಇಂದು ನಮ್ಮಲ್ಲಿ ಬಳಕೆಯಲ್ಲಿರುವ ಎಷ್ಟೋ ಗಾದೆಗಳಿಗೆ ಸರ್ವಜ್ಞ ವಚನಗಳೆ ಆಕರಗಳು.

ಸರ್ವಜ್ಞನು ವಿಶ್ವಪ್ರೇಮಿ. ನೊಂದವರನ್ನು ಕಂಡಾಗ ಆತನ ಕರುಳು ಕರಗುತ್ತದೆ, ಹೃದಯ ಮಿಡಿಯುತ್ತದೆ, ರೋಷ ಮೂಡುತ್ತದೆ. ಅನ್ಯಾಯವನ್ನು ಕಂಡು ಆತನು ಅಬ್ಬರಿಸುತ್ತಾನೆ, ಚಾಟಿಯಂತಹ ಮಾತುಗಳಿಂದ ಜನರನ್ನು ಅಪ್ಪಳಿಸುತ್ತಾನೆ. ಇದರಲ್ಲಿ ಆತನಿಗೆ ಈಷತ್ತೂ ದಾಕ್ಷಿಣ್ಯವಿಲ್ಲ. ಮಸೆದ ಇಬ್ಬಾಯ ಖಡ್ಗವನ್ನು ಝಳಪಿಸಿದಂತೆ ಆತನ ಬಾಯಿಂದ ಹರಿತವಾದ, ತೀಕ್ಷ್ಣವಾದ ಮಾತುಗಳು ಧಾರಾಕಾರವಾಗಿ ಹರಿದು ಬರುತ್ತವೆ. ಆದರೂ ಆ ನುಡಿಯಲ್ಲಿ 'ನಕ್ಕು, ನಗಿಸುವ' ಒಂದು ದೊಡ್ಡ ಗುಣವಿದೆ. ತಾನೂ ತಿನ್ನ ಪರರಿಗೂ ಇಕ್ಕದವನನ್ನು 'ಕೆಚ್ಚಲ ಮೇಲಿನ ಉಣ್ಣೆ' ಎನ್ನುತ್ತಾನೆ. 'ಅಕ್ಕಿಯನು ಉಂಬವನು ಹಕ್ಕಿಯಂತಾಗುವನು'। ಸಿಕ್ಕು ರೋಗದಲಿ—ರೊಕ್ಕವನು ವೈದ್ಯನಿಗೆ ಇಕ್ಕುತ್ತಲಿರುವ'; 'ಜೋಳವನು ತಿಂಬವನು ತೋಳದಂತಾಗುವನು'— ಇಂತಹ ನೂರಾರು ವಾಕ್ಯಗಳಲ್ಲಿ ಕವಿಯ ಹಸನಭಾವ ಎದ್ದು ಕಾಣುತ್ತದೆ. ಆತನು ಕೆರಳಿ 'ಕೆರದಿಂದ ಹೊಡೆ' ಎನ್ನು

ವಾಗಲೂ ವ್ಯಕ್ತಿಗತವಾದ ಟೀಕೆಯೇನೂ ಇರುವುದಿಲ್ಲ. ಆತನ ವಿಡಂಬನೆ ರಾವುಗನ್ನಡಿಯಲ್ಲಿ ನೋಡಿಕೊಂಡಂತೆ. ನಮ್ಮ ವಿಕೃತಿಯನ್ನು ನಾವು ಕಂಡಾಗ ನಮ್ಮ ಮುಖದಮೇಲೆ ನಾವೇನೂ ಕೋಪಗೊಳ್ಳುವುದಿಲ್ಲ; ನಗುತ್ತೇವೆ. ಸರ್ವಜ್ಞನ ಟೀಕೆಯನ್ನು ಕೇಳಿದಾಗಲೂ ಹಾಗೆಯೇ.

ಶುಷ್ಕವಾದ ನೀತಿಯನ್ನು ಸರಸಕಾವ್ಯವಾಗಿ ನಿರೂಪಿಸುವುದರಲ್ಲಿ ಕೃತ ಕೃತ್ಯನಾಗಿರುವ 'ಸರ್ವಜ್ಞ'ನು ತೆಲುಗಿನ ವೇಮನನಂತೆ, ತಮಿಳಿನ ತಿರುವ ಳ್ಳುವರ್ ಅಂತೆ ಹಿಂದಿಯ ಕಬೀರದಾಸನಂತೆ ಸ್ತುತ್ಯನಾಗಿದ್ದಾನೆ.

**ಷಡಕ್ಷರಿ (೧೬೫೫) :**

ವೈದಿಕ ಕವಿಗಳಲ್ಲಿ ಒಬ್ಬ ಲಕ್ಷ್ಮೀಶ, ವೀರಶೈವ ಕವಿಗಳಲ್ಲಿ ಒಬ್ಬ ಷಡಕ್ಷರಿ—ಇವರು ಅತ್ಯಂತ ಜನಪ್ರಿಯರಾದ ಕವಿಗಳು. ಇಪ್ಪತ್ತನೆಯ ಶತ ಮಾನದ ವರೆಗೆ—ಅದು ಪ್ರಾರಂಭವಾದ ಕೆಲವು ಕಾಲದವರೆಗೆ ಕೂಡ— ಕನ್ನಡ ಭಾಷೆಯಲ್ಲಿ ಪಂಡಿತರೆಂದರೆ ಇವರಿಬ್ಬರ ಕಾವ್ಯಗಳನ್ನು ಓದಿ ಅರ್ಥ ಹೇಳಬಲ್ಲವರೆಂಬ ಭಾವನೆ ಇತ್ತು. ಇಬ್ಬರೂ ಪ್ರಾಜ್ಞರಾದ ಕವಿಗಳು. ಇಬ್ಬರೂ ತಮ್ಮ ಕಾಲದ ಜನರ ಅಭಿರುಚಿಗೆ ತಕ್ಕಂತೆ ಕಾವ್ಯರಚನೆಮಾಡಿ 'ಸೈ' ಎನಿಸಿಕೊಂಡುವರು. ಇವರಿಬ್ಬರ ಪ್ರತಿಭೆ ಪಾಂಡಿತ್ಯಗಳಲ್ಲಿ ಅಂತರವಿರ ಬಹುದಾದರೂ, ಹದಿನಾರನೆಯ ಶತಮಾನದ ಆ ಲಕ್ಷ್ಮೀಶನೂ, ಹದಿನೇಳ ನೆಯ ಶತಮಾನದ ಈ ಷಡಕ್ಷರಿಯೂ ಸಾಹಿತ್ಯಾಕಾಶದ ಚಂದ್ರಸೂರ್ಯರಂತೆ ನಮ್ಮ ಜನಮನವನ್ನು ಆಕರ್ಷಿಸಿದ್ದಾರೆ.

ಷಡಕ್ಷರದೇವನು ಮೈಸೂರು ಜಿಲ್ಲೆಯ ದನಗೂರು ಮಠದ ಸ್ವಾಮಿ ಯಾಗಿದ್ದವನು. ರೇಣುಕ ಗೋತ್ರದ ಉದ್ಧಾನಸ್ವಾಮಿ, ಆತನ ಕರಕಮ ಲೋದ್ಭವದಲ್ಲಿ ಹುಟ್ಟಿದ ಅನ್ನದಾನಿಸ್ವಾಮಿ, ತದೀಯ ಕರಸಂಜಾತ ರೇವಣ ಸಿದ್ಧದೇಶಿಕ, ಆತನ ಹಸ್ತಕಮಲೋದ್ಭವ ಚಿಕ್ಕವೀರದೇಶಿಕ, ಆತನ 'ಕರ ಸಂಜಾತ ಸುಜಾತ' ಷಡಕ್ಷರಿ.—ಇದು ಕವಿಯ ಗುರುಪರಂಪರೆ. ಸನ್ಯಾಸಿ ಯಾದ ಈತ ತಂದೆ ತಾಯಿಗಳ ವಿಚಾರದಲ್ಲಿ ಮೌನಿಯಾಗಿದ್ದಾನೆ. ಎಳೆವ ರೆಯದಲ್ಲಿಯೇ ಈತನು ಪಟ್ಟಾಧಿಕಾರಿಯಾದನೆಂದು ತೋರುತ್ತದೆ. ದನ ಗೂರು ಮಠದ ಅಧಿಪತಿಯಾದರೂ ಆತನು ತನ್ನ ಜೀವಿತದ ಬಹು ಭಾಗ ವನ್ನು ಎಳಂದೂರಿನಲ್ಲಿಯೇ ಕಳೆದನೇನೊ! ಆತನನ್ನು 'ಎಳಂದೂರು ಷಡ

ಕ್ಷರಿ' ಎಂದು ಕರೆವ ರೂಢಿ. ಹದಿನಾಡು ದೇಶದ ದೊರೆ ಮುದ್ದುರಾಜನೆಂಬುವನು ಎಳಂದೂರಿನ ಹೆಣ್ಣನ್ನು ಮದುವೆಯಾಗಿದ್ದ; ಆ ಹೆಣ್ಣಿನ ಮನೆಯವರು ದನಗೂರು ಮಠದ ಶಿಷ್ಯರಾಗಿದ್ದರು; ವಿದ್ಯಾವಿನಯ ಸಂಪನ್ನನಾಗಿ, ಶಿವನಿಷ್ಠಾಪರನಾಗಿ, ತೇಜಸ್ವಿಯಾಗಿದ್ದ ಬಾಲಗುರು ಷಡಕ್ಷರಿ ದೇವನು ಮುದ್ದುರಾಜನ ಗಮನವನ್ನು ಸೆಳೆದನೆಂದು ತೋರುತ್ತದೆ. ತನ್ನ ಹನ್ನೊಂದನೆಯ ವಯಸ್ಸಿನಲ್ಲಿಯೆ ಕವಿತಾಶಕ್ತಿ ತನ್ನನ್ನು ಒಲಿದು ಬಂದಿತೆಂದು ಕವಿ ತನ್ನ 'ಶಬರ ಶಂಕರ ವಿಲಾಸ'ದಲ್ಲಿ ಹೇಳಿಕೊಂಡಿದ್ದಾನೆ. ಸರಸಿಯಾಗಿ ವಾಕ್ಪಟುವಾಗಿದ್ದ ಷಡಕ್ಷರಿಯನ್ನು ಮೆಚ್ಚಿಕೊಂಡ ರಾಜನು ಎಳಂದೂರಿನಲ್ಲಿಯೆ ಒಂದು ಮಠವನ್ನು ಕಟ್ಟಿಸಿಕೊಟ್ಟು, ಆತನನ್ನು ಅಲ್ಲಿಯೆ ನಿಲ್ಲಿಸಿಕೊಂಡನೆಂದು ಕಾಣುತ್ತದೆ. ಕವಿಯು ಅಲ್ಲಿಯೇ ಕೃತಿರಚನೆ ಮಾಡಿರಬೇಕು. ಆತನ ಸಮಾಧಿಯೂ ಅಲ್ಲಿಯೆ ಇದೆ.

ಷಡಕ್ಷರದೇವನು ಕನ್ನಡ ಸಂಸ್ಕೃತಗಳೆರಡರಲ್ಲಿಯೂ ಕಾವ್ಯರಚನೆ ಮಾಡಿದ ಸವ್ಯಸಾಚಿ. ಎರಡು ಭಾಷೆಗಳಲ್ಲಿಯೂ ಆತನಿಗಿರುವ ಪಾಂಡಿತ್ಯ ಅದ್ವಿತೀಯವಾದುದು. ಸಂಸ್ಕೃತದಲ್ಲಿ ಆತನು ರಚಿಸಿರುವ ಹಲವು ಗ್ರಂಥಗಳಲ್ಲಿ 'ಕವಿಕರ್ಣ ರಸಾಯನ' ಎಂಬ ಒಂದು ಅಲಂಕಾರ ಗ್ರಂಥವೂ ಇದೆ; ಅದ್ದರಿಂದ ಆತನಿಗೆ ಕಾಳಿದಾಸಾದಿ ಸಂಸ್ಕೃತ ಮಹಾಕವಿಗಳೆಲ್ಲರ ಪರಿಚಯವಿತ್ತೆಂಬುದು ನಿರ್ವಿವಾದ. ತನ್ನ ಕನ್ನಡ ಕಾವ್ಯಗಳಲ್ಲಿ ಹರಿಹರ, ಕೆರೆಯ ಪದ್ಮರಸ, ಪಾಲ್ಕುರಿಕೆ ಸೋಮನಾಥ, ಗುಬ್ಬಿಯ ಮಲ್ಲಣಾರ್ಯ ಮೊದಲಾದ ಕವಿಗಳನ್ನು ಸ್ತುತಿಸಿ, ತನ್ನ ಹಿಂದಿನ ಕವಿಕಾವ್ಯಗಳ ಪರಿಚಯ ತನಗಿತ್ತೆಂಬುದನ್ನು ಸೂಚಿಸಿದ್ದಾನೆ. ಆತನ ಕಾವ್ಯಗಳನ್ನು ಓದಿದ ಮೇಲೆ ಆತನಿಗೆ ತನ್ನ ಕಾಲದವರೆಗಿನ ಕನ್ನಡ ಸಾಹಿತ್ಯವೆಲ್ಲವೂ ಕರತಲಾಮಲಕವಾಗಿತ್ತೆಂಬುದು ನಮಗೆ ವೇದ್ಯವಾಗುತ್ತದೆ. ಹೀಗಾಗಿ, ಆತನಿಗೆ ಇರುವ 'ಉಭಯ ಕವಿತಾ ವಿಶಾರದ' ಎಂಬ ಬಿರುದು ಸಾರ್ಥಕವಾಗಿದೆ.

ಷಡಕ್ಷರಕವಿ ಸಂಸ್ಕೃತದಲ್ಲಿ 'ಕವಿಕರ್ಣ ರಸಾಯನ' ವನ್ನೇ ಅಲ್ಲದೆ 'ಶಿವಾಧಿಕ್ಯ ರತ್ನಾವಳಿ', 'ಭಕ್ತಾಧಿಕ್ಯ ರತ್ನಾವಳಿ' ಎಂಬ ವೀರಶೈವ ಧರ್ಮಗ್ರಂಥಗಳನ್ನೂ ಹಲವು ಸ್ತೋತ್ರಗಳನ್ನೂ ರಚಿಸಿದ್ದಾನೆ. ಕನ್ನಡದಲ್ಲಿ 'ರಾಜಶೇಖರ ವಿಳಾಸ', 'ವೃಷಭೇಂದ್ರ ವಿಜಯ', 'ಶಬರ ಶಂಕರ

ವಿಲಾಸ' ಎಂಬ ಮೂರು ಚಂಪೂ ಗ್ರಂಥಗಳನ್ನು ಬರೆದಿದ್ದಾನೆ. ಆ ಮೂರಕ್ಕೂ ಕ್ರಮವಾಗಿ 'ಭಾವಚಿಂತಾರತ್ನ', 'ಬಸವ ಪುರಾಣ' ಮತ್ತು 'ಕುಮಾರವ್ಯಾಸ ಭಾರತ' ಇವು ಕಾವ್ಯವಸ್ತುವನ್ನು ಒದಗಿಸಿವೆ. ರಾಜ ಶೇಖರ ವಿಳಾಸವನ್ನು ಬರೆಯುವಂದು ಕವಿಯು ಇನ್ನೂ ಎಳೆಯ ಪ್ರಾಯ ದಲ್ಲಿದ್ದನೆಂದು ತೋರುತ್ತದೆ. ಎಳೆವರೆಯುದೊಳಖಿಳ ಕಳಾ | ವಿಳಾಸಮಂ ಕಂಡು ಮೆಚ್ಚಿ ಒರೆ ಕವಿತಾ ಕೋ | ಮಳೆಯುವಳ್ಗಿರ್ದಯಿತ್ತುಂ ಯತಿ| ತಿಳಕಂ ಸೇನೆಸಿಪುದಿಳೆಗಿದಚ್ಚರಿಯಲ್ತೆ?' ಎಂದು ಆತನು ಆ ಕಾವ್ಯದಲ್ಲಿ ಹೇಳಿಕೊಂಡಿದ್ದಾನೆ. ಕವಿತಾಕೋಮಳೆಯನ್ನು ಒಲಿದೂ ಆತನು ಯತಿ ತಿಲಕನೆನಿಸಿರುವುದು ಆಲಂಕಾರಿಕವಾಗಿ ಆಚ್ಚರಿಯಾಗಿರಬಹುದು. ಆದರೆ ನಿಜವಾದ ಅಚ್ಚರಿಯೆಂದರೆ, ಯತಿತಿಲಕನಾದ ಆತ ಇಲ್ಲಿ ತಂದಿರುವ ಶೃಂಗಾರ ರಸದ ಪ್ರವಾಹ! ಆ ವಿಚಾರ ಹಾಗಿರಲಿ, ಕವಿಯು ಈ ಕಾವ್ಯ ವನ್ನು ಕ್ರಿ. ಶ. ೧೬೫೫ರಲ್ಲಿ ಬರೆದು ಮುಗಿಸಿದುದಾಗಿ ಕಾವ್ಯಾಂತ್ಯದಲ್ಲಿ ತಿಳಿಸಿದ್ದಾನೆ. ಇದಾದ ೨೨ ವರ್ಷಗಳ ಮೇಲೆ, ಎಂದರೆ ೧೬೭೭ರಲ್ಲಿ ವೃಷ ಭೇಂದ್ರ ವಿಜಯವನ್ನು ಬರೆದು ಮುಗಿಸಿದುದಾಗಿ ಕವಿಯೇ ಆ ಕಾವ್ಯದ ಕೊನೆಯಲ್ಲಿ ಹೇಳಿದ್ದಾನೆ. ಶಬರ ಶಂಕರ ವಿಲಾಸದಲ್ಲಿ ಅದರ ರಚನೆಯ ಕಾಲವನ್ನು ಕವಿ ಸೂಚಿಸಿಲ್ಲ; ತನ್ನ ಉಳಿದೆರಡು ಗ್ರಂಥಗಳನ್ನೂ ಇದರಲ್ಲಿ ಹೆಸರಿಸಿರುವುದರಿಂದ ಇದು ಆತನ ಕಡೆಯ ಗ್ರಂಥವೆಂಬುದು ಸ್ಪಷ್ಟವಾಗಿದೆ. ಆತನ ಈ ಮೂರು ಕಾವ್ಯಗಳಲ್ಲಿ ಅನುಕ್ರಮದ ದೃಷ್ಟಿಯಿಂದ ಮಾತ್ರವೇ ಅಲ್ಲ; ಕಾವ್ಯಗುಣದ ದೃಷ್ಟಿಯಿಂದಲೂ ರಾಜಶೇಖರ ವಿಲಾಸವು ಅಗ್ರಗಣ್ಯ.

ಷಡಕ್ಷರ ದೇವನು ಸಾಕಷ್ಟು ರಾಜಪೂಜಿತನಾಗಿದ್ದನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಮುದ್ದುರಾಜನು ಆತನನ್ನು ಎಳಂದೂರಿ ನಲ್ಲಿಯೇ ನಿಲ್ಲಿಸಿ ಗೌರವಿಸಿದುದು ಸರಿಯಷ್ಟೆ; ಕವಿಯು ತನ್ನ 'ವೀರಭದ್ರೋ ದಾಹರಣ ಗದ್ಯ' ದ ಕೊನೆಯಲ್ಲಿ 'ಕೆಳದೀ ರಾಜಾಸ್ಥಾನೇ ವಿರಚಿತಮಿದಂ ಸ್ತೋತ್ರಂ' ಎಂದು ಹೇಳಿಕೊಂಡಿದ್ದಾನೆ. ಆಗಿನ ಕಾಲದಲ್ಲಿ ಕೆಳದಿ, ಇಕ್ಕೇರಿ, ಬಿದನೂರು ಮೊದಲಾದ ಸಣ್ಣ ರಾಜ್ಯಗಳ ಅಳರಸರು ವೀರಶೈವ ರಾಗಿದ್ದರು. ನೆರೆಹೊರೆಯಲ್ಲಿದ್ದ ಈ ಸಂಸ್ಥಾನಗಳಲ್ಲೆಲ್ಲ ಆತನು ಪೂಜ ನೀಯನಾಗಿದ್ದಿರಬಹುದು. ಆದರೂ ಆತನು ತನ್ನ ಕಾವ್ಯಗಳಲ್ಲಿ ಎಲ್ಲಿಯೂ

ಯಾವ ರಾಜನನ್ನೂ ಹೊಗಳುವ ಗೋಜಿಗೆ ಹೋಗುವುದಿಲ್ಲ. ಈ ವಿಚಾರ ದಲ್ಲಿ ಆತನಿಗೆ ಹರಿಹರದೇವನು ಆದರ್ಶ. ಷಡಕ್ಷರಿಯೇ ಇದನ್ನು ತಿಳಿಸುತ್ತಾನೆ—

ಧರೆಯೊಳ್ ಮೇಣ್ ಪುಟ್ಟಿ ಪುಟ್ಟಿತ್ತುರುಳ್ವ ನರರಮೇಲುರ್ಬಿ
ಕಬ್ಬಂಗಳಂ ಬಿ
ತ್ತರಿಸುತ್ತಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟು
ಪೋದರ್
ಹರಿದೇವಂ ದೇವದೇವೋತ್ತಮನ ಶರಣಂ ಪಾಡಿ ಕೈವಲ್ಯ ಲಕ್ಷ್ಮೀ
ವರನಾದಂ, ಮತ್ತಮಂ ಗತ್ಯಧಿಕ ಶಿವಕವೀಂದ್ರಂಗದಾರ್ ಸಾಟಿ
ಯಪ್ಪರ್ ?

ತನ್ನ ಆದರ್ಶಕವಿಯನ್ನು ಸ್ಮರಿಸಿಕೊಂಡ ಷಡಕ್ಷರದೇವನು ತಾನು ಆತನಂತೆಯೇ ‘ ಶಿವನಂ, ತದೀಯ ಶರಣ ವ್ರಜಮಂ........ನುತಿಪೆಂ; ನುತಿಸೆನುಳಿದ ಸುರರಂ ನರರಂ’ ಎಂದು ಘೋಷಿಸುತ್ತಾನೆ. ಕವಿತಾಶಕ್ತಿ ಭಗವಂತನ ಕೃಪೆಯಿಂದ ದೊರೆಯತಕ್ಕದು—

ಆ ರಾರೇರರ್ ಶಾಸ್ತ್ರ । ಶ್ರೀರೋಹಣಗಿರಿಯನಲ್ಲಿ ನವಕವಿತಾ ಚಿಂ ।
ತಾರತ್ನಂ ದೊರೆಗುಮೆ ಮಾ । ರಾರಿಯ ಕೃಪೆಯಿಲ್ಲದಂಗೆ ಧರಣೀ
ತಳದೊಳ್ ?

ಆದ್ದರಿಂದ ಭಗವತ್ಕೃಪೆಯಿಂದ ಬಂದ ದಿವ್ಯಶಕ್ತಿಯನ್ನು ಭಗವಂತನ ಸ್ತುತಿಗಾಗಿಯೇ ಬಳಸಬೇಕೆನ್ನುತ್ತಾನೆ, ಕವಿ. ಆತನ ಕನ್ನಡದ ಮೂರು ಕೃತಿಗಳೂ ಈ ಉದಾತ್ತ ಧ್ಯೇಯದಿಂದಲೇ ಹೊರಹೊಮ್ಮಿವೆ.

ಷಡಕ್ಷರಕವಿಯ ‘ರಾಜಶೇಖರ ವಿಳಾಸ’ವು ಪಂಚಾಕ್ಷರಿಯ ಮಹಿಮೆಯನ್ನು ಸಾರುವುದಕ್ಕಾಗಿ ಸೃಷ್ಟಿಯಾದ ಗ್ರಂಥ. ಇದರ ಕಥೆ ತಮಿಳಿನಿಂದ ಬಂದುದೆಂದೂ ಅದನ್ನು ಗುಬ್ಬಿಯ ಮಲ್ಲಣಾರ್ಯನು ‘ಭಾವಚಿಂತಾರತ್ನ’ವೆಂಬ ಹೆಸರಿನಿಂದ ವರ್ಣಕವಾಗಿ ಕನ್ನಡಿಸಿದನೆಂದೂ ಅದನ್ನೇ ತಾನು ವಸ್ತುಕವಾಗಿ ವಿಸ್ತರಿಸಿದೆನೆಂದೂ ಕವಿ ತಿಳಿಸುತ್ತಾನೆ. ಸತ್ಯೇಂದ್ರ ಚೋಳರಾಜನ ಮಗನು ವೈಹಾಳಿಗೆ ಹೋಗುತ್ತಿದ್ದಾಗ ಅವನ ಕುದುರೆ ರಾಜ ಬೀದಿಯಲ್ಲಿದ್ದ ಶಿವ ಭಕ್ತ ಬಾಲಕನೊಬ್ಬನ ಮೇಲೆ ನುಗ್ಗಿ ಆ ಹುಡುಗ ಸತ್ತುಹೋದನು. ಅವನ

ತಾಯಿ ಈ ಸಂಗತಿಯನ್ನು ರಾಜನಿಗೆ ತಿಳಿಸುತ್ತಾಳೆ. ಶಿವಭಕ್ತನಾದ ಚೋಳ ರಾಜನು ಶಿವದ್ರೋಹವಾಯಿತೆಂದು ಮರುಗಿ, 'ಕೊಲೆಗೆ ಕೊಲೆ' ಎಂಬ ನೀತಿಯಂತೆ ತನ್ನ ಮಗನನ್ನು ಮರಣದಂಡನೆಗೆ ಗುರಿಮಾಡುತ್ತಾನೆ. ಈ ಕೊಲೆಗೆಲಸಕ್ಕೆ ನೇಮಕಗೊಂಡ ಸಂದಾಯಿಯೆಂಬ ಹಡಪವಳನು ರಾಜಾಜ್ಞೆ ಯನ್ನು ಒಲ್ಲದ ಮನಸ್ಸಿನಿಂದ ನೆರವೇರಿಸಿ, ರಾಜಕುಮಾರನ ಕತ್ತನ್ನು ಕತ್ತರಿಸಿದ ಮೇಲೆ ತನ್ನ ತಲೆಯನ್ನು ಕತ್ತರಿಸಿಕೊಳ್ಳುತ್ತಾನೆ. ನೆಲಕ್ಕೆ ಬಿದ್ದ ಈ ಎರಡು ತಲೆಗಳೂ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಿರುತ್ತವೆ. ಈ ಶಿರಗಳ ಸಾಮೀಪ್ಯದಿಂದ ಸತ್ತ ಶಿವಬಾಲಕನ ತಲೆ ಪಂಚಾಕ್ಷರಿಯನ್ನು ಜಪಿಸತೊಡಗುತ್ತದೆ. ಇದನ್ನು ಕಂಡ ಅವನ ತಾಯಿ ತಿರುಕೊಳವಿನಾಚಿ, ಸತ್ಯೇಂದ್ರ ಚೋಳರು ತಮ್ಮ ತಲೆಗಳನ್ನು ಕತ್ತರಿಸಿಕೊಳ್ಳುತ್ತಾರೆ; ಅವರ ತಲೆಗಳೂ ಮಂತ್ರಮಗ್ನವಾಗುತ್ತವೆ. ಇದನ್ನು ಕೇಳಿದ ರಾಣಿ ತನ್ನ ತಲೆ ಯನ್ನೂ ಕತ್ತರಿಸಿಕೊಳ್ಳಲು ಸಿದ್ಧಳಾದಾಗ ಪರಶಿವನು ಪ್ರತ್ಯಕ್ಷನಾಗಿ ಅವರೆಲ್ಲರಿಗೂ 'ಕೇಡಿಲ್ಲದ ಗಣಪದ ಸಾಮ್ರಾಜ್ಯ'ವನ್ನು ನೀಡುತ್ತಾನೆ. ಇದು ಕಥೆಯ ಸಾರಾಂಶ.

ಭಾವಚಿಂತಾರತ್ನದ ಕಥಾಸರಣಿಗೂ ರಾಜಶೇಖರ ವಿಳಾಸದ ಕಥಾ ಸರಣಿಗೂ ಸಾಕಷ್ಟು ಸಾಮ್ಯವಿದೆಯಾದರೂ ಷಡಕ್ಷರಿಯು ಕೆಲವು ಮಾರ್ಪಾಟುಗಳಿಂದ ತನ್ನ ಕಾವ್ಯಕ್ಕೆ ಮೆರಗನ್ನು ತಂದಿದ್ದಾನೆ. ಎರಡರ ಗುರಿಯೂ ಪಂಚಾಕ್ಷರಿಯ ಮಹತ್ವವನ್ನು ಉಗ್ಘಡಿಸುವುದೇ; ಆದರೆ ಆ ಕಾರ್ಯಕ್ಕಾಗಿ ಷಡಕ್ಷರದೇವನು ತನ್ನ ಕಾವ್ಯದಲ್ಲಿ ನಿರ್ಮಿಸಿರುವ ವಾತಾವರಣ ಹೆಚ್ಚು ವ್ಯಾಪಕವಾಗಿದೆ, ಪರಿಣಾಮಕಾರಿಯಾಗಿದೆ. ಭಾವಚಿಂತಾರತ್ನದಲ್ಲಿ ಕಥಾನಾಯಕ ಸತ್ಯೇಂದ್ರ ಚೋಳ; ಉತ್ತರ ವಯಸ್ಸಿನ ಈ ರಾಜ ಜಲಕೇಳಿ, ವನಕೇಳಿ, ವಸಂತೋತ್ಸವಾದಿಗಳಲ್ಲಿ ಭಾಗಿಯಾಗುತ್ತಾನೆ. ತನ್ನಂತೆಯೇ ವೃದ್ಧನಾದ ಮತಿಮೋಹಿಯೆಂಬ ಮಂತ್ರಿಯನ್ನು ಸಿಂಹಳದ ರಾಜನೊಡನೆ ಯುದ್ಧಕ್ಕೆ ತೊಡಗಿಸಿ, ಅಲ್ಲಿನ ರಾಜಕುಮಾರಿಯನ್ನು ತನ್ನ ಮಗನಿಗೆ ತಂದು ಕೊಳ್ಳುತ್ತಾನೆ. ಷಡಕ್ಷರದೇವನಿಗೆ ಇದು ಸರಿಗಾಣಲಿಲ್ಲ; ರಾಜಕುಮಾರ ನಾದ ರಾಜಶೇಖರನೇ ಈತನ ಕಥಾನಾಯಕ; ಸಿಂಹಳರಾಜನೊಡನೆ ಯುದ್ಧಮಾಡಿ, ಆತನನ್ನು ಸೋಲಿಸಿ, ಆತನ ಮಗಳನ್ನು ಮೋಹಿಸಿ,

ಮದುವೆಯಾಗುತ್ತಾನೆ. ಭಾವಚಿಂತಾರತ್ನದಲ್ಲಿ ಸಂದಾಯಿಯು ರಾಜಕುಮಾರನನ್ನು 'ತೋಳ್ವಿಡಿದು ಜಡಿದು. ಖಂಡೆಯದೊಡನೆ ನಡೆ'ದು, ಆತನ ತಲೆಯನ್ನು ಕತ್ತರಿಸಿದ ಮೇಲೆ ಖಡ್ಗವನ್ನು ಹಿಡಿದು ಬೊಬ್ಬಿರದನೆಂದು ವರ್ಣಿತವಾಗಿದೆ; ಈ ಬಯಲಾಟದ ಕುಣಿತ ಷಡಕ್ಷರಿಗೆ ಸರಿಹೋಗಲಿಲ್ಲ; ರಾಜಶೇಖರನು ತಾನೇ ಸಂದಾಯಿಯೊಡನೆ ವಧ್ಯಭೂಮಿಗೆ ನಡೆದು 'ಚಿತ್ತಾಂತದೊಳ್ ಮೃಡನಂ ಜಾನಿಸಿ, ಖಡ್ಗಮಂ ಜಡಿದು ಸಾಜ಼ರ್ಯತ್ತಾತ್ಮ ಕಂಠಕ್ಕೆ' ತಾನೇ ಕತ್ತು ಕತ್ತರಿಸಿಕೊಳ್ಳುತ್ತಾನೆ. ರಾಜಶೇಖರನ ತಾಯಿಯ ಪುತ್ರದೋಹಳ. ಗುರುಗಳಿಂದ ಆಕೆ ವರ ಪಡೆದ ಸಂದರ್ಭ. ಶಿವನು ಪ್ರತ್ಯಕ್ಷನಾದ ಸನ್ನಿವೇಶ–ಇತ್ಯಾದಿಗಳಲ್ಲಿ ಷಡಕ್ಷರದೇವನು ಮೂಲದಿಂದ ಸೂಕ್ಷ್ಮವಾದ ಬದಲಾವಣೆಗಳನ್ನು ಮಾಡಿ, ತನ್ನ ಪ್ರತಿಭೆಯನ್ನು ಪ್ರಕಾಶಪಡಿಸಿದ್ದಾನೆ.

ಷಡಕ್ಷರ ದೇವನು ಚಂಪೂಕವಿಗಳ ಸಂಪ್ರದಾಯವನ್ನು ಅನುಸರಿಸಿ, ತನ್ನ ಕಾವ್ಯದಲ್ಲಿಯೂ ಮಹಾಕಾವ್ಯದಲ್ಲಿರಬೇಕಾದ ಷೋಡಶ ವರ್ಣನೆಗಳನ್ನು ಎಳತಂದಿದ್ದಾನೆ. ಆತನ ವರ್ಣನೆಗಳು ರಮ್ಯವಾಗಿವೆಯಾದರೂ ಔಚಿತ್ಯಪೂರ್ಣವಾಗಿವೆಯೆಂದು ಹೇಳುವಂತಿಲ್ಲ. ಅತಿವರ್ಣನೆಯ ಹಾವಳಿಗೆ ಸಿಕ್ಕಿ ಕಥೆಯೇ ಕುಂಟುವಂತಾಗುತ್ತದೆ. ಆದರಲ್ಲಿಯೂ ಶೃಂಗಾರ ವರ್ಣನೆಯಲ್ಲಿ ಆತನಿಗಿರುವ ಆಸಕ್ತಿ ಶಕ್ತಿಗಳೆರಡೂ ಅಸಾಮಾನ್ಯವಾದುವೇ. ಕಾವ್ಯದ ಅರ್ಧಭಾಗವೇ ಶೃಂಗಾರರಸ ಪ್ರತಿಪಾದನೆಯಿಂದ ತುಂಬಿಹೋಗಿದೆ. ಶೃಂಗಾರರಸ ಪರಿಪೋಷಕವಾದ ಸನ್ನಿವೇಶಗಳನ್ನು ನಾವು ಇಲ್ಲಿ ತಂಡತಂಡವಾಗಿ ಕಾಣುತ್ತೇವೆ. ಶ್ರೀಮಾನ್ ಎಚ್. ದೇವೀರಪ್ಪನವರು ಸಂಭಾವನೆಯ ತಮ್ಮ ಲೇಖನ 'ರಾಜಶೇಖರ ವಿಲಾಸ'ದಲ್ಲಿ ಹೇಳಿರುವಂತೆ 'ವಸಂತಾಗಮನ, ಚಂದ್ರೋದಯ, ವನವಿಹಾರ ಜಲಕೇಳಿಗಳೆ? ಅತ್ಯಂತ ಹೃದಯಂಗಮವಾಗಿವೆ; ನಾಯಕ ನಾಯಿಕಾ ಪ್ರಭೇದಗಳೆ? ಅವನಂತೆ ಮಾರ್ಮಿಕವಾಗಿ ಚಿತ್ರಿಸಬಲ್ಲ ಇನ್ನೊರ್ವ ಕವಿಯಿಲ್ಲ; ಪಣ್ಯಾಂಗನೆಯರ ಜಾರಸ್ತ್ರೀಯರ ಬೆಡಗು ಬಿನ್ನಾಣ ಒನಪು ಒಯ್ಯಾರ ಆಮೋದ ಪ್ರಮೋದಗಳ ಅತಿರುಚಿರ ಬಣ್ಣನೆಯೆ? ರಾಜಶೇಖರದಲ್ಲುಂಟು; ಓದುಗನು ಮೈಮರೆಯುವಂತೆ ಮಾಡಬಲ್ಲ ಶೃಂಗಾರ ಸನ್ನಿವೇಶಗಳೆ? ಷಡಕ್ಷರಿಯಲ್ಲುಂಟು.' ಕಗ್ಗತ್ತಲೆ

ಯಲ್ಲಿ ಕದ್ದು ಹೋಗುತ್ತಿರುವ ಈ ಕಡುನೀರೆಯನ್ನು ನೋಡಿ.

ಮಾರನೃಪಂ ಕಾರೊರೆಯೊಳ್ | ಕೂರಸಿಯಂ ಪುಗಿಸುವಂತೆ
ವೀಧಿಯ ತಮದೊಳ್
ಜಾರೆ ಘನಧಾರೆ ತನುರುಚಿ | ಸಾರಾಂಗೆ ಪೊದಳ್ದು ಪೊಕ್ಕು
ಬರ್ಪವಳೆಸೆದಳ್ |

ಮನ್ಮಥ ಮಹಾರಾಜನು ಕತ್ತಲೆಯ ಒರೆಯಲ್ಲಿ ಹರಿತವಾದ ಕತ್ತಿಯನ್ನು ಹುಗಿಸುವಂತೆ, ದಾರಿಯ ಕತ್ತಲೆಯಲ್ಲಿ ಹೊಕ್ಕು ಬರುತ್ತಿರುವ ಆ ಸುಂದರಿಯ ದೇಹಕಾಂತಿ ಕಾಣಿಸುತ್ತಿತ್ತಂತೆ! ಇದೊ, ಇವಳೊಬ್ಬ ಜಾರೆ—

ಜಾರೆ ನಿರಿ ಜಾರೆ ಸೋರ್ಮುಡಿ | ಜಾರೆ ಬೆಮರ್ಜಾರೆ
ಮೇಲುದದು ಮುಡಿದಲರ್ಗಳ್
ಜಾರೆ ಮುದಂ ಜಾರೆ ಮದಂ | ಜಾರೆ ಪದಂ ಜಾರೆ ಜಾರೆ
ಜಾರಿದಳೊರ್ವಳ್

ಅವಳುಟ್ಟ ಸೀರೆಯ ನೆರಿಗೆ ಜಾರಿದೆ, ಅವಳ ಬಿರಿಮೊಯ್ದು ಕೂದಲು ಜಾರಿದೆ, ಬೆವರು ಜಾರಿದೆ, ಮೇಲೆ ಹೊದ್ದ ಮುಸುಕು ಜಾರಿದೆ, ಮುಡಿದ ಹೂ ಜಾರಿದೆ, ಸಂತೋಷ ಜಾರಿದೆ, ಉತ್ಸಾಹ ಜಾರಿದೆ. ಅವಳ ಹೆಜ್ಜೆಯೂ ಜಾರುತ್ತಿದೆ, ಅವಳು ಜಾರೆ, ಜಾರಿದಳು; ಕವಿ ಎಷ್ಟು ಮಾರ್ಮಿಕವಾಗಿ ಆ ಜಾರಿಣಿಯ ಜಾರತನವನ್ನು ದಿಗ್ದರ್ಶಿಸಿದ್ದಾನೆ! ತನ್ನನ್ನು ಮೆಚ್ಚಿದ ಪ್ರೇಮಿಗೆ ಹೆಣ್ಣು ಹೇಗೆ ರತಿಸುಖವನ್ನು ನೀಡಬಲ್ಲಳು!

ನೋಡಿದೊಡಾಗಳಂತೆ ತಲೆವಾಗುವ, ನೋಡದೊಡೊಲ್ದು
ನೋಳ್ಪ, ಮಾ
ತಾಡಿಸೆ ಸುಮ್ಮನಿರ್ಪ, ನುಡಿಗುಂದಿರೆ ಮೆಲ್ಲನೆ ಸೊಲ್ಲಿಪಿಚ್ಛೆಯಿಂ
ಕೂಡಲೊಡರ್ಚೆ ಪ್ಯೆದೆಗೆವಗಲ್ದಿರಲೊಯ್ಯನೆ ಸಾರ್ಪ ಮುಗ್ಧೆಯೇಂ
ಮಾಡಳೆ ಮೆಚ್ಚಿದೋಪನ ಮನಕ್ಕೆ ಮನೋಜ ಮಹೋತ್ಸವಂಗಳಂ!

ಅವಳ ಕಡೆ ನೋಡಿದರೆ ತಲೆ ಬಾಗುತ್ತಾಳೆ. ನೋಡದಿದ್ದರೆ ಪ್ರೇಮದಿಂದ ತಾನೆ ನೋಡುತ್ತಾಳೆ. ಮಾತನಾಡಿಸಿದರೆ ಮೌನ, ಸುಮ್ಮನಿದ್ದರೆ ಪ್ರೇಮದಿಂದ ಮಾತನಾಡಿಸುತ್ತಾಳೆ, ಸಂಗಸುಖವನ್ನು ಪಡೆಯಲೆಂದು ಸಾರಿದರೆ ದೂರ ಸರಿಯುತ್ತಾಳೆ, ದೂರ ಸರಿದರೆ ಹತ್ತಿರಕ್ಕೆ ಬರುತ್ತಾಳೆ! ಇಂತಹ

ಮುಗ್ಧೆ ಮೆಚ್ಚಿದ ಪ್ರೇಮಿಗೆ ಮದನ ಮಹೋತ್ಸವವನ್ನು ಮಾಡುತ್ತಾಳಲ್ಲವೆ? —ಶೃಂಗಾರ ಜೀವನಕ್ಕೆ ಎರವಾದ ಸನ್ಯಾಸಿಯಾಗಿದ್ದರೂ ಕವಿಯು ಶೃಂಗಾರದ ವರ್ಣನೆಯನ್ನು ಎಷ್ಟು ಸ್ವಾಭಾವಿಕವಾಗಿ ಮಾಡಿದ್ದಾನೆ! ಆತನ ಕಾವ್ಯ ಅತ್ಯಂತ ಜನಪ್ರಿಯವಾಗಿದ್ದುದು ಬಹುಮಟ್ಟಿಗೆ ಈ ಶೃಂಗಾರರಸ ನಿರೂಪಣೆಯಿಂದಲೇ, ಆದರೆ ಕವಿಯ ದೃಷ್ಟಿಯಿರುವುದು 'ಓದುಗರಿಗೆ ಶೃಂಗಾರರಸದ ಲಂಚ ಕೊಟ್ಟು ಅವರನ್ನು ಶಾಂತರಸದ ಮಂಗಳ ಮಂಚಕ್ಕೆ ಕೊಂಡೊಯ್ಯಬೇಕೆಂಬುದು ಕವಿಯ ಉದ್ದೇಶವಾಗಿರಬೇಕು' ಎಂದು ಶ್ರೀ ಎಚ್. ದೇವೀರಪ್ಪನವರು ಮೇಲಿನ ಲೇಖನದಲ್ಲಿ ಹೇಳಿರುವುದನ್ನು ಒಪ್ಪಬೇಕು. ಆದರೆ ಅವರೇ ಮುಂದೆ ಹೇಳುವಂತೆ 'ಎರಡಾಣೆ ಮೆ ವರ್ಗಕ್ಕೆ ನೀಡಿರುವ ಬಡವರ ಬಾದಾಮಿ ಹೆಚ್ಚಾಗಿ, ಆ ಬೃಹದ್ರಾಶಿಯಲ್ಲಿ ಎಲ್ಲೊ ಅಲ್ಲೊಂದು ಇಲ್ಲೊಂದು ಸಕ್ಕರೆ ಬಾದಾಮಿ ಕಾಣಿಸಿಕೊಳ್ಳುತ್ತದೆ.' ಷಡಕ್ಷರ ದೇವನು ಉದ್ದಾಮ ಪಂಡಿತ. ಹಿಂದಿನ ಕವಿಕಾವ್ಯಗಳೆಲ್ಲಾ ಆತನಿಗೆ ಕರತಲಾ ಮಲಕ. ಹರಿಹರ ರಾಘವಾಂಕರಿಂದ ಆತನು ಸಾಕಷ್ಟು ಸ್ಫೂರ್ತಿಯನ್ನು ಪಡೆದಿದ್ದಾನೆ. ರಸಿಕನಾದ ಆ ಕವಿಗೆ ಹರಿಹರ ರಾಘವಾಂಕರಿಗಿಂತಲೂ ನಾಗವರ್ಮ ನೇಮಿಚಂದ್ರರಲ್ಲಿ ಅನುರಕ್ತಿ ಹೆಚ್ಚು. ಅಲ್ಲಿನ ಶೃಂಗಾರರಸಕ್ಕೆ ಮನ ಸೋತು ಅಲ್ಲಿನ ಭಾವ ಭಂಗಿಗಳನ್ನು ತನ್ನ ಕಾವ್ಯದಲ್ಲಿ ಬಳಸಿಕೊಳ್ಳುತ್ತಾನೆ. ಮೂಲ ಕಾವ್ಯಗಳ ಭಾವ ಭಾಷೆಗಳು ಆತನ ಪ್ರತಿಭೆಯಲ್ಲಿ ಕರಗಿ ನೂತನ ರೂಪವನ್ನು ತಾಳುತ್ತವೆ; ಅನೇಕವೇಳೆ ವಿಶೇಷಕಾಂತಿಯನ್ನು ತಳೆಯುತ್ತವೆ. ಷಡಕ್ಷರದೇವನಲ್ಲಿ ಅಸಾಧಾರಣವಾದ ಕವಿತಾಶಕ್ತಿಯಿರುವುದು ನಿಜ. ಆದರೆ ಅದು ಆತನ ಪ್ರಜ್ಞಾವಲಯದಲ್ಲಿ ಅಜ್ಞಾಧಾರಕವಾಗಿರುತ್ತದೆ. ಆದ್ದರಿಂದ ಕಾವ್ಯಾವೇಶದ ಸೆಳವಿಗಿಂತಲೂ ಉಕ್ತಿಚಮತ್ಕಾರದ ಸುಳಿಗಳು ಹೆಚ್ಚುತ್ತವೆ, ಆತನ ಕಾವ್ಯ ಪ್ರವಾಹದಲ್ಲಿ. ಆಗ ಆತನ ಪಾಂಡಿತ್ಯ ಜಾಣತನಗಳು ನಮ್ಮನ್ನು ಬೆರಗುಗೊಳಿಸುತ್ತವೆಯೇ ಹೊರತು ಮೈಮರೆಸುವುದಿಲ್ಲ. ಆದರೆ ಸಂದರ್ಭ ಒದಗಿದಾಗ ಆತನ ಪಂಡಿತಹೃದಯ ಕರಗಿ ಕವಿತಾ ಪ್ರವಾಹ ಪವಿತ್ರಗಂಗೆಯಿಂದ ತುಂಬುತ್ತದೆ. ಆತನ ಕಲ್ಪನಾಶಕ್ತಿ ಗರಿಗೆದರಿ ಗಗನ ವಿಹಾರಿಯಾದಾಗ ಎಂತಹ ಮಂಗಳ ಗೀತವನ್ನು ಹಾಡಬಲ್ಲದು! ಆತನ ಈ ಸೂರ್ಯಾಸ್ತದ ವರ್ಣನೆಯನ್ನು ನೋಡಿ–

ಶರಧಿಗತ ಪ್ರತಿಬಿಂಬಂ | ಸರಿಸದೊಳಿರೆ ಬದ್ಧರಶ್ಮಿಯುರುತರ ಬಿಂಬಂ
ಹರನಾಟ್ಯಕೆ ಕಾಲನಟಂ | ಕರವೆತ್ತಿದ ಪೊನ್ನ ತಾಳವೆನೆ ಕಣ್ಗೊಳಿಕುಂ||

ಕಾಲನಟನು ಪರಶಿವನ ತಾಂಡವ ನೃತ್ಯಕ್ಕೆ ತಾಳಗಳನ್ನು ಹಿಡಿದು ನಿಂತಿರುವಂತೆ ಕಾಣಿಸುತ್ತಿದೆಯಂತೆ, ಆ ಮುಳುಗುವ ಸೂರ್ಯನೂ ಸಮುದ್ರದಲ್ಲಿರುವ ಅವನ ಪ್ರತಿಬಿಂಬವೂ. ಎಂತಹ ಭವ್ಯಚಿತ್ರ! ಕವಿಯು ಪ್ರಣವಮಂತ್ರವನ್ನು ವರ್ಣಿಸಿರುವ ಈ ಮಾತುಗಳನ್ನು ನೋಡಿ–

ಹೃದಯ ಪಯೋಜದ ಪರಿಮಳ | ವಿದು ಚೇತಸ್ತಂಭದಗ್ರ ಮಣಿ ದೀಪಿಕೆ ಮೇ
ಣಿದು ಮಾನಸಮುಕುರದ ಪೊಳ | ಪಿದು ತಾನೆನಿಸಿದುದು ಗುರು ನಿರೂಪಿತ ಮಂತ್ರಂ ||

ಗುರು ನೀಡಿದ ಮಂತ್ರ ಹೃದಯ ಕಮಲದ ಸುವಾಸನೆ. ಚೇತನ ಕಂಭದ ಕೊನೆಯಲ್ಲಿ ಇರುವ ರತ್ನದ ದೀಪ, ಮನಸ್ಸಿನ ಕನ್ನಡಿಯ ಪ್ರತಿಬಿಂಬ–ದಿವ್ಯತೆಗೆ ಧೂಪವಿಕ್ಕುತ್ತಿರುವ ಈ ವರ್ಣನೆ ಮನನ ಮಾಡಿದಷ್ಟೂ ಮಹಿಮಾನ್ವಿತವಾಗುತ್ತಿದೆ. ತಿರುಕೊಳವಿನಾಚಿಯ ಪ್ರಲಾಪ ಪ್ರಸಂಗದಲ್ಲಿ ಕವಿ ರಾಘವಾಂಕನ ಪ್ರಭಾವ ಅಲ್ಪಸ್ವಲ್ಪ ಕಂಡುಬಂದರೂ ಕವಿಯ ವ್ಯಕ್ತಿತ್ವಕ್ಕೆ ಲೋಪವೇನೂ ಬಂದಿಲ್ಲ. ಆತನ ಕವಿತಾಶಕ್ತಿ ಇಲ್ಲಿ ಒಂದು ಶೋಕರಸದ ಮಡುವನ್ನೆ ನಿರ್ಮಿಸಿದೆ.

ರಾಜಶೇಖರವಿಳಾಸದಲ್ಲಿ ಬರುವ ಪಾತ್ರಗಳೆಲ್ಲವೂ ಆದರ್ಶವ್ಯಕ್ತಿಗಳು. ನಮ್ಮ ಹೃದಯವನ್ನು ಸೂರೆಗೊಂಡು ನೆಲೆಯಾಗಿ ನಿಲ್ಲಬಲ್ಲ ಪಾತ್ರಗಳು ಇಲ್ಲಿ ಇಲ್ಲವೇ ಇಲ್ಲವೆಂದರೂ ಸಲ್ಲಬಹುದು. ಅತ್ಯಂತ ಹೃದಯ ವಿದ್ರಾವಕ ಸನ್ನಿವೇಶಗಳಿಗೆ ಇಲ್ಲಿ ಅವಕಾಶವಿದ್ದರೂ ಆತನು ಅತ್ತ ಗಮನಿಸಿಲ್ಲ. ಬಯಸಿ ಬಯಸಿ ಭಗವದನುಗ್ರಹದಿಂದ ಪಡೆದ ತಮ್ಮ ಒಬ್ಬನೇ ಮಗನನ್ನು ಬಲಿಕೊಡುವಾಗ ಆ ತಾಯ್ತಂದೆಗಳ ಹೃದಯ ಸ್ವಲ್ಪವೂ ಒಳತೋಟಿಗೆ ಒಳಗಾಗಲಿಲ್ಲವೆ? ಕೂರ್ತಮಡದಿ ಸರ್ವಮಂಗಳೆ ರಾಜಶೇಖರನ ಬಲಿದಾನದಿಂದ ಕ್ಷತವಿಕ್ಷತಳಾಗಲಿಲ್ಲವೆ? ತಲೆಗಳ ಮೇಲೆ ತಲೆಗಳುರುಳಿ ಅವೆಲ್ಲವೂ ಮತ್ತೆ ಮಂತ್ರಪ್ರಭಾವದಿಂದ ಮುಂಡದೊಡನೆ ಸೇರಿ ಮೇಲಕ್ಕೇಳು

ವುದು ಪಂಚಾಕ್ಷರೀ ಮಹಿಮೆಯನ್ನು ಸಾರುತ್ತಿದ್ದರೂ ಕಾವ್ಯಸತ್ವಕ್ಕೆ ಕೊರತೆಯಾಗಿದೆ.

ಷಡಕ್ಷರಿಯ ಕಾವ್ಯಗಳಲ್ಲಿ ಎರಡನೆಯದಾದ 'ವೃಷಭೇಂದ್ರ ವಿಜಯ'ವು ಆತನ ಉಳಿದ ಎರಡು ಕಾವ್ಯಗಳಿಗಿಂತಲೂ ಗಾತ್ರದಲ್ಲಿ ದೊಡ್ಡದು; ಸುಮಾರು ೪೦೦೦ ಪದ್ಯಗಳನ್ನು ಒಳಗೊಂಡು ೨೨ ಆಶ್ವಾಸಗಳಲ್ಲಿ ಹಬ್ಬಿದೆ. ವೀರಶೈವಧರ್ಮ ಪ್ರವರ್ತಕನಾದ ಬಸವಣ್ಣನ ಜೀವನ ಚರಿತ್ರೆ ಇದರ ಕಥಾವಸ್ತು. ಇದಕ್ಕೆ ಬಸವರಾಜ ವಿಜಯವೆಂದೂ ಹೆಸರಿದೆ. ಕವಿಯು ಇದನ್ನು 'ಶ್ರೀಮದ್ ಬಸವರಾಜ ವಿಜಯ ಮಹಾಪುರಾಣ'ವೆಂದು ಕರೆದಿದ್ದಾನೆ. ಬಸವಣ್ಣನ ಕಥೆಯನ್ನು ಮೊದಲು ಪಾಲ್ಕುರಿಕೆ ಸೋಮನಾಥಕವಿಯು ತೆಲುಗಿನಲ್ಲಿ ಬರೆದನೆಂದೂ, ಅದನ್ನು ಭೀಮಕವಿ ಕನ್ನಡದಲ್ಲಿ ವರ್ಣಕವಾಗಿ ವಿರಚಿಸಿದನೆಂದೂ, ಶಂಕರ ಕವಿ ಅದನ್ನು ಸಂಸ್ಕೃತಕ್ಕೆ ಪರಿವರ್ತಿಸಿದನೆಂದೂ, ಆ ಸಂಸ್ಕೃತ ಕಾವ್ಯವು ತನ್ನ ಈ ಚಂಪೂ ಗ್ರಂಥಕ್ಕೆ ಮೂಲವೆಂದೂ ಷಡಕ್ಷರ ಕವಿ ಹೇಳಿಕೊಂಡಿದ್ದಾನೆ. ಮಹಾನುಭಾವರಾದ ಹಿಂದಿನವರು ಹೇಳಿದ ಕಾವ್ಯಕಥೆಯನ್ನು ತಾನು ಮತ್ತೆ ಹೇಳ ಹೊರಟಿರುವುದು 'ಹಾಸ್ಯಾಸ್ಪದಂ, ಚಿಕ್ಕನಂ, ಅನುಚಿತಂ' ಆದರೂ 'ತದ್ಗುಣಸ್ತೋತ್ರಮದ ಜ್ಞಾನಂ ಸಾರ್ವದೀ ವ್ಯಾಜದಿನೆನುತಿದನಾಂ ಪೇಳಲುದ್ಯುಕ್ತನಾದೆಂ—ಶಿವಶರಣರ ಪರಿಚಯ ಈ ನೆಪದಿಂದ ನನಗಾದೀತು ಎಂಬ ಕಾರಣದಿಂದ ಕವಿಯು ಕಾವ್ಯರಚನೆಗೆ ಕೈ ಹಾಕಿದ್ದಾನಂತೆ! ಕವಿಯು 'ಸುರರಂ ನರರಂ ನುತಿಸೆನ್' ಎಂಬ ತನ್ನ ಧೋರಣೆಯನ್ನು ಹರಿಹರ ಕವಿಯಿಂದ ಎತ್ತಿಕೊಂಡಿರುವನಾದರೂ ತನ್ನ ಕಥಾನಿರೂಪಣೆಯಲ್ಲಿ ಮಾತ್ರ ಆತನ ಮಾರ್ಗವನ್ನು ಅನುಸರಿಸಲಿಲ್ಲ. ವೀರಶೈವ ಪುರಾಣವನ್ನು ಬರೆಯ ಹೊರಟ ಷಡಕ್ಷರಿಗೆ ಹರಿಹರನ 'ಬಸವರಾಜ ದೇವರ ರಗಳೆ' ಆದರ್ಶವನ್ನು ಒದಗಿಸಲಾರದೆ ಹೋಯಿತು; ವೀರಶೈವ ಧರ್ಮಕ್ಕೆ ಉದಾಹರಣೆಯಂತಿರುವ ಹಲವು ಶಿವಶರಣರ ಕಥೆಗಳನ್ನು ಒಳಗೊಂಡ ಬಸವ ಪುರಾಣ ಆತನಿಗೆ ಹೆಚ್ಚು ಆದರಣೀಯವಾಯಿತು.

ಧರ್ಮವೀರನೊಬ್ಬನ ಜೀವನವೃತ್ತಾಂತವನ್ನು ಬರೆಯ ಹೊರಟಿರುವ ಷಡಕ್ಷರಿ ತನ್ನ ವೃಷಭೇಂದ್ರ ವಿಜಯದಲ್ಲಿ ಮೂಲದಿಂದ ಹೆಚ್ಚು

ಬದಲಾವಣೆಗಳನ್ನು ಮಾಡುವ ಗೋಜಿಗೆ ಹೋಗಿಲ್ಲ. ವಿವರಣೆಗಳಲ್ಲಿ ಅಲ್ಲಲ್ಲಿಯೆ ಅಲ್ಪ ಸ್ವಲ್ಪ ಓರೆ ಕೋರೆಗಳನ್ನು ತಿದ್ದಿ ಕಥಾನಾಯಕನ ಪಾತ್ರವನ್ನು ಹೆಚ್ಚು ಉದಾತ್ತವಾಗಿ ಮಾಡಲು ಯತ್ನಿಸಿದ್ದಾನೆ. ಉದಾಹರಣೆಗೆ ಬಿಜ್ಜಳನ ಕೊಲೆಯ ಪ್ರಸಂಗವನ್ನು ನೋಡಬಹುದು. ಆತನ ಕೊಲೆಗೆ ಮುನ್ನವೇ ಬಸವಣ್ಣನು ಕಲ್ಯಾಣವನ್ನು ತೊರೆದು ಹೋಗಿದ್ದನೆಂದೂ ಮೋಳಿಗೆಯ ಮಾರಯ್ಯನೇ ಮೊದಲಾದ ಶಿವಭಕ್ತರ ಪ್ರೇರಣೆಯಿಂದ ಆ ವಧೆ ನಡೆಯಿತೆಂದೂ ವೃಷಭೇಂದ್ರವಿಜಯದಲ್ಲಿ ಹೇಳಿದೆ. ಇದರಿಂದ ಬಸವಣ್ಣನು ವಧೆಯ ಆರೋಪದಿಂದ ಮುಕ್ತನಾಗಿ, ಆತನ ಪಾತ್ರ ಹೆಚ್ಚು ಉಜ್ವಲವಾಗಿದೆ.

ವೃಷಭೇಂದ್ರ ವಿಜಯದಲ್ಲಿ ನಾಯಕನ ಕಥೆಗಿಂತಲೂ ಸೂಕ್ಷ್ಮತಂತುವಿನಿಂದ ಆತನ ಸಂಬಂಧಸೂತ್ರಗಳಾಗಿರುವ ಇತರ ಶಿವಶರಣರ ಕಥೆಗಳೇ ಹೆಚ್ಚು ಭಾಗವನ್ನು ಆಕ್ರಮಿಸಿವೆ, ಹೆಚ್ಚು ಆಕರ್ಷಣೀಯವಾಗಿವೆ. ಸಿರಿಯಾಳ ಸೆಟ್ಟಿ, ಬೇಡರ ಕಣ್ಣಪ್ಪ, ಕೋಳೂರು ಕೊಡುಗೂಸು, ಹೇರೂರು ಹೆಗ್ಗೂಸು, ಮುಗ್ಧ ಸಂಗಯ್ಯ—ಇತ್ಯಾದಿ ಶರಣರ ಕಥೆಗಳು ಸರಳವಾದ ನಿರೂಪಣೆ, ಹಿತಮಿತವಾದ ವರ್ಣನೆ, ಸಮಯಾನುಸಾರಿಯಾದ ಭಾವಾವೇಗ ತೀವ್ರತೆಗಳಿಂದ ಕೂಡಿ ಕವಿಯ ಕೀರ್ತಿಗೆ ಕಾರಣಗಳಾಗಿವೆ; ಕವಿಯು ಒಳ್ಳೆಯ ಕಥೆಗಾರನೆಂಬುದಕ್ಕೆ ನಿದರ್ಶನವಾಗಿವೆ. ಈ ಕಾವ್ಯವನ್ನು ಬರೆಯುವ ವೇಳೆಗೆ ಕವಿಗೆ ತಾರುಣ್ಯದ ಉಕ್ಕು ಇಳಿಮುಖವಾಗಿತ್ತೆಂದು ತೋರುತ್ತದೆ. ಈತನ ಭಕ್ತಿ ವೈರಾಗ್ಯಗಳೂ ಬೆಳೆದುಕೊಂಡು ಹೋಗಿರಬೇಕು. ಇದರ ಫಲವಾಗಿ ಬರಿಯ ಉಕ್ತಿಚಾತುರ್ಯ, ವರ್ಣನಾಚಾಪಲ್ಯ, ಪಾಂಡಿತ್ಯ ಪ್ರದರ್ಶನ, ಶೃಂಗಾರನಿರೂಪಣೆ ಇವುಗಳು ಕಡಮೆಯಾಗಿ ಶಿವಶರಣರ ಕಥೆಗಳನ್ನು ನೇರವಾಗಿ ಸರಳವಾಗಿ ಆದಷ್ಟು ಸುಲಭವಾಗಿ ಹೇಳಹೊರಟಿದ್ದಾನೆ. ಈ ಕಥೆಗಳಲ್ಲಿ ಸಹಜವಾದ, ಸ್ವಾಭಾವಿಕವಾದ ಶೈಲಿ ಕಾಣಬರುತ್ತದೆ. ಉಳಿದ ಗ್ರಂಥಗಳಿಗಿಂತ ಅಚ್ಚಗನ್ನಡದ ಪ್ರಯೋಗಗಳೂ ಇಲ್ಲಿ ಹೆಚ್ಚು. ಆದರೂ ಓದುಗರನ್ನು ಮುಗ್ಧಗೊಳಿಸಬಲ್ಲ, ಆಕ್ರಮಿಸಿ ವಶಪಡಿಸಿಕೊಳ್ಳಬಲ್ಲ 'ಓಜಸ್ವಿತೆ' ರಾಜಶೇಖರವಿಳಾಸದಲ್ಲಿ ಕಾಣಬರುವಂತೆ ಇಲ್ಲಿ ಕಾಣಬರುವುದಿಲ್ಲ. ಇಲ್ಲಿನ ಭಕ್ತಿ ವಿರಕ್ತಿಗಳು ರಾಜಶೇಖವಿಳಾಸದ ಲಲಿತ

ಲಾಸ್ಯದ ಇದಿರಿನಲ್ಲಿ ಪೇಲವವಾಗಿ ಕಾಣಿಸುತ್ತವೆ.

ಇನ್ನು ಷಡಕ್ಷರದೇವನ ಮೂರನೆಯ ಗ್ರಂಥ 'ಶಬರ ಶಂಕರ ವಿಲಾಸ'ವನ್ನು ಸ್ವಲ್ಪ ನೋಡೋಣ. ಈ ಗ್ರಂಥವನ್ನು ಬರೆಯುವ ವೇಳೆಗೆ ಕವಿಯು ಇಳಿವಯಸ್ಸಿನವನಾಗಿದ್ದನೋ ಏನೊ! ಹಿಂದಿನ ಎರಡು ಗ್ರಂಥಗಳಲ್ಲಿ ಕಾಣಬರುವ ಲವಲವಿಕೆ ಇಲ್ಲಿ ಇಲ್ಲ. ಕವಿಯೇನೋ ಶಿವನ ಪಂಚವಿಂಶತಿ ಲೀಲೆಗಳಲ್ಲಿ ಒಂದನ್ನು ತನ್ನ ಕಾವ್ಯವಸ್ತುವಾಗಿ ಬಳಸಿಕೊಂಡು ಬರೆಯುತ್ತಿರುವೆನೆಂದು ಸಂತಸಗೊಂಡಿರಬಹುದು. ಆದರೆ ಆತನ ಈ ಕಾವ್ಯವು ಓದುಗರಿಗೂ ಅದೇ ಆನಂದವನ್ನು ಕೊಡುವುದೆಂದು ಹೇಳುವಂತಿಲ್ಲ. ವನವಾಸದಲ್ಲಿದ್ದ ಅರ್ಜುನನು ಇಂದ್ರಕೀಲದಲ್ಲಿ ಶಿವನನ್ನು ಕುರಿತು ತಪಸ್ಸು ಮಾಡಿ, ಆತನಿಂದ ಪಾಶುಪತಾಸ್ತ್ರವನ್ನು ಪಡೆಯುವುದು ಇಲ್ಲಿನ ಕಥಾವಸ್ತು. ಇದನ್ನು ಭಾರವಿಯು 'ಕಿರಾತಾರ್ಜುನೀಯ' ವೆಂಬ ಹೆಸರಿನಿಂದ ವಿಸ್ತಾರವಾಗಿ ಸಂಸ್ಕೃತದಲ್ಲಿ ಬರೆದಿದ್ದಾನೆ. ಕನ್ನಡ ಕವಿಗಳಾದ ಪಂಪ ಮತ್ತು ನಾರಣಪ್ಪ ಈ ಭಾಗವನ್ನು ತಮ್ಮ ಭಾರತಗಳಲ್ಲಿ ರಸವತ್ತಾಗಿ ಚಿತ್ರಿಸಿದ್ದಾರೆ. ಷಡಕ್ಷರ ಕವಿಯ ದೃಷ್ಟಿ ಹಿಂದಿನ ಈ ಮೂವರ ದೃಷ್ಟಿಯಿಂದ ಭಿನ್ನವಾದದು. ಆತನ ಕಾವ್ಯ 'ಶಬರ ಶಂಕರ ವಿಲಾಸ'. ಶಬರವೇಷಧಾರಿಯಾದ ಶಂಕರನೇ ಇಲ್ಲಿಯ ಕಥಾನಾಯಕ. ಈ 'ವಿಸುಷ ಶಿವಲೀಲೆ'ಯಲ್ಲಿ ಅರ್ಜುನನ ಪಾತ್ರ ಅಮುಖ್ಯ. ಭಕ್ತಿಲಂಪಟನಾದ ಶಿವನು ತಾನೇ ಬಂದು ಭಕ್ತನನ್ನು ಉದ್ಧಾರ ಮಾಡುತ್ತಾನೆ. ಭಕ್ತನ ಮೇಲೆ ಶಿವನಿಗಿರುವ ಕರುಣೆಯನ್ನು ನಿರೂಪಿಸುವುದೇ ಇಲ್ಲಿನ ಗುರಿ.

ಕವಿಯು ಶಿವನನ್ನು ಕಥಾನಾಯಕನಾಗಿ ಆಯ್ದುಕೊಂಡಿರುವುದರಿಂದ ಕಥೆಯಲ್ಲಿ ಕ್ರಿಯೆಗೆ ಲೋಪ ಬಂದತಾಗಿದೆ. ಕಥಾನಾಯಕನಿಗೆ ನಿರ್ದಿಷ್ಟವಾದ ಗುರಿ ಏನು? ಭಕ್ತಾಭೀಷ್ಟಪ್ರದಾನವೆಂದು ಇಟ್ಟುಕೊಳ್ಳೋಣ. ಆ ಉದ್ದೇಶಸಾಧನೆಗಾಗಿ ಹುಸಿ ಜಗಳವನ್ನು ಒಡ್ಡಿದ್ದಾನೆ; ಕಿರಾತವೇಷ ಧರಿಸಿದ್ದಾನೆ; ಅರ್ಜುನನಲ್ಲಿದ್ದ ಅಹಂಕಾರವನ್ನು ಹೋಗಲಾಡಿಸಿ, ಪರಿಶುದ್ಧನನ್ನಾಗಿ ಮಾಡಿ, ಅವನನ್ನು ಉದ್ಧರಿಸುತ್ತಾನೆ. ನಡೆಯಬೇಕಾದ ಕಥೆ ಅತ್ಯಲ್ಪ, ಅದೂ ಹುಸಿಕಥೆ. ಏಕೆಂದರೆ ಶಿವನಿಗೆ ರ್ಜುನನನ್ನು ನಿಗ್ರಹಿಸಬೇಕೆಂಬ ಆಶೆಯಾಗಲಿ, ಹಟವಾಗಲಿ ಇಲ್ಲ. ತನ್ನ ಭಕ್ತನೆಂದು ಗೊತ್ತಿದೆ.

ಇದರಿಂದ ವೀರರಸ ಅಭಿವ್ಯಕ್ತಗೊಳ್ಳುವ ಸಂದರ್ಭಕ್ಕೆ ಅಭಾವ ಬಂದಂತಾಗುತ್ತದೆ. ಎಳೆಯ ಮಗುವೊಂದು ತಂದೆಯ ಮೇಲೆ ಸೆಟೆದು ನಿಂತ ಒಂದು ವಿನೋದ ನಮ್ಮ ಅನುಭವಕ್ಕೆ ಬರುತ್ತದೆ.

'ಶಬರ ಶಂಕರ ವಿಲಾಸ'ದಲ್ಲಿ ಕಥೆ ಕಡಮೆಯಾದುದರಿಂದ ವರ್ಣನೆಗೆ ಪಟ್ಟಾಭಿಷೇಕವಾಗಿದೆ. ಬಾಣಭಟ್ಟನ ಕಾದಂಬರಿಯಂತೆ ಇಲ್ಲಿಯೂ ಕಥೆ ವರ್ಣನೆಯ ಅನುಚರನಾಗಿದೆ. ಮೊದಲ ಪರಿಚ್ಛೇದವೆಲ್ಲವೂ ಬರಿಯ ವರ್ಣನೆ—ಈಶ್ವರ ಸ್ತುತಿ, ಆದ್ಯರಸ್ತುತಿ, ಕಾವ್ಯಪ್ರಶಂಸೆ, ಸಮುದ್ರ ವರ್ಣನೆ, ಹಿಮಾಲಯ ವರ್ಣನೆ, ಪರಮೇಶ್ವರನ ಆಸ್ಥಾನ ವರ್ಣನೆ; ಆಶ್ವಾಸಾಂತ್ಯದಲ್ಲಿ ಕಥಾನಾಯಕನಾದ ಶಿವನು ಗಿರಿಜೆಯೊಡನೆ ಕುಳಿತಿರುವುದು ಕಂಡು ಬರುತ್ತದೆ. ಎರಡನೆಯ ಪರಿಚ್ಛೇದದಲ್ಲಿ ಮತ್ತೆ ಇಂದ್ರಕೀಲ ಪರ್ವತದ ವಿಸ್ತಾರವಾದ ವರ್ಣನೆ, ಅಲ್ಲಿನ ತಪೋವನದ ವರ್ಣನೆ; ಅಲ್ಲಿ ತಪಸ್ಸು ಮಾಡುತ್ತಿರುವ ಅರ್ಜುನನ ವರ್ಣನೆ ಒಂದು ಪದ್ಯದಲ್ಲಿ ಮುಗಿಯುತ್ತದೆ. ಹೀಗೆಯೇ ಕಾವ್ಯದ ಉದ್ದಕ್ಕೂ ವರ್ಣನೆ, ವರ್ಣನೆ, ವರ್ಣನೆ. ಕೆಲವು ವೇಳೆ ಈ ವರ್ಣನೆಗಳು ಮನೋಹರವಾಗಿವೆಯಾದರೂ ಕವಿ ಆ ಭಾಗಗಳಲ್ಲಿ ಪೂರ್ವ ಕವಿಗಳಿಗೆ ಋಣಿಯಾಗಿದ್ದಾನೆ. ಅರ್ಜುನನ ತಪಸ್ಸಿಗೆ ವಿಘ್ನವಾಚರಿಸಲು ಬಂದ ಇಂದ್ರ

ಅತಿ ಸುಖಿ ನೀಂ ಸುಕುಮಾರಂ। ಪ್ರತಿದಿನ ಮಾಭೀಳ ತಪಮ
ನೆಂತೆಸಗುವೆ ಪೇಳ್
ಕ್ಷಿತಿಗ ಶಿತಿಕಂಠ ನಲ್ಪ। ವ್ರತಕ್ಕೆ ತನುತರ ತಪಕ್ಕೆ ಮೇನೊಲ್ದಪನೆ?

ಎಂದು ಕೇಳುತ್ತಾನೆ. ಹರಿಹರ ಕವಿ ಗಿರಿಜಾಕಲ್ಯಾಣದಲ್ಲಿ ಗಿರಿಜೆಯ ದೃಢ ವ್ರತವನ್ನು ಪರೀಕ್ಷಿಸಲೆಂದು ವಟುವೇಷದ ಶಿವನ ಬಾಯಲ್ಲಿ ಆಡಿಸಿರುವ ಮಾತು ಇದು. ಅದನ್ನು ಷಡಕ್ಷರ ಕವಿ ಇಲ್ಲಿ ಬಳಸಿರುವುದು ಮೂಲದಷ್ಟೇ ಮಾರ್ಮಿಕವಾಗಿಲ್ಲ.

ಅರ್ಜುನನ ತಪೋಜ್ವಾಲೆಯಿಂದ ನೊಂದ ಋಷಿಗಳು ಶಿವನನ್ನು ಕುರಿತು

ಪತಿಯುಂ ಗತಿಯುಂ ಹಿತನುಂ। ಪಿತನುಂ ದೇವೇಶ ನೀನೆ ಪೆರತಮಗಿಲ್ಲಿ
ಲ್ಲತಿಶಯ ಕಿತವ ತಪಸ್ವಿಯ। ಕತದಿಂದಾಳಲನೊರಸಿ ಪೊರೆ ಕರುಣಾಬ್ಧಿ

ಎಂಬ ಪದ್ಯವೂ ಹರಿಹರನ ಛಾಯೆಯುಳ್ಳುದೇ. ಕಾವ್ಯದ ಕೊನೆಯಲ್ಲಿ

ಅರ್ಜುನನ ದೃಷ್ಟಿ ಶಿವನ ನಖಶಿಖಾಂತವಾಗಿ ಹರಿಯಿತೆಂದು ವರ್ಣಿಸಿರುವುದು ಹರಿಹರನ ಶಿಖಾಂತ ನಖವರ್ಣನೆಗೆ ಸಂವಾದಿಯಾಗಿದೆ.

ಅರ್ಜುನನು ಮೂಕದಾನವನನ್ನು ಕೊಂದ ಮೇಲೆ ಅದು ಯಾರಿಗೆ ಸೇರಬೇಕೆಂಬ ವಾದ ನಡೆದು, ಶಿವನ ಕಟಕಿವಾತುಗಳಿಂದ ಅರ್ಜುನನು ಕೆರಳಿ ಕೆಂಗೆಂಡವಾಗುತ್ತಾನೆ.

ಒಳಸೋರ್ದುದು ಶಾಂತರಸಂ | ಮೊಳೆತುದು ಕೋಪಾಗ್ನಿ ಪೊಗೆದುದು ಸಿರೊಳ್ನಿಡು ಗ |
ಣ್ಣಾಳ ಕಡೆಯೊಳ್ ಕಿಡಿಗೆದರ್ದುದು | ಬಳಕಲರ್ದುದು ಮೊಗದೊಳಚಲ ರಿಪುನಂದನನ ||

ಶಿವ ಅರ್ಜುನರ ವಾಗ್ಯುದ್ಧ ಮನೋಹರವಾಗಿದೆ. ಈ ಭಾಗದಲ್ಲಿ ಕವಿಯು ಕುಮಾರವ್ಯಾಸನಿಗೆ ಸಾಕಷ್ಟು ಋಣಿಯಾಗಿದ್ದಾನೆ.

ಕವಿಯು ಮತ್ತೊಬ್ಬ ಕವಿಗೆ ಋಣಿಯೆಂದ ಮಾತ್ರಕ್ಕೆ ಆತನ ಕೀರ್ತಿಯ ತಲೆಯಮೇಲೆ ಹುಲ್ಲು ಹೊರಿಸಿದಂತಾಯಿತೆಂದು ಭಾವಿಸಬಾರದು. ಎಲ್ಲ ಕವಿಗಳೂ ತಮ್ಮ ಹಿಂದಿನವರ ಕಣಜಕ್ಕೆ ರಂಧ್ರವಿಟ್ಟವರೇ. ಷಡಕ್ಷರಿಯೂ ಆ ಸರಪಣಿಯಲ್ಲಿನ ಒಂದು ಕೊಂಡಿ. ಆತನು ಅದ್ಭುತ ಪ್ರತಿಭಾಸಂಪನ್ನ, ಅದ್ವಿತೀಯ ಪಂಡಿತ, ಅಸದೃಶವಾದ ಕಲ್ಪನಾಚಾತುರ್ಯವುಳ್ಳವನು ; ತನ್ನ ವರ್ಣನೆಗಳಿಂದ ಸುಂದರವಾದ ಶಬ್ದಶಿಲ್ಪವನ್ನು ಸೃಷ್ಟಿಸಬಲ್ಲ ಈ ಕಲಾನಿಪುಣ ಅಸಾಧಾರಣವಾದ ತನ್ನ ಲೋಕಾನುಭವದಿಂದ, ಸೂಕ್ಷ್ಮದೃಷ್ಟಿಯಿಂದ ಓದುಗರನ್ನು ಬೆರಗುಗೊಳಿಸುತ್ತಾನೆ. ' ಪುರಾ ಕವೀನಾಂ ಗಣನಾ ಪ್ರಸಂಗೇ' ಆತನು 'ಕನಿಷ್ಠಿಕಾಧಿಷ್ಠಿತ' ನಲ್ಲವಾದರೂ ಶ್ರೇಷ್ಠರ ಸಾಲಿನಲ್ಲಿ ಒಬ್ಬನು.

**ಕುಮಾರವ್ಯಾಸ ಯುಗದ ಇತರ ವೀರಶೈವ ಕವಿಗಳು :**

ಕುಮಾರವ್ಯಾಸ ಯುಗದಲ್ಲಿ ಕಾವ್ಯರಚನೆ ಮಾಡಿದ ಎಲ್ಲ ವೀರಶೈವ ಕವಿಗಳನ್ನು ಕುರಿತು ವಿವೇಚಿಸುವುದು ಸಾಧ್ಯವೂ ಅಲ್ಲ, ಅಗತ್ಯವೂ ಇಲ್ಲ. ಆದರೂ, ಉಲ್ಲೇಖಾರ್ಹರಾದ ಕೆಲವು ಕವಿ ಕಾವ್ಯಗಳ ಸ್ಥೂಲ ಪರಿಚಯವನ್ನಾದರೂ ಮಾಡಿಕೊಳ್ಳಬೇಕೆನ್ನಿಸುತ್ತದೆ. ಈ ಯುಗದ ಆರಂಭದಲ್ಲಿಯೆ (೧೪೧೩) ಇದ್ದ **ಮಲ್ಲಣ್ಣನು** ವೀರಶೈವ ಪಂಚಾಚಾರ್ಯರಲ್ಲಿ ಒಬ್ಬನಾದ

ರೇವಣ್ಣಸಿದ್ಧನ ಚರಿತ್ರೆಯನ್ನು ತಿಳಿಸುವ 'ರೇವಣ ಸಿದ್ಧೇಶ್ವರ ಕಾವ್ಯ' ವನ್ನು ಭಾಮಿನೀ ಷಟ್ಪದಿಯಲ್ಲಿ ಬರೆದಿದ್ದಾನೆ. 'ರೇವಣನ ಕಾವ್ಯವ ನಿರ್ಮಿಸಿದನೈ ಪೂರ್ವ ಭಿತ್ತಿಯಮೇಲೆ ಚಿತ್ರವನು' ಎಂದು ಕವಿ ಹೇಳಿಕೊಂಡಿರುವುದು ಸಹಜವಾಗಿದೆ. ರೇವಣನನ್ನು ಕುರಿತು ಬರೆದಿರುವ ಯಾವ ಕವಿಯೇ ಆಗಲಿ ಹರಿಹರಕವಿಯ ಪ್ರಭಾವಲಯದಿಂದ ಹೇಗೆ ದೂರವಾದಾನು? ರೇವಣಸಿದ್ಧನನ್ನು ಕುರಿತು ಬರೆದ ಎಲ್ಲ ಕಾವ್ಯಗಳೂ ಹರಿಹರ ಕವಿಯ 'ರೇವಣ ಸಿದ್ಧೇಶ್ವರ ರಗಳೆ'ಗೆ ಋಣಿಗಳೇ ಸೈ. ನೂರೊಂದು ವಿರಕ್ತರಲ್ಲಿ ಒಬ್ಬನಾದ **ಕೆರಸ್ಥಲದ ನಾಗಿದೇವ** (ಈತನಿಗೆ ನಾಗಿಲಿಂಗನೆಂದೂ ಹೆಸರುಂಟು) ನು (೧೪೭೦) 'ನಾಗಿದೇವನ ತ್ರಿವಿಧಿ' ಎಂಬ ಹೆಸರಿನಿಂದ ೩೧ ತ್ರಿಪದಿಗಳನ್ನು ಬರೆದಿದ್ದಾನೆ. ಗೂಢಾರ್ಥವುಳ್ಳ ಈ ತ್ರಿಪದಿಗಳು ವೀರಶೈವ ಸಿದ್ಧಾಂತವನ್ನು ಬೋಧಿಸುತ್ತವೆ. ಸುಮಾರು ೧೬೫೦ ರಲ್ಲಿದ್ದ ಪರ್ವತ ಶಿವಯೋಗಿಯೆಂಬುವನು ಈ ತ್ರಿವಿಧಿಗೆ ಒಂದು ವ್ಯಾಖ್ಯಾನವನ್ನು ಬರೆದಿದ್ದಾನೆ. ಇದನ್ನು ನೋಡಿದರೆ ಈ ಪುಟ್ಟ ಗ್ರಂಥಕ್ಕೆ ಇದ್ದ ಗೌರವ ಅರ್ಥವಾಗುತ್ತದೆ. ನಾಗಿದೇವನ ಸಮಕಾಲೀನನಾದ **ಬತ್ತಲೇಶ್ವರ** ನೆಂಬುವನು ಒಂದು ರಾಮಾಯಣವನ್ನು ಬರೆದಿದ್ದಾನೆ. ಭಾಮಿನೀಷಟ್ಪದಿಯಲ್ಲಿರುವ ಈ ಕಾವ್ಯವು ವಾಲ್ಮೀಕಿ ರಾಮಾಯಣದಿಂದ ಭಿನ್ನವಾಗಿದ್ದು ಶೈವಮತದ ಆವರಣವನ್ನು ಪಡೆದಿದ್ದರೂ ವೀರಶೈವ ಕವಿಯೊಬ್ಬ ವೈದಿಕ ಗ್ರಂಥವನ್ನು ಬರೆದಿರುವುದು ಸೋಜಿಗವಾಗಿರುವಷ್ಟೆ ಸಂತೋಷಕರವಾಗಿದೆ. ಆದರಲ್ಲಿಯೂ ಬತ್ತಲೇಶ್ವರನು ನೂರೊಂದು ವಿರಕ್ತರಲ್ಲಿ ಒಬ್ಬನಾಗಿರುವುದೂ, ನೀತಿಸಾರದ ಒಂದು ಪ್ರತಿಯಲ್ಲಿ ಈ ಕವಿಯನ್ನು ಕಾಳಿದಾಸಾದಿ ಕವಿಗಳ ಸಾಲಿನಲ್ಲಿ ಸೇರಿಸಿ 'ವರಕವಿ ಬತ್ತಲೇಶ್ವರ'ನೆಂದು ಹೊಗಳಿರುವುದೂ ಮತ್ತಷ್ಟು ಸಂತೋಷಕ್ಕೆ ಕಾರಣವಾಗಿದೆ. ಕನ್ನಡಿಗರ ಪರಮತ ಸಹಿಷ್ಣುತೆಗೆ ಇದೊಂದು ದೊಡ್ಡ ಉದಾಹರಣೆ.

ಹದಿನೈದನೆಯ ಶತಮಾನದ ಲೌಕಿಕ ಕವಿಗಳಲ್ಲಿ **ಚತುರಾಸ್ಯ ಬೊಮ್ಮರಸ** (೧೪೫೦) **ಕಲ್ಲರಸ** (೧೪೫೦) ಮತ್ತು **ಕವಿಲಿಂಗ**-(೧೪೯೦) ಇವರು ಮುಖ್ಯರು. ಬೊಮ್ಮರಸನು ೧೩೦ ಕಂದಪದ್ಯದಗಳಲ್ಲಿ 'ಚತುರಾಸ್ಯ' ಎಂಬ ಒಂದು ನಿಘಂಟುವನ್ನು ಬರೆದು ದೇಸಿ, ತದ್ಭವ ಮತ್ತು ತತ್ಸಮ ಪದ

ಗಳಿಗೆ ಅರ್ಥವನ್ನು ಕೊಟ್ಟಿದ್ದಾನೆ. ಈತನ ಗ್ರಂಥವನ್ನು ನೋಡಿದರೆ ಕೇಶಿರಾಜನ ಧಾತುಪಾಠವನ್ನು ಬಳಸಿಕೊಂಡಿರುವಂತೆ ತೋರುತ್ತದೆ. ಈ ಕವಿಯು ತಿಪ್ಪರಸನೆಂಬ ಬ್ರಾಹ್ಮಣನ ಅಪೇಕ್ಷೆಯಂತೆ ಇದನ್ನು ಬರೆದನಂತೆ! ಕಲ್ಲರಸನು 'ಜನವಶ್ಯ' ಎಂಬ ಕಾಮಶಾಸ್ತ್ರವನ್ನು ಬರೆದಿದ್ದಾನೆ. 'ಮಲ್ಲಿಕಾರ್ಜುನ ಧರಾ| ವಲ್ಲಭನೊಸೆದು ತನ್ನ | ನಲ್ಲಳರಿವಂತೊರೆದ ಜನವಶ್ಯಮಂ|| ಸಲ್ಲಲಿತ ವಾಣಿ ಕವಿ| ಕಲ್ಲರಸನರಿವವರ| ಮೆಲ್ಲದೆಯನಿಂಬುಗೊಳ್ಳಂತೆ ಬರೆದಂ' ಎಂದು ಕವಿ ಹೇಳಿಕೊಂಡಿದ್ದಾನೆ. ವಿಜಯನಗರದ ದೊರೆ ಮಲ್ಲಿಕಾರ್ಜುನನು ತನ್ನ ನಲ್ಲಳಿಗೆ ಹೇಳಿದ್ದುದಾದ್ದರಿಂದಲೆ ಇದಕ್ಕೆ 'ಮಲ್ಲಿಕಾರ್ಜುನ ವಿಜಯ'ವೆಂದೂ ಹೆಸರಿದೆ. 'ಮದನ ತಿಲಕ'ವೆಂದೂ ಇದಕ್ಕೆ ಮತ್ತೊಂದು ಹೆಸರುಂಟು. ಶರ ಕುಸುಮ ಭೋಗ ಷಟ್ಪದಿಗಳ ಹನ್ನೆರಡು ಸಂಧಿಗಳನ್ನೊಳಗೊಂಡ ಈ ಶಾಸ್ತ್ರಗ್ರಂಥ ಲಲಿತಬಂಧುರವಾದ ಬಂಧದಲ್ಲಿದೆ. ಕವಿಯು ವಾತ್ಸ್ಯಾಯನಾದಿಗಳ ಕಾಮಸೂತ್ರಗಳನ್ನು ಸಂಗ್ರಹಿಸಿದ್ದಾನೆ. ಕವಿಲಿಂಗನು ಸಾಳುವ ನರಸಿಂಗರಾಜನ ಆಸ್ಥಾನ ಕವಿಯಾಗಿದ್ದು ಶೃಂಗಾರ ರಸಪ್ರಧಾನವಾದ ಹಲವು ಹಾಡುಗಳನ್ನು ಬರೆದಿದ್ದಾನೆ. ಈತನು ಕಾಮಶಾಸ್ತ್ರ ಪ್ರವೀಣನಂತೆ! ತನ್ನ ಪದಗಳ ಕೊನೆಯಲ್ಲಿ ಕವಿ 'ಈ ಪದಕ್ಕೆ ಸೂತ್ರ' ಎಂದು ಪದ್ಯಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಹಲವು ಪಂಚಪಾದ ವೃತ್ತಗಳಾಗಿವೆ.

ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿ ಕಾಣಬರುವ **ವಿರುಪರಾಜ** (೧೫೧೯?) **ಓದುವಗಿರಿಯ** (೧೫೩೯) ಮತ್ತು **ಬೊಂಬೆಯ ಲಕ್ಕ** (೧೫೦೮?) ಇವರು ಸಾಂಗತ್ಯದಲ್ಲಿ ಗ್ರಂಥಗಳನ್ನು ಬರೆದಿದ್ದಾರೆ. ವಿರುಪರಾಜನ 'ತ್ರಿಭುವನ ತಿಲಕ'ವು ೬೩ ಪುರಾತನರಲ್ಲಿ ಒಬ್ಬನಾದ ಚೇರಮಾಂಕನೃಪನ ಕಥೆಯನ್ನು ಕವಿ ತನ್ನ ಹೆಂಡತಿಗೆ ಹೇಳಿದಂತೆ ರಚಿತವಾಗಿದೆ. ರಾಜವಂಶಕ್ಕೆ ಸೇರಿದ ಕವಿ ರಾಜನಾದ ಚೇರಮಾಂಕನ ಕಥೆಯನ್ನು 'ಈ ಕಬ್ಬ ರಸಿಕ ಜನಗಳ ಕಿವಿಯ ಹಬ್ಬ' ಎಂದು ಹೇಳಿಕೊಂಡಿರುವುದು ಸಹಜವಾಗಿದೆ. ಆತನ ವರ್ಣನೆಗಳು ತಕ್ಕಮಟ್ಟಿಗೆ ಹಿತವಾಗಿವೆ; ಮಿತವಾಗಿಯೂ ಇದ್ದರೆ ಒಳಿತಾಗುತ್ತಿತ್ತು. ರಚನೆಯಲ್ಲಿ ವೈವಿಧ್ಯ ಸಾಲದುದರಿಂದ 'ಹಾಡಿದ್ದೆ ಹಾಡೊ ಕಿಸುವಾಯಿದಾಸ' ಎನ್ನಿಸುತ್ತದೆ. **ಓದುವಗಿರಿಯನು** 'ಸಾನಂದ

ಗಣೇಶ ಸಾಂಗತ್ಯ', 'ಹರಿಶ್ಚಂದ್ರ ಸಾಂಗತ್ಯ' ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. ಮೊದಲನೆಯದನ್ನು ಕುಮಾರ ಪದ್ಮರಸನಿಂದಲೂ ಎರಡನೆಯದನ್ನು ರಾಘವಾಂಕನಿಂದಲೂ ಎತ್ತಿಕೊಂಡಿದ್ದಾನೆ. ಮೂಲದ ಷಟ್ಪದಿಗಳನ್ನು ಹಾಡಲು ಅನುಕೂಲವಾಗುವಂತೆ ಸಾಂಗತ್ಯಕ್ಕೆ ತಿರುಗಿಸಿರುವುದು ಇವನ ಹಿರಿತನ. ಎರಡೂ ಸುಮಾರು ೪೫೦ ಪದ್ಯಗಳ ಪುಟ್ಟ ಗ್ರಂಥಗಳಾಗಿ, ಅಡಕವಾಗಿವೆ. ಈ ಸಂಗ್ರಹಗುಣಕ್ಕಾಗಿ ಕವಿ ಗೌರವಾರ್ಹ. **ಬೊಂಬೆಯ ಲಕ್ಕನೂ** 'ಹರಿಶ್ಚಂದ್ರ ಸಾಂಗತ್ಯ'ವನ್ನು ಬರೆದಿದ್ದಾನೆ. ಸುಮಾರು ೫೬೦ ಸಾಂಗತ್ಯ ಪದ್ಯಗಳನ್ನು ಒಳಗೊಂಡ ಈ ಕಾವ್ಯ ಸರಳ ಸುಂದರವಾಗಿ ಹೃದಯಂಗಮವಾಗಿದೆ. ಇದಕ್ಕೆ ಕಾರಣ ಭಾವ ಭಾಷೆಗಳೆರಡೂ ಕವಿ ರಾಘವಾಂಕನಿಂದ ಎತ್ತಿಕೊಂಡಿರುವುದು.

ಹದಿನಾರನೆಯ ಶತಮಾನದ ಮಧ್ಯದಲ್ಲಿ (೧೫೫೦)ದ್ದ **ಚೆನ್ನ ಬಸವಾಂಕನು** ಸುಪ್ರಸಿದ್ಧ ವೀರಶೈವ ಸಂತಳಾದ ಮಹಾದೇವಿಯಕ್ಕನ ಚರಿತ್ರೆಯನ್ನು ಒಳಗೊಂಡ 'ಮಹಾದೇವಿಯಕ್ಕನ ಪುರಾಣ'ವನ್ನು ಬರೆದಿದ್ದಾನೆ. ಈತನ ತಂದೆ ರುದ್ರಕವಿ ನಾಗಭೂಷಣಾರ್ಯ; ಗುರು ವ್ಯಾಘ್ರಾಜಿನಾಂಬರದ ಕಂಥೆಯ ಚಿದಾನಂದ ಯತಿಪ ಬಸವರಾಜ. ಪೂರ್ವಕವಿಗಳಾದ ಹರಿಹರ, ರಾಘವಾಂಕ, ಶೃಂಗರಾಜ, ಕರಸ್ಥಲದ ನಾಗಿದೇವ–ಇತ್ಯಾದಿಗಳನ್ನು ಸ್ಮರಿಸಿದ್ದಾನೆ. ಸುಮಾರು ೧೬೦೦ ಪದ್ಯಗಳನ್ನು ಒಳಗೊಂಡ 'ಮಹಾದೇವಿಯಕ್ಕನ ಪುರಾಣ'ವು ನಾನಾ ಷಟ್ಪದಿಗಳೇ ಅಲ್ಲದೆ ಕೆಲವು ಕಡೆ ಸಾಂಗತ್ಯವನ್ನೂ ಬಳಸಿಕೊಂಡಿದೆ. ಹರೀಶ್ವರನು ರಗಳೆಯಲ್ಲಿ ಬರೆದುದನ್ನು ಷಟ್ಪದಿಯಲ್ಲಿ ಬರೆಯುವಂತೆ ತನ್ನ ಗುರು ಆಜ್ಞಾಪಿಸಿದುದರಿಂದ ಕವಿ ಈ ಕಾವ್ಯವನ್ನು ಬರೆದುದಾಗಿ ಹೇಳಿಕೊಂಡಿದ್ದಾನೆ. ಹೀಗೆ ಹರಿಹರಕವಿಯನ್ನು ಅನುಸರಿಸಿದುದರಿಂದ ಅಕ್ಕನ ಮದುವೆ ಕೌಶಿಕನೊಡನೆ ನಡೆದುಹೋಗುತ್ತದೆ, ಇಲ್ಲಿ. ಇತರ ವೀರಶೈವ ಪುರಾಣಗಳಂತೆ ಇಲ್ಲಿಯೂ ಅನೇಕ ಶಿವಶರಣರ ಕಥೆಗಳಿಗೆ ಆಶ್ರಯ ಸಿಕ್ಕಿದೆ. ಮಹಾದೇವಿಯಕ್ಕನ ಪುರಾಣದಲ್ಲಿ ಹೇಳಿಕೊಳ್ಳುವಂತಹ ಕಾವ್ಯಗುಣಗಳೇನೂ ಇಲ್ಲ. ಆತನ ಶೈಲಿಯಲ್ಲಿ ಅಲ್ಲಲ್ಲಿಯೇ ಸ್ವಲ್ಪ ಚಮತ್ಕಾರ ಕಂಡುಬರುತ್ತದೆ.

ಹದಿನಾರನೆಯ ಶತಮಾನದಲ್ಲಿ ಕಡೆಯ ಭಾಗದಲ್ಲಿ ಕಾಣಬರುವ

ಮತ್ತೊಬ್ಬ ಕವಿ 'ಸೌಂದರ ವಿಳಾಸ'ವನ್ನು ಬರೆದ ಅಣ್ಣಾಜಿ (ಸು. ೧೬೦೦). ಈತನ ತಂದೆ ಅಯ್ಯಣಭೂಪನೆಂದಿರುವುದರಿಂದ ಕವಿಯು ರಾಜವಂಶಕ್ಕೆ ಸೇರಿದವನೆಂದು ಊಹಿಸಬಹುದು. ಶಂಕರೇಶನ ಅನುಗ್ರಹ ಅಪ್ಪಣೆಗಳಿಂದ ತಾನು ತನ್ನ ಕಾವ್ಯವನ್ನು ಬರೆದುದಾಗಿ ಹೇಳಿಕೊಂಡಿದ್ದಾನೆ. ಈ ಶಂಕರೇಶ ಕವಿಯ ಗುರುವಿರಬಹುದು. ಅರವತ್ತು ಮೂವರು ಪುರಾತನರಲ್ಲಿ ಒಬ್ಬನಾದ ಸೌಂದರನಂಬಿಯ ಕಥೆ ಈತನ ಕಾವ್ಯದ ಕಥಾವಸ್ತು. ವಾರ್ಧಕಷಟ್ಪದಿಯಲ್ಲಿರುವ ಈತನ ಕಾವ್ಯ ನಿರರ್ಗಳವಾಗಿ ಹರಿಯುತ್ತದೆ.

ಹದಿನಾರನೆಯ ಶತಮಾನದ ಇನ್ನಿಬ್ಬರು ಗ್ರಂಥಕರ್ತರು ಉಲ್ಲೇಖಾರ್ಹರಾಗಿದ್ದಾರೆ. ಅವರಲ್ಲಿ ಒಬ್ಬನು 'ಕಬ್ಬಿಗರ ಕೈಪಿಡಿ" ಎಂಬ ಹೆಸರಿನಿಂದ ವಾರ್ಧಕಷಟ್ಪದಿಯಲ್ಲಿ ನಿಘಂಟನ್ನು ಬರೆದಿರುವ **ಲಿಂಗಮಂತ್ರಿ** (೧೫೩೦). ಈತನು ತನ್ನನ್ನು 'ಸಂಗೀತನಿಪುಣ', 'ಬಹು ಲಿಪಿಜ್ಞ' ಎಂದು ಕರೆದುಕೊಂಡಿದ್ದಾನೆ. ೧೦೦ ಪದ್ಯಗಳುಳ್ಳ ಈತನ ಗ್ರಂಥದಲ್ಲಿ ಹಳಗನ್ನಡ ಪದಗಳ ಅರ್ಥವನ್ನು ಕೊಟ್ಟಿದೆ. ಕನ್ನಡ ನಿಘಂಟುಗಳ ಸಾಲಿನಲ್ಲಿ ಇದಕ್ಕೆ ಮನ್ನಣೆಯುಂಟು, **ಉತ್ತರ ದೇಶದ ಬಸವಲಿಂಗ ದೇವರು** (೧೬೦೦) ಎಂಬಾತನು ಮತ್ತೊಬ್ಬ ಉಲ್ಲೇಖಾರ್ಹನಾದ ಗ್ರಂಥಕರ್ತ. ಈತನು 'ಬಸವೇಶ್ವರ ಪುರಾಣದ ಕಥಾಸಾಗರ', 'ಭೈರವೇಶ್ವರ ಕಾವ್ಯದ ಕಥಾಸಾಗರ', 'ಉಚಿತ ಕಥೆಗಳು'—ಇವನ್ನು ಬರೆದಿದ್ದಾನೆ. ಮೊದಲನೆಯದರಲ್ಲಿ ೪೬೪ ಕಥೆಗಳೂ, ಎರಡನೆಯದರಲ್ಲಿ ೩೧೬ ಕಥೆಗಳೂ, ಮೂರನೆಯದಲ್ಲಿ ೭೪ ಕಥೆಗಳೂ ಇವೆ. ಹಿಂದಿನ ವೀರಶೈವ ಗ್ರಂಥಗಳನ್ನೆಲ್ಲಾ ಶೋಧಿಸಿ, ಅಲ್ಲಿನ ಕಥೆಗಳನ್ನೆಲ್ಲಾ ತನ್ನ ಗ್ರಂಥದಲ್ಲಿ ಸಂಗ್ರಹಿಸಿಟ್ಟಿದ್ದಾನೆ. ಈತ. ವೀರಶೈವ ಶರಣರ ಕಥೆಗಳಿಗೆ ಇದೊಂದ ದೊಡ್ಡ ನಿಘಂಟು. ವೀರಶೈವ ಶರಣರನ್ನು ಕುರಿತು ಅಧ್ಯಯನ ಮಾಡುವವರಿಗೆ ಇದು ಅತ್ಯಂತ ಪ್ರಯೋಜನಕರವಾದುದು.

ಹದಿನೇಳನೆಯ ಶತಮಾನದ ಆರಂಭ ಕಾಲದಲ್ಲಿ (೧೬೦೬) ಕಾಣಬರುವ **ಹರೀಶ್ವರ ಕವಿ** ಯಳಂದೂರು ಮಠಾಧಿಪತಿಗಳಾದ ತೋಂಟದಾರ್ಯರ ಮಗ, ಎಂದರೆ ಶಿಷ್ಯ. ಈತನಿಗೆ ಹರಿದೇವನೆಂದೂ ಹೆಸರಿವೆ. ಈತನಿಗಿಂತಲೂ ಮೊದಲು ಒಬ್ಬ ಹರಿಹರಕವಿ ಇದ್ದುದರಿಂದ ಈತನು ಎರಡ

ನೆಯ ಹರಿಹರಕವಿ. ಆತ ಹಂಪೆಯ ಹರಿಹರ, ಈತ ಯಳಂದೂರ ಹರಿಹರ. ಈತನು ಗುರು ಆಗಮಜ್ಞನಾದ ವೃಷಭ ಪುರದ ಸಿದ್ಧದೇವ. ಆ ಗುರುವಿನ ಅಪ್ಪಣೆಯಂತೆ ಕವಿ 'ಪ್ರಭುದೇವರ ಪುರಾಣ'ವನ್ನು ಬರೆದ. ಹೆಸರಿಗೆ ತಕ್ಕಂತೆ ಈ ಗ್ರಂಥದಲ್ಲಿ ಅಲ್ಲಮಪ್ರಭುವಿನ ಕಥೆಯನ್ನು ಹೇಳುವುದರ ಜೊತೆಗೆ ಇತರ ಅನೇಕ ಶರಣರ ಕಥೆಗಳನ್ನು ಕವಿ ಸೇರಿಸಿದ್ದಾನೆ. ಸುಮಾರು ೧೪೭೫ ಪದ್ಯಗಳನ್ನು ಒಳಗೊಂಡ ಈ ಗ್ರಂಥವು ನಾನಾ ಷಟ್ಪದಿಗಳಲ್ಲಿದೆ. ಈ ಗ್ರಂಥಕ್ಕೆ 'ಪ್ರಾಸರತ್ನಾಕರ' ಎಂಬ ಪ್ರಶಸ್ತಿ ಬೇರೆ ಇದೆ. ಆ ಪ್ರಶಸ್ತಿ ಸಾರ್ಥಕವಾಗುವಂತೆ ಈ ಗ್ರಂಥದಲ್ಲಿ ಸಾಕಷ್ಟು ಶಬ್ದಚಿತ್ರ ಕಂಡುಬರು ತ್ತದೆ. ಉಳಿದ ಕಾವ್ಯಗುಣಗಳು ಅಷ್ಟಾಗಿ ಇಲ್ಲ, ಇಲ್ಲಿ. ಕವಿಯು ತನ್ನ ಗುರುವಿನ ಕೀರ್ತಿ ಸರ್ವವ್ಯಾಪಿಯಾಗಿ ಪ್ರಸರಿಸಿತ್ತೆಂದು ವರ್ಣಿಸುತ್ತಾ

ಆತನ ಸುಕೀರ್ತ್ಯಂಗನೆಯು ಬಿಳಿದನುಟ್ಟು ವಿ
ಖ್ಯಾತ ಹಾರಂ ಹೀರ ತೊಡಿಗೆಗಳ ತೊಟ್ಟು ಸಿತ
ಜಾತಿ ಮಲ್ಲಿಗೆ ಕುಂದ ಕುಸುಮಗಳ ತುರುಬಿ ಬೆಳ್ದಾವರೆಯ ಕರದಿ ಪಿಡಿದು
ಶಾತಗರ್ಭೋದರನ ವಾಹನೈರಾವಣದ
ಪ್ರೂತ ಗಮನದ ಚರಣದೊಳ್ ತೋರಿ ನಸುನಗುತ
ಪಾತಾಳ ಸ್ವರ್ಗೇಂದು ಪುಡುಲೋಕ ದಿಗ್ದೆಸೆಗಳೊಳಗೆ ಚರಿಸುವಳೀಗಳು

ಎಂದು ಹೇಳುವಲ್ಲಿ ಕವಿಯ ಚಮತ್ಕಾರದ ಜೊತೆಗೆ, ಅದು ಶುಭ್ರಧವಳ ವಾಗಿತ್ತೆಂಬ ಧ್ವನಿಯನ್ನಿಟ್ಟು, ನೂತನತೆಯನ್ನು ಪ್ರದರ್ಶಿಸಿದ್ದಾನೆ.

ಸುಮಾರು ೧೬೫೦ರಲ್ಲಿದ್ದ ಚೆನ್ನಣ್ಣ 'ವೀರಶ್ವರ ಚರಿತೆ' ಯನ್ನು ಬರೆದಿದ್ದಾನೆ. ಕವಿ ತನ್ನನ್ನು 'ಸುವಿವೇಕಿ, ರಸಿಕರ ದೇವ ಚನ್ನಣ್ಣ ಸತ್ಕ ವಿರಾಯ' ಎಂದು ಕರೆದುಕೊಂಡಿದ್ದಾನೆ. ಈತ ಸುವಿವೇಕಿ ನಿಜ. ಇದಕ್ಕೆ ಕಾರಣ, ಹಿಂದೆ ರಾಘವಾಂಕ ಕವಿ ಬರೆದ ವೀರೇಶಚರಿತೆಯನ್ನು ಷಟ್ಪದಿ ಯಿಂದ ಸಾಂಗತ್ಯಕ್ಕೆ ಪರಿವರ್ತಿಸಿದ್ದಾನೆ. ಹೆಚ್ಚು ತನ್ನತನವನ್ನು ಪ್ರದರ್ಶಿ ಸಿಲ್ಲ.

